# ಮಹಲಿಂಗರಂಗ ಕವಿಯ

# ಅನುಭವಾಮೃತ ಕಾವ್ಯ

(ಹೊಸಕೆರೆ ಚಿದಂಬರಯ್ಯನವರ ಟೀಕಾ ಸಹಿತ)

ಸಂಪಾದಕರು, ಪ್ರೊ. ಜಿ. ಅಶ್ವತ್ಥನಾರಾಯಣ




ಅಧ್ಯಾತ್ಮಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ

www.adhyatmaprakasha.org

E-mail : secretary@adhyatma.org

ಮಹಲಿಂಗರಂಗ ಕವಿಯ

# ಅನುಭವಾಮೃತ ಕಾವ್ಯ

(ಹೊಸಕೆರೆ ಚಿದಂಬರಯ್ಯನವರ ಟೀಕಾ ಸಹಿತ)

ಸಂಪಾದಕ ಮತ್ತು ಅನುವಾದಕ

**ಪ್ರೊ. ಜಿ. ಅಶ್ವತ್ಥನಾರಾಯಣ**

ಕ್ರಮಾಂಕ ೨೫೩

ಪ್ರಕಾಶಕರು

ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ-೫೭೩೨೧೧

ದೂರವಾಣಿ: ೦೮೧೭೫-೨೭೩೮೨೦

**www.adhyatmaprakasha.org**

**email: secretary@adhyatmaprakasha.org**

**2012**

Mahalingaranga Kaviya ANUBHAVAAMRTA KAAVYA: Edited and Translated by Prof. G. Aswathanarayana, No. 95, 34th B Cross, 4th T Block, Jayanagar, Bangalore-41. Published by Adhyatma Prakasha Karyalaya, Holenarasipur-573211. wwwculturalindia.org

Email: secretary@adhyatmaprakasha.org

| | |
|---|---|
| First Edition | : **2012** |
| Pages | : 700 |
| Price | : 300/- |
| Size | : 1/8 Demy, Paper Maplitho, 70 gsm |

**ಮಹಲಿಂಗರಂಗ ಕವಿಯ ಅನುಭವಾಮೃತ ಕಾವ್ಯ (ಹೊಸಕೆರೆ ಚಿದಂಬರಯ್ಯನವರ ಟೀಕಾ ಸಹಿತ) ಮೂಲ ಮತ್ತು ಅನುವಾದ**

ಸಂಪಾದಕ ಮತ್ತು ಅನುವಾದಕ : ಪ್ರೊ. ಜಿ. ಅಶ್ವತ್ಥನಾರಾಯಣ, ೯೫, ೩೪ನೇ ಬಿ ಕ್ರಾಸ್, ೧೬ನೇ ಮೈನ್, ೪ ಟಿ ಬ್ಲಾಕ್, ಜಯನಗರ, ಬೆಂಗಳೂರು-೪೧. ದೂ.: ೨೬೬೩೭೭೮೩

| | |
|---|---|
| ಮೊದಲ ಮುದ್ರಣ | : ೨೦೧೨ |
| ಹಕ್ಕುಗಳು | : ಪ್ರೊ. ಜಿ. ಆಶ್ವತ್ಥನಾರಾಯಣ |
| ಪುಟಗಳು | : ೭೦೦ |
| ಬೆಲೆ | : **೩೦೦/- ರೂ.** (ಮುನ್ನೂರು ರೂ.ಗಳು) |
| ಬಳಸಿದ ಕಾಗದ | : ೭೦ ಜಿಎಸ್‌ಎಂ. ಮ್ಯಾಪ್‌ಲಿಥೊ |
| ಪ್ರಕಾಶಕರು | : ಅಧ್ಯಾತ್ಮ ಪ್ರಕಾಶ ಕಾರ್ಯಾಲಯ ಹೊಳೆನರಸೀಪುರ-೫೭೩೨೧೧ |
| ಅಕ್ಷರ ಜೋಡಣೆ | : ಅರ್ಕ ಕ್ರಿಯೇಷನ್ಸ್, ತ್ಯಾಗರಾಜನಗರ, ಬೆಂ-೨೮, ದೂ.: ೯೮೮೦೭೨೫೧೯೯ |
| ಮುದ್ರಣಕಾರರು | : ಶ್ರೀರಾಮ ಪ್ರಿಂಟರ್ಸ್, ೨೫, ೧೫ನೇ ಕ್ರಾಸ್, ಶ್ರೀನಿಧಿ ಲೇಔಟ್, ಬೆಂ-೬೨. ದೂ.: ೯೮೪೫೩೪೬೧೯೭ |

# ಅರ್ಪಣೆ



**ಅಭಿನವ ಶಂಕರ ಶ್ರೀ ಸಚ್ಚಿದಾನಂದೇಂದ್ರ**
**ಸರಸ್ವತೀ ಸ್ವಾಮಿಗಳು**
(ಜನನ ೫-೧-೧೮೮೦
ಬ್ರಹ್ಮೈಕ್ಯ ೫-೮-೧೯೭೫)

ಆದಿಶಂಕರರ ಸಮಗ್ರ ವೇದಾಂತ ಕೃತಿಗಳನ್ನು, ಭಾಷ್ಯತ್ರಯಗಳನ್ನು ಕನ್ನಡಕ್ಕೆ ತಂದು ಕನ್ನಡ ಸಾಹಿತ್ಯದ ಸಿರಿಸಂಪದವನ್ನು ಹೆಚ್ಚಿಸಿದ ಅಭಿನವ ಶಂಕರ ಶ್ರೀ ಶ್ರೀಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು.



**ಕರ್ಣಾಟಕ ಕವಿರತ್ನ**
**ಹೊಸಕೆರೆ ಚಿದಂಬರಯ್ಯ ಅವರು**
(ಜನನ ೨೮-೧೨-೧೮೭೧
ಬ್ರಹ್ಮೈಕ್ಯ ೧೯-೪-೧೯೩೮)

ಹೊಸಗನ್ನಡ ಗದ್ಯಸಾಹಿತ್ಯ ನಿರ್ಮಾಪಕರಲ್ಲಿ ಒಬ್ಬರಾದ, ಬಹುಮುಖ ಪ್ರತಿಭೆಯುಳ್ಳ ಕವಿ, ಸಾಹಿತಿ, ವಿದ್ವಾಂಸರಾಗಿದ್ದ ನವೋದಯ ಕನ್ನಡ ಸಾಹಿತ್ಯದ ಪ್ರಸಿದ್ಧ ಅದ್ವೈತ ವಿದ್ವಾಂಸರು ಕರ್ಣಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯನವರು.

**ಇವರಿಬ್ಬರ ಪುಣ್ಯಸ್ಮರಣೆಗೆ ಭಕ್ತಿಪೂರ್ವಕವಾಗಿ ಅನುಭವಾಮೃತಕಾವ್ಯ ಮೂಲ ಮತ್ತು ಗದ್ಯಾನುವಾದವನ್ನು ಅರ್ಪಿಸಿದ್ದೇನೆ.**

೨೮.೧೨.೨೦೧೨
ಬೆಂಗಳೂರು

**ಪ್ರೊ. ಜಿ. ಅಶ್ವತ್ಥನಾರಾಯಣ**
ಸಂಪಾದಕ ಮತ್ತು ಅನುವಾದಕ

# ಪ್ರಕಾಶಕರ ನುಡಿ

ಹೊಸಕೆರೆ ಚಿದಂಬರಯ್ಯನವರು ಮತ್ತು ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ಇಬ್ಬರೂ ಸಹಾಧ್ಯಾಯಿಗಳು, ಸಹೋದ್ಯೋಗಿಗಳು, ಶಾಂಕರವೇದಾಂತಾಧ್ಯಯನದಲ್ಲಿ ಸದಾನಿರತರಾದವರು. ಕನ್ನಡದಲ್ಲಿ ಅಧ್ಯಾತ್ಮ ಗ್ರಂಥರಚನೆಯಲ್ಲಿ ಏಕದೇಹ ನ್ಯಾಯದಿಂದ ಕಾರ್ಯತತ್ಪರರಾದವರು. ಇಬ್ಬರೂ ಘನವಿದ್ವಾಂಸರು, ವೇದಾಂತಿಗಳಾಗಿ ಪರಮಾಪ್ತರಾಗಿ ಬಾಳಿದವರು. ಹಾಗಾಗಿ ಅವರಿಬ್ಬರೂ ಅಧ್ಯಯನ, ಗ್ರಂಥರಚನೆಯಲ್ಲಿ ಪರಸ್ಪರ ಪೂರಕರಾದವರು.

ಹೊಸಕೆರೆ ಚಿದಂಬರಯ್ಯನವರು ಸರ್ವಾರ್ಥಸಂದರ್ಶಿನೀ ಟೀಕೆಯೊಡನೆ ೧೯೨೬ರಲ್ಲಿ, ಮಹಲಿಂಗರಂಗನ ಅನುಭವಾಮೃತವೆಂಬ ಅದ್ವೈತ ಕಾವ್ಯವನ್ನು ಅದರ ಪರಿಷ್ಕರಣ ರೂಪವನ್ನು ೧೯೩೭ರಲ್ಲಿ ಪ್ರಕಟಿಸಿದರು. ಈ ಗ್ರಂಥರಚನೆಗೆ ಮೂಲಪ್ರೇರಕರಾಗಿ, ಮಾರ್ಗದರ್ಶಕರಾಗಿ, ಪರಿಶೀಲಕರಾಗಿ ಹೊಸಕೆರೆ ಚಿದಂಬರಯ್ಯನವರಿಗೆ ಸ್ವಾಮಿಗಳು ನೆರವಾದರು. ಈ ಉಪಕಾರವನ್ನು ಹೊಸಕೆರೆ ಚಿದಂಬರಯ್ಯನವರು "ಈ ಗ್ರಂಥದ ಕರ್ತೃತ್ವವು ನನಗೆ ಕೇವಲ ಸ್ಥೂಲದೃಷ್ಟಿಯಿಂದ ಮಾತ್ರ ಸಲ್ಲುವುದೇ ಹೊರತು ವಿಚಾರದೃಷ್ಟಿಯಿಂದ ಇದರ ಯಶಸ್ಸಿಗೆಲ್ಲ ನನ್ನ ಮಿತ್ರರಾದ ಶ್ರೀ ವೈ. ಸುಬ್ಬರಾಯರೇ (ಸ್ವಾಮಿಗಳ ಪೂರ್ವಾಶ್ರಮದ ಹೆಸರು) ಭಾಗಿಗಳಾಗಿರುವರು" ಎಂಬುದಾಗಿ ಸ್ಮರಿಸಿದ್ದಾರೆ."

೧೯೫೭ರಲ್ಲಿ ಪುನರ್ಮುದ್ರಣವಾಗಿದ್ದ ಹೊಸಕೆರೆ ಚಿದಂಬರಯ್ಯನವರ ಟೀಕಿನೊಡನೆ ಕೂಡಿದ್ದ ಮಹಲಿಂಗರಂಗನ ಅನುಭವಾಮೃತ ಕಾವ್ಯದ ಪ್ರತಿಗಳು ಎಂದೋ ಮುಗಿದುಹೋಗಿ ಜನಕ್ಕೆ ಅಲಭ್ಯವಾಗಿದ್ದವು. ಇದೀಗ ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಪುನಸ್ಸಂಪಾದಿಸಿ ಗದ್ಯಾನುವಾದಮಾಡಿ ಪರಿಷ್ಕೃತರೂಪದಲ್ಲಿ ಸಿದ್ಧಪಡಿಸಿದ್ದಾರೆ. ಈ ಪುಸ್ತಕ ಕೇವಲ ಪುನರ್ಮುದ್ರಣವಾಗಿರದೆ, ಈಗಿನ ಕಾಲದ ನಾವೀನ್ಯತೆಗೆ ಅಗತ್ಯವಾಗಿ ಬೇಕಾಗಿರುವ ಪದ್ಯಗಳ ಅಕಾರಾದಿ ಮಾಲಿಕೆ, ಕಠಿಣಪದಗಳ ಅರ್ಥ ಪದ್ಯಗಳಲ್ಲಿ ಬರುವ ಕೆಲವಾರು ಪೂರ್ವಕಥೆಗಳ ವಿವರಣೆ, ಪದ್ಯಗಳ ಮೊದಲ ಸಾಲುಪಟ್ಟಿ, ಮುಖ್ಯಪದಸೂಚಿ, ಗ್ರಂಥಸೂಚಿ, ಸಂಸ್ಕೃತಉಲ್ಲೇಖಗಳ ಪಟ್ಟಿ ಮತ್ತಿತರ ಅತ್ಯುಪಯುಕ್ತ ಅನುಬಂಧ ವಿಷಯಗಳಿಂದ ಸರ್ವಾಂಗೀಣ ಪರಿಷ್ಕರಣಗಳನ್ನೊಳಗೊಂಡು ಓದುಗರಿಗೆ ಸುಲಲಿತವಾಗಿದೆ ಎಂಬುದು ಇಲ್ಲಿಯ ಹೆಚ್ಚಳ. ಈಗಾಗಲೇ ಹೊಸಕೆರೆ ಚಿದಂಬರಯ್ಯನವರ ಭಗವದ್ಗೀತಾರ್ಥಸಾರ ವಿಚಾರ ಮತ್ತು ಗೀತಾರ್ಥಚಂದ್ರಿಕೆಗಳನ್ನು ಪುನರ್ಮುದ್ರಣ ಮಾಡಿದ್ದೇವೆ. ಈಗ ಈ ಅಪೂರ್ವಗ್ರಂಥವನ್ನು ಅಧ್ಯಾತ್ಮ ಪ್ರಕಾಶ ಕಾರ್ಯಾಲಯದಿಂದ ಮಹಾಜನರಿಗೆ ನೀಡುತ್ತಿದ್ದೇವೆ. ಇದರ ಸದುಪಯೋಗವನ್ನು ಹೆಚ್ಚಿನ ಸಂಖ್ಯೆಯಲ್ಲಿ ಓದುಗರು ಪಡೆಯುವಂತಾಗಲಿ ಎಂದು ಆಶಿಸುತ್ತೇವೆ.

ಈ ಗ್ರಂಥಪ್ರಕಟಣೆಗೆ ಕೆಳಕಂಡ ಅಧ್ಯಾತ್ಮಪ್ರೇಮಿಗಳು ಉದಾರವಾಗಿ ಸಹಾಯ ಮಾಡಿರುತ್ತಾರೆ.

೧. ಹೊಸಕೆರೆ ಚಿದಂಬರಯ್ಯ ಸಂಸ್ಮರಣ ಸಮಿತಿ ಟ್ರಸ್ಟ್, ಬೆಂ. (ಪೂಜ್ಯ ಚಿದಂಬರಯ್ಯನವರ ಸ್ಮರಣಾರ್ಥ)

೨. ಸೀತಮ್ಮ ಕೃಷ್ಣಮೂರ್ತಿ ಪಬ್ಲಿಕ್ ಛಾರಿಟಬಲ್ ಟ್ರಸ್ಟ್, ಬೆಂ,
(ಸಂಸ್ಥಾಪಕರಾದ ಪೂಜ್ಯ ನಿತ್ಯಾನಂದೇಂದ್ರ ಸರಸ್ವತೀ ಸ್ವಾಮಿಗಳ ಸ್ಮರಣಾರ್ಥ)

೩. ಜಿ. ಎನ್. ಲಕ್ಷ್ಮೀನಾರಾಯಣರಾವ್, ಬೆಂ.

೪. ಹೆಚ್. ವಿಶ್ವನಾಥ್, ಬೆಂ.
(ಮಾತಾಪಿತೃಗಳಾದ ಹುಳಿಯಾರ್ ನಾರಾಯಣರಾವ್, ಭಾಗೀರಥಮ್ಮ ಸ್ಮರಣಾರ್ಥ)

೫. ಕಿರನ್ ನಂದೀಶ್, ಬೆಂ. (ತಾತ ಸ್ವಾತೇಗೌಡರ ಸ್ಮರಣಾರ್ಥ)

೬. ಕೆ. ನಾಗರಾಜನ್, ಮೈಸೂರು

೭. ಹೆಚ್. ಗುಂಡೂರಾವ್, ಬೆಂ.

೮. ನೀಲಕಂಠ, ಬೆಂ.

ಮೇಲ್ಕಂಡ ಧನಸಹಾಯ ಮಾಡಿದ ಎಲ್ಲಾ ಭಕ್ತವೃಂದಕ್ಕೂ, ಶೀಘ್ರವಾಗಿ ಅಕ್ಷರಜೋಡಣೆ ಮಾಡಿ ಮುದ್ರಣಕ್ಕೆ ಸಿದ್ಧಪಡಿಸಿಕೊಟ್ಟ ಅರ್ಕ ಕ್ರಿಯೇಷನ್ಸ್‌ನ ಭಾರ್ಗವಿ ಸುರೇಶ್ ದಂಪತಿಗಳಿಗೂ, ಅಂದವಾಗಿ ಮುದ್ರಣಮಾಡಿಕೊಟ್ಟ ಶ್ರೀರಾಮ ಪ್ರಿಂಟರ್ಸ್, ಸತ್ಯನಾರಾಯಣ ರವರಿಗೂ ಹಾಗೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪುಸ್ತಕ ಹೊರಬರಲುಸಹಾಯ ಮಾಡಿದ ಎಲ್ಲಾ ಭಕ್ತವೃಂದದವರಿಗೂ ಕಾರ್ಯಾಲಯವು ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತದೆ. ಎಂದಿನಂತೆ ಮಹಾಜನರು ಪುಸ್ತಕವನ್ನು ಬರಮಾಡಿಕೊಂಡು ಓದಿ, ಕಾರ್ಯಾಲಯವು ಸತತವಾಗಿ ನಡೆಸುತ್ತಿರುವ ಅಧ್ಯಾತ್ಮ ವಿಚಾರಪ್ರಚಾರಕ್ಕೆ ಪ್ರೋತ್ಸಾಹಿಸಬೇಕಾಗಿ ವಿನಂತಿ.

ನಂದನ ಸಂವತ್ಸರ ಮಾರ್ಗಶಿರ
ದ್ವಿತೀಯ ಬಿದಿಗೆ, ಭಾನುವಾರ
೩೦.೧೨.೧೨

ಪ್ರಕಾಶಕರು

*****

# ಪರಿವಿಡಿ

# ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು

## (ಸಂಕ್ಷಿಪ್ತ ಪರಿಚಯ)

ವೈ. ಸುಬ್ಬರಾಯರು (ಶ್ರೀಶ್ರೀಗಳವರ ಪೂರ್ವಾಶ್ರಮದ ಹೆಸರು) ಕಡೂರು ತಾಲ್ಲೂಕಿನ ಯಲ್ಲಂಬಳಸೆಯವರು. ಮನೆಯ ಸುಸಂಸ್ಕೃತ ವಾತಾವರಣ, ಊರಿನ ಪರಿಸರ, ಅವರ ಬಾಲ್ಯ, ವ್ಯಕ್ತಿತ್ವವನ್ನು ರೂಪಿಸಿದ್ದುವು, ಹಿಂದಿನ ಸಂಪ್ರದಾಯ ರೀತಿಯನ್ನು ಬೆಳೆಸಿದ್ದ ಆಚಾರ, ಮಡಿಮೈಲಿಗೆ, ಸಂಧ್ಯಾವಂದನೆಗಳೂ ಅವರ ದೈನಂದಿನ ಭಾಗವಾಗಿ ಜೀವಮಾನವಿಡೀ ಉಳಿಯಿತು. ಚಿಕ್ಕಮಗಳೂರು ಹೈಸ್ಕೂಲಿನಲ್ಲಿ ಓದುತ್ತಿರುವಾಗ, ಆ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ಸುಬ್ರಹ್ಮಣ್ಯ ಅಯ್ಯರ್ ಅವರಿಂದ ಬಹಳವಾದ ಸಹಾಯವಾಯಿತು. ಅವರ ಮನೆಯಲ್ಲಿ ನಡೆಯುತ್ತಿದ್ದ ವೇದಾಂತ ಚರ್ಚೆಗಳು ಇವರನ್ನು ಮೊದಲ ವೇದಾಂತ ಗಾಳಿಯ ಸೆಳವಿಗೆ ಸಿಲುಕಿಸಿದ್ದವು. ಹಾಗೆಯೇ ಜೊತೆಗೆ, ಪ್ರಯಾಣಕಾಲದಲ್ಲಿ ಓದಲು ಅನುವಾಗುತ್ತದೆಂದು ಎರಡುಸಾರಿ ಪುಸ್ತಕ ಕೊಳ್ಳಲು ಹೋದಾಗಲೂ ಅವರಿಗೆ ಸಿಕ್ಕಿದ್ದು ವೇದಾಂತ ಪುಸ್ತಕಗಳು, ಶಾಲೆಯಲ್ಲಿ ಸ್ಪರ್ಧೆಯಲ್ಲಿ ವಿಜೇತರೆಂದು ಬಹುಮಾನ ಬಂದಿದ್ದೂ ಚಂಪೂ ಭಾಗವತ. ಜೊತೆಗೆ ಕ್ರಿಶ್ಚಿಯನ್ನರು ಕಳಿಸುತ್ತಿದ್ದ ಪತ್ರಿಕೆ, ಅದರಲ್ಲಿ ಆಕ್ಷೇಪ, ಅನುಮಾನಗಳನ್ನು ಸ್ವೀಕರಿಸುವರೆಂದು ತಿಳಿದು ಇವರು ಬರೆಯುತ್ತಿದ್ದುದು, ಪತ್ರಿಕೆಯಲ್ಲಿ ಉತ್ತರಗಳು ಬರುತ್ತಿದ್ದು ಇವುಗಳಿಂದ ಅವರಿಗೆ ಕ್ರಿಶ್ಚಿಯನ್ ಮತದ ಪರಿಚಯವೂ ಆಯಿತು. ಅನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಎಫ್. ಎ. ತರಗತಿಗೆ ಸೇರಿದಾಗ ಅವರ ಮೈಮನಗಳಿಗೆ ಅಶನ, ಆಶ್ರಯವನ್ನು ನೀಡಿದವರು ಶ್ರೀ ಕೆ.ಎ. ಕೃಷ್ಣಸ್ವಾಮಿ ಅಯ್ಯರವರು. ವೇದಾಂತದಲ್ಲಿ ಇವರಿಗೆ ಅಭಿರುಚಿಯಿದೆ ಎಂದು ಕಂಡುಕೊಂಡ ಶ್ರೀ ಅಯ್ಯರ್ ಅವರು ದಿನವೂ ಸ್ವಲ್ಪಹೊತ್ತು ವೇದಾಂತಪಾಠವನ್ನು ಸಂಜೆಯಲ್ಲಿ ಹೇಳುತ್ತಿದ್ದರು, ಹೀಗೆ ಅಯ್ಯರ್ ಅವರು ಒಂದು ರೀತಿಯಲ್ಲಿ ಅವರಿಗೆ ಮೊದಲ ವೇದಾಂತಗುರುಗಳು– ಸ್ಕಾಲರ್‌ಶಿಪ್‌ಗಾಗಿ ಸಂಸ್ಕೃತವನ್ನು ಆರಿಸಿಕೊಂಡದ್ದರಿಂದ, ಸಂಸ್ಕೃತಭಾಷೆ ಮತ್ತು ಗ್ರಂಥಗಳ ಅಮೂಲ್ಯ ನಿಕಟಪರಿಚಯವಾಯಿತು. ಓದನ್ನು ಮುಂದುವರಿಸಲಾಗದೆ ಕೆಲಸಹಿಡಿದಾಗ ಕಡೂರಿನಲ್ಲಿ ಹೆಡ್ಮಾಸ್ಟರ್ ಆಗಿದ್ದ ಶ್ರೀ ಹೊಸಕೆರೆ ಚಿದಂಬರಯ್ಯನವರ ಸ್ನೇಹವಾಯಿತು. ಸಾಹಿತ್ಯದಲ್ಲಿ ಕೃಷಿಮಾಡಿದ್ದ ಅವರಿಗೆ ಸುಬ್ಬರಾಯರಿಂದ ವೇದಾಂತದ ಪ್ರಭಾವವೂ ಆಯಿತು. ಹಾಗೆಯೇ, ಅವರ ಉಪಕಾರದಿಂದ ಸುಬ್ಬರಾಯರಿಗೆ ಇಷ್ಟವಿಲ್ಲದ ಓವರ್‌ಸೀರ್ ಕೆಲಸದ ಬದಲಾಗಿ, ಅವರಿಗೆ ಇಷ್ಟವಾದ ಉಪಾಧ್ಯಾಯ ವೃತ್ತಿಯೂ ದೊರಕಿತು.

ಉಪಾಧ್ಯಾಯ ವೃತ್ತಿಯನ್ನು, ಕಡೂರಿನಿಂದ ಪ್ರಾರಂಭಿಸಿ ಸುಮಾರು ೧೮ ವರ್ಷಕ್ಕೂ ಮೇಲ್ಪಟ್ಟು ತಮ್ಮ ಸೇವೆಯನ್ನೆಲ್ಲಾ ಚಿತ್ರದುರ್ಗ ಜಿಲ್ಲೆಯಲ್ಲೇ (ಒಂದೆರಡು ಸಾರಿ

ಹೊಸದುರ್ಗದಲ್ಲಿದ್ದುದ್ದನ್ನು ಬಿಟ್ಟರೆ) ಕಳೆದಿದ್ದರು. ೧೯೧೭ ರಲ್ಲಿ ಬೆಂಗಳೂರಿಗೆ ಬಂದ ಮೇಲೆ ಪುನಃ ಶ್ರೀ ಕೃಷ್ಣಸ್ವಾಮಿ ಅಯ್ಯರವರ ಸಹವಾಸ ದೊರಕಿ ವೇದಾಂತ ಅಧ್ಯಯನ ಮುಂದುವರೆಯಲು ಅನುಕೂಲವಾಯಿತು. ವಿವಾದಗ್ರಸ್ತವಾಗಿ ಈವರೆಗೂ ಭಾಮತೀ, ವಿವರಣ ಪ್ರಸ್ಥಾನಪಟುಗಳಿಗೆ ತೊಡಕಾಗಿರುವ 'ಮೂಲಾವಿದ್ಯಾ ನಿರಾಸ' ದಂತಹ ವಿಷಯದಲ್ಲಿ ಸಂಶೋಧನಾರೂಪದ ಹೊಸಬೆಳಕಿನ ಗ್ರಂಥವೊಂದನ್ನು ಬರೆಯಲು ಅಯ್ಯರ್ ಅವರು ಮೂಲ ಕಾರಣರಾದರು. ತಪಸ್ಸಿನಂತೆ, ಸಮಾಧಿಸ್ಥಿತಿಯಲ್ಲಿದ್ದಂತೇ ತಮ್ಮೆಲ್ಲ ಬುದ್ಧಿದೇಹಶಕ್ತಿಯನ್ನೂ ವಿನಿಯೋಗಿಸಿ ಈ ಗ್ರಂಥರಚನೆಗೆ ತೊಡಗಿದರು.

೧೯೨೦ರಲ್ಲಿ ಬೆಂಗಳೂರು ಚಾಮರಾಜಪೇಟೆಯ ಮೊದಲ ರಸ್ತೆಯಲ್ಲಿ 'ಅಧ್ಯಾತ್ಮ ಪ್ರಕಾಶಕಾರ್ಯಾಲಯ' ಪ್ರಾರಂಭವಾಯಿತು. ಅದರ ಪ್ರಥಮಪುಸ್ತಕವಾಗಿ ಮಾಂಡೂಕ್ಯೋಪನಿಷತ್ತನ್ನು (ಕನ್ನಡ) ಪ್ರಕಟಿಸಿದರು. ಇದರಿಂದ 'ಅಧ್ಯಾತ್ಮ ಗ್ರಂಥಾವಳಿ' ಪ್ರಾರಂಭವಾಯಿತು.

೧೯೩೫ ರಲ್ಲಿ ರಾಯರಿಗೆ ನಿವೃತ್ತಿಯಾಯಿತು. ೧೯೩೭ ರಲ್ಲಿ ಅವರು ಕಾರ್ಯಾಲಯವನ್ನು ಹೊಳೆನರಸೀಪುರದಲ್ಲಿ ನೆಲೆಗೊಳಿಸಿದರು. ಅಲ್ಲಿ ಚರ್ಚೆಗಳು, ಉಪನ್ಯಾಸಗಳು, ಭಜನೆ, ಉತ್ಸವಗಳು, ಗ್ರಂಥಪ್ರಕಟಣೆಗಳೂ ವ್ಯವಸ್ಥಿತವಾದುವು. ಹಾಗೆಯೇ ಅಧ್ಯಾತ್ಮ ಕಾರ್ಯ್ಯಾಲಯದ ಸ್ಪಷ್ಟವಾದ ರೂಪ, ಅದರ ಕಾರ್ಯವಿವರಗಳನ್ನೆಲ್ಲ ಅಚ್ಚುಕಟ್ಟಾಗಿ ಬರೆದು ಸಿದ್ಧಮಾಡಿದರು. ಆದರೆ ಅದರಿಂದ ಲಾಭ ಪಡೆದವರು ಕೇವಲ ಕೈ ಬೆರಳೆಣಿಕೆಯ ಶಿಷ್ಯರಷ್ಟೇ.

ಮೂರು ಸಂಪುಟಗಳಲ್ಲಿ ಎಂಟು ಉಪನಿಷತ್ತುಗಳನ್ನೂ, ಭಗವದ್ಗೀತಾಭಾಷ್ಯದ ಎಂಟು ಅಧ್ಯಾಯಗಳ ಒಂದು ಸಂಪುಟವನ್ನೂ, ಎರಡು ವರ್ಷಗಳಲ್ಲಿ ಟಿಪ್ಪಣಿ ಸಮೇತ ಪ್ರಕಟಿಸಿದರು. ಯಾವ ಭಾಷೆಯಲ್ಲಿಯೂ ಹೀಗೆ ಬುದ್ಧಿಗೆ ಸಂತೃಪ್ತಿಯನ್ನುಂಟುಮಾಡಿರುವ ಅನುವಾದಗಳು ಆಗಿಯೇ ಇಲ್ಲ ಎಂಬ ಪ್ರಶಂಸೆ ಈ ಮಾಲೆಯದು. ಅವರು ಬರೆದಷ್ಟು ವಿಪುಲ ವೇದಾಂತ ಗ್ರಂಥರಾಶಿಯನ್ನು ಬರೆದವರು ಅತಿ ವಿರಳವೇ ಅಥವಾ ಇಲ್ಲವೇ ಎನ್ನಬಹುದು. ಸಂಖ್ಯೆಯಲ್ಲಷ್ಟೇ ಅಲ್ಲ, ವಿಷಯಗಾಂಭೀರ್ಯ, ಆಳದಲ್ಲಿ, ತಿಳಿಯಾದ ಶೈಲಿಯಲ್ಲಿ ಅವು ಮೇಲ್ಮೈಯಾಗಿವೆ. ವೇದಾಂತದಂತಹ ಗಹನವಿಷಯವನ್ನು ಹೀಗೆ ಕನ್ನಡಕ್ಕೆ ಗ್ರಂಥರಾಶಿಯಲ್ಲಿ ಕೊಟ್ಟವರು ಬೇರೆ ಯಾರಿದ್ದಾರು? ಕನ್ನಡದಲ್ಲಿ ೧೪೨, ಸಂಸ್ಕೃತದಲ್ಲಿ ೨೮, ಇಂಗ್ಲಿಷ್ ೧೮– ಒಟ್ಟು ೧೮೮ ಮಂದ, ಮಧ್ಯಮ, ಉತ್ತಮಾಧಿಕಾರಿಗಳಿಗೂ ಸಲ್ಲುವಂತಹವು. ಇವುಗಳಲ್ಲಿ ಎರಡು ವಿಶೇಷಗಳು: ಆಳವಾದ ಚಿಂತನ ಮಂಥನದಿಂದ ಜೀವನೋದ್ಧಾರಕ್ಕಾಗಿಯೇ ಇರುವ ಅಧ್ಯಾತ್ಮ ತತ್ತ್ವಗಳು, ಯಾವ ಸಂಕುಚಿತ ಭಾವನೆಯೂ ಇಲ್ಲದೆ ತ್ರಿಮತತತ್ತ್ವಗಳು, ವಿವಿಧ ಧರ್ಮಗಳ ಸಾರವನ್ನು ಕೂಡಿದ ಗ್ರಂಥಗಳು–ತತ್ತ್ವ, ಜ್ಞಾನ, ಶೈಲಿ, ವೈವಿಧ್ಯಗಳಂತೆ ಹಲವು

ರೀತಿಗಳಿಂದ ಅನುಪಮ, ಅಸದೃಶವಾದ ಬರವಣಿಗೆಗಳು. ವೇದಾಂತ ಪ್ರಕ್ರಿಯಾ ಪ್ರತ್ಯಭಿಜ್ಞ, Shuddha Shankara Prakriya Bhaskara, ಗಳಂತಹ ಮೇರುಕೃತಿಗಳು, ಮೂಲಾ ವಿದ್ಯಾನಿರಾಸ, ಶ್ರೀ ಶಂಕರ ಭಗವತ್ಪಾದ ವೃತ್ತಾಂತ ಸಾರಸರ್ವಸ್ವದಂತಹ ಸಂಶೋಧನಾ ಗ್ರಂಥಗಳು ಅವರ ಹಿರಿಮೆಯನ್ನು ಬೆಳಗಿಸುತ್ತಿವೆ.

ಮೊದಲಿನಿಂದಲೂ ವಿರಕ್ತರಂತೆಯೇ ಬಾಳಿದ ಶ್ರೀ ಸುಬ್ಬರಾಯರು ಜೂನ್ ೧೯೪೮ ರಲ್ಲಿ ಸಂನ್ಯಾಸ ಸ್ವೀಕರಿಸಿದರು. ಅಧ್ಯಾತ್ಮ ಕ್ಷೇತ್ರಕ್ಕೆ ಸರಳತೆಯೇ ಮುಖ್ಯ, ತತ್ತ್ವಕ್ಕೆ ಮನ್ನಣೆ, ಅನುಷ್ಠಾನಕ್ಕೆ ಪ್ರಾಧಾನ್ಯ ಅವರ ಜೀವನರೀತಿ ಆಗಿತ್ತು. ಸಾಂಪ್ರದಾಯಿಕ ಪೂಜಾ, ಪಾರಾಯಣಾದಿಗಳನ್ನು ನಡೆಸಿದರೂ ಆ ಕರ್ಮಮಾರ್ಗವು ಕೇವಲ ಚಿತ್ತಶುದ್ಧಿಗಾಗಿ– ಉಪಾಸನಾ ಕ್ರಮಗಳೊಡನೆ ಪರಮಾರ್ಥ ಸಾಧನದ ಸೋಪಾನಗಳನ್ನು ಏರಿ ಭಾಷ್ಯಗಳ ಮೂಲಕ ಆತ್ಮ ಸ್ವರೂಪ ಎನ್ನುವದು ಅವರ ನಡೆ. ಕರ್ಮಾನುಷ್ಠಾನದಿಂದ ಭಕ್ತಿಮಾರ್ಗಕ್ಕೆ ಅನಂತರ ಜ್ಞಾನ–ಭಕ್ತಿ ಮಾರ್ಗಗಳ ಸಮ್ಮಿಲನದಿಂದ ಆತ್ಮೋದ್ಧಾರದ ಮಾರ್ಗವನ್ನು ಹಿಡಿದವರು. "ದಾನಗಳಲ್ಲಿ ಬ್ರಹ್ಮವಿದ್ಯಾದಾನಕ್ಕಿಂತ ಹೆಚ್ಚಿನದಿಲ್ಲ, ಈ ಪುಣ್ಯಕಾರ್ಯಕ್ಕೆ ತಮ್ಮ ಹಣ ವಿನಿಯೋಗವಾಗಲೆಂಬ ಹಂಬಲಿಕೆ ಇರುವವರು ಧನ ಸಹಾಯವನ್ನು ಭಗವಂತನ ಪ್ರೀತ್ಯರ್ಥವಾಗಿ ಕೊಡಬಹುದು;.. ಇನ್ನು ಮುಂದೆ **ಈ ಬಾಬಿಗೆ ಹಣ ಕಳಿಸಬೇಕಾಗಿಲ್ಲ;**...ನಾವು ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕೇ ಹೊರತು ಜಾಹೀರು ಮಾಡಿಕೊಳ್ಳಬೇಕಾದದ್ದಿಲ್ಲ; ವಿದ್ಯೆಯ ಮಹತ್ವವು ಪದವಿಯ ಕುಂದಣವಿಲ್ಲದೆಯೆ ಪ್ರಕಾಶವಾಗಬೇಕು; ಭಾರತೀಯ ಸಂಸ್ಕೃತಿಯ ತಿರುಳೂ ಅಕ್ಷಯ ನಿಧಿಯೂ ಆಗಿರುವ ಅಧ್ಯಾತ್ಮವಿದ್ಯೆಯ ಪ್ರಚಾರವೇ ಕಾರ್ಯಾಲಯದ ಉದ್ದೇಶ, ಅಧ್ಯಾತ್ಮ ವಿಚಾರವು ಎಲ್ಲೆಲ್ಲಿ ಹೇಗೆ ಕವಲೊಡೆದು ಎಂಥೆಂಥ ಫಲಪುಷ್ಪಗಳನ್ನು ಬಿಡುತ್ತಿರುವುವೆಂಬುದನ್ನು ವಿಚಾರಿಸಿ, ಆರ್ಯಸಮಾಜ, ಬ್ರಹ್ಮಸಮಾಜ, ಪ್ರಾರ್ಥನಾ ಸಮಾಜ, ಕ್ರೈಸ್ತ–ಮಹಮ್ಮದೀಯ ಮತಗಳು, ಥಿಯಾಸಫಿ,– ಜೈನ ಬೌದ್ಧ ಮುಂತಾದ ಪ್ರಾಚೀನ ದರ್ಶನಗಳ ವಿಚಾರವನ್ನು ನಿಷ್ಪಕ್ಷಪಾತವಾಗಿ ಕಾಣಬೇಕು–ಯಾವ ಮತಗಳ ದೂಷಣೆ ಮಾಡದೆ ಅಧ್ಯಾತ್ಮ ಸಾಧನ ವಿಷಯ, ಸಿದ್ಧಾಂತ ವಿಷಯಕವಾದ ಲೇಖನಗಳಿರಬೇಕು...." ಇಂತಹ ಇವರ ಉನ್ನತ ವಿಚಾರಗಳು, ಧ್ಯೇಯಗಳು ಈ ಅಪರೂಪದ ಶ್ರೇಷ್ಠ ಜ್ಞಾನತಪಸ್ವಿಯನ್ನು ಯಥಾರ್ಥವಾಗಿ ಪರಿಚಯಿಸುವವು. ಕಾರ್ಯಾಲಯ ನಡೆದ ರೀತಿ, ಮುಂದಿಟ್ಟ ಧ್ಯೇಯಗಳು ಯಾವಕಾಲಕ್ಕೂ ಆದರ್ಶ.

ಅವರ ಜ್ಞಾನ, ತಪಸ್ಸು, ಅದರ ಫಲವನ್ನು ಸಾಕಷ್ಟು ರೀತಿಯಲ್ಲಿ ಹೆಚ್ಚು ಹೆಚ್ಚು ಅಧ್ಯಾತ್ಮಪ್ರಿಯರಿಗೆ ತಲುಪಿಸುವ ಮತ್ತು ಸಾಮಾನ್ಯರನ್ನೂ ಅಧ್ಯಾತ್ಮದೆಡೆಗೆ ತಿರುಗಿಸುವ ಕಾತರತೆಯ ಪರಿಣಾಮವಾಗಿ ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳಲ್ಲಿ ೧೮೦ಕ್ಕೂ

ಮೀರಿದ ಸಂಖ್ಯೆಯ ಗ್ರಂಥಗಳನ್ನೂ, ಪತ್ರಿಕೆಯ (೪೪ ಸಂಪುಟ) ೫೦೦ ಸಂಚಿಕೆಗಳಲ್ಲಿ ಆರೇಳು ಸಾವಿರ ಪುಟಗಳ ಲೇಖನಗಳನ್ನೂ ಬರೆದರು. ಈ ಲೇಖನಗಳ ಶೈಲಿಯ ಸೊಗಸು, ಓದಿಸಿಕೊಂಡು ಹೋಗುವ ಆತ್ಮೀಯತೆಯ ಛಾಪು ವಿಷಯದ ಕಡೆಗೆ ಮನಸೆಳೆಯುವಂತಹವು. ಶ್ರೀ ಶಂಕರರ ಸಿದ್ಧಾಂತ, ಭಾಷ್ಯಗಳು ಮತ್ತು ಇತರ ಕೃತಿಗಳು, ವೇದಾಂತ ಕಥಾವಳಿ, ಸ್ತೋತ್ರಗಳು– ಗೀತೆಗಳು, ಸ್ವತಂತ್ರ ಗ್ರಂಥಗಳು, ವೇದಾಂತ ವಿಚಾರದ ಇತಿಹಾಸ ಮತ್ತು "ವೇದಾಂತ ಪ್ರಕ್ರಿಯಾ ಪ್ರತ್ಯಭಿಜ್ಞ" ದಂತಹ ಮೇರುಕೃತಿ, ಜಿಜ್ಞಾಸುಗಳಿಗೆ ಮಾರ್ಗದರ್ಶನ ನೀಡುವ ಪ್ರಶ್ನೋತ್ತರಗಳು, ಉಪನ್ಯಾಸಗಳು..... ಹೀಗೆ ವಿಸ್ತಾರವಾಗಿ ಹರಡಿರುವ ಫಲಪುಷ್ಪಭರಿತ ವೃಕ್ಷ ಗಹನವಾದ ವಿಚಾರಗಳನ್ನೂ ಅವುಗಳ ಮರೆಯಲ್ಲಡಗಿರುವ ತತ್ತ್ವಗಳನ್ನೂ ಸರಳವಾದ ರೀತಿಯಲ್ಲಿ, ತಿಳಿಯಾದ ಭಾಷೆಯಲ್ಲಿ–ವಿಷಯ ಸ್ಪಷ್ಟನೆಗೆ ಅವಶ್ಯವಾದಲ್ಲಿ ಹೊಸಪದಗಳನ್ನಿಟ್ಟು ಸೂಕ್ತ ಉದಾಹರಣೆಗಳೊಡನೆ ವಿವರಿಸುವ ಅವರ ಬರೆವಣಿಗೆ ಅತಿ ವಿಶಿಷ್ಟವಾದುದು. ಬಹುಶಃ ಕನ್ನಡ ವೇದಾಂತ ವಾಙ್ಮಯದಲ್ಲಿ ಒಬ್ಬರೇ ಬರೆದ ಇಷ್ಟು ವಿಸ್ತಾರವಾದ, ಬಹುರೂಪದ ಸಾಹಿತ್ಯ ಮತ್ತೊಂದಿಲ್ಲ ಎನ್ನಬಹುದು. ಅವರು ಪ್ರಾಜ್ಞರೂ ಬಹುಶ್ರುತರೂ ಆದಂತೆ ವೇದಾಂತ ಪ್ರಸಾರದ ವಿಷಯದಲ್ಲಿಯೂ ಅಷ್ಟೇ ಲೌಕಿಕ ಚತುರರು, ವ್ಯಾವಹಾರಿಕ ಪರಿಣತರು ಆಗಿದ್ದರು. ಬೆಂಗಳೂರಿನ ತ್ಯಾಗರಾಜನಗರದಲ್ಲಿ ಅಧ್ಯಾತ್ಮಪ್ರಕಾಶ ಕಾರ್ಯಾಲಯವನ್ನು ತೆರೆದು, ಇಲ್ಲಿಯ ಧಾರ್ಮಿಕಬಂಧುಗಳಿಗೆ ಅದ್ವೈತಲಾಭ ದೊರಕುವಂತೆ ಮಾಡಿದರು.

*****

## ಕರ್ಣಾಟಕ ಕವಿರತ್ನ
# ಹೊಸಕೆರೆ ಚಿದಂಬರಯ್ಯನವರು
## (ಸಂಕ್ಷಿಪ್ತ ಪರಿಚಯ)

ಹೊಸಗನ್ನಡ ಗದ್ಯಶಿಲ್ಪಿಗಳಲ್ಲಿ ಒಬ್ಬರಾದ ಬಹುಮುಖ ಪ್ರತಿಭೆಯ ಶ್ರೀ ಹೊಸಕೆರೆ ಚಿದಂಬರಯ್ಯನವರು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹೊಸಕೆರೆ ಗ್ರಾಮದಲ್ಲಿ ಶೇಷಗಿರಿಯಪ್ಪ-ಪುಟ್ಟನರಸಮ್ಮ ದಂಪತಿಗಳ ಪುತ್ರರಾಗಿ ೨೮-೧೨-೧೮೭೦ರಲ್ಲಿ ಜನಿಸಿದರು. ಬಾಲ್ಯದ ವಿದ್ಯಾಭ್ಯಾಸ ತಾಯಿಯ ತವರೂರಿನಲ್ಲಿ ಕವಿ ಬೊಬ್ಬೂರುರಂಗನ ಮನೆತನದವರಿದ್ದ ಹಿರಿಯೂರಿನಲ್ಲಿ ಆಯಿತು. ಅಪ್ಪರ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಪಾಸಾಗಿ ಅನಂತರ ಶಾಲಾ ಉಪಧ್ಯಾಯರಾದರು. ಕಡೂರು, ದಾವಣಗೆರೆಗಳಲ್ಲಿ ಬಹುಕಾಲ ಸೇವೆಸಲ್ಲಿಸಿದ ಅವರು ಅಧ್ಯಾತ್ಮದತ್ತ ಒಲಿದು ಉಪಾಧ್ಯಾಯವೃತ್ತಿಗೆ ರಾಜೀನಾಮೆ ಇತ್ತರು. ದೇಶಪ್ರೇಮಿಗಳು ಆಗಿದ್ದ ಅವರು ರಾಷ್ಟ್ರೀಯ ಶಿಕ್ಷಣಸಮಿತಿಯ ಧಾರವಾಡದ ನ್ಯಾಷನಲ್ ಕಾಲೇಜಿನಲ್ಲಿ ನೇಮಕರಾದರು. ಇದರ ಫಲವಾಗಿ ಆರ್ಯಧರ್ಮ ಪ್ರದೀಪವೆಂಬ ಹಿಂದೂಧರ್ಮ ಪರಿಚಯದ ಉದ್ಗ್ರಂಥವನ್ನು ರಚಿಸಿದರು. ಕುರ್ತುಕೋಟಿ ಭಾಗವತರ ಶಿಷ್ಯರಾಗಿ, ಅವರ ಗುರುಗಳಾದ ಶ್ರೀ ಗೋಂದಾವಳಿ ಮಹಾರಾಜರ ಬಳಿ ೫ ವರ್ಷಗಳ ಕಾಲ ಸೇವೆಸಲ್ಲಿಸಿ ಉಪದೇಶಲಾಭವನ್ನು ಅಧ್ಯಾತ್ಮಾನುಭವವನ್ನು ಪಡೆದರು. ಭಗವದ್ಗೀತಾಸಾರ ವಿಚಾರ, ಮನಸ್ಸಿಗುಪದೇಶ, ಪಂಚದಶಿ, ಗೀತಾರ್ಥಚಂದ್ರಿಕೆ, ಭರತಖಂಡದ ಜೀವಜ್ಯೋತಿಗಳು, ಕೀರ್ತನಕಂಠಾಭರಣವೆಂಬ ೪೦ ಹರಿಕಥೆಗಳ ರಚನೆ, ವಿದ್ಯಾರಣ್ಯಕಾವ್ಯ ಮೊದಲಾದ ನಾನಾ ಪ್ರಕಾರದ ಸಾಹಿತ್ಯ, ವೇದಾಂತ, ಜೀವನಚರಿತ್ರೆ, ಕಾವ್ಯ, ಕೀರ್ತನೆ, ಪ್ರಬಂಧ, ಅನುವಾದ, ನಾಟಕ, ಕಥೆ ಇತ್ಯಾದಿ ೮೦ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ.

೧೯೧೦ರಲ್ಲಿ ರಚಿಸಿದ ಕೃಷ್ಣಮಹೇಶ್ವರಿ ನಾಟಕವು ಕನ್ನಡದಲ್ಲಿ ಮೈಸೂರು ರಾಜವಂಶವನ್ನು ಕುರಿತು ರಚಿಸಿದ ಮೊಟ್ಟಮೊದಲನೇ ಐತಿಹಾಸಿಕ ನಾಟಕವಾಗಿದೆ. ಶ್ರೀ ವಿದ್ಯಾರಣ್ಯ ಕಾವ್ಯವು ೨೬ಕ್ಕೂ ಹೆಚ್ಚಿನ ಛಂದಸ್ಸುಗಳಲ್ಲಿ ರಚಿತವಾಗಿದೆ. ಕೇವಲ ಮೂಲ ಗದ್ಯಾನುವಾದಗಳಷ್ಟೇ ಪ್ರಕಟವಾಗಿದ್ದ ಮಹಲಿಂಗರಂಗನ ಅನುಭವಾಮೃತ ಕಾವ್ಯವನ್ನು ಹತ್ತಾರು ಹಸ್ತಪ್ರತಿಗಳಿಂದ ಶುದ್ಧಪಾಠದ ಪ್ರತಿಯನ್ನು ಸಿದ್ಧಪಡಿಸಿ, ಗ್ರಂಥಸಂಪಾದನೆ ಮಾಡಿ ಸರ್ವಾರ್ಥಸಂದರ್ಶಿನಿ ಎಂಬ ಟೀಕೆಯನ್ನು ವಿದ್ವತ್ ಪೂರ್ಣವಾಗಿ ಬರೆದ ಏಕೈಕ ಸಾಹಿತಿ ವಿದ್ವಾಂಸ ಹೊಸಕೆರೆ ಚಿದಂಬರಯ್ಯನವರು.

ಹೊಸಗನ್ನಡದ ಶುದ್ಧ, ಸರಳ, ಗಂಭೀರ ಗದ್ಯರಚಕರಲ್ಲಿ ಆದ್ಯರಲ್ಲಿ ಒಬ್ಬರಾದ ಹೊಸಕೆರೆ ಚಿದಂಬರಯ್ಯನವರು ಚ. ವಾಸುದೇವಯ್ಯನವರ ಎತ್ತರಕ್ಕೆ ಏರಿದ

ಗದ್ಯಸಾಹಿತಿಗಳಾಗಿದ್ದಾರೆ. ಭಕ್ತಿ ಉಪಸನಾನಿರತರಾಗಿದ್ದ ಹೊಸಕೆರೆ ಚಿದಂಬರಯ್ಯನವರು ತಮ್ಮ ೭೮ನೇ ವಯಸ್ಸಿನಲ್ಲಿ ತಿರುಮಕೂಡಲು ನರಸೀಪುರದ ಕಪಿಲಾತೀರದ ಪ್ರಶಾಂತ ವಾತಾವರಣದಲ್ಲಿ ಏಕಾಂತ ತಪಸ್ಸ್ವಾಧ್ಯಾಯನಿರತರಾಗಿದ್ದು ೧೯-೪-೧೯೩೮ರಲ್ಲಿ ಬ್ರಹ್ಮೈಕ್ಯರಾದರು.

ಹೊಸಕೆರೆ ಚಿದಂಬರಯ್ಯನವರು ಕಡೂರಿನಲ್ಲಿ ಸರ್ಕಾರಿ ಸೇವೆಯಲ್ಲಿದ್ದಾಗಲೇ ವೈ. ಸುಬ್ಬರಾಯರ ಪರಿಚಯ(ಅಧ್ಯಾತ್ಮಪ್ರಕಾಶ ಕಾರ್ಯಾಲಯದ ಸಂಸ್ಥಾಪಕರಾಗಿ, ಅನಂತರ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳಾದವರು)ವಾಯಿತು. ಇಬ್ಬರೂ ಶಾಲಾಅಧ್ಯಾಪಕರಾಗಿ ಸಹೋದ್ಯೋಗಿಗಳಾಗಿ ವೇದಾಂತಸಹಪಾಠಿಗಳಾದರು. ಏಕಕಾಲದಲ್ಲಿ ಇಬ್ಬರೂ ಒಟ್ಟಿಗೆ ಕಾಲಟಿಯಲ್ಲಿ ಶಂಕರಮಠದ ಸ್ಥಾಪನೆಕಾಲದಲ್ಲಿ ಶ್ರೀ ಶೃಂಗೇರಿಜಗದ್ಗುರು ಶ್ರೀ ಶ್ರೀ ಶಿವಾಭಿನವ ನರಸಿಂಹಭಾರತೀಸ್ವಾಮಿಗಳವರಿಂದ ಭಾಷ್ಯಶಾಂತಿಪಾಠದ ಅನುಗ್ರಹ ಹೊಂದಿದರು. ಅಧ್ಯಯನಸಂಗಿಗಳೂ, ಸಹಸಾಧಕರೂ, ಏಕದೇಹನ್ಯಾಯದಿಂದ ನಿಕಟವರ್ತಿಗಳಾದ ವೈ. ಸುಬ್ಬರಾಯರು, ಚಿದಂಬರಯ್ಯನವರು ರಚಿಸಿದ ಗ್ರಂಥಗಳಿಗೆ ಬೆಂಬಲವಾಗಿನಿಂತು ಮಾರ್ಗದರ್ಶನ ಮಾಡಿದ್ದಾರೆ.

ಅನುಭವಾಮೃತಕ್ಕೆ ಸರ್ವಾರ್ಥಸಂದರ್ಶಿನೀ ಟೀಕೆ ರಚಿಸುವಲ್ಲಿ ಮೂಲಗ್ರಂಥ ಸಂಪಾದಿಸುವಲ್ಲಿ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು (ಪೂರ್ವಾಶ್ರಮದಲ್ಲಿ ವೈ. ಸುಬ್ಬರಾವ್) ನೀಡಿದ ನೆರವು ಅಪಾರವಾದುದು. ಇದನ್ನು ಚಿದಂಬರಯ್ಯನವರೇ ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಸ್ಮರಿಸಿದ್ದಾರೆ.

"ಇನ್ನು ಒಂದು ಮಾತನ್ನು ವಾಚಕರ ಮುಂದೆ ಇಡಬೇಕಾಗಿದೆ. ಈ ಗ್ರಂಥದ ಕರ್ತೃತ್ವವು ನನಗೆ ಕೇವಲ ಸ್ಥೂಲದೃಷ್ಟಿಯಿಂದ ಮಾತ್ರ ಸಲ್ಲುವುದೇ ಹೊರತು ವಿಚಾರದೃಷ್ಟಿಯಿಂದ ಇದರ ಯಶಸ್ಸಿಗೆಲ್ಲ ನನ್ನ ಮಿತ್ರರಾದ ಶ್ರೀ ವೈ. ಸುಬ್ಬರಾಯರೇ ಭಾಗಿಗಳಾಗಿರುವರು. ಏಕೆಂದರೆ ಈ ಗ್ರಂಥರಚನೆಯ ರೂಪರೇಖೆಯು ಅವರಿಂದಲೇ ಪ್ರಾರಂಭವಾಗಿದ್ದು, ಅವರಿಗೆ ಸಾಕಾದಷ್ಟು ಅವಕಾಶವು ದೊರೆಯದ್ದರಿಂದ ನನ್ನ ಕೈಗೆ ಬಂದ ಮೇಲೆಯೂ ಇದು ಕೊನೆಯವರೆಗೂ ಎಲ್ಲ ವಿಚಾರಗಳಲ್ಲೂ ಅವರ ನೆರವನ್ನು ಪಡೆದೇ ಮುಗಿದಿರುವುದು. ಹೀಗಿರುವಾಗ ಅಧ್ಯಾತ್ಮ ಗ್ರಂಥಗಳ ಪ್ರಕಾಶಕ್ಕೇ ದೀಕ್ಷೆಯನ್ನು ವಹಿಸಿರುವ ಮತ್ತು ನನ್ನೊಡನೆ ಏಕದೇಹನ್ಯಾಯದಿಂದ ಸಹಾಯಮಾಡಿರುವ ಅವರಿಗೆ ಉಪಕಾರಸ್ಮರಣೆಯ ರೂಪವಾದ ಉಪಚಾರವನ್ನು ಹೇಳುವುದು ಅತ್ಯಲ್ಪವಾಗುವುದೆಂದು ಆ ವಿಷಯದಲ್ಲಿ ಸುಮ್ಮನಾಗಿರುವೆನು". ಹೀಗೆ ಸ್ವಾಮಿಗಳ ಮಾರ್ಗದರ್ಶನದಲ್ಲಿ ಸರ್ವಾರ್ಥದರ್ಶಿನೀ ಟೀಕೆ ರೂಪುಗೊಂಡಿದೆ.

# ಶ್ರೀ ಶ್ರೀ ಗಳವರ ಆತ್ಮಚರಿತ್ರೆಯಲ್ಲಿ ಶ್ರೀ ಚಿದಂಬರಯ್ಯನವರು

ಅಧ್ಯಾತ್ಮ ಪ್ರಕಾಶ ಕಾರ್ಯಾಲಯದ ಸಂಸ್ಥಾಪಕರಾದ ಶ್ರೀ ವೈ. ಸುಬ್ಬರಾಯರಿಗೆ (ಅನಂತರ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು) ಹೊಸಕೆರೆ ಚಿದಂಬರಯ್ಯನವರ ಸಹವಾಸವು ದೊರಕಿದ್ದು ಕೇವಲ ದೈವಿಕವಾದದ್ದು, ಎಂದು ಬರೆದಿದ್ದಾರೆ. ಅವರು ಕಡೂರಿನಲ್ಲಿ ಓವರ್‌ಸಿಯರ್ ಆಗಿ ಕೆಲಸಕ್ಕೆ ಸೇರಿಕೊಂಡಾಗ, (ಸುಮಾರು ೧೯೧೦ಇರಲ್ಲಿರಬಹುದು) ಅವರ ಓಡಾಟದಲ್ಲಿ ಅಲ್ಲಿಯ ಆಂಗ್ಲೋ ವರ್ನಾಕ್ಯುಲರ್ ಶಾಲೆಯನ್ನು ಹೊಕ್ಕಾಗ ಉಡಿಗೆ ತೊಡಿಗೆಗಳಲ್ಲಿ ಹೆಚ್ಚಿನ ಆಡಂಬರವಿಲ್ಲದ ಹೆಡ್‌ಮಾಸ್ಟರ್ ಆಗಿದ್ದ ಹೊ.ಚಿ. ಅವರು 'ಶಬ್ದಾನುಶಾಸನ'ವೆಂಬ ದೊಡ್ಡ ಪುಸ್ತಕವನ್ನು ಬೇಸರದಲ್ಲೇ ಓದುತ್ತಿದ್ದರು. ಸುಬ್ಬರಾಯರು ಅದನ್ನು ಸರಸರನೆ ಓದಿದ್ದು, ಅವರಿಗೆ ಸಂತೋಷವಾಗಿ 'ಆಗಾಗ್ಗೆ ಬರುತ್ತಿರಿ' ಎಂದರು. ಅನಂತರದಲ್ಲಿ ಪರಿಚಯ ಚೆನ್ನಾಗಿ ಆದಮೇಲೆ ಅವರು ಸುಬ್ಬರಾಯರಿಗೆ ಮನೆ ಗೊತ್ತುಮಾಡಿಕೊಟ್ಟರು. ಇಬ್ಬರೂ ಜೊತೆಯಲ್ಲಿ ಕುಳಿತು ಹಲವಾರು ಸಂಸ್ಕೃತ ಪುಸ್ತಕಗಳನ್ನು ಕುವಲಾಯಾನಂದ, ಪ್ರತಾಪರುದ್ರೀಯ, ಲಘುಕೌಮುದಿ ಮುಂತಾದ ಪಂಡಿತ ಪರೀಕ್ಷೆಯ ಪಠ್ಯಪುಸ್ತಕಗಳನ್ನು ಓದಿದರು.

ಚಿದಂಬರಯ್ಯನವರು 'ಬರಿಯ ಕನ್ನಡ ಮೇಷ್ಟ್ರರಾಗಿದ್ದರೂ' ಮೇಲಧಿಕಾರಿಗಳು ಅವರ ಯೋಗ್ಯತೆಯನ್ನು ಕಂಡು ಗೌರವಿಸುತ್ತಿದ್ದರು. ಹಾಗಾಗಿ ಅವರು ಸುಬ್ಬರಾಯರಿಗೆ ಇಲಾಖೆಯಲ್ಲಿ ಕೆಲಸವನ್ನು ಕೇಳಿ ಬರೆದದ್ದಕ್ಕೆ ಮೂವರು ಡೆಪ್ಯುಟಿ ಇನ್ಸ್‌ಪೆಕ್ಟರುಗಳು ಕೆಲಸವನ್ನು ಕೊಡುವುದಾಗಿ ತಿಳಿಸಿ ಎರಡೇ ದಿನಗಳಲ್ಲಿ ಉತ್ತರವನ್ನು ಕೊಟ್ಟರು. ಕೆಲಸ ದೊರೆಯಿತು.

ಅನಂತರ ವೇದಾಂತದಲ್ಲಿಯೂ, ಶಾಲಾ ಕೆಲಸದಲ್ಲೂ ಇಬ್ಬರೂ ಪರಸ್ಪರವಾಗಿ ಸಹಕರಿಸತೊಡಗಿದರು. ೧೯೧೭ರಲ್ಲಿ ಹೊ.ಚಿ. ಅವರಿಗೆ ಪತ್ನೀವಿಯೋಗ ವಾದ್ದರಿಂದ ಅವರು ಆದರದಿಂದ ಓದುತ್ತಿದ್ದ ಶಂಕರಾನಂದರ ಗೀತಾತಾತ್ಪರ್ಯ ಬೋಧಿನಿಯಲ್ಲಿ 'ಸಂನ್ಯಾಸ ಮಾಡಿ ಶ್ರವಣವನ್ನು ಮಾಡಬೇಕು' ಎಂಬುದು ಮತ್ತೆ ಮತ್ತೆ ಬರುತ್ತಿದ್ದು, ಅವರಿಗೆ ಸಂನ್ಯಾಸ ಸ್ವೀಕಾರದ ಕಡೆ ಒಲವು ಬಂದಿತ್ತು. ಆದರೂ ಶಾಲಾ ಕೆಲಸವನ್ನು ಅನಾದರಮಾಡದೆ, ಉಪಾಧ್ಯಾಯರ ಸಂಘ, ಉಪನ್ಯಾಸಗಳು, ಬೋಧನ ಪದ್ಧತಿ, ಬೋಧನಕ್ರಮ, ಮನೋಶಿಕ್ಷಣ, ಉಪಾಧ್ಯಾಯರ ಯೋಗ್ಯತೆಗಳು ಮುಂತಾದ ಶಿಕ್ಷಣ ಗ್ರಂಥಗಳನ್ನು ಸುಲಭಶೈಲಿಯ ಇತರ ವಿಷಯಗಳ ಗದ್ಯಪದ್ಯಗಳನ್ನೂ ಅವರು ಬರೆದರು.

ಅದರ ಜೊತೆಗೆ ಬೊಂಬಾಯಿ ಮೂಲದ ಸಂನ್ಯಾಸಿಗಳ ಪರಿಚಯ, ದರ್ಶನವಾದ ಮೇಲೆ ಚಿದಂಬರಯ್ಯನವರಿಗೆ ಸಂನ್ಯಾಸಾಶ್ರಮದ ಕುತೂಹಲ ತೀವ್ರವಾಯಿತು.

ವೇದಾಂತಾಭ್ಯಾಸದ ಆಶೆಯು ಬಲವಾಯಿತು. ದಾವಣಗೆರೆಯಲ್ಲಿ ಪುನಃ ವೈ. ಸುಬ್ಬರಾಯರೊಡನೆ ಒಟ್ಟಿಗಿರುವಾಗ ಕೆಲವಾರು ಬಾರಿ ಶಾಂಕರ ಭಾಷ್ಯಗಳನ್ನು ಓದಿದರು. ಚಿದಂಬರಯ್ಯನವರ ಆಡಳಿತದಿಂದ ಅಲ್ಲಿಯ ಶಾಲೆಯಲ್ಲಿ ಹೊಸಕ್ರಾಂತಿಯು ಉಂಟಾಯಿತು. ಆ ಸಮಯದಲ್ಲಿ ಹರಿಹರಕ್ಕೆ ಬಂದ ಶ್ರೀ ಕುರ್ತಕೋಟಿ ಮಹಾಭಾಗವತರನ್ನು ದರ್ಶನಮಾಡಿದರು. ಅವರು ಹರಿಹರಕ್ಕೆ ಬಂದಾಗಲೆಲ್ಲ ಚಿದಂಬರಯ್ಯನವರನ್ನೂ, ಸುಬ್ಬರಾಯರನ್ನೂ ಕರೆಸಿಕೊಳ್ಳುತ್ತಿದ್ದರು. ಹೀಗೆ ಸಂದರ್ಶನ, ಸಂವಾದ, ಅವರ ಉಪನ್ಯಾಸಗಳಲ್ಲಿನ ಹೆಚ್ಚಳ ಇವುಗಳೆಲ್ಲಾ ಇಬ್ಬರ ಮೇಲೂ ಅತಿಶಯವಾದ ಪ್ರಭಾವ ಬೀರಿದುವು. ಇವರ ಭಾಷ್ಯಶಾಂತಿಯ ಆಸಕ್ತಿಯನ್ನು ಅರಿತು ಮಹಾಭಾಗವತರು, ಶೃಂಗೇರಿ ಶ್ರೀಗಳವರಲ್ಲೇ ಆಗಲಿ, ಅನಂತರ ಭಾಷ್ಯಪಾಠ ಹಾನಗಲ್ಲ ವಿರೂಪಾಕ್ಷ ಶಾಸ್ತ್ರಿಗಳಲ್ಲಿ ಮುಂದುವರೆಯಲಿ ಎಂದು ಬುದ್ಧಿ ಹೇಳಿದರು.

ಅದರಂತೆ ಇಬ್ಬರಿಗೂ ಕಾಲಟಿಯಲ್ಲಿ ಶೃಂಗೇರಿ ಜಗದ್ಗುರುಗಳು ಶ್ರೀ ಶ್ರೀ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳಿಂದ ಭಾಷ್ಯ ಮತ್ತು ಶಿವ ಪಂಚಾಕ್ಷರೀ ಮಂತ್ರದ ಉಪದೇಶದ ಅನುಗ್ರಹವಾಯಿತು. ಅನಂತರ ಕುರ್ತಕೋಟಿಯಲ್ಲಿ ನಡೆದ ಬ್ರಾಹ್ಮಣ ಪಂಡಿತರ ಸಭೆಯಲ್ಲಿ ಚಿದಂಬರಯ್ಯನವರಿಗೆ 'ಕರ್ಣಾಟಕ ಕವಿರತ್ನ' ಎಂಬ ಬಿರುದನ್ನು ವಿದ್ವಾಂಸರುಗಳು ದಯಪಾಲಿಸಿದರು. ಇಲ್ಲಿಂದಾಚೆಗೆ ಇಬ್ಬರೂ ಕೆಲವು ದಿವಸಗಳು ಹರಿಹರದಲ್ಲಿಯೇ ಇದ್ದು, ಶ್ರೀಗಳವರು ಹೇಳಿದ ಜಪವನ್ನು ಒಟ್ಟಾಗೇ ಕುಳಿತು ವಿಶೇಷವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಮಾಡಿದರು.

ದೇವರಗುಡ್ಡದ ಸಮೀಪದಲ್ಲಿ ಶ್ರೀ ವಿರೂಪಾಕ್ಷಶಾಸ್ತ್ರಿಗಳವರಿಂದ ಭಾಷ್ಯ ಪಾಠವಾಯಿತು. ಮತ್ತೊಂದು ಪ್ರಯೋಜನ ಅಲ್ಲಿ ಬಂದ ಶ್ರೀ ಬೆಟಗೇರಿ ಕೃಷ್ಣಶಾಸ್ತ್ರಿಗಳ ಉಪದೇಶದಿಂದ ಭಕ್ತಿಮಾರ್ಗದ ಕಡೆ ಮನಸ್ಸು ತಿರುಗಿದ್ದುದು. ಅವರಿಗೆ ಪಾದಾಂತಕೇಶ ಪರಮೇಶ್ವರನ ಪೂಜೆ, ಆರಾಧನೆಯನ್ನೂ ಶಾಸ್ತ್ರಿಗಳು ತಿಳಿಸಿಕೊಟ್ಟರು.

ಅನಂತರದಲ್ಲಿ ಚಿದಂಬರಯ್ಯನವರಿಗೆ ಗೋಂದಾವಳಿ ಮಹಾರಾಜರು ಮಹಾ ಭಾಗವತರಿಗೆ ಷಟ್ಚಕ್ರ ಬೋಧನೆಯ ಕ್ರಮವನ್ನು ಹೇಳಿಕೊಟ್ಟರೆಂಬ ವದಂತಿಯಿತ್ತು. ಅದರಿಂದ ಪ್ರಾಣಾಯಾಮದಲ್ಲಿ ನಂಬಿಕೆಯಿದ್ದ ಚಿದಂಬರಯ್ಯನವರು ಮಹಾರಾಜರ ಆಶ್ರಯವನ್ನು ಬೇಡಿದರು. ಆರುತಿಂಗಳವರೆಗೆ ನಿಯಮದಿಂದ ಕೆಲವು ಕ್ರಮಗಳನ್ನು ಮಾಡುತ್ತಿರುವಂತೆ ತಿಳಿಸಿದಾಗ, ಹಾಗೆ ಅವರು ಸಾಧಿಸಿದುದನ್ನು ಒಪ್ಪಿಕೊಂಡ ಮಹಾರಾಜರು ಅವರನ್ನು ಸೇವೆಗೆ ನಿಲ್ಲಲು ಅನುಮತಿಕೊಟ್ಟರು. ಅವರು ಅಲ್ಲಿ ಶರೀರದ ಭಾನವನ್ನೇ ಮರೆತು, ಮಹಾರಾಜರ ಸೇವೆಯಲ್ಲಿ ಮುಳುಗಿದರು. ಅವರ ವಿಷಯದಲ್ಲಿದ್ದ

ಅಸೀಮಭಕ್ತಿ ಅವರು ಸಂಪಾದಿಸಿ ಪ್ರಕಟಿಸುತ್ತಿದ್ದ 'ಪರಮಾರ್ಥ' ಪತ್ರಿಕೆಯಲ್ಲಿ 'ಗುರುಸ್ತುತಿ ಕುಸುಮಾಂಜಲಿ' (೧೯೧೪) ಯಲ್ಲಿ ಮೂಡಿದೆ.

ಶ್ರೀಗಳವರ ಭಕ್ತಿಚಂದ್ರಿಕೆಯ ಶುದ್ಧಪ್ರತಿಯನ್ನೂ, ಕೈಬರಹದ ಮಾಂಡೂಕ್ಯ ಪುಸ್ತಕವನ್ನೂ ಓದಿ ಅಚ್ಚಿಗೆ ಸಿದ್ಧಮಾಡಿ ಕರಡು ಪ್ರತಿಯನ್ನು ತಿದ್ದಿದವರು ಹೊ.ಚಿ.ಯವರು. ಅದರಂತೆ ಹೊ.ಚಿ.ಯವರ ಗೀತಾರ್ಥ ವಿವರಣೆಗೆ ಶ್ರೀಗಳು ಕೆಲವು ಸೂಚನೆಗಳನ್ನು ಕೊಟ್ಟರು. ಹೀಗೆ ಪರಸ್ಪರ ಒಬ್ಬರಿಗೊಬ್ಬರು ವಿಶ್ವಾಸದ ಸಹಾಯಕರಾಗಿ ವೇದಾಂತ ಕಾರ್ಯವನ್ನು ಯಶಸ್ವಿಯಾಗಿ ನಡೆಸಿದರು. ಹಲವಾರು ಪುಸ್ತಕಗಳನ್ನು ಒಬ್ಬರು ಬರೆದು, ಮತ್ತೊಬ್ಬರು ಸಿದ್ಧಮಾಡುತ್ತಿದ್ದುದೂ ವಿಶೇಷ ಸಾಮಾನ್ಯವಾದುದು. ಶ್ರೀಗಳವರ ಆತ್ಮಚರಿತ್ರೆಯಲ್ಲಿ ಅವರೀರ್ವರ ನಡುವಿನ ಸ್ನೇಹದ ಉಲ್ಲೇಖಗಳು ಬಂದಿವೆ.

ಶಂಕರಮಠದಲ್ಲಿ ನಡೆದ ಕೀರ್ತನ ಸಮ್ಮೇಲನದ ಪ್ರಭಾವವೇ ಚಿದಂಬರಯ್ಯನವರು ಕೀರ್ತನಗಳನ್ನು ಬರೆಯಲು ಕಾರಣ. ಅರಸೀಕೆರೆಯಲ್ಲಿ ಅವರ ಅಧ್ಯಾತ್ಮ ರಾಮಾಯಣ ಪುರಾಣ ಬಹಳ ಜನಪ್ರಿಯವಾಗಿತ್ತು. ಸುಧರ್ಮ ಪ್ರಭಾವ (೧೯೧೭) ನಾಟಕ ಪ್ರಕಟವಾಯಿತು. ಜಯರಾಮಾಚಾರ್ಯರ ಪ್ರಭಾವದಿಂದ ಹೊ.ಚಿ.ಯವರು ಭಕ್ತಬಂಧು ಮಾಸಪತ್ರಿಕೆಯಲ್ಲಿ ಕೀರ್ತನ ರೂಪದಲ್ಲಿ ೪೮ ಆಖ್ಯಾನಗಳನ್ನು ಬರೆದರು. ಅವನ್ನು ಒಟ್ಟುಗೂಡಿಸಿ ಚಿದಂಬರಯ್ಯನವರಿಂದ 'ಕೀರ್ತನ ಕಂಠಾಭರಣ' ಪ್ರಕಟವಾಯಿತು. ಅನಂತರದಲ್ಲಿ ಅವರು ಬೆಂಗಳೂರಿನ ಶಂಕರಮಠದಲ್ಲಿ ಮಗ ಶ್ರೀ ಅನಂತಮೂರ್ತಿ ಶಾಸ್ತ್ರಿಗಳೊಡನಿದ್ದರು. ಕೊನೆಯಲ್ಲಿ ತಿರುಮಕೂಡ್ಲು ನರಸೀಪುರದಲ್ಲಿರುವಾಗ ವಿಠಲಶಾಸ್ತ್ರಿಗಳೊಡನೆ ವಿಚಾರವಿನಿಮಯ ಮಾಡಿಕೊಂಡಾಗ ಸ್ವಾಮಿಗಳ ಅಭಿಪ್ರಾಯಗಳು ಶಂಕರರ ಭಾಷ್ಯಗಳಿಗೇ ಹೊಂದಿಕೊಂಡಿರುವವೆಂಬುದನ್ನು ನೆನಪಿಗೆ ತಂದುಕೊಂಡರು, ಕೂಡಲೆ ಅವರು ಹೊಳೆನರಸೀಪುರಕ್ಕೆ ಬಂದು ಕೆಲವುದಿನಗಳು ಅಲ್ಲಿರುವ ಇಚ್ಛೆಯನ್ನು ಸೂಚಿಸಿದ್ದರು. ಆದರೆ ಆ ದಿನಕ್ಕೆ ಮೊದಲೇ ಅವರು ಮುಕ್ತರಾದರು.

**ನನ್ನನ್ನು ವಿದ್ಯಾಭ್ಯಾಸದ ಇಲಾಖೆಗೆ ಸೇರಿಸಿ ಆಗಾಗ್ಗೆ ಉಪಯುಕ್ತವಾದ ಸಲಹೆಗಳನ್ನು ನಡೆನುಡಿಗಳಿಂದ ಕೊಡುತ್ತಾ, ಏಕದೇಹನ್ಯಾಯದಿಂದ ದೀರ್ಘಕಾಲದವರೆಗೆ ಇದ್ದುಕೊಂಡಿದ್ದು, ನನ್ನ ಬಾಳಿಗೆ ಸುಖದ ಹೊಯ್ನೀರನ್ನು ಎರೆಯುತ್ತಿದ್ದ ಅವರು ಮೊದಲು ಚಿದಂಬರರೇ ಆಗಿದ್ದು ಅನಂತರ ಚಿದಂಬರದಲ್ಲಿ ಬೆರೆತುಹೋದರು.**

*****

# ಮುನ್ನುಡಿ

(೧೯೩೬ರಲ್ಲಿ ತಿದ್ದಿದ ಎರಡನೆಯ ಮುದ್ರಣಕ್ಕೆ ಹೊಸಕೆರೆ ಚಿದಂಬರಯ್ಯನವರು ಬರೆದದ್ದು)

ಜಗತ್ತಿನಲ್ಲಿ ನಡೆಯುವ ಧರ್ಮಕಾರ್ಯಗಳಲ್ಲಿ ಜೀರ್ಣೋದ್ಧಾರಕ್ಕಿರುವಷ್ಟು ಶ್ರೇಯಃಪ್ರಾಪ್ತಿಯು ನವೀನರಚನೆಗಳಿಗಿಲ್ಲವೆಂದು ತಿಳಿದವರು ಭಾವಿಸುವರು. ಈ ನಿಯಮವು ಗ್ರಂಥರಚನೆಗೂ ಅನ್ವಯಿಸುವದು. ಹೊಸ ಗ್ರಂಥಗಳ ಮೂಲಕ ಕನ್ನಡದ ವಾಚಕರ ಸೇವೆಯನ್ನು ಮಾಡುತ್ತಿದ್ದ ನನ್ನ ಲೇಖನ ಚಾಪಲ್ಯಕ್ಕೆ ಈ ಸಲ ಈ ಕಡೆಗೆ ಚಾಲನೆ ದೊರೆಯಿತು. ಮೈಸೂರಲ್ಲಿ ಪ್ರಸಿದ್ಧವ್ಯಾಪಾರಿಗಳಾಗಿದ್ದ ಶ್ರೀಯುತ ದಾವಣಗೆರೆಯ 'ಬ್ರಹ್ಮಪ್ಪ ತವನಪ್ಪನವರ' ಎಂಬ ಶ್ರೀಮಂತರು ಈ ಗ್ರಂಥದ ಜೀರ್ಣೋದ್ಧಾರವನ್ನು ಮಾಡಿಸುವದಕ್ಕೆ ಸಂಕಲ್ಪವನ್ನು ಮಾಡಿ ಇದಕ್ಕೆ ತಾವಾಗಿ ನನ್ನನ್ನು ನಿಯೋಜನೆ ಮಾಡಿದರು. ಪರಮೇಶ್ವರನು ನನ್ನಿಂದ ಈ ರೀತಿಯಾದ ಸೇವೆಯನ್ನು ಬಯಸಿರಬಹುದೆಂದು ನಾನು ಅತ್ಯಾನಂದದಿಂದ ಇದಕ್ಕೆ ಕೈಹಾಕಿದೆನು.

ಈ ಗ್ರಂಥವು ಪ್ರತಿಯೊಂದು ಹಳ್ಳಿಯಲ್ಲಿಯೂ ಕೂಡ ಪ್ರತಿಯೊಬ್ಬ ಕನ್ನಡಿಗನ ಪುಸ್ತಕ ಭಂಡಾರಕ್ಕೂ ಭೂಷಣವಾಗಿ ಪ್ರಸಾರಗೊಂಡಿರುವದಲ್ಲದೆ ಎಷ್ಟೋ ಕಡೆಗಳಲ್ಲಿ ಇದರ ಪುರಾಣವೂ ನಡೆಯುತ್ತಿರುವದುಂಟು. ವಿದ್ಯಾಭ್ಯಾಸದ ಇಲಾಖೆಯವರು ಪ್ರಸಿದ್ಧಮಾಡಿದ ಪದ್ಯಸಾರವನ್ನು ಈ ಗ್ರಂಥದ ಪದ್ಯಗಳು ಅಲಂಕಾರಗೊಳಿಸುತ್ತಿವೆ. ಈ ದೇಶದಲ್ಲಿ ಕನ್ನಡದ ಮುದ್ರಾಕ್ಷರಗಳ ಸೌಕರ್ಯವಿನ್ನೂ ಚೆನ್ನಾಗಿಲ್ಲದಿದ್ದ ಶಾ.ಶ. ೧೭೭೨ರಲ್ಲಿ ನಮ್ಮನ್ನಾಳಿದ ಶ್ರೀಮನ್ಮಹೀಶೂರಪುರವರಾಧೀಶ ರಾಜಾಧಿರಾಜ ಮಹಾರಾಜ ಶ್ರೀಕೃಷ್ಣ ರಾಜಸಾರ್ವಭೌಮರ ಆಜ್ಞೆಯಿಂದ ಈ ಗ್ರಂಥವು ಅರಮನೆಯ ಶಿಲಾಯಂತ್ರದಲ್ಲಿ ಮುದ್ರಿತವಾಗಿರುವದನ್ನು ನೋಡಿದರೆ ಇದು ನಮ್ಮ ಮಹಾಪ್ರಭುಗಳ ಆದರಕ್ಕೆ ಎಷ್ಟರ ಮಟ್ಟಿಗೆ ಪಾತ್ರವಾಗಿತ್ತೆಂದು ಸ್ಪಷ್ಟವಾಗುತ್ತದೆ.

**ಅನುಭವಾಮೃತದ ಸಂಸ್ಕೃತಾನುವಾದ:**

ಹೀಗೆ ಇದು ತನ್ನ ಮೂಲರೂಪದಲ್ಲಿ ಹರಡಿಕೊಂಡಿರುವದಿಷ್ಟೇ ಅಲ್ಲ; ನಾವೆಲ್ಲರೂ ಬೆರಗಾಗುವಂತೆ ಅದರ ಪ್ರಚಾರವು ಸಂಸ್ಕೃತಭಾಷಾಂತರದ ರೂಪವಾಗಿಯೂ ಮುಂದೆ ಮುಂದೆ ಹೆಜ್ಜೆಯನ್ನಿಟ್ಟಿದೆ. ಸಾಮಾನ್ಯವಾಗಿ ಸಂಸ್ಕೃತದ ಗ್ರಂಥಗಳು ಕನ್ನಡಕ್ಕೆ ಪರಿವರ್ತನೆಯಾಗುವದು ಸಹಜವಷ್ಟೆ ಈ ಗ್ರಂಥವು ಕನ್ನಡದಿಂದ ಸಂಸ್ಕೃತದ ಸ್ವರೂಪವನ್ನು ಹೊಂದಿರುತ್ತದೆ. ನನ್ನ ಮಿತ್ರರಾದ ಚಾಮರಾಜನಗರದ ಅಸಿಸ್ಟೆಂಟ್ ಇನ್‌ಸ್ಪೆಕ್ಟರ್ ಶ್ರೀ ಎ.ಎನ್. ಸಂಜೀವಯ್ಯನವರು ಈ ವಿಷಯವನ್ನು ಕೆಲವು ಕಾಲದ ಹಿಂದೆಯೇ ನನ್ನ ಕಿವಿಯ ಮೇಲೆ ಹಾಕಿದ್ದರು. ಆಗ ನನ್ನ ಲಕ್ಷ್ಯವು ಅಷ್ಟು ವೇಗವಾಗಿ ಅತ್ತ ಕಡೆಗೆ

ಹರಿಯಲಿಲ್ಲ. ಇದರ ಪರಿಶೋಧನೆಗೆ ಕೈಹಾಕಿದ ಮೇಲೆ ಅದು ನನ್ನ ಮನಸ್ಸನ್ನು ಸೆಳೆಯಿತು. ಮೊದಲು ನನ್ನ ಮಿತ್ರರು ನೋಡಿದ್ದು ಚಳ್ಳಕೆರೆ ತಾಲ್ಲೂಕು ಜಾಜೂರಿನಲ್ಲಿದ್ದ ಪ್ರತಿ. ಈಚೆಗೆ ನಾನು ಅಲ್ಲಲ್ಲಿ ನನ್ನ ಮಿತ್ರರೊಡನೆ ಈ ಪ್ರಸ್ತಾಪವನ್ನು ತೆಗೆದಾಗ ಮೈಸೂರಿನಲ್ಲೊಂದಿತ್ತೆಂದೂ ಅದು ಈಗ ಅದೃಶ್ಯವಾಗಿರುವದೆಂದೂ ತಿಳಿದದ್ದಲ್ಲದೆ ಬೆಂಗಳೂರಿನಲ್ಲಿ ದಿವಾನರ ಆಫೀಸಿನಲ್ಲಿರುವ ಶ್ರೀಯುತ ಟಿ. ವೆಂಕಟಕೃಷ್ಣಯ್ಯನವರಲ್ಲಿ ಒಂದಿರುವದಾಗಿ ಗೊತ್ತಾಯಿತು. ಒಡನೆ ನಾನು ಹೋಗಿ ಅದನ್ನು ನೋಡಲಪೇಕ್ಷಿಸುತ್ತಲೆ ಅವರು ಅದನ್ನು ನನಗೆ ಓದುವದಕ್ಕೆ ಕೊಟ್ಟರು. ಆಮೂಲಾಗ್ರವಾಗಿ ಅದನ್ನು ನೋಡಿದ್ದಾಯಿತು. ಅದರ ಹೆಸರೂ ಅನುಭವಾಮೃತವೆಂದೇ ಇದೆ. ಅದರ ಕರ್ತರು ಶ್ರೀಮತ್ಪರಮಹಂಸ ಬಾಲಕೃಷ್ಣ ಬ್ರಹ್ಮಾನಂದ ರಾಜಯೋಗಿಗಳು. ಈ ಗ್ರಂಥವು ಸಂಪೂರ್ಣವಾಗಿ ನಮ್ಮ ಕನ್ನಡದ ಗ್ರಂಥದ ಪ್ರತಿಬಿಂಬವೇ. ಇದರಲ್ಲಿ ಪ್ರತಿಯೊಂದು ಶಬ್ದವೂ ಭಾಷಾಂತರವಾಗಿರದಿದ್ದರೂ ತಾತ್ಪರ್ಯವೆಲ್ಲಾ ಒಂದೇ. ಎಷ್ಟೋ ಕಡೆ ಶಬ್ದಗಳು ಕೂಡ ಇಲ್ಲಿಯವುಗಳೇ ಇವೆ. ಈ ಸಂಸ್ಕೃತಗ್ರಂಥವೇ ಮೊದಲಿನದಾಗಿರಬಹುದೆಂಬ ಸಂಶಯಕ್ಕೆ ಕಾರಣವೇ ಇಲ್ಲ. ಏಕೆಂದರೆ ನಮ್ಮ ಕನ್ನಡ ಗ್ರಂಥದ ೧೧ ಅ. ೨೭ಪ.ದ ಪೂರ್ವಾರ್ಧವು ಸಂಸ್ಕೃತ ಗ್ರಂಥದಲ್ಲಿ–

**ಇತ್ಯನುಭವಾಮೃತಾಭಿದ । ಸದ್ಗ್ರಂಥಮಿಮಂ ವಿಲಿಖ್ಯ ಹರ್ಷೇಣ ॥**
**ಮಹಲಿಂಗರಂಗನಾಮಾ । ಶ್ರೀ ಗಿರಿಶಾಯ ಚ ಸಮರ್ಪಯಾಮಾಸ ॥**

ಈ ರೀತಿಯಾಗಿ ಭಾಷಾಂತರವಾಗಿರುವದಲ್ಲದೆ ಕನ್ನಡದ್ದೇ ಮೊದಲೆಂಬುದಕ್ಕೆ ಮಹಲಿಂಗರಂಗನು ತನ್ನ ಕನ್ನಡ ಗ್ರಂಥವನ್ನು ಉಪೇಕ್ಷಿಸಬಾರದೆಂಬರ್ಥವನ್ನಿಟ್ಟು ಬರೆದಿರುವ ೧ ಅ. ೪ ಪ.ದ ಪೂರ್ವಾರ್ಧವು ಕೂಡ ಸಂಸ್ಕೃತದಲ್ಲಿ

**ಗ್ರಂಥೋಽಯಂ ಪ್ರಾಕೃತ ಇತಿ ನೋಪೇಕ್ಷ್ಯಸ್ತ್ವಾರ್ಯಕೋವಿದೈಃ ।**
**ವಸ್ತು ದರ್ಪಣಮೇವೇತಿ ಪಶ್ಯತಾಂ ಪಂಡಿತೋತ್ತಮೈಃ ॥**

ಎಂದಿರುವದರಿಂದ ಇದು ಮಹಲಿಂಗರಂಗನ ಕನ್ನಡ ಗ್ರಂಥದ ಅನುವಾದವೆಂದು ಸ್ಪಷ್ಟವಾಗುತ್ತದೆ. ಸಾರ್ಧಸಹಸ್ರ ಶ್ಲೋಕಗಳುಳ್ಳ ಈ ಸಂಸ್ಕೃತಗ್ರಂಥವು "ಮಾಲಾಸರ್ಪಶಕೇಽಸ್ಮಿನ್" ಎಂದು ಆ ಗ್ರಂಥದಲ್ಲಿರುವಂತೆ ಶಾ. ಶ. ೧೭೩೫ರಲ್ಲಿ ಎಂದರೆ ಶ್ರೀಮುಖ ಸಂವತ್ಸರದಲ್ಲಿ (೧೧೨ ವರ್ಷಗಳ ಹಿಂದೆ) ರಚಿತವಾದಂತೆ ಆ ಗ್ರಂಥದಿಂದಲೇ ತಿಳಿಯುತ್ತದೆ. ಕನ್ನಡದ ಅನುಭವಾಮೃತಕ್ಕೂ ಸಂಸ್ಕೃತದ ಅನುಭವಾಮೃತಕ್ಕೂ ಕೆಲವು ಹೆಚ್ಚು ಕಡಿಮೆಗಳು ಕಾಣುತ್ತವೆ. ಕನ್ನಡದಲ್ಲಿ ೧೧ ಅಧ್ಯಾಯಗಳಿವೆ. ಇವು ಸಂಸ್ಕೃತದಲ್ಲಿ ೧೩ ಆಗಿವೆ. ಕನ್ನಡದಲ್ಲಿರುವ ಸಪ್ತಭೂಮಿಕೆಗಳ ಅಭ್ಯಾಸವೆಂಬ ಮತ್ತು ಜೀವನ್ಮುಕ್ತಿನಿರೂಪಣವೆಂಬ ಎರಡು ಪ್ರಕರಣಗಳು ಸಂಸ್ಕೃತದಲ್ಲಿ

ನಾಲ್ಕು ಪ್ರಕರಣಗಳಾಗಿರುವುದೇ ಇದಕ್ಕೆ ಕಾರಣ. ಇನ್ನೇನೆಂದರೆ: ಸಂಸ್ಕೃತಗ್ರಂಥಕಾರನು ಅಲ್ಲಲ್ಲಿ ಸ್ವಕಲ್ಪನೆಗಳನ್ನೂ ಸೇರಿಸುತ್ತ ಬಂದಿರುವಂತೆ ತೋರುತ್ತದೆ. ಆತನು ಒಂದು ಪ್ರಕರಣದಲ್ಲಿ ಬನವಾಸಿ ಪಟ್ಟಣದ ಹೆಸರನ್ನು ತಂದು ಅಲ್ಲಿಯ ದೇವರ ಸ್ತೋತ್ರವನ್ನು ಮಾಡಿದ್ದಾನೆ. ಅದು ಕನ್ನಡದ ಪುಸ್ತಕಗಳಲ್ಲೆಲ್ಲಿಯೂ ಇಲ್ಲ. ಈ ವಿಷಯವೊಂದುಕಡೆ ಇರಲಿ, ನಮ್ಮ ಕನ್ನಡ ಅನುಭವಾಮೃತದ ಪ್ರವಾಹವು ಸಂಸ್ಕೃತದ ಸ್ವರೂಪವನ್ನು ಕೂಡ ಪಡೆದು ಅಲ್ಲಲ್ಲಿ ಇನ್ನೂ ಗುಪ್ತಗಾಮಿನಿಯಾಗಿಯೇ ಮುಂದುವರಿಯುತ್ತಿರುವದು ಒಂದು ಸಂತೋಷಕರವೂ ಆಶ್ಚರ್ಯಕರವೂ ಆದ ಸಂಗತಿ.

**ಕನ್ನಡ ಗ್ರಂಥಸಂಪಾದನೆ:**

ಇರಲಿ, ಮುದ್ರಣ ಸೌಕರ್ಯಗಳಿಲ್ಲದ ಕಾಲದಲ್ಲಿ ಹುಟ್ಟಿದ ಗ್ರಂಥಗಳಿಗೆಲ್ಲ ಕಂಡ ಕಂಡವರ ಕೈಗೆ ಸಿಕ್ಕಿ ನಲುಗುವ ದುರವಸ್ಥೆ ತಪ್ಪಿದ್ದಲ್ಲ. ಗ್ರಂಥಗಳ ಯಥಾಪ್ರತಿಯನ್ನು ಇಳಿಸಬೇಕಾದರೂ ಆ ಬರಹಗಾರನಲ್ಲಿ ಒಂದು ಬಗೆಯ ಯೋಗ್ಯತೆ ಇರಬೇಕಾಗುತ್ತದೆ. ಇಲ್ಲದಿದ್ದರೆ ಅವನು ಅರ್ಥದ ಕಡೆಗೆ ಲಕ್ಷ್ಯಕೊಡದೆ ಕೆಲವು ಮಾತುಗಳನ್ನು ಊಹೆಯಿಂದ ಇಳಿಸಿಬಿಡುತ್ತಾನೆ. ಉದಾಹರಣೆಗೆ ಈಗಿನ ಅನುಭವಾಮೃತಗಳಲ್ಲೆಲ್ಲ ೪. ಅ, ೨೯ ಪ. ದಲ್ಲಿ 'ಕಠಿಣ ದೌಷ್ಟ್ರಪರು' ಎಂದಿದೆ. ಇದರ ಅರ್ಥವಾಗದೆ ಬೆಪ್ಪಾಗಿ ಹಳೇ ಪ್ರತಿಗಳನ್ನು ನೋಡಿದ ಮೇಲೆ 'ಕಠಿನ ದ್ರವ ಉಷ್ಣ' ಎಂಬ ಅರ್ಥವತ್ತಾದ ಪ್ರಯೋಗವು ತಿಳಿಯಿತು. ಹೀಗೆ ಲೇಖಕರ ಪ್ರಮಾದದೋಷಗಳಿಂದ ಅನೇಕ ಅಶುದ್ಧಗಳು ಕಣ್ಣಿಗೆ ಬೀಳುತ್ತ ಬೀಳುತ್ತ ಅನುಭವವೆಂಬ ಅಮೃತದಲ್ಲಿ ಉಪ್ಪುಗೂಡಿದಂತೆ ಪರಿಣಮಿಸುವದಕ್ಕೆ ಪ್ರಾರಂಭವಾಗುತ್ತದೆ. ಇದಲ್ಲದೆ ಮನೆಯನ್ನು ಕಟ್ಟುವವರು ಒಮ್ಮೊಮ್ಮೆ ನಯಗಾರೆಯನ್ನು ಮಾಡದೆ ಉಪೇಕ್ಷಿಸುವಂತೆ ಈ ಕವಿಯು ತಾನು ಬರೆದ ಈ ಗ್ರಂಥದಲ್ಲಿ ಇನ್ನೊಮ್ಮೆ ಕೈ ಆಡಿಸದೆ ಹಾಗೆಯೆ ಬಿಟ್ಟಿರಬೇಕೆಂದು ತೋರುತ್ತದೆ. ವಿಷಯಗಳು ಚೆನ್ನಾಗಿ ತಿಳಿಯುವಂತೆ ಇರಬೇಕೆಂದು ಸುಲಭವಾದ ಭಾಷೆಯಲ್ಲಿ ಬರೆಯುವಾಗ ಮನಸ್ಸಿನಿಂದ ಹೊರಬೀಳುತ್ತಿದ್ದ ಪ್ರವಾಹವನ್ನು ಅವನು ಹಿಡಿತಡೆಯಿಲ್ಲದೆ ಹಾಗೆಯೇ ಹರಿಯಬಿಟ್ಟಿದ್ದರಿಂದ ಈ ಗ್ರಂಥದಲ್ಲಿ ದ್ವಿತ್ವಶೈಥಿಲ್ಯಗಳೂ ಸಮುಚ್ಚಯ ಪ್ರತ್ಯಯಗಳ ಅಭಾವವೂ, ಸಂಧಿಯನ್ನು ಮಾಡುವ ಕಡೆ ಬಿಟ್ಟಿರುವದೂ ಸಂಧಿಯನ್ನು ಮಾಡಬಾರದ ಕಡೆ ಮಾಡಿರುವದೂ ಅರಿಸಮಾಸಗಳೂ ಪ್ರಾಸಶೈಥಿಲ್ಯವೂ ಅಲ್ಲಲ್ಲಿ ಕಾಣಿಸಿಕೊಂಡಿರುವವು.

ಕೆಲವರು ಮುದ್ರಕರು ಇದಕ್ಕೆ ಬೇರೆಬೇರೆಯವರಿಂದ ತಾತ್ಪರ್ಯಗಳನ್ನು ಬರೆಸಿ ಮುದ್ರಿಸಿರುವರು. ಆದರೆ ಗ್ರಂಥಕಾರನಂತೆ ತಾತ್ಪರ್ಯಕಾರರು ಅದ್ವೈತಪ್ರಸಾರದ ದೀಕ್ಷೆಯನ್ನು ವಹಿಸಿದವರಾಗಿರದೆ ಕೇವಲ ಒಂದು ಪುಸ್ತಕವಾಯಿತೆನಿಸುವದಕ್ಕೆ ಬರೆದಂತೆ ಕಾಣುವದರಿಂದ ಅವರ ತಾತ್ಪರ್ಯದಲ್ಲಿ ಹುರುಳಿಲ್ಲವಿಷ್ಟೇ ಅಲ್ಲ; ಒಮ್ಮೊಮ್ಮೆ ಅಪಾರ್ಥಕ್ಕೂ

ಕಾರಣವಾಗಿರುವದು. ಉದಾಹರಣೆಗೆ ಅದ್ವೈತಪ್ರಧಾನವಾದ ಈ ಗ್ರಂಥದ ೭ ಅ-೧೭ ಪ. ದಲ್ಲಿ ಕವಿಯು ಈ ಗ್ರಂಥದ ವಿಷಯಸೂಚಿಕೆಯನ್ನು ಹೇಳುವಾಗ 'ಪರಮಾತ್ಮಪದವನ ಭೇದವಾದವನು' ಎಂದಿರಬೇಕು. ಅಭೇದವಾದವನ್ನು ಹೇಳುವದೆಂಬರ್ಥವು ಸೂಚನೆಯಾಗುವ ಸ್ಥಲದಲ್ಲಿ 'ಪರಮಾತ್ಮಪದವನು ಭೇದವಾದವನು' ಎಂದು ಅಶುದ್ಧಪಾಠವನ್ನೆ ಇಟ್ಟುಕೊಂಡು ಭೇದವಾದವನ್ನು ಹೇಳುತ್ತಾನೆಂದೇ ಅವರು ತಾತ್ಪರ್ಯವನ್ನು ತೆಗೆದಿದ್ದಾರೆ. ಎಷ್ಟು ಅನರ್ಥ! ಆದರೂ ಈ ತಾತ್ಪರ್ಯಕಾರರಿಗೆ ತಮ್ಮ ತಾತ್ಪರ್ಯದಲ್ಲಿ ಭೇದವಾದವನ್ನು ಬರೆಯುವದಕ್ಕಂತು ಸ್ಥಲವೇ ಸಿಕ್ಕಿಲ್ಲ. ಅವರು ಅಭೇದವಾದವನ್ನೂ ಬರೆದಿಲ್ಲ. ಅವರ ತಾತ್ಪರ್ಯವು ಯಾರಿಗೂ ಯಾವ ವಾದದ ಅರ್ಥವನ್ನೂ ಕೊಡುವದಿಲ್ಲ. ಹೀಗಿದ್ದರೂ ಈ ಗ್ರಂಥವು ಜೀವಿಸಿಕೊಂಡು ಬಂದಿರುವದಕ್ಕೆ ಈ ಕವಿಯ ಪ್ರಾಸಾದಿಕವಾಣಿಯೇ ಕಾರಣವು. ಈ ಕವಿಯು ೧೧ ಅ-೨೭ ಪ.ದಲ್ಲಿ ತನ್ನ ಗ್ರಂಥವು ಆಚಂದ್ರಾರ್ಕವಾಗಿರಲೆಂದಾಶೀರ್ವಾದವನ್ನು ಮಾಡಿರುವದರ ಬಲದಿಂದ ಮಾತ್ರ ಇದು ಬದುಕಿಕೊಂಡು ಬೆಳೆಯುತ್ತಿರುವದು.

**ಅನುಭವಾಮೃತದ ತಾಳೆಗರಿ ಮತ್ತು ಅಚ್ಚಿನ ಪ್ರತಿಗಳು:**

ಹೀಗಿರುವ ಈ ಗ್ರಂಥವನ್ನು ತಿದ್ದುವ ಸಂದರ್ಭದಲ್ಲಿ ಈ ಕೆಳಗೆ ಕಂಡ ಪುಸ್ತಕಗಳನ್ನು ನನ್ನ ಸಮಾಲೋಚನೆಗೆ ಉಪಯೋಗಮಾಡಿಕೊಂಡಿರುತ್ತೇನೆ:

೧. ಇದರ ಸಂಸ್ಕೃತಭಾಷಾಂತರದ ಕೈಬರಹದ ಪ್ರತಿ. ಶ್ರೀಯುತ ಟಿ. ವೆಂಕಟಕೃಷ್ಣಯ್ಯನವರದು.

೨. ಶಾ. ಶ. ೧೭೬೨ (ಕ್ರಿ. ೧೮೪೦ರಲ್ಲಿ) ಮೈಸೂರು ಅರಮನೆಯ ಶಿಲಾಯಂತ್ರದಲ್ಲಿ ಮುದ್ರಿತವಾದದ್ದಾಗಿ ಚಾಮರಾಜನಗರದಲ್ಲಿ ದೊರೆತ ಪ್ರತಿ.

೩. ಶಾ.ಶ. ೧೭೭೯ನೇ ಪ್ಲವಂಗಳದಲ್ಲಿ ಬರೆದ ವಾಲೇಗರಿಯ ಪ್ರತಿ (ಓರಿಯಂಟಲ್ ಲೈಬ್ರರಿಯದು)

೪. ಕ್ರಿ.ಶ. ೧೮೪೬ನೇ ಜುಲೈ ೨೫ರಲ್ಲಿ ಮಿ॥ ರೈಸ್ ಸಾಹೇಬರು ದಪ್ಪ ಕಾಗದದ ಮೇಲೆ ಬರೆಸಿಟ್ಟಿರುವ ಪ್ರತಿ (ಓರಿಯಂಟಲ್ ಲೈಬ್ರರಿಯದು).

೫. ತೆಲುಗಕ್ಷರದಂತೆ ಇರುವ ವಾಲೇಗರಿಯ ಪ್ರತಿ (ಓರಿಯಂಟಲ್ ಲೈಬ್ರರಿಯದು)

೬. ಶ್ರೀಯುತ ಅರಸೀಕೆರೆ ತಿಮ್ಮಪ್ಪದಾಸರಲ್ಲಿದ್ದ ವಾಲೇಗರಿಯ ಪ್ರತಿ.

೭. ದಪ್ಪಕಾಗದದ ಇನ್ನೊಂದು ಪ್ರತಿ (ಓರಿಯಂಟಲ್ ಲೈಬ್ರರಿಯದು)

೮. ಮೈಸೂರಿನಲ್ಲಿರುವ ಶ್ರೀಯುತ ವೇದಾಂತ ಸುಬ್ಬಯ್ಯನವರ ಕೈ ಬರಹದ ಪ್ರತಿ.

೯. ತೆಲುಗಿನ ಮಾದರಿಯ ಅಕ್ಷರದಲ್ಲಿ ಮೂಲವನ್ನು ಮಾತ್ರ ಉದ್ದಕ್ಕೆ ಮುದ್ರಿಸಿರುವದು. ಇದರ ಮುಖಪತ್ರವಿಲ್ಲದ್ದರಿಂದ ಮುದ್ರಿತಕಾಲ, ಮುದ್ರಾಲಯ ಮೊದಲಾದ ಸಂಗತಿಗಳೇನೂ ಗೊತ್ತಾಗುವದಿಲ್ಲ.

೧೦. ಕ್ರಿ. ೧೮೭೩ರಲ್ಲಿ ಬೆಂಗಳೂರು ವಿಚಾರದರ್ಪಣದಲ್ಲಿ ಮುದ್ರಿತವಾದ ಮೂಲ. ಶ್ರೀ ಹೊಳಕಲ್ಲ ಶ್ರೀನಿವಾಸಪಂಡಿತರು ಪರಿಶೋಧಿಸಿದ್ದು.

೧೧. ಕ್ರಿ.ಶ. ೧೮೭೪ರಲ್ಲಿ ಬೆಂಗಳೂರು ವಿಚಾರದರ್ಪಣದಲ್ಲಿ ಬೆಂಗಳೂರು ತಿರುಮಲೇ ಶ್ರೀ ಶ್ರೀನಿವಾಸಾಚಾರ್ಯರ ತಾತ್ಪರ್ಯನಿರ್ಣಯವೆಂಬ ಟೀಕಿನೊಡನೆ ಮುದ್ರಿತವಾದದ್ದು. ಈ ಗ್ರಂಥಕ್ಕೂ ತಮ್ಮಲ್ಲಿರುವ ಕೈಬರಹದ ಪ್ರತಿಗೂ ಹೆಚ್ಚುಕಡಿಮೆಗಳಿರುವವೆಂದು ರೆವರೆಂಡ್ ಎಫ್. ಕಿಟ್ಟೆಲ್, ಬಿ.ಜಿ.ಇ.ಎಂ. ಇವರು ೧೮೯೪ರಲ್ಲಿ ಮುದ್ರಿಸಿರುವ ತಮ್ಮ ನಿಘಂಟಿನಲ್ಲಿ ಸಂಜ್ಞಾರ್ಥವಿವರಣೆಯ ಪಟ್ಟಿಯಲ್ಲಿ ಬರೆದಿದ್ದಾರೆ. ಈಚೆಗೆ ಬೆಂಗಳೂರಿನಲ್ಲಿರುವ ಮೈಸೂರು ಬುಕ್‌ಡಿಪೊ ಪ್ರೆಸ್ಸಿನಲ್ಲಿ ಇದು ಕ್ರಿ.ಶ. ೧೯೦೧ರಲ್ಲಿ ನಾಲ್ಕನೆಯ ಸಲವೂ ಕ್ರಿ.ಶ. ೧೯೦೮ರಲ್ಲಿ ಐದನೇ ಸಲವೂ ಮುದ್ರಿತವಾಗಿರುವದು ಕಂಡುಬಂದಿದೆ. ರಕ್ಷಾಪತ್ರವಿಲ್ಲದ ಇದರದೊಂದು ಬೇರೆ ಮುದ್ರಣವೂ ಇರುವದು.

೧೨. ಕ್ರಿ.ಶ. ೧೮೯೦ರಲ್ಲಿ ಮದರಾಸಿನ ಶಾರದಾಮುದ್ರಾಕ್ಷರಶಾಲೆಯಲ್ಲಿ ಪದ್ಯಗಳನ್ನು ಬಿಡಿಸಿ ಬಿಡಿಸಿ ಮುದ್ರಿಸಿರುವ ಬರೀ ಮೂಲ.

೧೩. ಉದ್ದಕ್ಕೆ ಮುದ್ರಿಸಿರುವ ಬರೀ ಮೂಲ. ಮುಖಪತ್ರವಿಲ್ಲದ್ದರಿಂದ ಮುದ್ರಿತಕಾಲ, ಮುದ್ರಾಲಯ ಮೊದಲಾದದ್ದೇನೂ ತಿಳಿಯುವಂತಿಲ್ಲ.

೧೪. ಕ್ರಿ.ಶ. ೧೯೧೪ರಲ್ಲಿ ಶ್ರೀ ಮಿರ್ಲೆ ನಂಜುಂಡಯ್ಯನವರ ತಾತ್ಪರ್ಯದೊಡನೆ ಮೈಸೂರಿನಲ್ಲಿರುವ ಶ್ರೀಮತ್ಕನ್ಯಕಾಪರಮೇಶ್ವರೀ ಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾದ ಪ್ರಥಮಮುದ್ರಣ.

೧೫. ಕ್ರಿ.ಶ. ೧೯೨೨ರಲ್ಲಿ ಶ್ರೀ ಕುಮಾಂಡೂರು ರಾಮಸ್ವಾಮಯ್ಯಂಗಾರ್ಯರ ತಾತ್ಪರ್ಯದೊಡನೆ ಬೆಂಗಳೂರಿನಲ್ಲಿರುವ ಶ್ರೀ ವೆಂಕಟೇಶಮುದ್ರಣಾಲಯದಲ್ಲಿ ಮುದ್ರಿತವಾದ ಪ್ರಥಮಮುದ್ರಣ.

ಇವುಗಳೆಲ್ಲೆಲ್ಲ (೮) ಶ್ರೀಯುತ ವೇದಾಂತ ಸುಬ್ಬಯ್ಯನವರ ಕೈಬರಹದ ಪುಸ್ತಕದಲ್ಲಿಯೇ ನನಗೆ ಸಮಂಜಸವಾದ ಪ್ರಯೋಗಗಳು ಹೆಚ್ಚಾಗಿ ದೊರೆತವೆಂದು ತಿಳಿಸಲು ಸಂತೋಷವಾಗುತ್ತದೆ. ಅವರು ಹಿಂದೆ ಈ ಗ್ರಂಥವನ್ನು ಪುರಾಣರೂಪವಾಗಿ ಮುಮುಕ್ಷುಗಳಿಗೆ ಶ್ರವಣಮಾಡಿಸುತ್ತಿದ್ದಾಗ ತಮಗೆ ದೊರೆತ ಒಂದಾನೊಂದು ಪುರಾತನಪ್ರತಿಯಿಂದ ಸ್ವಂತವಾಗಿ ಬರೆದುಕೊಂಡದ್ದಾದ ಈ ಪ್ರತಿಯು ಚೆನ್ನಾಗಿ

ನೋಡಿದಾಗ ಬಹುವಿಷಯದಲ್ಲಿ ಮೂಲದ ಸಮೀಪಸಂಬಂಧಿಯೆಂದು ನನ್ನ ಮನಸ್ಸಿಗೆ ಹೊಳೆಯಿತು. ಆದ್ದರಿಂದ ನಾನು ಈ ಗ್ರಂಥಪರಿಷ್ಕರಣದಲ್ಲಿ ಕೃತಜ್ಞತಾಪೂರ್ವಕವಾಗಿ ಇದರ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಂಡಿದ್ದೇನೆ.

**ಗ್ರಂಥದ ಪರಿಷ್ಕರಣ ವಿಧಾನ:**

ಕವಿಯು ಗ್ರಂಥವನ್ನು ಬರೆಯುವಾಗಲೇ ಪ್ರವಾಹದ ಭರದಲ್ಲಿ ಅಲ್ಲಲ್ಲಿ ದೋಷಗಳು ಧುಮ್ಮಿಕ್ಕಿರುವವೆಂದು ಹೇಳಿರುವೆನಷ್ಟೆ. ಈಗ ನಾನು ಅವುಗಳನ್ನೆಲ್ಲ ವ್ಯಾಕರಣಕ್ಕೆ ತಕ್ಕಂತೆ ತಿದ್ದುವ ಗೋಜಿಗೆ ಹೋಗಿಲ್ಲ. ಕವಿಯ ಉಳಿದ ಶಬ್ದವಿನ್ಯಾಸಗಳಿಗೆ ಉಪಹತಿಯೊದಗದಂತೆ ಶಕ್ಯವಾಗಿ ಕಂಡ ಸ್ಥಳಗಳಲ್ಲಿ ಮಾತ್ರ ಅವುಗಳನ್ನು ತಿದ್ದಿ ಉಳಿದವುಗಳನ್ನು ಹಾಗೆಯೇ ಕೈಬಿಟ್ಟಿದ್ದೇನೆ. ಗ್ರಂಥವಿಸ್ತರಭೀತಿಯಿಂದ ಆ ತಿದ್ದುಪಾಡುಗಳನ್ನೆಲ್ಲ ಟೀಕಿನಲ್ಲಿ ತೋರಿಸಿಲ್ಲ. ಮೂಲದಲ್ಲಿ ಶುದ್ಧಪಾಠವನ್ನು ಊರ್ಜಿತಗೊಳಿಸುವದಕ್ಕಾಗಿ ಇಲ್ಲಿ ನಾನು ಮುಖ್ಯವಾಗಿ ಮಾಡಿರುವದೇನೆಂದರೆ:

೧. ಕವಿಯ ಆಶಯಕ್ಕೆ ಬಾಧಕವಾದ ಅಥವಾ ಸಾಧಕವಲ್ಲದ ಅರ್ಥಪ್ರತೀತಿಯು ಕಂಡುಬಂದ ಕಡೆಗಳಲ್ಲಿ ಆ ದೋಷವು ಹೋಗುವಂತೆ ಪೂರ್ವಾಪರಸಂದರ್ಭಕ್ಕನುಗುಣವಾಗಿ ಹೊಸ ಶಬ್ದಗಳಿಂದ ಅರ್ಥವನ್ನು ಹೊಂದಿಸಿ ಆ ತಿದ್ದುಪಾಡಿನಿಂದ ವಿಚಾರಕ್ಕೆ ಬಣ್ಣವನ್ನು ಕೊಟ್ಟಿರುತ್ತೇನೆ. ಹಾಗೆ ತಿದ್ದಿದ ಮಾತುಗಳನ್ನು ಆ ಸ್ಥಲದಲ್ಲಿದ್ದ ಪೂರ್ವಪ್ರಯೋಗಗಳೊಂದಿಗೆ ಟೀಕಿನಲ್ಲಿ ತೋರಿಸಿ ಆ ತಿದ್ದುಪಾಡಿನ ಗುಣವು ತಾನಾಗಿ ಎದ್ದುಕಾಣುವ ಕಡೆಗಳನ್ನು ಬಿಟ್ಟು ಉಳಿದ ಕಡೆ ಅದಕ್ಕೆ ಕಾರಣವನ್ನು ಕೂಡ ಕೊಟ್ಟಿರುತ್ತೇನೆ.

೨. ಬೇರೆಬೇರೆ ಪ್ರತಿಗಳಲ್ಲಿ ಬೇರೆಬೇರೆ ಪಾಠಾಂತರಗಳು ಕಂಡುಬಂದಾಗ ಹೆಚ್ಚು ಸಮಂಜಸವಾಗಿತೋರಿದ್ದನ್ನು ಮೂಲದಲ್ಲಿಟ್ಟು ಇನ್ನೊಂದನ್ನು ಕೆಳಗೆ ತೋರಿಸಿದ್ದೇನೆ.

೩. ಅರ್ಥವಾಗುವ ಹಾಗೆ ಓದುವದಕ್ಕೆ ಸಹಾಯವಾಗಲೆಂದು ಆಯಾ ಸ್ಥಲಕ್ಕೆ ತಕ್ಕಂತೆ ವಿರಾಮಚಿಹ್ನೆ ಮೊದಲಾದವುಗಳನ್ನು ಹಾಕಿದ್ದೇನೆ.

ಗ್ರಂಥದ ಒಟ್ಟು ಪದ್ಯದ ಸಂಖ್ಯೆಯ ವಿಷಯದಲ್ಲಿಯೂ ಇಲ್ಲಿ ಒಂದು ಮಾತನ್ನು ಹೇಳಿಬಿಡಬೇಕಾಗಿದೆ. ಶ್ರೀ ಮಿರ್ಲೆ ನಂಜುಂಡಯ್ಯನವರು ತಮಗೆ ಸಿಕ್ಕಿದ ಕೈಬರವಣಿಗೆಯ ಪುಸ್ತಕದಿಂದ ೪. ಅ., ೪೯ ಪ.ವು ಹೊಸದಾಗಿ ಕಂಡುಹಿಡಿದಿದ್ದದ್ದೆಂದು ಹೇಳುತ್ತಾರೆ. ಪರಿಶೀಲಿಸಿ ನೋಡಿದ್ದರಲ್ಲಿ ಅದೇ ಪದ್ಯವೇ ಅದೇ ಅಧ್ಯಾಯದ ೫೫ ನೆಯದಾಗಿಯೂ ಇತ್ತು. ಅದೇ ೫೫ನೆಯದಾಗುವದೇ ಪೂರ್ವಾಪರಸಂಬಂಧಕ್ಕೆ ಹೊಂದುವದರಿಂದಲೂ ಇದರ ಸಂಸ್ಕೃತಭಾಷಾತರಕಾರರೂ ಈ ಪದ್ಯಾರ್ಥವನ್ನು ಅಲ್ಲಿಯೇ ಇಟ್ಟಿರುವದರಿಂದಲೂ ನಾನು ಅದನ್ನು ೫೫ನೆಯದಾಗಿ ಮಾತ್ರ ಇಟ್ಟಿದ್ದೇನೆ. ಇನ್ನು ಕೆಲವು ಪ್ರತಿಗಳಲ್ಲಿ ಒಟ್ಟು

ಸಂಖ್ಯೆಯು ೮೦೨, ೮೦೮, ೮೧೦ ಹೀಗೆಲ್ಲ ಇದ್ದರೂ ಈ ವ್ಯತ್ಯಾಸಗಳಿಗೆಲ್ಲ ಎಣಿಕೆಯ ಪ್ರಮಾದವೊಂದೇ ಕಾರಣವಾಗಿ ಕಂಡುಬಂದಿರುವದು. ಒಂದೆರಡು ಪ್ರತಿಗಳ ಕೊನೆಯಲ್ಲಿ ಇಲ್ಲಿಲ್ಲದ ಮೂರು ಪದ್ಯಗಳಿದ್ದವು. ಇವುಗಳು ಗ್ರಂಥಕಾರನ ಸ್ತುತಿಯಾಗಿ ಈಚೆಗೆ ಯಾರೋ ಸೇರಿಸಿರುವಂತೆ ಕಂಡದ್ದರಿಂದ ನಾನು ಇವುಗಳನ್ನು ಗ್ರಂಥದಲ್ಲಿ ಸೇರಿಸದೆ ಪರಿಶಿಷ್ಟದ ಕೊನೆಯಲ್ಲಿ ಕೊಟ್ಟಿರುತ್ತೇನೆ.

**ಸರ್ವಾರ್ಥಸಂದರ್ಶಿನೀ ಟೀಕೆಯ ವೈಶಿಷ್ಟ್ಯಗಳು:**

ಇದಿಷ್ಟೂ ಇದ್ದದ್ದನ್ನು ತಿದ್ದಿದ ವಿಚಾರವಾಯಿತು. ಇನ್ನು ನಾನು ಇಲ್ಲಿ ಹೊಸದಾಗಿ ಮಾಡಿರುವ ಕೆಲಸವನ್ನು ಹೇಳಬೇಕಾಗಿದೆ. ಸರ್ವಾರ್ಥಸಂದರ್ಶಿನಿ ಎಂಬ ಟೀಕೆಯೇ ನನ್ನ ಹೊಸ ಕೆಲಸ. ಆದಷ್ಟು ಮಟ್ಟಿಗೆ ಕವಿಯ ಮಾತುಗಳನ್ನು ಜೀರ್ಣಿಸಿಕೊಳ್ಳುವದಕ್ಕೆ ಸಹಾಯಸಂಪತ್ತನ್ನು ಮಾತ್ರ ಕಲ್ಪಿಸಿಕೊಟ್ಟು ಕವಿಯ ಪ್ರಾಸಾದಿಕವಾಣಿಯ ಸವಿಗೆ ವಾಚಕರು ಬಾಯಿನೀರು ಸುರಿಸುವಂತೆ ಮಾಡುವದೇ ಟೀಕಾಕಾರನ ಮುಖ್ಯ ಕರ್ತವ್ಯವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ನನ್ನ ಟೀಕೆಯು ಪ್ರವರ್ತಿಸಿರುತ್ತದೆ. ಈ ಗ್ರಂಥವು ಮುಮುಕ್ಷುಗಳಿಗೆ ಮಾತ್ರ ಉಪಯೋಗವೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದಿರುವ ಈ ಟೀಕೆಯ ವಿಚಕ್ಷಣೆಯೇನೆಂದರೆ:

೧. ಬೇರೆಬೇರೆ ರೀತಿಯಾಗಿ ಸಂಧಿಗಳನ್ನು ಬಿಡಿಸಬಹುದಾದ ಸ್ಥಲಗಳಲ್ಲಿ ಆಯಾ ಸ್ಥಲದ ಅರ್ಥಕ್ಕೆ ಅನುಕೂಲಿಸುವ ಹಾಗೆ ಅಲ್ಲಲ್ಲಿ ಸಂಧಿಗಳನ್ನು ಬಿಡಿಸಿಟ್ಟಿದ್ದೇನೆ.

೨. ಅನ್ವಯವು ಬೇಗ ಹೊಂದಿಕೆಯಾಗಿ ತೋರಲಾರದ ಕಡೆಗಳಲ್ಲಿ ಅನ್ವಯವನ್ನು ಮಾಡಿ ತೋರಿಸಿದ್ದೇನೆ.

೩. ಮೂಲದಲ್ಲಿರುವ ಕಠಿನಶಬ್ದಗಳಿಗೆ ಆ ಸಂದರ್ಭಕ್ಕೊಪ್ಪುವ ಅರ್ಥವನ್ನು ಬರೆದಿದ್ದೇನೆ. ಬೇರೊಂದರ್ಥವೂ ಆಗುವ ಕಡೆಗಳಲ್ಲಿ ಅಪ್ರಕೃತವಾದ ಅರ್ಥಕ್ಕೆ ಹೋಗದಂತೆ ಸಕಾರಣವಾಗಿ ಎಚ್ಚರಿಕೆಯನ್ನು ಕೊಟ್ಟಿದ್ದೇನೆ.

೪. ತಾತ್ಪರ್ಯಗಳು ಗಹನವಾಗಿ ಕಂಡ ಕಡೆಯಲ್ಲಿ ಅದನ್ನು ವಿವರಿಸಿದ್ದೇನೆ.

೫. ನನ್ನ ಅರ್ಥವಿವರಣೆಯ ಮೇಲೆ ವಾಚಕರಿಗೆ ಸಂಶಯವು ತೋರಬಹುದಾದ ಕಡೆಗಳಲ್ಲಿ ನನ್ನ ವಿವರಣೆಯು ಗ್ರಂಥಕರ್ತನಿಗೆ ಸಮ್ಮತವೆಂಬುದಕ್ಕೆ ಬೇರೆ ಸ್ಥಲದಲ್ಲಿರುವ ಅವನ ಮಾತುಗಳನ್ನೇ ಅಲ್ಲಲ್ಲಿ ಎತ್ತಿ ಬರೆದಿದ್ದೇನೆ.

೬. ಕವಿಯು ೧ ಅ., ೯ ಪ.ದಲ್ಲಿ 'ಅಖಿಲವೇದಾಂತಾರ್ಥವನು ನಾ ಯುಕುತಿಯಲಿ ಸಂಗ್ರಹಿಸಿ ಪೇಳುವೆ' ಎಂದಿರುವ ಮಾತು ಸಾರ್ಥಕವಾಗುವಂತೆ ಕವಿಯ ಆಶಯಗಳಿಗೆ ಸಮಾನಾರ್ಥಕಗಳಾದ ಶ್ರುತಿಸ್ಮೃತಿಪುರಾಣೇತಿಹಾಸಾದಿಗಳ ವಾಕ್ಯಗಳನ್ನು ಅಲ್ಲಲ್ಲಿ ಕೊಟ್ಟು

ಆ ಮೂಲಗ್ರಂಥಗಳ ಹೆಸರುಗಳನ್ನು ತೋರಿಸಿ ಕವಿಯ ವಿದ್ವತ್ತು ಎಷ್ಟು ವಿಸ್ತೃತವಾಗಿತ್ತೆಂಬ ಕಲ್ಪನೆಯನ್ನು ತಂದುಕೊಟ್ಟಿದ್ದೇನೆ.

೭. ಗ್ರಂಥಕಾರನು ಉದಾಹರಿಸಿರುವ ಕಥೆಗಳನ್ನೆಲ್ಲ ಪರಿಶಿಷ್ಟದಲ್ಲಿ ವಿವರಿಸಿದ್ದೇನೆ.

೮. ಗ್ರಂಥಕಾರನು ಉದಾಹರಿಸಿರುವ ಉಪನಿಷದ್ವಾಕ್ಯಗಳನ್ನೆಲ್ಲ ಪರಿಶಿಷ್ಟದಲ್ಲಿ ಒಂದೇ ಕಡೆ ಕೊಟ್ಟು ಅದರ ಸ್ಥಾನನಿರ್ದೇಶವನ್ನು ಮಾಡಿದ್ದೇನೆ.

೯. ಗ್ರಂಥಕಾರನು ಉಪಯೋಗಿಸಿರುವ ಸಂಖ್ಯಾವಿಶಿಷ್ಟವಾಚಕಗಳನ್ನೆಲ್ಲ ವಿವರಿಸಿ ಅವುಗಳ ಬೇರೆಬೇರೆ ಪ್ರಕಾರಾಂತರಗಳನ್ನೂ ತೋರಿಸಿದ್ದೇನೆ.

೧೦. ಈ ಗ್ರಂಥಕಾರನ ಯಾವದಾದರೊಂದಭಿಪ್ರಾಯದ ವಿಷಯದಲ್ಲಿ ವೇದಾಂತಿಗಳಲ್ಲಿ ಮತಭೇದಗಳೇನಾದರೂ ಇದ್ದರೆ ಅವುಗಳನ್ನೂ ಸೂಚಿಸಿ ಎಲ್ಲವನ್ನೂ ವಿಚಾರವೆಂಬ ತಕ್ಕಡಿಯಲ್ಲಿಟ್ಟು ತೂಕಮಾಡಿರುತ್ತೇನೆ.

೧೧. ಗ್ರಂಥಕಾರನು ಒಂದು ವಿಷಯವನ್ನು ಸ್ಥೂಲದೃಷ್ಟಿಯಿಂದ ಪ್ರತಿಪಾದನೆ ಮಾಡುವಾಗ ಅದಕ್ಕೆ ಅಲ್ಲಿ ತಕ್ಕಷ್ಟೇ ಬೆಲೆಯನ್ನು ಕೊಡಬೇಕೆಂಬ ಎಚ್ಚರಿಕೆಯನ್ನು ಕೊಟ್ಟು ಅಲ್ಲಲ್ಲಿಯೇ ವಿಚಾರದೃಷ್ಟಿಯ ಪರೆಯನ್ನು ತೆಗೆದಿರುತ್ತೇನೆ.

೧೨. ಶರೀರಗಳನ್ನು ಮೂರೆಂದು ಹೇಳುವಾಗ ಮೂರನೆಯದನ್ನು ೩-೬೮ ಮೊದಲಾದ ಕಡೆ ಪರತನುವೆಂದೂ ೭-೨೨ ಮೊದಲಾದ ಕಡೆ ಅವಿದ್ಯೆಯೆಂದೂ ಹೇಳಿರುವದನ್ನು ಯುಕ್ತಿಗೂ ಸಂಪ್ರದಾಯಕ್ಕೂ ಹೊಂದಿಸಿ ತೋರಿಸಿದ್ದೇನೆ.

**ಗ್ರಂಥದ ಸಾರಸಂಗ್ರಹ ವಿಚಾರ:**

ಭಗವಾನ್ ವ್ಯಾಸರು ತಮ್ಮ ಮಕ್ಕಳಾದ ಶುಕರಿಗೆ ಉಪದೇಶ ಮಾಡಿದಂತೆ ರಚಿಸಿರುವ ಈ ಗ್ರಂಥದಲ್ಲಿ ಕವಿಯು ಶುಕರಿಂದ ೧ ಅ., ೧೩ ಪ.ದಲ್ಲಿ "ಬ್ರಹ್ಮವೆಂದೊಡದೆಂತಿಹುದು? ತಿಳಿವ ಚಂದವಾವುದು? ತಿಳಿಯೆ ಫಲವೇನು?" ಎಂದೂ ೩ ಅ., ೧೯ ಪ.ದಲ್ಲಿ "ಜೀವಪರಮರ ಪರಿಯದೆಂತೈ? ವಾಚ್ಯಲಕ್ಷ್ಯದ ತೆರನದಾವುದು? ಲಕ್ಷಣೆಯಲದಕೈಕ್ಯ ವೆಂತಹುದು? ಎರಡು ತನುವೆಂತಾಯಿತೊಬ್ಬಗೆ? ದೊರಕಿತೆಂತದ್ವೈತನಿಜಸುಖ? ಎಂದೂ ೩ ಅ., ೧೦೦ ಪ.ದಲ್ಲಿ 'ನಾನು ನಾನೆಂಬುದದ ನಾನರಿವಪರಿಯೆಂತು? ಸ್ವಾನುಭವವೆನಗಪ್ಪುದೆಂತು? ಎಂದೂ ಇಲ್ಲಿ ೨ ಅ-೧೧೫ ಪ. ದಲ್ಲಿ "ಕುರುಹನಿಟ್ಟದನರಿವ ಪರಿಯೆಂತು?" ೪ ಅ., ೫ ಪ.ದಲ್ಲಿ 'ಮಾಯೆಯ ಚಂದವಾವುದು? ಜೀವಜಗವಾರಿಂದ ಲಾದುದದಾದ ಪರಿಯೆಂತು?' ಎಂದೂ ೪ ಅ., ೩೩ ಪ.ದಲ್ಲಿ "ಸಂಸ್ಕೃತಿಶರಧಿಯನು ನಾವೆಂತು ಕಳೆವೆವು?" ಎಂದೂ ೫ ಅ., ೨೮ ಪ.ದಲ್ಲಿ ಅಸಿಪದದಂದ ವಾವುದು? ಅಖಂಡವಸ್ತುವದೆಂದೊಡೆಂತಿಹುದು? ಐಕ್ಯವೆಂತಹುದುಭಯಪದಗಳಿಗೆ? ಸಂದ

ಲಕ್ಷಣೆಯಾವುದು? ಎಂದೂ ೫ ಅ., ೪೭ ಪ.ದಲ್ಲಿ "ಸಹಜಾನಂದವೆಂತ್ತೈ ಭ್ರಮಿಸಿತೀ ಮಾಯಾಪ್ರಬಂಧಕೆ? ಜೀವತ್ವದಾರೋಪಣವದೆಂತಾಯ್ತು? ಸಂಸಾರದಳಿವಾರಿಂದಲಾದದು? ಚಿನ್ಮಾತ್ರ ಮರಳಿ ಸಿದ್ಧಿಸುವದೆಂತು ಎಂದೂ ೭ ಅ., ೪ ಪ.ದಲ್ಲಿ ಪರಮಾತ್ಮ ಪದವನು ತಿಳುಹಬೇಕು" ಎಂದೂ ೮ ಅ., ೪ ಪ.ದಲ್ಲಿ ತೇಜೋರಾಶಿಯದರೊಳು ಪಸರಿಸಿರು ತಿಹುದೆಂತು? ಎಂದೂ ೯ ಅ., ೪ ಪ.ದಲ್ಲಿ ಎಂತು ಹಮ್ಮಿನ ರೂಪು? ಜೀವರದೆಂತು ದೇಹದೊಳಿರ್ಪರವರಿಗದೆಂತು ಬಂದುದು ಜೀವತನದಾರೋಪವದು ಬರಿದೆ? ಎಂತು ಜೀವನ್ಮುಕ್ತಿಯಾಗುವದೆಂತು ಜಗದೇತಕತ್ವ ಮೋಕ್ಷವದೆಂತು? ಎಂದೂ ೧೦ ಅ., ೪ ಪ.ದಲ್ಲಿ ಚಿನ್ಮಯನಾದೆನೆನಗೇಕನಘ ಸಹಜಾನಂದ ತೋರದು?" ಎಂದೂ ೧೦ ಅ., ೪೧ ಪ.ದಲ್ಲಿ "ವಿಷಮವಹ ಸಂಸಾರವಾರಿಗೆ?" ಎಂದೂ ೧೦ ಅ., ೫೮ ಪ.ದಲ್ಲಿ ನಾಮಗಳ ಕಲ್ಪನೆ ನಾಮವಿರಹಿತಗಾದುದೆಂತ್ತೈ?" ಎಂದೂ ೧೧ ಅ., ೫ ಪ.ದಲ್ಲಿ "ಅತೀಂದ್ರಿಯವಸ್ತುವಿಗೆ ಪೂಜಾವಿಧಾನ ಪ್ರಶಸ್ತವಲ್ಲೆಂದ" ಎಂದೂ ಪ್ರಶ್ನೆಗಳನ್ನು ಹಾಕಿಸಿ ವ್ಯಾಸರಿಂದ ಬಂದ ಉತ್ತರದ ರೂಪವಾಗಿ ಕವಿಯು ಗ್ರಂಥವನ್ನು ರಚಿಸಿದ್ದಾನೆ. ಮೇಲಿನ ಪ್ರಶ್ನೆಗಳಿಂದಲೇ ಈ ಗ್ರಂಥದಲ್ಲಿರುವ ವಿಚಾರಗಳು ಸಂಗ್ರಹವಾಗಿ ತಿಳಿಯಬಹುದಾದರೂ ವ್ಯಾಸರ ಉತ್ತರವೇನೆಂಬುದನ್ನು ಸಂಕ್ಷೇಪವಾಗಿ ತಿಳಿಯಲಿಚ್ಛಿಸುವವರಿಗೆ ಅನುಕೂಲವಾಗಿ "ನವನೀತ"ವೆಂಬ ಹೆಸರಿನಿಂದ ಈ ಗ್ರಂಥದ ಸಾರವನ್ನು ಬರೆದು ಈ ಮುನ್ನುಡಿಯ ಮುಂದೆ ಜೋಡಿಸಿದ್ದೇನೆ, ಒಮ್ಮೆ ಅದನ್ನು ಮನನಮಾಡಿಕೊಂಡು ಆಮೇಲೆ ಗ್ರಂಥವನ್ನು ಓದಿದರೆ ಅವರಿಗೆ ಗ್ರಂಥಾರ್ಥವು ಹೆಚ್ಚು ಪರಿಷ್ಕಾರವಾಗಿ ತಿಳಿಯುವದೆಂದು ಭಾವಿಸಿದ್ದೇನೆ.

**ಗ್ರಂಥದ ವಿಶೇಷ ಲಕ್ಷಣಗಳು:**

ಈ ಟೀಕನ್ನು ನಾನು ಬರೆಯುತ್ತ ಹೋದ ಹಾಗೆಲ್ಲ ನನ್ನ ಲಕ್ಷ್ಯವನ್ನು ವಿಶೇಷವಾಗಿ ಆಕರ್ಷಣೆ ಮಾಡಿದಂಥ ಈ ಗ್ರಂಥದ ವಿಶೇಷ ಲಕ್ಷಣಗಳನ್ನು ಇಲ್ಲಿ ನಾನು ಸಂಕ್ಷೇಪದಿಂದ ಉಲ್ಲೇಖಿಸದಿರಲಾರೆನು.

**ಮೊದಲನೆಯದೇನೆಂದರೆ: ಅನುಭವಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿರುವದು. ಅನುಭವವೆಂಬುದು ಅದ್ವೈತದ ವಿಶೇಷಲಕ್ಷಣ.** ದ್ವೈತದ ಫಲಸಿದ್ಧಿಯು ಈ ಲೋಕದಲ್ಲಿ ಅನುಭವಕ್ಕೆ ಬರತಕ್ಕದ್ದಲ್ಲ. ಅದರಲ್ಲಿ ಪರಮಾತ್ಮನು ಪರೋಕ್ಷದಲ್ಲಿಯೇ ಇರುವದರಿಂದ ಅನುಭವಕ್ಕೆ ಪ್ರಾಶಸ್ತ್ಯವಿಲ್ಲ. ಅದ್ವೈತದಲ್ಲಿ ತಾನೇ ಆತ್ಮನಾದುದರಿಂದ ತನ್ನ ಅನುಭವವನ್ನು ತನಗೆ ತೋರಿಸಿದ ಹೊರತು ಅದ್ವೈತದ ಸಾಕ್ಷಾತ್ಕಾರವಾಗುವದೇ ಇಲ್ಲ. ಅದ್ವೈತಿಯು ಶ್ರುತಿಯನ್ನೂ ಯುಕ್ತಿಯನ್ನೂ ದ್ವೈತಿಯಂತೆಯೇ ಗೌರವಿಸುತ್ತಾನೆ. ಹಾಗೆ ಗೌರವಿಸುವದಕ್ಕೆ ಆ ಶ್ರುತಿಯು ಯುಕ್ತಿಯೂ ಅನುಭವಕ್ಕೆ ಹೊಂದಿರುವದೇ ಕಾರಣ. ಅದ್ವೈತ ಶಾಸ್ತ್ರೋಜ್ಜೀವಕರಾದ ಶ್ರೀ ಶಂಕರಭಗವತ್ಪಾದರು "ಅಗ್ನಿಯು ಶೀತವೆಂದಾಗಲಿ

ಬೆಳಕಿಲ್ಲದ್ದೆಂದಾಗಲಿ ನೂರು ಶ್ರುತಿಗಳು ಹೇಳಿದರೂ ಪ್ರಮಾಣವಾಗಲಾರ" ದೆಂದು ಬರೆದಿದ್ದಾರೆ. ಅನುಭವದ ಮುಂದೆ ಯಾವ ಪ್ರಮಾಣಕ್ಕೂ ಬೆಲೆ ಇಲ್ಲ. ಆ ಅನುಭವದ ಪ್ರಮಾಣವನ್ನು ಈ ಗ್ರಂಥಕರ್ತನು ಬಹಳ ಕಡೆ ಎತ್ತಿ ಹಿಡಿದಿದ್ದಾನೆ. ನೋಡಿರಿ. ೩ ಅ., ೧೫ ಪ.ದಲ್ಲಿ ಅನುಭವದ ಮಾತಿಗೆ ತನ್ನೊಳಗೆ ಜನಿಸದೆ ಬಾಯಲರಿವಿಲ್ಲ. ೩ ಅ., ೧೫ ಪ.ದಲ್ಲಿ "ಸ್ವಾನುಭವ ಗುರುವಾಕ್ಯಶಾಸ್ತ್ರಜ್ಞಾನವೊಂದೇ ಪರಿಯಲಿ" ೩ ಅ., ೮೩ ಪ.ದಲ್ಲಿ ಭ್ರಾಂತಿಯುಳಿದನುಭವದಲದು ನೀನೆಂದು ನಿಶ್ಚಯಿಸು, ೪ ಅ., ೪೪ ಪ.ದಲ್ಲಿ "ಅನುಭವಕೆ ಸರಿಯಾಗಿ ತನ್ನೀ ಮನಕೊಡಂಬಡುವಂತೆ." ೬ ಅ., ೪೭ ಪ.ದಲ್ಲಿ "ಮತಭೇದವನ್ನು ಖಂಡಿಸಿ ಪ್ರಬಲಶ್ರುತಿಯುಕ್ತ್ಯನುಭವಗಳಿಂದ", ೬ ಅ., ೫೦ ಪ.ದಲ್ಲಿ 'ತನ್ನನುಭವವು ದೃಢವಾಗಿ ನಿಲುವಂದದಲಿ.' ಇದರಿಂದಲೇ ಈ ಗ್ರಂಥಕ್ಕೆ ಅನುಭವಾಮೃತವೆಂಬ ಹೆಸರು ಚೆನ್ನಾಗಿ ಒಪ್ಪುವದು. ಅದ್ವೈತವನ್ನು ಬರೆದ ಇನ್ನೂ ಕೆಲವರು ತಮ್ಮ ಗ್ರಂಥಗಳಿಗೆ ಅನುಭವಪ್ರಧಾನವಾದ ಹೆಸರನ್ನೇ ಇಟ್ಟಿರುವದುಂಟು. ಉದಾಹರಣೆಗೆ ಶ್ರೀಮನ್ನಿಜಗುಣಶಿವಯೋಗಿಗಳ ಅನುಭವಬೋಧೆ, ಅನುಭವಸಾರ, ಅನುಭವಗೀತೆ, ಪರಮಾತ್ಮಾನುಭವಬೋಧೆ, ಶ್ರೀಕೃಷ್ಣಪ್ರಭುವಿನ ಅನುಭವರಸಾಯನ, ಶ್ರೀವಿದ್ಯಾರಣ್ಯಸ್ವಾಮಿಗಳ ಅನುಭೂತಿಪ್ರಕಾಶ, ಶ್ರೀಶಂಕರಭಗವತ್ಪಾದರ ಅಪರೋಕ್ಷಾನುಭೂತಿ. ಹೀಗೆಯೇ ಅನುಭವಶತಕ, ಅನುಭವಮುಕುರ, ಅನುಭವಮುದ್ರೆ-ಎಂದು ಮುಂತಾಗಿ ಎಷ್ಟೋ ಉಂಟು. ಹೀಗೆ ಅನುಭವವು ಅದ್ವೈತದ ಮುಖ್ಯಲಕ್ಷಣ. ಇದಕ್ಕೆ ಇಲ್ಲಿ ಪ್ರಾಶಸ್ತ್ಯವಿರುವುದೊಂದು ವಿಶೇಷ.

**ಎರಡನೆಯದೇನೆಂದರೆ: ಅಧಿಕಾರವಿಶೇಷಗಳನ್ನು ಪ್ರತಿಯೊಂದಧ್ಯಾಯದಲ್ಲಿಯೂ ನೆನಪುಗೊಟ್ಟಿರುವದು.** ವೇದಾಂತಗ್ರಂಥಗಳಲ್ಲೆಲ್ಲ ಅಧಿಕಾರವಿಷಯವನ್ನು ಒಂದು ಕಡೆ ಹೇಳಿ ಕೈಬಿಡುವದೇ ಬಹಳ. ಅದಂತೆ ಈ ಗ್ರಂಥಕಾರನು ಅದಕ್ಕಾಗಿಯೇ ಆರಂಭದಲ್ಲಿ ಒಂದು ಅಧ್ಯಾಯವನ್ನು ರಚಿಸಿದ್ದಾನೆ. ಆದರೂ ಆ ಮಾತನ್ನು ಅಲ್ಲಿಗೆ ಬಿಡದೆ ಪ್ರತಿಯೊಂದಧ್ಯಾಯದ ಆರಂಭದಲ್ಲಿಯೂ ಅಧಿಕಾರಿಗಳನ್ನೂ ಅನಧಿಕಾರಿಗಳನ್ನೂ ಎತ್ತಿ ಹೇಳಿದ್ದಾನೆ. ವೇದಾಂತಗ್ರಂಥಗಳು ನೀತಿನಿಯಮಗಳ ಕಡೆಗೆ ಲಕ್ಷ್ಯವನ್ನು ಕೊಡದೆ ದೂರದ ಸಿದ್ಧಾಂತವನ್ನೇ ಹೇಳುವದೊಂದು ನ್ಯೂನತೆಯೆಂಬ ಅಜ್ಞರ ಆಕ್ಷೇಪಕ್ಕೆ ಮತ್ತೆ ಮತ್ತೆ ಸಮಾಧಾನವು ದೊರೆಯಲೆಂಬುದೇ ಇದಕ್ಕೆ ಕಾರಣ. ನೀತಿವಂತರಿಗೆ ಮಾತ್ರ ಹೇಳಬೇಕೆಂದೂ ಅನೀತಿವಂತರಿಗೆ ಹೇಳಕೂಡದೆಂದೂ ಹೇಳುತ್ತ ಬಂದಿರುವದರಿಂದ ವೇದಾಂತವು ನೀತಿಯ ಮೆಟ್ಟಲನ್ನು ದಾಟಿ ಬಹುಮೇಲೆ ಇರುವದೆಂಬರ್ಥವನ್ನು ಸೂಚಿಸಿದಂತಾಯಿತು. ವೇದಾಂತಶಾಸ್ತ್ರದ ಪರಿಣಾಮವು ಎಷ್ಟೋ ಜನರ ಮೇಲೆ ಪ್ರಯೋಜನಕರವಾಗಿ ಆದ ಉದಾಹರಣೆಗಳುಂಟು. ಬರೀ ಹೊರಗಣ ಉದಾಹರಣೆಗಳೇ

ಏಕೆ? ಯಾರು ಬೇಕಾದರೂ ಈಗ ಅದನ್ನು ಅನುಭವಕ್ಕೆ ತಂದುಕೊಳ್ಳಬಹುದು. ಆದರೆ ಅವರ ಹೃದಯಭೂಮಿಯು ನೀತಿಧರ್ಮಗಳಾಚರಣೆಯಿಂದ ಹುಲಸಾಗಿರಬೇಕು. ಅನೀತಿವಂತರ ಕಿವಿಗೆ ಬಿದ್ದ ವೇದಾಂತವಾಕ್ಯಗಳು ಗಾಳಿಯಲ್ಲಿ ತೂರಿದಂತೆ ವ್ಯರ್ಥವಾಗುವವು. ಅನಧಿಕಾರಿಗಳಿಗೆ ಹೇಳಬಾರದೆಂಬ ಮಾತಿಗೆ ತಮ್ಮ ಉಪದೇಶಾಮೃತವು ಬಚ್ಚಲಿಗೆ ಬಿದ್ದು ದುರ್ವ್ಯಯವಾಗಬಾರದೆಂಬುದೇ ತಾತ್ಪರ್ಯವೇ ಹೊರತು ತತ್ತ್ವವನ್ನು ಹೊರಗೆ ಬಿಡಬಾರದೆಂಬ ದುರ್ಬುದ್ಧಿಯೇನೂ ಇಲ್ಲ. ಹಾಗಿದ್ದರೆ ಈ ಗ್ರಂಥಕಾರನು ಈ ಕವಿತೆಯ ರೂಪದಲ್ಲಿ ಸುಲಭಸಾಧ್ಯವಾದ ಗ್ರಂಥವನ್ನು ಬರೆದಿಡುತ್ತಲೇ ಇರಲಿಲ್ಲ.

**ಮೂರನೆಯದೇನೆಂದರೆ: ಜೀವಸ್ವರೂಪವನ್ನು ಹೇಳಿರುವದು.** ಸಾಮಾನ್ಯವಾಗಿ ಅಂತಃಕರಣವೂ ಅದರಲ್ಲಿರುವ ಪ್ರತಿಬಿಂಬವೂ ಚೈತನ್ಯವೂ ಕೂಡಿ ಜೀವವೆಂದು ಹೇಳುವ ವಾಡಿಕೆ ಇದೆ. ಲೋಕದಲ್ಲಿ ಆಕಾರವುಳ್ಳ ವಸ್ತುಗಳು ನಿಜವಾದ ಮತ್ತೊಂದು ವಸ್ತುವಿನಲ್ಲಿ ಪ್ರತಿಬಿಂಬಿಸುವದುಂಟು. ನಿರಾಕಾರವಾದ ಆತ್ಮಸ್ವರೂಪವು ಸುಳ್ಳಾಗಿ ತೋರುವ ಮನಸ್ಸಿನಲ್ಲಿ ನಿಜವಾಗಿ ಪ್ರತಿಬಿಂಬಿಸುವದೆಂದರೇನು? ಹೀಗೆಲ್ಲ ಅಸಾಮಂಜಸ್ಯವು ತೋರುವ ಸಂಭವವುಂಟು. ಈ ಗ್ರಂಥಕಾರನು ಅದಕ್ಕೆ ಅವಕಾಶಕೊಡದೆ "ಜೀವನಾರೆಂದೆನಲು ಹಮ್ಮಿನ ಭಾವವುಳ್ಳವ" ಎಂದು ೩ ಅ., ೨೧ ಪ.ದಲ್ಲಿ ಹೇಳಿ ಇದೇ ಲಕ್ಷಣವನ್ನೇ ಕೊನೆಯವರೆಗೂ ಸಾಧಿಸಿದ್ದಾನೆ. ಜೀವಲಕ್ಷಣವನ್ನು ಬೇರೆಬೇರೆಯಾಗಿ ಹೇಳುವಂಥವರಿಗೂ ಇದು ಹೊಂದುವ ಮಾತಾಗಿದೆ. ಇದರ ವಿಷಯಕ್ಕೆ ಮೇಲಿನ ಪದ್ಯದ ಟಿಪ್ಪಣಿಯನ್ನು ನೋಡಿ.

**ನಾಲ್ಕನೆಯದೇನೆಂದರೆ: ತ್ವಂಪದದ ಅರ್ಥವನ್ನು ಶೋಧನೆಮಾಡುವ ಪ್ರಕರಣದಲ್ಲಿ ವಾಚಕರನ್ನು ಮನಗಾಣಿಸುವದಕ್ಕೆ ತನ್ನ ಸರ್ವಸಾಹಸವನ್ನೂ ಮಾಡಿರುವದು.** ಎಷ್ಟು ಬಗೆಗಳಿಂದ ಆ ತತ್ತ್ವಾರ್ಥವನ್ನು ಕಂಡುಹಿಡಿಯಬಹುದೊ ಅಷ್ಟನ್ನೂ ಕವಿಯು ಮುಗಿಸಿಬಿಟ್ಟಿದ್ದಾನೆಂದು ತೋರುತ್ತದೆ. ದೃಗ್ದೃಶ್ಯವಿವೇಕ, ಪಂಚಕೋಶವಿವೇಕ, ಶರೀರತ್ರಯವಿಭಾಗ, ಅವಸ್ಥಾತ್ರಯಸಾಕ್ಷಿತ್ವ, ಮನಸ್ಸಾಕ್ಷಿತ್ವ–ಮೊದಲಾದ ಉಪಾಯಗಳು ಇಲ್ಲಿ ಸಯುಕ್ತಿಕವಾಗಿ ವರ್ಣಿತವಾಗಿವೆ.

**ಕವಿಯ ಮತ:**

ಈ ಗ್ರಂಥದಲ್ಲಿ ಕವಿಯು ತನ್ನ ವಿಷಯವಾಗಿ ಏನೂ ಹೆಚ್ಚಾಗಿ ಹೇಳಿಕೊಳ್ಳದಿದ್ದರೂ ತನ್ನ ಹೆಸರು ರಂಗನಾಥನೆಂದೂ (೧ ಅ., ೨ ಪ.) ತನ್ನ ತಂದೆಯ ಹೆಸರು ಮಹಲಿಂಗದೇವನೆಂದೂ ಸಹವಾಸಿ ವಂಶದವನೆಂದೂ ತನ್ನ ಗುರು ಸಹಜಾನಂದರೆಂದೂ (೧ ಅ. ೩ ಪ.) ಈ ಗ್ರಂಥದಲ್ಲಿ ತನ್ನ ವೃತ್ತಾಂತವನ್ನು ಕೊಟ್ಟಿದ್ದಾನೆ.

ಸಹವಾಸಿ ಎಂಬ ವಂಶದ ವಿಷಯವಾಗಿ ಪೀಠಿಕೆಯನ್ನು ನೋಡಿರೆಂದು (೧ ಅ., ೩ ಪ.)ದ ಟೀಕಿನಲ್ಲಿದೆಯಷ್ಟೆ. ಈ ಕವಿಯು ಹೇಳಿರುವಂತೆ ಆ ವಂಶಕ್ಕೆ ಘನತರವೆಂಬ ವಿಶೇಷಣವು (೧ ಅ., ೩ ಪ.) ಚೆನ್ನಾಗಿ ಒಪ್ಪುವದೆಂದೇ ತೋರುತ್ತದೆ. ಏಕೆಂದರೆ ಸುಮಾರು ಈ ಕವಿಯ ಸಮಕಾಲದಲ್ಲಿಯೇ ಸಹವಾಸಿ ನಿರಂಜನಾವಧೂತನೆಂಬುವನು ಗಗನತಾರಾವಲಿ ಮತ್ತು ಕಾಮವಚನ ಎಂಬ ಎರಡು ವೇದಾಂತದ ಪ್ರಕರಣಗಳನ್ನು ಬರೆದಿದ್ದಾನೆ. ಮಹಲಿಂಗರಂಗನು ಪರಮಶೈವನು; ನಿರಂಜನಾವಧೂತನು ಪರಮವೈಷ್ಣವನು. ಹೀಗೆ ಇವರು ಧರ್ಮದಲ್ಲಿ ಪರಮತ್ವವನ್ನು ಪಡೆದಿರುವದಲ್ಲದೆ ಕನ್ನಡ ಭಾಷೆಯ ಮೇಲಿನ ಅಭಿಮಾನದಲ್ಲಿಯೂ ಇಬ್ಬರೂ ಮೇಲುಗಯ್ಯಾದವರೆ. 'ಕನ್ನಡಿಯೆ ದರ್ಪಣವದಲ್ಲದೆ ಭೇದವೇನಿದಕೆ' ಎಂದು ಮಹಲಿಂಗರಂಗನು ಅನುಭವಾಮೃತದಲ್ಲಿ ಹೇಳಿದ್ದರೆ ಇದೇ ಅಭಿಪ್ರಾಯವನ್ನೆ 'ವಿಸ್ತರಿಸುವೆನು ಕನ್ನಡದಲಾ ಕನ್ನಡಿಯೆ ದರ್ಪಣದಿರವದಲ್ಲದೆ ಭೇದವಿಲ್ಲದ ತೆರದಲಾನಿದನು' ಎಂಬ ಮಾತುಗಳಿಂದ ನಿರಂಜನಾವಧೂತನು ತನ್ನ ಗಗನಾತಾರಾವಲಿಯಲ್ಲಿ ಹೇಳಿದ್ದಾನೆ. ಆದ್ದರಿಂದ ಹೀಗೆ ಪರಮಾರ್ಥದಲ್ಲಿ ಪರಾಕಾಷ್ಠತೆಯನು ಪಡೆದವರಾಗಿ ವ್ಯವಹಾರದೃಷ್ಟಿಯಿಂದ ಸದಭಿಮಾನಿಗಳಾದವರನ್ನುಳ್ಳ ವಂಶಕ್ಕೆ ಘನತರವೆಂಬ ವಿಶೇಷಣವು ಅತ್ಯುಕ್ತಿಯಲ್ಲ.

**ಕವಿಯ ಮೂಲ:**

ಇವರ ಜಾತಿಯ ವಿಷಯವನ್ನು ವಿಚಾರಮಾಡಿದರೆ ಇವರಿಬ್ಬರೂ ಬ್ರಾಹ್ಮಣರಿರ ಬಹುದೆಂದು ಕವಿಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಧಾರವಾಡದ ಜಿಲ್ಲೆಯಲ್ಲಿ 'ಸವ್ವಾಶೆ' ಎಂಬ ಬ್ರಾಹ್ಮಣರಿರುವರೆಂದೂ ಶ್ರೀರಾಮನು ವನವಾಸಕ್ಕೆ ಬಂದಿದ್ದಾಗ ಅವನ ಸಹವಾಸದಲ್ಲಿದ್ದ ಸಹವಾಸಿ ಎಂಬುವನು ತಮ್ಮ ಮೂಲಪುರುಷನೆಂದು ಈ ಜನರ ಅಭಿಪ್ರಾಯವೆಂದೂ ೧೨೫ ಮನೆತನದವರಾದ ಇವರಿಗೆ 'ಸವ್ವಾಶೆ' ಎಂದು ಹೆಸರಿದೆಯೆಂದೂ ಗೆಜಿಟಿಯರ್‌ಕಾರರು ಹೇಳಿರುತ್ತಾರೆ. 'ಸವ್ವಾಶೆ' ಎಂದರೆ ಮಹಾರಾಷ್ಟ್ರ ಭಾಷೆಯಲ್ಲಿ ೧೨೫ ಎಂದರ್ಥ. ಉತ್ತರಕರ್ನಾಟಕದಲ್ಲಿಯ ಕನ್ನಡಿಗರು ಎಷ್ಟೇ ಎಚ್ಚರ ವಾಗಿದ್ದರೂ ತಮ್ಮ ಕನ್ನಡದ ಮಾತಿನಲ್ಲಿ ಸಂಖ್ಯಾವಾಚಕಗಳಿಗಂತು ತಮಗೆ ಅರಿವಿಲ್ಲದೆ ಮಹಾರಾಷ್ಟ್ರದ ಮಾತುಗಳನ್ನೇ ಉಪಯೋಗಿಸುವ ರೂಢಿ ಈಗಲೂ ಇದೆ. ಹೀಗಾಗಿ ಇವರು 'ಸವ್ವಾಶೆ' ಎಂಬ ಹೆಸರನ್ನು ಹೊಂದಿರುವರೆ ಹೊರತು ನಿಜವಾಗಿ ಇವರು ಕನ್ನಡಿಗರೆ. ಈ ಗುಂಪಿನವರೆಲ್ಲರೂ ಮೊದಲು ಶಾಂಕರ ಶಿಷ್ಯಕೋಟಿಯ ಸಂಪ್ರದಾಯ ದವರೆಂದು ತೋರುತ್ತದೆ. ಈಚೆಗೆ ಈ ಗುಂಪಿನವರನೇಕರು ಶ್ರೀ ರಾಘವೇಂದ್ರಸ್ವಾಮಿಗಳವರ ಮಠದಿಂದ ಮಾಧ್ವದೀಕ್ಷೆಯನ್ನು ಸ್ವೀಕರಿಸಿ ಅವರೊಡನೆ ಬ್ರಾಹ್ಮಣ್ಯವ್ಯವಹಾರದಲ್ಲಿ ಬೆರೆಯುತ್ತಿದ್ದಾರೆ. ಆ ಜನರು ವಿಶೇಷವಾಗಿ ಧಾರವಾಡ ಜಿಲ್ಲೆಯ ಹಾನಗಲ್ಲು ಮತ್ತು

ಕರ್ಜಗಿ ಮೊದಲಾದ ಕಡೆಗಳಲ್ಲಿದ್ದಾರೆ. ಮೈಸೂರು ದೇಶದಲ್ಲಿ ಇವರ ಸಂಖ್ಯೆ ಬಹು ಕಡಿಮೆ. ಮಹಲಿಂಗರಂಗನು ಈ ವಂಶದವನೇ ಇರಬಹುದೋ ಹೇಗೋ ನಿಷ್ಕರ್ಷೆಯಾಗಿ ಹೇಳುವದಕ್ಕೆ ಹೆಚ್ಚಿನ ಆಧಾರಗಳೇನೂ ಮುಂದೆ ಬಂದಿಲ್ಲ. ಬೇರೊಂದು ಸಹವಾಸಿವಂಶವೂ ಪ್ರಸಿದ್ಧಿಯಲ್ಲಿಲ್ಲ.

**ಕವಿಯ ಕಾಲ:**

ಇವನ ಕಾಲದ ವಿಷಯವನ್ನು ತೆಗೆದುಕೊಂಡರೆ ಕವಿಚರಿತ್ರಕಾರರು ಇವನಿಗೆ ಕ್ರಿ ೧೬೭೫ನ್ನು ಹಾಕಿದ್ದಾರೆ. ಸುಮಾರು ೧೨ ವರ್ಷಗಳ ಹಿಂದೆ ೮೦ ವರ್ಷದ ಮುದುಕರಾಗಿ ಬೆಂಗಳೂರು ಹತ್ತಿರದ ಕೃಷ್ಣರಾಜಪುರವೆಂಬ ಊರಲ್ಲಿ ಸಮಾಧಿಸ್ಥರಾಗಿರುವ 'ಕ್ಷತ್ರಿಯ' ಮನೆತನದ ಶ್ರೀ ಶಂಕರಾನಂದ ಯೋಗೀಶ್ವರರೆಂಬುವರು ತಮ್ಮ ಕೈವಲ್ಯ ನವನೀತ, ಉತ್ತರ ಕೈವಲ್ಯನವನೀತ, ರಾಮತತ್ತ್ವಾಮೃತ, ರಾಮಭಕ್ತಿಸಾರ, ಭಕ್ತಿಕಲ್ಪದ್ರುಮ, ಪಾರ್ವತೀಪಂಚರತ್ನ, ಮುಕ್ತಿಕಾಂತಾಕಲ್ಯಾಣ, ಹರಿಹರಲೀಲಾಮೃತ-ಮೊದಲಾದ ಗ್ರಂಥಗಳಲ್ಲಿ ಮಹಲಿಂಗರಂಗನನ್ನು ತಮ್ಮ ಮುದ್ರಿಕೆಯ ಸ್ಥಾನದಲ್ಲಿಟ್ಟಿದ್ದಾರೆ. ಇದರಿಂದ ಅವರಿಬ್ಬರ ಸಾಕ್ಷಾತ್ಸಂಬಂಧವನ್ನೆ ಊಹಿಸಿದರೆ ಶ್ರೀಶಂಕರಾನಂದರಿಗೆ ಸುಮಾರು ೨೫ನೆ ವಯಸ್ಸಿನಲ್ಲಿಯೇ ಗುರುಸಮಾಗಮವಾಗಿರಬಹುದೆಂದಿಟ್ಟುಕೊಂಡರೂ ೬೦-೭೦ ವರ್ಷಗಳ ಹಿಂದೆ ಮಹಲಿಂಗರಂಗನು ಜೀವಂತನಾಗಿರಬೇಕಾಗುತ್ತದೆ. ಆದರೆ ಅನುಭವಾಮೃತವು ಮೈಸೂರು ಅರಮನೆಯ ಶಿಲಾಯಂತ್ರದಲ್ಲಿ ಮುದ್ರಿತವಾಗಿಯೇ ಈಗ ೮೫ ವರ್ಷಗಳಾಗಿ ಹೋಗಿವೆ. ಅದು ಅಲ್ಲಿ ಮುದ್ರಣವನ್ನು ಪಡೆಯಬೇಕಾದರೆ ಅಷ್ಟು ಹೊತ್ತಿಗೆ ಎಲ್ಲೆಲ್ಲಿಯೂ ಅದರ ಖ್ಯಾತಿ ಬೆಳೆದು ಅದು ಪ್ರಾಚೀನಗ್ರಂಥವೆನಿಸಿರಬೇಕು. ಇದಲ್ಲದೆ ಈ ಗ್ರಂಥದ ಸಂಸ್ಕೃತದ ಭಾಷಾಂತರವಾಗಿಯೆ ೧೧೨ ವರ್ಷಗಳಾಗಿರುವಂತೆ ಕಾಣುವದರಿಂದ ಮಹಲಿಂಗರಂಗನಿಗೆ ಕವಿಚರಿತ್ರಕಾರರು ಹಾಕಿರುವ ಕಾಲವು ಒಪ್ಪುವ ಹಾಗಿದೆ. ಮತ್ತು ಈ ಕವಿಯು ಮಾಯೆಗೆ ಉಚ್ಚಂಗಿದುರ್ಗದ ಉಪಮಾನವನ್ನು ಹೇಳುವಾಗ ಆ ಕೋಟೆಯ ಒಳಹೊಕ್ಕು ನೋಡಿದರೆ ಹುರುಳಿಲ್ಲವೆಂಬರ್ಥವನ್ನು ಪದ್ಯದಲ್ಲಿ ಸೂಚಿಸಿರುವದರಿಂದ ಇವನು ಆ ಕೋಟೆಯ ಅವನತಿಯಾದ ಮೇಲೆ ಇದ್ದವನೆಂದು ಹೇಳಬೇಕಾಗುವದು. ಉಚ್ಚಂಗಿದುರ್ಗದ ಕೋಟೆಯನ್ನು ಚಿತ್ರದುರ್ಗದ ಮದಕರಿನಾಯಕನು ಗೆದ್ದು ಉತ್ಸವಮೂರ್ತಿಯನ್ನು ತೆಗೆದುಕೊಂಡು ಹೋದನೆಂದು ಜನರು ಆಡಿಕೊಳ್ಳುವರು. ಕವಿಚರಿತ್ರಕಾರರು ಮಹಲಿಂಗರಂಗನಿಗೆ ಹಾಕಿರುವ ಕಾಲದ ಹಿಂದೆಯೇ ಆ ಮದಕರಿ ನಾಯಕನ ಹಾವಳಿಯೂ ಇದ್ದಂತೆ ಕಾಣುತ್ತದೆ. ಆದ್ದರಿಂದ ಸ್ವಲ್ಪ ಹೆಚ್ಚು ಕಡಿಮೆ ಮಹಲಿಂಗರಂಗನು ಆ ಕಾಲದವನಾಗಬಹುದು. ಈ ಕಾರಣದಿಂದ ಶ್ರೀಶಂಕರಾನಂದರು ಮಹಲಿಂಗರಂಗನಿಗೆ ಸಾಕ್ಷಾಚ್ಛಿಷ್ಯರಾಗಿರದೆ ಪ್ರಶಿಷ್ಯರಾಗಿದ್ದು ತಮ್ಮ ಪರಮಗುರುವಿನ

ಮೇಲಿನ ಮೆಚ್ಚುಗೆಯ ವಿಶೇಷದಿಂದ ಅವನ ಹೆಸರನ್ನು ತಮ್ಮ ಮುದ್ರಿಕೆಯಾಗಿಟ್ಟುಕೊಂಡಂತೆ ತೋರುತ್ತದೆ. ಅಥವಾ ಈ ಅನುಭವಾಮೃತಕಾರನು ಸಹಜಾನಂದರ ಶಿಷ್ಯನಾಗಿರುವಾಗ ಶ್ರೀ ಶಂಕರಾನಂದರು ತನ್ನ ಗುರುವಾದ ಮಹಲಿಂಗರಂಗನನ್ನು ದತ್ತಾತ್ರೇಯಕರಕಮಲ ಸಂಜಾತನೆಂದಿರುವದರಲ್ಲಿ ದತ್ತಾತ್ರೇಯಶಬ್ದವು ದೇವತಾವಾಚಕವೆಂದಿಟ್ಟುಕೊಂಡರೆ ಶೈವಸಂಪ್ರದಾಯದಲ್ಲಿ ಅದು ಬಂದು ತೂರಿಕೊಳ್ಳುವದಕ್ಕೆ ಅವಕಾಶವಿಲ್ಲ; ದತ್ತಾತ್ರೇಯ ನೆಂಬೊಂದು ವ್ಯಕ್ತಿಯಾಗಿದ್ದರಂತು ಅವನು ಬೇರೆ ಅಪ್ರಸಿದ್ಧ ಮಹಲಿಂಗರಂಗನಾಗಿರಬೇಕು.

ನಾನು ಈ ಕವಿಯ ಕಾಲದ ವಿಚಾರವನ್ನು ಮಾಡುತ್ತಿರುವಾಗ ಮಹಲಿಂಗರಂಗನು ರಂಗಾವಧೂತನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನೆಂದೂ ಅವನು ಚಿತ್ರದುರ್ಗದ ಪ್ರಾಂತದಲ್ಲಿದ್ದು ದಾವಣಗೆರೆಯಲ್ಲಿ ಸಮಾಧಿಸ್ಥನಾದನೆಂದೂ ಹೇಳಿ ಒಬ್ಬರು ಅವನ ಪ್ರತಿಬಿಂಬವೆಂದು ಕೈಯ್ಯಲ್ಲಿ ಬರೆದ ಒಂದು ಚಿತ್ರವನ್ನು ನನಗೆ ತೋರಿಸಿದರು. ಆ ಮೇಲೆ ನಾನು ನನ್ನ ವಿಚಾರವನ್ನು ಮುಂದೆ ನಡೆಸಿದ್ದರಲ್ಲಿ 'ಕ್ಷತ್ರಿಯ' ಮನೆತನದ ಆ ರಂಗಾವಧೂತನು ಸುಮಾರು ೪೦ ವರ್ಷಗಳ ಹಿಂದೆ ೪೦-೫೦ನೆ ವಯಸ್ಸಿನಲ್ಲಿ ಸಮಾಧಿಸ್ಥನಾಗಿರುವದರಿಂದ ಅವನು ಅನುಭವಾಮೃತಕಾರನಲ್ಲವೆಂದು ಗೊತ್ತಾಯಿತು. ಅವನೂ ಸುಮಾರು ಮಹಲಿಂಗರಗನ ಪ್ರಶಿಷ್ಯನಾಗಿರಬಹುದೆಂದು ತೋರುತ್ತದೆ, ಆಕಳಿಕೆ ಮೊದಲಾದ ಸಂದರ್ಭಗಳಲ್ಲಿ ಅವನು ಯಾವಾಗಲೂ 'ಮಹಲಿಂಗರಂಗ ಮಹಲಿಂಗರಂಗ' ಎನ್ನುತ್ತಿದ್ದನಂತೆ. ಹೀಗೆ ಅವನು ತನ್ನ ಗುರುವಿನ ನಾಮಸ್ಮರಣೆಯನ್ನು ಆಡುವದನ್ನು ನೋಡಿ ಕೆಲವರು ಅವನನ್ನೆ ಮಹಲಿಂಗರಂಗನೆಂದು ಭ್ರಮಿಸಿರುವಂತೆ ತೋರುತ್ತದೆ. ಮಹಲಿಂಗರಂಗನಿಗೇ ರಂಗಾವಧೂತನೆಂಬ ಇನ್ನೊಂದು ಹೆಸರುಂಟೆಂಬ ಕವಿಚರಿತ್ರಕಾರರ ಬರೆಹಕ್ಕೂ ಈ ಪ್ರತೀತಿಯೇ ಆಧಾರವಾಗಿರಬಹುದೆಂದು ತೋರುತ್ತದೆ.

**ಕವಿಯ ಸ್ಥಳ:**

ಈ ಗ್ರಂಥಕರ್ತನ ವಾಸಸ್ಥಾನದ ವಿಚಾರವನ್ನು ತೆಗೆದುಕೊಂಡರೆ ಈ ಗ್ರಂಥದ ೪ ಅ., ೩೫ ಪ.ದಲ್ಲಿ ಮಾಯೆಗೆ 'ಉಚ್ಚಂಗಿಕೋಟೆಯವೋಲು' ಎಂದು ಹೋಲಿಕೆಯನ್ನು ಕೊಟ್ಟಿರುತ್ತಾನೆ. ಉಚ್ಚಂಗಿದುರ್ಗವೆಂಬ ಸ್ಥಲವು ಹರಪನಹಳ್ಳಿ ತಾಲ್ಲೂಕಿನಲ್ಲಿದೆ. ಇದರ ವಿಚಾರವನ್ನು ನಾನು ಆ ಪದ್ಯದ ಟೀಕಿನಲ್ಲಿ ಹೇಳಿದ್ದೇನೆ. ಈ ಕವಿಯು ಈ ಸ್ಥಲದ ಸುತ್ತಮುತ್ತಣವನಾದ್ದರಿಂದ ಈ ಕೋಟೆಯನ್ನು ದಾಹರಿಸಿದ್ದಾನೆಂದು ಧಾರಾಳವಾಗಿ ಹೇಳಬಹುದು. ಇವನು ಆ ಪ್ರಾಂತದವನೇ ಇರಬೇಕೆನ್ನುವದಕ್ಕೆ ಇನ್ನೂ ಕೆಲವು ಆಧಾರಗಳಿವೆ. ಈ ಕವಿಯು ೫ ಅ., ೧೬ ಪ ಮತ್ತು ೫ ಅ., ೩೮ ಪ. ಇವೆರಡರಲ್ಲಿ 'ರಂಕ' ಎಂಬ ಮಾತನ್ನುಪಯೋಗಿಸಿದ್ದಾನೆ. ಇದು ಇದುವರೆಗಿನ ಗ್ರಂಥದಲ್ಲಿ ಈ ಸ್ಥಲದಲ್ಲಿ ಅರ್ಥವಿಲ್ಲದೆ ಇದ್ದ 'ಲಂಕ' 'ಲೆಂಕ' ಎಂಬುದನ್ನು ತಿದ್ದಿದ ರೂಪ. ಈ ಗ್ರಂಥದ ಸಂಸ್ಕೃತ

ಭಾಷಾಂತರಕಾರನೂ ಈ ರಂಕಶಬ್ದವನ್ನುಪಯೋಗಿಸಿದ್ದಾನೆ. ರಂಕಶಬ್ದವು ಸಂಸ್ಕೃತವಾದರೂ ಅದರ ಬಳಕೆ ಮಹಾರಾಷ್ಟ್ರದಲ್ಲಿ ಹೆಚ್ಚು. ಇದರ ಜೊತೆಗೆ ಇವನು ೭ ಅ., ೫ ಪ. ದಲ್ಲಿ 'ಸಂಭಾಳಿಸುತ' ಎಂಬ ಮಾತನ್ನುಪಯೋಗಿಸಿದ್ದಾನೆ. ಇದಂತು ಮಹಾರಾಷ್ಟ್ರದ ಶಬ್ದವೆಂದು ಎಲ್ಲರೂ ಒಪ್ಪಬೇಕು. ಆದ್ದರಿಂದ ಈ ಕವಿಯು ಮಹಾರಾಷ್ಟ್ರದ ಮತ್ತು ಕನ್ನಡದ ಸಂಧಿಸ್ಥಾನದವನೆಂದು ಹೇಳಬೇಕಾಗುತ್ತದೆ. ಇವನ ವಾಸಸ್ಥಾನವು ಮಹಾರಾಷ್ಟ್ರದ ಕಡೆಗೆ ಇನ್ನೂ ಒಳಹೊಕ್ಕಿದ್ದರೆ ಆ ಕಡೆಯ ಪದ್ಧತಿಯಂತೆ ಇವನ ಹೆಸರು ರಂಗೋ ಮಹಲಿಂಗನೆಂದು ಪ್ರತೀತಿಗೆ ಬರುತ್ತಿತ್ತು. ಹಾಗಿಲ್ಲದೆ ಇರುವದು ನಮ್ಮ ಊಹೆಗೆ ಬಲವನ್ನು ಕೊಡುತ್ತದೆ. ಈ ಸಂಧಿಸ್ಥಾನಕ್ಕೆ ಉಚ್ಚಂಗಿದುರ್ಗದ ಪ್ರಾಂತ್ಯವು ಹೊಂದುತ್ತದೆ. ಸಹವಾಸಿ ನಿರಂಜನಾವಧೂತನೂ ಈ ಸುತ್ತಮುತ್ತಲೇ ಶ್ರೀಶೈಲದ ದಕ್ಷಿಣದಲ್ಲಿರುವ ಹರನಗರದ ಮಾರುತಿಯ ಉಪಾಸಕನಾದ್ದರಿಂದ ಈ ಕಡೆಯು ಸಹವಾಸಿಗಳ ಬೀಡೆಂದು ತೋರುತ್ತದೆ.

**ಕವಿಯ ಜೀವನ ವಿಚಾರ:**

ಈ ಗ್ರಂಥಕರ್ತನು ತಾನು ಅದ್ವೈತಿಯೆಂಬುದನ್ನು ಈ ಗ್ರಂಥದಿಂದಲೇ ತೋರಿಸಿಕೊಂಡಿದ್ದಾನೆ. ಇವನು ಶ್ರೀಶೈಲದ ಶ್ರೀ ಮಲ್ಲಿಕಾರ್ಜುನದೇವರ ಭಕ್ತಿಕೋಟಿಯ ವನೆಂದು ಈ ಗ್ರಂಥದ ಇಷ್ಟದೇವತಾಪ್ರಾರ್ಥನೆ ಮೊದಲಾದವುಗಳಿಂದ ತಿಳಿಯುತ್ತದೆ. ಈ ಗ್ರಂಥದಲ್ಲಿ ನಾದೋತ್ಪತ್ತಿ (೪ ಅ., ೧೦ ಪ.) ಮೊದಲಾದ ಶೈವಸಂಪ್ರದಾಯದ ವಿಚಾರಗಳಿರುವದರಿಂದಲೂ 'ಮತಗಳೊಳು ಶೈವ' (೧೦ ಅ., ೧೧೯ ಪ.) ಎಂದು ತಾನೇ ಹೇಳಿರುವದರಿಂದಲೂ ಅಲ್ಲಲ್ಲಿ (೪ ಅ., ೧ ಪ.; ೫ ಅ., ೧ ಪ.; ೭ ಅ., ೧ ಪ.) ಶಿವಮಹಿಮ್ನಸ್ತೋತ್ರದ ಭಾವಗಳನ್ನು ತಂದಿರುವದರಿಂದಲೂ ಇವನು ಶಿವೋಪಾಸಕನೆಂದು ವ್ಯಕ್ತವಾಗುತ್ತದೆ. ಈ ಗ್ರಂಥದ ೧೦ ಅ., ೨೭ ಪ.ಗಳನ್ನು ನೋಡಿದರೆ ಇವನು ಗೃಹಸ್ಥಾಶ್ರಮಿಯಾಗಿದ್ದನೆಂದು ತಿಳಿಯಬರುತ್ತದೆ. ೧೦ ಅ., ೬೩-೬೯ ಈ ಪದ್ಯಗಳಲ್ಲಿ ಸಂನ್ಯಾಸವನ್ನು ಜರಿದಿರುವದೂ ಈ ಅಭಿಪ್ರಾಯಕ್ಕೆ ಉತ್ತೇಜಕವಾಗುತ್ತದೆ. ಆದರೆ ಇವನ ಶಿಷ್ಯರೆಂದು ಬರೆದುಕೊಳ್ಳುವ ಶ್ರೀ ಶಂಕರಾನಂದಯೋಗೀಶ್ವರರು ತಮ್ಮ ಗ್ರಂಥಗಳಲ್ಲಿ 'ಶ್ರೀ ಸದಾನಂದ ಗುರುಮಹಲಿಂಗರಂಗ ಯತಿವರೇಣ್ಯ ಚರಣಕಮಲ ಭೃಂಗಾಯಮಾಣ' ಎಂದು ಹೇಳಿರುವ ಗುರು ಇವನೇ ಆದರೆ ಇವನು ಕೊನೆಗಾಲಕ್ಕೆ ಸಂನ್ಯಾಸಿಯಾಗಿ ಸದಾನಂದನೆಂಬ ಹೆಸರನ್ನು ಮಹಲಿಂಗರಂಗನು ಎಲ್ಲಿಯೂ ಕಾಣಿಸಿರುವದಿಲ್ಲವಾದ್ದರಿಂದ ಈ ಗ್ರಂಥವು ಅವನ ಪೂರ್ವಾಶ್ರಮದಲ್ಲಿ ಬರೆದದ್ದಾಗಿರ ಬೇಕೆಂದೂ ತಿಳಿಯಬೇಕಾಗುತ್ತದೆ.

**ಕವಿಯ ಕನ್ನಡಭಾಷಾಭಿಮಾನ:**

ಈ ಗ್ರಂಥಕರ್ತನ ಕರ್ಣಾಟಕಭಾಷಾಭಿಮಾನಕ್ಕಂತು ಬೇರೆ ಹೇಳಬೇಕಾದದ್ದೇ ಇಲ್ಲ. ೧ ಅ., ೪ ಪ. ೫ ಪ. ಗಳೇ ಅದನ್ನು ವ್ಯಕ್ತಮಾಡುತ್ತವೆ. ಆದರೂ ಈ ಗ್ರಂಥದ ಭಾಷೆಯು ಅಷ್ಟೇನೂ ಬಿಗಿಯಾಗಿಲ್ಲ. ಪ್ರಯೋಗಗಳು ಎಷ್ಟೋ ಕಡೆ ವ್ಯಾಕರಣಕ್ಕೆ ದೂರವಾಗುತ್ತವೆ. ಈ ಗ್ರಂಥದಲ್ಲಿ 'ನಿರಾಳ' ಎಂಬ ಮಾತು ಬಹುಕಡೆ ಬಂದಿದೆ. ಅದು ಸಂಸ್ಕೃತವಾಗಿ ಕಾಣಲಿಲ್ಲ. ಆದರೂ ಸಂಸ್ಕೃತಶಬ್ದಭಾಷಾಂತರಕಾರರೂ ಈ ಶಬ್ದವನ್ನುಪಯೋಗಿಸಿದ್ದಾರೆ. ಯಾವ ಯೋಚನೆಯೂ ಇಲ್ಲದಿರುವಿಕೆಯೆಂಬರ್ಥದಲ್ಲಿ ಕನ್ನಡದಲ್ಲಿ ಅದು ಬಳಕೆಯಲ್ಲಿದೆ. ಆ ಮಾತನ್ನು ಇವನು ಬ್ರಹ್ಮಕ್ಕೆ ಅನ್ವಯಿಸಿ ಎಷ್ಟೋ ಕಡೆ ಸಂಸ್ಕೃತಶಬ್ದಗಳ ಸಂಧಿಯಲ್ಲಿಯೂ ಸೇರಿಸಿದ್ದಾನೆ. ಒಟ್ಟಿನ ಮೇಲೆ ಈ ಗ್ರಂಥವನ್ನು ಭಾಷೆಗಾಗಿ ಅಷ್ಟೇ ಹಿಡಿಯದಿದ್ದರೂ ವಿಷಯವನ್ನು ನೋಡಿದರೆ ಎಷ್ಟು ಮಾತ್ರವೂ ಬಿಡುವಹಾಗಿಲ್ಲ.

**ಉಪಕಾರ ಸ್ಮರಣೆ:**

ಇಷ್ಟು ನನ್ನ ಮುನ್ನುಡಿಯು ಸಾಕು. ನನಗೆ ಈ ಗ್ರಂಥದ ಸಂಸ್ಕೃತದ ಭಾಷಾಂತರದ ಸುದ್ದಿಯನ್ನು ಕೊಟ್ಟಿದ್ದಲ್ಲದೆ ಮೈಸೂರು ಅರಮನೆಯ ಶಿಲಾಯಂತ್ರದ ಪ್ರತಿಯನ್ನು ಕಂಡುಹಿಡಿದು ಅದರಲ್ಲಿ ನಾನು ಕೇಳಿದ ಸಂದಿಗ್ಧಸ್ಥಾನಗಳನ್ನೆಲ್ಲ ಬರೆದು ಕಳುಹಿಸಿದ ಚಾಮರಾಜನಗರದ ರೇಂಜ್ ಅಸಿಸ್ಟೆಂಟ್ ಇನ್‌ಸ್ಪೆಕ್ಟರ್ ಶ್ರೀ ಎ.ಎನ್. ಸಂಜೀವಯ್ಯನವರಿಗೂ ಇದರ ಸಂಸ್ಕೃತಭಾಷಾಂತರವನ್ನು ಆದರದಿಂದ ರಕ್ಷಣೆಮಾಡಿಕೊಂಡಿದ್ದು ಅದನ್ನು ನನಗೆ ಈ ಸಮಯದಲ್ಲಿ ಓದುವದಕ್ಕೆ ಕೊಟ್ಟ ಶ್ರೀ ಟಿ. ವೆಂಕಟಕೃಷ್ಣಯ್ಯನವರಿಗೂ ಈ ಗ್ರಂಥದಲ್ಲಿ ಬಂದ ಕಥೆಗಳ ವೃತ್ತಾಂತ ಮೊದಲಾದವುಗಳನ್ನು ವಿವರವಾಗಿ ಹೇಳಿ ಸಹಾಯಮಾಡಿದ ವೇ॥ಶಾ॥ಸಂ॥ ಗಣಪತಿಶಾಸ್ತ್ರಿಗಳಿಗೂ ನನಗೆ ಈ ಸಂದರ್ಭಕ್ಕೆ ಉಪಯುಕ್ತವಾದ ಬೇರೆಬೇರೆ ಪ್ರತಿಗಳನ್ನು ಕೊಟ್ಟ ಸರ್ವರಿಗೂ ನಾನು ಋಣಿಯಾಗಿರುವೆನು. ಶ್ರೀ ಬ್ರಹ್ಮಪ್ಪನವರು ಈ ಗ್ರಂಥವನ್ನು ಪರಿಶೋಧಿಸಬೇಕೆಂದುದ್ದೇಶಮಾಡಿದಾಗ ಮಧ್ಯಸ್ಥಗಾರರಾಗಿ ಆ ಕೆಲಸವನ್ನು ತಂದು ನನಗೆ ಗಂಟುಹಾಕಿ ನನ್ನ ಬ್ರಹ್ಮಾನುಸಂಧಾನಕ್ಕೆ ನೆರವಾದದ್ದಕ್ಕಾಗಿ ನನ್ನ ಮಿತ್ರರಾದ ಮ॥ರಾ॥ ದಾವಣಗೆರೆಯ ಮುಂಡರಗಿ ರಾಘವೇಂದ್ರರಾಯರನ್ನು ನಾನು ಇಲ್ಲಿ ವಂದಿಸದಿರಲಾರೆನು.

ಇನ್ನು ಒಂದು ಮಾತನ್ನು ವಾಚಕರ ಮುಂದೆ ಇಡಬೇಕಾಗಿದೆ. ಅದೇನೆಂದರೆ: ಈ ಗ್ರಂಥದ ಕರ್ತೃತ್ವವು ನನಗೆ ಕೇವಲ ಸ್ಥೂಲದೃಷ್ಟಿಯಿಂದ ಮಾತ್ರ ಸಲ್ಲುವದೆ ಹೊರತು ವಿಚಾರದೃಷ್ಟಿಯಿಂದ ಇದರ ಯಶಸ್ಸಿಗೆಲ್ಲ ನನ್ನ ಮಿತ್ರರಾದ ಶ್ರೀ ವೈ. ಸುಬ್ಬರಾಯರೇ ಭಾಗಿಗಳಾಗಿರುವರು. ಏಕೆಂದರೆ: ಈ ಗ್ರಂಥರಚನೆಯ ರೂಪರೇಖೆಯು ಅವರಿಂದಲೇ

ಪ್ರಾರಂಭವಾಗಿದ್ದು ಅವರಿಗೆ ಸಾಕಾದಷ್ಟು ಅವಕಾಶವು ದೊರೆಯದ್ದರಿಂದ ನನ್ನ ಕೈಗೆ ಬಂದಮೇಲೆಯೂ ಇದು ಕೊನೆಯವರೆಗೂ ಎಲ್ಲ ವಿಚಾರಗಳಲ್ಲಿಯೂ ಅವರ ನೆರವನ್ನು ಪಡೆದೇ ಮುಗಿದಿರುವದು. ಹೀಗಿರುವಾಗ ಅಧ್ಯಾತ್ಮಗ್ರಂಥಗಳ ಪ್ರಕಾಶಕ್ಕೇ ದೀಕ್ಷೆಯನ್ನು ವಹಿಸಿರುವ ಮತ್ತು ನನ್ನೊಡನೆ ಏಕದೇಹನ್ಯಾಯದಿಂದ ಸಹಾಯಮಾಡಿರುವ ಅವರಿಗೆ ಉಪಕಾರಸ್ಮರಣೆಯ ರೂಪವಾದ ಉಪಚಾರವನ್ನು ಹೇಳುವದು ಅತ್ಯಲ್ಪವಾಗುವದೆಂದು ಆ ವಿಷಯದಲ್ಲಿ ಸುಮ್ಮನಾಗಿರುವೆನು. ನನ್ನ ಮನುಷ್ಯತ್ವದ ದೋಷದಿಂದ ಈ ಗ್ರಂಥದ ಪರಿಷ್ಕರಣದಲ್ಲಿ ಮತ್ತು ಟೀಕಿನಲ್ಲಿ ಏನಾದರೂ ಪ್ರಮಾದಗಳಾಗಿರಬಹುದು. ಅಂಥದ್ದೇನಾದರೂ ಕುಂದುಕೊರತೆಗಳು ಕಂಡುಬಂದರೆ ಅಭಿಜ್ಞರು ದಯವಿಟ್ಟು ಅವುಗಳನ್ನು ನನ್ನ ಲಕ್ಷ್ಯಕ್ಕೆ ತರಬೇಕು. ಕ್ರಿ. ೧೯೨೫ರ ಮೊದಲನೆ ಮುದ್ರಣವನ್ನು ಈಗ ಮತ್ತೆ ಪರಿಶೀಲಿಸಿ ಎಷ್ಟೋ ಕಡೆ ಅಗತ್ಯವಾದ ಕೆಲಕೆಲವು ತಿದ್ದುಪಾಡುಗಳನ್ನು ಮಾಡಿದ್ದೇನೆ. ಇದರಂತೆ ಇನ್ನೂ ಉಳಿದಿರುವ ಕುಂದುಕೊರತೆಗಳನ್ನು ಅದನ್ನು ತೋರಿಸಿದವರ ಉಪಕಾರಸ್ಮರಣೆಯೊಂದಿಗೆ ಮುಂದೆ ಸರಿಮಾಡಿಕೊಳ್ಳುತ್ತೇನೆ.

ಈ ಟಿಪ್ಪಣಿಯೆಂಬ ಸುವರ್ಣದ ಬಣ್ಣದ ಹೆಚ್ಚುಗಾರಿಕೆಯನ್ನು ಕಣ್ಣಿಗೆ ಕಟ್ಟಿದಂತೆ ಎತ್ತಿ ಹಿಡಿಯುವದಕ್ಕೆ ಇದು ಮೊದಲನೆ ಸಲ ಹೊರಕ್ಕೆ ತಲೆ ಇಡುತ್ತಲೆ ಅನೇಕ ಪತ್ರಿಕಾಕರ್ತರು ಹೊರಪಡಿಸಿರುವ ಶ್ಲಾಘನೆಗಳೂ ಇವೆಲ್ಲವುಗಳ ತಲೆಮಣಿಯಾಗಿ ಮೈಸೂರು ಸರಕಾರದವರು ದೇವರಾಜ ಬಹದ್ದೂರರವರ ಧರ್ಮನಿಧಿಯಿಂದ ಇದಕ್ಕೆ ಬಹುಮಾನವನ್ನು ದಯಪಾಲಿಸಿರುವದೂ ಎದ್ದು ಕಾಣುವ ಒರೆಗಲ್ಲುಗಳಾಗಿವೆ. ಶ್ರೀಯುತ ತವನಪ್ಪನವರ ಬ್ರಹ್ಮಪ್ಪನವರೆಂಬ ಸುಪ್ರಸಿದ್ಧ ಸದ್ಗೃಹಸ್ಥರು ಪ್ರಸಿದ್ಧಮಾಡಿದ ಇದರ ಮೊದಲನೆ ಮುದ್ರಣವನ್ನೆಲ್ಲ ವಾಚಕರು ಆದರದಿಂದ ಬರಮಾಡಿಕೊಂಡದ್ದನ್ನು ನೋಡಿ ನನ್ನ ಅನೇಕಗ್ರಂಥಗಳ ಪ್ರಕಾಶಕರೂ ನನ್ನ ಎಲ್ಲ ಪುಸ್ತಕಗಳ ಮಾರಾಟದ ಕರ್ತರೂ ಎಸ್.ಎಸ್.ಎನ್. ಬುಕ್‌ಡಿಪೊ ಯಜಮಾನರು ಆದ ಚಿ॥ ಎಂ. ರಾಮರಾಯರು ಕನ್ನಡಿಗರ ಸೇವೆಗಾಗಿ ಹೊರಕ್ಕೆ ತಂದಿರುವ ಈ ಎರಡನೆ ಮುದ್ರಣವು ಇನ್ನೂ ಚೆನ್ನಾಗಿ ಬೆಳಕಿಗೆ ಬರಲೆಂದು ಹಾರಯಿಸುತ್ತೇನೆ.

ಬೆಂಗಳೂರು

ದೀಪಾವಳಿ, ಧಾತು ಸಂವತ್ಸರ — ಹೊಸಕೆರೆ ಚಿದಂಬರಯ್ಯ

1936

**ಟಿಪ್ಪಣಿ:**

ಈ ಮುನ್ನುಡಿಗೆ ಕೊಟ್ಟಿರುವ ಉಪಶೀರ್ಷಿಕೆಗಳು ಸಂಪಾದಕನದು ಲೇಖಕರದ್ದಲ್ಲ. ಹೊಚಿ ಅವರು ಪುಟಸಂಖ್ಯೆಗಳನ್ನು ಪಠ್ಯಬಿಟ್ಟು ಬೇರೆ ವಿಷಯಗಳಿಗೆ ಕೊಡುವಾಗ ರೋಮನ್ ಅಂಕಿಗಳನ್ನು ಬಳಸದೆ ಕನ್ನಡದ ಅಕ್ಷರಗಳನ್ನು (ಸ್ವರ-ವ್ಯಂಜನ) ಬಳಸಿರುವುದು ಗಮನಿಸಬೇಕು. ಅನೇಕ ವಿನೂತನ ಅಂಶಗಳು ಇಲ್ಲಿವೆ ಆ ಪೈಕಿ ಇದೊಂದು.

ಅನುವಾದಕ

# ಸಂಪಾದಕ ಮತ್ತು ಗದ್ಯಾನುವಾದಕನ ಮಾತು

## ಕನ್ನಡದಲ್ಲಿ ಅನುಭವಾಮೃತದ ಜನಪ್ರಿಯತೆ:

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದ್ವೈತ ತತ್ತ್ವವನ್ನು ನಿರೂಪಿಸಿರುವ ಕಾವ್ಯ ಗ್ರಂಥಗಳಲ್ಲಿ ಮಹಲಿಂಗರಂಗನ ಅನುಭವಾಮೃತ ಕಾವ್ಯಕ್ಕೆ ಸರಿಸಾಟಿಯಾದ ಕಾವ್ಯ ಇನ್ನೊಂದಿಲ್ಲ. ಇದರ ಜನಪ್ರಿಯತೆ ಎಷ್ಟಿದೆ ಎಂದರೆ, ಸರ್ವಜ್ಞವಚನ, ಸೋಮೇಶ್ವರ ಶತಕ, ಕನಕದಾಸರ ಹರಿಭಕ್ತಿಸಾರ, ಪುರಂದರರ ಕೀರ್ತನೆ, ಕುಮಾರವ್ಯಾಸಭಾರತ, ಜೈಮಿನಿಭಾರತ, ತೊರವೆ ರಾಮಾಯಣದ ಕಾವ್ಯಗಳ ಹಾಗೆ ಜನರಬಾಯಲ್ಲಿ ನಲಿದಾಡುತ್ತಿರುವ ಕಾವ್ಯಗಳಲ್ಲಿ ಇದೂ ಒಂದಾಗಿದೆ. ೧೯ನೇ ಮತ್ತು ೨೦ನೇ ಶತಮಾನದ ಪಠ್ಯಗ್ರಂಥಗಳಲ್ಲಿ ತಪ್ಪದೆ ಅನುಭವಾಮೃತದ ಪದ್ಯಗಳು ಇರುತ್ತಿದ್ದವು. ವಿದ್ಯಾರ್ಥಿಗಳಿಗೆ ಕಂಠಪಾಠವಾಗಿರುತ್ತಿತ್ತು. ನಾಡಿನ ನಾನಾಭಾಗಗಳಲ್ಲಿ ಇದರ ಹತ್ತಾರು ಹಸ್ತಪ್ರತಿಗಳು ದೊರೆಯುತ್ತವೆ. ಕನ್ನಡದ ಮೊದಲ ಪಠ್ಯವೆನ್ನಿಸಿದ ಪ್ರಾಕ್ಕಾವ್ಯಮಾಲಿಕೆಯಲ್ಲಿ ಅನುಭವಾಮೃತದ ಹತ್ತಾರು ಪದ್ಯಗಳು ಪ್ರಕಟವಾಗಿವೆ. ಪದ್ಯಸಾರ ಹತ್ತಾರುವರ್ಷ ಪಠ್ಯವಾದ ಗ್ರಂಥವಾಗಿದ್ದು ಅದರಲ್ಲಿ (೧೯ನೇ ಶತಮಾನದ ಅಂತ್ಯದಲ್ಲಿ ಹಾಗೂ ೨೦ನೇ ಶತಮಾನದ ಪ್ರಾರಂಭದಲ್ಲಿ) ಅನುಭವಾಮೃತದ ಪದ್ಯಗಳಿದ್ದವು. ಈಚಿನ ಪಠ್ಯಗಳಲ್ಲಿ ಎಷ್ಟೋ ಶ್ರೇಷ್ಠಕವಿಗಳ ಪದ್ಯಗಳು ಬಿಟ್ಟುಹೋದಹಾಗೆ ಅನುಭವಾಮೃತದ ಪದ್ಯಗಳು ಬಿಟ್ಟುಹೋಗಿವೆ.

ಆದರೆ ಇಂದೂ ಜನರನಾಲಿಗೆಯಮೇಲೆ ಸುಳಿದಾಡುತ್ತಿರುವ 'ಸುಲಿದ ಬಾಳೆಯಣ್ಣಿನಂದದಿ' ಪದ್ಯ ಅದರ ಜನಪ್ರಿಯತೆ ಉಳಿದಿರುವುದಕ್ಕೆ ಸಾಕ್ಷಿಯಾಗಿದೆ. ಅನುಭವಾಮೃತವು ಕನ್ನಡದಲ್ಲಿ ಮೊದಲು ಅಚ್ಚಾದುದು ಮೈಸೂರು ಅರಮನೆಯ ಕಲ್ಲಚ್ಚಿನ ಮುದ್ರಣಾಲಯದಲ್ಲಿ ೧೮೪೦ರಲ್ಲಿ. ಅಲ್ಲಿಂದೀಚೆಗೆ ೧೯ ಮತ್ತು ೨೦ನೇ ಶತಮಾನದಲ್ಲಿ ಅನೇಕ ಮುದ್ರಣಗಳನ್ನು ಕಂಡಿದೆ. ೨೦ನೇ ಶತಮಾನದಲ್ಲಿ ಕುಮಾಂಡೂರು ರಾಮಸ್ವಾಮಯ್ಯಂಗಾರ್ ರವರು, ತಿರುಮಲೆ ಶ್ರೀನಿವಾಸಾಚಾರ್ಯ, ಮಿರ್ಲೆ ನಂಜುಂಡಯ್ಯನವರ ಮೂಲ–ತಾತ್ಪರ್ಯಸಹಿತ ಆವೃತ್ತಿಗಳು ಜನಪ್ರಿಯವಾಗಿದ್ದು, ಮರು ಮುದ್ರಣಗಳನ್ನು ಕಂಡಿವೆ. ೨೧ನೇ ಶತಮಾನದಲ್ಲಿ ೨೦೦೪ರಲ್ಲಿ ಬಿದಿರಹಳ್ಳಿ ನರಸಿಂಹಮೂರ್ತಿ ಅವರು ಮೂಲವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ೨೦೧೧ರಲ್ಲಿ, ಬಿ.ಎಸ್. ಸಣ್ಣಯ್ಯನವರು ಸಂವಹನಪ್ರಕಾಶನದಿಂದ ಅನುಭವಾಮೃತವನ್ನು ಮೂಲ ಮತ್ತು ತಾತ್ಪರ್ಯಸಹಿತ ಪ್ರಕಟಿಸಿದ್ದಾರೆ. ಇವರಿಬ್ಬರೂ ಹೊಸಕೆರೆ ಚಿದಂಬರಯ್ಯನವರ ಪಠ್ಯವನ್ನೇ ಯಥಾವತ್ತಾಗಿ ಕೊಟ್ಟಿದ್ದಾರೆ. ಅರಾಸೇ ಅವರು ಅನುವಾದದೊಡನೆ ಕೆಲವು ಪಾಠಾಂತರಗಳಸಹಿತ ೧೯೯೯ರಲ್ಲಿ ಅನುಭವಾಮೃತವನ್ನು ಹೊರತಂದಿದ್ದಾರೆ. ಹಲವಾರು ವಿಮರ್ಶಾ ಗ್ರಂಥಗಳೂ,

ಲೇಖನಗಳೂ ಈ ಗ್ರಂಥವನ್ನು ಕುರಿತು ಪ್ರಕಟವಾಗಿವೆ. (ವಿವರಗಳಿಗೆ ಅನುಬಂಧ–೪, ಕನ್ನಡದಲ್ಲಿ ಅನುಭವಾಮೃತ ಸಾಹಿತ್ಯ ನೋಡಿ).

ಈ ಎಲ್ಲ ಅನುಭವಾಮೃತ ಕಾವ್ಯ ಪ್ರಕಟಣೆಗಳಲ್ಲಿ ವಿದ್ವತ್ಪೂರ್ಣವಾಗಿ, ಗ್ರಂಥಸಂಪಾದನಾ ಶಾಸ್ತ್ರರೀತ್ಯ ಶುದ್ಧಪಾಠದಿಂದ ಸರ್ವಾರ್ಥಸಂದರ್ಶಿನಿ ಎಂಬ ಟೀಕೆಯೊಡನೆ ವಿಸ್ತಾರವಾದ ಪೀಠಿಕೆಯೊಡನೆ ಪ್ರಕಟವಾಗಿರುವ ಹೊಸಕೆರೆ ಚಿದಂಬರಯ್ಯನವರ ಅನುಭವಾಮೃತ ಪ್ರಕಟಣೆ ಹಲವು ದೃಷ್ಟಿಗಳಿಂದ ಶ್ರೇಷ್ಠ ಪ್ರಕಟಣೆಯಾಗಿದೆ. ಹೊಸಕೆರೆ ಚಿದಂಬರಯ್ಯನವರ ಅದ್ವೈತಪಾಂಡಿತ್ಯಕ್ಕೆ, ಶಾಸ್ತ್ರಗ್ರಂಥದ ಪ್ರಕಟನಾರೀತಿಗೆ ಶ್ರೇಷ್ಠ ಮಾದರಿಯಾಗಿದೆ.

ಚಿದಂಬರಯ್ಯನವರ ಈ ಗ್ರಂಥವನ್ನು ೧೯೨೫ರಲ್ಲಿ ದಾವಣಗೆರೆಯ ಬ್ರಹ್ಮಪ್ಪ ತವನಪ್ಪನವರು ಪ್ರಕಟಿಸಿದರು. ಎರಡನೇ ಮುದ್ರಣವನ್ನು ಬೆಂಗಳೂರಿನ ಎಸ್.ಎಸ್.ಎನ್. ಬುಕ್ ಡಿಪೋ ಮಾಲೀಕರಾದ ಎಂ. ರಾಮರಾಯರು ೧೯೩೬ರಲ್ಲಿ ಪ್ರಕಟಿಸಿದರು. ಎರಡನೇ ಮುದ್ರಣಕಾಲದಲ್ಲಿ ಚಿದಂಬರಯ್ಯನವರೇ ಇದನ್ನು ಸ್ವತಃಪರಿಷ್ಕರಿಸಿದರು. ಈ ಎರಡನೇ ತಿದ್ದಿದ ಮುದ್ರಣವೇ ಯಥಾವತ್ತಾಗಿ ಮೂರನೇಸಲ ೧೯೫೦ರಲ್ಲಿ ಪ್ರಕಟವಾಯಿತು. ಚಿದಂಬರಯ್ಯನವರು ೧೯೩೮ರಲ್ಲಿ ನಿಧನರಾಗಿದ್ದರಿಂದ, ಮತ್ತೆ ಅಲ್ಲಿಂದೀಚೆಗೆ ೬೦ ವರ್ಷಗಳಿಂದ ಈ ಗ್ರಂಥ ಮರು ಮುದ್ರಣವಾಗದೆ, ವಿದ್ವತ್ಪೂರ್ಣವಾದ ಶುದ್ಧ ಪಾಠದ ಪ್ರತಿಯಾಗಿ ಹೊಸಕೆರೆ ಚಿದಂಬರಯ್ಯನವರ ಸಂಪಾದಿಸಿದ ಅನುಭವಾಮೃತ ಕಾವ್ಯವನ್ನು ಜನರು ನಿರಂತರವಾಗಿ ಅಪೇಕ್ಷಿಸುತ್ತಲೇ ಇದ್ದರು. ಆದರೆ ಯಾವ ಪ್ರಕಾಶಕರೂ ಪ್ರಕಟಿಸಲು ಮನಸ್ಸು ಮಾಡಿರಲಿಲ್ಲ. ಇದೀಗ ಅವರು ಬರೆದ ಟೀಕೆಯೊಡನೆ ಮೂಲಸಹಿತ ಹೊಸದಾಗಿ ಗದ್ಯಾನುವಾದಮಾಡಿ ಅನುಬಂಧಗಳೊಡನೆ ಈಗ ಪ್ರಕಟವಾಗುತ್ತಿದೆ.

ಹೊಸಕೆರೆ ಚಿದಂಬರಯ್ಯನವರ ಜೀವನಚರಿತ್ರೆಯೊಂದನ್ನು ಬರೆದುಕೊಡಿ ಎಂದು ಉಲುಚುಕಮ್ಮೆ ಬ್ರಾಹ್ಮಣ ಸಂಘದವರು ಕೋರಿದಾಗ ಈ ಗ್ರಂಥದ ಬಗ್ಗೆ ವಿಶೇಷ ಆಸಕ್ತಿ ಉಂಟಾಯಿತು. ಚಿದಂಬರಯ್ಯನವರ ಜೀವನ ಮತ್ತು ಅವರ ಕೃತಿಗಳ ಸಂಗ್ರಹದ ಬಗ್ಗೆ ಅಧ್ಯಯನಕ್ಕೆ ತೊಡಗಿ, ಒಂದು ಜೀವನ ಚರಿತ್ರೆ ಗ್ರಂಥ ಬರೆದುಕೊಟ್ಟಿದ್ದನ್ನು ಅವರು ಪ್ರಕಟಿಸಿದ್ದಾರೆ. ಆಗ ಅವರು ಕನ್ನಡಕ್ಕೆ ಕೊಟ್ಟ ಕೊಡುಗೆಗಳನ್ನು ಕಂಡು ದಿಗ್ಭ್ರಾಂತನಾದೆ. ಇಷ್ಟು ಶ್ರೇಷ್ಠ ವಿದ್ವಾಂಸರ ಕೃತಿಗಳು ಜನಕ್ಕೆ ದೊರೆಯುತ್ತಿರಲಿಲ್ಲವಲ್ಲಾ ಎಂದು ಚಿಂತಿಸಿ ಮರುಮುದ್ರಣಕ್ಕೆ ಪ್ರಕಾಶಕರನ್ನು ಕೇಳಿಕೊಂಡಾಗ ಆರ್.ವಿ.ಐ.ಎಂ. ಕಾಲೇಜಿನ ಕನ್ನಡ ಸಿಂಚನ ವೇದಿಕೆಯಿಂದ ಟಿ.ವಿ. ರಾಜು ಅವರು ಭರತಖಂಡದ ಜೀವಜ್ಯೋತಿಗಳು ಗ್ರಂಥವನ್ನು ಪ್ರಕಟಿಸಿ ಚಿದಂಬರಯ್ಯನವರ ಮೊಮ್ಮಗ ಶ್ರೀ ಚಿದಂಬರನನ್ನು ಸನ್ಮಾನಿಸಿದರು. ಪ್ರಸಿದ್ಧ ಐ.ಬಿ.ಎಚ್ ಪ್ರಕಾಶನದ ಸಂಜಯ ಶ್ರೀ ಅಡಿಗರು ಚಿದಂಬರಯ್ಯನವರ ಅದ್ವಿತೀಯ ಸ್ವತಂತ್ರ ಗ್ರಂಥಗಳಲ್ಲಿ ಒಂದಾದ ಆರ್ಯಧರ್ಮ ಪ್ರದೀಪವೆಂಬ ಬೃಹತ್ ಗ್ರಂಥವನ್ನು

ಅಚ್ಚುಕಟ್ಟಾಗಿ ಪ್ರಕಟಿಸಿದರು. ಹೊಸಕೆರೆ ಚಿದಂಬರಯ್ಯ ಸಂಸ್ಮರಣ ಸಮಿತಿ ಟ್ರಸ್ಟ್‌ನವರು ೨೦೧೨ರಲ್ಲಿ ಚಿದಂಬರಯ್ಯ ನವರು ರಚಿಸಿದ ಕೀರ್ತನೆಗಳ ಸಂಗ್ರಹ ಭಕ್ತಿಗೀತಾವಳಿ ಪ್ರಕಟಿಸಿದರು. ಈ ನಡುವೆ ಶ್ರೀಮತಿ ಎನ್. ಮೀರಾಬಾಯಿ ಎಂಬುವರು ತಮ್ಮ ತಂದೆ ಶ್ರೀ ಆರ್. ಜೈಮುನಿರಾವ್ ಜಾದವ್ ಅವರ ಜೀವನ ಚರಿತ್ರೆಯನ್ನು ಬರೆದು ಪ್ರಕಟಿಸುವಾಗ ಅವರ ತಂದ ಪ್ರಕಟಿಸಿದ್ದ ಹೊಸಕೆರೆ ಚಿದಂಬರಯ್ಯನವರ 'ಮನಸ್ಸಿಗುಪದೇಶ'ವೆಂಬ ಸಾಂಗತ್ಯ ಕೃತಿಯನ್ನು (ಸಮರ್ಥ ರಾಮದಾಸರ ಮರಾಠಿಯ ಪ್ರಸಿದ್ಧ ಮನಾಚೆಶ್ಲೋಕಗಳ ಪದ್ಯಾನುವಾದ) ಮೂಲದೊಡನೆ ಪ್ರಕಟಿಸಿದರು. (೨೦೧೧) ಅಧ್ಯಾತ್ಮ ಪ್ರಕಾಶ ಕಾರ್ಯಾಲಯದವರು ಚಿದಂಬರಯ್ಯನವರ ಗೀತಾರ್ಥಚಂದ್ರಿಕೆ (೨೦೦೫) ಮತ್ತು ಭಗವದ್ಗೀತಾರ್ಥ ಸಾರ (೨೦೦೨) ಗ್ರಂಥಗಳನ್ನು ಪುನರ್ಮುದ್ರಿಸಿದರು. ಈ ನಡುವೆ ಅದ್ವೈತ ವೇದಾಂತ ಪ್ರಕಾಶನದ ಮೂಲಕ ಶ್ರೀ ಸಿ. ರಾಮರಾವ್ ಅವರು ಚಿದಂಬರಯ್ಯ ನವರ 'ವೇದಾಂತದ ರೂಪರೇಖೆ, ಬ್ರಹ್ಮಸೂತ್ರಗಳ ಬೆಳಕು, ವೇದಾಂತ ಜೀವಾಳ ವಿದ್ಯಾರಣ್ಯರ ಜೀವನ್ಮುಕ್ತಿ ವಿವೇಕ, ಶ್ರೀರಾಮಮಹಿಮೆ ಗ್ರಂಥಗಳನ್ನು ಪುನರ್ಮುದ್ರಿಸಿದ್ದಾರೆ.

ಈ ದಿಸೆಯಲ್ಲಿ ಮಹಲಿಂಗರಂಗನ ಅನುಭವಾಮೃತ ಗ್ರಂಥವು ಈಗ ಹೊ.ಚಿ. ಅವರ ಟೀಕಿನೊಡನೆ ಮೂಲದ ಜತೆಗೆ ಗದ್ಯಾನುವಾದದೊಡನೆ ಪರಿಷ್ಕೃತವಾಗಿ ವಿಶೇಷ ಸೇರ್ಪಡೆಗಳಿಂದ ಈಗ ಹೊರಬರುತ್ತಿದೆ. ಇಷ್ಟಾದರೂ ಇನ್ನೂ ಅವರ 'ಕೀರ್ತನಕಂಠಾಭರಣ' ವಿದ್ಯಾರಣ್ಯ ಕಾವ್ಯ ಮೊದಲಾದ ಶ್ರೇಷ್ಠ ಗ್ರಂಥಗಳು ಮರು ಮುದ್ರಣವಾಗುವುದು ಅತ್ಯಗತ್ಯವಾಗಿದೆ. ಇವೂ ಕ್ರಮೇಣ ಆಗಬಹುದೆಂಬ ಆಶಾಭಾವನೆ ಇದೆ.

## ಪರಿಷ್ಕರಣ ವಿಚಾರ

ಈ ಗ್ರಂಥದಲ್ಲಿ ಮಾಡಲಾದ ಪರಿಷ್ಕರಣ ಕಾರ್ಯದಲ್ಲಿ ಮುಖ್ಯವಾದ ಸೇರ್ಪಡೆಗಳನ್ನು, ಮಾರ್ಪಾಟುಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ತಿಳಿಸಿದೆ.

**ಪದ್ಯಗಳ ಅಚ್ಚಿನ ವಿನ್ಯಾಸ:**

೧. ಹೊ.ಚಿ. ಅವರು ಅನುಭವಾಮೃತ ಕಾವ್ಯದ ಷಟ್ಪದಿಪದ್ಯಗಳನ್ನು ೬ ಸಾಲುಗಳ ಬದಲಾಗಿ ೪ ಸಾಲುಗಳಲ್ಲಿ ಅಚ್ಚು ಮಾಡಿಸಿದ್ದಾರೆ. ಷಟ್ಪದಿಯ ಮೊದಲೆರಡು ಸಾಲುಗಳನ್ನು ೧ ಸಾಲಾಗಿ, ೪, ೫ನೇ ಸಾಲುಗಳನ್ನು ಒಂದು ಸಾಲಾಗಿ ಅಚ್ಚಿಸಿದ್ದಾರೆ. ૩ನೇ ಸಾಲಿನ ಕೊನೆಗೆ ಒಂದು ಗೀಟನ್ನು ಹಾಕಿ ಆರನೇ ಸಾಲಿನ ಕೊನೆಗೆ ಪದ್ಯದ ಸಂಖ್ಯೆ ಸೇರಿಸಿ (ಉದಾ: ॥೨೨॥) ಕೊಟ್ಟಿದ್ದಾರೆ.

ಆದರೆ ಈ ಮುದ್ರಣದಲ್ಲಿ ೬ ಸಾಲುಗಳನ್ನಾಗಿ ಪದ್ಯಗಳನ್ನು ಅಚ್ಚುಮಾಡಿದೆ. ૩ನೇ ಸಾಲಿನ ಕೊನೆಗೆ ಒಂದು ಗೀಟನ್ನು, ೬ನೇ ಸಾಲಿನ ಕೊನೆಗೆ ೨ ಗೀಟನ್ನೂ ಹಾಕಿದೆ. ಪದ್ಯದ ಸಂಖ್ಯೆಯನ್ನು ೬ನೇ ಸಾಲಿನ ಕೊನೆಯಲ್ಲಿ ಪ್ರತ್ಯೇಕವಾಗಿ ಸೂಚಿಸಿದೆ.

**ಸಂಖ್ಯೆಗಳ ಬಳಕೆ:**

೨. ಪೀಠಿಕೆ ಪುಟಗಳಿಗೆ ಅಆಇಈಉಊಋೠಌೡಎಏಐಒಓಔ ಕಖಗಘಙ ಇತ್ಯಾದಿ ಸ್ವರ ಮತ್ತು ವ್ಯಂಜನಗಳ ಮೂಲಾಕ್ಷರಗಳನ್ನು ಕೊಟ್ಟಿದ್ದಾರೆ. ವಿದೇಶೀ ರೋಮನ್ ಚಿಕ್ಕ ಅಂಕಿಗಳನ್ನು (i ii iii ಇತ್ಯಾದಿ) ಬಳಸದೆ ಕನ್ನಡ ಅಕ್ಷರಗಳನ್ನು ಪೀಠಿಕಾಭಾಗಕ್ಕೆ ಮೊದಲ ಬಾರಿಗೆ ತಮ್ಮ ಗ್ರಂಥಗಳಲ್ಲಿ ಬಳಸಿದವರು ಚಿದಂಬರಯ್ಯನವರು. ಇದನ್ನು ನಮ್ಮ ಲೇಖಕರಾಗಲಿ, ಮುದ್ರಕರಾಗಲಿ ಗಮನಿಸಿಲ್ಲ. ಇದೊಂದು ವಿನೂತನ ಬದಲಾವಣೆ, ಕನ್ನಡ ಅಭಿಮಾನಕ್ಕೆ ಸಾಕ್ಷಿ. ಪದ್ಯಪೂರ್ವ ಪುಟಸಂಖ್ಯೆ ಸೂಚಿಸಲು ಇದನ್ನು ಉಳಿಸಿಕೊಂಡಿದೆ.

**ಪಾಠಾಂತರಗಳು:**

೩. ಪಾಠಾಂತರಗಳನ್ನು ಕೊಡುವಾಗ ಈಗಿನ ಪದ್ಧತಿಯಂತೆ ಪದಗಳಿಗೆ ಅಂಕಿಗಳನ್ನು ಬಳಸಿ, ಅಡಿಟಿಪ್ಪಣಿಯಲ್ಲಿ ಪಾಠಾಂತರಗಳನ್ನು ಆವರಣ ಚಿಹ್ನೆಯಲ್ಲಿ ಸೂಚಿಸಿಲ್ಲ; ವಿವರಣೆ ಮೂಲಕ ತಿಳಿಸಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿ ಈಗಿನಹಾಗೆ ಗ್ರಂಥ ಸಂಪಾದನಾಶಾಸ್ತ್ರ ಬೆಳೆದಿರಲಿಲ್ಲ. ಉದಾ: 'ಮಗ್ನಚಿತ್ತ' ಎಂಬಲ್ಲಿ ಕೆಲವು ಪ್ರತಿಗಳಲ್ಲಿ ಪೂರ್ಣಚಂದ್ರ ಎಂದಿದೆ. (ಅ–೧, ಪ–೨) ಎಂದು ಕೊಟ್ಟಿದ್ದಾರೆ. ಅವರ ಟೀಕೆಯನ್ನು ಹಾಗೆಯೇ ಪುನರ್ಮುದ್ರಿಸಿರುವುದರಿಂದ ಪಾಠಾಂತರಗಳನ್ನು ಅದೇ ರೀತಿ ಉಳಿಸಿಕೊಂಡಿದೆ.

**ಶಬ್ದಾರ್ಥಗಳು:**

೪. ಪದ್ಯದ ಕೆಳಗಿನ ಟೀಕೆಯಲ್ಲಿ ಚಿದಂಬರಯ್ಯನವರು ಶಬ್ದಾರ್ಥ, ಪಾಠಾಂತರ, ಟಿಪ್ಪಣಿ, ವಿವರಣೆಗಳನ್ನು ಉದ್ದಕ್ಕೂ ಕೊಟ್ಟಿದ್ದಾರೆ, ಪ್ರತ್ಯೇಕಿಸಿಲ್ಲ. ಈ ಆವೃತ್ತಿಯಲ್ಲಿ ಶಬ್ದಾರ್ಥ, ಟಿಪ್ಪಣಿ, ಪಾಠಾಂತರ ಎಂಬುದಾಗಿ ಬೇರೆ ಬೇರೆ ಶೀರ್ಷಿಕೆಗಳಲ್ಲಿ ಪ್ರತ್ಯೇಕಿಸಿ ಕೊಡಲಾಗಿದೆ.

**ಬಿಟ್ಟ ಪದ್ಯಗಳಿಗೆ ಟೀಕೆ:**

೬. ೯೪ ಪದ್ಯಗಳಿಗೆ ಹೊಸಕೆರೆ ಚಿದಂಬರಯ್ಯನವರು ಆ ಪದ್ಯಗಳ ಅರ್ಥ ಸುಲಭವೆಂದು ಭಾವಿಸಿ ಆ ಪದ್ಯಗಳ ಬಗ್ಗೆ ಏನನ್ನೂ ಬರೆದಿಲ್ಲ. ಅವುಗಳಿಗೆಲ್ಲಾ ಅರ್ಥ, ಟಿಪ್ಪಣಿ, ಪಾಠಾಂತರಗಳನ್ನು ಇಲ್ಲಿ ಶಕ್ತ್ಯಾನುಸಾರ ಬರೆದಿದ್ದೇನೆ. ಈ ರೀತಿ ಅನುವಾದಕನಾಗಿ ನಾನು ಬರೆದ ಶಬ್ದಾರ್ಥಗಳು ಇತ್ಯಾದಿಗಳಿಗೆ * ನಕ್ಷತ್ರ ಚಿಹ್ನೆ ಹಾಕಿದ್ದೇನೆ. "ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಟಿಪ್ಪಣಿ ಅನುವಾದಕನದು ಎಂದು ಸೂಚಿಸಿದ್ದೇನೆ.

**ಚಿದಂಬರಯ್ಯನವರ ಟೀಕೆ ಇಲ್ಲದ ಪದ್ಯಗಳ ಸಂಖ್ಯೆಗಳು:**

**ಅಧ್ಯಾಯ – ೧**

(೧–೧೯) – (೧–೨೬) – (೧–೩೮) – (೧–೫೪) = ೪ ಪದ್ಯಗಳು

**ಅಧ್ಯಾಯ – ೨**

(೨–೬) ಕ– (೨–೧೪) – *೨–೧೯) – (೨–೨೮) – (೨–೪೧) – (೨–೪೯) – (೨–೬೬) – (೨––೬೯) – (೨–೭೧) – (೨–೮೭) – (೨–೧೦೨) = ೧೧ ಪದ್ಯಗಳು

**ಅಧ್ಯಾಯ – ೩**

(೩–೨) – (೩–೧೬) – (೩–೨೪) – (೩–೪೨) – (೩–೭೩) – (೩–೯೯) – (೩–೧೦೦) – (೩–೧೦೧) – (೩–೧೧೯) – (೩–೧೪೩) – ೧೦ ಪದ್ಯಗಳು

**ಅಧ್ಯಾಯ – ೪**

(೪–೨) – (೪–೧೩) – (೪–೧೭) – (೪–೪೨) – (೪–೭೧) = ೫ ಪದ್ಯಗಳು

**ಅಧ್ಯಾಯ – ೫**

(೫–೨೮) – (೫–೫೫) = ೨ ಪದ್ಯಗಳು

**ಅಧ್ಯಾಯ – ೬**

(೬–೨೨) – (೬–೩೧) – (೬–೭೩) – (೬––೭೪) – (೬–೮೧) – (೬–೮೨) = ೭ ಪದ್ಯಗಳು

**ಅಧ್ಯಾಯ – ೭**

(೭–೪) = ೧ ಪದ್ಯ

**ಅಧ್ಯಾಯ – ೮**

(೮–೧೭) – (೮–೩೧) – (೮–೩೫) = ೩ ಪದ್ಯಗಳು

**ಅಧ್ಯಾಯ – ೯**

(೯–೨೦) – (೯೨೮) – (೯–೨೯) – (೯–೩೧) – (೯–೩೪) – (೯–೩೮) – (೯–೩೯) – (೯–೪೨) – (೯–೪೬) = ೯ ಪದ್ಯಗಳು

### ಅಧ್ಯಾಯ – ೧೦

(೧೦-೫) – (೧೦-೭) – (೧೦-೮) – (೧೦-೧೫) – (೧೦-೧೭) – (೧೦-೨೧) (೧೦-೨೬) – (೧೦-೨೮) – (೧೦-೨೯) – (೧೦-೩೩) – (೧೦-೩೮) – (೧೦-೪೨) (೧೦-೪೫) – (೧೦-೪೭) – (೧೦-೫೧) – (೧೦-೭೮) – ( ೧೦-೭೯) – (೧೦-೮೦) – (೧೦-೧೧೧) – (೧೦-೧೧೩) – (೧೦-೧೨೬) = ೨೬ ಪದ್ಯಗಳು

### ಅಧ್ಯಾಯ – ೧೧

(೧೧-೩) – (೧೧-೫) – (೧೧-೬) – (೧೧-೧೧) – (೧೧-೧೫) – (೧೧-೧೬) – (೧೧-೧೭) (೧೧-೧೯) – (೧೧-೨೦) – (೧೧-೨೨) – (೧೧-೨೩) – (೧೧-೨೫) – (೧೧-೨೬) – (೧೧-೨೭)

ಒಟ್ಟಿನಲ್ಲಿ ೮೦೦ ಪದ್ಯಗಳ ಪೈಕಿ ಮೇಲ್ಕಾಣಿಸಿದಂತೆ ೯೫ ಪದ್ಯಗಳಿಗೆ ಚಿದಂಬರಯ್ಯನವರ ಟೀಕೆ ಇಲ್ಲ.

೭. ಪದ್ಯಗಳಲ್ಲಿ ಅರ್ಥವತ್ತಾಗಿ . , : ; " " ಮೊದಲಾದ ಚಿಹ್ನೆಗಳನ್ನು ಚಿದಂಬರಯ್ಯನವರು ಬಳಸಿದ್ದಾರೆ. ಇದು ಕಾವ್ಯ ಓದುಗರಿಗೆ ಕಾವ್ಯವನ್ನು ಅರ್ಥಮಾಡಿ ಕೊಳ್ಳಲು ಸಹಕಾರಿಯಾಗಿದೆ. ಆದಕಾರಣ ಮೂಲಪಠ್ಯದಲ್ಲಿ ಹಾಗೆಯೇ ಲೇಖನ ಚಿಹ್ನೆಗಳನ್ನು ಉಳಿಸಿಕೊಂಡಿದೆ. ಅ.ರಾ.ಸೇ., ಬಿ.ಎಸ್. ಸಣ್ಣಯ್ಯ ಮೊದಲಾದವರು ಚಿದಂಬರಯ್ಯನವರ ಗ್ರಂಥಪಠ್ಯವನ್ನೇ ಬಳಸಿಕೊಂಡಿದ್ದರೂ ಲೇಖನಚಿಹ್ನೆಗಳನ್ನು ಕೈಬಿಟ್ಟಿದ್ದಾರೆ. ಚಿದಂಬರಯ್ಯ ಪಠ್ಯವನ್ನೇ ಯಥಾವತ್ತಾಗಿ ಅಚ್ಚಿಸಿರುವ ಬಿದಿರೆಹಳ್ಳಿ ನರಸಿಂಹಮೂರ್ತಿಯವರ ಪಠ್ಯ ಪ್ರಕಟಣೆಯಲ್ಲಿ ಲೇಖನಚಿಹ್ನೆಗಳು ಉಳಿದುಕೊಂಡಿವೆ. ಈಚೆಗೆ ಆಧುನಿಕ ಗ್ರಂಥ ಸಂಪಾದಕರು ಪದ್ಯಗಳಲ್ಲಿ ಲೇಖನ ಚಿಹ್ನೆಗಳನ್ನು ಬಳಸುವುದನ್ನೇ ಬಿಟ್ಟಿದ್ದಾರೆ. ಇದು ಸೂಕ್ತವಲ್ಲ ಎಂದು ನನ್ನ ಅನಿಸಿಕೆ.

**ಕವಿಕೃತವಲ್ಲದ ಮಂಗಲಪದ್ಯಗಳು:**

೮. ಚಿದಂಬರಯ್ಯನವರು ಪಠ್ಯದ ಕೊನೆಯಲ್ಲಿ ಶ್ರೀಮಹಲಿಂಗರಂಗನಿಗೆ ಮಂಗಲ ಎಂಬ ಶೀರ್ಷಿಕೆಯಲ್ಲಿ ಕೆಲವು ಕೈಬರಹದ ಪುಸ್ತಕಗಳ ಕೊನೆಯಲ್ಲಿದ್ದ ೩ ಷಟ್ಪದಿಗಳನ್ನು ಕೊಟ್ಟಿದ್ದಾರೆ. ಅವು ಕವಿಕೃತ ಅಲ್ಲವೆಂದು ಕೈಬಿಟ್ಟಿದೆ.

**ಪೂರ್ವಕಥೆಗಳ ಅಳವಡಿಕೆ:**

೯. ಗ್ರಂಥದಲ್ಲಿ ಉಪಯೋಗವಾಗಿರುವ ಪೂರ್ವಕಥೆಗಳ ವಿವರವನ್ನು ಪರಿಶಿಷ್ಟದ ೨ನೇ ಭಾಗವಾಗಿ ಚಿದಂಬರಯ್ಯನವರು ಕೊಟ್ಟಿದ್ದಾರೆ. ಅವುಗಳನ್ನು ಆಯಾ ಪದ್ಯಗಳ ಜತೆಗೇ ಕೊಡಲಾಗಿದೆ. ಓದುಗರು ಹುಡುಕಿ ಓದಬೇಕಾಗಿಲ್ಲ.

**ಅಧ್ಯಾಯದ ಸಾರ ಅಧ್ಯಾಯದ ಕೊನೆಯಲ್ಲಿ:**

೧೦. ಗ್ರಂಥದ ಪ್ರಾರಂಭದಲ್ಲಿ ಅನುಭವಾಮೃತದ ಸಾರಸಂಗ್ರಹವೆಂದು ಪ್ರತಿ ಅಧ್ಯಾಯದ ಸಾರಾಂಶವನ್ನು ಸೊಗಸಾಗಿ ಕೊಟ್ಟಿದ್ದಾರೆ. ಅದನ್ನು ಆಯಾ ಅಧ್ಯಾಯಗಳ ಕೊನೆಗೆ ಸೇರಿಸಲಾಗಿದೆ.

**ಪಠ್ಯದಲ್ಲಿ ಶೀರ್ಷಿಕೆಗಳು:**

೧೧. ಅಧ್ಯಾಯದಲ್ಲಿ ನಿರೂಪಿತವಾದ ವಿಷಯಗಳಿಗೆ ಉಪಶೀರ್ಷಿಕೆಗಳನ್ನು ವಿವರವಾಗಿ ಪ್ರಾರಂಭದ ವಿಷಯ ಸೂಚಿಕೆಯಲ್ಲಿ ಕೊಟ್ಟಿದ್ದಾರೆ. ಇದನ್ನು ಪ್ರಾರಂಭದಲ್ಲಿ "ವಿಷಯವಿವರಣಸೂಚಿ" ಎಂಬ ಹೆಸರಿನಲ್ಲಿ ಪಟ್ಟಿರೂಪದಲ್ಲಿ ಕೊಟ್ಟಿರುವ ಜತೆಗೆ. ಆಯಾ ಪದ್ಯಗಳ ಮೇಲೆ ಪಠ್ಯದಲ್ಲಿ ಸೇರಿಸಲಾಗಿದೆ. ಉದಾ: ಗುರ್ವನುಗ್ರಹ (೧೬-೩೭) ಅಧ್ಯಾಯ-೩, ಪದ್ಯ-೧೬ ಮೂಲರೂಪ ಉಳಿಸಿದೆ. ಸರ್ವಾರ್ಥಸಂದರ್ಶಿನಿ ಟೀಕೆಯ ಶಬ್ದಾರ್ಥ ವಿವರಣೆಗಳನ್ನೇ ಪದ್ಯಾನುವಾದದಲ್ಲಿ ಬಳಸಿಕೊಂಡಿದೆ ಮತ್ತೆ ಪುಟದ ಕೆಳಗೆ ಚಿದಂಬರಯ್ಯನವರ ಟೀಕೆ ಕೊಟ್ಟಿದೆ. ಇದರಿಂದ ಓದುಗರಿಗೆ ಪುನರುಕ್ತಿ ಕಾಣಿಸುವುದು ಅನಿವಾರ್ಯವಾಗಿದೆ. ಚಿದಂಬರಯ್ಯನವರ ಟಿಪ್ಪಣಿ ಸ್ವರೂಪ ತಿಳಿಯಲು ಹಾಗೇ ಇಟ್ಟಿದೆ. ಅಚ್ಚಿನ ದೋಷಗಳನ್ನು ತಿದ್ದಿದೆ.

೧೩. ಸಾಕಷ್ಟು ಶುದ್ಧವಾಗಿ ತಪ್ಪಿಲ್ಲದೆ ಅಚ್ಚಾಗಿರುವ ಹೊಸಕೆರೆ ಚಿದಂಬರಯ್ಯನವರು ತಿದ್ದಿ ಪ್ರಕಟಿಸಿದ ೨ನೇ ಮುದ್ರಣ ಪ್ರತಿಯನ್ನು (೧೯೩೬) ಈ ಆವೃತ್ತಿಗೆ ಆಧಾರ ಪಠ್ಯವನ್ನಾಗಿ ಇಟ್ಟುಕೊಂಡಿದೆ. ಈ ಸಂದರ್ಭದಲ್ಲಿ ೨ನೇ ಮುದ್ರಣದ ಚಿದಂಬರಯ್ಯನವರ ಕಣ್ತಪ್ಪಿಸಿರುವ ಅಚ್ಚಿನ ದೋಷಗಳನ್ನು ಇಲ್ಲಿ ಸರಿಪಡಿಸಲಾಗಿದೆ.

ಉದಾ: ಪುಟ-೧೨೭ರಲ್ಲಿ ಅ-೫, ಪ-೩೪ರಲ್ಲಿ ಘೋಷಿಸುವರೀ ಭಾಗ್ಯ.....ಎಂಬ ಪಾಠವಿದೆ. ಟಿಪ್ಪಣಿಯಲ್ಲಿ ಭಾಷಿಸುವರು ಎಂಬ ಪಾಠಕ್ಕೆ ಅರ್ಥಕೊಟ್ಟಿದೆ. ಘೋಷಿಸುವರು ಎಂದು ತಿದ್ದಿದೆ. ಇತರ ಕೆಲವು ಅಚ್ಚಿನ ದೋಷಗಳನ್ನು ಗಮನಿಸಿ ತಿದ್ದಿದೆ. ಪುಟ ೪೬, ಅ-೩, ಪ-೪ ನೆಟ್ಟನಳವಡದಿರ್ದೊಡೀ-ನೆಟ್ಟನಳವಡದಿರ್ದೊಡೀ, ಪುಟ ೮೧ (ಅ-೩, ಪ-೧೨೬) ಅಪ್ಪದದೆಂತನಲು-ಅಪುದೆಂತೆನಲು, ಪುಟ ೪೫ (ಅ-೩, ಪ-೨) ಪೇರ್ಮೆಯಿಂ-ಪೆರ್ಮೆಯಿಂ ಇತ್ಯಾದಿ.

**ಆಕರಗಳನ್ನು ಸೂಚಿಸಿದೆ:**

೧೪. ಆಕರಗ್ರಂಥಗಳನ್ನು ಸೂಚಿಸುವಾಗ ಕೆಲವೆಡೆ ಗ್ರಂಥದ ಯಾವ ಭಾಗದಲ್ಲಿ ಉಲ್ಲೇಖ ಬರುತ್ತದೆ ಎಂಬುದನ್ನು ತಿಳಿಸಿಲ್ಲ. ಅವುಗಳನ್ನು ಇಲ್ಲಿ ಗುರುತಿಸಿದೆ. ಉದಾ: ೪-೪೫ರ ಟಿಪ್ಪಣಿಯಲ್ಲಿ ಮಣಿಗಣಸೂತ್ರದ=ಮಯಿಸರ್ವಮಿದಂ ಪ್ರೋಕ್ತಂ ಸೂತ್ರೇ ಮಣಿಗಣಾ ಇವ ಎಂಬ ಗೀತೋಕ್ತಿಯಂತೆ. ಇಲ್ಲಿ ಗೀತೆ ಅ-೭, ಶ್ಲೋ-೭ ಎಂದು ಗುರುತಿಸಿದೆ ಇತ್ಯಾದಿ ಈ ಎಲ್ಲ ಮಾರ್ಪಾಟುಗಳನ್ನು ಓದುಗರ ಸೌಕರ್ಯಕ್ಕಾಗಿ ಮಾಡಲಾಗಿದೆ.

## ಕೃತಜ್ಞತೆಗಳು

ಹೊಸಕೆರೆ ಚಿದಂಬರಯ್ಯನವರ ಅನುಭವಾಮೃತ ಕಾವ್ಯದ ಟೀಕೆಯೊಡನೆ ಕಾವ್ಯದ ಗದ್ಯಾನುವಾದವನ್ನು ವಿಶೇಷ ಅನುಬಂಧಗಳೊಡನೆ ಪ್ರಕಟಿಸಬೇಕು ಎಂಬುದು ನನ್ನ ಬಹುದಿನಗಳ ಆಸೆಯಾಗಿತ್ತು. ಏಕೆಂದರೆ ಚಿದಂಬರಯ್ಯನವರ ಶ್ರೇಷ್ಠ ಸಂಪಾದನಗ್ರಂಥವನ್ನು ೧೯೫೦ರನಂತರ ಯಾರೂ ಪುನರ್ಮುದ್ರಿಸಲಿಲ್ಲ. ಅನುಭವಾಮೃತದ ಉಳಿದ ಪ್ರಕಟಣೆಗಳು ಕೇವಲ ಮೂಲ-ತಾತ್ಪರ್ಯದಿಂದ ಕೂಡಿದ್ದು ಶುದ್ಧಪಾಠವಾಗಲಿ, ವಿಶೇಷ ಟೀಕೆ ಆಗಲಿ ಹೊಂದಿರಲಿಲ್ಲ. ಆದಕಾರಣ ಈ ವಿದ್ವತ್ಪೂರ್ಣ ಗ್ರಂಥವು ತುಂಬಾ ಸದುಪಯೋಗಿ ಯಾಗಿರುತ್ತದೆಂಬ ಹಾರೈಕೆಯಿಂದ ಈ ಕಾರ್ಯವನ್ನು ಕೈಗೊಂಡಿದ್ದೇನೆ.

ಇದನ್ನು ಸಂಪಾದಿಸಿ, ಅನುವಾದಿಸಿ, ಪ್ರಕಟಿಸಬೇಕು ಎಂದಿದ್ದಾಗ ಅಧ್ಯಾತ್ಮ ಪ್ರಕಾಶಕಾರ್ಯಾಲಯದ ಟ್ರಸ್ಟಿನವರು ಪ್ರಕಟಿಸಲು ಒಪ್ಪಿದರು. ಈ ಉತ್ತೇಜನದಿಂದಾಗಿ ಅನುವಾದ ಪ್ರಾರಂಭವಾಯಿತು. ಚಿದಂಬರಯ್ಯನವರ ಅಲಭ್ಯಗ್ರಂಥ ಮತ್ತೆ ಮಹಾಜನರಿಗೆ ದೊರಕಬೇಕೆಂಬ ಉದ್ದೇಶದಿಂದ ಅವರ ಪಠ್ಯ ಮತ್ತು ಸರ್ವಾರ್ಥಸಂದರ್ಶಿನಿ ಟೀಕೆಯನ್ನು ಈ ಆವೃತ್ತಿಯಲ್ಲಿ ಅಳವಡಿಸಿದೆ. ಈ ಸಂದರ್ಭದಲ್ಲಿ ಸಾಕಷ್ಟು ಪರಿಷ್ಕರಣ ಕಾರ್ಯವನ್ನು ಕೈಕೊಂಡಿದೆ, ಇದು ಗದ್ಯಾನುವಾದಕರ ಮಾತಿನಲ್ಲಿ ವಿವರಿಸಿದೆ. ಹಾಗಾಗಿ ಇದು ಹೊಸಗ್ರಂಥವೂ ಹೌದು.

ಇದೇ ರೀತಿಯಾಗಿ ಈ ಕಾರ್ಯದಲ್ಲಿ ನೀವು ಮುಂದುವರೆಯಲೇಬೇಕು, ನನ್ನ ಪೂರ್ಣಸಹಕಾರವಿದೆ ಎಂದು ಹುರಿದುಂಬಿಸಿದವರೂ ಮತ್ತು ಕರಡು ತಿದ್ದುವುದರಲ್ಲಿ ಅಚ್ಚಿನ ಕೆಲಸದಲ್ಲಿ ಬಲಭುಜವಾಗಿ ನಿಂತು ನೆರವು ನೀಡಿದವರು ಕೆಲವರು; ಅವರಲ್ಲಿ ಮುಖ್ಯವಾಗಿ ಅಧ್ಯಾತ್ಮ ಪ್ರಕಾಶಕಾರ್ಯಾಲಯದ ವಿಶ್ವಸ್ತ ಸಮಿತಿಯ ಸದಸ್ಯರು ಮತ್ತು ಪ್ರಕಟಣೆ ಗಳಲ್ಲಿ ಗುರುಭಕ್ತಿಯಿಂದ ನಿಸ್ವಾರ್ಥಸೇವೆ ಸಲ್ಲಿಸುತ್ತಿರುವ ಶ್ರೀ ಹೆಚ್. ವೆಂಕಟನರಸಪ್ಪನವರಿಗೂ, ಹೊಸಕೆರೆ ಚಿದಂಬರಯ್ಯ ಸಂಸ್ಮರಣ ಸಮಿತಿ ಟ್ರಸ್ಟಿನವರಾದ ಶ್ರೀ ರಾಘವೇಂದ್ರ, ನರಸಿಂಹಮೂರ್ತಿ, ಲಕ್ಷ್ಮೀನಾರಾಯಣರವರಿಗೂ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಾಯಮಾಡಿದ ಎಲ್ಲಾ ಗುರುಭಕ್ತರಿಗೂ ಕೃತಜ್ಞತೆಗಳು.

ಕರಡಚ್ಚು ತಿದ್ದುವುದರಲ್ಲಿ ನನ್ನ ಸಹಧರ್ಮಿಣಿ ಪ್ರೊ. ಎಂ.ಆರ್. ಲಕ್ಷ್ಮೀದೇವಿಯವರಿಗೂ, ಹಸ್ತಪ್ರತಿ ಓದಿ ಕೆಲವು ಸಲಹೆ, ಸೂಚನೆ ಕೊಟ್ಟವರು ಮಿತ್ರರಾದ ಸಾಹಿತಿ, ವಿಮರ್ಶಕ ಶ್ರೀ ಎಂ.ಕೆ. ಗೋಪಿನಾಥ್ ಅವರಿಗೂ, ಅಚ್ಚುಕಟ್ಟಾಗಿ ಈ ಕೃತಿಯ ಅಕ್ಷರಜೋಡಣೆ ಮಾಡಿರುವ ಅರ್ಕ ಕ್ರಿಯೇಷನ್ಸ್‌ನ ಶ್ರೀ ಸುರೇಶ್ ಮತ್ತು ಶ್ರೀಮತಿ ಭಾರ್ಗವಿ ದಂಪತಿಗಳಿಗೂ, ಅತಿಶೀಘ್ರವಾಗಿ ಮುದ್ರಣಮಾಡಿಕೊಟ್ಟ ಶ್ರೀರಾಮ ಪ್ರಿಂಟರ್ಸ್‌ನ ಸತ್ಯನಾರಾಯಣರವರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳು.

ಕನ್ನಡ ಜನರು ಪುಸ್ತಕವನ್ನು ಬರಮಾಡಿಕೊಂಡು, ಓದಿ ಸಂತೋಷಪಟ್ಟರೆ ನನ್ನ ಶ್ರಮ ಸಾರ್ಥಕವೆಂದು ಭಾವಿಸಿದ್ದೇನೆ. ಇದರಲ್ಲಿ ಕಂಡುಬಂದ ಲೋಪದೋಷಗಳನ್ನು ಓದುಗರು ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುವುದು.

ತಾ. ೨೮.೧೨.೨೦೧೨
ಬೆಂಗಳೂರು

ಪ್ರೊ. ಜಿ. ಅಶ್ವತ್ಥನಾರಾಯಣ
ಸಂಪಾದಕ ಮತ್ತು ಅನುವಾದಕ
ದೂ.: (೦೮೦) ೨೬೬೩೭೭೮೩

# ವಿಷಯವಿವರಣ ಸೂಚಿ

## ಅಧ್ಯಾಯ-೧ – ಅಧಿಕಾರ ಲಕ್ಷಣ (೫೪ ಪದ್ಯಗಳು)



## ಅಧ್ಯಾಯ – ೨ – ವೈರಾಗ್ಯ ಪ್ರಕರಣ (೧೦೮ ಪದ್ಯಗಳು)

**ಅಧ್ಯಾಯ – ೩ – ತ್ವಂಪದಾರ್ಥ ಶೋಧನೆ (೧೫೦ ಪದ್ಯಗಳು)**

**ಅಧ್ಯಾಯ – ೬ – ಸಪ್ತ ಭೂಮಿಕೆಗಳ ಅಭ್ಯಾಸ (೯೨ ಪದ್ಯಗಳು)**

## ಅಧ್ಯಾಯ – ೭ – ಪರಮಾತ್ಮಪದ ನಿರೂಪಣ (೨೪ ಪದ್ಯಗಳು)



## ಅಧ್ಯಾಯ – ೮ – ಮಾಯಾಮಿಥ್ಯಾತ್ವ ಪ್ರಕರಣ (೩೮ ಪದ್ಯಗಳು)

**ಅಧ್ಯಾಯ – ೧೧ – ನಿರ್ಗುಣಾರಾಧನೆಯ ನಿರ್ಣಯ (೩೦ ಪದ್ಯಗಳು)**



*****

# ಸಂಕೇತಾಕ್ಷರಗಳ ಸೂಚಿ

ಈ ಗ್ರಂಥದಲ್ಲಿ ಕೆಲವು ಸಂಕೇತಾಕ್ಷರಗಳನ್ನು ಬಳಸಿದೆ. ಅವುಗಳನ್ನು ಇಲ್ಲಿ ಸೂಚಿಸಿದೆ.

| ಸಂಕೇತ | ಗ್ರಂಥ |
|---|---|
| ೧. ಹೊ.ಚಿ | ಹೊಸಕೆರೆ ಚಿದಂಬರಯ್ಯನವರು |
| ೨. ಪಪ | ಪರಮಾರ್ಥ ಪದಕೋಶ |
| ೩. ಗೀಚಂ | ಗೀತಾರ್ಥಚಂದ್ರಿಕೆ |
| ೪. ಕು | ಕುಮಾಂಡೂರು ರಾಮಸ್ವಾಮಿ ಅಯ್ಯಂಗಾರ್ ಅವರಿಂದ ಸಂಪಾದಿತ 'ಅನುಭವಾಮೃತ' |
| ೫. ಅರಾಸೇ | ಅರಾಸೆ ಸಂಪಾದಿತ 'ಅನುಭವಾಮೃತ ಕಾವ್ಯ' |
| ೬. ಬೆಂ? | ಪುಸ್ತಕದ ವಿವರ ತಿಳಿಯದ ಬೆಂಗಳೂರಿನಲ್ಲಿ ಅಚ್ಚಾದ ಅನುಭವಾಮೃತ ಟೀಕೆ |
| ೭. ಸಂಕನಿ | ಸಂಕ್ಷಿಪ್ತ ಕನ್ನಡ ನಿಘಂಟು (ಕಸಾಪ) |
| ೮. ಪಾಶ | ಪಾರಿಭಾಷಿಕ ಶಬ್ದಕೋಶ (ಅಧ್ಯಾತ್ಮ ಪ್ರಕಾಶ ಕಾರ್ಯಾಲಯ) |
| ೯. * | ಚಿದಂಬರಯ್ಯನವರು ಕೊಡದಿರುವ, ಅನುವಾದಕ ಸೂಚಿಸಿರುವ, ಶಬ್ದಾರ್ಥ, ಟಿಪ್ಪಣಿ, ಪಾಠಾಂತರಗಳನ್ನು ಈ ಚಿಹ್ನೆ ತೋರಿಸುತ್ತದೆ. |
| ೧೦. (ಪಾ) | ಇತರ ಗ್ರಂಥಗಳಲ್ಲಿರುವ ಪಾಠಾಂತರಗಳು |
| ೧೧. (ಅ) (ಪ) | ಅಧ್ಯಾಯ ಮತ್ತು ಪದ್ಯಸಂಖ್ಯೆ ಉದಾ: ಅ–೬, ಪ–೮ |
| ೧೨. ? | ಅರ್ಥ ಅಥವಾ ಮೂಲ ಸ್ಪಷ್ಟವಿಲ್ಲ |

*****

ಶ್ರೀ ಗುರುಭ್ಯೋ ನಮಃ

ಮಹಲಿಂಗರಂಗ ಕವಿಯ

# ಅನುಭವಾಮೃತ ಕಾವ್ಯ

(ಸರ್ವಾರ್ಥಸಂದರ್ಶಿನೀ ಟೀಕಿನೊಡನೆ)

## ಮೊದಲನೆಯ ಅಧ್ಯಾಯ

### ಅಧಿಕಾರ ಲಕ್ಷಣ

**ಸೂಚನೆ॥**

**ವ್ಯಾಸಮುನಿಪತಿ ಶುಕಮುನಿಗೆ ಸಂ**
**ತೋಷದಿಂದಲಿ ತತ್ತ್ವಬೋಧೆಯ**
**ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ ॥**

**ತಾತ್ಪರ್ಯ:** ವೇದವ್ಯಾಸ ಮಹರ್ಷಿಗಳು ತಮ್ಮ ಮಗನಾದ ಶುಕಮುನಿಗೆ ಆನಂದದಿಂದ, ತತ್ತ್ವಜ್ಞಾನಿಗಳು ಮೆಚ್ಚುವ ರೀತಿಯಲ್ಲಿ ಆತ್ಮಜ್ಞಾನವನ್ನು ಲೇಸೆನ್ನುವಂತೆ ವಿಸ್ತಾರವಾಗಿ ತಿಳಿಸಿದರು.

**ಶಬ್ದಾರ್ಥ: * ವ್ಯಾಸಮುನಿ=ವೇದವ್ಯಾಸ ಮಹರ್ಷಿ. * ಶುಕಮುನಿ=ವೇದವ್ಯಾಸರ ಮಗ. ಆತ್ಮವಿದರು=ಮೋಕ್ಷಾಕಾಂಕ್ಷಿಗಳು. * ತತ್ತ್ವಬೋಧೆ=ಬ್ರಹ್ಮಜ್ಞಾನ.**

**ಟಿಪ್ಪಣಿ-೧: * ಸೂಚನಾ ಪದ್ಯ :** ಷಟ್ಪದಿ ಕಾವ್ಯಗಳಲ್ಲಿ ಆಯಾ ಸಂಧಿಗಳ ಪ್ರಾರಂಭದಲ್ಲಿ ಅಧ್ಯಾಯದ ವಿಷಯಾನುಸಾರವಾಗಿ ಸಂಕ್ಷಿಪ್ತವಾಗಿ ಕಥಾಸಾರವನ್ನು ಅರ್ಧಷಟ್ಪದಿಯಲ್ಲಿ (ಮೂರು ಸಾಲುಗಳಲ್ಲಿ) ಸೂಚಿಸುವ ಪದ್ಯ.

**ಟಿಪ್ಪಣಿ-೨: * ಭಾಮಿನೀ ಷಟ್ಪದಿ-** ಆರು ಸಾಲುಗಳ ಪದ್ಯ, ಕನ್ನಡದ ಜನಪ್ರಿಯ ಮಾತ್ರಾ ಛಂದಸ್ಸಿನ ೬ ಬಗೆ ಷಟ್ಪದಿಗಳಲ್ಲಿ ಒಂದು. ಭಾಮಿನಿ ಷಟ್ಪದಿಯ ಛಂದೋಲಕ್ಷಣ ಹೀಗಿದೆ: ೧, ೨, ೪, ೫ ಸಾಲುಗಳಲ್ಲಿ ೩-೪-೩-೪ ಮಾತ್ರೆಗಳ ಗಣಗಳು, ಸಾಲಿಗೆ ೧೪ ಮಾತ್ರೆಗಳು, ೩ ಮತ್ತು ೬ನೇ ಸಾಲಿನಲ್ಲಿ (ಸಾಲಿನ ೨೩ ಮಾತ್ರೆಗಳು) ೩-೪-೩-೪-೩-೪ ಗಣಗಳೂ ಒಂದು ಗುರುವೂ ಬರುತ್ತದೆ. ೩ ಮಾತ್ರೆಯ ಗಣಗಳಲ್ಲಿ U- ಗಣವೂ ೪ ಮಾತ್ರೆಗಳ ಗಣಗಳಲ್ಲಿ U-U (ಜಗಣ)ಬರಬಾರದು. ೩ ಮತ್ತು ೬ನೇ ಸಾಲಿನ ಕೊನೆಯ ಅಕ್ಷರ ಲಘುವಾಗಿದ್ದರೂ ಗುರುವಾಗಿ ಪರಿಗಣಿಸಲಾಗುತ್ತದೆ.

**ಟಿಪ್ಪಣಿ-೩: * ವ್ಯಾಸಮುನಿಪತಿ ಶುಕಮುನಿಗೆ:** ಈ ಗ್ರಂಥವನ್ನು ವ್ಯಾಸರು ತಮ್ಮ ಮಗನಾದ ಶುಕನಿಗೆ ಹೇಳಿದ್ದಾಗಿರುವುದನ್ನು ನೋಡಿದರೆ ಪುತ್ರವಾತ್ಸಲ್ಯದಿಂದ ಅವರು ಇದರಲ್ಲಿ ಸರ್ವಾರ್ಥಗಳನ್ನೂ ಪ್ರಕಾಶಮಾಡಿರುವರೆಂಬ ಭಾವವು ತೋರುವುದು. ವ್ಯಾಸರು ಶುಕರಿಗೆ ಹೇಳಿದ ಅರ್ಥವನ್ನು ಕವಿಯು ಈ ಗ್ರಂಥದಲ್ಲಿ ಭಾಮಿನೀಷಟ್ಪದಿಯಲ್ಲಿ ಹೇಳಿರುವನು.

ಖ ಳ ಖ ಳ
ಶ್ರೀಮ । ದನುಪಮ । ತೇಜ । ನತಜನ ೧ಳ
ಖ ಳ ಖ ಳ
ಕಾಮಿ । ತಾರ್ಥಫ । ಲಪ್ರ । ದಾಯಕ ೧ಳ
ಖ ಳ ಖ ಳ ಖ ಳ ಗು
ಸೋಮ । ಶೇಖರ । ಸುರಮು । ನೀಂದ್ರಾ । ರ್ಚಿತಪ । ದಾಂಭೋ । ಜ ೨ಖ
ಖ ಳ ಖ ಳ
ಸಾಮ । ಗಾನ । ಪ್ರಿಯಸ । ದಾಶಿವ ೧ಳ
ಖ ಳ ಖ ಳ
ವಾಮ । ಭಾಗಾ । ಶ್ರಿತಭ । ವಾನೀ ೧ಳ
ಖ ಳ ಖ ಳ ಖ ಳ ಗು
ಪ್ರೇಮ । ಶ್ರೀಗಿರಿ । ಮಲ್ಲಿ । ಕಾರ್ಜುನ । ಸಲಹು । ಮೂಜಗ । ವ ೨ಖ

### ಇಷ್ಟದೇವತಾ ಸ್ತುತಿ (೧–೨)

ಶ್ರೀಮದನುಪಮತೇಜ ನತಜನ
ಕಾಮಿತಾರ್ಥಫಲಪ್ರದಾಯಕ,
ಸೋಮಶೇಖರ, ಸುರಮುನೀಂದ್ರಾರ್ಚಿತಪದಾಂಭೋಜ ।
ಸಾಮಗಾನಪ್ರಿಯ, ಸದಾಶಿವ,
ವಾಮಭಾಗಾಶ್ರಿತಭವಾನೀ
ಪ್ರೇಮ, ಶ್ರೀಗಿರಿಮಲ್ಲಿಕಾರ್ಜುನ, ಸಲಹು ಮೂಜಗವ ॥ ॥೧॥

**ತಾತ್ಪರ್ಯ :** ಶುಭಕರನೂ ಅಸಮಾನಕಾಂತಿಯಿಂದ ಕೂಡಿರುವನೂ, ಭಕ್ತಜನರು ಅಪೇಕ್ಷಿಸಿದ ಫಲಗಳನ್ನು ಅನುಗ್ರಹಿಸುವವನೂ ಚಂದ್ರಶೇಖರನೂ ದೇವಮುನಿ ಶ್ರೇಷ್ಠರಿಂದ ಪೂಜಿಸಲ್ಪಟ್ಟ ಪಾದಕಮಲಗಳನ್ನು ಉಳ್ಳವನೂ ಸಾಮವೇದ ಗಾನಲೋಲನೂ, ಸದಾಕಾಲದಲ್ಲೂ ಮಂಗಳಸ್ವರೂಪನಾದ, ಎಡತೊಡೆಯ ಮೇಲಿರುವ ಪಾರ್ವತಿಯ ಮೇಲೆ ಪ್ರೇಮವುಳ್ಳವನೂ ಆಗಿರುವ ಶ್ರೀಶೈಲವೆಂಬ ಮಹಾಕ್ಷೇತ್ರದ ಸ್ವಾಮಿಯಾದ ಮಲ್ಲಿಕಾರ್ಜುನದೇವನೇ ಕಾಪಾಡು.

**ಶಬ್ದಾರ್ಥ :** ವಾಮಭಾಗಾಶ್ರಿತ ಭವಾನೀ ಪ್ರೇಮ = ಎಡತೊಡೆಯ ಮೇಲಿರುವ ಪಾರ್ವತಿಯ ಮೇಲೆ ಪ್ರೇಮವುಳ್ಳವನೇ. ಶ್ರೀಗಿರಿಮಲ್ಲಿಕಾರ್ಜುನ = ಶ್ರೀಶೈಲವೆಂಬ ಮಹಾಕ್ಷೇತ್ರದ ಸ್ವಾಮಿಯಾದ ಮಲ್ಲಿಕಾರ್ಜುನ ದೇವರೇ (ಸಂಬೋಧನೆ)

**ಟಿಪ್ಪಣಿ :** ಈ ಶ್ರೀಶೈಲವು ಕರ್ನೂಲು ಜಿಲ್ಲೆಯಲ್ಲಿದೆ.

**ಶ್ರೀಗಿರೀಶ್ವರ ಪಾದಪದ್ಮಪ**
**ರಾಗರಂಜಿತಮೌಳಿ, ಭ್ರಮರಾಂ**
**ಬಾಗುಣಾರ್ಣವಮಗ್ನಚಿತ್ತ, ವಚೋವಿಚಕ್ಷಣನು ।**
**ಶ್ರೀಗುರುವಿನುಪದೇಶದಿಂದನು**
**ರಾಗವುದಿಸಲು ರಂಗನಾಥನು**
**ಯೋಗಿಜನರಹುದೆನಲು ಪೇಳಿದನನುಭವಾಮೃತವ ॥ ॥೨॥**

**ತಾತ್ಪರ್ಯ:** ಶ್ರೀಶೈಲಕ್ಕೆ ಒಡೆಯನಾದ ಪರಮೇಶ್ವರನ ಪಾದಧೂಳಿಯನ್ನು ತಲೆಯಲ್ಲಿ ಧರಿಸಿದವನೂ, ಶ್ರೀಗಿರಿಮಲ್ಲಿಕಾರ್ಜುನೇಶ್ವರನ ಅರ್ಧಾಂಗಿಯಾದ ಭ್ರಮರಾಂಬಳ ಗುಣಾವಳಿಗಳಲ್ಲಿ ನೆಟ್ಟಮನದವನೂ, ವಾಕ್‌ಚತುರನೂ ಆದ ರಂಗನಾಥಕವಿ (ಮಹಲಿಂಗರಂಗ) ಶ್ರೀಗುರುವಿನ ಉಪದೇಶದಿಂದ ಭಕ್ತಿಯಾವೇಶ ಉಕ್ಕಿ ಜ್ಞಾನಯೋಗಿಗಳು ಮೆಚ್ಚುವಂತೆ ಈ ಅನುಭವಾಮೃತ ಕಾವ್ಯವನ್ನು ರಚಿಸಿದನು.

**ಶಬ್ದಾರ್ಥ:** **ಭ್ರಮರಾಂಬಾ**=ಪಾರ್ವತೀದೇವಿ (ಶ್ರೀಗಿರಿಮಲ್ಲಿಕಾರ್ಜುನೇಶ್ವರನ ಅರ್ಧಾಂಗಿ); **ಪಾದಪದ್ಮಪರಾಗರಂಜಿತಮೌಳಿ**=ಪರಮೇಶ್ವರ ಕಾಲಿನಧೂಳನ್ನು ತಲೆಯಲ್ಲಿ ಧರಿಸಿದವನು; * **ವಚೋವಿಚಕ್ಷಣನು**=ವಾಕ್‌ಚತುರ; * **ಗುಣಾರ್ಣವ**=ಗುಣಸಾಗರ; **ರಂಗನಾಥನು**=ಕವಿ;

**ಪಾಠಾಂತರ:** ಮಗ್ನಚಿತ್ತ ಎಂಬಲ್ಲಿ ಕೆಲವು ಕಡೆ **ಪೂರ್ಣಚಂದ್ರ** ಎಂದಿದೆ. ಹೀಗಿದ್ದರೆ ರಂಗನಾಥನ ಸಾನ್ನಿಧ್ಯದಿಂದ ಭ್ರಮರಾಂಬೆಯ ಗುಣವು ಉತ್ಕರ್ಷವನ್ನು ಪಡೆಯುತ್ತದೆ ಎಂದರ್ಥವಾಗುತ್ತದೆ. ಇದರಿಂದ ರಂಗನಾಥನಿಗೇ ಪ್ರಾಶಸ್ತ್ಯವು ತೋರುತ್ತದೆ. ದೇವಿಗೆ ಪ್ರಾಶಸ್ತ್ಯವು ದೊರೆಯುವ ಈ ಪಾಠವು ಬಹುಕಡೆ ಇದೆ.

**ಟಿಪ್ಪಣಿ:** **ಯೋಗಿಜನರಹುದೆನಲು**–ಇಲ್ಲಿ ಯೋಗಿಗಳೆಂದರೆ ಪಾತಂಜಲ ಯೋಗಶಾಸ್ತ್ರದಂತೆ ಉಸಿರುಹಿಡಿದು ಸಾಧನೆಮಾಡುವ ಯೋಗಿಗಳೆಂದರ್ಥವಲ್ಲ. ಏಕೆಂದರೆ ಆ ಜನರು ತಲೆದೂಗು ವಂತಹ ವಿಚಾರಗಳು ಇಲ್ಲಿಲ್ಲ. ವಿಚಾರದಿಂದ ಜೀವಬ್ರಹ್ಮೈಕ್ಯವನ್ನು ಸಾಧಿಸುವಂಥ ವಿಷಯಗಳೇ ಇಲ್ಲಿರುವುದರಿಂದ ಯೋಗಿಗಳೆಂಬ ಮಾತಿಗೆ ರಾಜಯೋಗಿಗಳೆಂದೋ ಅಥವಾ ಜ್ಞಾನಯೋಗಿ ಗಳೆಂದೋ ಅರ್ಥವನ್ನು ಮಾಡಿಕೊಳ್ಳಬೇಕು.

---

**ಕವಿಚರಿತೆ (೩)**

**ಘನತರದ ಸಹವಾಸಿವಂಶದೊ**
**ಳನುಪಮನು, ಮಹಲಿಂಗದೇವನ**
**ತನಯನಹ ಶ್ರೀರಂಗ, ಸಹಜಾನಂದಗುರುಪದವ ।**
**ನೆನೆದು, ಸಮ್ಯಗ್ಜ್ಞಾನವನು ಬ**
**ಲ್ಲನುಭವಿಗಳಹುದೆನಲು ಪೇಳಿದ;**
**ವಿನುತರಾಸ್ವಾದಿಸುವದೊಲಿದೀ ಅನುಭವಾಮೃತವ ॥ ॥೩॥**

ತಾತ್ಪರ್ಯ: ಶ್ರೇಷ್ಠತರವಾದ ಸಹವಾಸಿ ಎಂಬ ಬ್ರಾಹ್ಮಣಕುಲದಲ್ಲಿ ಜನಿಸಿದವನಾಗಿ ಅಸದೃಶನಾದ ಮಹಲಿಂಗದೇವನ ಸುತನಾದ ಶ್ರೀರಂಗನೆಂಬ (ಮಹಲಿಂಗರಂಗ) ಕವಿಯು ತನ್ನ ಗುರುವಾದ ಸಹಜಾನಂದಯೋಗಿಯ ಚರಣಗಳನ್ನು ನೆನೆದು ತತ್ತ್ವಜ್ಞರಾದ ವೇದಾಂತಿಗಳು ಒಪ್ಪುವ ಹಾಗೆ ಈ ಅನುಭವಾಮೃತ ಗ್ರಂಥವನ್ನು ರಚಿಸಿರುವನು.

ಶಬ್ದಾರ್ಥ: * ಸಮ್ಯಕ್ ಜ್ಞಾನ=ಪರಬ್ರಹ್ಮತತ್ತ್ವ; * ವಿನುತರು=ವಿದ್ವಾಂಸರು; * ಆಸ್ವಾದಿಸು= ರಸಾನುಭವ ಹೊಂದು; * ಘನತರ=ಶ್ರೇಷ್ಠವಾದ.

ಟಿಪ್ಪಣಿ-೧: ಸಹವಾಸಿವಂಶ- ಸಹವಾಸಿ ಎಂಬುವುದು ಈ ಗ್ರಂಥಕರ್ತನ ಕುಲದ ಹೆಸರು. ಇದರ ವಿಷಯದಲ್ಲಿ ಹೆಚ್ಚಿನವಿವರಕ್ಕೆ ಪೀಠಿಕೆ ನೋಡಿ.

ಟಿಪ್ಪಣಿ-೨: * ಸಹಜಾನಂದಗುರುಪಾದವ- ಇಲ್ಲಿ ಶ್ಲೇಷೆಯಿದೆ. ಮಹಲಿಂಗರಂಗನ ಗುರು ಸಹಜಾನಂದನ ಪಾದಚರಣವ ಎಂದೂ, ಮುಕ್ತಿಯೆಂಬ ಶ್ರೇಷ್ಠಸ್ಥಾನವನ್ನು ಧ್ಯಾನಿಸಿ ಎಂದೂ ಅರ್ಥವಾಗುತ್ತದೆ.

---

## ಕನ್ನಡದ ಪ್ರಶಂಸೆ (೪-೫)

ಕನ್ನಡದ ನುಡಿಯೆಂದುಪೇಕ್ಷಿಸ
ಲಿನ್ನು ಹಿರಿಯರಿಗಂಜಿ ನುಡಿವೆನು;
ಕನ್ನಡಿಯೆ ದರ್ಪಣವದಲ್ಲದೆ ಭೇದವೇನಿದಕೆ? ।
ಮುನ್ನಲುಪನಿಷದರ್ಥವನು ಸಂ
ಪನ್ನಮತಿಗಳು ಪೇಳ್ದುದನೆ ನಾ
ಕನ್ನಡಿಸಿದೆನು; ಕೊರತೆಯಿರ್ದೊಡೆ ಮನ್ನಿಸುವದೊಲಿದು ॥ ॥೪॥

ತಾತ್ಪರ್ಯ: ಕನ್ನಡದ ನುಡಿಯೆಂದು ತಿರಸ್ಕಾರಮಾಡುವ ಹಿರಿಯರಾದ ಸಂಸ್ಕೃತ ವಿದ್ವಾಂಸರಿಗೆ ವಿನಯದಿಂದ ಅಳುಕುತ್ತಾ ಹೇಳುತ್ತಿದ್ದೇನೆ. ಕನ್ನಡದಲ್ಲಿ 'ಕನ್ನಡಿ' ಎನ್ನುತ್ತಾರೆ. ಸಂಸ್ಕೃತದಲ್ಲಿ ದರ್ಪಣ ಎನ್ನುತ್ತಾರೆ. ಭಾಷಾ ವ್ಯತ್ಯಾಸ (ಪದ ವ್ಯತ್ಯಾಸ)ವಲ್ಲದೆ ವಿಷಯ ವಸ್ತುವಿನಲ್ಲಿ ವ್ಯತ್ಯಾಸವಿಲ್ಲ. (ಕನ್ನಡಿ ಎಂದರೆ ಇಲ್ಲಿ ಕನ್ನಡದಲ್ಲಿ ಹೇಳಿರುವುದು ಎಂದರ್ಥ, ದರ್ಪಣ ಎಂದರೆ ಸಂಸ್ಕೃತದಲ್ಲಿ ಹೇಳಿರುವುದು ಎಂದರ್ಥ) ಈ ಮೊದಲು ವೇದೋಪನಿಷತ್ತುಗಳಲ್ಲಿ ಆತ್ಮಜ್ಞಾನಿಗಳು ತಿಳಿಸಿರುವುದನ್ನೇ ನಾನು ಕನ್ನಡದಲ್ಲಿ ಹೇಳಿರುತ್ತೇನೆ. ಸದ್ಗುಣಸಂಪನ್ನರಾದ ವಿದ್ವಾಂಸರು ನಾನು ಹೇಳಿದ್ದರಲ್ಲಿ ಏನಾದರೂ ಲೋಪದೋಷಗಳಿದ್ದರೆ ದಯಮಾಡಿ ಕ್ಷಮಿಸಬೇಕು ಎಂದು ಕವಿ ಕೋರುತ್ತಾನೆ.

ಶಬ್ದಾರ್ಥ: * ಉಪೇಕ್ಷಿಸಲು=ತಿರಸ್ಕರಿಸುವವರಿಗೆ; * ಕನ್ನಡಿ=ದರ್ಪಣ; * ಅಂಜಿ=ವಿನಯದಿಂದ ಅಳುಕಿ; * ಸಂಪನ್ನಮತಿಗಳು=ಆತ್ಮಜ್ಞಾನಿಗಳು; * ಮನ್ನಿಸುವುದು=ಕ್ಷಮಿಸುವುದು; * ಒಲಿದು =ದಯೆತೋರಿ.

**ಟಿಪ್ಪಣಿ:** ಕನ್ನಡಿಯೆ- ಕನ್ನಡಿಯೆಂಬ ಮಾತಿನಿಂದ ಕನ್ನಡದಲ್ಲಿ ಹೇಳಿದ್ದೆಂಬ ಅರ್ಥವೂ ಸೂಚಿತವಾಗುತ್ತದೆ. ಕನ್ನಡಿಯೆಂಬ ಮಾತಿಗೆ ಪ್ರತಿಬಿಂಬವು ಕಾಣುವಂಥ ಗಾಜೆಂಬ ಅರ್ಥವೂ ರೂಢಿಯಲ್ಲಿದ್ದೇ ಇದೆ. ಇದರಿಂದ ಕನ್ನಡಿಯಲ್ಲಿ ಯಾವ ವಸ್ತುವಾದರೂ ಇದ್ದದ್ದಿದ್ದಂತೆ ಹೇಗೆ ಪ್ರತಿಬಿಂಬಿತವಾಗುವುದೋ ಹಾಗೆ ಸಂಸ್ಕೃತದಿಂದ ಅಥವಾ ಬೇರೆ ಯಾವ ಭಾಷೆಯಿಂದಾದರೂ ತಂದ ಯಾವ ವಿಚಾರವಾದರೂ ಇದ್ದದ್ದಿದ್ದಂತೆ ಕನ್ನಡದ ಮಾತಿನಲ್ಲಿ ಇಳಿದು ಬಂದೇ ಬರುವುದು ಎಂದು ಧ್ವನಿ. ಕನ್ನಡಿಯೆಂದರೂ ದರ್ಪಣವೆಂದರೂ ಪದಾರ್ಥ ಒಂದೇ ಆದ್ದರಿಂದ ಕನ್ನಡದಲ್ಲಿ ಹೇಳಿದ ಮಾತ್ರಕ್ಕೇ ಯಾವ ಕೊರತೆಯೂ ಇಲ್ಲವೆಂದು ತಾತ್ಪರ್ಯ.

---

**ಸುಲಿದ ಬಾಳೆಯ ಹಣ್ಣಿನಂದದ,**
**ಕಳೆದ ಸಿಗುರಿನ ಕಬ್ಬಿನಂದದ**
**ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ ।**
**ಲಲಿತವಹ ಕನ್ನಡದ ನುಡಿಯಲಿ**
**ತಿಳಿದು ತನ್ನೊಳು ತನ್ನ ಮೋಕ್ಷವ**
**ಗಳಿಸಿಕೊಂಡರೆ ಸಾಲದೇ? ಸಂಸ್ಕೃತದಲಿನ್ನೇನು! ॥ ॥೫॥**

**ತಾತ್ಪರ್ಯ:** ಸಿಪ್ಪೆಯನ್ನು ಸುಲಿದ ಬಾಳೆಯ ಹಣ್ಣಿನ ಹಾಗೆ, ಹೆರೆದು ಸಿಪ್ಪೆ (ಸಿಗುರು) ತೆಗೆದುಹಾಕಿದ ಕಬ್ಬಿನ ಜಲ್ಲೆಯ ಹಾಗೆ, ಕಾಯಿಸಿ ಆರಿಸಿದ ಹದವಾದ ಬಿಸಿಯ ಹಾಲಿನ ಹಾಗೆ, ಸರಳವಾಗಿರುವ, ಸುಂದರವೂ ಆಗಿರುವ ಕನ್ನಡದ ಭಾಷೆಯ ಗ್ರಂಥಗಳನ್ನು ಓದಿ ಮನನಮಾಡಿಕೊಂಡು ಆತ್ಮಜ್ಞಾನ ಹೊಂದಿ, ಹುಟ್ಟು ಸಾವುಗಳ ದುಃಖವೆಂಬ ತೊಡಕಿನಿಂದ ಬಿಡುಗಡೆ ಪಡೆಯುವ ಮುಕ್ತಿಪದವಿಯನ್ನು ಸಂಪಾದಿಸಿಕೊಂಡರೆ ಸಾಲದೇ? ಸಂಸ್ಕೃತಭಾಷೆಯ ಅಗತ್ಯವೇನಿದೆ?

**ಶಬ್ದಾರ್ಥ:** * **ಮೋಕ್ಷವ**=ಹುಟ್ಟು ಸಾವುಗಳ ದುಃಖವೆಂಬ ತೊಡಕಿನಿಂದ ಬಿಡುಗಡೆಯಾಗುವುದನ್ನು. * **ಸುಲಿದ**=ಸಿಪ್ಪೆ ತೆಗೆದ. * **ಸಿಗುರಿನ**=ಕಬ್ಬಿನ ಸಿಪ್ಪೆಯ. * **ಕಳೆದ**=ಹೆರೆದ. * **ಲಲಿತವಹ**=ಸುಂದರವಾಗಿರುವ. * **ತಿಳಿದು ತನ್ನೊಳು**=ಆತ್ಮಜ್ಞಾನ ಹೊಂದಿ. * **ಅಳಿದ**=ಕಾಯಿಸಿ ಆರಿಸಿದ, ಹದವಾಗಿ ಬಿಸಿಯಾದ.

**ಟಿಪ್ಪಣಿ:** * ಸಂಸ್ಕೃತದೊಳಿನ್ನೇನು- ಸಂಸ್ಕೃತದ ಬಗ್ಗೆ ತಿರಸ್ಕಾರವಿಲ್ಲ. ಆತ್ಮಜ್ಞಾನಹೊಂದಲು ಕನ್ನಡಭಾಷೆಯ ಗ್ರಂಥಗಳೇ ಸಾಕಾಗುತ್ತದೆ ಎಂದರ್ಥ.

---

## ಗ್ರಂಥದ ಪ್ರಾಶಸ್ತ್ಯ (೬-೧೨)

**ಬರೆದು ಪಠಿಸೀಗ್ರಂಥದರ್ಥವ**
**ಹಿರಿಯರಿಂದರಿದವರಿಗೀಗಲೆ**
**ಕರತಲಾಮಲಕದವೊಲಾತ್ಮನು ಸ್ಫುರಿಸಿ ತೋರುವನು; ।**

ಬರಿಯ ಭ್ರಾಂತಿಯ ಬಿಟ್ಟು ಯತ್ನದಿ
ಮರಳಿಮರಳೀ ಗ್ರಂಥದರ್ಥದ
ಪರಿಚಯವ ನೆರೆ ಮಾಡಿ ಪಡೆವುದು ಮೋಕ್ಷಸಂಪದವ ॥ ॥೬॥

ತಾತ್ಪರ್ಯ: ಈ ಗ್ರಂಥವನ್ನು ಬರೆದು ಓದಿ ಅರ್ಥವನ್ನು ತಿಳಿದಂಥ ಅನುಭವಿ ಹಿರಿಯರಿಂದ (ಗುರುವಿನ ಮೂಲಕ) ಕೇಳಿ ತಿಳಿದುಕೊಂಡರೆ ಕೂಡಲೆ ಅಂಗೈಯೊಳಗಿನ ನೆಲ್ಲಿಯ ಕಾಯಂತೆ ಆತ್ಮಸ್ವರೂಪವು ತಾನಾಗಿ ಮನಸ್ಸಿಗೆ ಹೊಳೆಯುವುದು. ಕೇವಲ ಪ್ರಾಪಂಚಿಕ ವಸ್ತುಗಳಿಂದ ಸುಖವಾದೀತೆಂಬ ವ್ಯರ್ಥವಾದ ತಪ್ಪು ತಿಳಿವಳಿಕೆಯನ್ನು ತೊರೆದು ಮತ್ತೆಮತ್ತೆ ಶ್ರದ್ಧಾಪೂರ್ವಕ ಪ್ರಯತ್ನದಿಂದ ಈ ಅನುಭವಾಮೃತ ಗ್ರಂಥದಲ್ಲಿ ಹೇಳಿರುವ ವಿಷಯಗಳ ಅಂತರಾರ್ಥವನ್ನು ಚೆನ್ನಾಗಿ ವಿಚಾರಮಾಡಿ (ಮನನಮಾಡಿ) ಮುಕ್ತಿಸಂಪತ್ತನ್ನು ಹೊಂದಬೇಕು.

ಶಬ್ದಾರ್ಥ: ಕರತಲಾಮಲಕವೊಲ್=ಅಂಗೈಯೊಳಗಣ ನೆಲ್ಲಿಕಾಯಂತೆ; ಬರಿಯ ಭ್ರಾಂತಿಯ ಬಿಟ್ಟು=ಪ್ರಾಪಂಚಿಕ ವಸ್ತುಗಳಿಂದ ಸುಖವಾದೀತೆಂಬ ವ್ಯರ್ಥವಾದ ತಪ್ಪು ತಿಳಿವಳಿಕೆಯನ್ನು ತೊರೆದು; ಪರಿಚಯವ ನೆರೆ ಮಾಡಿ=ಚೆನ್ನಾಗಿ ವಿಚಾರಮಾಡಿ; * ಅರಿತು=ತಿಳಿದು.

ಪಾಠಾಂತರ: * ಬರಿಯ=ಬರಿದೆ (ಕು). * ಗೀಗಲೆ=ಗೀಗತಿ (ಅ).

---

ಹಾಲನೆರೆದರೆ ಕುಡಿಯಲೊಲ್ಲದ
ಬಾಲಕನ ತೆರನಂತೆ ಮನವಿದು
ಕೇಳಲೊಲ್ಲದು ಹಿತವನರಿಯದ ಮೂರ್ಖನಂದದಲಿ; ।
ಬಾಲಕಿಯನುಪಲಾಲಿಸುವವೊಲು
ಬೋಳಯಿಸಿ ತನ್ನೊಳಗುಮಾಡಲು
ಮೇಲೆಮೇಲದು ಮೆಲ್ಲಮೆಲ್ಲನೆ ಕೇಳತೊಡಗುವುದು ॥ ॥೭॥

ತಾತ್ಪರ್ಯ: ಹಾಲನ್ನು ಕುಡಿಯಲು ಕೊಟ್ಟರೆ ಕುಡಿಯಲು ಒಪ್ಪದ ಚಿಕ್ಕ ಹುಡುಗನ ರೀತಿಯಂತೆ, ತನ್ನ ಒಳಿತನ್ನು ಅರ್ಥಮಾಡಿಕೊಳ್ಳದ ಮೂಢನಂತೆ, ಈ ಮನಸ್ಸು ಏನು ಹೇಳಿದರೂ ಒಪ್ಪುವುದಿಲ್ಲ. ಇಂಥ ಮನಸ್ಸು ಕೇಳುವಂತೆ ಮಾಡುವುದು ಹೇಗೆ? ಮುಗ್ಧಬಾಲಿಕೆಯನ್ನು ತಲೆಯನ್ನು ನೇವರಿಸಿ ಹಿತನುಡಿಗಳಿಂದ ಒಲಿಸಿ ಕೊಳ್ಳುವಂತೆ ಮನಸ್ಸನ್ನು ಆ ರೀತಿ ಒಲಿಸಿಕೊಂಡರೆ ಕ್ರಮೇಣ ಅದು ಮೆಲ್ಲಮೆಲ್ಲಗೆ ಹತೋಟಿಗೆ ಬರುತ್ತದೆ.

ಶಬ್ದಾರ್ಥ: * ಬೋಳಯಿಸಿ=ತಲೆಯನ್ನು ತಡವಿ; * ಎರೆದರೆ=ಕುಡಿಯಲು ಕೊಟ್ಟರೆ; * ಒಲ್ಲದ= ಒಪ್ಪದ. * ಕೇಳಲೊಲ್ಲದು=ಒಪ್ಪುವುದಿಲ್ಲ; * ಉಪಲಾಲಿಸುವೊಲು=ಒಳ್ಳೆಯ ಮಾತುಗಳಿಂದ ಒಲಿಸಿಕೊಳ್ಳುವಂತೆ; * ಮೇಲೆಮೇಲದು=ಕ್ರಮೇಣ; * ಮೆಲ್ಲಮೆಲ್ಲನೆ=ನಿಧಾನವಾಗಿ.

---

**ಕೇಳತೊಡಗಿದ ಬಳಿಕ ಬಿಡದದು;**
**ಲೋಲಪ್ರೌಢೆಯ ತೆರದಿ ಹಗಲಿರು**
**ಳಾಲಿಸುತ್ತದರಲ್ಲಿ ಮಿಗಿಲಾಸಕತಿಯಾಗಿಹುದು; ।**
**ಹೇಳಲೇನಭ್ಯಾಸವಶದಿಂ**
**ಮೇಲೆ ಪರಮಾನಂದಪದದೊಳ**
**ಗಾಳಿ ನಿಜಸಾಯುಜ್ಯಪದವಿಯ ಪಡೆದು ಸುಖಿಯಹುದು ॥ ॥೮॥**

**ತಾತ್ಪರ್ಯ:** ಆ ರೀತಿ ಒಲಿದ ಮನಸ್ಸು ಅಧ್ಯಾತ್ಮದ ಬೋಧೆಯನ್ನು ಆಲಿಸತೊಡಗಿದ ನಂತರ ಪ್ರಬುದ್ಧಸ್ತ್ರೀ ದಿನೇದಿನೇ ಹೆಚ್ಚಿನ ವಿಷಯಾಸಕ್ತಿಯನ್ನು ತಳೆಯುವ ರೀತಿಯಲ್ಲಿ ಕೇಳುತ್ತಾ ಕೇಳುತ್ತಾ ಮನಸ್ಸು ಅಧಿಕವಾಗಿ ಅಧ್ಯಾತ್ಮದಲ್ಲಿ ಆಸಕ್ತಿ ಹೊಂದುವುದು, ಹೆಚ್ಚಿಗೆ ಹೇಳುವುದೇನಿದೆ? ಎಡೆಬಿಡದೆ ಮನಸ್ಸು ಆ ಅಧ್ಯಾತ್ಮದಲ್ಲಿಯೇ ಮತ್ತೆ ಮತ್ತೆ ಲೀನವಾಗುತ್ತಾ ಮುಂದಕ್ಕೆ ದಿವ್ಯಾನಂದ ಸ್ತುತಿಯಲ್ಲಿ ಪರಬ್ರಹ್ಮಸ್ವರೂಪದ ಸ್ಥಿತಿಯಲ್ಲಿದ್ದು ಸುಖಿಸುತ್ತದೆ ಎಂದರೆ ಜೀವನ್ಮುಕ್ತಿ ಹೊಂದಿ ಸಾಯುಜ್ಯವೆಂಬ ಮುಕ್ತಿಯನ್ನು ಪಡೆದು ಸುಖಿಸುತ್ತದೆ.

**ಶಬ್ದಾರ್ಥ: ಅದು**=ಮನಸ್ಸು; (ಪದದೊಳಗೆ +) **ಆಳಿ**=ಮುಳುಗಿ; * **ಅಭ್ಯಾಸವಶದಿಂ**=ಎಡಬಿಡದೆ ಅದನ್ನೇ ಮತ್ತೆ ಮತ್ತೆ ನೆನೆಯುವುದರಿಂದ; * **ಆಸಕತಿ**=ಆಸಕ್ತಿ (ಲೋಲುಪತೆ); * **ಪರಮಾನಂದ ಪದ**= ನಿತ್ಯವಾದ ಅದ್ವೈತ ಸ್ಥಿತಿಯು; ನಿಃಪ್ರಸಾದವೆಂಬ ಪರಮಾನಂದ (ಪಪ = ಪು ೨೩೦) ಸ್ಥಿತಿ=ಜೀವನ್ಮುಕ್ತಿ. ಸಾಯುಜ್ಯವೆಂಬ ಮುಕ್ತಿಯನ್ನು ಹೊಂದಿ ಸುಖಿಸುತ್ತದೆ.

**ಟಿಪ್ಪಣಿ: ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ**(ಗೀತೆ- ೬-೩೫) ಎಂಬ ಗೀತೋಕ್ತಿಯಂತೆ ಮನಸ್ಸನ್ನು ಎಡಬಿಡದೆ ಪ್ರಯತ್ನದಿಂದಲೂ, ವೈರಾಗ್ಯದಿಂದಲೂ ಅದನ್ನು ಬಿಗಿ ಹಿಡಿಯುವುದಕ್ಕಾಗುತ್ತದೆ. ೨; ಗೀತೆಯ (೬-೩೫) ಶ್ಲೋಕದ ಹಿನ್ನೆಲೆಯಲ್ಲಿ ಕವಿ **ಅಭ್ಯಾಸವಶದಿಂ** (ಎಡೆಬಿಡದೆ ಅದನ್ನೇ ಮತ್ತೆ ಮತ್ತೆ ನೆನೆಯುವುದರಿಂದ) ಎಂಬ ಮಾತನ್ನು ತೆಗೆದುಕೊಂಡಿದ್ದಾನೆ. ಗ್ರಂಥದಲ್ಲಿ ಹಲವು ಬಾರಿ ಇದನ್ನು ಬಳಸಿದ್ದಾನೆ.

---

**ಅಖಿಲವೇದಾಂತಾರ್ಥವನು ನಾ**
**ಯುಕುತಿಯಲಿ ಸಂಗ್ರಹಿಸಿ ಪೇಳುವೆ**
**ಸಕಲರಿಗೆ ತಿಳಿವಂತೆ ಸುಲಭೋಪಾಯದಿಂದೊಲಿದು; ।**
**ಶುಕಮುನೀಶ್ವರನಂತೆ ನೀವಾ**
**ಸಕತಿಯಲಿ ನೆರೆ ತಿಳಿದು ನಿಜವಹ**
**ಮುಕುತಿಸುಖಸಾಮ್ರಾಜ್ಯಪದದಲಿ ನಿಂದು ಸುಖಿಯಾಗಿ ॥ ॥೯॥**

**ತಾತ್ಪರ್ಯ:** ನಾನು ಸಕಲ ಅದ್ವೈತ ವೇದಾಂತಸಾರವನ್ನು ಸಂಗ್ರಹಿಸಿ ಜಾಣ್ಮೆಯಲ್ಲಿ ಪಾಮರನಿಂದ ಪಂಡಿತನವರೆಗೆ ಎಲ್ಲರಿಗೂ ತಿಳಿಯುವ ಹಾಗೆ ಸುಲಭದ ರೀತಿಯಲ್ಲಿ ಸಂಕ್ಷಿಪ್ತವಾಗಿ ಹೇಳುತ್ತೇನೆ. ವೇದವ್ಯಾಸರು ಈ ಶಾಸ್ತ್ರವನ್ನು ತಮ್ಮ ಮಗ ಶುಕಯೋಗಿಗೆ

ವಿವರಿಸಿ ಹೇಳಿದಾಗ ಅದನ್ನು ಆ ಶುಕಮುನಿಯು ಆಸಕ್ತಿಯಿಂದ ಕೇಳಿದನು. ಹಾಗೆ ನೀವೆಲ್ಲರೂ ಆಸಕ್ತಿಯಿಂದ ಈ ಗ್ರಂಥದ ವಿಷಯವನ್ನು ಚೆನ್ನಾಗಿ ಅರಿಯಿರಿ. ಆಸಕ್ತಿಯಿಂದ ಶಾಶ್ವತವಾದ ಮುಕ್ತಿಯೆಂಬ ಸುಖಸಾಮ್ರಾಜ್ಯದ ಪದವಿಯಲ್ಲಿ ನೆಲೆಗೊಂಡು ಸುಖವನ್ನು ಪಡೆಯಿರಿ.

**ಶಬ್ದಾರ್ಥ:** ಸುಖಿಯಾಗಿ=ನೀವು ಸುಖವನ್ನು ಪಡೆಯಿರಿ ಎಂದರ್ಥ; * ಶುಕಮುನೀಶ್ವರ= ವೇದವ್ಯಾಸರ ಮಗ; * ಯುಕುತಿಯಲಿ=ಜಾಣ್ಮೆಯಲ್ಲಿ; * ಆಸಕತಿ=ಆಸಕ್ತಿ. * ಸಂಗ್ರಹಿಸಿ= ಸಂಕ್ಷಿಪ್ತರೂಪವಾಗಿ.

**ಟಿಪ್ಪಣಿ:** * ಶುಕಮುನಿ– ಗಿಣಿಯ ರೂಪಧರಿಸಿದ ಘೃತಾಚಿ ಎಂಬ ಅಪ್ಸರೆಯಿಂದ ವೇದವ್ಯಾಸರಿಗೆ ಜನಿಸಿದವನು. ಯಾಗಕ್ಕೆ ಅರಣಿಯನ್ನು ಅಗ್ನಿ ಉತ್ಪಾದನೆ ಮಾಡಲು ಉಜ್ಜುತ್ತಿದ್ದಾಗ ಅದರ ಮೇಲೆ ವೀರ್ಯಬಿದ್ದು ಹುಟ್ಟಿದ್ದರಿಂದ ಅರಣೀಯ (ಅರಣ) ಎಂದು ಹೆಸರು. ಉನ್ನತ ವಿದ್ಯಾಭ್ಯಾಸಕ್ಕಾಗಿ ವ್ಯಾಸರು ಶುಕನನ್ನು ಜನಕನ ಬಳಿಗೆ ಕಳಿಸಿದಾಗ ಅವನ ಸೇವೆಗೆ ವಿಲಾಸವತಿಯರನ್ನು ಗೊತ್ತುಮಾಡಿದರೂ ಶುಕನು ವಿಚಲಿತನಾಗದೆ ಜನಕನಿಂದ ಅಧ್ಯಾತ್ಮವಿದ್ಯೆ ಕಲಿತು 'ಶುಕಮುನಿ' ಆದನು, ಭಾಗವತ ರಚಿಸಿದನು, ಮಹಾಭಾರತಕ್ಕೆ ವ್ಯಾಖ್ಯಾನ ಬರೆದನು; ಭಾರತದ ಶಾಂತಿಪರ್ವದಲ್ಲಿ ೧೩೧ನೇ ಅಧ್ಯಾಯದಲ್ಲಿ ಶುಕನ ಸಂಗತಿ ವಿಸ್ತಾರವಾಗಿ ಬಂದಿದೆ. (ಮಹಾಭಾರತದ ಪಾತ್ರಗಳು, ಅ.ರಾ. ಮಿತ್ರ, ಪು೪೬)

---

ಹಿಂದೆ ಮಾಡಿದ ಸಕಲಪಾತಕ
ಬೆಂದುಹೋಹುದು ಬ್ರಹ್ಮಚಿಂತೆಯೊ
ಳೊಂದುನಿಮಿಷದೊಳಿರ್ದೊಡದರಿಂ ಹೇಳಲೇನದನು! ।
ತಂದೆಯತಾಯ್ಗಳು ಧನ್ಯರಾತನ
ಬಂಧುಗಳು ಕುಲವೆಲ್ಲ ಪಾವನ;
ಬಂದು ನಿಂದೆಡೆಯೆಲ್ಲ ಪುಣ್ಯಕ್ಷೇತ್ರವೆನಿಸುವುದು ॥ ॥೧೦॥

**ತಾತ್ಪರ್ಯ:** ಒಂದು ನಿಮಿಷಕಾಲವಾದರೂ ಬ್ರಹ್ಮಧ್ಯಾನದಲ್ಲಿ ನಿರತನಾಗಿ ಇದ್ದರೆ ಅದರ ಫಲವಾಗಿ ಪೂರ್ವಜನ್ಮಗಳಲ್ಲಿ ಮಾಡಿದಂಥ ಸಮಸ್ತಪಾಪಗಳು ಸುಟ್ಟು ಭಸ್ಮವಾಗಿ ಹೋಗುತ್ತವೆ ಎಂದಮೇಲೆ ಬೇರೆ ಹೇಳುವುದು ಇನ್ನೇನಿದೆ? ಅಂತಹ ಧ್ಯಾನನಿರತನಾದ ಬ್ರಹ್ಮಜ್ಞಾನಿಯ ತಾಯಿತಂದೆಯರು ಪುಣ್ಯಾತ್ಮರು. ಆತನ ಬಂಧುಗಳೆಲ್ಲ ಧನ್ಯರು; ಆತನ ಕಾಲವೆಲ್ಲ ಪವಿತ್ರ, ಇನ್ನು ಆತನು ಸಂಚರಿಸುತ್ತಾ ನಿಂದ ಎಡೆಗಳೆಲ್ಲ ಪುಣ್ಯಕ್ಷೇತ್ರಗಳೆನ್ನಿಸಿಕೊಳ್ಳುತ್ತವೆ.

**ಶಬ್ದಾರ್ಥ:** * ಬ್ರಹ್ಮಚಿಂತೆಯೊಳು=ಬ್ರಹ್ಮಜ್ಞಾನದ ಧ್ಯಾನದಲ್ಲಿ; * ಹಿಂದೆ=ಪೂರ್ವಜನ್ಮಗಳಲ್ಲಿ; * ಧನ್ಯರು=ಪುಣ್ಯಾತ್ಮರು; * ಪಾತಕ=ಪಾಪ.

**ಟಿಪ್ಪಣಿ–೧ :** ಈ ಪದ್ಯದಲ್ಲಿ ಬ್ರಹ್ಮಜ್ಞಾನಿಯ ಹಿರಿಮೆಯನ್ನು ಹೇಳಿದೆ.

**ಟಿಪ್ಪಣಿ–೨ :** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಟಿಪ್ಪಣಿ ಅನುವಾದಕನದು.

---

**ಮೇರುಸಾಮ್ಯಸುವರ್ಣದಾನವ,**
**ವಾರಿನಿಧಿಪರ್ಯಂತಭೂಮಿಯ,**
**ಭೂರಿಕನ್ಯಾದಾನಗೋದಾನಗಳಸಂಖ್ಯಗಳ ।**
**ಧಾರಿಣಿಯ ದಿವಿಜರಿಗೆ ಪರಮೋ**
**ದಾರಬುದ್ಧಿಯಲಿತ್ತ ಫಲ ಕೈ**
**ಸೇರುವುದು ನಿಮಿಷಾರ್ಧವಾತ್ಮಧ್ಯಾನನಿಷ್ಠರಿಗೆ ॥** ॥೧೧॥

**ತಾತ್ಪರ್ಯ:** ಅರೆನಿಮಿಷವಾದರೂ ಬ್ರಹ್ಮಜ್ಞಾನದ ಚಿಂತನೆಯಲ್ಲಿ ಶ್ರದ್ಧೆಯಿಂದ ತೊಡಗಿದವರಿಗೆ ಮೇರುಪರ್ವತದಷ್ಟು ಅಪಾರವಾದ ಚಿನ್ನದ ದಾನವನ್ನು, ಚತುಸ್ಸಾಗರಗಳ ತನಕ ಹಬ್ಬಿರುವ ವಿಸ್ತಾರವಾದ ಭೂಮಿಯನ್ನು, ಭೂರಿಸಂಖ್ಯೆಯಲ್ಲಿ ಗೋವುಗಳ ದಾನವನ್ನು, ಭೂದೇವತೆಗಳೆನ್ನಿಸಿದ ದ್ವಿಜರಿಗೆ ಅತ್ಯಂತ ಧಾರಾಳವಾದ ಮನಸ್ಸಿನಿಂದ ನೀಡಿದರೆ ಬರುವ ಪುಣ್ಯಫಲ ಲಭಿಸುವುದು.

**ಶಬ್ದಾರ್ಥ:** * **ಮೇರುಸಾಮ್ಯ**=ಮೇರುಪರ್ವತದಂತೆ ಹೇರಳವಾದ; **ಗೋದಾನಗಳ+ ಅಸಂಖ್ಯಗಳ** =ಲೆಕ್ಕವಿಲ್ಲದಷ್ಟು ಗೋವುಗಳ ದಾನವನ್ನು; * **ವಾರಿನಿಧಿ**=ಸಮುದ್ರ; * **ಪರ್ಯಂತ**=ತನಕ; * **ಧಾರಿಣಿಯ ದಿವಿಜರು**=ಭೂದೇವತೆಗಳೆನಿಸಿದ ವಿಪ್ರರು; * **ಭೂರಿಕನ್ಯಾದಾನ**=ಭೂರಿ ಸಂಖ್ಯೆಯಲ್ಲಿ ಕನ್ಯಾದಾನ ಮಾಡುವುದು (....ಉತ್ಪ್ರೇಕ್ಷಾಲಂಕಾರ).

**ಟಿಪ್ಪಣಿ:** ಆತ್ಮಧ್ಯಾನನಿಷ್ಠರಿಗೆ ಲಭ್ಯವಾಗುವ ಪುಣ್ಯವನ್ನು ಈ ಪದ್ಯದಲ್ಲಿ ಹೇಳಿದೆ. (ದಾನಗಳಲ್ಲಿ ಭೂದಾನ ಗೋದಾನ ಇತರ ದಾನಗಳಿಗಿಂತ ಸ್ವರ್ಣದಾನ ಶ್ರೇಷ್ಠ ಅದರಿಂದ ಬರುವ ಪುಣ್ಯ ಅಧಿಕ. ಆದರೆ ಬ್ರಹ್ಮಜ್ಞಾನ ಚಿಂತನೆಯಿಂದ ಬರುವ ಪುಣ್ಯಫಲ ಅವುಗಳಿಗಿಂತ ಅಧಿಕಾಧಿಕ ಎಂಬುದು ಇಲ್ಲಿನ ಅಂತರಾರ್ಥ)

**ಟಿಪ್ಪಣಿ: ಭೂರಿ** = ಅಂಕಿಗಳಲ್ಲಿ ೧೯ನೇ ಸಂಖ್ಯಾಸ್ಥಾನ. (೧ ಏಕ ೨ ದಶ ೩ ಶತ ೪ ಸಹಸ್ರ ೫ ಆಯತ ೬ ಲಕ್ಷ ೭ ಪ್ರಯುತ ೮ ಕೋಟಿ ೯ ನ್ಯರ್ಬುದ ೧೦ ಪದ್ಮ ೧೧ ಖರ್ವ ೧೨ ನಿಖರ್ವ ೧೩ ಮಹಾಪದ್ಮ ೧೪ ಶಂಖ ೧೫ ಸಮುದ್ರ ೧೬ ಮಧ್ಯ ೧೭ ಅಂತ್ಯ ೧೮ ಪರಾರ್ಧ ೧೯ ಭೂರಿ.
(ಬೇರೆ ಬೇರೆ ಗ್ರಂಥಗಳಲ್ಲಿ ಬೇರೆ ಬೇರೆ ಹೆಸರು ಮತ್ತು ವೃದ್ಧಿಸ್ಥಾನಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಉದಾ: ೭ನೇ ಸ್ಥಾನ ಪ್ರಯುತಕ್ಕೆ. ದಶಲಕ್ಷ ಎನ್ನುತ್ತಾರೆ. ನ್ಯರ್ಬುದ ೯ನೇ ಸ್ಥಾನದ ಅಂಕಿಗೆ ದಶಕೋಟಿ ಎನ್ನುತ್ತಾರೆ ಇತ್ಯಾದಿ) (ಕನ್ನಡ ನಿಘಂಟು ಕನ್ನಡ ಸಾಹಿತ್ಯ ಪರಿಷತ್ತು ಪು. ೬೭೭೪ ೭ನೇ ಸಂಪುಟ)
**ಭೂರಿ**= ೨೫ನೇ ಸಂಖ್ಯೆ (ನೋಡಿ ಶ್ರೀವತ್ಸ ನಿಘಂಟು-ಟಿ.ವಿ. ವೆಂಕಟಾಚಲಶಾಸ್ತ್ರೀ ಪು. ೩೨೨)

---

**ಅದು ನಿಮಿತ್ತದಲ್ಲಾತ್ಮವಿದ್ಯಾ**
**ಹೃದಯವಾದೀ ಗ್ರಂಥವನು ಪೇ**
**ಳಿದೆನೊಡೆಯನಾ ಮಲ್ಲಿಕಾರ್ಜುನನಾತನಾಜ್ಞೆಯಲಿ ।**
**ಮುದದಿ ಸಹಜಾನಂದಗುರುಗಳ**
**ಪದಪಯೋಜವ ನೆನೆದು ಹೃದಯದೊ**
**ಳಿದರೊಳೆಳ್ಳನಿತಿಲ್ಲವೆನಗೆ ಸ್ವತಂತ್ರದಭಿಮಾನ ॥** ॥೧೨॥

**ತಾತ್ಪರ್ಯ:** ಆದಕಾರಣ ಆತ್ಮವಿದ್ಯೆಯ ರಹಸ್ಯವನ್ನು ಸಾರುವ ಈ ಅನುಭವಾಮೃತ ಗ್ರಂಥವನ್ನು ನನ್ನ ದೈವವಾದ ಶ್ರೀ ಶೈಲಮಲ್ಲಿಕಾರ್ಜುನನ ಪ್ರೇರಣೆಯಿಂದ ಆತನ ಅಪ್ಪಣೆಯಂತೆ ರಚಿಸಿದೆನು; ನನ್ನಯ ಗುರುಗಳಾದ ಸಹಜಾನಂದರ ಪಾದಕಮಲಗಳನ್ನು ಸಂತೋಷದಿಂದ ಹೃದಯದಲ್ಲಿ ಧ್ಯಾನಿಸಿ ಈ ಕೃತಿಯನ್ನು ರಚಿಸಿದ್ದೇನೆ. ಆದಕಾರಣ ನನಗೆ ಈ ಕೃತಿರಚನೆಯಲ್ಲಿ ನನ್ನದು ಎಂಬ ಭಾವ ಎಳ್ಳನಿತೂ ಇಲ್ಲ. ಎಲ್ಲವೂ ದೈವಪ್ರೇರಣೆ ಮತ್ತು ಗುರುವಿನ ಅನುಗ್ರಹದ ಫಲ ಆಗಿದೆ.

**ಶಬ್ದಾರ್ಥ:** * **ಅದು ನಿಮಿತ್ತದಲಿ**=ಆದಕಾರಣ; * **ಪದಪಯೋಜ**=ಪಾದಕಮಲ; * **ಹೃದಯ**=ರಹಸ್ಯ, ಮರ್ಮ; * **ಆತ್ಮವಿದ್ಯಾಹೃದಯ**=ಬ್ರಹ್ಮಜ್ಞಾನದ ರಹಸ್ಯ; * **ನೆನೆದು**=ಧ್ಯಾನಿಸಿ; * **ಪೇಳಿದೆನು**=ಈ ಕೃತಿಯನ್ನು ರಚಿಸಿದ್ದೇನೆ; * **ಸ್ವತಂತ್ರದ ಅಭಿಮಾನ**=ನನ್ನದು ಎಂಬ ಗರ್ವ.

---

## ಬ್ರಹ್ಮಜ್ಞಾನ ಮತ್ತು ಅದರ ಫಲ (೧೩–೧೫)

**ಒಂದು ದಿನ ಶುಕಯೋಗಿ ವಿನಯದಿ**
**ತಂದೆಯಡಿಗಳಿಗೆರಗಿ ಚಿತ್ತಯಿ**
**ಸೊಂದುಬಿನ್ನಹ; ಬ್ರಹ್ಮವೆಂದೊಡದೆಂತಿಹುದು? ತಿಳಿವಾ ।**
**ಚಂದವಾವುದು? ತಿಳಿಯೆ ಫಲವೇ**
**ನೆಂದು ಕೇಳಲು ವ್ಯಾಸಮುನಿಪತಿ**
**ಮಂದಹಾಸದಲಂದು ನುಡಿದನು ಕಂದಗುತ್ತರವ ॥** ॥೧೩॥

**ತಾತ್ಪರ್ಯ:** ಒಂದು ದಿವಸ ವೇದವ್ಯಾಸರ ಮಗನಾದ ಶುಕಯೋಗಿ ನಮ್ರತೆಯಿಂದ ತಂದೆಯ ಪಾದಗಳಿಗೆ ನಮಿಸಿ ನನ್ನದೊಂದು ಕೋರಿಕೆಯಿದೆ, ದಯವಿಟ್ಟು ಲಾಲಿಸಬೇಕು ಎಂದನು. ಅದೇನೆಂದರೆ ಬ್ರಹ್ಮ ಎಂದರೆ ಅದು ಹೇಗಿರುವುದು? ಅದನ್ನು ತಿಳಿದುಕೊಳ್ಳುವ ಬಗೆ ಯಾವುದು? ಬ್ರಹ್ಮವನ್ನು ಅರಿತರೆ ಅದರಿಂದ ಪ್ರಯೋಜನ ಏನು? ಎಂಬುದಾಗಿ ಪ್ರಶ್ನಿಸಿದನು. ಆಗ ವೇದವ್ಯಾಸಮುನಿ ಮುಗುಳ್ನಕ್ಕು ಮಗನು ಕೇಳಿದ ಪ್ರಶ್ನೆಗಳಿಗೆ ಹೀಗೆ ಉತ್ತರಿಸಿದನು.

**ಶಬ್ದಾರ್ಥ:** * **ವಿನಯದಿ**=ನಮ್ರತೆಯಿಂದ; * **ಮಂದಹಾಸ**=ಮುಗುಳು ನಗೆ; * **ಫಲ**= ಪ್ರಯೋಜನ; * **ಬ್ರಹ್ಮ**=ಅದ್ವಿತೀಯವಾಗಿರುವ ಎಲ್ಲರ ಆತ್ಮ.

**ಟಿಪ್ಪಣಿ:** * ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಕಂದ ಕೇಳ್ಳೈ, ಬ್ರಹ್ಮವೆನಲದ**
**ರಿಂದಧಿಕವೇನಿಲ್ಲವದು ತ**
**ನ್ನಿಂದ ತಾನೇ ತೋರುತಿರ್ಪುದು; ಸ್ವಪ್ರಕಾಶವದು; ।**
**ಒಂದದದ್ವಯವಪ್ರತರ್ಕ್ಯವ**
**ದೆಂದು ಪೇಳ್ವರು; ತಿಳಿವ ಪರಿಯೆಂ**
**ತೆಂದೆನಲು ಶ್ರುತಿಗುರುಗಳಿಂದದು ಸ್ವಾನುಭವವೇದ್ಯ ॥ ॥೧೪॥**

**ತಾತ್ಪರ್ಯ:** ವ್ಯಾಸರು ಮಗನಾದ ಶುಕನಿಗೆ ಬ್ರಹ್ಮದ ಲಕ್ಷಣವನ್ನು ಹೇಳುತ್ತೇನೆ ಕೇಳು ಎಂದರು: ಬ್ರಹ್ಮ ಎಂದರೆ ಮಹತ್ತಾದುದು. ಅದಕ್ಕಿಂತ ದೊಡ್ಡದು ಯಾವುದೂ ಇಲ್ಲ. ಅದು ತನ್ನಿಂದ ತಾನೇ ಕಾಣಿಸಿಕೊಂಡು ಹೊಳೆಯುತ್ತಿರುವುದು ಎಂದರೆ ಮತ್ತೊಂದರಿಂದ ಬೆಳಗದೆ ತಾನೇ ಬೆಳಗುವುದು; ತನ್ನ ಜಾತಿಯ ರೂಪವಾದದ್ದು ಮತ್ತು ತನ್ನ ಅವಯವ ರೂಪವಾದದ್ದು ಎಂಬ ಭೇದವಿಲ್ಲದ್ದು; ಬೇರೆ ಜಾತಿಯ ಭೇದವಿಲ್ಲದ್ದು, ಊಹಿಸಿ ತಿಳಿಯಲು ಅಶಕ್ಯವಾದುದು; ವೇದವಾಕ್ಯಗಳಿಂದ, ಗುರುಗಳ ಬೋಧೆಯಿಂದ ತನ್ನ ಅನುಭವಕ್ಕೆ ಬಂದು ಗೊತ್ತಾಗತಕ್ಕದ್ದು.

**ಶಬ್ದಾರ್ಥ:** ಅದ್ವಯ=ಬೇರೆ ಜಾತಿಯ (ವಿಜಾತೀಯ) ಭೇದವಿಲ್ಲದ್ದು; ಅಪ್ರತರ್ಕ್ಯ=ಊಹಿಸಿ ತಿಳಿಯಲಶಕ್ಯ; ಶ್ರುತಿ ಗುರುಗಳಿಂದದು ಸ್ವಾನುಭವ ವೇದ್ಯ=ಶ್ರುತಿಯ ಮತ್ತು ಗುರುಗಳ ಬೋಧೆಯಿಂದ ತನ್ನ ಅನುಭವಕ್ಕೆ ಬಂದು ಗೊತ್ತಾಗತಕ್ಕದ್ದು.

**ಟಿಪ್ಪಣಿ–೧:** ಸ್ವಪ್ರಕಾಶ– ಮತ್ತೊಂದರಿಂದ ಬೆಳಗದೆ ತಾನೇ ಬೆಳಗುವುದು (ಇದೂ ತನ್ನಿಂದ ತಾನೇ ತೋರುತಿರ್ಪುದು ಎಂಬ ಮಾತಿನ ಪ್ರಕಾರಾಂತವು)

**ಟಿಪ್ಪಣಿ–೨:** ಒಂದು– ತನ್ನ ಜಾತಿಯ ರೂಪವಾದ (ಸಜಾತೀಯ) ಮತ್ತು ತನ್ನ ಅವಯವ ರೂಪವಾದ (ಸ್ವಗತ) ಎಂಬ ಭೇದವಿಲ್ಲದ್ದು.

---

**ಶ್ರುತಿಗುರುಗಳುಪದೇಶದಿಂದಲಿ**
**ಮಥಿಸಿ ತನ್ನೊಳು ತಾನೆ ತಿಳಿದದ**
**ಸತತ ಮನನಾಭ್ಯಾಸವಶದಿಂ ದೃಢತರವ ಮಾಡೆ ।**
**ಅತಿಶಯಜ್ಞಾನಾಪರೋಕ್ಷ**
**ಸ್ಥಿತಿಯೆನಿಸುವನುಭವವದಾಗಲು**
**ಗತಿಯ ಪಡೆವರು; ಯೋಗಸಹಜಾನಂದಫಲವದಕೆ ॥ ॥೧೫॥**

**ತಾತ್ಪರ್ಯ:** ವೇದಗಳಿಂದಲೂ, ಗುರುಮುಖದಿಂದಲೂ ಉಪದೇಶವನ್ನು ಪಡೆದು ಯುಕ್ತಿಗಳಿಂದ ಚೆನ್ನಾಗಿ ವಿಮರ್ಶೆಮಾಡಿ ತನಗೆ ತಾನೇ ಅರ್ಥಮಾಡಿಕೊಂಡು ನಿರಂತರವಾದ ಧ್ಯಾನದಿಂದ ಮತ್ತೆ ಮತ್ತೆ ಅನುಸಂಧಾನಮಾಡಿ ಸ್ಥಿರಪಡಿಸಿಕೊಂಡರೆ ಅದು ಉತ್ಕೃಷ್ಟವಾದ ಜ್ಞಾನದ ಸಾಕ್ಷಾತ್ಕಾರವೆನಿಸುತ್ತದೆ; ಅದರ ಪ್ರತ್ಯಕ್ಷಜ್ಞಾನದ ಅನುಭವವಾಗಲು ಮುಕ್ತಿಹೊಂದುವರು. ಜ್ಞಾನಯೋಗದಿಂದ ಸಿಗುವ ಸ್ವಭಾವಸಿದ್ಧವಾದ ಆನಂದವೇ ಅದರ ಪ್ರಯೋಜನವಾಗಿರುತ್ತದೆ.

**ಶಬ್ದಾರ್ಥ:** **ಮಥಿಸಿ**=ಕಡೆದು (ಯುಕ್ತಿಗಳಿಂದ ಚೆನ್ನಾಗಿ ವಿಮರ್ಶೆ ಮಾಡಿ); **ಅತಿಶಯ ಜ್ಞಾನಾಪರೋಕ್ಷಸ್ಥಿತಿ**=ಉತ್ಕೃಷ್ಟವಾದ ಭಾಗದ ಸಾಕ್ಷಾತ್ಕಾರವಾಗುವಿಕೆ; **ಯೋಗಸಹಜಾನಂದ**=ಜ್ಞಾನಯೋಗದಿಂದ ಸಿಗುವ ಸ್ವಭಾವಸಿದ್ಧವಾದ ಆನಂದ; **ಗತಿ**=ಜ್ಞಾನ, ಆನಂದ, ಮುಕ್ತಿ; **ಶ್ರುತಿ**=ವೇದವಾಕ್ಯಗಳು.

---

## ವಿಷಯಸೂಚಿಕೆ (೧೬-೧೭)

**ಅನುಭವಾಮೃತದಲ್ಲಿ ಪೇಳುವೆ**
**ನಿನಗೆ ಮೊದಲಧಿಕಾರಲಕ್ಷಣ**
**ವನು, ಇಹಾಮುತ್ರಾರ್ಥಫಲಭೋಗದ ವಿರಾಗವನು, ।**
**ತನಯ, ತ್ವಂಪದ ತತ್ವದದ ಶೋ**
**ಧನೆಯ ಲಕ್ಷ್ಯವನಸಿಪದದೊಳೊಂ**
**ದೆನಿಸುವೈಕ್ಯವ, ಭೂಮಿಕೆಗಳಭ್ಯಾಸದಿರವುಗಳ ॥ ॥೧೬॥**

**ತಾತ್ಪರ್ಯ:** ನಿನಗೆ ಈ ಅನುಭವಾಮೃತ ಗ್ರಂಥದ ಈ ವಿಷಯಗಳನ್ನು ಕ್ರಮವಾಗಿ ಹೇಳುವೆ ಕೇಳು: ಮೊದಲನೇ ಅಧ್ಯಾಯದಲ್ಲಿ ಅಧ್ಯಾತ್ಮವನ್ನು ಅಭ್ಯಾಸ ಮಾಡಲು ತಕ್ಕವನಾದ ಅಧಿಕಾರದ ಲಕ್ಷಣವನ್ನು, ಎರಡನೆಯ ಅಧ್ಯಾಯದಲ್ಲಿ, ಈ ಲೋಕದ ಮತ್ತು ಪರಲೋಕದ ಫಲಗಳ ಸುಖವನ್ನು ತೊರೆಯುವ ಬಗೆಯನ್ನು, ಮೂರನೆಯ ಅಧ್ಯಾಯದಲ್ಲಿ ತ್ವಂ (ನೀನು) ಎಂಬ ಪದದ ವಿವರಣೆಯನ್ನು, ನಾಲ್ಕನೆಯ ಅಧ್ಯಾಯದಲ್ಲಿ ತತ್ (ಅದು) ಎಂಬ ಪದದ ಶೋಧನೆಯನ್ನು, ಐದನೆಯ ಅಧ್ಯಾಯದಲ್ಲಿ ಅಸಿ (ಆಗಿದ್ದೀಯೆ) ಎಂಬ ಪದದ ಐಕ್ಯದ ವಿವರಣೆಯನ್ನು, ಆರನೆಯ ಅಧ್ಯಾಯದಲ್ಲಿ ಸಪ್ತಭೂಮಿಕೆಗಳ ಅಭ್ಯಾಸದ ವಿವರಗಳನ್ನು ಹೇಳುತ್ತೇನೆ.

**ಶಬ್ದಾರ್ಥ:** **ಇಹಾಮುತ್ರಾರ್ಥಫಲಭೋಗ**=ಈ ಲೋಕದ ಮತ್ತು ಪರಲೋಕದ ಫಲಗಳ ಸುಖ; **ತ್ವಂಪದತತ್ವದದ**=ನೀನು ಎಂಬರ್ಥದ 'ತ್ವಂ' ಎಂಬ ಮತ್ತು ಅದು ಎಂಬರ್ಥದ ತತ್ ಎಂಬ ಸಂಸ್ಕೃತ ಶಬ್ದಗಳ ವಿವರಗಳನ್ನು; **ಅಸಿ ಪದದೊಳು**=ಅಸಿ ಎಂಬ ಸಂಸ್ಕೃತ ಶಬ್ದದಲ್ಲಿ.

**ಟಿಪ್ಪಣಿ-೧: ಭೂಮಿಕೆಗಳ**- ಏಳು ಮೆಟ್ಟಿಲುಗಳ (ಸಪ್ತ) ಭೂಮಿಕೆಗಳ ವಿಚಾರವೂ ಮುಂದಿನ ಪದ್ಯದಲ್ಲಿ ಸೂಚಿಸುವ ಶ್ರವಣ, ಮನನ ಮತ್ತು ಸಮಾಧಿ ಇವುಗಳ ವಿಚಾರಗಳೂ ಒಂದೇ ಅಧ್ಯಾಯದಲ್ಲಿ ಇರುವುವು.

**ಟಿಪ್ಪಣಿ-೧: * ಸಪ್ತಭೂಮಿಕೆಗಳು-** ಬ್ರಹ್ಮಾನಂದ ಪಡೆಯಲು ಸಾಧಕನು ಏರಬೇಕಾದ ಏಳು ಮೆಟ್ಟಿಲುಗಳು: ೧. ಸುಖೇಚ್ಛೆ, ೨. ಆತ್ಮ ವಿಚಾರ, ೩. ನಿಸ್ಸಂಗ, ೪. ವಾಸನಾಕ್ಷಯ, ೫. ಆನಂದಿನಿ, ೬. ತುರ್ಯ, ೭. ತುರ್ಯಾತೀತ, (ಪ ಪ - ಪುಟ ೩೯೫).

---

**ಶ್ರವಣಮನನಾದಿಗಳ ವಿವರವ,**
**ಸವನಿಸುವ ಸುಸಮಾಧಿಭೇದವ**
**ನವಿರಳದ ಪರಮಾತ್ಮಪದವನಭೇದವಾದವನು ।**
**ವಿವರವಹ ಜೀವತ್ರಯಂಗಳ,**
**ಭವರಹಿತಯೋಗಿಗಳ ಚರಿತೆಯ**
**ಸುವಿಮಲಾತ್ಮಕ ನಿರ್ಗುಣಾರಾಧನೆಯ ನಿರ್ಣಯವ ॥ ॥೧೭॥**

**ತಾತ್ಪರ್ಯ:** ಏಳನೆಯ ಅಧ್ಯಾಯದಲ್ಲಿ ಶ್ರವಣ, ಮನನ, ನಿದಿಧ್ಯಾಸನ ಮೊದಲಾದವುಗಳ ವಿವರಗಳನ್ನು ತಿಳಿಸುವ ಶ್ರೇಷ್ಠತರವಾದ ಸಮಾಧಿಭೇದಗಳನ್ನು ಎಂಟನೆಯ ಅಧ್ಯಾಯದಲ್ಲಿ ಸರ್ವವ್ಯಾಪಿ ಭಗವಂತನ ಪದವಿಚಾರವನ್ನು ಜೀವಾತ್ಮ-ಪರಮಾತ್ಮ ಬೇರೆ ಅಲ್ಲ ಎಂಬ ಅಭೇದವಾದವನ್ನು ಒಂಬತ್ತನೆಯ ಅಧ್ಯಾಯದಲ್ಲಿ ವ್ಯಾವಹಾರಿಕ ಜೀವ ಪ್ರಾತಿಭಾಸಿಕ ಜೀವ, ಪಾರಮಾರ್ಥಿಕ ಜೀವಗಳೆಂಬ ಜೀವತ್ರಯ ಸ್ವರೂಪಾದಿಗಳನ್ನು ಹತ್ತನೆಯ ಅಧ್ಯಾಯದಲ್ಲಿ ಜೀವನ್ಮುಕ್ತರಾದ ಯೋಗೀಂದ್ರರ ಇತಿಹಾಸವನ್ನು ಹನ್ನೊಂದನೆಯ ಅಧ್ಯಾಯದಲ್ಲಿ ಅತ್ಯಂತ ಶ್ರೇಷ್ಠವಾದ ಜನನಮರಣಾದಿಗಳಿಲ್ಲದ ನಿರ್ಗುಣೋಪಾಸನೆಯನ್ನು ಮಾಡತಕ್ಕ ವಿಧಾನಗಳನ್ನು ಕ್ರಮವಾಗಿ ಹೇಳುವೆನು.

**ಶಬ್ದಾರ್ಥ:** **ಸವನಿಸುವ**=ಹೊರೆಯುವ; **ಅಭೇದವಾದವ**=ಅದ್ವೈತವನ್ನು; * **ನಿರ್ಗುಣಾರಾಧನೆ**= ಪರಬ್ರಹ್ಮನ ಉಪಾಸನೆ; * **ಸುವಿಮಲಾತ್ಮಕ**=ಅತ್ಯಂತ ಶ್ರೇಷ್ಠವಾದ; * **ಭವರಹಿತಯೋಗಿ**= ಜೀವನ್ಮುಕ್ತವಾದವರು.

**ಟಿಪ್ಪಣಿ-೧: * ಯುಗ್ಮ ವಿಚಾರ-** ಅರ್ಥದ ದೃಷ್ಟಿಯಿಂದ ಎರಡು ಪದ್ಯಗಳನ್ನು ಒಟ್ಟಿಗೆ ತೆಗೆದುಕೊಂಡು ಅರ್ಥೈಸಬೇಕಾದ ಸಂದರ್ಭದಲ್ಲಿ ಈ ಎರಡು ಪದ್ಯ ೧೬+೧೭ ಗಳನ್ನು 'ಯುಗ್ಮ'ಗಳೆಂದು ಕರೆಯುತ್ತಾರೆ. ಇಲ್ಲಿ ೧೬+೧೭ ಪದ್ಯಗಳು 'ಯುಗ್ಮ' ಆಗಿದೆ. ಎರಡು ಪದ್ಯಗಳ ಅರ್ಥವನ್ನು ಒಟ್ಟಿಗೆ ಪರಿಗಣಿಸಬೇಕು.

೧೬ನೇ ಪದ್ಯದಲ್ಲಿ ೧-೫ ಅಧ್ಯಾಯಗಳ ವಿಷಯಗಳನ್ನು ೧೭ನೇ ಪದ್ಯದಲ್ಲಿ ೬-೧೧ ಅಧ್ಯಾಯಗಳ ವಿಷಯಗಳನ್ನು ಕವಿ ತಿಳಿಸಿದ್ದಾನೆ.

**ಟಿಪ್ಪಣಿ-೨: * ಜೀವತ್ರಯ-** ವ್ಯಾವಹಾರಿಕ ಜೀವ, ಪ್ರಾತಿಭಾಸಿಕ ಜೀವ ಪಾರಮಾರ್ಥಿಕ ಜೀವ (ಪ ಪ - ಪು.೧೬೭)

---

## ಅಧಿಕಾರಿಗಳು (೧೮-೩೦)

ಮಗನೆ, ಬ್ರಹ್ಮವ ತಿಳಿಯಲಧಿಕಾ
ರಿಗಳನರಿಯಲುಬೇಕು ಮೊದಲಲಿ;
ಬಗೆದು ಸುಕ್ಷೇತ್ರದಲಿ ಬೀಜವ ಬಿತ್ತೆ ಫಲವಹುದು; ।
ನಗೆಯಲಾ! ಊಷರದ ಭೂಮಿಯೊ
ಳೊಗೆಯಲದು ಫಲಕಾರಿಯಹುದೇ?
ಸೊಗಸದದು ಕೇಳನಧಿಕಾರಿಗೆ ಯೋಗ್ಯವಲ್ಲೆಂದ ॥ ॥೧೮॥

**ತಾತ್ಪರ್ಯ:** ಶುಕಮುನಿಯೇ ಕೇಳು, ಪರಬ್ರಹ್ಮಸ್ವರೂಪವನ್ನು ತಿಳಿಸಬೇಕಾದರೆ ಮೊದಲು ಅದನ್ನು ತಿಳಿಯತಕ್ಕ, ವ್ಯಕ್ತಿಯ ಯೋಗ್ಯತೆಯನ್ನು ತಿಳಿಯಬೇಕು ಎಂದರೆ– ಪರಬ್ರಹ್ಮಜ್ಞಾನ ಪಡೆಯಲು ಅರ್ಹನೇ– ಎಂಬುದನ್ನು ತಿಳಿಯಬೇಕು. ವಿಚಾರಮಾಡಿ ಉತ್ತಮಕ್ಷೇತ್ರದಲ್ಲಿ ಬೀಜವನ್ನು ಬಿತ್ತಿದರೆ ತಕ್ಕ ಬೆಳೆ ಬೆಳೆಯುತ್ತದೆ. ಮರುಭೂಮಿಯಲ್ಲಿ ಬೀಜವನ್ನು ಬಿತ್ತಿದರೆ ಅದು ಸಾರ್ಥಕವಾಗುವುದೇ? ನಗೆಪಾಟಲಿಗೆ ಈಡಾಗುತ್ತಾರೆ ಅಲ್ಲವೆ? ಆದ್ದರಿಂದ ಆ ರೀತಿ ಮಾಡುವುದು ಯೋಗ್ಯವಾಗದು. ಆದಕಾರಣ ಅಧಿಕಾರಿ ಅಲ್ಲದವನು ಬ್ರಹ್ಮಜ್ಞಾನ ಪಡೆಯಲು ಸೂಕ್ತ ವ್ಯಕ್ತಿ ಅಲ್ಲ.

**ಶಬ್ದಾರ್ಥ:** ಬಗೆದು=ವಿಚಾರಮಾಡಿ; ನಗೆಯಲಾ=ನಗೆಗೇಡಲ್ಲವೆ; ಊಷರದ=ಮರುಭೂಮಿಯ; * ಸೊಗಸದದು=ಯೋಗ್ಯವೆನಿಸದು; * ಬ್ರಹ್ಮವ=ಪರಬ್ರಹ್ಮಸ್ವರೂಪವ; * ಅನಧಿಕಾರಿಗೆ =ಅಧಿಕಾರಕ್ಕೆ ತಕ್ಕವನಲ್ಲದವನಿಗೆ.

---

ದಾನಧರ್ಮದಯಾನ್ವಿತರು, ನಿ
ರ್ಮಾನಮದಮತ್ಸರರು, ವಿಹಿತರು,
ಮೌನಮೊದಲಾಗಿರ್ದ ನಿಯಮಧ್ಯಾನತತ್ಪರರು, ।
ಜ್ಞಾನಸಾಧನಶಮದಮಾದಿ ವಿ
ಧಾನನಿರತರು, ದಂಭದರ್ಪಗ
ಳೇನುಮಿಲ್ಲದ ಶಾಂತರೇ ತತ್ತ್ವಾಧಿಕಾರಿಗಳು ॥ ॥೧೯॥

**ತಾತ್ಪರ್ಯ:** ಬ್ರಹ್ಮಜ್ಞಾನ ತಿಳಿಯಲು ಅಧಿಕಾರಿಗಳಾರು ಎಂದರೆ ಸತ್ಪಾತ್ರರಿಗೆ ದಾನ ಮಾಡಿದವರು; ಸದಾಚಾರದಲ್ಲಿ ನಿರತರಾದವರು; ಕಾರುಣ್ಯ ತೋರುವರು; ಅಭಿಮಾನ, ಗರ್ವ, ಅಸೂಯಾರಹಿತರು; ಇತರರಿಗೆ ಹಿತ ಬಯಸುವವರು; ಮೌನ ಮೊದಲಾದ ನಿಯಮಾದಿ ಧ್ಯಾನಗಳಲ್ಲಿ ನಿರತರಾದವರು; ಬ್ರಹ್ಮಜ್ಞಾನಕ್ಕೆ ಸಾಧನವಾದ ಶಮ (ಮನೋನಿಗ್ರಹ) ದಮ (ಇಂದ್ರಿಯ ನಿಗ್ರಹ) ತಪ, ಸತ್ಯ, ಕ್ಷಮಾ, ದಯಾ, ದಾನ ಮುಂತಾದ ಅಭ್ಯಾಸಶೀಲರು; ಕಪಟ, ಅಹಂಕಾರಗಳಿಲ್ಲದೆ ಸ್ಥೈರಣೆಯುಳ್ಳವರು; ಇಂಥವರೆಲ್ಲಾ ತಾವು ಬ್ರಹ್ಮರೆಂದು ತಿಳಿಯುವ ತತ್ತ್ವಜ್ಞಾನ ಹೊಂದಲು ತಕ್ಕವರು.

**ಶಬ್ದಾರ್ಥ:** ದಯಾನ್ವಿತರು=ಕರುಣಾಶಾಲಿಗಳು; ನಿರ್ಮಾನ=ನಿರಭಿಮಾನಿ; ಹಿಹಿತರು=ಇತರರ ಹಿತ ಬಯಸುವವರು; ಶಮ=ಮನೋನಿಗ್ರಹ; ದಮ=ಇಂದ್ರಿಯ ನಿಗ್ರಹ; ದಂಭ=ಕಪಟ; ದರ್ಪ=ಅಹಂಕಾರ.

**ಟಿಪ್ಪಣಿ–೧ :** * ನಿತ್ಯಕರ್ಮ- (ನಿಯತ ಕರ್ಮ) ಶಾಸ್ತ್ರದಲ್ಲಿ ಮಾಡಲೇಬೇಕೆಂದು ವಿಧಿಸಿರುವ ಅಗ್ನಿಹೋತ್ರಾದಿ ಶಾಸ್ತ್ರೀಯ ಕರ್ಮಗಳು (ಪಾಶ-ಪುಟ. ೧೭೧)

**ಟಿಪ್ಪಣಿ–೨ :** * ನೈಮಿತ್ತಿಕ ಕರ್ಮ- ಯಾವುದಾದರೂ ನಿಮಿತ್ತ (ಕಾರಣದಿಂದ) ವಿಶೇಷಸಂದರ್ಭದಲ್ಲಿ ಮಾಡಲೇಬೇಕಾದ ಕರ್ಮಗಳು, ಜಾತಕರ್ಮ ಇತ್ಯಾದಿ (ಪಪ- ಪುಟ. ೨೨೩)

**ಟಿಪ್ಪಣಿ–೩ :** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಟಿಪ್ಪಣಿ ಅನುವಾದಕನದು.

---

**ಸತ್ಯಶೌಚಾಚಾರನಿರತರು,**
**ಚಿತ್ತದಲಿ ನಿರ್ಮಲರು, ನಿಸ್ಪೃಹ**
**ವೃತ್ತಿಯಲಿ ವರ್ತಿಸುವರಾಶಾಪಾಶವರ್ಜಿತರು, ।**
**ಉತ್ತಮೋತ್ತಮರಾದ ಗುರುಪದ**
**ಭಕ್ತಿಯುಕ್ತರು, ಭವದಬೇರನು**
**ಕಿತ್ತುಬಿಸುಡುವ ನಿಪುಣರೇ ತತ್ತ್ವಾಧಿಕಾರಿಗಳು ॥ ॥೨೦॥**

**ತಾತ್ಪರ್ಯ:** ಸತ್ಯವಂತರು; ಶುದ್ಧರಾಗಿರುವರು; ಸದಾಚಾರಿಗಳು; ಉದ್ಯೋಗದಲ್ಲಿ ದುರಾಸೆ ತೊರೆದವರು; ಮೋಹದ ಬಂಧನವನ್ನು ದೂರಮಾಡಿದ ವಿರಕ್ತರು. ಅತಿಶ್ರೇಷ್ಠ ಸದ್ಗುರುವಿನ ಪಾದಸೇವೆಯಲ್ಲಿ ನಿಷ್ಠರಾದವರು; ಹುಟ್ಟು ಸಾವುಗಳೆಂಬ ಭವಬಂಧನವೆಂಬ ಸಂಸಾರದ ಬೇರನ್ನು ಕಿತ್ತೆಸೆಯಬಲ್ಲ ಪಾರಂಗತರು; ಇವರೆಲ್ಲ ಬ್ರಹ್ಮಜ್ಞಾನ ಹೊಂದಲು ತಕ್ಕ ಅಧಿಕಾರಿಗಳಾಗಿರುತ್ತಾರೆ.

**ಶಬ್ದಾರ್ಥ:** ನಿರ್ಮಲರು=ಪಾಪವಿಲ್ಲದವರು; ನಿಸ್ಪೃಹ=ದುರಾಸೆಯಿಲ್ಲದ; ಭವದ=ಹುಟ್ಟು ಸಾವುಗಳ; ತತ್ತ್ವಾಧಿಕಾರಿಗಳು=ತಾವು ಬ್ರಹ್ಮರೆಂಬುದನ್ನು ತಿಳಿಯುವುದಕ್ಕೆ ತಕ್ಕವರು.

---

**ನಿತ್ಯ ನೈಮಿತ್ತಿಕವ ಕಳೆದಾ**
**ಪ್ರತ್ಯವಾಯಕೆ ಮಾಡಿ ಪ್ರಾಯ**
**ಶ್ಚಿತ್ತವನು, ಜಪತಪದಿ, ಕಾಮ್ಯನಿಷಿದ್ಧಗಳ ಬಿಟ್ಟು, ।**
**ಭಕ್ತಿಯಿಂದೀಶ್ವರನ ಪೂಜಿಸಿ,**
**ಚಿತ್ತಶುದ್ಧಿಯಪಡೆದು, ಮೋಕ್ಷವ**
**ನರ್ಥಿಸುತ್ತಿಹ ಸಾಧುಗಳೆ ತತ್ತ್ವಾಧಿಕಾರಿಗಳು ॥ ॥೨೧॥**

**ತಾತ್ಪರ್ಯ:** ಶಾಸ್ತ್ರದಲ್ಲಿ ಮಾಡಲೇಬೇಕೆಂದು ಹೇಳಿದ ನಿತ್ಯಕರ್ಮಗಳನ್ನೂ, ಯಾವುದಾದರೂ ಕಾರಣದಿಂದ ವಿಶೇಷ ಸಂದರ್ಭಗಳಲ್ಲಿ ಮಾಡಲೇಬೇಕಾದ ನೈಮಿತ್ತಿಕ

ಕರ್ಮಗಳನ್ನು ಮಾಡದೇ ಬಿಟ್ಟಿದ್ದರಿಂದ ಬಂದ ದೋಷಗಳನ್ನು (ಪ್ರತ್ಯವಾಯಕೆ) ಪಾಪಪರಿಹಾರಾರ್ಥ ಮಾಡಿಕೊಳ್ಳಬೇಕಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಜಪತಪಾದಿಗಳನ್ನು ಮಾಡುವುದರ ಮೂಲಕ ಫಲದಾಸೆಯಿಂದ ಮಾಡುವ ಕರ್ಮಗಳನ್ನೂ, ಮಾಡಬಾರದ ಕರ್ಮಗಳನ್ನೂ ತ್ಯಜಿಸಿದರೂ ಭಗವದರ್ಪಣಬುದ್ಧಿಯಿಂದ ಪರಮಾತ್ಮನನ್ನು ಆರಾಧಿಸುತ್ತ ಪರಿಶುದ್ಧಮನದವರಾಗಿ ಬ್ರಹ್ಮಜ್ಞಾನ ಬಯಸುವ ಶಾಂತಚಿತ್ತರು–ಇವರೆಲ್ಲರೂ ತತ್ತ್ವಾಧಿಕಾರಿಗಳಾಗಲು ಅರ್ಹರಾಗಿದ್ದಾರೆ.

ಶಬ್ದಾರ್ಥ : ಸಾಧು=ಶಾಂತ ಚಿತ್ತ; ಮೋಕ್ಷ=ಬ್ರಹ್ಮಜ್ಞಾನವನ್ನು ಪಡೆಯುವುದು; ಕಾಮ್ಯಕರ್ಮ= ಫಲದಾಸೆಯಿಂದ ಮಾಡುವ ಕರ್ಮ; ನಿಷಿದ್ಧ ಕರ್ಮ=ಮಾಡಬಾರದ ಕೆಲಸ ಮಾಡುವುದು.

---

**ಅಷ್ಟಪಾಶವಹರಿದು, ಕ್ಲೇಶಗ**
**ಳಿಟ್ಟಣೆಯ ನೆರೆಮುರಿದು, ಮನಸಿನ**
**ದುಷ್ಟತನವನು ಬಿಡಿಸುತರಿಗಳನಾರ ಪರಿಹರಿಸಿ, ।**
**ನಿಷ್ಠೆಯಿಂ ಗುರುಹಿರಿಯರಲಿ ಮನ**
**ಮುಟ್ಟಿ ಭಕ್ತಿಯಮಾಡಿ, ಬ್ರಹ್ಮದ**
**ಬಟ್ಟೆಯನು ಹಿಡಿದವರೆ ನೆರೆ ತತ್ತ್ವಾಧಿಕಾರಿಗಳು ॥ ॥೨॥**

ತಾತ್ಪರ್ಯ: ಘೃಣಾ, ಶಂಕಾ, ಭಯ, ಲಜ್ಜಾ, ಜುಗುಪ್ಸಾ, ಕುಲ, ಶೀಲ ಜಾತಿಗಳೆಂಬ ಅಷ್ಟಬಂಧನಗಳನ್ನು ದೂರಮಾಡಿ, ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ ಅಧಿನಿವೇಶಗಳೆಂಬ ಪಂಚಕ್ಲೇಶಗಳನ್ನು ಪೂರ್ಣವಾಗಿ ಕಳೆದುಕೊಂಡು, ಮನಸ್ಸಿನ ದುರಾಲೋಚನೆಗಳನ್ನು ಹೊರದೂಡುತ್ತಾ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರು ಮಂದಿ ಶತ್ರುಗಳನ್ನು ಗೆಲ್ಲುತ್ತಾ ಶ್ರದ್ಧಾಭಕ್ತಿಗಳಿಂದ ಗುರುಗಳಲ್ಲೂ ಹಿರಿಯರಲ್ಲೂ ಮನಃಪೂರ್ವಕವಾಗಿ ಭಕ್ತಿಯುಳ್ಳವರಾಗಿ ಬ್ರಹ್ಮಜ್ಞಾನ ಪಡೆಯುವ ದಾರಿಯನ್ನು ಹಿಡಿದವರೆ ನಿಜಕ್ಕೂ ತತ್ತ್ವಾಧಿಕಾರಿಗಳಾಗಿರುತ್ತಾರೆ.

ಶಬ್ದಾರ್ಥ: ಇಟ್ಟಣೆ=ಗುಂಪು; ಅರಿಗಳನು+ಆರ=ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ಶತ್ರುಗಳನ್ನು; ಬಟ್ಟೆಯನು=ದಾರಿಯನ್ನು; ನೆರೆಮುರಿದು=ಪೂರ್ಣನಾಶಮಾಡಿ

ಟಿಪ್ಪಣಿ–೧: ಅಷ್ಟಪಾಶಗಳು– "ಘೃಣಾ ಶಂಕಾ ಭಯಂ ಲಜ್ಜಾ ಜುಗುಪ್ಸಾ (ಚೇತಿ ಪಂಚಮೀ) ಕುಲಂ ಶೀಲಂ (ತಥಾ) ಜಾತಿ (ರಷ್ಟೌ ಪಾಶಾಃ ಪ್ರಕೀರ್ತಿತಾಃ)"

ಈ ಶ್ಲೋಕದ ವಿವರಣೆಯನ್ನು ಕವಿ ಮುಂದೆ ಅ ೧೦–ಪ ೧೧ ರಲ್ಲಿ ತಾನೇ ಹೇಳುವನು.

ಟಿಪ್ಪಣಿ–೨: ಕ್ಲೇಶಗಳು–ಪಂಚಕ್ಲೇಶಗಳು: ಅವಿದ್ಯೆ, ಅಸ್ಮಿತೆ ರಾಗ ದ್ವೇಷ ಅಭಿನಿವೇಶ ಇವುಗಳ ವಿವರವನ್ನು ೧೦ ಪ ೬ ಮತ್ತು ೭ ರಲ್ಲಿ ಕವಿ ತಾನೇ ಹೇಳುವೆನು.

---

ಮನದಿವಾಕ್ಕಾಯದಲಿ ಪಾಪವ
ನೆನೆಯ; ನುಡಿಯನು ಮಾಡನನ್ಯರು
ತನಗೆ ಮಾಡಿದೊಡಪಕೃತಿಯನದು ಪೂರ್ವಕೃತವೆಂಬ; ।
ತನುಜರನುಜರು ತಾಯಿತಂದೆಗ
ಳೆನಿತು ತನ್ನನು ದೂಷಿಸಲು ಭೂ
ಷಣವ ಮಾಡಲು ಹಿಗ್ಗಿತಗ್ಗನು ಮೋಕ್ಷಕಾಂಕ್ಷಕನು ॥ ॥೨೩॥

**ತಾತ್ಪರ್ಯ:** ಮೋಕ್ಷಾಪೇಕ್ಷಿಯಾದವನು ಇತರರ ಬಗ್ಗೆ ಕೆಟ್ಟದನ್ನು ಮನಸ್ಸಿನಲ್ಲಿ ತಾನು ನೆನೆಯುವುದಿಲ್ಲ ; ಮಾತಿನಲ್ಲಿ ಹೇಳುವುದಿಲ್ಲ, ದೈಹಿಕವಾಗಿ ಕೆಟ್ಟದ್ದಾಗಿ ವರ್ತಿಸುವುದಿಲ್ಲ; ಇತರರು ತನಗೆ ಕೆಟ್ಟುದನ್ನು ಮಾಡಿದರೆ ಅದು ತನ್ನ ಪೂರ್ವಜನ್ಮದ ಫಲವೆನ್ನುತ್ತಾನೆ. ಮಕ್ಕಳು ಅಣ್ಣತಮ್ಮಂದಿರು, ತಾಯಿತಂದೆಗಳು ತನ್ನನ್ನು ಎಷ್ಟೇ ಹೊಗಳಿದರೂ ಹಿಗ್ಗುವುದಿಲ್ಲ; ನಿಂದಿಸಿದರೆ ಕುಗ್ಗುವುದಿಲ್ಲ ಸಮಚಿತ್ತನಾಗಿ ಇರುತ್ತಾನೆ.

**ಶಬ್ದಾರ್ಥ:** * ಪಾಪವನೆನೆಯ=ತಾನು ಇತರರ ಬಗ್ಗೆ ಕೆಟ್ಟದ್ದನ್ನು ಯೋಚಿಸುವುದಿಲ್ಲ; * ತನುಜರು=ಮಕ್ಕಳು; * ಅನುಜರು=ಅಣ್ಣತಮ್ಮಂದಿರು; * ಭೂಷಣವ ಮಾಡಲು=ಹೊಗಳಲು; * ಪೂರ್ವಕೃತವು=ಹಿಂದೆ ಮಾಡಿದ ಪಾಪದ ಫಲವು.

---

ಬಂದ ಸುಖದುಃಖಗಳು ತನ್ನನು
ಮುಂದುಗೆಡಿಸಲು ನೋಯದುಬ್ಬದೆ
ಬಂದುದೆಲ್ಲವುಮೀಶ್ವರಾಜ್ಞೆಯೆನುತ್ತ ಧೈರ್ಯವನು ।
ತಂದು, ಮನದಲಿ ದೃಢವಿರಕ್ತಿಯ
ಹೊಂದಿ, ಭೋಗಭ್ರಾಂತಿ ತನಗಳಿ
ದಂದು ಮೋಕ್ಷಾಪೇಕ್ಷೆಯಾಗೆ ಮುಮುಕ್ಷುವೆನಿಸುವನು ॥ ॥೨೪॥

**ತಾತ್ಪರ್ಯ:** ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪಪುಣ್ಯಗಳ ಫಲವಾಗಿ ಈ ಜನ್ಮದಲ್ಲಿ ಒದಗಿದ ಸುಖಗಳು ದುಃಖಗಳು ಕಂಗೆಡಿಸಿದಾಗ ಕಷ್ಟಗಳಿಗೆ ನೋಯದೆ, ಸುಖಗಳಿಗೆ ಹಿಗ್ಗದೆ, ತಮಗೆ ಒದಗಿದ ಕಷ್ಟಗಳೆಲ್ಲವೂ ಪರಮಾತ್ಮ ಸಂಕಲ್ಪದಂತೆ ಒದಗಿದೆಯೆಂದು ತಿಳಿಯುತ್ತಾ ಮನಸ್ಸಿಗೆ ಧೈರ್ಯವನ್ನು ತಂದುಕೊಂಡು ಪ್ರಾಪಂಚಿಕ ಪದಾರ್ಥಗಳಿಂದ ಸುಖವನ್ನು ಸಾಧಿಸುತ್ತೇವೆಂಬ ತಪ್ಪು ತಿಳಿವಳಿಕೆಯನ್ನು ಬಲವಾದ ವಿರಕ್ತಿಭಾವದಿಂದ ಯಾರು ಹೋಗಲಾಡಿಸಿಕೊಳ್ಳುತ್ತಾನೋ ಅಂಥವನು ಮುಕ್ತಿಹೊಂದಲು ಆಸಕ್ತಿಯುಳ್ಳವನಾಗುತ್ತಾನೆ. ಮುಮುಕ್ಷು ಎನಿಸಿಕೊಳ್ಳುತ್ತಾನೆ.

**ಶಬ್ದಾರ್ಥ:** * ಹೊಂದಿ=ಗಳಿಸಿ; * ದೃಢವಿರಕ್ತಿ=ಬಲವಾದ ವೈರಾಗ್ಯ; * ಉಬ್ಬದೆ=ಹಿಗ್ಗದೆ, ಭೋಗಭ್ರಾಂತಿ=ಪ್ರಾಪಂಚಿಕ ಪದಾರ್ಥಗಳಿಂದ ಸುಖವನ್ನು ಸಾಧಿಸುತ್ತೇನೆಂಬ ತಪ್ಪುತಿಳಿವಳಿಕೆಯು; ಅಳಿದಂದು=ನಾಶವಾದಾಗ

---

ಬಲ್ಲವರ ಬೆಸಗೊಂಬ; ಶಾಸ್ತ್ರದೊ
ಳುಳ್ಳ ಸಾರವ ತಿಳಿವ; ಸಾಧುಗ
ಳಲ್ಲಿ ಸಂಗವ ಪಡೆವನವರಾಚರಣೆಯಲಿ ನಡೆವ; ।
ಸಲ್ಲಲಿತ ಸದ್ವಾಸನೆಗಳನು
ಮೆಲ್ಲನಭ್ಯಾಸವನು ಮಾಡುವ
ನೊಳ್ಳಿತಹಮಾರ್ಗದಲಿ ನಡೆದು ಮುಮುಕ್ಷುವೆನಿಸುವನು ॥ ॥೨೫॥

ತಾತ್ಪರ್ಯ: ಮೋಕ್ಷಾಪೇಕ್ಷಿಯಾದವನು ತತ್ತ್ವಜ್ಞಾನಿಗಳನ್ನು ತನಗೆ ಬಂದ ಸಂಶಯಗಳ ಬಗ್ಗೆ ಪ್ರಶ್ನಿಸುತ್ತಾನೆ. ವಿವಿಧ ಶಾಸ್ತ್ರಗಳಲ್ಲಿ ಹೇಳಿರುವ ಮುಖ್ಯ ವಿಷಯಗಳನ್ನು ಜ್ಞಾನಿಗಳಿಂದ ಕೇಳಿ ತಿಳಿದುಕೊಳ್ಳುತ್ತಾನೆ. ಸಜ್ಜನ, ಸಂತರ ಸಹವಾಸದಲ್ಲಿ ಸದಾ ಇರುತ್ತಾನೆ. ಅವರ ನಡೆವಳಿಕೆಗಳನ್ನು ಗಮನಿಸಿ ಅದರಂತೆ ಅನುಸರಿಸಲೆತ್ನಿಸುತ್ತಾನೆ. ಒಳ್ಳೆಯ ಕೆಲಸಗಳ ಕಡೆ ಒಲವನ್ನು ತೋರುತ್ತಾ ಸಾತ್ತ್ವಿಕ ಸಂಸ್ಕಾರಗಳನ್ನು ಕ್ರಮೇಣ ಅನುಷ್ಠಾನಮಾಡಲು ಯತ್ನಿಸುತ್ತಾನೆ. ಹಿರಿಯರು ತೋರಿದ, ಶಾಸ್ತ್ರಗಳು ಹೇಳಿದ ಸನ್ಮಾರ್ಗವನ್ನು ಅನುಸರಿಸುತ್ತಾನೆ. ಇಂಥವನು ಮುಮುಕ್ಷು ಎನಿಸುತ್ತಾನೆ.

ಶಬ್ದಾರ್ಥ: * ಬಲ್ಲವರು=ತತ್ತ್ವಜ್ಞಾನಿಗಳು; ಬೆಸಗೊಂಬ=ಕೇಳುವನು; ಸದ್ವಾಸನೆ=ಒಳ್ಳೆಯ ಕೆಲಸಗಳ ಕಡೆಯ ಒಲವು; * ಸಲ್ಲಲಿತ=ಅತ್ಯುತ್ತಮ; * ಒಳ್ಳಿತಹ ಮಾರ್ಗ=ಸನ್ಮಾರ್ಗ.

---

ಹಿಂದೆ ಬಹುಜನ್ಮಗಳ ಸುಕೃತಗ
ಳಿಂದ ಜನಿಸಿದೆ ವಿಪ್ರಕುಲದಲಿ;
ಮುಂದೆ ತನಗಿನ್ನಾವ ಗತಿಯಹುದೆಂದು ಕಾಣೆಸದು; ।
ಎಂದು ಮನದಲಿ ದೃಢವಿವೇಕವ
ತಂದು ಸದ್ಗುರುಪಾದಪದ್ಮವ
ಹೊಂದಿ ತನ್ನನು ತಿಳಿಯಲವನೆ ಮುಮುಕ್ಷುವೆನಿಸುವನು ॥ ॥೨೬॥

ತಾತ್ಪರ್ಯ: ಹಿಂದಿನ ಜನ್ಮಗಳಲ್ಲಿ ಅನೇಕಬಾರಿ ಮಾಡಿದ ಪುಣ್ಯಫಲದಿಂದ ಬ್ರಾಹ್ಮಣ ಕುಲದಲ್ಲಿ ಹುಟ್ಟಿರುವೆ, ಮುಂದಕ್ಕೆ ನನಗೆ ಬೇರೆ ಯಾವ ರೀತಿಯ ಜನ್ಮ ಬರುತ್ತದೋ ತಿಳಿಯದಾಗಿದೆ. ಎಂಬುದಾಗಿ ಮನಸ್ಸಿನಲ್ಲಿ ಚಿಂತಿಸುತ್ತಾ ಸ್ಥಿರಮನಸ್ಸನ್ನೂ ವಿವೇಕವನ್ನೂ ತಂದುಕೊಂಡು ಉತ್ತಮ ಗುರುವಿನ ಆಶ್ರಯ ಹೊಂದಿ, ತನ್ನನು ತಾನು ಅರಿತರೆ (ಒಳ್ಳೆಯ ಕೆಲಸಗಳ ಕಡೆ ಒಲವನ್ನು ತೋರುತ್ತಾ) ಅಂಥವನೇ ಮೋಕ್ಷಾಧಿಕಾರಿ ಎನಿಸುತ್ತಾನೆ.

ಶಬ್ದಾರ್ಥ: * ಸುಕೃತ=ಪುಣ್ಯಫಲ; * ಹಿಂದೆ=ಹಿಂದಿನ ಜನ್ಮಗಳಲ್ಲಿ; * ವಿಪ್ರ=ಬ್ರಾಹ್ಮಣ; * ಕಾಣೆಸದು=ತಿಳಿಯದು; * ಸದ್ಗುರು ಪಾದಪದ್ಮ=ಶ್ರೇಷ್ಠ ಗುರುವಿನ ಆಶ್ರಯ; * ಪಾದಪದ್ಮ= ಚರಣಕಮಲ (ಅಡಿದಾವರೆ); * ತನ್ನನು ತಿಳಿಯಲು ಅವನೆ=ತನ್ನನು ತಾನು ಅರಿತವನೆ; * ಮುಮುಕ್ಷು=ಮೋಕ್ಷಾಧಿಕಾರಿ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರ ಟೀಕೆ ಇಲ್ಲ. ಶಬ್ದಾರ್ಥ ಅನುವಾದಕನದು.

---

**ಕಪಟಕಲ್ಮಷವಿಲ್ಲ ಬುದ್ಧಿಗೆ;**
**ಚಪಲವೃತ್ತಿಯ ಚೇಷ್ಟೆಯಿಲ್ಲತಿ**
**ಕೃಪಣತನದಾಟೋಪದಾಗ್ರಹವೇನು ತನಗಿಲ್ಲ; ।**
**ಶ್ವಪಚಜನಗಳ ಗೋಷ್ಠಿಯೊಳಗಿರ**
**ದುಪನಿಷದ್ವಾಕ್ಯಾರ್ಥವನು ಗುರು**
**ಕೃಪೆಯಲರಿದಿಹ ನಿಪುಣನವನೆ ಮುಮುಕ್ಷು ನೋಡೆಂದ ॥ ॥೨೭॥**

**ತಾತ್ಪರ್ಯ:** ಮೋಕ್ಷಾಪೇಕ್ಷಿಗೆ ಮೋಸ ಮತ್ತು ಕೆಟ್ಟ ಯೋಚನೆಗಳಿರುವುದಿಲ್ಲ; ಆತನು ಬುದ್ಧಿಪೂರ್ವಕವಾಗಿ ಚಂಚಲಗೊಳ್ಳದೆ ತನ್ನ ಕರಣಗಳ ಚೇಷ್ಟೆಗೆ ಅವಕಾಶವೀಯುವುದಿಲ್ಲ. ದೈನ್ಯಯಿಂದಾಗಲಿ, ಅಬ್ಬರದ ಕೋಪದಿಂದಾಗಲಿ (ಪಟ್ಟು ಹಿಡಿದ ಸ್ವಭಾವದಿಂದಾಗಲಿ) ತಾನು ವರ್ತಿಸುವುದಿಲ್ಲ. ನಾಯಿಯನ್ನು ಬೇಯಿಸಿಕೊಂಡು ತಿನ್ನುವ ಕೊಳಕರ ಗುಂಪಿನಲ್ಲಿ ಅವನು ಇರುವುದಿಲ್ಲ. ಗುರುವಿನ ಅನುಗ್ರಹದ ಮೂಲಕ ಉಪನಿಷತ್ತು ಮೊದಲಾದ ತತ್ವಾರ್ಥಗಳ ಅಂತರಾತ್ಮವನ್ನು ತಿಳಿದುಕೊಂಡ ನಿಷ್ಣಾತನಾಗಿರುತ್ತಾನೆ. ಇಂಥವನೇ ಮುಮುಕ್ಷು ಎಂದು ತಿಳಿ ಎಂಬುದಾಗಿ ವ್ಯಾಸರು ಶುಕಮುನಿಗೆ ಹೇಳಿದರು.

**ಶಬ್ದಾರ್ಥ:** ಕಪಟ=ಮೋಸ; ಕಲ್ಮಷ=ಕೆಟ್ಟಯೋಚನೆ; ಆಗ್ರಹ=ಪಟ್ಟು ಹಿಡಿಯುವುದು; * ಶ್ವಪಚ =(ನಾಯಿಯನ್ನು ಬೇಯಿಸಿಕೊಂಡು ತಿನ್ನುವ) ಕೊಳಕರು; ಗೋಷ್ಠಿ=ಗುಂಪು; * ಚೇಷ್ಟೆ=ಅಂಗಚೇಷ್ಟೆ * ಆಟೋಪದ=ಅಬ್ಬರದ; * ಚಪಲವೃತ್ತಿಯ=ಚಂಚಲ ಗೊಳ್ಳುವವನಾದ; * ಅತಿ ಕೃಪಣತನದೆ=ದೈನ್ಯದಿಂದಾಗಲಿ.

**ಪದವಿಭಾಗ:** ಚೇಷ್ಟೆಯಿಲ್ಲತಿಕೃಪಣತನ = ಚೇಷ್ಟೆ+ಇಲ್ಲ+ಅತಿಕೃಪಣತನ

---

**ತರುಣಿಯರು ತನ್ನಿದಿರೊಳೆಸೆದಿರೆ**
**ಕುರುಡನಂತಿಹ; ಪರರನಿಂದೆಯ**
**ನೊರೆಯಲನ್ಯರು ಬಧಿರನಂದದಿ ಕೇಳನದನೊಲಿದು; ।**
**ಕರವಿಕಲನಂದದಲಿ ಹಿರಿದಹ**
**ಪರರಧನವನು ಹಿಡಿಯ; ದುಷ್ಟರು**
**ಜರಿಯೆ ತನ್ನನು ಮರಳಿ ಜರಿಯ; ಮುಮುಕ್ಷು ನೋಡೆಂದ ॥॥೨೮॥**

**ತಾತ್ಪರ್ಯ:** ಸುಂದರ ಯುವತಿಯರು ತನ್ನೆದುರಿಗೆ ಬಂದುನಿಂತರೂ ಅವರನ್ನು ದೃಷ್ಟಿಸಿ ನೋಡದೆ ಕುರುಡನ ಹಾಗೆ ಇರುತ್ತಾನೆ; ಇತರರು ಬೇರೆಯವರನ್ನು ಕುರಿತು ಹೀನನುಡಿಗಳನ್ನು ಹೇಳುತ್ತಿದ್ದರೆ ಅದನ್ನು ಗಮನ ನೀಡಿ ಕೇಳಿಸಿಕೊಳ್ಳದೆ ಕಿವುಡನ

ಹಾಗಿರುತ್ತಾನೆ. ಅನ್ಯರ ಅಮೂಲ್ಯವಾದ ಸಿರಿಗೆ ಕೈಯಿಲ್ಲದವನಂತೆ ಸಹಜವಾಗಿ ಕೈಯೊಡ್ಡಲಾರ. ದುರ್ಜನರು ತನ್ನನ್ನು ದೂಷಿಸಿದರೆ ಅದಕ್ಕೆ ಪ್ರತಿಯಾಗಿ ಅವರನ್ನು ದೂಷಿಸಲು ಹೋಗುವುದಿಲ್ಲ. ಶಾಂತಚಿತ್ತನಾಗಿರುತ್ತಾನೆ. ಇದು ಮೋಕ್ಷಾಪೇಕ್ಷಿಯ ಲಕ್ಷಣವೆಂದು ತಿಳಿ.

**ಶಬ್ದಾರ್ಥ:** ಬಧಿರ=ಕಿವುಡ; ಕರವಿಕಲ=ಕೈಯಿಲ್ಲದವನು; * ಹಿರಿದಹ=ಅಮೂಲ್ಯವಾದ; * ಧನ=ಸಿರಿ; * ಅಂದದಲಿ=ಸಹಜವಾಗಿ; * ಜರಿಯೆ=ದೂಷಿಸಲು; * ಮರಳಿ=ಪ್ರತಿಯಾಗಿ.

* **ಟಿಪ್ಪಣಿ:** ಕಣ್ಣು, ಮನಸ್ಸು, ಕೈ, ಕಿವಿಗಳನ್ನು ದುಶ್ಚಾರಿತ್ರ್ಯಕ್ಕೆ ಮುಮುಕ್ಷು ಬಳಸುವುದಿಲ್ಲ. ಆ ವಿಚಾರದಲ್ಲಿ ಕಿವುಡ, ಕುರುಡ ಮೂಕ, ಮೊಂಡನಾಗಿ ಶಾಂತನಾಗಿರುತ್ತಾನೆ ಎಂಬುದು ಇಲ್ಲಿಯ ತಾತ್ಪರ್ಯ

---

ಎಡರಿನಲ್ಲೆದೆಗುಂದದುಬ್ಬದೆ,
ಪೊಡವಿಗಧಿಪತಿಯಾಗೆ ಹಿಗ್ಗದೆ,
ಬಡತನದಿ ಕಂಗೆಡದೆ, ವಿತ್ತವಗಳಿಸಿ ಗರ್ವಿಸದೆ, ।
ಮಡದಿ ಮನೆ ಮನೆವಾರ್ತೆ ಮಕ್ಕಳ
ಗೊಡವೆಯಲಿ ಕಡುಮಮತೆಯಿಲ್ಲದೆ,
ದೃಢವಿರಕ್ತಿಯಲಿರಲು ಮೋಕ್ಷವ ಪಡೆವನವನೆಂದ ॥ ॥೨೯॥

**ತಾತ್ಪರ್ಯ:** ಅಡಚಣೆಗಳು ಒದಗಿದಾಗ ಧೈರ್ಯಗೆಡದೆ, ಸಂಕಟಪಡದೆ ರಾಜಪಟ್ಟ ದೊರಕಿದರೆ ಹೆಮ್ಮೆಪಡದೆ, ದಾರಿದ್ರ್ಯ ಬಂದಾಗ ದಿಕ್ಕೆಡದೆ ಹಣಗಳಿಸಿ ಸಿರಿವಂತ ನಾದಾಗ ಅಹಂಕಾರಪಡದೆ, ಹೆಂಡತಿ, ಮನೆ, ಮನೆವ್ಯವಹಾರ, ಮಕ್ಕಳ ಸಂಬಂಧದಲ್ಲಿ ಅತಿಮೋಹವಿಲ್ಲದೆ ದೃಢವಾದ ವೈರಾಗ್ಯ ಹೊಂದಿರುವವನು ಮೋಕ್ಷ ಪಡೆಯಲು ಅರ್ಹನಾಗಿರುತ್ತಾನೆ ಎಂದಿದ್ದಾರೆ ವ್ಯಾಸರು.

**ಶಬ್ದಾರ್ಥ:** ಎಡರಿನಲ್ಲಿ=ಅಡಚಣೆಗಳು ಒದಗಿದಾಗ; ಮನೆವಾರ್ತೆ=ಮನೆಯ ವ್ಯವಹಾರ; ಗೊಡವೆ =ಸಂಬಂಧ; * ಕಡುಮಮತೆ=ಅತಿಮೋಹ; * ವಿತ್ತ=ಐಶ್ವರ್ಯ; * ಪೊಡವಿಗೆ ಅಧಿಪತಿಯಾಗೆ =ರಾಜಪಟ್ಟ ದೊರೆತರೆ; * ಎದೆಗುಂದದೆ=ಧೈರ್ಯಗೆಡದೆ; * ಕಂಗೆಡದೆ=ದಿಕ್ಕೆಡದೆ; ಉಬ್ಬದೆ =ಉಬ್ಬೆಪಡದೆ (ಸಂಕಟಪಟದೆ)

**ಪಾಠಾಂತರ:** ಗೊಡವೆ ಎಂಬಲ್ಲಿ ಬಹುಕಡೆ (ಅನೇಕ ಹಸ್ತಪ್ರತಿಗಳಲ್ಲಿ) ವಡವೆ ಎಂದಿದೆ.

---

ತನಯ, ಕೇಳಧ್ಯಾತ್ಮವಾಸನೆ
ಯನವರತ ಶಾಸ್ತ್ರಾರ್ಥಚಿಂತನೆ
ಘನವಿವೇಕ, ವಿರಕ್ತಿ, ಸದ್ಗುಣವೃತ್ತಿ, ಸತ್ಸಂಗ, ।
ಅನಘ, ಗುರುಶುಶ್ರೂಷೆ ಮೊದಲಾ
ದಿನಿತು ಸದ್ವರ್ತನೆಯಳೊಂದಿಹ
ಮನುಜನೇ ತತ್ವಾಧಿಕಾರಿ ಮುಮುಕ್ಷುವೆನಿಸುವನು ॥ ॥೩೦॥

**ತಾತ್ಪರ್ಯ:** ವ್ಯಾಸರು ತಮ್ಮ ಮಗನಿಗೆ ಹೇಳುತ್ತಿದ್ದಾರೆ: ಅಧ್ಯಾತ್ಮನಿರತನಾದವನೇ ಕೇಳು, ಸದಾಕಾಲ ವೇದಾಂತಶಾಸ್ತ್ರದಲ್ಲಿ ತಲ್ಲೀನನಾದವನು, ಅಧಿಕ ವಿವೇಚನಾವಂತನೂ, ನಿಸ್ಸಂಗಭಾವ ಹೊಂದಿದವನೂ, ಸದಾಚಾರಿಯೂ, ಸಜ್ಜನರ ಸಹವಾಸಿಯೂ, ಪುಣ್ಯಶಾಲಿ ಗುರುವಿನ ಸೇವಾನಿರತನೂ ಆಗಿ ಇನ್ನೂ ಅನೇಕ ಸದ್ಗುಣಗಳನ್ನು ಹೊಂದಿರುವ ವ್ಯಕ್ತಿಯೇ ತತ್ತ್ವಾಧಿಕಾರಿಯಾಗಿ, ಮೋಕ್ಷಾಪೇಕ್ಷಿ ಆಗಿರುತ್ತಾನೆ.

**ಶಬ್ದಾರ್ಥ:** **ಅನಘ**=ಪುಣ್ಯಶಾಲಿ (ಪಾಪರಹಿತ); * **ಶುಶ್ರೂಷೆ**=ಸೇವೆ; * **ಅಧ್ಯಾತ್ಮವಾಸನೆ**= ಅಧ್ಯಾತ್ಮದಲ್ಲಿ ನಿರತವಾದವನೆ; * **ಅನವರತ**=ಸದಾ; * **ಶಾಸ್ತ್ರಾರ್ಥಚಿಂತನೆ**=ವೇದಾಂತ ಶಾಸ್ತ್ರದಲ್ಲಿ ತಲ್ಲೀನವಾದವನು; * **ಘನವಿವೇಕ**=ಶ್ರೇಷ್ಠ ವಿವೇಕಿ; * **ವಿರಕ್ತಿ**=ನಿಸ್ಸಂಗಭಾವ; * **ಸದ್ವರ್ತನೆ**=ಸದ್ಗುಣ.

**ಟಿಪ್ಪಣಿ–೧:** ವಿವೇಕ– ಪರಮಾತ್ಮನೊಬ್ಬನೇ ಯಾವಾಗಲೂ ನಿಜವಾಗಿ ಇರತಕ್ಕವನೆಂದೂ, ಉಳಿದವುಗಳೆಲ್ಲ ಬರಿ ತೋರಿಕೆಯವುಗಳಾಗಿದ್ದು, ನಾಶವಾಗತಕ್ಕವುಗಳೆಂದೂ ಬಿಡಿಸಿ ತಿಳಿಯುವುದು.

* **ಟಿಪ್ಪಣಿ–೨:** ಚಿದಂಬರಯ್ಯನವರು– ಅನಘ=ಪಾಪರಹಿತನಾದ ಶುಕನೇ (ಎಂದು ಸಂಬೋಧನೆ) ಎಂದಿದ್ದಾರೆ. ಇದು ಸರಿಯಲ್ಲವೆನಿಸುತ್ತದೆ. ಏಕೆಂದರೆ 'ತನಯ' ಎಂದು ಪ್ರಾರಂಭದಲ್ಲೇ ಸಂಬೋಧಿಸಿದ್ದಾರೆ. ಇಲ್ಲಿ ಗುರುವಿಗೆ ಪುಣ್ಯಶಾಲಿ ಎಂದು ವಿಶೇಷಣವಾಗಿ ಅನಘಪದ ಬಂದಿದೆ.

---

## ಅಧಿಕಾರಿಗಳಲ್ಲದವರು (೩೧–೫೩)

**ವೇದಶಾಸ್ತ್ರದ ಹೊಲಬನರಿಯದೆ,**
**ಭೇದವಾದವ ಮಾಡಿ, ಪಾಷಂ**
**ಡಾದಿ ಮತದಲಿ ನಡೆದು, ದಂಭಾಚಾರಪರನಾಗಿ, ।**
**ಸಾದರದಿ ಸಂಸಾರದಲಿ ಹಿರಿ**
**ದಾದ ಯತ್ನದಿ ಕುದಿವ ಖೂಳಗೆ**
**ಬೋಧೆಯೇತಕೆ? ಮಗನೆ, ಮರ್ಕಟಗೇಕೆ ಮಾಣಿಕವು ? ॥ ॥೩೧॥**

**ತಾತ್ಪರ್ಯ:** ಶ್ರುತಿಸ್ಮೃತಿಗಳ ನೆಲೆಯನ್ನು ಅರಿಯದೆ, ಜೀವನು ಬೇರೆ ಪರಮಾತ್ಮನು ಬೇರೆ ಎಂಬ ದ್ವೈತವಾದವನ್ನು ಮಂಡಿಸುತ್ತಾ ನಾಸ್ತಿಕಮತವನ್ನು ಅನುಸರಿಸುತ್ತಾ ಬೂಟಾಟಿಕೆಯ ನಡೆವಳಿಕೆಯಿಂದ ಕೂಡಿದವನಾಗಿ, ಉತ್ಕಟೇಚ್ಛೆಯಿಂದ ಸಂಸಾರದಲ್ಲಿ ಮಗ್ನನಾಗಿ ತೊಳಲಾಡುವ ದುಷ್ಟನಿಗೆ ಅಧ್ಯಾತ್ಮದುಪದೇಶ (ಆತ್ಮವಿದ್ಯಾ ಬೋಧೆ) ಏಕೆ ಬೇಕು? ಅಂಥವನಿಗೆ ಬೋಧೆ ಮಾಡುವುದು ಎಂದರೆ ಮಂಗನ ಕೈಗೆ ಮಾಣಿಕ್ಯ ಕೊಟ್ಟಂತೆ ಅಲ್ಲವೇ?

**ಶಬ್ದಾರ್ಥ:** * **ವೇದಶಾಸ್ತ್ರ**=ಶ್ರುತಿಸ್ಮೃತಿ; **ಭೇದವಾದ**=ಜೀವನು ಬೇರೆ ಪರಮಾತ್ಮನು ಬೇರೆ ಎಂಬ ದ್ವೈತವಾದ; * **ದಂಭಾಚಾರಪರ**=ನಾಸ್ತಿಕಮತ ಪರ ವಾದಿಸುವವನು * **ಸಾದರದಿ**= ಉತ್ಕಟೇಚ್ಛೆಯಿಂದ; **ಕುದಿವ**=ತೊಳಲಾಡುವ; * **ಮರ್ಕಟ**=ಮಂಗ; **ಬೋಧೆಯೇತಕೆ?**= ಉಪದೇಶವೇಕೆ ?; **ಹೊಲಬು**=ಗುರ್ತು; **ಪಾಷಂಡ**=ದೇವರೇ ಇಲ್ಲವೆಂದು ಹೇಳುವವನು(ನಾಸ್ತಿಕ).

**ಟಿಪ್ಪಣಿ–೧: ಬೋಧೆಯೇತಕೆ–** ಉಪದೇಶವೇಕೆ ? ಪರಮಾರ್ಥ ವಿಷಯವಾದ ಉಪದೇಶವನ್ನು ಅಧಿಕಾರಿಗೆ ಮಾತ್ರವೇ ಮಾಡಬೇಕೆಂಬ ಸಂಪ್ರದಾಯವಿದೆ.

**ಟಿಪ್ಪಣಿ–೨: "ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ"** (ಗೀತೆ. ೧೮–೬೭)

* {ನಿನಗೆ ಹೇಳಿದ ಇದನ್ನು ತಪಸ್ವಿ ಅಲ್ಲದವನಿಗೂ ಭಕ್ತನಲ್ಲದವನಿಗೂ ಕೇಳಲು ಇಚ್ಛೆಯಿಲ್ಲದವನಿಗೂ ನನ್ನ ಹೆಚ್ಚುಗೆಯನ್ನು ಸಹಿಸದವನಿಗೂ ಎಂದಿಗೂ ಹೇಳಬೇಡ} (ಗೀತೆಯ ಕನ್ನಡಿ, ೧೮–೬೭)

ಈ ಶ್ಲೋಕದಲ್ಲಿ ತಪಸ್ವಿಗಳಲ್ಲದವರೇ ಮೊದಲಾದವರಿಗೆ ಆತ್ಮಬೋಧೆಯನ್ನು ಹೇಳಬೇಡವೆಂದು ಭಗವಂತನು ಎಚ್ಚರಿಕೆಯನ್ನು ಕೊಟ್ಟಿದ್ದಾನೆ.

---

**ಕಾಯಸುಖವನು ಬಯಸಿ, ಧನವನು**
**ಸಾಯಸದಲಾರ್ಜಿಸಿ ಮದಾಂಧರ**
**ಗಾಯಕರ, ಪಾಠಕರ, ಭಂಡರ ಬಯಕೆಗಳ ಬಯಸಿ ।**
**ಬಾಯಬಡಿಕರು ಬಗುಳುವರು; ನಿ**
**ಶ್ರ್ರೇಯಸಾಭ್ಯಾಸಿಗಳ ನಿಂದಿಪ**
**ನಾಯಿಗೇತಕೆ ನವರಸಾನ್ನವು? ಮಗನೆ, ಕೇಳೆಂದ ॥** ॥೩೨॥

**ತಾತ್ಪರ್ಯ:** ದೇಹದ ಸುಖವನ್ನು ಅಪೇಕ್ಷಿಸಿ ಬಲು ಕಷ್ಟದಿಂದ ದ್ರವ್ಯಸಂಪಾದನೆ ಮಾಡಿ ಅಷ್ಟಮದಗಳಿಂದ ಬುದ್ಧಿಕುರುಡರಾದವರ ಸಂಗೀತ ನರ್ತನಕಾರರ, ಹೊಗಳುಭಟ್ಟರ ನೀಚರ ಭೋಗಸುಖಗಳನ್ನು ಬಯಸುವವರು, ಸಾಧಕರನ್ನು ಹಿಯಾಳಿಸುವ ಬೊಗಳೆ ಜನರು ಮೋಕ್ಷಕ್ಕಾಗಿ ಸಾಧನೆಮಾಡುವವರನ್ನು ನಿಂದಿಸುತ್ತಾರೆ. ಇಂಥವರಿಗೆ ಅಧ್ಯಾತ್ಮಬೋಧೆ ಮಾಡುವುದು ನಾಯಿಗೆ ಆಗತಾನೇ ಮಾಡಿದ ಷಡ್ರಸದ ಆಹಾರವನ್ನು ನೀಡಿದಂತಾಗುವುದು. ಇದನ್ನು ನೀನು ತಿಳಿ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** **ಸಾಯಸದಲಿ** (ಸ+ಆಯಸದಲಿ)=ಕಷ್ಟದಿಂದ; **ಪಾಠಕರ**=ಹೊಗಳುಭಟ್ಟರ; ಬಗುಳುವರು =ಸಾಧಕರನ್ನು ಹಿಯಾಳಿಸುವರು; **ನಿಶ್ರ್ರೇಯಸಾಭ್ಯಾಸಿಗಳು**=ಮೋಕ್ಷಕ್ಕಾಗಿ ಸಾಧನೆ ಮಾಡುವವರು; **ನವರಸಾನ್ನ**=ಆಗತಾನೇ ಮಾಡಿದ ಷಡ್ರಸಗಳಿಂದ ಕೂಡಿದ ಆಹಾರ.

**ಟಿಪ್ಪಣಿ:** ರಸಾನ್ನ (ಉಪ್ಪು, ಹುಳಿ, ಕಾರ, ಸಿಹಿ, ಕಹಿ, ಒಗರು ಎಂಬ) ಷಡ್ರಸಗಳಿಂದ ಕೂಡಿದ ಆಹಾರ.

---

**ಮನಕೆ ರಾಗದ್ವೇಷ, ಬುದ್ಧಿಗೆ**
**ನೆನಹು ದುರ್ವ್ಯಸನದಲಿ, ತನುವಿಗೆ**
**ವನಿತೆಯೊಡಗೂಟದಲಿ ಭೋಗಾಸಕತಿಯಾಗಿರಲು ।**

**ತನಯ, ತತ್ತ್ವಜ್ಞಾನಚಿಂತೆಯ**
**ಘನತೆ ದೊರಕುವದೆಂತು? ಮಾಯಾ**
**ಜನಿತದುರ್ವಾಸನೆಯಲೊಂದಿಹ ಮರಳುಮಾನವಗೆ ॥ ॥೩೩॥**

**ತಾತ್ಪರ್ಯ:** ಮನಸ್ಸಿನಲ್ಲಿ ತಾನು ಬಯಸಿದ ವಸ್ತುಗಳಲ್ಲಿ ಸ್ವಾರ್ಥದಿಂದ ಪ್ರೀತಿ ತೋರಿಸುವ, ತನಗೆ ಆಗದವರ ಬಗ್ಗೆ ಹಗೆತನ ಸಾಧಿಸುವ ಬುದ್ಧಿಯನ್ನು, ಕೆಟ್ಟಚಟಗಳಲ್ಲಿ ತೊಳಲುವ ದೇಹವನ್ನು ಸ್ತ್ರೀಸಂಗದಲ್ಲಿ ತೊಡಗಿಸುತ್ತಾ ಭೋಗಾಸಕ್ತನಾಗಿರುವವನಿಗೆ, ಬರೀ ತೋರಿಕೆಯ ವಿಷಯಗಳನ್ನು ಹೇಗೋ ನಿತ್ಯವೆಂದು ನಂಬಿ ಮೋಸ ಹೋಗಿದ್ದರಿಂದ ಉಂಟಾದ ದುರ್ಮಾರ್ಗಗಳಲ್ಲಿ ನಿರತನಾದ ಬುದ್ಧಿಗೇಡಿ ಮಾನವನಿಗೆ, ತತ್ತ್ವಜ್ಞಾನದ ಶ್ರೇಷ್ಠತೆ ಮನವರಿಕೆ ಆಗುವುದು ಹೇಗೆ ಸಾಧ್ಯ?

**ಶಬ್ದಾರ್ಥ:** ನೆನಹು=ತೊಳಲಿಕೆ; * ರಾಗ=ತಾನು ಬಯಸಿದ ವಸ್ತುಗಳಲ್ಲಿ ಸ್ವಾರ್ಥದ ಪ್ರೀತಿ; * ದ್ವೇಷ=ತನಗೆ ಆಗದವರ ಬಗ್ಗೆ ಹಗೆತನ; * ವನಿತೆಯ ಒಡಗೂಟ=ಸ್ತ್ರೀ ಸಂಗಮ; * ದುರ್ವ್ಯಸನದಲಿ=ಕೆಟ್ಟಚಟಗಳಲ್ಲಿ; ಮಾಯಾ ಜನಿತ ದುರ್ವಾಸನೆಯಲಿ=ಬರೀ ತೋರಿಕೆಯ ವಿಷಯಗಳನ್ನು ಹೇಗೋ ನಿತ್ಯವೆಂದು ನಂಬಿ ಮೋಸಹೋಗುವುದರಿಂದ ಹುಟ್ಟಿದ ಕೆಟ್ಟಚಟಗಳಲ್ಲಿ.

---

**ಕನಸಿನೊಳು ತೋರುವುದು ಜಾಗ್ರದ**
**ನೆನಹು; ದುರ್ವಾಸನೆಯ ಕೋಟಲೆ**
**ಮನಕೆ ಬಿಡದದು; ಜನ್ಮಜನ್ಮಾಂತರಗಳಿಂದಾದ ।**
**ಅನುಭವದ ವಾಸನೆಗಳಿಂದಲೆ**
**ಜನಿಸಿದೀ ಸಂಸಾರಲಂಪಟ**
**ದನುವು ತಾನರಿದೆನಿಪುದಾತ್ಮಜ್ಞಾನಶೂನ್ಯರಿಗೆ ॥ ॥೩೪॥**

**ತಾತ್ಪರ್ಯ:** ಎಚ್ಚರಿಕೆಯ ಸ್ಥಿತಿಯಲ್ಲಿರುವ ವಿದ್ಯಮಾನಗಳ ತೊಳಲಿಕೆಗಳೆಲ್ಲ ಕನಸಿನಲ್ಲಿ ತೋರುತ್ತವೆ. ಮನಸ್ಸನ್ನು ದುಷ್ಟಚಟಗಳ ಹಾವಳಿ ಬೆನ್ನಟ್ಟಿರುತ್ತದೆ. ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಅನುಭವದ ಸಂಸ್ಕಾರಗಳಿಂದ (ಕರ್ಮಫಲಗಳು) ಉಂಟಾದ ಸಂಸಾರದ ತೊಳಲಿಕೆಯ ಮೋಹಕತ್ವವನ್ನು ಹೋಗಲಾಡಿಸಿಕೊಳ್ಳಲು ತತ್ತ್ವಜ್ಞಾನ ರಹಿತರಿಗೆ ಅಸಾಧ್ಯವೆನಿಸುತ್ತದೆ.

**ಶಬ್ದಾರ್ಥ:** ಜಾಗ್ರದ ನೆನಹು=ಎಚ್ಚರದ ಅವಸ್ಥೆ;(ತೊಳಲಿಕೆಯ) * ದುರ್ವಾಸನೆ=ದುಷ್ಟ ಚಟ; * ವಾಸನೆ=ಅನುಭವದ ಸಂಸ್ಕಾರ; * ಕೋಟಲೆ=ಹಾವಳಿ; ಅರಿದೆನಿಪುದು=ಹೋಗಲಾಡಿಸಿ ಕೊಳ್ಳಲು ಅಸಾಧ್ಯವೆನಿಸುವುದು; ಸಂಸಾರಲಂಪಟದ ಅನುವು=ಸಂಸಾರದ ತೊಳಲಿಕೆಯ ಮೋಹಕತ್ವವು.

* **ಟಿಪ್ಪಣಿ:** ಸ್ವಪ್ನ (ಕನಸಿನಂತೆ ತೋರುವುದು) ಜಾಗ್ರತ್ (ಎಚ್ಚರವಾಗಿರುವುದು) ಸುಷುಪ್ತಿ (ನಿದ್ರಾವಸ್ಥೆ ಎಂದು ಮೂರು ಬಗೆ ಅವಸ್ಥೆಗಳಿವೆ. ಜೀವನಿಗೆ ಇದರಲ್ಲಿ ಎರಡನೆಯ ಅವಸ್ಥೆಯೇ ಜಾಗ್ರದ ನೆನಹು.

---

ಕಾಲಸಂಕಲೆಯಿರಲು ಕೊರಳಿಗೆ
ಕೋಳವನು ಬಲವಾಗಿ ತೊಡಿಸುವ
ವೋಲು ಬಹುವಿಧವಾದ ಸಂಸೃತಿಬಂಧ ಬಿಗಿದಿರಲು ।
ಮೇಲೆ ವಿಷಯಾಸಕ್ತನಾದೊಡೆ
ಹೇಳಲೇನದ ? ಮೋಕ್ಷಶಾಸ್ತ್ರದ
ಗಾಳಿಯೆಂಬುದು ಸೋಂಕಿದರೆ ಸೈರಿಸನು ಕೇಳೆಂದ ॥ ॥೩೫॥

**ತಾತ್ಪರ್ಯ:** ವ್ಯಕ್ತಿಯ ಕಾಲುಗಳಿಗೆ ಬೇಡಿ ಹಾಕಿರುವಾಗ ಅದು ಸಾಲದು ಎಂಬಂತೆ ಕುತ್ತಿಗೆಗೆ ಮತ್ತೊಂದು ಬೇಡಿಯನ್ನು ಬಲವಾಗಿ ಬಿಗಿದಂತೆ ಮೊದಲೇ ನಾನಾ ವಿಧವಾದ ಸಂಸಾರದ ಕೋಟಲೆಗಳೆಂಬ ಪಾಶ ಬಿಗಿದಿರುವಾಗ ಅದರ ಜತೆಗೆ ಆ ವ್ಯಕ್ತಿ ಇಂದ್ರಿಯ ಸುಖಾಸಕ್ತನೂ ಆಗಿಬಿಟ್ಟರೆ ಅಂಥವನಿಗೆ ಬರುವ ದುರ್ಗತಿಯನ್ನು ಏನೆಂದು ಹೇಳೋಣ? ಆ ರೀತಿ ವಿಷಯಾಸಕ್ತನಿಗೆ ಅಧ್ಯಾತ್ಮಶಾಸ್ತ್ರದ ಗಾಳಿ ಬೀಸಿ ಮೈಸೋಂಕಿದರೆ ಆತನು ಸಹಿಸುವುದಿಲ್ಲ.

**ಶಬ್ದಾರ್ಥ:** ಕೋಳ=ಬೇಡಿ; * ಸಂಕಲೆ=ಬೇಡಿ; ಮೇಲೆ=ಇದರ ಜತೆಗೆ; * ಸಂಸೃತಿಬಂಧ= ಸಂಸಾರದ ಬಂಧನ.

---

ಮೊದಲೆ ಮರ್ಕಟ, ಮೇಲೆ ಮದ್ಯದ
ಮದವೆದೆಯ ಹಿಡಿದಿರಲು, ವೃಶ್ಚಿಕ
ತುದಿಯಕಾಲನು ಕಚ್ಚಿದರೆ ಕುಣಿದಾಡುವಂದದಲಿ ।
ಅಧಿಕಧನ, ಸಂಪತ್ತು, ಯೌವನ
ವೊದಗಿರಲು ವನಿತಾದಿವಿಷಯಾ
ಸ್ಪದನೆನಿಸುತೊಡಲರಿಯದವಗಧ್ಯಾತ್ಮವೇಕೆಂದ ॥ ॥೩೬॥

**ತಾತ್ಪರ್ಯ:** ಹೇಳಿಕೇಳಿ ಮಂಗ ಎಂದಮೇಲೆ ಅದರ ಚಪಲ ಬುದ್ಧಿ ಬಗೆಗೆ ಹೇಳಬೇಕೇ? ಇಂಥ ಚಂಚಲ ಕಪಿಗೆ ಹೆಂಡ ಕುಡಿಸಿದರೆ ಮತ್ತೇರಿ ಎಚ್ಚರತಪ್ಪಿದಾಗ ಚೇಳೊಂದು ಅದರ ಕಾಲು ತುದಿಯ ಬೆರಳನ್ನು ಕಚ್ಚಿದರೆ ಅದರ ಕುಣಿದಾಟವನ್ನು ಹೇಳಬೇಕಾದ್ದೇ ಇಲ್ಲ ಅಧಿಕವಾದ ದ್ರವ್ಯ, ಐಶ್ವರ್ಯ, ತಾರುಣ್ಯ ಕೂಡಿಕೊಂಡಾಗ ಹೆಣ್ಣಿನ ವ್ಯಾಮೋಹ ಮೊದಲಾದ ದುಶ್ಚಟಗಳಿಗೆ ಒಳಗಾಗಿ ಶರೀರದ ಅರಿವೇ ಇಲ್ಲದಂಥ ಮೋಹಾವೇಶಿಗೆ ವೇದಾಂತ ವಿಚಾರದ ಗೊಡವೆ ಏಕೆಬೇಕು?

**ಶಬ್ದಾರ್ಥ:** * ಮೊದಲೆ=ಹೇಳಿಕೇಳಿ, ಮದ್ಯದ = ಹೆಂಡ ಮೊದಲಾದ ಅಮಲೇರುವ ವಸ್ತುಗಳ, ಒಡಲರಿಯದವಗೆ = ಮೈಮೇಲೆ ಎಚ್ಚರವಿಲ್ಲದವನಿಗೆ, * ವಿಷಯಾಸ್ಪದನು = ಸ್ತ್ರೀಮೋಹ ಇತ್ಯಾದಿ ದುಶ್ಚಟಗಳಿಗೆ ಆಶ್ರಯನು.

**ಟಿಪ್ಪಣಿ:** ಈ ಪದ್ಯದಲ್ಲಿರುವ ಮರ್ಕಟದ ಉದಾಹರಣೆಯನ್ನು ಶ್ರೀ ಸ್ವಾಮಿ ವಿವೇಕಾನಂದರು ತಮ್ಮ ರಾಜಯೋಗದ ತಮ್ಮ ಉಪನ್ಯಾಸದಲ್ಲಿಯೂ ಉಪಯೋಗಿಸಿದ್ದಾರೆ.

---

**ಮರುಳು ಹಿಡಿದವ ಮದ್ದುಗುಣಿಕೆಯ**
**ನರೆದುಕುಡಿವಂದದಲಿ ಮಾಯಾ**
**ವರಣದಲಿ ಮರೆದಿರ್ದು ತನ್ನನು ಮೂಢಭಾವದಲಿ ।**
**ಪರಿಪರಿಯ ಸಂಸಾರವಿಷಯದಿ**
**ಹಿರಿದು ಬಿಗಿವಡೆದಿರ್ಪ ಮನುಜಗೆ**
**ದೊರಕುವದೆ ಪರತತ್ತ್ವ? ತೆರಳೆಯ ಹುಳುವಿನಂತಿಹಗೆ ॥ ॥೩೭॥**

**ತಾತ್ಪರ್ಯ:** ದೆವ್ವ ಹಿಡಿದವನಿಗೆ ದತ್ತೂರದ (ಮದ್ದುಗುಣಿಕೆ ಗಿಡ) ಬೀಜಗಳನ್ನು ಅರೆದು ಕುಡಿಸಿದ ರೀತಿಯಲ್ಲಿ (ಹುಚ್ಚು ಹಿಡಿಸಿದಂತೆ) ಯಾವ ಸಂಬಂಧವೂ ಇಲ್ಲದ ಚೈತನ್ಯ ಸ್ವರೂಪನಾಗಿರುವ ತನ್ನನ್ನು ಮೂರ್ಖತನದಿಂದ ಅಜ್ಞಾನವೆಂಬ ಮುಸುಕಿನಲ್ಲಿ ಸಿಲುಕಿಸಿದವನಾಗಿ, ನಾನಾ ರೀತಿಯ ಸಂಸಾರದ ಸುಖಗಳೆಂಬ ವಿಷಯಗಳಿಂದ ಬಲವಾಗಿ ಬಂಧಿಸಲ್ಪಟ್ಟು ತೆರಳೆ ಹುಳು, (ಸಗಣಿ ಹುಳು) ಸಗಣಿ ಉಂಡೆಯನ್ನು ಚಿನ್ನವೆಂದು ಸಾಗಿಸಿಕೊಂಡು ಹೋಗುತ್ತಿದ್ದೇನೆ ಎಂಬ ಭ್ರಮೆಯಲ್ಲಿರುವಂಥ ಮನುಷ್ಯನಿಗೆ ಪರತತ್ತ್ವ ಜ್ಞಾನ ಎಟುಕಲು ಸಾಧ್ಯವೇ?

**ಶಬ್ದಾರ್ಥ:** * ಮರುಳು=ದೆವ್ವ; * ಮದ್ದುಗುಣಿಕೆ=ದತ್ತೂರ ಬೀಜ (ಇದನ್ನು ತಿಂದರೆ ಹುಚ್ಚು ಹಿಡಿಯುವುದು); * ಮಾಯಾವರಣದಲಿ=ಅಜ್ಞಾನವೆಂಬ ಮುಸುಕಿನಲ್ಲಿ ಸಿಕ್ಕಿದವನಾಗಿ; ತನ್ನನ್ನು =ಯಾವ ಸಂಬಂಧವೂ ಇಲ್ಲದೆ ಚೈತನ್ಯಸ್ವರೂಪನಾಗಿರುವ ತನ್ನನ್ನು; * ತೆರಳೆಯ ಹುಳು= ಸಗಣಿಯನ್ನು ಉರುಳಿಸಿಕೊಂಡು ಹೋಗುವ ಹುಳು; * ತೆರಳೆಯ ಹುಳುವಿನಂತಿಹಗೆ= ಎಂಬುದು 'ಮನುಜಗೆ' ಎಂಬುದಕ್ಕೆ ವಿಶೇಷಣ.

**ಟಿಪ್ಪಣಿ–೨:** ಸಗಣಿಹುಳು ಸಗಣಿಯನ್ನು ಉಂಡೆಮಾಡಿ ಅದರಷ್ಟು ಚಿನ್ನವನ್ನು ಸಂಪಾದಿಸು ವೆನೆಂಬ ದುರಾಸೆಯಿಂದಲೂ ಗರ್ವದಿಂದಲೂ ಉರುಳಿಸಿಕೊಂಡು ಹೋಗುತ್ತದೆ. ಆದರೆ ಆ ಉಂಡೆ ಬಂಗಾರವಾಗದು. ಈ ರೀತಿ ಭ್ರಮೆಯಲ್ಲಿ ಮನುಷ್ಯನಿರುತ್ತಾನೆ.

---

**ಒರಳೊಳಗೆ ತಲೆಯಿರ್ದೊಡೊನಕೆಯ**
**ಭರದ ಗಾಯವ ತಪ್ಪಿಸಲ್ಕಾ**
**ರರಿವರ್‍ಯೆ? ಬಹುದುಃಖ ಸಂಗ್ರಹವಾದ ಸಂಸೃತಿಯ ।**
**ಶರಧಿಯೊಳು ಬಿದ್ದವಗದೆಂದಿಗೆ**
**ಪರಿಹರಿಸಲಾಗುವದು ಜರೆ, ಮರೆ,**
**ಮರಣ, ಜನ್ಮಂಗಳನು? ತತ್ತ್ವವನರಿಯದವಗೆಂದ ॥ ॥೩೮॥**

**ತಾತ್ಪರ್ಯ:** ಒರಳಕಲ್ಲಿನಲ್ಲಿ ತಲೆಯನ್ನು ಇಟ್ಟುಕೊಂಡಿದ್ದರೆ ಅವನಿಗೆ ಒನಕೆಯ ರಭಸದ ಪೆಟ್ಟನ್ನು ತಪ್ಪಿಸಲು ಯಾರು ಶಕ್ತರಾಗಿರುತ್ತಾರೆ? ಹಾಗೆಯೇ ನಾನಾ ಬಗೆಯ ದುಃಖಗಳ ಸಂಗಮವಾದ ಸಂಸಾರವೆಂಬ ಸಾಗರದಲ್ಲಿ ಮುಳುಗಿದವನಿಗೆ ಎಂದಿಗಾದರೂ ಜನನ ಮರಣ, ಮುಪ್ಪು ವಿಸ್ಮೃತಿಗಳನ್ನು ಪರಿಹರಿಸಲಾದೀತೇ?

ಆ ರೀತಿ ಸಂಸಾರ ಸಾಗರದಲ್ಲಿ ಮುಳುಗಿದವನಿಗೆ ಮೋಕ್ಷತತ್ತ್ವವನ್ನು ತಿಳಿಯಲು ಸಾಧ್ಯವಾಗದು.

**ಶಬ್ದಾರ್ಥ:** * ಭರದ=ರಭಸದ; * ಗಾಯವ=ಪೆಟ್ಟನ್ನು; * ಸಂಸೃತಿಯ ಶರಧಿಯೊಳು=ಸಂಸಾರ ಸಾಗರದಲ್ಲಿ; * ಬಿದ್ದವನು=ಮುಳುಗಿದವನು; * ಜರೆ=ಮುಪ್ಪು; * ಮರೆ=ವಿಸ್ಮೃತಿ; * ಜನ್ಮಂಗಳು =ಹುಟ್ಟುಗಳು; * ತತ್ತ್ವ=ಮೋಕ್ಷತತ್ತ್ವ

**ಟಿಪ್ಪಣಿ** * : ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಕೊರಳ ಸುತ್ತಿದ ಹಾವು ಕಚ್ಚದೆ**
**ಮರಳುವದೆ? ಮಾಯಾಪ್ರಬಂಧದಿ**
**ಹೊರಳುತಿಹ ಪಾಮರಗೆ ಪರಿಹರವಹುದೆ ಭವಬಂಧ? ।**
**ಕುರುಡ ಕಾಣದಗಾಧಕೂಪದೊ**
**ಳುರುಳುವಂತೆ ವಿವೇಕಶೂನ್ಯನು**
**ತಿರುಗುವನು ಭವಮಾಲೆಯಲಿ ಮೋಕ್ಷವನಪೇಕ್ಷಿಸದೆ ॥ ॥೩೯॥**

**ತಾತ್ಪರ್ಯ:** ಕುತ್ತಿಗೆಗೆ ಸುತ್ತಿಕೊಂಡ ಹಾವು ಕಚ್ಚದೆ ಸುಮ್ಮನೆ ಹಿಂದಕ್ಕೆ ಸರಿಯುವುದೆ? ಅಜ್ಞಾನವೆಂಬ ಬಿಗಿತದಿಂದ ಒದ್ದಾಡುತ್ತಿರುವ ಮೂಢ ಮನುಷ್ಯನಿಗೆ ಸಂಸಾರದ ಬಂಧನದಿಂದ ಬಿಡುಗಡೆ ಸಿಗುವುದೇ ? ಕಣ್ಣು ಕಾಣದ ಕುರುಡ ಆಳವಾದ ಬಾವಿಯಲ್ಲಿ ಉರುಳಿಬೀಳುವ ಹಾಗೆ ಬುದ್ಧಿಹೀನ ಮಾನವನು ಮುಕ್ತಿಯನ್ನು ಬಯಸದೆ ಹುಟ್ಟುಸಾವುಗಳೆಂಬ ಸಂಸಾರಚಕ್ರದಲ್ಲಿ ಸಿಲುಕಿ ತೊಳಲಾಡುತ್ರಿರುತ್ತಾನೆ.

**ಪಾಠಾಂತರ:** (ಪ್ರಬಂಧದಿ ಇ. ಅರಾಸೇ) = ಪ್ರಪಂಚದಿ (ಕಿ) ವಿಸಂಚದಿ (ಇ-ಅರಾಸೇ)

**ಶಬ್ದಾರ್ಥ:** ಭವಮಾಲೆ=ಹುಟ್ಟುಸಾವುಗಳ ಚಕ್ರ; ಮಾಯಾ ಪ್ರಬಂಧದಿ=ಅಜ್ಞಾನವೆಂಬ ಬಿಗಿತದಿಂದ; ಮರಳುವುದೇ?=ಹಿಂದಕ್ಕೆ ಹೋಗುವುದೇ?; * ಅಗಾಧಕೂಪದೊಳು=ಆಳವಾದ ಬಾವಿಯಲ್ಲಿ; * ವಿವೇಕಶೂನ್ಯನು=ಬುದ್ಧಿಹೀನನು; * ಪಾಮರ=ಮೂಢಮನುಷ್ಯ; * ಭವಬಂಧ=ಸಂಸಾರದ ಸಂಕೋಲೆ; * ಪರಿಹಾರ=ಬಿಡುಗಡೆ (ಪರಿಹಾರ).

**ಟಿಪ್ಪಣಿ:** ಛಂದಸ್ಸಿನ ನಿಯಮಪಾಲನೆಗಾಗಿ ಪದಗಳನ್ನು ಕವಿಗಳು ಮೊಟಕು ಮಾಡುತ್ತಾರೆ. ಕುಮಾರವ್ಯಾಸ ವೀರನಾರಯಣ (ವೀರ ನಾರಾಯಣ) ಮಾಡಿದಂತೆ ಪರಿಹರ (ಪರಿಹಾರ) ರೂಪದ ಪದವನ್ನು ಮಹಲಿಂಗರಂಗ ಕವಿ ಬಳಸಿದ್ದಾನೆ.

---

**ಕಾಣದಗೆ ಕನ್ನಡಿಯದೇತಕೆ?**
**ಗಾಣದೆತ್ತಿಗೆ ಗೆಜ್ಜೆಯೇತಕೆ?**
**ಗೋಣಿಗೇತಕೆ ಗವಸಣಿಗೆ? ನರಿಗೇಕೆ ಸುರಲೋಕ? ।**

**ರಾಣಿಯೇಕೆ ನಪುಂಸಕಗೆ? ಗೀ**
**ರ್ವಾಣಭಾಷೆಯದೇಕೆ ಗೊರವಗೆ?**
**ಕೇಣವಿಲ್ಲದ ವಿಷಯಲಂಪಟಗೇಕೆ ನಿರ್ವಾಣ? ॥ ॥೪೦॥**

**ತಾತ್ಪರ್ಯ:** ಕುರುಡನಿಗೆ ಕನ್ನಡಿಯಿಂದ ಏನು ಪ್ರಯೋಜನ? ಗಾಣಕ್ಕೆ ಹೂಡಿದ ಎತ್ತಿನ ಕೊರಳಿಗೆ ಗೆಜ್ಜೆ ಕಟ್ಟಿದರೇನು ಬಂತು? ಗೋಣಿಚೀಲಕ್ಕೇ ಮರೆಮಾಡಲು ಮೇಲುಚೀಲ ಬೇಕೆ? ನರಿಗೆ, ನರ್ತನ ಸಂಗೀತ ಇತ್ಯಾದಿ ಸ್ವರ್ಗಲೋಕದ ಸುಖಗಳೇಕೆ? ನಿರ್ವೀರ್ಯನಾದ ನಪುಂಸಕನಿಗೆ ಸುರಸುಂದರಿಯಾದ ರಾಜಕುಮಾರಿ ಏಕೆ? ಮೂಢನಿಗೆ (ತಿರುಕನಿಗೆ) ದೇವಭಾಷೆ ಸಂಸ್ಕೃತ ಏಕೆ ಬೇಕು? ಮಿತಿಯಿಲ್ಲದ ಅತ್ಯಾಸೆಯ ಕಾಮುಕನಿಗೆ ಮೋಕ್ಷದ ವಿಚಾರವೇಕೆ?

**ಶಬ್ದಾರ್ಥ: * ಕಾಣದಗೆ=ಕುರುಡನಿಗೆ; * ಗವಸಣಿಗೆ=ಮೇಲು ಚೀಲ (ಮುಸುಕು); * ನಪುಂಸಕ=ನಿರ್ವೀರ್ಯನಾದವನು; * ಗೀರ್ವಾಣ ಭಾಷೆ=ಸಂಸ್ಕೃತಭಾಷೆ; * ಗೊರವ=ಮೂಢ (ತಿರುಕ); * ಕೇಣವಿಲ್ಲದ=ಮಿತಿಯಿಲ್ಲದ; * ನಿರ್ವಾಣ=ಮೋಕ್ಷ; * ವಿಷಯಲಂಪಟ=ಕಾಮುಕ.**

---

**ಎತ್ತು ತೆಂಗಿನಕಾಯ ಬಲ್ಲುದೆ?**
**ಕತ್ತೆಯರಿವುದೆ ಕತ್ತುರಿಯ? ನೆರೆ**
**ಬುತ್ತಿಗಳ್ಳರಿಗೇಕೆ ಸತ್ಯವ್ರತ, ಸದಾಚಾರ? ।**
**ದತ್ತಪುತ್ರನಿಗೇತಕ್ಕೆ ಪಿತೃ**
**ಭಕ್ತಿ? ಮಾಲ್ಯಸುಗಂಧ ವನಿತಾ**
**ಸಕ್ತರಿಗೆ ಪರತತ್ತ್ವಚಿಂತೆಯದೇಕೆ? ಹೇಳೆಂದ ॥ ॥೪೧॥**

**ತಾತ್ಪರ್ಯ:** ಎತ್ತಿಗೆ ತೆಂಗಿನಕಾಯಿಯ ಎಳನೀರಿನ ರುಚಿ ತಿಳಿದಿರುವುದೇ? ಕತ್ತೆ ಕಸ್ತೂರಿಯ ಪರಿಮಳವನ್ನು ಗ್ರಹಿಸಬಲ್ಲುದೆ? ಅಕ್ಕಪಕ್ಕದಲ್ಲಿ ಅನ್ನ ಕದಿಯುವ ಕಳ್ಳರಿಗೆ (ಅನ್ನದ್ರೋಹಿಗಳಿಗೆ) ಸತ್ಯಪರಿಪಾಲನೆಯ ಸಾತ್ತ್ವಿಕ ಆಚಾರಗಳ ಹಂಗಿರುವುದೇ? ದತ್ತುಪುತ್ರನಾದವನಿಗೆ ತಂದೆಯಲ್ಲಿ ಭಕ್ತಿ ಏಕೆ ಇರುತ್ತದೆ? ಗಂಧ, ಪುಷ್ಪಮಾಲೆ, ಯುವತಿಯರಲ್ಲಿ, ಆಸಕ್ತರಾದವರಿಗೆ ಮೋಕ್ಷತತ್ತ್ವವನ್ನು ಕಟ್ಟಿಕೊಂಡು ಏನಾಗಬೇಕು? ಹೇಳು ಎಂದನು ವ್ಯಾಸನು.

**ಶಬ್ದಾರ್ಥ:** * ಕತ್ತುರಿ=ಕಸ್ತೂರಿ ವಾಸನೆ; ಬುತ್ತಿಗಳ್ಳ=ಅನ್ನವನ್ನು ಕದಿಯುವವನು; * ನೆರೆ=ಅಕ್ಕಪಕ್ಕ; * ದತ್ತಪುತ್ರ=ಬೇರೆಯವರಿಗೆ ದಾನವಾದ ಮಗ; * ಮಾಲ್ಯ=ಪುಷ್ಪಮಾಲೆ, * ಸುಗಂಧ=ಪರಿಮಳ; * ಪರತತ್ತ್ವ=ಮೋಕ್ಷತತ್ತ್ವ

---

**ನರಿಗಳೂರನು ಸೇರುವವೆ? ಭಾ**
**ಸ್ಕರನ ಬೆಳಕಿಗೆ ಗೂಗೆಗಳು ಸಂ**
**ಚರಿಸುವವೆ? ಬೆಳದಿಂಗಳಿಷ್ಟವೆ ಜಾರಚೋರರಿಗೆ? ।**

**ಸರಸಕವಿತಾಪ್ರೌಢಿಯೆಲ್ಲರಿ**
**ಗರಿಯಲಹುದೇ? ದುರ್ವ್ಯಸನದಿಂ**
**ದುರಿವ ಪಾತಕಿಗೇತಕ್ಕೆ ನಿಶ್ರೇಯಸಾಭ್ಯಾಸ? ॥ ॥೪೨॥**

**ತಾತ್ಪರ್ಯ:** ಕಾಡನ್ನು ಬಯಸುವ ನರಿಗಳು ನಾಡಿನಲ್ಲಿ ವಾಸಿಸುವವೇ? ರಾತ್ರಿಯಲ್ಲಿ ಸಂಚರಿಸುವ ಗೂಬೆಗಳು ಹಗಲಿನ ಸೂರ್ಯನ ಬೆಳಕಿನಲ್ಲಿ ಸಂಚರಿಸುವವೆ? ಕತ್ತಲಲ್ಲಿ ವ್ಯವಹರಿಸುವ ಕುಲಟೆಯರಿಗೆ, ಕಳ್ಳರಿಗೆ ಬೆಳುದಿಂಗಳುಪ್ರಿಯವಾಗುವುದೇ? ಸರಸ ಕವಿತೆಯ ಹಿರಿಮೆ ಎಲ್ಲರಿಗೂ ತಿಳಿಯಲು ಶಕ್ಯವೇ? ಕೆಟ್ಟಚಟಗಳಿಂದ ಪರಿತಪಿಸುವ ಪಾಪಿಗೆ ತತ್ತ್ವಾಭ್ಯಾಸ ಏಕೆ ಬೇಕು?

**ಶಬ್ದಾರ್ಥ:** * ಜಾರಚೋರಂಗೆ=ಕುಲಟೆಯರಿಗೆ ಕಳ್ಳರಿಗೆ; * ಪ್ರೌಢಿ=ಪ್ರೌಢಿಮೆ (ಹಿರಿಮೆ); * ನಿಶ್ರೇಯಸಾಭ್ಯಾಸ=ತತ್ತ್ವಾಭ್ಯಾಸ; * ಪಾತಕಿಗೆ=ಪಾಪಿಗೆ.

**ಪಾಠಾಂತರ–೧:** (ಪ್ರೌಢಿಯೆಲ್ಲರಿಗರಿಯಬಹುದೇ)– ಪ್ರೌಢೆಗೊಲ್ಲರಿಗರಿಯಬಹುದೆ (ಕು)

**ಪಾಠಾಂತರ–೨:** (ದುರ್ವ್ಯಸನದಿಂದುರಿವ)– ದುರಿವ ಎಂಬಲ್ಲಿ ದಿರುವ ಎಂದೂ ಕೆಲವು ಕಡೆ ಪಾಠಾಂತರ ಇದೆ. (ಹೊ.ಚಿ. ಅವರ ಟಿಪ್ಪಣಿ)

---

**ಎತ್ತಿಗುತ್ತಮಲಿಂಗಮುದ್ರೆಯ**
**ನೊತ್ತಲಾಗದ ಬಸವನೆಂಬರು;**
**ಕತ್ತೆಯನು ಹಿಡಿತಂದು ಮುದ್ರೆಯನೊತ್ತಲಾ ಕತ್ತೆ ।**
**ಕತ್ತೆಯಲ್ಲದೆ ಬಸವನಪ್ಪುದೆ?**
**ಸತ್ಯಸಂಧಗೆ ಯೋಗ್ಯವಲ್ಲದೆ**
**ತೊತ್ತುಬಡಿಕಂಗೇಕೆ ತತ್ತ್ವವಿಚಾರ? ಹೇಳೆಂದ ॥ ॥೪೩॥**

**ತಾತ್ಪರ್ಯ:** ಎತ್ತಿಗೆ ಪವಿತ್ರವಾದ ಲಿಂಗಮುದ್ರೆಯನ್ನು ಹಾಕಿದರೆ ಅದನ್ನು ಈಶ್ವರನ ವಾಹನವಾದ ನಂದಿಗೆ ಸಮಾನವೆಂದು ತಿಳಿಯುವರು. ಆದರೆ ಕತ್ತೆಯನ್ನು ಕರೆತಂದು ಅದಕ್ಕೆ ಮುದ್ರಾಧಾರಣೆ ಮಾಡಿದರೆ ಅದು ಕತ್ತೆಯೇ ಆಗಿರುವುದು ಹೊರತು 'ಬಸವ' ಎನ್ನಿಸಿಕೊಳ್ಳುವುದಿಲ್ಲ. ಸತ್ಯವನ್ನೇ ಆಡುವ ವ್ರತಧಾರಿಗೆ ತತ್ತ್ವವಿಚಾರ ಯೋಗ್ಯವಾಗಿರುವುದೇ ಹೊರತು ದೀನನಾಗಿ ಇಂದ್ರಿಯ ವಿಷಯಗಳಿಗೆ ದಾಸನಾಗಿ ಇರುವವನಿಗೆ ತತ್ತ್ವವಿಚಾರ ಯೋಗ್ಯವಲ್ಲ.

**ಶಬ್ದಾರ್ಥ:** ತೊತ್ತುಬಡಿಕ=ದೀನನಾಗಿ ವಿಷಯಗಳಿಗೆ ಆಳುತನದಲ್ಲಿರುವವನು (ದಾಸನಾಗಿರುವನು); * ಮುದ್ರೆ=ಲಿಂಗಮುದ್ರೆ; * ಉತ್ತಮ=ಪವಿತ್ರ; ಬಸವ=ಈಶ್ವರನವಾಹನವಾದ ವೃಷಭ; * ಒತ್ತಲಾಗಿ =ಹಾಕಿದರೆ

**ಟಿಪ್ಪಣಿ:** ಸತ್ಯಸಂಧ– ಸತ್ಯಸ್ವರೂಪನಾದ ಪರಮಾತ್ಮನನ್ನೇ ಯಾವಾಗಲೂ ಅನುಸಂಧಾನ ಮಾಡುವವನು. ಅಥವಾ ಸದಾ ಸತ್ಯವಾದ ಮಾತನ್ನೇ ಆಡುವ ವ್ರತವನ್ನು ಹಿಡಿದಿರುವವನು.

ಪಾಠಾಂತರ: (ನೊತ್ತಲಾಗದ)- ನೊತ್ತಿದರೆಯದ (ಸೇ)

---

**ಚರ್ಮಖಂಡವ ಕಡಿವ ಶುನಕಗೆ**
**ಕಮ್ಮನೆಯ ತುಪ್ಪವದರೋಚಕ;**
**ಕರ್ಮಕಿಂಕರರಾದ ಕಾಮ್ಯಫಲಾಭಿಲಾಷರಿಗೆ ।**
**ಬ್ರಹ್ಮವಿದ್ಯಾಭ್ಯಾಸದಲಿ ಮನ**
**ನೆಮ್ಮದದರಿಂದಾತ್ಮಸುಖವದು**
**ದುರ್ಮತಿಗಳಿಗೆ ದೂರವಾಗಿಹುದರಸಿನೋಡಿದರೆ ॥ ॥೪೪॥**

**ತಾತ್ಪರ್ಯ:** ತೊಗಲು ಮತ್ತು ಮಾಂಸಖಂಡಗಳನ್ನು ಕಚ್ಚಿ ತಿನ್ನುವ ನಾಯಿಗೆ ಸುವಾಸನೆಯ ತುಪ್ಪ ರುಚಿಸದೆ ಹೋಗುವುದು. ಅಂತೆಯೇ ಲೌಕಿಕಕರ್ಮಗಳೇ ತಮಗೆ ಸರ್ವೇಷ್ಟಗಳನ್ನು ಕೊಡತಕ್ಕದೆಂದು ಅದಕ್ಕೆ ದಾಸರಾದವರಿಗೆ ಬ್ರಹ್ಮ ಸಾಕ್ಷಾತ್ಕಾರದ ಸಾಧನೆಯಲ್ಲಿ ಮನಸ್ಸು ನೆಡುವುದಿಲ್ಲ. ಆದಕಾರಣ ವಿಚಾರಮಾಡಿ ನೋಡಿದರೆ, ದುಷ್ಟಬುದ್ಧಿಗಳಿಗೆ ಆತ್ಮಸುಖವು ಎಟುಕುವುದಿಲ್ಲ. ಆದ್ದರಿಂದ ಅಂತಹ ವರಿಗೆ ತತ್ತ್ವೋಪದೇಶ ಮಾಡಬಾರದು.

**ಶಬ್ದಾರ್ಥ:** ಅರೋಚಕ=ರುಚಿಸದೆ ಹೋಗುವುದು; ಕರ್ಮಕಿಂಕರರು=ಕರ್ಮವೇ ತಮಗೆ ಸರ್ವೇಷ್ಟಗಳನ್ನು ಕೊಡತಕ್ಕದ್ದೆಂದು ಅದಕ್ಕೆ ದಾಸರಾದವರು; ನೆಮ್ಮದು=ನೆಡುವುದಿಲ್ಲ; ಅರಸಿ=ಹುಡುಕಿ (ವಿಚಾರಮಾಡಿ); * ದುರ್ಮತಿಗಳಿಗೆ=ದುಷ್ಟಬುದ್ಧಿಗಳಿಗೆ; * ದೂರವಾಗಿರುವುದು= ಎಟುಕುವುದಿಲ್ಲ; * ಖಂಡ=ಮಾಂಸಖಂಡ; * ಕಮ್ಮನೆಯ=ಸುವಾಸನೆಯ.

---

**ಜ್ಞಾನದಭ್ಯಾಸವನು ಮಾಡದ**
**ಮಾನವನೆ ತಿಳಿ ಹೀನಕುಲದವ;**
**ತಾನೆ ಬ್ರಹ್ಮವದೆಂದು ಕಾಣದ ನರನೆ ಪಾಮರನು; ।**
**ಸ್ವಾನುಭವವಿಲ್ಲದ ಮನುಷ್ಯನು**
**ತಾನೆ ದನುಜನು; ಗುರುಪದಾಬ್ಜ**
**ಧ್ಯಾನನಿಷ್ಠೆಯ ಭಕ್ತಿಯಿಲ್ಲದ ಮರ್ತ್ಯನವ ವ್ಯರ್ಥ ॥ ॥೪೫॥**

**ತಾತ್ಪರ್ಯ:** ಬ್ರಹ್ಮಜ್ಞಾನದ ಅಧ್ಯಯನವನ್ನು ಮಾಡದಿರುವ ನರನು ಯಾರಿದ್ದಾನೋ ಅವನೇ ನೀಚಕುಲದವನು ಎಂದು ತಿಳಿ. ತಾನೇ ಬ್ರಹ್ಮಸ್ವರೂಪಿ ಎಂದು ತಿಳಿಯದ ನರನೆ ಮೂಢನು; ತನ್ನ ಆತ್ಮವು ಬ್ರಹ್ಮವೆಂಬುದನ್ನು ತನ್ನ ಅನುಭವದಲ್ಲಿ ಇಟ್ಟುಕೊಳ್ಳದೆ ಇರುವ ವ್ಯಕ್ತಿಯೇ ರಾಕ್ಷಸನು; ಗುರುವಿನ ಪಾದಕಮಲಗಳನ್ನು ಧ್ಯಾನಿಸದೆ ಗುರುನಿಷ್ಠೆ ಭಕ್ತಿಯಿಲ್ಲದ ಮನುಷ್ಯನು ಈ ಲೋಕದಲ್ಲಿದ್ದರೂ ಅವನ ಜನ್ಮ ವ್ಯರ್ಥ.

**ಶಬ್ದಾರ್ಥ:** ಸ್ವಾನುಭವವಿಲ್ಲದ=ತನ್ನ ಆತ್ಮವು ಬ್ರಹ್ಮವೆಂಬುದನ್ನು ತನ್ನ ಅನುಭವದಲ್ಲಿ ಇಟ್ಟುಕೊಳ್ಳದೆ ಇರುವ; * ದನುಜ=ರಾಕ್ಷಸ; * ಪಾಮರ=ಮೂಢನು.

---

**ಏನ ಕಲಿತೊಡದೇನು? ಯತ್ನದ**
**ಲೇನಮಾಡಿದೊಡೇನು? ಸರ್ವವು**
**ಕಾನನದ ಬೆಳದಿಂಗಳಂದದಿ ವ್ಯರ್ಥವಾಗಿಹುದು ।**
**ಸ್ವಾನುಭವಸುಜ್ಞಾನವಿಲ್ಲದ**
**ಮಾನವನು ಬದುಕಿದೊಡದೇನವ**
**ಶ್ವಾನಸೂಕರರಂತೆ ಹೊಟ್ಟೆಯ ಹೊರೆದುಕೊಂಡಿಹನು ॥ ॥೪೬॥**

**ತಾತ್ಪರ್ಯ:** ಆತ್ಮಾನುಭವದ ವಿದ್ಯೆಯನ್ನು ಗಳಿಸದೆ ಇಹಲೋಕದಲ್ಲಿ ಇಂದ್ರಿಯ ಸುಖದ ವಿದ್ಯೆಗಳನ್ನು ಎಷ್ಟು ಕಲಿತರೆ ತಾನೆ ಏನು ಪ್ರಯೋಜನ? ಎಷ್ಟೆಷ್ಟೋ ಪ್ರಯತ್ನಪಟ್ಟು ಧನಗಳಿಸಿದರೆ ಏನು ಬಂತು? ಹೆಣ್ಣು ಹೊನ್ನು ಮಣ್ಣಿಗಾಗಿ ಶ್ರಮಿಸಿ ಗಳಿಸಿದ ಸಿರಿಸಂಪತ್ತೆಲ್ಲ ಕಾಡುಬೆಳದಿಂಗಳ ಹಾಗೆ ಉಪಯೋಗವಿಲ್ಲದಂತಾಗುತ್ತದೆ. ಜ್ಞಾನಸ್ವರೂಪನಾದ ಪರಮಾತ್ಮನನ್ನು ತನ್ನ ಅನುಭವಕ್ಕೆ ತಂದುಕೊಳ್ಳದೆ ಇರುವ ನರನು ಬದುಕಿದ್ದರೂ ವ್ಯರ್ಥ. ಅಂಥವನ ಬಾಳು ನಾಯಿ ಮತ್ತು ಹಂದಿಗಳ ಹಾಗೆ ಹೊಟ್ಟೆಹೊರೆದುಕೊಳ್ಳುತ್ತಾ ಬಾಳುವ ಹೀನಜೀವನವಾಗಿರುತ್ತದೆ.

**ಶಬ್ದಾರ್ಥ: * ಕಾನನ**=ಕಾಡು; *** ಅಂದದಿ**=ರೀತಿಯಲ್ಲಿ; **ಸ್ವಾನುಭವ ಸುಜ್ಞಾನವಿಲ್ಲದ**= ಜ್ಞಾನ ಸ್ವರೂಪನಾದ , ಪರಮಾತ್ಮನನ್ನು ತನ್ನ ಅನುಭವಕ್ಕೆ ತಂದುಕೊಳ್ಳದಿರುವ; **ಶ್ವಾನ-ಸೂಕರನಂತೆ** =ನಾಯಿ ಮತ್ತು ಹಂದಿ ಇವುಗಳ ಹಾಗೆ; **ಹೊರೆದುಕೊಂಡಿಹನು**=ಕಾಪಾಡಿಕೊಂಡಿರುವವನು.

---

**ವೇದಶಾಸ್ತ್ರವ ವಿಪ್ರ, ಜೀವವ**
**ಮೇದಿನೀಪತಿ, ವೈಶ್ಯ ವಸ್ತುವ,**
**ಪಾದಜನು ಪರಿಚರಿಯ ಶಕ್ತಿಯ, ಸೂಳೆ ಚೆಲುವಿಕೆಯ, ।**
**ಆದಿತೇಯರು ಸ್ವಪ್ರಭಾವವ**
**ಕಾದ ಹೊಟ್ಟೆಗೆ ಕ್ರಯವ ಮಾಳ್ಪರು**
**ಬೋಧವಿರಹಿತರಾದ ಶಿಶ್ನೋದರಪರಾಯಣರು ॥ ॥೪೭॥**

**ತಾತ್ಪರ್ಯ:** ಬ್ರಹ್ಮಜ್ಞಾನಗಳಿಸದವರು ಯಾರೇ ಆಗಲಿ ಅವರ ಸಾಧನೆ ವ್ಯರ್ಥ. ಹೇಗೆಂದರೆ ದ್ವಿಜನು ಶ್ರುತಿಸ್ಮೃತಿಗಳ ಅಧ್ಯಯನವನ್ನು, ಕ್ಷತ್ರಿಯ ಶೌರ್ಯದ ಬದುಕನ್ನು, ವೈಶ್ಯನು ಲೌಕಿಕವಸ್ತುಗಳನ್ನು, ಹೀನಕುಲದವನು ತನ್ನ ಸೇವಾಶಕ್ತಿಯನ್ನು, ವೇಶ್ಯೆ ತನ್ನ ದೇಹ ಸೌಂದರ್ಯವನ್ನು, ದೇವತೆಗಳು ತಮ್ಮ ಆತ್ಮಶಕ್ತಿಯನ್ನು ಮಾರಿಕೊಂಡಾಗ ಸುಜ್ಞಾನಹೀನರಾಗುತ್ತಾರೆ. ಇಂಥವರು ಸ್ತ್ರೀಸುಖವನ್ನು, ಹೊಟ್ಟೆಹೊರೆಯುವದನ್ನು ಹೆಚ್ಚಿನ ಸುಖ ಎಂದು ತಿಳಿದಿರುತ್ತಾರೆ. ಇವರಿಗೆ ತತ್ತ್ವಬೋಧೆ ವ್ಯರ್ಥ.

**ಶಬ್ದಾರ್ಥ: * ವೇದಶಾಸ್ತ್ರ**=ಶ್ರುತಿಸ್ಮೃತಿ; *** ವಿಪ್ರ**=ದ್ವಿಜ; *** ಜೀವನ**=ಶೌರ್ಯದ ಬದುಕು; **ಮೇದಿನೀಪತಿ** =ಕ್ಷತ್ರಿಯನು (ಇವನು ಹೊಟ್ಟೆಯಪಾಡಿಗಾಗಿ ಯುದ್ಧದಲ್ಲಿ ಮಡಿಯಲೂ ಸಿದ್ಧನಿರುವವನು);

**ಪಾದಜನು**=ಶೂದ್ರನು (ಪದ್ಭ್ಯಾಂ ಶೂದ್ರೋ ಅಜಾಯತ ಎಂಬ ಶ್ರುತಿಯಂತೆ ಪಾದದಿಂದ ಹುಟ್ಟಿದವನು.); **ಆದಿತೇಯರು**=ದೇವತೆಗಳು (ಇವರು ತಮಗಾಗಿ ಯಾಗದಲ್ಲಿ ಹೋಮ ಮಾಡಿದವರಿಗೆ ವರವನ್ನು ಕೊಡುವರು); **ಕಾದ ಹೊಟ್ಟೆಗೆ**=ಹಸಿದ ಹೊಟ್ಟೆಗಾಗಿ; * **ಶಿಶ್ನ**=ಪುರುಷನ ಜನನೇಂದ್ರಿಯ; * **ಉದರ**=ಹೊಟ್ಟೆ; * **ಪರಾಯಣರು**=ಪರಮಗುರಿ ಹೊಂದಿದವರು; **ಶಿಶ್ನೋದರಪರಾಯಣರು**=ಸ್ತ್ರೀ ಪುರುಷರ ಸಂಯೋಗವಾಗುವ ಸುಖ; ಹೊಟ್ಟೆಯಪಾಡು ಇವುಗಳೇ ಹೆಚ್ಚಿನದು ಎಂದು ತಿಳಿದವರು.

---

**ಕೆಲರು ಜಪತಪಗಳಲಿ, ಕೆಲಬರು**
**ಬಲುಮೆಯಹ ಶಾಸ್ತ್ರದಲಿ, ಕೆಲಬರು**
**ಹಲವುವಿಧ ಯಾಗದಲಿ, ಕೆಲಬರು ದಾನಧರ್ಮದಲಿ ।**
**ಬಳಲುವರು ಬಹುಕಷ್ಟದಿಂದಲಿ**
**ಗಳಿಸಲೆಂದೇ ವಿಷಯಸುಖಗಳ**
**ತಿಳಿಯಲರಿಯದೆ ನಿತ್ಯಸುಖವನು ಸುಲಭಮಾರ್ಗದಲಿ ॥ ॥೪೮॥**

**ತಾತ್ಪರ್ಯ:** ಕೆಲವರು ಜಪ, ತಪಸ್ಸುಗಳಲ್ಲಿ ಕೆಲವರು ಬುದ್ಧಿಬಲವನ್ನುಂಟು ಮಾಡುವಂಥ ಶಾಸ್ತ್ರಾಧ್ಯಯನದಲ್ಲಿ, ಹಲವರು ಹತ್ತಾರು ಬಗೆಯ ಯಜ್ಞಯಾಗಾದಿಗಳ ಆಚರಣೆಯಲ್ಲಿ, ಮತ್ತೆ ಸ್ವಲ್ಪಮಂದಿ ಷೋಡಶದಾನಗಳನ್ನು ನೀಡುವುದರಲ್ಲಿ ಮತ್ತು ಪುಣ್ಯಕಾರ್ಯಗಳನ್ನು ಮಾಡುವುದರಲ್ಲಿ ನಿರತರಾಗಿ ನಿತ್ಯಾನಂದಕರವಾದ ಮುಕ್ತಿಯನ್ನು ಸುಲಭರೀತಿಯಲ್ಲಿ ಗಳಿಸಲು ತಿಳಿಯದೆ ಬಹುಕಷ್ಟರೀತಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ವಿಷಯಗಳಿಂದ ಆಗುವ ಅನಿತ್ಯ ಸೌಖ್ಯಗಳನ್ನು ಸಂಪಾದಿಸಲು ಶ್ರಮಪಡುತ್ತಾರೆ.

**ಶಬ್ದಾರ್ಥ:** * **ಜಪ** = ಗುರು ಉಪದೇಶಿಸಿದ ಮಂತ್ರವನ್ನು ವಿಧಿಪೂರ್ವಕವಾಗಿ ಮತ್ತೆಮತ್ತೆ ಮೆಲ್ಲನೆ ಉಚ್ಚರಿಸುವುದು. * **ತಪ** = ಇಂದ್ರಿಯಗಳನ್ನೂ, ಮನಸ್ಸನ್ನೂ ಏಕಾಗ್ರಗೊಳಿಸುವುದು, **ಬಲುಮೆಯಹ** = ಬುದ್ಧಿಯ ಬಲವನ್ನುಂಟುಮಾಡುವಂಥ, **ಗಳಿಸಲೆಂದೇ** = ಸಂಪಾದಿಸಲೆಂದೇ, **ವಿಷಯಸುಖಗಳ** = ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ವಿಷಯಗಳಿಂದುಂಟಾಗುವ ಅನಿತ್ಯ ಸೌಖ್ಯಗಳನ್ನು

---

**ಮೀನು ನೀರೊಳಗಿರ್ದೊಡೇನೈ?**
**ಧ್ಯಾನವನು ಬಕ ಮಾಡಲೇನದು?**
**ಕಾನನವನಾಶ್ರಯಿಸಿ ಮರ್ಕಟವಿದ್ದು ಫಲವೇನು? ।**
**ಮೌನದಲಿ ಕೋಗಿಲೆಯಿರಲ್ಕದ**
**ಕೇನು ಫಲ? ಸುಜ್ಞಾನವಿಲ್ಲದ**
**ಸ್ನಾನ ಮೊದಲಾದವುಗಳಿಂ ಫಲವಿಲ್ಲ ಕೇಳೆಂದ ॥ ॥೪೯॥**

**ತಾತ್ಪರ್ಯ:** ಮೀನು ಸದಾ ನೀರೊಳಗೆ ಇದ್ದರೂ ಅದು ಸ್ನಾನ ಮಾಡಿದ ಹಾಗಾಯಿತೇ? ಬಕಪಕ್ಷಿ ಕಣ್ಣುಮುಚ್ಚಿಕೊಂಡಿದ್ದರೆ ಧ್ಯಾನಮಾಡಿ ದಂತಾಯಿತೇ? ಕೋತಿ ಕಾಡಿನಲ್ಲಿ ವಾಸಮಾಡಿದ ಮಾತ್ರಕ್ಕೆ ತಪಸ್ವಿಯಾದೀತೇ? ಕೋಗಿಲೆ ಮೌನದಲ್ಲಿ ಇದ್ದ ಮಾತ್ರಕ್ಕೆ ಮೌನ ಪ್ರಾರ್ಥನೆ ಮಾಡಿದಂತಾಯಿತೇ? ಅದರಿಂದ ಬಂದ ಭಾಗ್ಯವೇನು? ಆದಕಾರಣ ಸುಜ್ಞಾನವಿಲ್ಲದ ಮೀನು, ಬಕ, ಕೋಗಿಲೆ, ಕೋತಿ ಮೊದಲಾದವುಗಳ ಕ್ರಿಯೆಗಳು ಪರಲೋಕದ ಸುಖವನ್ನು ಕೊಡುವುದಿಲ್ಲ. ಅದರಂತೆ ಸುಜ್ಞಾನವಿಲ್ಲದ ಮಾಡಿದ ಸ್ನಾನ-ಧ್ಯಾನ-ಮೌನ-ತಪಸ್ಸುಗಳು ಮನುಷ್ಯನಿಗೆ ನಿತ್ಯಸುಖವನ್ನು ಕೊಡುವುದಿಲ್ಲ.

**ಶಬ್ದಾರ್ಥ:** * ಬಕ=ಕೊಕ್ಕರೆ; * ಮರ್ಕಟ=ಕೋತಿ; * ಸುಜ್ಞಾನ=ಆತ್ಮಜ್ಞಾನ.

**ಟಿಪ್ಪಣಿ:** ಫಲವಿಲ್ಲ (ತಾತ್ಪರ್ಯ)- ಮೀನಿನ ಸ್ನಾನ ಮೊದಲಾದವು ಅವಕ್ಕೆ ಪರಲೋಕದ ಸುಖವನ್ನು ಕೊಡುವುದಿಲ್ಲ. ಅದರಂತೆ ಜ್ಞಾನವಿಲ್ಲದೆ ಮಾಡಿದ ಸ್ನಾನಾದಿಗಳೂ ಮನುಷ್ಯನಿಗೆ ನಿತ್ಯಸುಖವನ್ನು ಕೊಡುವುದಿಲ್ಲ.

---

**ಹುತ್ತಬಡಿದರೆ ಹಾವು ಸಾವುದೆ?**
**ವ್ಯರ್ಥವಾದುಪವಾಸ ಮೊದಲಾ**
**ಗುತ್ತಲಿಹ ವ್ರತಗಳಲಿ ದೇಹವ ದಂಡಿಸಲು ಬರಿದೆ ।**
**ಮುಕ್ತಿ ದೊರಕುವುದೇ? ವಿವೇಕ, ವಿ**
**ರಕ್ತಿ, ಶಮೆ, ದಮೆ, ಗುರುಪದಾಂಬುಜ**
**ಭಕ್ತಿಯಿಲ್ಲದ ಕಾಮ್ಯಕರ್ಮಾಸಕ್ತರಿಂಗೆಂದ ॥** ॥೩೦॥

**ತಾತ್ಪರ್ಯ:** ಹಾವನ್ನು ಕೊಲ್ಲಲು ಹುತ್ತವನ್ನು ಬಡಿದರೆ ಹಾವು ಸಾಯುತ್ತದೆಯೇ? ಅರ್ಥವಿಲ್ಲದ ಸ್ವಾರ್ಥಕಾರಣಗಳಿಗಾಗಿ ಉಪವಾಸವೇ ಮೊದಲಾದ ನಾನಾ ಬಗೆಯ ವ್ರತಗಳನ್ನು ಮಾಡಿ ದೇಹವನ್ನು ದಂಡಿಸಿದರೆ ಸುಲಭದಲ್ಲಿ ಮೋಕ್ಷ ದೊರಕುವುದೇ? ಧರ್ಮಾಧರ್ಮ ವಿವೇಚನೆ, ವೈರಾಗ್ಯ, ಮನೋನಿಗ್ರಹ, ಇಂದ್ರಿಯನಿಗ್ರಹ, ಗುರುಪಾದ ಸೇವಾನಿಷ್ಠೆ ಇವುಗಳಿಲ್ಲದೆ ಫಲಾಸಕ್ತಿಯಿಂದ ಕರ್ಮಗಳನ್ನು ಮಾಡುವವರಿಗೆ ಮುಕ್ತಿ ದೊರಕುವುದಿಲ್ಲ ಎಂದು ವ್ಯಾಸರು ಶುಕನಿಗೆ ಹೇಳಿದರು.

**ಶಬ್ದಾರ್ಥ:** * ವ್ಯರ್ಥವಾದ=ಅರ್ಥವಿಲ್ಲದ; * ವಿರಕ್ತಿ=ವೈರಾಗ್ಯ; * ವ್ರತ = ನೋಂಪಿ; * ವಿವೇಕ= ಧರ್ಮಾಧರ್ಮವಿವೇಚನೆ; * ಶಮೆ=ಮನೋನಿಗ್ರಹ; * ದಮೆ=ಇಂದ್ರಿಯನಿಗ್ರಹ; * ಗುರುಪದಾಂಬುಜ ಭಕ್ತಿ=ಗುರುಪಾದಸೇವೆಯಲ್ಲಿ ನಿಷ್ಠೆ.

**ಟಿಪ್ಪಣಿ:** ಮುಕ್ತಿ ದೊರಕುವದೇ?- (ತಾತ್ಪರ್ಯ) ವಿವೇಕಾದಿಯಾದ ಸಾಧನಗಳಿಲ್ಲದೆ ಯಾವುದಾದರೊಂದು ಬಯಕೆಯಿಂದ ಸುಮ್ಮನೆ ಉಪವಾಸಾದಿಗಳನ್ನು ಮಾಡುವುದು ಬಂಧನಾಶಕವಾಗಲಾರದು.

---

**ಪಶುಗಳಿಗು ಮನುಜರಿಗು ಭೇದವ**
**ನುಸುರಬಾರದದೇಕೆನಲು ಸರಿ;**
**ಹುಸಿಯ ಭೌತಿಕದೇಹ, ನಿದ್ರಾಹಾರ, ಭಯ, ಸಂಗ ।**
**ವ್ಯಸನ, ಮೊದಲಾದವು ಸಮಾನಗ**
**ಳೆಸೆದು ತೋರ್ಪುವು; ನಿತ್ಯದೊಳು ತಾ**
**ವಿಷಯಬುದ್ಧಿಯನುಳಿದವನೆ ಪಶುಪತಿಯವೊಲ್ಮೆರೆವ ॥ ॥೫೧॥**

**ತಾತ್ಪರ್ಯ:** ಪ್ರಾಣಿಗಳಿಗೂ ಮನುಷ್ಯರಿಗೂ ವ್ಯತ್ಯಾಸವನ್ನು ಹೇಳಬಾರದು. ಏತಕ್ಕೆ ಎಂದರೆ ಹಾಗೆ ಭೇದ ಮಾಡದಿರುವುದು ಸರಿಯಾದುದು. ಕಾರಣವಿದು, ನಶ್ವರವಾದ ಪಾಂಚಭೌತಿಕದೇಹ, ನಿದ್ರೆ, ಆಹಾರ, ಭಯ, ಸ್ತ್ರೀಸಂಗ, ದುರ್ವ್ಯಸನ ಮುಂತಾದವು ಪ್ರಾಣಿಗಳಿಗೂ ಮನುಷ್ಯರಿಗೂ ಸಮಾನವಾದುದು ಅವು ಎದ್ದುಕಾಣುತ್ತದೆ. ಆದರೆ ಇನ್ನೊಂದು ದೃಷ್ಟಿಯಲ್ಲಿ ವ್ಯತ್ಯಾಸವಿದೆ. ಮನುಷ್ಯ ಪಂಚೇಂದ್ರಿಯ ಆಕರ್ಷಣೆಯ ಬುದ್ಧಿಯನ್ನು ದೂರಮಾಡಿ ಶಾಶ್ವತ ಬ್ರಹ್ಮಜ್ಞಾನವನ್ನು ಒಳಗೊಂಡಾಗ ಪಶುಪತಿಯ ರೀತಿ ವೈರಾಗ್ಯಮೂರ್ತಿಯಾಗಿ ಶೋಭಿಸುತ್ತಾನೆ.

**ಶಬ್ದಾರ್ಥ:** ಸರಿ=ಹಾಗೆ ಭೇದವನ್ನು ಮಾಡದೆ ಇರುವುದೇ ಯೋಗ್ಯವು; ಸಂಗ=ಸ್ತ್ರೀ–ಪುರುಷರ ಕೂಟದಿಂದಾಗುವ ಸುಖ; ವ್ಯಸನ=ಚಟ; ವಿಷಯಬುದ್ಧಿ=ಶಬ್ದಸ್ಪರ್ಶಾದಿ ವಿಷಯಗಳನ್ನೇ ಚಿಂತೆಮಾಡುವ ಬುದ್ಧಿ.

**ಟಿಪ್ಪಣಿ:** ಕವಿಯ ಪಶುಗಳಿಗೂ ಮನುಷ್ಯರಿಗೂ ಭೇದವಿಲ್ಲೆಂಬ ಈ ಕಲ್ಪನೆಯು **ಆಹಾರನಿದ್ರಾ ಭಯ ಮೈಥುನಂಚ ಸಾಮಾನ್ಯಮೇತತ್ ಪಶುಭಿರ್ನರಾಣಾಂ** ಎಂಬ ಸುಭಾಷಿತದ ನೆನಪು ಕೊಡುತ್ತದೆ.

---

**ವಿಷಯಲಂಪಟರಾಗಿ ಸಂಸ್ಕೃತಿ**
**ವ್ಯಸನದಲ್ಲಿಹ ಜೀವರೆಲ್ಲರು**
**ಪಶುಗಳೆನಿಸುವರೀಶ್ವರಾಜ್ಞಾಪಾಶಪರಿವೃತರು; ।**
**ಉಸುರಲೇನದನೊಡೆಯನಿಂ ಪ್ರೇ**
**ರಿಸಿದನಡ್ವನವೋಲು ನರಕವ**
**ನೆಸೆವ ಸ್ವರ್ಗವನೆರಡುಕಡೆಯಾಡುತ್ತಲಿಹರೆಂದ ॥ ॥೫೨॥**

**ತಾತ್ಪರ್ಯ:** ಇಂದ್ರಿಯಸುಖಲೋಲುಪರಾಗಿ ಸಂಸಾರದ ಮೋಹದಲ್ಲಿರುವ ಜೀವಿಗಳೆಲ್ಲರು ಪಶುಗಳು ಎಂದೆನ್ನಿಸುವರು. ಇವರೆಲ್ಲರೂ ಈಶ್ವರನು ವೇದದಲ್ಲಿ ಮಾಡಿರುವ ಕರ್ಮರೂಪವಾದ ಆಜ್ಞೆಯೆಂಬ ಹಗ್ಗದಿಂದ ಸುತ್ತಲ್ಪಟ್ಟವರು. ಇನ್ನು ಆ ಬಗ್ಗೆ ಹೆಚ್ಚಿಗೆ ಹೇಳಲು ಏನಿದೆ? ಒಡೆಯನ ಅಪ್ಪಣೆಯಂತೆ ಕೆಲಸಮಾಡುವ ಎತ್ತಿನ (ಅನಡ್ವನ) ಹಾಗೆ ಪೂರ್ವಾರ್ಜಿತಕರ್ಮಾನುಸಾರಕರ್ಮವೆಸಗುತ್ತಾ ವಿಷಯಾಸಕ್ತಿಯ

ಫಲವಾಗಿ ಅತ್ತ ಘೋರನರಕಕ್ಕೂ ಇತ್ತ ಭವ್ಯ ಸ್ವರ್ಗಕ್ಕೂ ಎರಡೂ ಕಡೆಗೆ ಪಾಪ-ಪುಣ್ಯಾನುಸಾರ ಚಲಿಸುತ್ತಾ ಫಲಗಳನ್ನು ಅನುಭವಿಸುತ್ತಿರುವರು.

**ಶಬ್ದಾರ್ಥ:** **ಈಶ್ವರಾಜ್ಞಾಪಾಶಪರಿವೃತರು**=ಈಶ್ವರನು ವೇದದಲ್ಲಿ ಮಾಡಿರುವ ಕರ್ಮರೂಪವಾದ ಆಜ್ಞೆಯೆಂಬ ಹಗ್ಗದಿಂದ ಸುತ್ತಲ್ಪಟ್ಟವರು; **ಉಸುರಲೇನು**=ಹೇಳಲೇನು?; **ಅನಡ್ವ**=ಎತ್ತು; **ಎಡೆಯಾಡುತ್ತಲಿಹರು**=ವಿಷಯದಲ್ಲಿ ಆಸಕ್ತಿಯಿರುವವರಾಗಿ ಸ್ವರ್ಗಕ್ಕೂ ನರಕಕ್ಕೂ ಹೋಗಿ ಬರುತ್ತಿರುವವರು; * **ಸಂಸೃತಿ**=ಸಂಸಾರ; * **ವ್ಯಸನ**=ಮೋಹ; * **ವಿಷಯಲಂಪಟರು**=ಇಂದ್ರಿಯಸುಖಲೋಲುಪರು.

---

**ಅದುನಿಮಿತ್ತದಿ ಮಗನೆ, ಅಧ್ಯಾ**
**ತ್ಮದಲಿ ಬಿಡದಾಸಕ್ತರಾಗಿಹ**
**ಸದುಹೃದಯರಿಂಗೊಲಿದು ಪೇಳೀ ಅನುಭವಾಮೃತವ; ।**
**ಕದಡು ಕಲ್ಮಷಚಿತ್ತರಾದರಿ**
**ಗಿದನುಸುರದಿರು; ಮುಕ್ತಿಮಾರ್ಗಾ**
**ಸ್ಪದಕೆ ಸಹಜಾನಂದಗುರುಪದಭಕ್ತಿಯೇ ಸುಲಭ ॥** **॥೫೩॥**

**ತಾತ್ಪರ್ಯ:** ಆದಕಾರಣ ಶುಕನೆ ಕೇಳು, ಬ್ರಹ್ಮಜ್ಞಾನವನ್ನು ಪಡೆಯಬೇಕೆಂಬ ಆಸೆಯುಳ್ಳವರಾಗಿ ನಿರ್ಮಲಚಿತ್ತರಾದವರಿಗೆ ಮಾತ್ರವೇ ಪ್ರೀತಿಯಿಂದ ಹೇಳಬೇಕು. ಈ ಅನುಭವಾಮೃತ ಗ್ರಂಥದ ವಿಷಯವನ್ನು ಚಂಚಲಮನದ ಕಪಟವರ್ತನೆಯ ದುಷ್ಟಬುದ್ಧಿಯ ಜನರಿಗೆ ಹೇಳಬಾರದು. ಮೋಕ್ಷಮಾರ್ಗವನ್ನು ಹೊಂದಲು ಸಹಜಾನಂದ ಗುರುವಿನ ಪಾದಭಕ್ತಿಯೇ ಸುಲಭಮಾರ್ಗವೆಂದು ತಿಳಿಯಬೇಕು.

**ಶಬ್ದಾರ್ಥ:** * **ಅದು ನಿಮಿತ್ತದಿ**=ಆದಕಾರಣ; * **ಸದು ಹೃದಯರಿಗೆ**=ನಿರ್ಮಲಚಿತ್ತರಿಗೆ; * **ಒಲಿದು**=ಪ್ರೀತಿಯಿಂದ; * **ಕದಡುಚಿತ್ತ**=ಚಂಚಲಮನ; * **ಕಲ್ಮಷಚಿತ್ತರು**=ಕಪಟವರ್ತನೆಯ ಮನಸ್ಸಿನವರು.

**ಟಿಪ್ಪಣಿ * :** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

**ಮಂಗಳ (೫೪)**

**ಕಾಲ, ಕಾಲಾತೀತ, ಕಲಿಮಲ**
**ಜಾಲ ಮೂಲೋನ್ಮೂಲ, ನಿಗಮವಿ**
**ಶಾಲನುತ, ನಿಶ್ಚಲ, ನಿಜಾತ್ಮ, ನಿರಾಳ, ನಿರ್ಮಾಯ, ।**
**ಭಾಳಲೋಚನ, ಭರ್ಗ, ಭಸಿತೋ**
**ದ್ಧೂಳನ, ಭವೌಘಪ್ರಭೇದನ,**
**ಶೂಲಧರ, ಶ್ರೀಮಲ್ಲಿಕಾರ್ಜುನ, ಸಲಹು ಮೂಜಗವ ॥** **॥೫೪॥**

**ತಾತ್ಪರ್ಯ:** ಕಾಲಸ್ವರೂಪನೂ, ಕಾಲಮೀರಿದವನೂ, ಕಲಿಕಲ್ಮಷವೆಂಬ ಬಲೆಯ ಮೂಲವನ್ನು ಕಿತ್ತೆಸೆಯುವನೂ ಅಥವಾ ಯಮನಿಗೆ, ಯಮನಾದ ಮೃತ್ಯುಂಜಯನೇ ಕಲಿಕಲ್ಮಷಜಾಲವನ್ನು ಮೀರಿರುವ, ಸಂಸಾರದ ಬೇರನ್ನು ಕಿತ್ತುಹಾಕುವ ಅಪಾರವಾದ ವೇದವಿನುತನೇ, ಸ್ಥಿರಾತ್ಮನೇ, ತಾಪತ್ರಯರಹಿತನೇ, ಮಾಯಾದೂರನೇ, ಹಣೆಗಣ್ಣನೇ, ಪರಶಿವನೇ, ಭಸಿತದಿಂದ ಅಲಂಕೃತನಾದವನೇ, ಸಂಸಾರದ ಕಷ್ಟಸಮೂಹವನ್ನು ಪರಿಹರಿಸುವವನೇ, ತ್ರಿಶೂಲಪಾಣಿಯೇ, ಶ್ರೀಮಲ್ಲಿಕಾರ್ಜುನನೇ, ಸ್ವರ್ಗಮರ್ತ್ಯಪಾತಾಳ ಗಳಲ್ಲಿರುವವರೆಲ್ಲರನ್ನೂ ಕಾಪಾಡು.

**ಶಬ್ದಾರ್ಥ:** **ಕಾಲ** = ಕಾಲಸ್ವರೂಪನು, **ಕಾಲಾತೀತ** = ಕಾಲವನ್ನು ಮೀರಿದವನು, **ಕಲಿಮಲಜಾಲ ಮೂಲೋನ್ಮೂಲ** = ಕಲಿಕಲ್ಮಷವೆಂಬ ಬಲೆಯ ಮೂಲವನ್ನು ಕಿತ್ತುಹಾಕುವವನು **ಕಾಲಕಾಲ** = ಯಮನಿಗೆ ಯಮನಾಗಿರುವ, **ಅತೀತಕಲಿಮಲಜಾಲ** = ಕಲಿಕಲ್ಮಷಸಮೂಹವನ್ನು ದಾಟಿರುವ, **ಮೂಲೋನ್ಮೂಲ** = ಸಂಸಾರದ ಬೇರನ್ನು ಕಿತ್ತುಹಾಕುವ) **ನಿರಾಳ** = ಯಾವ ತಾಪತ್ರಯದ ಯೋಚನೆಯೂ ಇಲ್ಲದವನು. **ಭವೌಘ ಪ್ರಭೇದನ** = ಸಂಸಾರದ ಕಷ್ಟಗಳ ಸಮೂಹವನ್ನು ಹೋಗಲಾಡಿಸುವವನು, **ಮೂಜಗವ** = ಇದು ಲೋಕಾಸ್ಸಮಸ್ತಾಸ್ಸುಖಿನೋ ಭವನ್ತು ಎಂಬ ಸಂಸ್ಕೃತ ಶ್ಲೋಕಭಾಗದ ಅನುವಾದವು.

## ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಅಧಿಕಾರ ಲಕ್ಷಣವೆಂಬ ಮೊದಲನೆಯಧ್ಯಾಯವು ಮುಗಿದುದು.**

# ಸಾರಸಂಗ್ರಹ

## ಮೊದಲನೆಯ ಅಧ್ಯಾಯ – ಅಧಿಕಾರ ಲಕ್ಷಣ

ಮನುಷ್ಯಜನ್ಮವನ್ನು ಪಡೆದ ಜೀವನು ತನ್ನ ಹಿಂದಿನ ಪಾಪಗಳನ್ನೆಲ್ಲ ಹೋಗಲಾಡಿಸಿ ಕೊಂಡು ಉತ್ಕೃಷ್ಟವಾದ ಪುಣ್ಯಫಲವನ್ನು ಪಡೆಯಬೇಕಾದರೆ ಸ್ವಲ್ಪ ಹೊತ್ತಾದರೂ ಪರಬ್ರಹ್ಮನ ಸ್ಮರಣೆಯನ್ನು ಮಾಡಬೇಕು. ಆ ಬ್ರಹ್ಮವೆಂಬುದು ಎಲ್ಲಕ್ಕಿಂತಲೂ ಹೆಚ್ಚಿನದೂ ತನ್ನನ್ನು ತಾನೇ ಬೆಳಗುವಂಥದ್ದೂ ಅಖಂಡವಾದದ್ದೂ ಎರಡನೆಯದಿಲ್ಲದ್ದೂ ಮಾತಿಗೆ ನಿಲುಕದಂಥದ್ದೂ ಮತ್ತೆ ಶ್ರುತಿಯಿಂದಲೂ ಗುರುಗಳಿಂದಲೂ ಅನುಭವದಿಂದಲೂ ತಿಳಿಯಬರುವಂಥದ್ದೂ ಆಗಿರುವದು. ಆ ಬ್ರಹ್ಮವಿಷಯಕವಾದ ಉಪದೇಶವು ಹಸನಾದ ಹೊಲದಲ್ಲಿ ಬಿತ್ತಿದ ಬೀಜದ ಹಾಗೆ ಯೋಗ್ಯನಾದವನಲ್ಲಿ ಮಾತ್ರ ಫಲಕಾರಿಯಾಗುವದು. ದಾನ, ಧರ್ಮ, ದಯಾ, ಮೌನ, ಶಮ, ದಮ, ಸತ್ಯ, ಶೌಚ, ನಿತ್ಯನೈಮಿತ್ತಿಕಾಚರಣೆ, ಗುರುಭಕ್ತಿ, ಸಮಬುದ್ಧಿ, ವಿವೇಕ, ವಿಚಾರ, ಮೋಕ್ಷದ ಇಚ್ಛೆ, ಜಿತೇಂದ್ರಿಯತ್ವ, ವೈರಾಗ್ಯ ಮೊದಲಾದ ಸದ್ವರ್ತನೆಗಳೇ ಬ್ರಹ್ಮೋಪದೇಶಕ್ಕೆ ತಕ್ಕ ಯೋಗ್ಯತೆಗಳು. ಹೀಗಿಲ್ಲದ ಇದಕ್ಕೆ ವ್ಯತಿರಿಕ್ತವಾದ ಗುಣಗಳುಳ್ಳವರಿಗೆ ಉಪದೇಶವನ್ನು ಮಾಡಿದರೆ ಅದು ಊಷರಭೂಮಿಯಲ್ಲಿ ಬಿತ್ತಿದ ಬೀಜದಂತೆ ವ್ಯರ್ಥವಾಗುವದು. ಆದ್ದರಿಂದ ಮನುಷ್ಯನು ಅಯೋಗ್ಯನೆನಿಸಿಕೊಳ್ಳದೆ ಜಪತಪಾದಿ ಸದಾಚಾರಗಳಿಂದ ಬ್ರಹ್ಮೋಪದೇಶಕ್ಕೆ ಅರ್ಹತೆಯನ್ನು ಪಡೆಯಬೇಕು. ವಿಷಯಸುಖದ ಸಂಪಾದನೆಗಾಗಿ ಜಪತಪಾದಿ ಸದಾಚಾರವನ್ನು ಮಾಡುವವರೆಷ್ಟೋ ಜನರಿರಬಹುದು. ಆದರೆ ವಿಷಯಸುಖವೇ ಮನುಷ್ಯನ ಧ್ಯೇಯವಲ್ಲ. ಮನುಷ್ಯನು ಬಯಸಬೇಕಾದ ಮುಖ್ಯಫಲವು ತನ್ನನ್ನು ಹುಟ್ಟು, ಸಾವು ಮೊದಲಾದ ದುಃಖಗಳ ತೊಡಕಿನಿಂದ ತಪ್ಪಿಸುವಂಥ ಮೋಕ್ಷ. ಜ್ಞಾನವಿಲ್ಲದ ಜಪತಪಗಳಿಂದ ಆ ಮುಖ್ಯಫಲ ವಾಗುವದಿಲ್ಲ. ಮೋಕ್ಷದ ಕಡೆಗೆ ಕಣ್ಣುಹಾಕದೆ ವಿಷಯಸುಖವನ್ನೇ ಮೋಹಿಸುವವರು ಪಶುಗಳಂತೆಯೇ ಸರಿ. ಆದ್ದರಿಂದ ಮನುಷ್ಯತ್ವವನ್ನು ಸಾರ್ಥಕವಾಗಿ ಮಾಡಕೊಳ್ಳಬೇಕೆಂದು ವಿಷಯಾಸಕ್ತಿಯನ್ನು ಬಿಟ್ಟು ಆತ್ಮವಿಚಾರದಲ್ಲಿ ಆಸಕ್ತರಾದವರೇ ಬ್ರಹ್ಮಜ್ಞಾನವನ್ನುಪದೇಶಿಸುವ ಈ ಅನುಭವಾಮೃತವನ್ನು ಕೇಳುವದಕ್ಕೆ ಯೋಗ್ಯರು.

*****

# ಎರಡನೆಯ ಅಧ್ಯಾಯ

## ವೈರಾಗ್ಯ ಪ್ರಕರಣ

**ಸೂಚನೆ॥**

**ಕಷ್ಟವಹ ಸಂಸಾರಧರ್ಮವ**
**ದಿಷ್ಟವಲ್ಲವೆನುತ್ತ ತನಯಗೆ**
**ಶಿಷ್ಟವೇದವ್ಯಾಸಮುನಿಪತಿ ಬೋಧಿಸಿದನೊಲಿದು ॥**

**ತಾತ್ಪರ್ಯ:** ಮುಕ್ತಿಪಥಕ್ಕೆ ಒಯ್ಯಲು, ವಿರಾಗಿ ಆಗಲು ಅಡ್ಡಿಯಾಗಿರುವಂಥ ಸಂಸಾರದ ಬದುಕಿನಲ್ಲಿ ಆಸಕ್ತಿ ತಳೆಯುವುದು ಸರಿಯಲ್ಲವೆಂದು ಶ್ರೇಷ್ಠನಾದ ವೇದವ್ಯಾಸ ಮುನಿಪತಿಯು ತನ್ನ ಮಗನಾದ ಶುಕನಿಗೆ ಆಸಕ್ತಿಯಿಂದ ವೈರಾಗ್ಯವನ್ನು ಬೋಧಿಸಿದನು.

**ಶಬ್ದಾರ್ಥ:** * ಕಷ್ಟವಹ=ವೈರಾಗ್ಯ ಹೊಂದಲು ಅಡ್ಡಿಯಾಗಿರುವ; * ಸಂಸಾರ ಧರ್ಮ=ಸಂಸಾರದ ಬದುಕಿನಲ್ಲಿ; * ಇಷ್ಟವಲ್ಲ=ಆಸಕ್ತಿ ತಳೆಯುವುದು ಸರಿಯಲ್ಲ; * ಶಿಷ್ಟ=ಶ್ರೇಷ್ಠ.

---

### ಇಷ್ಟದೇವತಾ ಸ್ತುತಿ ಮೊದಲಾದದ್ದು (೧-೩)

**ಸರಸಿರುಹಭವ ಶಾರ್ಙ್ಗರುದ್ರೇ**
**ಶ್ವರಸದಾಶಿವರಾವಳೊಬ್ಬಳ**
**ಚರಣಪೀಠದ ಕೆಳಗೆ ಕರಗಳ ಮುಗಿದುಕೊಂಡಿಹರು ।**
**ಅರರೆ ! ಆಕೆಯದಾವನಂಘ್ರಿಗೆ**
**ಶಿರವ ಬಾಗುವಳಾ ಮಹಾತ್ಮನ**
**ನರಕುರಿಗಳೆಂತರಿವರ್ರೈ ಶ್ರೀಗಿರಿಯಧೀಶ್ವರನ? ॥ ॥೧॥**

**ತಾತ್ಪರ್ಯ:** ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರು ಎಂಬ ಪಂಚಮಹಾ ಮೂರ್ತಿಗಳು ಯಾವ ಆದಿಶಕ್ತಿಯ ಪಾದಪೀಠದ ಕೆಳಗೆ ನಿಂತು ಸದಾಕಾಲವೂ ಕೈಮುಗಿದುಕೊಂಡಿರುವರೋ ಅಂಥ ಆದಿಶಕ್ತಿಯೇ ಆ ಗಿರಿಮಲ್ಲಿಕಾರ್ಜುನನ ಪಾದಕಮಲಗಳಿಗೆ ನಮಿಸುತ್ತಾಳೆ ಎಂದ ಮೇಲೆ ಅಂಥ ನಿರ್ಗುಣ ಬ್ರಹ್ಮಸ್ವರೂಪಿ ಆದ ಮಹಾತ್ಮನನ್ನು ಅಜ್ಞಾನಿಗಳಾದ ಮಾನವರು ತಿಳಿಯಲು ಹೇಗೆ ಸಾಧ್ಯ?

**ಶಬ್ದಾರ್ಥ:** * ಅಂಘ್ರಿ=ಪಾದ; * ಶ್ರೀಗಿರಿಗಧೀಶ್ವರ=ಶ್ರೀಶೈಲಗಿರಿಮಲ್ಲಿಕಾರ್ಜುನ; * ನರಕುರಿಗಳು= ಅಜ್ಞಾನಿಮಾನವರು; ಶಾರ್ಙ್ಗ=ವಿಷ್ಣು; * ಕರಗಳ ಮುಗಿದುಕೊಂಡಿಹರು=ನಮಿಸುತ್ತಿಹರು.

**ಟಿಪ್ಪಣಿ-೧:** ರುದ್ರ, ಈಶ್ವರ, ಸದಾಶಿವ- ಇವು ಈಶ್ವರನ ಬೇರೆ ಬೇರೆ ಮೂರ್ತಿವಿಶೇಷಗಳು.

**ಟಿಪ್ಪಣಿ-೨:** ಆವಳೊಬ್ಬಳ- ಸತ್ತ್ವರಜಃ ತಮೋಗುಣಾತ್ಮಕಳಾದ ಆದಿಶಕ್ತಿಯ. ಇಲ್ಲಿ ಆದಿಶಕ್ತಿ ಎಂಬ ಮಾತಿನಿಂದ ರೂಢಿಯಲ್ಲಿರುವ ಶಾರದಾ, ಲಕ್ಷ್ಮೀ ಮೊದಲಾದ ಸಗುಣರೂಪವನ್ನು

ಗ್ರಹಿಸಬಾರದು. ಏಕೆಂದರೆ ಆ ಸಗುಣಶಕ್ತಿಯ ರೂಪವಿಶೇಷಗಳು ಬ್ರಹ್ಮವಿಷ್ಣು ಮೊದಲಾದವರಿಗೆ ಪತ್ನಿಯ ಸ್ವರೂಪಗಳಾಗಿವೆ. ಈ ಪದ್ಯದಲ್ಲಿ ಆ ಬ್ರಹ್ಮ, ವಿಷ್ಣು ಮೊದಲಾದವರೆಲ್ಲ ಆಕೆಗೆ ಕೈಯ ಮುಗಿಯುವುದರಿಂದ ಆಕೆಯು ಆ ಬ್ರಹ್ಮ, ವಿಷ್ಣು ಮೊದಲಾದವರ ಉತ್ಪತ್ತಿಗೂ ಕಾರಣಳಾದ ಆದಿಶಕ್ತಿ ಆಗಿರಬೇಕು.

**ಟಿಪ್ಪಣಿ–೩: ಶ್ರೀಗಿರಿಯಧೀಶ್ವರನ–** ಈ ಮಾತು ಮಲ್ಲಿಕಾರ್ಜುನನೆಂಬ ಈಶ್ವರನ ಸಗುಣಮೂರ್ತಿಗೆ ಅನ್ವಯಿಸಿದರೂ ಇಲ್ಲಿ ಆ ಅರ್ಥವನ್ನು ತೆಗೆದುಕೊಳ್ಳಬಾರದು. ಏಕೆಂದರೆ ಈಶ್ವರನ ಸಗುಣಮೂರ್ತಿಗಳಾದ ರುದ್ರ, ಈಶ್ವರ, ಸದಾಶಿವ ಇವರೆಲ್ಲರಿಂದ ಕೈಮುಗಿಸಿಕೊಳ್ಳುವ ಆದಿಶಕ್ತಿಯಿಂದ ಉಪಚಾರವನ್ನು ಪಡೆಯುವ ಸ್ವರೂಪವು ಪ್ರಕೃತವಿಷಯವಾದ್ದರಿಂದ ಎಲ್ಲ ಸಗುಣಸ್ವರೂಪಗಳಿಗೂ ಆಧಾರವಾದ ನಿರ್ಗುಣಬ್ರಹ್ಮದ ಸ್ವರೂಪವನ್ನು ಇಲ್ಲಿ ಗ್ರಹಿಸಬೇಕು. ಉಪಾಸಕರು ಪರಬ್ರಹ್ಮನ ರೂಪವನ್ನು ತಮ್ಮ ಉಪಾಸ್ಯದೇವತೆಯಾಗಿ ವರ್ಣಿಸುವುದುಂಟು.

---

**ಭಂಡರಿಗೆ, ಬಹುಭಾಷಿಗಳಿಗೆ, ಪ್ರ**
**ಚಂಡರಿಗೆ, ಪರಸತಿಯ ಬೇಟೆಯ**
**ಪುಂಡತನದಲಿ ಹೆಂಡಿರನು ಬಿಟ್ಟಿರ್ಪ ಪೋಟರಿಗೆ ।**
**ಕುಂಡಗೋಳಕರಿಂಗೆ, ಸತತವು**
**ಕಂಡವರ ಕೂಡೆಲ್ಲ ಕಲುಹಿಪ**
**ಮಂಡರಿಗೆ ಹೇಳದಿರು ಮರೆದೀ ಅನುಭವಾಮೃತವ ॥ ॥೨॥**

ತಾತ್ಪರ್ಯ: ಲಜ್ಜೆಗೇಡಿಗಳಿಗೆ ಹರಟೆಮಲ್ಲರಿಗೆ, ಉಗ್ರರಿಗೆ, ಪರನಾರಿಯರನ್ನು ಹಿಂದಟ್ಟಿಕೊಂಡು ಹೋಗುವ ನೀತಿಗೇಡಿತನದಲ್ಲಿ ತಮ್ಮ ಸತಿಯರನ್ನು ತೊರೆದಿರುವ ಅವಿವೇಕಿಗಳಿಗೆ, ಹಾದರಗಿತ್ತಿಯ ಮಕ್ಕಳಿಗೆ ತಂದೆ ಸತ್ತಮೇಲೆ ತಾಯಿಯಲ್ಲಿ ಹುಟ್ಟಿದವನಿಗೆ (ಗೋಳಕರಿಗೆ), ಸದಾಕಾಲ ಸಿಕ್ಕಸಿಕ್ಕವರ ಜತೆಯಲ್ಲೆಲ್ಲ ಜಗಳವಾಡುವ ಮೊಂಡರಿಗೆ ಈ ಅನುಭವಾಮೃತವನ್ನು ಅಪ್ಪಿತಪ್ಪಿಯೂ ಹೇಳಬಾರದು.

**ಶಬ್ದಾರ್ಥ:** ಬಹುಭಾಷಿಗಳಿಗೆ=ಹರಟೆಮಲ್ಲರಿಗೆ; **ಬೇಟೆಯ**=ಹಿಂದಕ್ಕಟ್ಟಿಕೊಂಡು ಹೋಗುವ; **ಪೋಟರಿಗೆ**=ಅವಿವೇಕಿಗಳಿಗೆ; **ಕುಂಡ**=ಹಾದರಗಿತ್ತಿಯ ಮಗ; **ಗೋಳಕ**=ತಂದೆ ಸತ್ತಮೇಲೆ ಹುಟ್ಟಿದವನು; * **ಮಂಡ**=ಮೊಂಡ (ಹಠಮಾರಿ); * **ಭಂಡ**=ಲಜ್ಜೆಗೇಡಿ; * **ಪ್ರಚಂಡ**= ಉಗ್ರ; ಮರೆತೂ=ಅಪ್ಪಿತಪ್ಪಿಯೂ.

---

**ಸತ್ಯವಚನವ ನುಡಿವರಿಗೆ, ಸುವಿ**
**ರಕ್ತರಿಗೆ, ಸುಖದುಃಖದಲಿ ಸಮ**
**ಚಿತ್ತರಿಗೆ, ಸಕಲರಲಿ ಕರುಣಾವೃತ್ತಿಯುಳ್ಳರಿಗೆ, ।**
**ಉತ್ತಮಶ್ಲೋಕರಿಗೆ, ಸದ್ಗುರು**
**ಭಕ್ತರಿಗೆ, ಪರತತ್ತ್ವಚಿಂತಾ**
**ಸಕ್ತರಿಗೆ ಬೋಧಿಸುವದೊಲಿದೀ ಅನುಭವಾಮೃತವ ॥ ॥೩॥**

**ತಾತ್ಪರ್ಯ:** ಸದಾ ನಿಜವನ್ನೇ ನುಡಿಯುವವರಿಗೆ, ವೈರಾಗ್ಯಶಾಲಿಗಳಿಗೆ, ಸುಖ ದುಃಖಗಳಲ್ಲಿ ಹಿಗ್ಗದೆ ಕುಗ್ಗದೆ ಸ್ಥಿರಬುದ್ಧಿಯುಳ್ಳವರಿಗೆ, ಎಲ್ಲರಲ್ಲೂ ಕಾರುಣ್ಯಭಾವ ತಳೆದವರಿಗೆ, ಒಳ್ಳೆಯ ಹೆಸರನ್ನು ಪಡೆದವರಿಗೆ, ಸದ್ಗುರುವಿನ ಭಕ್ತರಿಗೆ, ಮೋಕ್ಷ ಸುಖವನ್ನು ಗಳಿಸಬೇಕೆಂಬ ಚಿಂತೆಯುಳ್ಳವರಿಗೆ ಪ್ರೀತಿಯಿಂದ ಈ ಅನುಭವಾಮೃತ ವನ್ನು ಉಪದೇಶಿಸಬೇಕು.

**ಶಬ್ದಾರ್ಥ:** ಉತ್ತಮಶ್ಲೋಕರಿಗೆ=ಒಳ್ಳೆಯ ಹೆಸರನ್ನು ಪಡೆದವರಿಗೆ; * ಸುವಿರಕ್ತರಿಗೆ=ವೈರಾಗ್ಯ ಶಾಲಿಗಳಿಗೆ; * ಸಮಚಿತ್ತರಿಗೆ=ಸ್ಥಿರಚಿತ್ತರಿಗೆ; ಪರತತ್ತ್ವಾಸಕ್ತರಿಗೆ=ಮೋಕ್ಷಸುಖ ಗಳಿಸಬೇಕೆಂಬ ಚಿಂತೆಯುಳ್ಳವರಿಗೆ.

---

## ಸಂಸಾರದ ದುಃಖ ಸ್ವರೂಪ (೪-೧೬)

**ಕೇಳು, ಶುಕಯೋಗೀಂದ್ರ, ಸಂಸೃತಿ**
**ಹಾಳುವಾದವಲಾ ! ವಿಚಾರಿಸೆ**
**ಹೇಳಲೇನದು ಬಯಲಬಳಲಿಕೆ, ನಿಷ್ಫಲಾರಂಭ; ।**
**ಕಾಳ ಸತಿಸುತಗೃಹಧನಂಗಳು**
**ಗಾಳಿಗೊಡ್ಡಿದ ಸೊಡರಿನಂದದಿ**
**ಕಾಲವಶದಲಿ ಕೆಟ್ಟುಹೋಹವು ನಿತ್ಯವಲ್ಲೆಂದ ॥ ॥೪॥**

**ತಾತ್ಪರ್ಯ:** ಶುಕಮುನಿಯೆ ಕೇಳು, ಹೇಳುವೆನು. ಸಂಸಾರವು ನಶ್ವರವಾದುದು. ವಿಚಾರಮಾಡಿ ಹೇಳಲು ಏನಿದೆ? ಹಾಗೆ ನೋಡಿದರೆ ಅದು ವ್ಯರ್ಥವಾದ ಆಯಾಸಕ್ಕೆ ಕಾರಣವಾದುದು. ಬೆಳೆ ಬೆಳೆಯಲಾಗದ ಬೇಸಾಯವಿದ್ದಂತೆ. ಕೆಡಕುಂಟುಮಾಡುವ ಹೆಂಡತಿ ಮಕ್ಕಳು, ಮನೆ, ಹಣ ಇವೆಲ್ಲ ಬೀಸುವ ಗಾಳಿಗೆ ಎದುರಾದ ದೀಪದಂತೆ. ಕಾಲಾಂತರದಲ್ಲಿ ನಾಶವಾಗುವಂಥವು; ಶಾಶ್ವತವಾದುದಲ್ಲ.

**ಶಬ್ದಾರ್ಥ:** ಕಾಳು=(ಕಾಡು) ಕೀಳು; ಸೊಡರಿನಂದದಿ=ದೀಪದಂತೆ; * ನಿಷ್ಫಲಾರಂಭ=ಬೆಳೆ ಬೆಳೆಯದ ಬೇಸಾಯ; * ಕಾಲವಶದಲಿ=ಕಾಲಾಂತರದಲ್ಲಿ; * ಕಾಳ=ಕೆಡುಕುಂಟುಮಾಡುವ; * ಬಯಲ ಬಳಲಿಕೆ=ವ್ಯರ್ಥವಾದ ಆಯಾಸ.

**ಟಿಪ್ಪಣಿ:** ಸಂಸೃತಿ- ಸಂಸಾರವು, ಹೆಂಡಿರ ಮಕ್ಕಳ ತೊಡಕಿಗೂ ಸಂಸಾರವೆಂದು ಹೆಸರು. ಹುಟ್ಟು ಸಾವುಗಳ ಸುತ್ತುವಿಕೆಗೂ ಸಂಸಾರವೆಂದು ಹೆಸರು.

---

**ಆರು ಮೀರಲ್ಕರಿದು ಕಾರಾ**
**ಗಾರದಂದದಿ ತೋರ್ಪ ಘೋರಾ**
**ಕಾರಸಂಸಾರವನು ಸಚರಾಚರದ ಜೀವಿಗಳು ।**
**ಹಾರಿ ಸ್ವರ್ಗವ, ತೂರಿ ನರಕವ,**
**ಸೇರಿ ಧರಣಿಯ, ಸುಕೃತದುಷ್ಕೃತ**
**ಕಾರಿಯದ ಸುಖದುಃಖದೊಳಗೋಲಾಡುತಿಹರೆಂದ ॥ ॥೫॥**

**ತಾತ್ಪರ್ಯ:** ಈ ಸಂಸಾರ ಘೋರವಾದುದು. ಇದು ಹೊರಬರಲಾಗದ ಸೆರೆಮನೆಯಂತೆ ಇರುವುದು. ಇದನ್ನು ಮೀರಲು ಯಾರಿಗಾದರೂ ಅಸಾಧ್ಯ. ಮನುಷ್ಯರು, ಪಶು, ಪಕ್ಷಿ ಇತ್ಯಾದಿ ಚರಜೀವಿಗಳು ಮತ್ತು ಸಸ್ಯಶಿಲಾದಿ ಜಡಜೀವಿಗಳು ಈ ಭೂಮಿಯಲ್ಲಿ ಪುಣ್ಯ-ಪಾಪಗಳ ಕಾರ್ಯಕ್ಕೆ ತಕ್ಕಂತೆ ಸುಖಪಡಲು ಸ್ವರ್ಗಕ್ಕೆ ಹಾರುತ್ತಾ ದುಃಖ ಅನುಭವಿಸಲು ನರಕದತ್ತ ಧಾವಿಸುತ್ತಾ ತೂರಾಡುತ್ತಿರುವರು.

**ಶಬ್ದಾರ್ಥ:** ಆರು=ಯಾರೂ; ಕಾರಾಗಾರ=ಸೆರೆಮನೆ; ಸಚರಾಚರದ ಜೀವಿಗಳು=ಸ್ಥಿರವಾದ ಮತ್ತು ಚರವಾದ ಪ್ರಾಣಿಗಳು; ಕಾರಿಯದ=ಕಾರ್ಯದ (ಕಾರ್ಯಗಳಿಂದ ದೊರೆಯುವಂಥ); * ಸುಕೃತ=ಪುಣ್ಯಕಾರ್ಯ; * ದುಷ್ಕೃತ=ಪಾಪಕಾರ್ಯ; * ಓಲಾಡು=ತೂರಾಡು.

**ಟಿಪ್ಪಣಿ:** **ಸಚರಾಚರ ಜೀವಿಗಳು**– ಚರವಾದ ಜೀವಿಗಳೆಂದರೆ ಮನುಷ್ಯರು ಪಶುಪಕ್ಷಿ ಮೊದಲಾದವು. ಸ್ಥಿರವಾದ ಜೀವಿಗಳೆಂದರೆ ಸಾಮಾನ್ಯವಾದ ಸಸ್ಯಾದಿಗಳು ಎಂದು ರೂಢಿಯಿದೆ. ಆದರೂ ಅದರ ಜತೆಗೆ ಶಿಲೆಗಳನ್ನೂ ಕೂಡ ಸೇರಿಸಿಕೊಳ್ಳಬಹುದು. ಕಲ್ಲು ಮೊದಲಾದವು ಗಳಲ್ಲಿಯೂ ಜೀವವಿರುವುದೆಂದು ಡಾಕ್ಟರ್ ಬೋಸ್ ಅವರು ಈಚೀಚೆಗೆ ಭೌತಿಕಶಾಸ್ತ್ರದಿಂದ ಕೂಡ ಸಿದ್ಧಮಾಡಿರುತ್ತಾರೆ. **'ವಿಜ್ಞಾನಂಚಾವಿಜ್ಞಾನಂ ಚ'** ಎಂದರೆ **'ಚೇತನಾತ್ಮಕ ವಸ್ತುಗಳೂ ಜಡವಸ್ತುಗಳೂ ಎಲ್ಲವೂ ಬ್ರಹ್ಮನೇ'** ಎಂಬ ಶ್ರುತಿಯೂ ಇದಕ್ಕೆ ಉಪಕಾರಕವಾಗಿರುವುದು. ಈ ಶ್ರುತ್ಯರ್ಥವನ್ನು ಲಕ್ಷ್ಯಕ್ಕೆ ತಂದುಕೊಂಡರೆ ಜಡವಸ್ತುಗಳಲ್ಲಿಯೂ ಜೀವವಿರುವುದೆಂಬ ತಿಳಿವು ನಮ್ಮ ದೇಶದ ಅಧ್ಯಾತ್ಮಶಾಸ್ತ್ರಜ್ಞರಿಗೆ ಎಷ್ಟೋ ಹಳೆಯದೆಂದು ವ್ಯಕ್ತವಾಗುವುದು.

---

**ಕೆಲರು ಮನೆ ಮನೆವಾರ್ತೆ ಮಕ್ಕಳಿ**
**ಗೊಲಿದು ಮಮತೆಯ ಮಾಡಿ, ಧನವನು**
**ಗಳಿಸಿ, ಸಂಸೃತಿಸಂಭ್ರಮದಲಾಸಕ್ತರಾಗಿಹರು ।**
**ಫಲವ ಕಂಡರದೇನನಕಟಾ !**
**ಗಳಿಲನೆಲ್ಲವು ಬಟ್ಟಬಯಲಾ**
**ಗಳಿವುದದರಿಂ ದುಃಖವಲ್ಲದೆ ಸುಖವದೆಲ್ಲಿಹುದು? ॥ ॥೬॥**

**ತಾತ್ಪರ್ಯ:** ಈ ಲೋಕದಲ್ಲಿ ಎಷ್ಟೋ ಜನ ಮನೆ, ಗೃಹಕೃತ್ಯ, ಮಕ್ಕಳ ಮೇಲಣ ಆಸೆಯಿಂದ ಮೋಹಗೊಂಡು ಅವರಿಗಾಗಿ ಮಾಡಬಾರದ ಕೆಲಸಗಳಿಂದ ಹಣವನ್ನು ಕೂಡಿಹಾಕಿ ಸಂಸಾರದ ಸುಖದಲ್ಲಿ ತಲ್ಲೀನರಾಗುತ್ತಾರೆ. ಆದರೆ ಇದರ ಪರಿಣಾಮವೇನು ಬಲ್ಲಿರಾ? ಅಯ್ಯೋ ಪಾಪ, ಸಾವುಬಂದ ಕೂಡಲೆ ಥಟ್ಟನೆ ತಾನು ಗಳಿಸಿದ್ದೆಲ್ಲವೂ ಕಾಣುತ್ತಿದ್ದ ಹಾಗೇ ಅವರ ಪಾಲಿಗೆ ಇಲ್ಲವಾಗುತ್ತದೆ. ಆದ್ದರಿಂದ ಈ ಸಂಸಾರ, ಮಕ್ಕಳು, ಆಸ್ತಿಯಿಂದ ದುಃಖವಲ್ಲದೆ ಸಂತೋಷ ಎಲ್ಲಿದೆ? ಯಾರಿಗಿದೆ?

**ಶಬ್ದಾರ್ಥ:** * ಮನೆವಾರ್ತೆ=ಗೃಹಕೃತ್ಯ; * ಸಂಸೃತಿಸಂಭ್ರಮ=ಸಂಸಾರಸುಖ; * ಗಳಿಲನೆ=ಥಟ್ಟನೆ; * ಬಟ್ಟಬಯಲು=ಕಾಣುತ್ತಿದ್ದ ಹಾಗೇ ಕಣ್ಣೆದುರಿಗೆ; * ಅಳಿವುದು=ಇಲ್ಲದಾಗುತ್ತದೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ ಶಬ್ದಾರ್ಥ ಅನುವಾದಕನದು.

---

ಕ್ಷಣಿಕವಹ ಸಂಸಾರವೆಂದಿದ
ನೆಣಿಸನಾಚಂದ್ರಾರ್ಕವಿಹುದೆಂ
ದೆಣಿಸಿಕೊಂಡಿಹ ಬ್ರಹ್ಮಪಟ್ಟವ ಕಟ್ಟಿಕೊಂಡಂತೆ; ।
ದಣಿಯನೆಷ್ಟೊದಗಿದರು; ಮಿಗೆ ಸಂ
ದಣಿಯ ಸೈರಿಸ; ಕಾಲಪಾಶದ
ಕುಣಿಕೆಯಲಿ ಬಿಗಿವಡೆದು ಬಿದ್ದಿಹ ಪಶುವಿನಂತಿಹನು ॥ ॥೭॥

ತಾತ್ಪರ್ಯ: ಈ ಕುಟುಂಬಜೀವನವು ನಶ್ವರವಾದುದು ಎಂದು ಮಾನವನು ಪರಿಗಣಿಸುವುದಿಲ್ಲ; ಸೂರ್ಯಚಂದ್ರರು ಇರುವವರೆಗೆ ತಾನು ಸಂಸಾರದೊಂದಿಗೆ ಇರುವೆನು ತನಗೆ ಅದನ್ನು ನಿಯಂತ್ರಿಸಲು, ಅನುಭವಿಸಲು ಬ್ರಹ್ಮಪಟ್ಟ ದೊರೆತಿದೆ ಎಂದು ಭಾವಿಸಿಕೊಂಡಿರುತ್ತಾನೆ. ಬದುಕಿನಲ್ಲಿ ಎಷ್ಟು ಭೋಗಭಾಗ್ಯ ದೊರಕಿದರೂ ತೃಪ್ತನಾಗಿರುವುದಿಲ್ಲ ಮತ್ತು ತಾನು ಹೊಟ್ಟೆಯನ್ನು ಹೊರೆಯುವ ಜನಗಳ ಗುಂಪಿನ ಏಳ್ಗೆಯನ್ನು ಸಹಿಸುವುದಿಲ್ಲ. ಹೀಗಾಗಿ ಯಮನಿಂದ ಪಾಶಬಂಧಿತನಾಗಿ ಮಿಸುಕಾಡದೆ ಬಿದ್ದುಕೊಂಡ ಪ್ರಾಣಿಯಂತಿದ್ದಾನೆ.

ಶಬ್ದಾರ್ಥ: ಆಚಂದ್ರಾರ್ಕ=ಸೂರ್ಯಚಂದ್ರರಿರುವವರೆಗೆ; ಬ್ರಹ್ಮಪಟ್ಟವ ಕಟ್ಟಿಕೊಂಡಂತೆ=ಬ್ರಹ್ಮಪಟ್ಟವೆ ತನಗೆ ಬಂದಂತೆ; ದಣಿಯನು (ತಣಿಯನು)=ತೃಪ್ತನಾಗನು; ಸಂದಣಿಯ=(ತನ್ನಿಂದ ಹೊಟ್ಟೆ ಹೊರೆಯುವ) ಜನರ ಗುಂಪನ್ನು; ಕಾಲಪಾಶದೆ=ಸಾವೆಂಬ ಕಟ್ಟಿನ ಅಥವಾ ಯಮನ ಹಗ್ಗದ; * ಕ್ಷಣಿಕ=ನಶ್ವರ; ಎಣಿಸನು=ಪರಿಗಣಿಸುವುದಿಲ್ಲ (ಭಾವಿಸುವುದಿಲ್ಲ); * ಬ್ರಹ್ಮಪಟ್ಟ=ತಾನೇ ಶಾಶ್ವತ ನಿಯಾಮಕನಾಗಿರುತ್ತೇನೆ ಎಂಬ ಭಾವ.

---

ಅನ್ಯರೇತೋಜಾತೆ ಹೆಂಡತಿ,
ತನ್ನ ಮೇಣಾಕೆಯ ಮಲದಲು
ತ್ಪನ್ನನಾದ ಕುಮಾರನಿಂತೀಮಲದಮೂಲದಲಿ ।
ಅನ್ವಯಾಂಕುರ ಹಬ್ಬಿ ಹಸರಿಪು
ದುನ್ನತದ ಮಲಕೂಪದೊಳಗು
ತ್ಪನ್ನವಾಗಿಹ ಕ್ರಿಮಿಗಳಂದದಿ ಕ್ರೀಡಿಸುತ್ತಿಹನು ॥ ॥೮॥

ತಾತ್ಪರ್ಯ: ಮತ್ತೊಬ್ಬನ ರೇತಸ್ಸೆಂಬ ಕಶ್ಮಲದಿಂದ ಹುಟ್ಟಿದ ಹೆಂಡತಿ ಮತ್ತು ತನ್ನ ವೀರ್ಯವೆಂಬ ಕಶ್ಮಲದಿಂದ ಹೆಂಡತಿಯ ಗರ್ಭವೆಂಬ ಮಲದಲ್ಲಿ ಜನಿಸಿದ ಕುಮಾರನ ಸಂತತಿಯ ಮೊಳಕೆ ಹಬ್ಬಿಹರಡುತ್ತದೆ. ಈ ರೀತಿ ಅಧಿಕಗೊಂಡ ಕಶ್ಮಲದ ಗುಂಡಿಯಲ್ಲಿ ಹುಟ್ಟಿರುವ ಹುಳುಗಳಂತೆ ಮನುಷ್ಯನು ಆಡುತ್ತಿರುವನು.

ಶಬ್ದಾರ್ಥ: ಅನ್ಯರೇತೋಜಾತೆ=ಮತ್ತೊಬ್ಬನ ರೇತಸ್ಸಿನಿಂದ ಹುಟ್ಟಿದವಳು; ಅನ್ವಯಾಂಕುರ= ಸಂತತಿಯ ಮೊಳಕೆ; ಹಸುರಿಪುದು=ಹರಡುವುದು; ಮಲಕೂಪದೊಳಗುತ್ಪನ್ನವಾಗಿಹ ಕ್ರಿಮಿಗಳಂದದಿ ಕ್ರೀಡಿಸುತ್ತಿಹನು=ಕಶ್ಮಲದ ಗುಂಡಿಯಲ್ಲಿ ಹುಟ್ಟಿರುವ ಹುಳುಗಳಂತೆ ಆಡುತ್ತಿರುವನು; * ಮಲಮೂಲ=ಗರ್ಭ; ರೇತಸ್ಸು=ವೀರ್ಯ

---

**ತನ್ನ ಹಿತವನು ತಿಳಿಯಲರಿಯದೆ**
**ಕುನ್ನಿ ಬರಿದೇ ಬಯಸಿ ಬಯಲಿಗೆ,**
**ಹೊನ್ನು ಹೆಣ್ಣೆಂದೆಂಬ ಗಂಟಲಗಾಣದಲಿ ಸಿಲುಕಿ ।**
**ಬನ್ನಬಡುವನು ಭವಭವದಿ ಬಹು**
**ಜನ್ಮ, ಜರೆ, ಮರಣಾದಿ ದುಃಖದಿ**
**ಹಣ್ಣೆನುತ ಕಿಚ್ಚಿನಲಿ ಬೀಳುವ ಶಲಭನಂದದಲಿ ॥ ॥೯॥**

**ತಾತ್ಪರ್ಯ:** ತನಗೆ ಒಳಿತನ್ನು ಮಾಡುವುದು. ಯಾವುದು ಎಂಬುದನ್ನು ತಿಳಿಯದ ಹೀನ ಮಾನವನು ನಾಯಿಯಂತೆ ವ್ಯರ್ಥವಾದುದನ್ನು ಸುಮ್ಮನೆ ಅರಸುವ ಹಾಗೆ ಚಿನ್ನದ ಮೋಹ, ಹೆಣ್ಣಿನ ಆಕರ್ಷಣೆಯೆಂಬುದಕ್ಕೆ ಒಳಗಾಗಿ ಮೀನಿನ ಗಂಟಲಿಗೆ ಸಿಕ್ಕುವ ಎರೆಹುಳುವಿನ ಗಾಳದಂತೆ ಸಿಕ್ಕಿಕೊಂಡು ಒದ್ದಾಡುತ್ತಾನೆ. ಜನ್ಮಜನ್ಮಗಳಲ್ಲಿ ನಾನಾ ಲೋಕಗಳಲ್ಲಿ ಜನಿಸಿ ಮುಪ್ಪು ಸಾವುಗಳೆಂಬ ದುಃಖಗಳಲ್ಲಿ ಸಿಲುಕಿ ಪತಂಗದ ಹುಳು ದೀಪದ ಬೆಂಕಿಯನ್ನು ಹಣ್ಣೆಂಬ ಭ್ರಮೆಯಿಂದ ಅದರಲ್ಲಿ ಬಿದ್ದು ಸಾಯುವಂತೆ ಕಷ್ಟಕೋಟಲೆಗೆ ಒಳಗಾಗುತ್ತಿದ್ದಾನೆ.

**ಶಬ್ದಾರ್ಥ:** ನೀಚ (ನಾಯಿಯಂತಿರುವ ಮನುಷ್ಯ); **ಬಯಲಿಗೆ**=ವ್ಯರ್ಥವಾದುದಕ್ಕೆ; **ಗಂಟಲಗಾಣ**=ಮೀನಿನ ಗಂಟಲಿಗೆ ಸಿಕ್ಕುವ ಎರೇಹುಳುವಿನ ಗಾಳ; **ಬನ್ನ**=ಸಂಕಟ; **ಭವಭವದಿ**= ಜನ್ಮಜನ್ಮಗಳಲ್ಲಿ; **ಶಲಭ**=ಪತಂಗದಹುಳು.

---

**ಸಾವವರ ನೋಡುತ್ತ, ದುಃಖದಿ**
**ಬೇವವರ ಕಾಣುತ್ತ, ಮನದಲಿ**
**ಹೇವರಿಸಿ ಸುಡಲೆಂದು ಬಿಡನದ ಮರೆವನಾಕ್ಷಣಕೆ ।**
**ಭಾವೆಯಳಿಯಲಿ, ವಿತ್ತ ಪೋಗಲಿ,**
**ಠಾವುದಪ್ಪಲಿ, ಮಗುಳದೆಲ್ಲವ**
**ನಾವಪರಿಯಲಿ ಕಷ್ಟಪಟ್ಟವ ಗಳಿಸಲನುಗೈವ ॥ ॥೧೦॥**

**ತಾತ್ಪರ್ಯ:** ಮಾನವನ ಬದುಕಿನ ಅಚ್ಚರಿ ಇದು; ಮರಣಹೊಂದಿದವರನ್ನು ಕಂಡು ಕುಟುಂಬದವರು, ಸಂಬಂಧಿಗಳು ದುಃಖದ ಬೆಂಕಿಯಲ್ಲಿ ಬೇಯುತ್ತಿರುವುದನ್ನು ಕಂಡಾಗ ಮನಸ್ಸಿನಲ್ಲಿ ಬದುಕಿನ ಬಗ್ಗೆ ತಿರಸ್ಕಾರ ತಳೆದು 'ಈ ಜನ್ಮಕ್ಕಷ್ಟು ಬೆಂಕಿಹಾಕ' ಎಂದು ವೈರಾಗ್ಯ ತಳೆಯುತ್ತಾನೆ. ಆದರೆ ಮರುಗಳಿಗೆಯಲ್ಲಿ ಅದನ್ನು ಮರೆತು ಬಿಡುವನು. ತನ್ನ ಹೆಂಡತಿ ಸತ್ತರೆ, ಐಶ್ವರ್ಯ ಹೋದರೆ, ಮನೆಮಠ ಕಳೆದುಕೊಂಡರೆ ಅವುಗಳ ಬಗ್ಗೆ ವೈರಾಗ್ಯ ತಳೆಯದೆ ಮತ್ತೆ ಅವುಗಳೆಲ್ಲವನ್ನು ಯಾವ ರೀತಿಯಲ್ಲಾದರೂ ಮತ್ತೆ ಕಷ್ಟಪಟ್ಟು ಸಂಪಾದಿಸಲು ಸಿದ್ಧನಾಗುತ್ತಾನೆ. ಇದು ಮನುಷ್ಯ ಸ್ವಭಾವ.

**ಶಬ್ದಾರ್ಥ:** **ಹೇವರಿಸಿ**=ಅಸಹ್ಯಪಟ್ಟು; **ಅದಮರೆವನು**=ಸಾವನ್ನೂ ದುಃಖವನ್ನೂ ಮರೆಯುವನು; **ಭಾವೆ**=ಹೆಂಡತಿ; **ತಾವು**=ಸ್ಥಲ; **ಮಗುಳೆ**=ಮತ್ತೆ; **ಅನುಗೈವ**=ಪ್ರಯತ್ನಿಸುವನು;

* ಕಷ್ಟಪಟ್ಟು+ಅವ+ಅವೆಲ್ಲವನ್ನು=ಶ್ರಮದಿಂದ ಕಳೆದುಕೊಂಡಿದ್ದೆಲ್ಲವನ್ನೂ; * ವಿತ್ತ=ಐಶ್ವರ್ಯ; * ಠಾವು=ತಾವು; ತಾಣ=ಜಾಗ; ನೆಲೆ=ಮನೆಮಠ; * ಗಳಿಸಲು=ಮತ್ತೆ ಪಡೆಯಲು.

---

**ಹೆಂಡಿರೇತಕೆ? ಮಕ್ಕಳೇತಕೆ?**
**ಬಂಡಿ ತುಂಬಿದ ಧನವದೇತಕೆ?**
**ಮಂಡೆ ತುಂಬಿದ ಬಳಗವಿದ್ದೇನಹುದು? ಯಮಭಟರು ।**
**ಚಂಡಪಾಶದಿ ಕಟ್ಟಿ ಖಳನನು**
**ಕೊಂಡು ಹೋಹಂದಿನಲಿ ಹಿತವರು**
**ಕಂಡು ಬಿಡಿಸುವರುಂಟೆ? ಯಾರಿದ್ದೇನು ಫಲವೆಂದ ॥ ॥೧೧॥**

**ತಾತ್ಪರ್ಯ:** ಎಷ್ಟು ಮಂದಿ ಹೆಂಡತಿಯರು ಇದ್ದರೇನು ಫಲ? ಎಷ್ಟು ಮಂದಿ ಮಕ್ಕಳು ಇದ್ದರೇನು? ಬಂಡಿಗಟ್ಟಲೆ ದ್ರವ್ಯ ಇದ್ದರೇನು ಬಂದಿತು? ತಲೆಯಲ್ಲಿ ತುಂಬಿರುವ ಕೂದಲುಗಳ ಪ್ರಮಾಣದಲ್ಲಿ ಬಹಳ ಬಂಧುಬಳಗ ಇದ್ದರೇನು? ಕೆಟ್ಟ ಕೆಲಸಮಾಡಿದ ದುಷ್ಟನನ್ನು ಯಮದೂತರು ಯಮಪಾಶದಿಂದ ಬಂಧಿಸಿಕೊಂಡು ಹೋಗುವಾಗ ಅದನ್ನುನೋಡುವ ನೆಂಟರಿಷ್ಟರಾಗಲಿ ಕುಟುಂಬವರ್ಗದವರಾಗಲಿ ಬಿಡಿಸಲು ಯತ್ನಿಸಿದವರು ಉಂಟೇ? ಆದಕಾರಣ ಯಮದೂತರು ನಮ್ಮ ಪ್ರಾಣವನ್ನು ಸೆಳೆದುಕೊಂಡು ಹೋಗುವಾಗ ಯಾರಿಂದಲೂ ಪ್ರಯೋಜನವಿಲ್ಲ (ಯಾರೂ ನಮ್ಮ ಪ್ರಾಣವನ್ನು ರಕ್ಷಿಸಲು ಬಾರರು).

**ಶಬ್ದಾರ್ಥ:** ಮಂಡೆ ತುಂಬಿದ ಬಳಗ=ತಲೆ ತುಂಬಿದ ಬಳಗವೆಂದರೆ ಬಹಳ ಬಳಗ ಎಂದರ್ಥ. (ತಲೆಯಲ್ಲಿ ಕೂದಲುಗಳೆಷ್ಟೋ ಅಷ್ಟು ಹೆಚ್ಚೆಂದು ಭಾವ). * ಮಂಡೆ=ತಲೆ, * ಚಂಡಪಾಶ=ಯಮಪಾಶ, * ಖಳ=ದುಷ್ಟ, * ಹೋಹಂದಿನಲಿ=ಹೋಗುವಾಗ, * ಹಿತವರು=ಕುಟುಂಬದವರು, ನೆಂಟರಿಷ್ಟರು.

---

**ಏಕೆ ಮನೆ, ಮನೆವಾರ್ತೆ? ಮಕ್ಕಳ**
**ದೇಕೆ? ಮಡದಿಯ ಗೊಡವೆಯೇತಕೆ?**
**ಕಾಕಲಾ! ಸಂಸಾರವಧ್ರುವವಾರುನಂಬುವರು? ।**
**ಸಾಕುಸಾಕದು ಬೇಡ ಬರಿದೇ**
**ಶೋಕಮೋಹಾಸ್ಪದವೆನುತ್ತದ**
**ನೋಕರಿಸಿ ಬಿಡರಹಹ! ಬರಿದೇ ಬದ್ಧರಾಗಿಹರು ॥ ॥೧೨॥**

**ತಾತ್ಪರ್ಯ:** ಈ ಸಂಸಾರ ಬದುಕು ನಶ್ವರವಾದುದು. ಆದಕಾರಣ ಉಪ್ಪರಿಗೆ ಆದರೂ ಏಕೆ ಬೇಕು? ಗೃಹಕೃತ್ಯಗಳಲ್ಲಿ ಆಸಕ್ತಿಯಾದರೂ ಏಕಿರಬೇಕು? ಮಕ್ಕಳು ಏಕೆ? ಮೋಹಗೊಳಿಸುವ ಹೆಂಡತಿಯ ಸಹವಾಸ ಏಕೆ ಬೇಕು? ವ್ಯರ್ಥವಲ್ಲವೇ! ಈ ಸಂಸಾರ ಖಂಡಿತವಾಗಿಯೂ ನಶ್ವರ ಎಂದಿದ್ದರೂ ಅವೆಲ್ಲದರ ಸಂಬಂಧಬೇಡ

ಕೇವಲ ದುಃಖ ಆಸೆಗಳಿಗಷ್ಟೆ ಅವು ಸಾಧನವಾಗಿವೆ ಎಂದು ಅವುಗಳ ಬಗ್ಗೆ ಹೇವರಿಸುತ್ತಾರೆಯೇ? ವಾಕರಿಸಿ ಅವುಗಳನ್ನು ಬಿಡುತ್ತಾರೆಯೇ? ಆಹಾ! ಏನು ಹೇಳೋಣ ಅವುಗಳಿಗೇ ಅಂಟಿಕೊಂಡಿರುತ್ತಾರೆ.

**ಶಬ್ದಾರ್ಥ: ಕಾಕು=ಕೀಳಾದದ್ದು; ಅಧ್ರುವ=ನಿತ್ಯವಲ್ಲ; ಓಕರಿಸಿ=ವಾಂತಿಮಾಡಿ; * ಗೊಡವೆ=ಸಹವಾಸ; * ಮನೆವಾರ್ತೆ=ಗೃಹಕೃತ್ಯ; * ಬದ್ಧರಾಗಿಹರು=ಅಂಟಿಕೊಂಡಿರುತ್ತಾರೆ.**

---

**ಕಡುನರಕವಹ ಜನ್ಮವೆಂದದ**
**ಬಿಡಲುಪಾಯದ ಬಟ್ಟೆಯನು ತಾ**
**ಪಡೆಯಲರಿಯದೆ ಮನುಜನೊಡಲನು ಪಡೆದು ಫಲವೇನು? ।**
**ಸುಡಲವನ ಜನ್ಮವನು! ದುಃಖದ**
**ಕಡಲೊಳಗೆ ಬಿದ್ದಾಳುತೇಳುತ**
**ತಡಿಯಕಾಣದೆ ತೊಳಲುತಿಹನವಗವಧಿಯಿಲ್ಲೆಂದ ॥ ॥೧೩॥**

**ತಾತ್ಪರ್ಯ:** ಘೋರನರಕಕ್ಕೆ ಸಮಾನವಾದುದು ಈ ಮಾನವಜನ್ಮವೆಂದು ಭಾವಿಸಿ ಅದನ್ನು ತೊರೆಯಲು ತಕ್ಕ ಬಿಡುಗಡೆಯ ಉಪಾಯದ ದಾರಿಯನ್ನು ಕಾಣಲು ತಿಳಿಯದಿದ್ದರೆ ಅಂಥವನು ಈ ಲೋಕದಲ್ಲಿ ಜನಿಸಿದರೂ ವ್ಯರ್ಥ. ಅಂಥವನ ಜನ್ಮಕ್ಕಿಷ್ಟು ಬೆಂಕಿ ಹಾಕ! ಅಂಥವನು ಸದಾ ದುಃಖಸಾಗರದೊಳಗೆ ಬಿದ್ದು ಮುಳುಗುತ್ತಾ ತೇಲುತ್ತಾ ದಡವನ್ನು ಸೇರದೆ ಒದ್ದಾಡುತ್ತಿರುತ್ತಾನೆ. ಅಂಥವನ ಕಷ್ಟಗಳಿಗೆ ಕೊನೆಯೇ ಇಲ್ಲ.

**ಶಬ್ದಾರ್ಥ: ಬಟ್ಟೆ=ದಾರಿ; * ಸುಡಲಿ+ಅವನ+ಜನ್ಮವನು=ಅವನ ಜನ್ಮಕ್ಕಷ್ಟು ಬೆಂಕಿಹಾಕ; * ಒಡಲನು ಪಡೆದು=ಜನ್ಮತಾಳಿ; * ಆಳುತ=ಮುಳುಗುತ್ತ, * ತಡಿ=ದಡ; * ತೊಳಲುತಿಹನು=ಒದ್ದಾಡುತ್ತಿರುವನು; * ಅವಧಿಯಿಲ್ಲೆಂದ=ಕಷ್ಟಗಳಿಗೆ ಕೊನೆಯೇ ಇಲ್ಲ.**

---

**ಹುಟ್ಟುತಲಿ ತಾನೊಬ್ಬ; ಕಡೆಯಲಿ**
**ಕೆಟ್ಟಳಿದು ಹೋಹಾಗಲೊಬ್ಬನೆ;**
**ನಟ್ಟನಡುವೀ ಬಂಧುಬಳಗಗಳೆಂಬ ಬಲುತೊಡಕು; ।**
**ಕಷ್ಟವಿದು ಸಂಸಾರವೆನ್ನುತ**
**ನೆಟ್ಟನೆ ವಿವೇಕದಲಿ ತಿಳಿದದ**
**'ಸುಟ್ಟು ಸುಖವನು ಪಡೆದೊಡಾತನೆ ಶಿಷ್ಟನೆನಿಸುವನು ॥ ॥೧೪॥**

**ತಾತ್ಪರ್ಯ:** ಮಾನವ ಹುಟ್ಟುವಾಗ ತಾನೊಬ್ಬನೆ ಹುಟ್ಟುತ್ತಾನೆ. ಆಯುಷ್ಯ ಮುಗಿದಾಗ ಕೊನೆಗಾಲದಲ್ಲಿ ಕೆಟ್ಟು ನಾಶವಾಗಿ ತಾನೊಬ್ಬನೇ ಸಾಯುತ್ತಾನೆ. ಹುಟ್ಟು–ಸಾವುಗಳ ನಡುವಣ ಜೀವಿತಾವಧಿಯಲ್ಲಿ ಹೆಂಡತಿ, ಮಕ್ಕಳು, ಬಂಧು–ಬಳಗ ಎಂಬ ಸಂಬಂಧಗಳು ಬಲು ಅಡ್ಡಿಯಾಗಿ ಬರುವುವು. ಇಂಥ ಸಂಸಾರವನ್ನು ನಿಭಾಯಿಸುವುದು ಕಷ್ಟವೆಂದು ತನ್ನ ವಿವೇಕದಿಂದ ತಾನೇ ತಿಳಿದು ಆ ಬಂಧನಗಳನ್ನೆಲ್ಲ ನಿರ್ಮೂಲಮಾಡಿ ಮೋಕ್ಷಸುಖವನ್ನು ಪಡೆದರೆ ಅಂಥವನೆ ಸಜ್ಜನ ಎನಿಸುವನು.

**ಶಬ್ದಾರ್ಥ:** * ಕೆಟ್ಟಳಿದು=ಕೆಟ್ಟು ನಾಶವಾಗಿ; * ನಟ್ಟನಡುವೆ=ಹುಟ್ಟು ಸಾವುಗಳ ನಡುವಣ ಅವಧಿಯಲ್ಲಿ; * ತೊಡಕು=ಬಂಧನ; * ಸುಟ್ಟು=ನಿರ್ಮೂಲಮಾಡಿ; * ಶಿಷ್ಟ=ಸಜ್ಜನ, ಯೋಗ್ಯ

---

**ಊರದಾರಿಯ ನಡೆವ ಮನುಜರು**
**ನೀರಡಿಸುತರವಟಿಗೆಯನು ನೆರೆ**
**ಸಾರಿ, ತೃಷೆಯನು ಕಳೆದು, ಸಖ್ಯದಲೆಲ್ಲರೊಡಗೂಡಿ ।**
**ಬೇರೆಬೇರಿಹ ತಮ್ಮ ದಾರಿಯ**
**ಸಾರಿಹೋಹಂದದಲಿ ಸತಿಸುತ**
**ರಾರಿಗಾರು? ಋಣಾನುಬಂಧವು ತೀರಲವರಿರರು ॥ ॥೧೫॥**

**ತಾತ್ಪರ್ಯ:** ಸಂಸಾರದಲ್ಲಿ ಋಣಾನುಬಂಧವಿದ್ದಷ್ಟೆ ಸಂಬಂಧ. ಅದು ಶಾಶ್ವತವಲ್ಲ. ಇದಕ್ಕೆ ದೃಷ್ಟಾಂತವೊಂದನ್ನು ಕವಿ ಹೇಳುತ್ತಾನೆ. ಊರಿಂದೂರಿಗೆ ಪ್ರಯಾಣ ಮಾಡುವ ಜನರು ಬಾಯಾರಿಕೆಗಾಗಿ ಧರ್ಮಶಾಲೆಗೆ ಹೋಗಿ ದಾಹವನ್ನು ನಿವಾರಿಸಿಕೊಂಡು ತಮ್ಮಂತೆಯೇ ನೀರಡಿಕೆಗಾಗಿ ಬಂದಿದ್ದ ಇತರ ಜನರ ಜತೆ ಸ್ನೇಹಗಳಿಸಿ ಸ್ವಲ್ಪ ಹೊತ್ತು ಮಾತಾಡುತ್ತಿದ್ದು, ಅನಂತರ ಬೇರೆಬೇರೆಯಾದ ತಂತಮ್ಮ ಊರದಾರಿಗಳನ್ನು ಹಿಡಿದು ಹೋಗುವ ತೆರದಲ್ಲಿ ಪೂರ್ವಜನ್ಮದ ಸ್ನೇಹಸಂಬಂಧ ತೀರಿದಬಳಿಕ ಯಾರಿಗೂ ಯಾರೂ ಇರುವುದಿಲ್ಲ. ಹೆಂಡತಿ ಮಕ್ಕಳಾದರೂ ಯಾರಿಗೂ ಯಾರೊಬ್ಬರೂ ನೆರವಾಗಲಾರರು.

**ಶಬ್ದಾರ್ಥ:** * ನೀರಡಿಕೆ=ಬಾಯಾರಿಕೆ; * ಅರವಟ್ಟಿಗೆ=ಧರ್ಮಶಾಲೆ; ತೃಷೆ=ದಾಹ; * ಸಖ್ಯ=ಸ್ನೇಹ; * ಹೋಹಂದದಲಿ=ಹೋಗುವ ರೀತಿಯಲ್ಲಿ; * ಋಣಾನುಬಂಧ= ಪೂರ್ವಜನ್ಮದ ಸ್ನೇಹಸಂಬಂಧ.

**ಪಾಠಾಂತರ:** ನಡೆವ ಎಂಬಲ್ಲಿ ಕೆಲವು ಕಡೆ ನಡುವೆ ಎಂದೂ ಇದೆ.

**ಅಲಂಕಾರ:** * ದೃಷ್ಟಾಂತಾಲಂಕಾರ

**ಟಿಪ್ಪಣಿ:** * ಋಣಾನುಬಂಧರೂಪೇಣ ಪಶುಪತ್ನಿ ಸುತಾಲಯಾಃ ...... ಎಂಬ ಸುಭಾಷಿತದ ಪ್ರಭಾವ ಇಲ್ಲಿ ಕಾಣುತ್ತದೆ.

---

**ಒಂದು ವೃಕ್ಷದ ಮೇಲೆ ಪಕ್ಷಿಗ**
**ಳೊಂದು ನಿಮಿಷದಿ ಗಜಬಜೆನುತಲಿ**
**ಹೊಂದಿಕೊಳ್ಳುತ ಮಗುಳೆ ಕಂಡೆಡೆಗೈದುವಂದದಲಿ ।**
**ತಂದೆತಾಯ್ಗಳು ಬಂಧುಬಳಗಗ**
**ಳೊಂದು ನಿಮಿಷದಿ ತೋರಿ ತಾವ್ ತ**
**ಮ್ಮಂದದಲಿ ತೊಲಗುವರು ಋಣಸಂಬಂಧ ತೀರಿದರೆ ॥ ॥೧೬॥**

**ತಾತ್ಪರ್ಯ:** ಒಂದು ಮರದ ಮೇಲೆ ವಾಸಿಸುತ್ತಿರುವ ಹಕ್ಕಿಗಳೆಲ್ಲ ಸಂಜೆಯಾದಾಗ ಹೊರಗಿನಿಂದ ಹಿಂತಿರುಗಿ ಬರುತ್ತವೆ. ಗಜಬಜ ಎಂದು ಸದ್ದು ಮಾಡುತ್ತಾ ಹಾರಾಡುತ್ತಾ ನಿಮಿಷಮಾತ್ರದಲ್ಲಿ ತಂತಮ್ಮ ಗೂಡುಗಳಿಗೆ ಹೊಂದಿಕೊಂಡು ಇರುತ್ತವೆ. ಮತ್ತೆ ಬೆಳಗಾಗುತ್ತಲೆ ದಿಕ್ಕುದಿಕ್ಕಿಗೆ ಹಾರಿಹೋಗುತ್ತವೆ. ಹಾಗೆಯೇ ತಾಯಿತಂದೆಗಳು, ಬಂಧುಬಳಗಗಳು ಮೊದಲಾದವರೆಲ್ಲ ಸ್ವಲ್ಪಕಾಲ ಕಾಣಿಸಿಕೊಂಡು ಅನಂತರ ತಂತಮ್ಮ ಕರ್ಮಾನುಸಾರವಾಗಿ ಜನ್ಮಾಂತರ ಸಂಬಂಧದ ಋಣ ತೀರಿದಕೂಡಲೇ ದೂರ ಸರಿಯುವರು. ಆದಕಾರಣ ಸಂಸಾರಸಂಬಂಧ ಶಾಶ್ವತವಲ್ಲ.

**ಶಬ್ದಾರ್ಥ: ಗಜಬಜ ಎನುತಲಿ**=ಕಾಕಾ ಎಂದು ಸದ್ದು ಮಾಡುತಲಿ; **ಮಗುಳೆ**=ಮತ್ತೆ; * **ಕಂಡೆಡೆಗೆ**=ದಿಕ್ಕುದಿಕ್ಕಿಗೆ; * **ಐದುವಂದದಲಿ**=ಹಿಂತಿರುಗಿ ಬರುವ ರೀತಿಯಲ್ಲಿ; * **ತಾವ್ ತಮ್ಮಂದದಲಿ**=ತಂತಮ್ಮ ಕರ್ಮಾನುಸಾರವಾಗಿ; * **ತೊಲಗುವರು**=ಬಿಟ್ಟು ಹೋಗುವರು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ ಶಬ್ದಾರ್ಥ ಅನುವಾದಕನದು.

---

## ಶರೀರವು ನಂಬತಕ್ಕದ್ದಲ್ಲ (೧೭-೨೧)

ಬುದ್ಧಿವಂತನು ಗಳಿಸಿದರ್ಥವು
ಬಿದ್ದುಹೋಹುದು ಕಡೆಗೆ ಮರಳಿನ
ಗದ್ದೆಗೆತ್ತಿದ ನೀರ ತೆರದಲಿ; ಮಡದಿ ಮಕ್ಕಳನು ।
ಉದ್ಧರಿಸಿ ಸಲಹಿದರೆ ಸಂಗಡ
ಲೆದ್ದುಬಾರರು ಯಮಪುರಕೆ; ತನು
ಹದ್ದುಕಾಗೆಯ ಪಾಲದಾರಿಗೆ ಬಿದ್ದಪಾಡೆಂದ ॥ ॥೧೭॥

**ತಾತ್ಪರ್ಯ:** ತಾನು ಜಾಣನಾಗಿ ಸಂಪಾದಿಸಿದ ಹಣವೆಲ್ಲ ಮರಳುಗದ್ದೆಗೆ ಹಾಯಿಸಿದ ನೀರಿನಂತೆ ಕೊನೆಗೆ ವ್ಯರ್ಥವಾಗುತ್ತದೆ. ಹೆಂಡತಿ ಮಕ್ಕಳನ್ನು ದುಡಿದು ಸಾಕಿ ಸಲಹಿದರೆ ಅವರಲ್ಲಿ ಒಬ್ಬರಾದರೂ ತನ್ನ ಸಂಗಡ ಸಾಯುವಾಗ ಬರುವುದಿಲ್ಲ. ಯಾರೂ ದಿಕ್ಕಿಲ್ಲದೆ ತನ್ನ ಶರೀರವಾದರೋ ಹದ್ದುಕಾಗೆಗಳ ಪಾಲಾಗುತ್ತದೆ. ಇದನ್ನು ಕಂಡಾಗ ನಾವು ಕಷ್ಟಪಟ್ಟಿದ್ದು ಯಾರಿಗಾಗಿ ಎಂದೆನ್ನಿಸಿ ಮಡದಿ ಮಕ್ಕಳಿಗಾಗಿಯೂ ತನ್ನ ಶರೀರ ಸುಖಕ್ಕಾಗಿಯೂ ದುಡಿದಿದ್ದು ವ್ಯರ್ಥವೆಂದೆನ್ನಿಸುತ್ತದೆ.

**ಶಬ್ದಾರ್ಥ: ಪಾಲು+ಅದಾರಿಗೆ ಬಿದ್ದಪಾಡು**=ನಾವು ಕಷ್ಟಪಟ್ಟಿದ್ದು ಯಾರಿಗಾಗಿ? (ಮಡದಿ ಮಕ್ಕಳಿಗಾಗಿಯೂ ಶರೀರಕ್ಕಾಗಿಯೂ ನಾವು ದುಡಿದದ್ದು ವ್ಯರ್ಥವೆಂದು ತಾತ್ಪರ್ಯ); * **ಎದ್ದುಬಾರದು**=ಜತೆಗೆ ಬರಲಾರರು; * **ಯಮಪುರಿಗೆ ಸಂಗಡದಲಿ**=ಸಾಯುವಾಗ ಜತೆಯಲ್ಲಿ.

---

ವಿದ್ಯೆಯನು ಕಲಿತೇನು ಫಲ? ಬಿಡ
ದುದ್ಯಮದಿ ತಾನಿದ್ದು ಧನವನು
ಬುದ್ಧಿಯಿಂದಾರ್ಜಿಸಿದೊಡದರಿಂದೇನು ಫಲ ತನಗೆ? ।

ಮುಗ್ಧೆಯನು ವರಿಸಿರ್ದೊಡೇನದು?
ಉದ್ದುರುಳುವನಿತರೊಳು ತನುವಿದು
ಬಿದ್ದುಹೋಹುದು; ಬಳಿಕಲವು ತಾವಾರ ಹೊಂದುವುವು? ॥ ॥೧೮॥

**ತಾತ್ಪರ್ಯ:** ಮಗುವೆ, ನೂರಾರು ವಿದ್ಯೆಗಳನ್ನು ಕಲಿತರೂ ಏನೂ ಫಲವಿಲ್ಲ. ತನ್ನ ಬುದ್ಧಿವಂತಿಕೆಯಿಂದ ಒಂದೇ ಸಮನೆ ಉದ್ಯೋಗದಲ್ಲಿ ಅಪಾರ ಧನವನ್ನು ಸಂಪಾದಿಸಿದರೆ ಅದು ಸ್ವಪ್ರಯೋಜನಕ್ಕೆ (ಆತ್ಮೋದ್ಧಾರಕ್ಕೆ) ಬಾರದು; ಸುಂದರ ಸ್ತ್ರೀಯನ್ನು ಮದುವೆ ಆದರೆ ಲಾಭವೇನೂ ಇಲ್ಲ. ಏಕೆಂದರೆ ಈ ದೇಹ ಉದ್ದಿನಕಾಳು ಹೊರಳುವಷ್ಟರಲ್ಲಿ (ಅಷ್ಟು ಅತ್ಯಲ್ಪ ಕಾಲದಲ್ಲಿ) ನಾಶವಾಗುತ್ತದೆ. ಆದಕಾರಣ ವಿದ್ಯೆ, ಉದ್ಯೋಗ, ಧನ, ಮುಗ್ಧೆ ಇವರೆಲ್ಲರೂ ಯಾವ ಯಾವ ರೀತಿ ಯಾರಾರ ಪಾಲಾಗುತ್ತಾರೋ ತಿಳಿಯದು. ಅಂದರೆ ಯಾರಿಗೂ ಸುಖವಿಲ್ಲ. ಸಂಪಾದಿಸಿದವರಿಗೂ ಸುಖವಿಲ್ಲ; ಸಂಪಾದನೆಯಿಂದ ಪ್ರಯೋಜನ ಪಡೆದವರಿಗೂ ಸುಖವಿಲ್ಲ.

**ಶಬ್ದಾರ್ಥ:** ಉದ್ಯಮ=ಉದ್ಯೋಗ; ಆರ್ಜಿಸಿದೊಡೆ=ಸಂಪಾದಿಸಿದರೆ; ಮುಗ್ಧೆಯನು=ಸುಂದರ ಸ್ತ್ರೀಯನ್ನು; ವರಿಸಿರ್ದೊಡೆ=ಮದುವೆಯಾಗಿದ್ದರೆ; ಬಳಿಕಲಿ=ಅವು, ವಿದ್ಯೆ, ಉದ್ಯಮ ಧನ ಮುಗ್ಧೆ ಇವರೆಲ್ಲರು; * ಉದ್ದು ಉರುಳುವ+ಅನಿತರೊಳು=ಉದ್ದಿನಕಾಳು ಹೊರಳುವಷ್ಟರಲ್ಲಿ (ಅತ್ಯಲ್ಪಕಾಲದಲ್ಲಿ); * ತಾವು ಆರ ಹೊಂದುವವು?=ಅವುಗಳ ಗತಿ ಏನಾಗುತ್ತದೆ.

---

ಕಂದ ಕೇಳೈ ಬಾಲ್ಯದಲಿ ತಾ
ಯ್ತಂದೆಗಳು ರಕ್ಷಕರು; ಯೌವನ
ಬಂದರಾಗ ಸ್ವತಂತ್ರನಾಗಿಹ ಸರ್ವಕೃತ್ಯದಲಿ; ।
ಮುಂದೆ ವಾರ್ಧಕ್ಯದಲಿ ಮಕ್ಕಳು
ಬಂಧುಗಳು ಸಲಹುವರು; ಕಡೆಯಲಿ
ಬೆಂದುಹೋಹುದು ಕಿಚ್ಚಿನಲಿ ಕೇಳಾರದೀ ತನುವು? ॥ ॥೧೯॥

**ತಾತ್ಪರ್ಯ:** ಮಗನೆ ಕೇಳು, ಈ ಶರೀರವನ್ನು ಬಾಲ್ಯದಲ್ಲಿ ತಾಯ್ತಂದೆಗಳು ಪೋಷಿಸುತ್ತಾರೆ; ಪ್ರಾಯಬಂದಾಗ ಯುವಕನಾಗಿ ತಾನೇ ಎಲ್ಲ ಕಾರ್ಯಗಳನ್ನು ನಿರ್ವಹಿಸುತ್ತಾನೆ; ಮುಂದೆ ಮುಪ್ಪಿನಲ್ಲಿ ಆ ವ್ಯಕ್ತಿಯನ್ನು ಮಕ್ಕಳು ಬಂಧುಗಳು ಕಾಪಾಡುತ್ತಾರೆ; ಅಂತ್ಯಕಾಲಕ್ಕೆ ಈ ದೇಹ ಬೆಂಕಿಯಲ್ಲಿ ಸುಟ್ಟುಹೋಗಿರುತ್ತದೆ. ಹೀಗಾಗಿ ಈ ಶರೀರ ಯಾವುದಕ್ಕೂ ಪ್ರಯೋಜನಕ್ಕೆ ಬರುವುದಿಲ್ಲ. ಯಾರದೂ ಅಲ್ಲ.

**ಶಬ್ದಾರ್ಥ:** * ಕಂದ ಕೇಳೈ=ಮಗನೇ ಕೇಳು; * ವಾರ್ಧಕ್ಯ=ಮುಪ್ಪು; ಕಿಚ್ಚು=ಬೆಂಕಿ; ಆರದು+ಈ+ ತನುವು?=ಈ ಶರೀರ ಯಾರಿಗೆ ಪ್ರಯೋಜನಕಾರಿ?

**ಟಿಪ್ಪಣಿ-೧:** ಪಿತಾ ರಕ್ಷತಿ ಕೌಮಾರೇ । ಭರ್ತಾ ರಕ್ಷತಿ ಯೌವನೇ । ಪುತ್ರೋ ರಕ್ಷತಿ ವಾರ್ಧಿಕ್ಯೇ। ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ ॥ (ಸ್ತ್ರೀಯರನ್ನು ಬಾಲ್ಯದಲ್ಲಿ ತಂದೆಯೂ ಯೌವ್ವನದಲ್ಲಿ ಪತಿಯೂ

ಮುಪ್ಪಿನಲ್ಲಿ ಮಗನೂ ರಕ್ಷಿಸುವನು. ಆದುದರಿಂದ ಸ್ತ್ರೀಯರಿಗೆ ಯಾವಾಗಲೂ ಸ್ವತಂತ್ರವಿಲ್ಲ)(ಮನುಸ್ಮೃತಿ)

**ಟಿಪ್ಪಣಿ-೨: ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಟಿಪ್ಪಣಿ ಅನುವಾದಕನದು.**

---

**ನೀರಮೇಲಣ ಗುಳ್ಳೆ ಲಿಂಗಾ**
**ಕಾರದಲಿ ಹೊಳೆವುತಿರಲದನವಿ**
**ಚಾರದಿಂ ಲೋಹದಲಿ ಬಂಧಿಪೆನೆಂಬನಂದದಲಿ ।**
**ತೋರುತಡಗುವ ಮಿಂಚಿನಂತೆ ಶ**
**ರೀರವಧ್ರುವವಿದನು ಹಿರಿದೆಂ**
**ದಾರು ಸಲಹುವರವರೆ ಅರೆಮರುಳುಗಳು ಕೇಳೆಂದ ॥ ॥೨೦॥**

ತಾತ್ಪರ್ಯ: ಲಿಂಗಾಕಾರದಲ್ಲಿ ನೀರಿನ ಮೇಲೆ ಗುಳ್ಳೆ ಕಾಣುತ್ತಿರಲು ಅದನ್ನು ನಿಜವಾದ ಲಿಂಗವೆಂದು ಭ್ರಾಂತಿಪಟ್ಟು ಕಡಿವಾಣದಿಂದ ಬಂಧಿಸುವೆನೆಂದು ಯತ್ನಿಸುವ ಮೂಢನ ಹಾಗೆ ದಾರಿಹೋಕನಿಗೆ ಆಕಾಶದಲ್ಲಿ ಮಿಂಚುಕಾಣಿಸಿಕೊಂಡು ಕ್ಷಣಮಾತ್ರದಲ್ಲಿ ಮರೆಯಾಗುವ ರೀತಿಯಲ್ಲಿ ಈ ಶರೀರ ಕ್ಷಣಿಕವಾದುದು. ಇಂಥ ದೇಹವನ್ನು ಮೋಹದಿಂದ ಶ್ರೇಷ್ಠವೆಂದು ಪೋಷಿಸುವ ಜನರು ಅರೆಹುಚ್ಚರಲ್ಲದೆ ಮತ್ತೇನು?

**ಶಬ್ದಾರ್ಥ: * ಲೋಹ=ಕಡಿವಾಣ; ಅರೆಮರುಳುಗಳು=ಅರ್ಧಹುಚ್ಚರು; * ಅವಿಚಾರದಿಂ= ಭ್ರಾಂತಿಯಿಂದ; * ಅಧ್ರುವ=ಕ್ಷಣಿಕ; * ಹಿರಿದು=ಶ್ರೇಷ್ಠ; * ಸಲಹುವರು=ಪೋಷಿಸುವರು.**

---

**ಮಗನ ಮುದ್ದಾಡಿದರೆ ಗಂಡನು**
**ನಗುವ ಜಾರೆಯ ತೆರದಿ, ದೇಹವ**
**ಬಗೆದು ತನ್ನದೆನುತ್ತ ಮಮತೆಯ ಮಾಡಿ ರಕ್ಷಿಸಲು ।**
**ಮುಗುಳು ನಗೆಯಲಿ ಮೃತ್ಯುದೇವತೆ**
**ಬಗೆವಳಾತನ ಮುಗ್ಧನೆಂದೇ**
**ತೆಗೆವಳಸುವನು; ನಿತ್ಯವಾರಿಗೆ ತನುವು? ನೋಡೆಂದ ॥ ॥೨೧॥**

ತಾತ್ಪರ್ಯ: ಗಂಡನು ತನ್ನ ಮಗನೆಂದು ಮುದ್ದಾಡಿದರೆ ಹಾದರಗಿತ್ತಿ ನಗುತ್ತಾಳೆ. ಅದೇರೀತಿ, ಈ ಶರೀರವನ್ನು ತನ್ನದು ಎಂದು ತಿಳಿಯುತ್ತ ಮಮಕಾರದಿಂದ ಪೋಷಿಸುತ್ತಿದ್ದರೆ ಜಾರೆಯಂತೆ, ಸಾವಿನದೇವತೆ ಮಂದಹಾಸದಿಂದ ಆತನನ್ನು ದಡ್ಡನೆಂದು ತಿಳಿಯುತ್ತಾಳೆ. ಅವನ ಪ್ರಾಣವನ್ನು ಹೀರದೆ ಬಿಡುವುದಿಲ್ಲ. ಎಂದಮೇಲೆ ಯಾರಿಗೇ ಆಗಲಿ ಈ ಶರೀರವೆಂಬುದು ಸ್ಥಿರವೇ? ಅಲ್ಲ ಎಂದು ವ್ಯಾಸರು ಶುಕನಿಗೆ ಹೇಳಿದರು.

**ಶಬ್ದಾರ್ಥ:** ಜಾರೆ=ವೇಶ್ಯೆ (ಹಾದರಗಿತ್ತಿ); * ಮುಗುಳುನಗೆ=ಮಂದಹಾಸ; ಮುಗ್ಧ=ದಡ್ಡ; ಮೃತ್ಯುದೇವತೆ=ಸಾವಿನ ದೇವತೆ; * ಬಗೆವಳು=ತಿಳಿಯುತ್ತಾಳೆ; * ನಿತ್ಯವು=ಶಾಶ್ವತ; * ತನು= ಶರೀರ.

**ಟಿಪ್ಪಣಿ:** ಬಸವ ವಚನ

---

## ಸಾವು ತಪ್ಪುವುದಿಲ್ಲ (೨೨-೨೫)

**ಹರಕೆಗೆಂದೇ ತಂದ ಕುರಿ ತಾ**
**ನರಿಯದಕಟಾ ! ಕೊಲುವರೆಂಬುದ**
**ಹಿರಿದು ಹಸಿವಿಗೆ ತಳಿರ ಮೆಲುವುದು ತೋರಣಕೆ ತಂದ ।**
**ನರಕುರಿಗಳದರಂತೆ ತಮಗಹ**
**ಮರಣವನು ತಾವರಿಯದೀ ಸಂ**
**ಸರಣದುಃಖದಿ ಮಗ್ನರಾಗಿಯೆ ಮೃತ್ಯುವಶರಹರು ॥ ॥೨೨॥**

**ತಾತ್ಪರ್ಯ:** ಅಯ್ಯೋ ಪಾಪ ! ಹರಕೆಗಾಗಿ ಮಾರಿಗೆ ಬಲಿಕೊಡಬೇಕೆಂದು ತಂದ ಕುರಿಗೆ ತನ್ನನ್ನು ಕೊಲ್ಲುತ್ತಾರೆ ಎಂದು ತಿಳಿದಿರುವುದಿಲ್ಲ. ತುಂಬ ಹಸಿವಿನಿಂದ ತೋರಣಕಟ್ಟಲು ತಂದಿದ್ದ ಮಾವಿನ ಚಿಗುರನ್ನು ನಿಶ್ಚಿತೆಯಿಂದ ಮೇಯುತ್ತಿರುತ್ತದೆ. ಅದೇ ಪ್ರಕಾರವಾಗಿ ನರಕುರಿಗಳು (ಕುರಿಗಳ ಹಾಗೆ ನರರು) ತಮಗೆ ಮುಂದೆ ಒದಗಲಿರುವ ಸಾವನ್ನು ತಿಳಿಯದೆ ಹೆಂಡತಿ ಮಕ್ಕಳು ಎಂಬ ಕುಟುಂಬದಿಂದ ಒದಗುವ ದುಃಖಕ್ಕೆ ಬಲಿಯಾಗಿ ಸಾವನ್ನಪ್ಪುವರು.

**ಶಬ್ದಾರ್ಥ:** ಹರಕೆಗೆಂದೇ = ಹರಸಿಕೊಂಡಿರುವಂತೆ ಬಲಿಯನ್ನು ಕೊಡುವುದಕ್ಕಾಗಿ, * ಅಕಟಾ = ಅಯ್ಯೋಪಾಪ. * ಮೆಲುವುದು = ಮೇಯುವುದು, * ಸಂಸರಣ ದುಃಖದಿ = ಸಂಸಾರದಿಂದ ಒದಗುವ ಕಷ್ಟಕೋಟಲೆಗಳಿಂದ, * ಮೃತ್ಯುವಶರು = ಬಲಿಯಾಗಿ ಸಾವನ್ನಪ್ಪುವರು.

**ಅನ್ವಯ:** ತೋರಣಕೆ ತಂದ = ಇದು 'ತಳಿರ' ಎಂಬುದಕ್ಕೆ ವಿಶೇಷಣ.

---

**ಆವಕಾಲದಲಾವ ಠಾವಿನ**
**ಲಾವ ವಿಧದಲಿ ತಮಗೆ ಬಹುದೀ**
**ನೋವಿದೆಂಬುದನರಿಯಬಾರದು ದೇವದೈತ್ಯರಿಗೆ ।**
**ತಾವದಾರಿವರಿಂದಲಧಿಕರೆ**
**ಸಾವುತಪ್ಪದು ಸಕಲಜನಕದ**
**ಭಾವಿಸದೆ ಬಹುಯತ್ನದಲಿ ಫಲವೇನು ಹೇಳೆಂದ ॥ ॥೨೩॥**

**ತಾತ್ಪರ್ಯ:** ನಮಗಿಂತ ಬಲಶಾಲಿಗಳಾದ ದೇವತೆಗಳಾಗಲಿ ರಾಕ್ಷಸರಾಗಲಿ ಯಾವ ವೇಳೆಯಲ್ಲಿ, ಯಾವ ಜಾಗದಲ್ಲಿ, ಯಾವ ರೀತಿಯಲ್ಲಿ, ತಮಗೆ ಬರುವ ವಿಪತ್ತು ಏನೆಂಬುದನ್ನು, ತಿಳಿಯಲಾಗುವುದಿಲ್ಲ. ಈ ಹುಲುಮಾನವರು ಇವರ ಮುಂದೆ

ಯಾರು? ಆ ದೇವದಾನವರಿಗಿಂತ ಹೆಚ್ಚಿನವರೆ? ಅಲ್ಲ. ಆದಕಾರಣ ಸಕಲ ಮಾನವರಿಗೂ ಸಾವು ತಪ್ಪದು. ಇದನ್ನು ತಿಳಿಯದೆ ಸಾವನ್ನು ತಪ್ಪಿಸಲು ಬಹು ಯತ್ನಮಾಡಿದರೆ ಬಂದ ಭಾಗ್ಯವೇನು? ವ್ಯರ್ಥ ಸಾಹಸವಲ್ಲವೇ?

**ಶಬ್ದಾರ್ಥ:** ಈ ನೋವು = ವಿಪತ್ತು, * ದೇವ ದೈತ್ಯರಿಗೆ = ದೇವತೆಗಳಿಗೂ ರಾಕ್ಷಸರಿಗೂ ಕೂಡ (ತಿಳಿಯುವುದಿಲ್ಲವೆಂದು ತಾತ್ಪರ್ಯ)

**ಟಿಪ್ಪಣಿ:** ಯಸ್ಮಿನ್ ದೇಶೇ ಚ ಯತ್ಕಾಲೇ ಯನ್ಮುಹೂರ್ತೇಚ । ಯದ್ದಿನೇ, ಹಾನಿವೃದ್ಧಿ ಯಶೋಲಾಭಃ ತತ್ಕಾಲೇ ಭವಿಷ್ಯತಿ ॥ ಎಂಬುದಾಗಿ ಸ್ಮೃತಿ ರತ್ನಾಕರದಲ್ಲಿ ಇದೇ ವಿಷಯವನ್ನು ಹೇಳಲಾಗಿದೆ.

---

**ಬ್ರಹ್ಮ ಮೊದಲು ಪಿಪೀಲಿಕಾಂತವು**
**ಸುಮ್ಮನೇ ಹಮ್ಮಿನಲಿ ಕೆಡುವರು;**
**ತಮ್ಮ ಬದುಕಿದನಿತ್ಯವೆಂಬುದನೊಮ್ಮೆ ಚಿಂತಿಸರು; ।**
**ಹೆಮ್ಮೆಯಲಿ ಹಿರಿದಾಗಿ ಸಂಸೃತಿ**
**ಧರ್ಮದಲಿ ಮರೆದಿರಲು ತಮ್ಮನು**
**ಸುಮ್ಮನೆಂದಾ ಮೃತ್ಯುವೊಯ್ವಳೊ ! ಕಾಣರವರೆಂದ ॥ ॥೨೪॥**

**ತಾತ್ಪರ್ಯ:** ಇರುವೆ ಮೊದಲ್ಗೊಂಡು ಚತುರ್ಮುಖ ಬ್ರಹ್ಮನವರೆಗೆ ಇರುವ ೮೪ ಲಕ್ಷ ಜೀವರಾಶಿಗಳು ತಮ್ಮ ಆಯುಷ್ಯ ಅಸ್ಥಿರವೆಂದು ಚಿಂತಿಸದೆ ವ್ಯರ್ಥ ಅಹಂಕಾರದಿಂದ ನಾಶವಾಗುತ್ತವೆ. ಒಮ್ಮೆಯಾದರೂ ತಮ್ಮ ಬದುಕು ಶಾಶ್ವತವಲ್ಲ ಎಂಬುದನ್ನು ಚಿಂತಿಸುವುದಿಲ್ಲ. ತಮ್ಮ ಸಂಸಾರದ ಬದುಕಿನಲ್ಲಿ ಹೆಚ್ಚಿನ ಅಹಂಕಾರದಿಂದ ಮೈ ಮರೆತಿರುತ್ತವೆ. ಹೀಗಿರುವಾಗ ಮೃತ್ಯುದೇವತೆ ತಮ್ಮನ್ನು ಇದ್ದಕ್ಕಿದ್ದಂತೆ ಯಾವಾಗ ಕರೆದೊಯ್ಯುತ್ತಾಳೆ ಎಂಬುದು ಅವುಗಳಿಗೆ ತಿಳಿಯುವುದಿಲ್ಲ.

**ಶಬ್ದಾರ್ಥ:** ಬ್ರಹ್ಮ=ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮ (ನಿರ್ಗುಣ ಬ್ರಹ್ಮವಲ್ಲ; ಏಕೆಂದರೆ ಹಮ್ಮಿನಿಂದ ಕೆಡುವ ಸಂಭವ ಅದಕ್ಕಿಲ್ಲ), **ಪಿಪೀಲಿಕಾಂತವು**=ಇರುವವರೆಗೆ; **ಬದುಕು**= ಜೀವಿಸಿರುವುದು; * **ಸಂಸೃತಿ ಧರ್ಮ**=ಸಂಸಾರದ ಬದುಕು; * **ಅನಿತ್ಯ**=ನಶ್ವರ; * **ಮೃತ್ಯು**= ಮೃತ್ಯುದೇವತೆ.

**ಅನ್ವಯ:** ಸುಮ್ಮನೆ+ಎಂದು (ಯಾವಾಗ)+ಆ ಮೃತ್ಯು=ಒಯ್ದಳೊ,

---

**ಸರ್ಪವದನಗ್ರಾಸವಾಗಿಹ**
**ಕಪ್ಪೆ ಮಕ್ಷಿಕಭಕ್ಷಣದ ಬಯ**
**ಸಿಪ್ಪತೆರದಲಿ ಕಾಲವಶನಾಗಿರ್ಪ ಮಾನವನು ।**
**ದರ್ಪದಿಂದಲಿ ಕೇಡ ಬಗೆವನು**
**ತಪ್ಪಸಾಧಿಸಿ ಸಕಲಜನಕದು**
**ತಪ್ಪುವದೆ ತನಗಕಟ ! ನಗುವಳು ಹೆಡತಲೆಯ ಮೃತ್ಯು ॥ ॥೨೫॥**

**ತಾತ್ಪರ್ಯ:** ಹಾವಿನ ಬಾಯಿಗೆ ತುತ್ತಾಗಿರುವ ಕಪ್ಪೆಯು ತಾನೇ ಸಾವಿನ ದವಡೆಯಲ್ಲಿದ್ದೇನೆ ಎಂದು ತಿಳಿಯದೆ ನೊಣವನ್ನು ತಿನ್ನಬೇಕೆಂದು ಆಸೆಪಡುವಂತೆ ಮಾನವನು ಸಾವಿನ ದವಡೆಯಲ್ಲಿದ್ದರೂ ಎಲ್ಲ ಜನರಿಗೆ ದುರಹಂಕಾರದಿಂದ ತಪ್ಪು ಹೊರಿಸಿ ಅವರಿಗೆ ಕೇಡು ಮಾಡಲು ಬಯಸುತ್ತಿದ್ದಾನೆ. ಆದರೆ ತನಗೆ ತಾನಾಗಿ ಆ ಕೇಡು ತಪ್ಪುತ್ತದೆಯೇ? ಕುತ್ತಿಗೆ ಮೇಲೆ ಕುಳಿತ ಸಾವಿನ ದೇವತೆ ಇಂಥ ಮಾನವನ ದಡ್ಡತನ ಕಂಡು ನಗುತ್ತಾಳೆ.

**ಶಬ್ದಾರ್ಥ:** **ಗ್ರಾಸ**=ತುತ್ತು; **ಮಕ್ಷಿಕ**=ನೊಣ; **ಕಾಲವಶನಾಗಿರ್ಪ**=ಮೃತ್ಯುವಿಗೆ ಅಧೀನನಾಗಿರುವ; **ಹೆಡತಲೆ**=ಕತ್ತಿನ ಮೇಲೆ ಇರುವ; * **ದರ್ಪ**=ಅಹಂಕಾರ; * **ಭಕ್ಷಣ**=ತಿನ್ನುವುದು; * **ಸರ್ಪವದನಗ್ರಾಸ**=ಹಾವಿನ ಬಾಯಿಗೆ ಆಹಾರವಾಗಿರುವ.

---

## ಹೆಂಡತಿ ಮಕ್ಕಳಿಂದ ಸುಖವಿಲ್ಲ (೨೬-೨೯)

**ಒಡವೆಯುಳ್ಳೊಡೆ ಮಡದಿಮಕ್ಕಳು**
**ಕಡುಮಮತೆಯನು ಮಾಳ್ಪರಾತಗೆ;**
**ಬಡತನಗಳಡಸಿದರೆ ಮೆಲ್ಲನೆ ಸಡಿಲಿ ತೊಲಗುವರು; ।**
**ಬಿಡದು ಕರು ಹಾಲಿರಲು ತಾಯನು**
**ಕಡೆಗೆ ಹೋಹುದು ಬತ್ತಿದರೆ; ತಾ**
**ಕೆಡುವ ಕಾಲಕ್ಕಾರಿಗಾರೈ? ಮಗನೆ ಕೇಳೆಂದ ॥ ॥೨೬॥**

**ತಾತ್ಪರ್ಯ:** ಐಶ್ವರ್ಯ ಇರುವವರೆಗೆ ಹೆಂಡತಿಮಕ್ಕಳು ಮನೆಯೊಡೆಯನಿಗೆ ಬಲು ಪ್ರೀತಿಯನ್ನು ತೋರುತ್ತಾರೆ. ಆತನಿಗೆ ದಾರಿದ್ರ್ಯಬಂದರೆ ನಿಧಾನವಾಗಿ ಒಬ್ಬೊಬ್ಬರೇ ಬೇರೆಯಾಗಿ ದೂರಸರಿಯುತ್ತಾರೆ. ತಾಯಿಹಸುವಿನ ಕೆಚ್ಚಲಲ್ಲಿ ಹಾಲಿರುವವರೆಗೆ ಕರು ತಾಯನ್ನು ಬಿಡುವುದಿಲ್ಲ. ತಾಯಿಹಸುವಿನಲ್ಲಿ ಹಾಲು ಬತ್ತಿದರೆ ಕರು ಬೇರೆ ಕಡೆಗೆ ಹೋಗುತ್ತದೆ. ಹಾಗೆಯೇ ತಾನು ಕೆಡುವಕಾಲಕ್ಕೆ ಯಾರಿಗೆ ಯಾರು ತಾನೆ ನೆರವಿಗೆ ಬರುತ್ತಾರೆ? ಮಗೂ ಶುಕನೇ ತಿಳಿದಿಕೋ ಎಂದು ವ್ಯಾಸರು ಹೇಳಿದರು.

**ಶಬ್ದಾರ್ಥ:** **ಅಡಸಿದರೆ**=ಬಂದರೆ; ***ಒಡವೆ**=ಐಶ್ವರ್ಯ; * **ಸಡಿಲಿಸಿ**=ಬೇರೆಯಾಗಿ, * **ಬತ್ತಿದರೆ**=ಇಂಗಿದರೆ; * **ಕೆಡುವ ಕಾಲಕ್ಕೆ** = ನಾಶವಾಗುವ ಕಾಲಕ್ಕೆ; * **ಕಡೆಗೆ ಹೋಹುದು**=ಬೇರೆ ಕಡೆಗೆ ಹೋಗುತ್ತದೆ.

**ಪಾಠಾಂತರ:** ಸಡಿಲಿತೊಲಗುವರು ಎಂಬಲ್ಲಿ ಕೆಲವುಕಡೆ ಸಡಿಲತೊಡಗುವರು ಎಂದಿದೆ. * (**ಒಡವೆಯುಳ್ಳೊಡೆ**) = ಒಡವೆಯುಳ್ಳರೆ (ಕಾ)

---

**ಒಂದು ಕೊರತೆಯು ತೋರದಂದದಿ**
**ತಂದುತಂದೊದಗಿಸಿದೊಡದರೊಳು**
**ಕುಂದುಗಳನೇ ಹಿಡಿದು ಹೆಂಡಿರುಮಕ್ಕಳುಗಳೆಲ್ಲ ।**

**ಇಂದು ತಮಗಿದು ಕಡಿಮೆಯಾಗಿಹು**
**ದೆಂದು ಹೋರುವರವರು; ತನಗದ**
**ರಿಂದ ಸುಖವನು ಕಾಣ; ಬರಿದೇ ಭ್ರಮೆಯ ಬಳಲಿಕೆಯು ॥ ॥೨೭॥**

**ತಾತ್ಪರ್ಯ:** ಕುಟುಂಬದಲ್ಲಿ ಹೆಂಡತಿಮಕ್ಕಳಿಗೆ ಯಜಮಾನ ಯಾವುದಕ್ಕೂ ಕಡಿಮೆಯಾಗದಂತೆ ಬೇಕಾದುದೆಲ್ಲವನ್ನೂ ತಂದುತಂದು ಹಾಕಿದರೂ ಅದು ಸಾಲದು ಇದು ಚೆನ್ನಾಗಿಲ್ಲ ಎಂದು ತಂದ ವಸ್ತುಗಳಲ್ಲಿ ದೋಷಗಳನ್ನೇ ಕಂಡುಹಿಡಿದು ಆಕ್ಷೇಪಿಸುತ್ತಾರೆ. ಮತ್ತೆ ಇಂದು ತಮಗೆ ಇಂಥಾದ್ದು ಸಾಲದು ಇನ್ನೂಬೇಕು ಎಂದು ಕಾದಾಡುತ್ತಾರೆ. ಆದ್ದರಿಂದ ಸಂಸಾರದಲ್ಲಿ ಎಲ್ಲರನ್ನೂ ತೃಪ್ತಿಪಡಿಸುತ್ತೇನೆ ಎಂಬುದು ಭ್ರಾಂತಿ ಹಾಗೂ ವ್ಯಥಾಶ್ರಮದಕೆಲಸ. ಇದರ ಫಲವಾಗಿ ಆತನಿಗೆ ಎಂದಿಗೂ ಸಂಸಾರದಲ್ಲಿ ಸುಖಸಂತೋಷ ಕಾಣುವುದಿಲ್ಲ.

**ಶಬ್ದಾರ್ಥ: ಹೋರುವರು = ಜಗಳವಾಡುವರು**

---

**ತಂದೆತಾಯ್ಗಳಿಸಿರ್ದ ಧನವನು**
**ನಂದನರು ತಮ್ಮೊಳಗೆ ಭಾಗಿಸ**
**ಲೆಂದು ಕೂಗಾಡುತ್ತಲರಮನೆಗರಿಕೆಯನು ಮಾಡೆ ।**
**ಹಿಂದುಮುಂದನು ನೋಡದವರನು**
**ಬಂಧಿಸುತ್ತದ ತೆಗೆದುಕೊಂಬರು**
**ಮುಂದೆ ಭಿಕ್ಷಾಪಾತ್ರೆಗಧಿಕಾರಿಗಳು ತಾವೆಂದ ॥ ॥೨೮॥**

**ತಾತ್ಪರ್ಯ:** ತಂದೆತಾಯಿಯರು ಕಷ್ಟಪಟ್ಟು ಸಂಪಾದಿಸಿದ ಸಂಪತ್ತನ್ನು ಮಕ್ಕಳು ತಮ್ಮತಮ್ಮಲ್ಲಿ ಹಂಚಿಕೊಳ್ಳುವಾಗ ಹೆಚ್ಚುಕಮ್ಮಿ ಎಂದು ಜಗಳವಾಡಿಕೊಂಡು ಕಾದಾಡಿ ಜನರ ಶಾಂತಿ ಕದಡಿದಾಗ ಜನ ದೂರುಕೊಟ್ಟಾಗ ರಾಜಭಟರು ಬಂದು ನಿರ್ದಾಕ್ಷಿಣ್ಯವಾಗಿ ಅವರನ್ನು ಬಂಧಿಸಿ ರಾಜಾಜ್ಞೆಯಂತೆ ಅವರ ಸಂಪತ್ತನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾರೆ. ಆಗ ಅವರೆಲ್ಲ ಗತಿಯಿಲ್ಲದೆ ಭಿಕ್ಷಾಪಾತ್ರೆ ಹಿಡಿದುಕೊಂಡು ತಿರುಪೆಬೇಡಲು ಯೋಗ್ಯರಾಗುತ್ತಾರೆ. ಇಷ್ಟಾದರೂ ಜನ ಸಂಪತ್ತಿನಿಂದ ಸುಖಸಿಗಲಾರದು ಎಂದು ತಿಳಿಯುವುದಿಲ್ಲ.

**ಶಬ್ದಾರ್ಥ:** * ನಂದನರು=ಮಕ್ಕಳು; ಭಾಗಿಸಲು=ಹಂಚಿಕೊಳ್ಳಲು * ಅರಿಕೆಯನು ಮಾಡೆ=ದೂರು ನೀಡಲು; ಹಿಂದು ಮುಂದನು ನೋಡದೆ=ನಿರ್ದಾಕ್ಷಿಣ್ಯವಾಗಿ; * ಅದ ತೆಗೆದುಕೊಂಬರು=ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವರು; * ಭಿಕ್ಷಾಪಾತ್ರೆಗೆ ಅಧಿಕಾರಿಗಳು=ತಿರುಪೆಗೆ ಯೋಗ್ಯರು

---

**ತಾಯಿತಂದೆಯ ಬಿಟ್ಟು, ಹೆಂಡಿರ**
**ಮಾಯೆಗಳಿಗೊಳಗಾಗಿ, ಸರ್ವರ**
**ಬಾಯಬಡಿದೆಲ್ಲವನು ಮಕ್ಕಳಿಗಿತ್ತು ಮಮತೆಯಲಿ ।**

**ನೋಯನುಡಿದಾರೇನನೆನಲ**
**ನ್ಯಾಯನಿಕರದಿ ನಡೆವ ಲುಬ್ಧಗೆ**
**ನಾಯಕಮಹಾನರಕವಲ್ಲದೆ ಮೋಕ್ಷವಿಲ್ಲೆಂದ ॥ ॥೨೯॥**

**ತಾತ್ಪರ್ಯ:** ಬಾಲ್ಯದಿಂದ ಹೊತ್ತುಹೆತ್ತು ಸಾಕಿಸಲಹಿದ ತಾಯಿತಂದೆಯರನ್ನು ತೊರೆದು ಹೆಂಡತಿಯ ಮೋಹದ ನಡವಳಿಕೆಗಳಿಗೆ ಬಲಿಯಾಗಿ ಎಲ್ಲರ ಮೇಲೂ ದಬ್ಬಾಳಿಕೆ ಮಾಡಿ ಬಾಯಿಮುಚ್ಚಿಸಿ ತನ್ನ ಸರ್ವಸ್ವವನ್ನು ಮಮತೆಯಿಂದ ಮಕ್ಕಳಿಗೆಕೊಟ್ಟು, ಮನಸ್ಸಿಗೆ ದುಃಖವಾಗುವ ಮಾತಿನಿಂದ ಯಾರು ಏನೆಂದು ಹೇಳಿದರೂ ಯೋಗ್ಯವಲ್ಲದ ಅನೇಕ ನಡೆವಳಿಕೆಗಳಿಂದ ಅಕೃತ್ಯಗಳಲ್ಲಿ ತೊಡಗುವ ಲೋಭಿಗೆ ಮಹಾಘೋರ ನರಕವಲ್ಲದೆ ಮುಕ್ತಿಸಿಗದು.

**ಶಬ್ದಾರ್ಥ: ಮಾಯಿಗೆ**=ಮೋಹಕ್ಕೆ ವಶವಾದ ನಡೆವಳಿಕೆಗಳಿಗೆ; **ಬಾಯಿಬಡಿದು**=ಬಾಯಿ ಮುಚ್ಚಿಸಿ **ನೋಯ+ನುಡಿದು+ಆರು+ಏನನು+ಎನಲು**=ಮನಸ್ಸಿಗೆ ದುಃಖವಾಗುವ ಮಾತಿನಿಂದ ಯಾರು ಏನೆಂದು ಹೇಳಿದರೂ; **ಅನ್ಯಾಯನಿಕರದಿ**=ಯೋಗ್ಯವಲ್ಲದ ಅನೇಕ ನಡೆವಳಿಕೆಗಳಲ್ಲಿ **ನಾಯಕ**=ಹಿರಿದಾದ; * **ಲುಬ್ಧ**=ಲೋಭಿ

---

## ವಿಷಯಸುಖವೆಂಬುದು ದುಃಖವು (೩೦–೩೨)

**ಆಗಹೋಗದ ಬಯಲ ಭ್ರಮೆಗೊಳ**
**ಗಾಗಿ, ಬಹುಯತ್ನಗಳ ಮಾಡಿ, ನಿ**
**ದಾಘದಲಿ ಬೇವಂತೆ ಮನದನುತಾಪದಲಿ ಬೆಂದು, ।**
**ಭೋಗಲೋಲುಪತೆಯಲಿ ದುಃಖದ**
**ಸಾಗರದಲೋಲಾಡಿ, ದೇಹವ**
**ನೀಗಿ ಕಳೆವರು ಮರುಳರವರೆಲೆ ಮಗನೆ ಕೇಳೆಂದ ॥ ॥೩೦॥**

**ತಾತ್ಪರ್ಯ:** ಅಸಾಧ್ಯವಾದ ಶುಷ್ಕಭ್ರಾಂತಿಗೆ ಒಳಗಾಗಿ ಅನೇಕ ಯತ್ನಗಳನ್ನುಮಾಡಿ ಸುಡುಬೇಸಿಗೆಯಲ್ಲಿ ಬೆಂದುಹೋಗುವ ಹಾಗೆ ಮನಸ್ಸಿನಲ್ಲಿ ನಾನಾವ್ಯಥೆಗಳಿಂದ ಬೇಯುತ್ತಾ ವಿಷಯಲಂಪಟತನದಿಂದ ದುಃಖಸಾಗರದಲ್ಲಿ ತೇಲಿಮುಳುಗುತ್ತ ಒಂದುದಿನ ಈ ಶರೀರವನ್ನು ತೊರೆದು ಬಾಳನ್ನು ಮುಗಿಸುವರು. ನಿಜಕ್ಕೂ ಅವರೆಲ್ಲ ಹುಚ್ಚರೇ ಸರಿ.

**ಶಬ್ದಾರ್ಥ: ಆಗಹೋಗದ**=(ಆಗದ+ಹೋಗದ) ಅಸಾಧ್ಯವಾದ, ನಡೆಯದಿರುವಂಥ **ಬಯಲಭ್ರಮೆಗೆ**=ವ್ಯರ್ಥ ಭ್ರಾಂತಿಗೆ; * **ಭೋಗಲೋಲುಪತೆಯಲಿ**=ವಿಷಯಲಂಪಟತನದಿಂದ; * **ಓಲಾಡಿ**=ತೇಲಿಮುಳುಗುತ್ತ; * **ನಿದಾಘ**=ಬೇಸಿಗೆ; * **ನೀಗಿಕಳೆವರು**=ಬಾಳನ್ನು ಮುಗಿಸುವರು; * **ಮರುಳರು**=ಹುಚ್ಚರು

---

ದುಃಖವೆಕ್ಕಸವಾಗೆ ಸರ್ವರು
ಸುಕ್ಕಿಮನದಲಿ ಮರುಗುವರು; ತಮ
ಗಕ್ಕರೆಯ ಸುಖವಾಗೆ ಸೊಕ್ಕುವರೆಲ್ಲರನು ಮರೆದು; ।
ಅಕ್ಕಟಕಟಾ! ಸುರನರೋರಗ
ಪಕ್ಷಿಕ್ರಿಮಿಮೊದಲಾಗಿ ಮಾಯೆಗೆ
ಸಿಕ್ಕಿ ಸುಖದುಃಖದಲಿ ಹೊರಳುತ ನರಳುತಿಹವೆಂದ ॥ ॥೩೧॥

ತಾತ್ಪರ್ಯ: ದುಃಖ ಹೆಚ್ಚಾದಾಗ ಪ್ರತಿಯೊಬ್ಬರೂ ಮನಸ್ಸಿನಲ್ಲಿ ಮುರುಟಿಗೊಂಡು ನರಳುತ್ತಾರೆ. ತಾನು ಬಯಸಿದ ಸುಖಸಿರಿ ಸಿಕ್ಕಾಗ ಎಲ್ಲರನ್ನು ಮರೆತು ಗರ್ವದಿಂದ ಮೆರೆಯುತ್ತಾರೆ. ಅಯ್ಯೋ! ಅಯ್ಯೋ! ದೇವತೆಗಳು, ಮಾನವರು, ಹಾವು, ಹಕ್ಕಿ, ಕ್ರಿಮಿ, ಕೀಟಾದಿ ಸಮಸ್ತ ಪ್ರಾಣಿಗಳೂ ಸುಖ ದುಃಖಗಳಲ್ಲಿ ಬಿದ್ದು ಹೊರಳಾಡುತ್ತಾ ಒದ್ದಾಡುತಿರುವುವು.

ಶಬ್ದಾರ್ಥ: ವೆಕ್ಕಸವಾಗೆ=ಹೆಚ್ಚಲು; * ಸುಕ್ಕಿ=ಮುರುಟಿಕೊಂಡು (ಕುಗ್ಗಿ); * ಸೊಕ್ಕುವರು=ಗರ್ವದಿಂದ ಮೆರೆಯುತ್ತಾರೆ; * ಅಕ್ಕಟಕ್ಕಟಾ= ಅಯ್ಯೋ! ಅಯ್ಯೋ! ಕೃಮಿ = ಕ್ರಿಮಿ, ಕೀಟ, ಹುಳು

ಟಿಪ್ಪಣಿ: ಮಾಯೆ– ಹೊರಗಣ ಯಾವ ಪದಾರ್ಥಗಳಲ್ಲಿಯೂ ಹುರುಳಿಲ್ಲವೆಂದು ನಮಗೆ ಎಷ್ಟೋವೇಳೆ ಕಂಡರೂ ಅದನ್ನು ಮನಸ್ಸಿಗೆ ತಂದುಕೊಳ್ಳದೆ ನಮ್ಮ ಅಭ್ಯುದಯವೆಲ್ಲ ಅವುಗಳನ್ನೇ ಅವಲಂಬಿಸಿಕೊಂಡಿರುವುದೆಂಬ ಭ್ರಮೆ.

---

ದುಃಖಬೆರೆಯದ ಸುಖವದಾರಿಗೆ
ಸಿಕ್ಕುವುದು ಶುಕಯೋಗಿ? ಮರ್ಕಟ
ಸೊಕ್ಕಿ ಕೀಲನು ಕಿತ್ತುಬಿಸುಟಂದದಲಿ, ಮಧುಘೃತವ ।
ಇಕ್ಕಿನೆಕ್ಕಲು ಖಡ್ಗಧಾರೆಗೆ
ಸಿಕ್ಕಿ ನಾಲಗೆ ಸೀಳುವಂದದ
ಲುಕ್ಕಿ ವಿಷಯಸುಖಕ್ಕೆಳಸಿ ಕಡುದುಃಖಬಡುತಿಹರು ॥ ॥೩೨॥

ತಾತ್ಪರ್ಯ: ಎಲೈ ಶುಕಯೋಗಿಯೇ ಕೇಳು, ದುಃಖವಿಲ್ಲದೆ ಬರಿಯಸುಖವು ಈ ಲೋಕದಲ್ಲಿ ಯಾರಿಗೆ ತಾನೆ ಸಿಗುತ್ತದೆ? ಮಂಗ ಕೋಪದಿಂದ ಹಲಗೆಗಳ ನಡುವೆ ಸಿಕ್ಕಿಸಿದ ಬೆಣೆಯನ್ನು ಕಿತ್ತು ಬಿಸಾಡಿ ಅದರ ನಡುವೆ ಇದ್ದ ಜಾಗದಲ್ಲಿ ಸಿಕ್ಕಿಕೊಂಡ ತನ್ನ ಬಾಲವನ್ನು, ಕತ್ತರಿಸಿಕೊಂಡಂತೆ, ಜೇನುತುಪ್ಪವನ್ನು ಹಚ್ಚಿದ ಕತ್ತಿಯನ್ನು ಜೇನು ತುಪ್ಪದ ಆಸೆಗಾಗಿ ನೆಕ್ಕಲುಹೋದಾಗ ನಾಲಗೆ ಸೀಳುವ ರೀತಿಯಲ್ಲಿ ಮಾನವರು ಇಂದ್ರಿಯಸುಖಭೋಗಕ್ಕೆ ಮೈಯುಬ್ಬಿ ಆಸೆಪಟ್ಟು ವ್ಯಥೆಗೆ ಈಡಾಗುತ್ತಿದ್ದಾರೆ.

ಶಬ್ದಾರ್ಥ: ಮರ್ಕಟ= ಮಂಗ; * ಮಧುಘೃತ=ಜೇನುತುಪ್ಪ; ಉಕ್ಕಿ=ಉಬ್ಬಿ; * ಎಳಸಿ=ಇಷ್ಟಪಟ್ಟು

**ಟಿಪ್ಪಣಿ: ಮರ್ಕಟ ಸೊಕ್ಕಿ ಕೀಲನು ಬಿಸುಟಂದದಲಿ–** ಗರಗಸದಿಂದ ಅರ್ಧ ಹಲಗೆಯನ್ನು ಕೊಯ್ದು ಅಲ್ಲಿಗೆ ಸಿಕ್ಕಿಸಿದ್ದ ಬೆಣೆಯನ್ನು ನೋಡಿ ಒಂದು ಕಪಿಯು ಅದನ್ನು ಕೀಳ ಹೋಗಲು ಅದರ ಬಾಲ ಮೊದಲಾದದ್ದು ಆ ಸಂದಿಗೆ ಸಿಕ್ಕಿ ಅದಕ್ಕೆ ಬಹಳ ವ್ಯಥೆಯಾಯಿತು ಎಂದು ಪಂಚತಂತ್ರದಲ್ಲಿ ಕಥೆ ಇದೆ.

---

## ಹಣೆಯ ಬರಹ (೩೩–೩೪)

**ಮುನ್ನಲೀಶ್ವರಕಲ್ಪನೆಯಲೇ**
**ತನ್ನಪಾಲಿಗೆ ಬಹುದು ತಾನೆ ಮ**
**ಹೋನ್ನತದ ಸುಖದುಃಖ ದೇವಾಸುರರಿಗೊಳಗಾಗಿ; ।**
**ತನ್ನ ಹಣೆಯಲಿ ಬರಹವಿಲ್ಲದು**
**ದನ್ನು ತಾ ಬಯಸಿದರೆ ಬಾರದು;**
**ತನ್ನ ವಶವೇ? ಈಶ್ವರಾಜ್ಞೆಯ ಮೀರಿ ನಡೆವುದಕೆ ॥ ॥೩೩॥**

**ತಾತ್ಪರ್ಯ:** ಮೊದಲು ಈಶ್ವರನು ಜೀವರ ಕರ್ಮಾನುಸಾರವಾಗಿ ಮಾಡಿದ ಸಂಕಲ್ಪದಂತೆ ದೇವತೆಗಳಿಗೆ ದಾನವರಿಗೆ ಯಾರಿಗೆ ಆಗಲೀ ಅತಿಶಯ ಸುಖ ದುಃಖಗಳು ತಮ್ಮಷ್ಟಕ್ಕೆ ತಾವೇ ಬರುತಿರುವುವು. ಜೀವಿಗಳ ಹಣೆಯಲ್ಲಿ ಬ್ರಹ್ಮನು ಏನನ್ನು ಬರೆದಿರುವನೋ ಅದಲ್ಲದೆ ಬೇರೊಂದು ಬಯಸಿದರೆ ಅದು ಸಿಗುವುದಿಲ್ಲ. ಭಗವದಾಜ್ಞೆಯನ್ನು ಮಿರಿ ನಡೆಯಲು ಅದೇನು ತನ್ನ ಅಧೀನದಲ್ಲಿದೆಯೇ?

**ಶಬ್ದಾರ್ಥ:** ಮುನ್ನಲಿ=ಮೊದಲು; ಈಶ್ವರ ಕಲ್ಪನೆಯಲೇ=ಈಶ್ವರನು (ಜೀವರ ಕರ್ಮಾನುಸಾರವಾಗಿ) ಮಾಡಿದ ಸಂಕಲ್ಪದಿಂದಲೇ; ದೇವಾಸುರರಿಗೊಳಗಾಗಿ=ದೇವತೆಗಳಿಗೂ ಅಸುರರಿಗೂ ಕೂಡ * ತನ್ನ ವಶವೇ=ತನ್ನ ಅಧೀನದಲ್ಲಿರುವುದೇ?

---

**ಹಣೆಯ ಬರಹವ ಮೀರಿ ನಡೆವರೆ**
**ತ್ರಿಣಯನಿಗುಮಳವಲ್ಲ; ಮಿಕ್ಕಿನ**
**ಬಣಗುಗಳ ಪಾಡೇನು! ಪೂರ್ವದ ಕರ್ಮಫಲಗಳನು ।**
**ಜುಣುಗಿ ತಾನುಣಲೊಲ್ಲೆನೆಂದಿರ**
**ಲಣಕವೇ? ತಮ್ಮಪ್ಪನುಂಬನೆ?**
**ಎಣಿಸಿ ನೋಡಿದೊಡೀಶ್ವರಾಜ್ಞೆಯ ಮೀರಲಳವಲ್ಲ ॥ ॥೩೪॥**

**ತಾತ್ಪರ್ಯ:** ವಿಧಿಲಿಖಿತವನ್ನು ಮೀರಿ ನಡೆಯಲು ಮುಕ್ಕಣ್ಣನಾದ ಈಶ್ವರನಿಗೂ ಶಕ್ಯವಿಲ್ಲ. ಹೀಗಿರುವಾಗ ಇನ್ನುಳಿದ ನಿರುಪಯೋಗಿಗಳ ಅವಸ್ಥೆಯ ಬಗ್ಗೆ ಹೇಳುವುದೇನಿದೆ? ಹಿಂದಿನಜನ್ಮಗಳಲ್ಲಿ ಮಾಡಿದ ಪಾಪಪುಣ್ಯ, ಕರ್ಮಗಳ ಫಲವನ್ನು ತಾನು ಅನುಭವಿಸಲೇಬೇಕು. ಆಗದು ಎಂದು ತಪ್ಪಿಸಿಕೊಳ್ಳಲು ಅದೇನು ಹುಡುಗಾಟವೇ? ಅವನವನ ಕರ್ಮಫಲಗಳನ್ನು ಅವರ ಅಪ್ಪನು ಬಂದು

ಅನುಭವಿಸುವನೆ? ಹಾಗೆ ಲೆಕ್ಕಿಸುವುದಾದರೆ ದೈವಾಜ್ಞೆಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ.

**ಶಬ್ದಾರ್ಥ:** **ತ್ರಿಣಯ(ನ)**=(ಮೂರುಕಣ್ಣುಳ್ಳವನು) ಈಶ್ವರ; **ಬಣಗುಗಳ**=ಕೆಲಸಕ್ಕೆ ಬಾರದವರ (ನಿರುಪಯೋಗಿಗಳ); * **ಜುಣುಗಿ**=ಹಿಂಡಿ? ಜಾರಿಕೊಳ್ಳಲು, ನುಣುಚಿಕೊಳ್ಳಲು **ಅಣಕವೇ**=ಹುಡುಗಾಟವೇ?; ***ಉಂಬನೆ**=ಅನುಭವಿಸುವನೆ?; * **ಈಶ್ವರಾಜ್ಞೆ**=ದೈವಾಜ್ಞೆ

**ಟಿಪ್ಪಣಿ:** ಜುಣುಗಿ ಎನ್ನಲು ಹಿಂಡಿ ಎಂಬರ್ಥವನ್ನು ಹೊ.ಚಿ. ಕೊಟ್ಟಿರುವುದು ಇಲ್ಲಿ ಅಷ್ಟು ಸೂಕ್ತವೆನಿಸದು.

---

## ಕಾಲಾಧೀನತ್ವ (೩೫-೪೩)

**ಕೇಳು ಸಚರಾಚರ ಸಮಸ್ತವು**
**ಕಾಲಕರ್ಮಕೆ ಸಿಲುಕಿಹವು; ತ**
**ತ್ಕಾಲಕರ್ಮಗಳೀಶ್ವರಾಜ್ಞಾಪಾಶವೆನಿಸಿಹವು; ।**
**ಪೇಳಲೇನದ ಕಳೆಯಲಳವೇ?**
**ಕಾಲಸಂಕಲೆಯಾದ ಸತಿಸುತ**
**ಮೂಲಸಂಸ್ಕೃತಿಬದ್ಧರಿಗೆ ಭೋಗಾಭಿಲಾಷರಿಗೆ ॥** ॥೩೫॥

**ತಾತ್ಪರ್ಯ:** ಶುಕಮುನಿಯೆ ಕೇಳು, ಸ್ಥಾವರ, ಜಂಗಮ ಜೀವಿಗಳೆಲ್ಲವು ಸಾವಿಗೆ ಮತ್ತು ತಾವು ಮಾಡಿದ ಕರ್ಮಫಲಕ್ಕೆ ಒಳಗಾಗಿರುವುವು. ಆ ಪ್ರಾರಬ್ಧಕರ್ಮಗಳೆಲ್ಲವೂ ಭಗವಂತನ ಆಜ್ಞಾರೂಪವಾದ ಕಟ್ಟುಗಳು ಎನಿಸಿಕೊಂಡಿವೆ. ಹೆಂಡತಿ ಮಕ್ಕಳೆ ಮುಂತಾದ ಕಾಲ್ಬೇಡಿಗಳಿಂದ ಸಂಸಾರದ ಬಂಧನದಲ್ಲಿ ಮೊದಲೇ ಸಿಕ್ಕಿಕೊಂಡಿರುವ ಸುಖಾಪೇಕ್ಷಿಗಳು ಕಾಲಕರ್ಮಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವೇ? ಅದರ ಬಗ್ಗೆ ಇನ್ನು ಹೇಳುವುದೇನಿದೆ?

**ಶಬ್ದಾರ್ಥ:** * **ಸಚರಾಚರ**=ಸ್ಥಾವರಜಂಗಮ ಜೀವಿಗಳು; **ಕಾಲಕರ್ಮಕೆ**=ಸಾವಿಗೆ ಮತ್ತು ತಾವು ಮಾಡಿದ ಕರ್ಮದ ಫಲಕ್ಕೆ; **ಈಶ್ವರಾಜ್ಞಾಪಾಶವೆನಿಸಿಹವು**=ಪ್ರಾಣಿಗಳ ಸಾವಿಗೂ ತಾವು ಮಾಡಿದ ಕರ್ಮಫಲಕ್ಕೂ ಕಟ್ಟುಬಿದ್ದಿರಬೇಕೆಂಬ ಈಶ್ವರಾಜ್ಞೆಯ ರೂಪವಾದ ಕಟ್ಟುಪಾಡುಗಳೆನಿಸಿರುವವು; **ಕಾಲಸಂಕಲೆ**=ಕಾಲಿನ ಬೇಡಿ; * **ಮೂಲಸಂಸ್ಕೃತಿಬದ್ಧರಿಗೆ**=ಮೊದಲೇ ಸಂಸಾರದಲ್ಲಿ ಬಂಧಿತರಾದವರಿಗೆ; * **ಭೋಗಾಭಿಲಾಷರಿಗೆ**=ಸುಖಾಪೇಕ್ಷಿಗಳಿಗೆ

---

**ಕಾಯಸಿದ್ಧಿಯ ಪಡೆದ ಗರುವರು,**
**ಮಾಯೆಯಳಿದ ಮಹಾನುಭಾವರು,**
**ಸಾಯಸದಲಷ್ಟಾಂಗಯೋಗಾಭ್ಯಾಸವನು ಮಾಡಿ ।**

**ನೋಯದಸುವನು ಬಿಡುವ ಯೋಗಿಗ**
**ಳಾ ಯತಿಗಳಾ ವ್ರತಿಗಳೆಲ್ಲರು**
**ಸಾಯದುಳಿದವರಿಲ್ಲ; ಕಾಲಾಧೀನರಾಗಿಹರು ॥** ॥೩೬॥

**ತಾತ್ಪರ್ಯ:** ಲೋಕದಲ್ಲಿ ಯಾರೂ ಶಾಶ್ವತರಲ್ಲ. ಸಾಯದಂತೆ ದೇಹಸಿದ್ಧಿಯನ್ನು ಪಡೆದುಕೊಂಡ ಶ್ರೇಷ್ಠರು, ಅಜ್ಞಾನದ ಮೋಹವನ್ನು ಹೋಗಲಾಡಿಸಿಕೊಂಡ ಮಹಾನುಭಾವರು, ಬಹಳ ಶ್ರಮಪಟ್ಟು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿಗಳೆಂಬ ಅಷ್ಟಾಂಗಯೋಗಮಾರ್ಗವನ್ನು ಅಭ್ಯಾಸಮಾಡಿ ಮರಣದ ದುಃಖವನ್ನು ಅನುಭವಿಸದೆ ತಾವಾಗಿಯೇ ಪ್ರಾಣವನ್ನು ಬಿಡುವ ಯೋಗಿಗಳು, ಸಂನ್ಯಾಸಿಗಳು, ದೈವಾನುಗ್ರಹಕ್ಕಾಗಿ ನೋಂಪಿಯನ್ನು ನಡೆಸುವವರು, ಎಲ್ಲಬಗೆಯ ಸಾಧಕರು, ಸಾಯದೆ ಈ ಲೋಕದಲ್ಲಿ ಯಾರೂ ಬದುಕಿಲ್ಲ, ಎಲ್ಲರೂ ಕಾಲವಶರಾಗಿದ್ದಾರೆ.

**ಶಬ್ದಾರ್ಥ: ಕಾಯಸಿದ್ಧಿಯ ಪಡೆದ**=ಸಾಯದಂತೆ ಸಿದ್ಧಿಯನ್ನು ಪಡೆದುಕೊಂಡ; **ಗರುವರು**=ಶ್ರೇಷ್ಠರು (ಸ+ಆಯಸದಲ್ಲಿ)= **ಸಾಯಸದಲಿ**=ಶ್ರಮಪಟ್ಟು; **ಯತಿಗಳು**=ಸಂನ್ಯಾಸಿಗಳು; **ವ್ರತಿಗಳು**=ದೇವರ ಅನುಗ್ರಹವನ್ನು ಪಡೆಯುವುದಕ್ಕಾಗಿ ಯಾವುದಾದರೂ ವ್ರತವನ್ನು ಹಿಡಿದಿರುವವರು; * **ವ್ರತ**=ನೋಂಪಿ; * **ಕಾಲಾಧೀನರು**, ಕಾಲವಶರು=ಮರಣ ಹೊಂದಿದವರು; * **ಅಸು**=ಪ್ರಾಣ; **ನೋಯದೆ ಅಸುವನು ಬಿಡುವ ಯೋಗಿಗಳು**=ಮರಣದ ದುಃಖವನ್ನು ಅನುಭವಿಸದೆ ತಾವಾಗಿಯೇ ಪ್ರಾಣಬಿಡುವ ಯೋಗಿಗಳು

**ಟಿಪ್ಪಣಿ: ಅಷ್ಟಾಂಗ ಯೋಗ**= ಯೋಗದ ಎಂಟು ನಿಯಮಗಳು ೧. **ಯಮ**=ಅಹಿಂಸಾ, ಸತ್ಯ ಮೊದಲಾದವು ೨. **ನಿಯಮ**=ಶುಚಿ, ಸಂತೋಷ, ಮೊದಲಾದವು ೩. **ಆಸನ**=ಬಹಳ ಹೊತ್ತಾದರೂ ಆಯಾಸವಾಗದಂತೆ ಕೂತುಕೊಳ್ಳುವ ಬಗೆ ೪. **ಪ್ರಾಣಾಯಾಮ**=ಉಸಿರನ್ನು ಬಿಗಿಹಿಡಿಯುವುದು ೫. **ಪ್ರತ್ಯಾಹಾರ**=ಹೊರಕ್ಕೆಹೋದ ಮನಸ್ಸನ್ನು ಇಂದ್ರಿಯಗಳನ್ನು ಹಿಂದಟ್ಟಿಕೊಂಡು ಬರುವುದು ೬. **ಧಾರಣ**=ಹಿಂದಕ್ಕೆತಂದ ಮನಸ್ಸು, ಇಂದ್ರಿಯಗಳನ್ನು ಒಂದು ಸ್ಥಲದಲ್ಲಿ ನಿಲ್ಲಿಸುವುದು ೭. **ಧ್ಯಾನ**=ಅದನ್ನೇ ಎಡಬಿಡದೆ ನೆನೆಯುವುದು ೮. **ಸಮಾಧಿ**=ಬೇರೆ ಏನೂ ತೋಚದೆ ಆತ್ಮಸ್ಫೂರ್ತಿಯೊಂದೇ ಇರುವುದು

---

**ವಾದ, ವಶ್ಯ, ವಯೋನಿರೋಧನ**
**ವಾದಿಯಾದಂಜನವದೃಶ್ಯಗ**
**ಳಾದ ಮಣಿಮಂತ್ರೌಷಧಂಗಳ ಯಂತ್ರತಂತ್ರಗಳ ।**
**ಸಾದರದಿ ಸಾಧಿಸಿಹ ಘಟಿಕಾ**
**ಪಾದುಕಾಸಿದ್ಧಿಗಳ ಪಡೆದಿಹ**
**ಸಾಧಕರು ಮೊದಲಾಗಿ ಕಾಲಾಧೀನರಾಗಿಹರು ॥** ॥೩೭॥

**ತಾತ್ಪರ್ಯ:** ವಾದ (ಸ್ವರ್ಣವಿದ್ಯೆ), ವಶ್ಯ (ಇತರರನ್ನು ಅಧೀನ ಮಾಡಿಕೊಳ್ಳುವ ವಿದ್ಯೆ), ವಯೋನಿರೋಧನ (ಮುಪ್ಪನ್ನು ತಡೆಯುವ ವಿದ್ಯೆ), ಇತರರು ಎದುರಿಗಿದ್ದರೂ

ಅವರಿಗೆ ಕಾಣದಂತೆ ಮಾಡುವ ವಿದ್ಯೆ, ಭೂಮಿಯಲ್ಲಿರುವ ನಿಧಿ ಮೊದಲಾದವನ್ನು ಕಾಣುವ ಕಣ್ಣುಕಪ್ಪಿನ ಅಂಜನವಿದ್ಯೆ, ಮಣಿ (ನಾಗಮಣಿ ವಿದ್ಯೆ), ಮಂತ್ರ (ಓಂಕಾರವೆಂಬ ಮಂತ್ರ), ಔಷಧ (ಸಂಜೀವಿನಿ ವಿದ್ಯೆ), ಮೊದಲಾದವನ್ನು ಅತ್ಯಾಸಕ್ತಿಯಿಂದ ಸಾಧಿಸಿದವರು, ವಸುಚಕ್ರಾಂತವಾದ ಯಂತ್ರಗಳನ್ನೂ, ಕೈ ಚಮತ್ಕಾರಗಳನ್ನೂ ಪಡೆದ, ಘಟಿಕಾ ಸಿದ್ಧಿ (ಗುಳಿಗೆಯನ್ನು ಬಾಯಲ್ಲಿ ಇಟ್ಟುಕೊಳ್ಳು ವುದರಿಂದ ಬರುವ ಸಿದ್ಧಿ, ಪಾದುಕಾ ಸಿದ್ಧಿ (ಹಾವುಗೆಗಳನ್ನು ಧರಿಸುವುದರಿಂದ ಕ್ಷಣಮಾತ್ರದಲ್ಲಿ ಬೇಕಾದಕಡೆ ಹೋಗುವ ವಿದ್ಯೆ) ಮೊದಲಾದ ವ್ಯವಹಾರ ಸಾಮರ್ಥ್ಯಗಳನ್ನು ಸಾಧಿಸಿದ ಸಾಧಕಸಮರ್ಥರೆಲ್ಲರೂ ಕಾಲವಶರಾಗಿದ್ದಾರೆ, ಯಾರೂ ಉಳಿದಿಲ್ಲ.

**ಶಬ್ದಾರ್ಥ:** ೧. ವಾದ=ಚಿನ್ನವನ್ನು ಮಾಡುವುದೇ ಮೊದಲಾದ ಧಾತುವಾದ ೨. ವಶ್ಯ=ಇತರರು ತನಗೆ ಅಧೀನರಾಗುವಂತೆ ಮಾಡುವುದು ೩. ವಯೋನಿರೋಧನ=ಮುಪ್ಪು ಬರದ ಹಾಗೆ ಮಾಡುವುದು ೪. ಅಂಜನ=ಭೂಮಿಯಲ್ಲಿರುವ ನಿಕ್ಷೇಪ ಮೊದಲಾದವನ್ನು ಕಾಣುವಂಥ ಕಣ್ಣು ಕಪ್ಪು ೫. ಅದೃಶ್ಯ=ಎದುರಿಗಿದ್ದರೂ ತಾನು ಇತರರಿಗೆ ಕಾಣದಂತೆ ಇರುವಂಥ ವಿದ್ಯೆ ೬. ಮಣಿ, ಮಂತ್ರ, ಔಷಧಂಗಳ=ನಾಗಮಣಿ, ಓಂಕಾರವೆಂಬ ಮಂತ್ರ, ಅಮೃತ ಸಂಜೀವಿನಿ ೭. ಯಂತ್ರ ತಂತ್ರಗಳ=ವಸುಚಕ್ರಾಂತವಾದ ಯಂತ್ರಗಳನ್ನು, ಕೈ ಚಮತ್ಕಾರಗಳನ್ನು ೮. ಘಟಿಕಾಪಾದುಕಾ ಸಿದ್ಧಿ=ಒಂದು ಗುಳಿಗೆಯನ್ನು ಬಾಯಲ್ಲಿ ಇಟ್ಟುಕೊಳ್ಳುವುದರಿಂದ ಅಥವಾ ಪಾದುಕೆಗಳನ್ನು ಧರಿಸುವುದರಿಂದ ಬೇಕಾದ ಕಡೆಗೆ ಕ್ಷಣ ಮಾತ್ರದಲ್ಲಿ ಹೋಗುವ ಸಾಮರ್ಥ್ಯ.

**ಟಿಪ್ಪಣಿ:** ಸಾಧಕರು– ಈ ಮಾತಿಗೆ ಮೋಕ್ಷದ ಸಾಧನೆಗಳನ್ನು ಮಾಡುವರೆಂದು ತಿಳಿಯಬಾರದು; ಏಕೆಂದರೆ ವಾದ ಮೊದಲಾದ ಸಿದ್ಧಿಗಳ ಸಾಧನೆಗಳು ಮೋಕ್ಷದ ಸಾಧನೆಗಳಲ್ಲ; ಇಲ್ಲಿ ಸಾಧಕ ರೆಂದರೆ ವಿಲಕ್ಷಣವಾದ ವ್ಯವಹಾರ ಸಾಮರ್ಥ್ಯವನ್ನು ಪಡೆಯಲು ಯತ್ನಿಸುವವರು ಎಂದರ್ಥ.

---

**ವೇದಶಾಸ್ತ್ರ ಪುರಾಣಕಥೆಗಳ**
**ನೋದಿ, ನಿಯಮಾಚಾರನಿಷ್ಠೆಯ**
**ಲಾದರದಿ ಪಿತೃದೇವತಾತಿಥಿಗಳನು ಪೂಜಿಸುತ, ।**
**ಕ್ರೋಧವಿಲ್ಲದೆ ಸಾಂಗಮೆನೆ ಹಯ**
**ಮೇಧ ಮೊದಲಾಗಿರ್ಪ ಕ್ರತುಸಂ**
**ಪಾದನೆಯ ದೀಕ್ಷಿತರು ಕಾಲಾಧೀನರಾಗಿಹರು ॥ ॥೫೮॥**

**ತಾತ್ಪರ್ಯ:** ನಾಲ್ಕು ವೇದಗಳನ್ನು, ಷಟ್‌ಶಾಸ್ತ್ರಗಳನ್ನು, ಹದಿನೆಂಟುಪುರಾಣಗಳನ್ನು ಓದಿ ಅಭ್ಯಾಸಮಾಡಿ ಸನಾತನಧರ್ಮದ ನಿಯಮಗಳನ್ನು ಪರಿಪಾಲಿಸುತ್ತಾ ಸದಾಚಾರದಲ್ಲಿ ನಿಷ್ಠಾವಂತರಾದವರು, ಯಜ್ಞ–ಯಾಗಾದಿಗಳಿಂದ ಪಿತೃಗಳನ್ನು, ಪೂಜಾವ್ರತಗಳಿಂದ ದೇವತೆಗಳನ್ನು, ದಾನ–ಧರ್ಮಗಳಿಂದ ತಾಯಿ–ತಂದೆ, ಅತಿಥಿಗಳನ್ನು ಪೂಜಿಸಿ ತೃಪ್ತಿಗೊಳಿಸುವವರೂ, ಸ್ವಾರ್ಥವಿಲ್ಲದೆ ಶಾಂತಚಿತ್ತರಾಗಿ ಅಶ್ವಮೇಧ ಮೊದಲಾದ ಮಹಾಯಜ್ಞಗಳನ್ನು ಕ್ರಮಬದ್ಧವಾಗಿ ಮಾಡುತ್ತಾ

ಇಷ್ಟಾರ್ಥಸಿದ್ಧಿ ಪಡೆಯುವ ಯಾಗಪಂಡಿತರಾದ ದೀಕ್ಷಿತರೂ ಕಾಲವಶರಾಗಿದ್ದಾರೆ ಎಂದಮೇಲೆ ಉಳಿದವರ ವಿಚಾರ ಹೇಳುವುದೇನಿದೆ?

**ಶಬ್ದಾರ್ಥ:** * ವೇದ=ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ-ನಾಲ್ಕು ವೇದಗಳು * ಶಾಸ್ತ್ರ= ೬ ಶಾಸ್ತ್ರಗಳು (ತರ್ಕ, ವೇದಾಂತ, ಮೀಮಾಂಸ, ವ್ಯಾಕರಣ, ಜ್ಯೋತಿಷ, ಧರ್ಮಶಾಸ್ತ್ರ) ದೀಕ್ಷಿತರು=ದೀಕ್ಷೆ ಹೊಂದಿದವರು, ಯಜ್ಞ-ಯಾಗಾದಿಗಳ ವಿಧಿಗಳನ್ನು ನಿರ್ವಹಿಸುವ ಪುರೋಹಿತರು (ಕಸ್ತೂರಿ ಕೋಶ)

**ಟಿಪ್ಪಣಿ:** ಪುರಾಣ- ೧೮ ಪುರಾಣಗಳು (ಮತ್ಸ್ಯ, ಮಾರ್ಕಂಡೇಯ, ಭವಿಷ್ಯ, ಭಾಗವತ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ವಾಮನ, ವಾಯು, ವಿಷ್ಣು, ವರಾಹ, ಅಗ್ನಿ, ನಾರದ, ಪದ್ಮ, ಲಿಂಗ, ಗರುಡ, ಕೂರ್ಮ, ಸ್ಕಂಧ ಪುರಾಣಗಳು (ದೇವಿಭಾಗವತ-೧, ೩, ೨, ೧೨) ಸಾಂಗ=ಕ್ರಮಬದ್ಧವಾಗಿ; ಹಯಮೇಧ=ಅಶ್ವಮೇಧ, ಕ್ರತು=ಸಪ್ತ ಯಾಗಗಳು (ಅಶ್ವಮೇಧ, ಅಗ್ನಿಷ್ಟೋಮ, ರಾಜಸೂಯ, ವಾಜಪೇಯ, ವೈಷ್ಣವ, ಗೋಮೇಧ, ಬಹುಸುವರ್ಣಕ)

---

**ದುಶ್ಚರಗಳೆನಿಸಿರ್ಪ ಬಹುವಿಧ**
**ಕೃಚ್ಛ್ರ ಚಾಂದ್ರಾಯಣಗಳೆಂಬ ಮ**
**ಹೋಚ್ಚ್ರಯದ ಪಂಚಾಗ್ನಿಮಧ್ಯದಿ ಮಳೆಚಳಿಗಳಿಂದ ।**
**ಬೆಚ್ಚದಾಹಾರವನು ವರ್ಜಿಸಿ**
**ನಿಚ್ಚ ನಿಶ್ಚಲರಾಗಿ ತಪವನು**
**ಹೆಚ್ಚಿಸುವ ಸಚ್ಚರಿತರೆಲ್ಲರು ಕಾಲವಶರೆಂದ ॥ ॥೩೯॥**

**ತಾತ್ಪರ್ಯ:** ಮಾಡುವುದಕ್ಕೆ ಬಹುಕಷ್ಟವಾದಂಥ ಕೃಚ್ಛ್ರ, ಚಾಂದ್ರಾಯಣ ಮೊದಲಾದ ಉಪವಾಸದ ಪ್ರಾಯಶ್ಚಿತ್ತಕರ್ಮಗಳಿಂದ ಪಂಚಾಗ್ನಿಮಧ್ಯದ ತಪಸ್ಸು, ಮಳೆ, ಚಳಿಗಾಳಿಗಳಿಗೆ ಬೆದರದೆ ನಿರಾಹಾರಿಗಳಾಗಿ ನಿರಂತರವಾಗಿ ನಿಶ್ಚಿಂತೆಯಿಂದ ತಪಸ್ಸನ್ನು ವೃದ್ಧಿಸಿಕೊಂಡ ಮಹಾತ್ಮರೆಲ್ಲ ಕಾಲಾಧೀನರಾದವರೇ ಹೊರತು ಬೇರೆಯಲ್ಲ.

**ಶಬ್ದಾರ್ಥ:** ದುಶ್ಚರಗಳು=ಮಾಡುವುದಕ್ಕೆ ಬಹು ಕಷ್ಟವಾದವುಗಳು; ಬೆಚ್ಚದೆ=ಬೆದರದೆ; ನಿಚ್ಚ= ಯಾವಾಗಲೂ; * ಹೆಚ್ಚಿಸುವ=ವೃದ್ಧಿಸುವ; * ಸಚ್ಚರಿತರು=ಮಹಾತ್ಮರು; * ವರ್ಜಿಸಿ=ತ್ಯಜಿಸಿ

**ಪಾಠಾಂತರ:** ದುಶ್ಚರ=ದುಸ್ತರ (ಕು)

**ಟಿಪ್ಪಣಿ-೧:** ಕೃಚ್ಛ್ರ- ೩ ದಿನ ಬರೀ ಹಗಲೂಟ, ೩ ದಿನ ಬರೀ ಇರುಳೂಟ, ೩ ದಿನ ದೊರೆತ ಊಟ, ೩ ದಿನಗಳು ಊಟವೇ ಇಲ್ಲ. ಇದು ೧೨ ದಿನಗಳ ಕೃಚ್ಛ್ರ. ಹೀಗೆ ಉಪವಾಸ ಪ್ರಧಾನವಾದ ಅನೇಕ ಬಗೆಯ ಕೃಚ್ಛ್ರಗಳುಂಟು.

**ಟಿಪ್ಪಣಿ-೨:** ಚಾಂದ್ರಾಯಣ=ಶುಕ್ಲಪಕ್ಷದಲ್ಲಿ ಪಾಡ್ಯದಿಂದ ಒಂದೊಂದು ತುತ್ತು ಹೆಚ್ಚಿಸುತ್ತಾ ಕೃಷ್ಣ ಪಕ್ಷದಲ್ಲಿ ಪಾಡ್ಯದಿಂದ ಒಂದೊಂದು ತುತ್ತು ಇಳಿಸುತ್ತ ಶರೀರವನ್ನು ಸೊರಗಿಸುವುದು.

**ಟಿಪ್ಪಣಿ-೩:** ಪಂಚಾಗ್ನಿ ನಡುವೆ (ತಪಸ್ಸು)- ನಾಲ್ಕು ದಿಕ್ಕಿನಲ್ಲಿಯೂ ನಾಲ್ಕು ಅಗ್ನಿ ಕುಂಡಗಳು; ಮೇಲೆ ಸೂರ್ಯ ಹೀಗೆ ಐದು ಅಗ್ನಿಗಳ ನಡುವೆ ಮಾಡುವ ತಪಸ್ಸು.

---

**ಸುರನರೋರಗಯಕ್ಷಕಿನ್ನರ**
**ಗರುಡಗಂಧರ್ವಾದಿಸಿದ್ಧಾ**
**ಸುರರು, ವಸುರುದ್ರಾಶ್ವಿನಿಗಳಾದಿತ್ಯರಪ್ಸರರು ।**
**ಹರಿಹರಬ್ರಹ್ಮಾದಿಲೋಕಾಂ**
**ತರವನೈದಿದ ಸುಕೃತಿಗಳು, ಧರೆ**
**ಗಿರಿಗಳಿವು ಮೊದಲಾಗಿ ಕಾಲಾಧೀನವಾಗಿಹವು ॥ ॥೪೦॥**

**ತಾತ್ಪರ್ಯ:** ದೇವತೆಗಳು, ಮನುಷ್ಯರು, ನಾಗರು, ಯಕ್ಷರು, ಕಿನ್ನರರು, ಗರುಡರು, ಗಂಧರ್ವರು, ಮೊದಲಾದವರೂ ಸಿದ್ಧರು, ಅಸುರರು, ವಸುಗಳು, ರುದ್ರರು, ಅಶ್ವಿನೀದೇವತೆಗಳು, ಆದಿತ್ಯರು, ಅಪ್ಸರರು, ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳು, ಲೋಕಾಂತರಗಳನ್ನು ಹೊಂದಿದ ಪುಣ್ಯ ಜೀವಿಗಳು, ಈ ಭೂಮಿ, ಬೆಟ್ಟ, ನದಿಗಳು, ಮೊದಲಾದುವೆಲ್ಲ ಕಾಲಪುರುಷನಿಗೆ ಅಧೀನವಾಗಿರುವುದನ್ನು ಕಾಣುತ್ತೇವೆ.

**ಶಬ್ದಾರ್ಥ: * ಸುಕೃತಿಗಳು=ಪುಣ್ಯಶಾಲಿಗಳು; * ಧರೆ=ಭೂಮಿ; * ಗಿರಿ=ಬೆಟ್ಟ**

**ಟಿಪ್ಪಣಿ :** ಈ ಪದ್ಯಕ್ಕೆ ಹೊ.ಚಿ. ನವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಬೇಸಗೆಯ ಬಿಸಿಲಿನಲಿ, ಬಿರ್ರನೆ**
**ಬೀಸುತಿಹ ಗಾಳಿಯಲಿ, ಮಳೆಯನು**
**ಸೂಸುತಿಹ ಸೋನೆಯಲಿ, ಮಂಜನು ಸುರಿವ ಶೀತದಲಿ, ।**
**ಗಾಸಿಯಾಗುತ ಘೋರತಪದಾ**
**ಯಾಸದಲಿ ಯತ್ನವನು ಮಾಡುವ**
**ರೈಸೆ! ಸುಖವಿನಿತಿಲ್ಲ; ಕಾಲಾಧೀನರಾಗಿಹರು ॥ ॥೪೧॥**

**ತಾತ್ಪರ್ಯ:** ಧಗಧಗಿಸುವ ಬೇಸಿಗೆಯ ಕೆಂಡದಂಥ ಬಿಸಿಲಿನಲ್ಲಿ, ಭರ್ರೆಂದು ಬೀಸುವ ಬಿರುಗಾಳಿಯಲ್ಲಿ, ಒಂದೇಸಮನೆ ಸುರಿಯುತ್ತಿರುವ ಜಡಿಮಳೆಯಲ್ಲಿ, ಎಡಬಿಡದೆ ಮಂಜುಸುರಿಯುವ ಹಿಮಗಾಲದಲ್ಲಿ, ಕಠಿಣ ತಪಸ್ಸನ್ನು ಮಾಡುತ್ತಾ ಬಲು ಪ್ರಯಾಸದಲ್ಲಿ ಬಳಲುತ್ತಾ ಮುಕ್ತಿಗಾಗಿ ಸಾಹಸ ಮಾಡುತ್ತಾರಲ್ಲಾ! ಅವರಿಗೆ ಸುಖವು ಸ್ವಲ್ಪವೂ ಇಲ್ಲ. ಏಕೆಂದರೆ ಈ ಘೋರ ತಪಸ್ವಿಗಳೆಲ್ಲಾ ಕಾಲವಶರಾಗಿದ್ದಾರೆ. ಯಾರಿಗೂ ಕಾಲನನ್ನು ಗೆಲ್ಲಲಾಗಿಲ್ಲ.

**ಶಬ್ದಾರ್ಥ: * ಬಿರ್ರನೆ=ಭರ್ರೆಂದು; * ಸೂಸುತಿಹ=ಸುರಿಯುತ್ತಿರುವ; * ಸೋನೆಯಲಿ=ಜಡಿ ಮಳೆಯಲ್ಲಿ; * ಗಾಸಿ=ಬಳಲಿಕೆ; * ಐಸೆ=ಅಲ್ಲಾ!; ಕಾಲಾಧೀನರಾಗಿಹರು=ಮರಣವಪ್ಪಿದ್ದಾರೆ.**

**ಟಿಪ್ಪಣಿ :** ಈ ಪದ್ಯಕ್ಕೆ ಹೊ.ಚಿ.ನವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಗರ್ಭದೊಳಗಿಹ ದುಃಖ, ಬಳಿಕಿನ**
**ಲರ್ಭಕತ್ವದ ದುಃಖ, ಯೌವನ**
**ದುಬ್ಬುಕೊಬ್ಬಿನಲುಕ್ಕಿ ವನಿತಾವಿಷಯವಹ ದುಃಖ, ।**
**ಉಬ್ಬಸದ ರೋಗಗಳು ಮೊದಲಹ**
**ನಿರ್ಭರದ ವಾರ್ಧಕ್ಯ ದುಃಖವು**
**ಹಬ್ಬಿಕೊಂಡಿರೆ ಸುಖವಕಾಣರು ಕಾಲವಶರಾಗಿ ॥ ॥೪೨॥**

**ತಾತ್ಪರ್ಯ:** ಕಾಲಕಾಲಕ್ಕೆ ಶರೀರಕ್ಕೆ ಸಂಭವಿಸುವ ದುಃಖಗಳನ್ನು ಇಲ್ಲಿ ತಿಳಿಸಿದೆ. ತಾಯಹೊಟ್ಟೆಯಲ್ಲಿ ನವ ಮಾಸಗಳು ಇರುವ ಕಷ್ಟ; ಅನಂತರ ಕೂಸನ್ನು ಹಡೆಯುವ ವೇದನೆ; ಹರೆಯದಲ್ಲಿ ಅಹಂಕಾರ ಮದಗಳಿಂದ ಸೊಕ್ಕಿ, ಹೆಣ್ಣಿನ ವಿರಹದಲ್ಲಿ ಒದ್ದಾಡುವಸಂಕಟ; ಕೆಮ್ಮು, ಗೂರಲು ಮೊದಲಾದ ಉಸಿರಾಟದ ತೊಂದರೆಯ ಕಾಯಿಲೆಗಳ ತಾಪತ್ರಯ ಶುರುವಾಗಿ ಅಧಿಕವಾಗುವ ಮುಪ್ಪಿನ ದುಃಖ; ಹೀಗೆ ಬಾಳೆಲ್ಲ ದುಃಖ ಆವರಿಸಿಕೊಂಡು ಸಾವನ್ನು ಅಪ್ಪುವ ನರರು ಸುಖವನ್ನು ಎಂದಿಗೂ ಕಾಣರು.

**ಶಬ್ದಾರ್ಥ: * ಗರ್ಭ=ತಾಯಹೊಟ್ಟೆ; * ಅರ್ಭಕತ್ವ=ಕೂಸಾಗಿರುವುದು; * ಯೌವನ=ಹರೆಯ; * ಉಬ್ಬುಕೊಬ್ಬು=ಅಹಂಕಾರ, ಮದ; * ವನಿತಾವಿಷಯ=ಹೆಣ್ಣಿನ ಮೋಹ; * ಉಬ್ಬಸದ ರೋಗಗಳು=ಉಸಿರಾಟದ ತೊಂದರೆಯ ಕಾಯಿಲೆಗಳು; * ವಾರ್ಧಕ್ಯ=ಮುಪ್ಪು; * ಕಾಲವಶರಾಗಿ= ಮರಣವಪ್ಪಿ; ನಿರ್ಭರದ=ಹೆಚ್ಚಾದ**

---

**ಚಕ್ರವರ್ತಿಗಳಾರ್ವರೀ ಭೂ**
**ಚಕ್ರವನು ಭುಜಬಲಸಮಗ್ರಪ**
**ರಾಕ್ರಮದೊಳಾಳಿರ್ದರೇಕಚ್ಛತ್ರರೆಂದೆನಿಸಿ ।**
**ಚಕ್ರಬೆಸಗೈದಿರ್ದುದಾದೊಡ**
**ಮೀ ಕ್ರಮದಲ್ಲಿದ್ದೇನು! ಕಾಲನ**
**ಚಕ್ರಕವರೊಳಗಾಗಿ ಹೋದರು ಮಗನೆ ಕೇಳೆಂದ ॥ ॥೪೩॥**

**ತಾತ್ಪರ್ಯ:** ಪ್ರಖ್ಯಾತರಾದ ಆರು ಮಂದಿ ಚಕ್ರವರ್ತಿಗಳು ತಮ್ಮ ಒಂದೇ ಕೊಡೆಯ ಅಡಿಯಲ್ಲಿ ಭೂಮಂಡಲವನ್ನೆಲ್ಲಾ ಆಳಿದವರು ಎಂದೆನಿಸಿಕೊಂಡು ಜಗತ್ತನ್ನು ಅಪಾರ ತೋಳ್ಬಲದ ಸಾಹಸದಲ್ಲಿ ಭೂಮಿಯನ್ನು ಆಳಿದರು. ಭೂಮಿ ಯಲ್ಲಿದ್ದ ಎಲ್ಲಾ ಜನರೂ ಅವರ ಆಜ್ಞಾಪಾಲಕರಾಗಿದ್ದರು. ಆದರೇನು ಬಂತು! ಎಷ್ಟುಜನರಮೇಲೆ ಅಧಿಕಾರ ಚಲಾಯಿಸಿದರೂ ಆ ಚಕ್ರವರ್ತಿಗಳೆಲ್ಲ ಯಮಧರ್ಮನ ಪಾಶಕ್ಕೆ ಸಿಕ್ಕಿ ಸತ್ತರು. ಯಾರೂ ಉಳಿಯಲಿಲ್ಲ ಎಂದು ಶುಕಮುನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ: ಚಕ್ರವರ್ತಿಗಳಾರ್ವರು–** ಆಳ್ವರು ಚಕ್ರವರ್ತಿಗಳು=ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ, ಕಾರ್ತವೀರ್ಯ ಏಕಚ್ಛತ್ರರು=ತಮ್ಮ ಒಂದೇ ಕೊಡೆಯ ನೆಳಲಲ್ಲಿ ಭೂಮಂಡಲವೆಲ್ಲಾ

ಇರುವಂಥ ಚಕ್ರವರ್ತಿಗಳು ಚಕ್ರ=ಭೂಚಕ್ರವೇ ಎಂದರೆ ಭೂಮಿಯಲ್ಲಿ ಇರುವ ಎಲ್ಲಾ ಜನರು ಬೆಸಗೈದಿರ್ದುದು=ಅವರ ಆಜ್ಞೆಯನ್ನು ನಡೆಸುತ್ತಿದ್ದರು ಈ ಕ್ರಮದಲಿದ್ದೇನು=ಎಷ್ಟು ಜನರ ಮೇಲೆ ಅಧಿಕಾರವನ್ನು ನಡೆಸಿಕೊಂಡಿದ್ದರೇನು? * ಕಾಲನಚಕ್ರಕೆ=ಸಾವಿಗೆ; * ಭುಜಬಲ=ತೋಳ್ಬಲ

---

## ಕರ್ಮಾಧೀನತ್ವ (೪೪-೪೮)

**ಆವಕರ್ಮಕಧೀನನಾಗಿ ವಿ**
**ಭಾವಸುವು ದಿನದಿನವು ಮೇರುವ**
**ತೀವಿ ತಿರುಗತಲಿಪ್ಪನೆಂದಿಗು; ನಿಲುಗಡೆಯ ಕಾಣ ।**
**ಆವಿಧದಲಾಗ್ರಹಗಳಾ ತಾ**
**ರಾವಳಿಗಳಾ ಸರ್ವವೆಲ್ಲವು**
**ಭಾವಿಸುತ್ತಿರೆ ತಿರುಗುತಿರ್ಪವು ಕರ್ಮವಶದಿಂದ ॥ ॥೪೪॥**

**ತಾತ್ಪರ್ಯ:** ಸೂರ್ಯನು ತನ್ನ ಕರ್ಮಕ್ಕೆ ಒಳಗಾಗಿ ಪ್ರತಿದಿನವು ಮೇರು ಪರ್ವತವನ್ನು ಒಂದೇ ಸಮನೆ ಸುತ್ತಿಕೊಂಡು ಬರುತ್ತಿದ್ದು ಒಂದು ನಿಮಿಷವಾದರೂ ವಿರಾಮ ಕಾಣುತ್ತಿಲ್ಲ. ಅದೇ ರೀತಿ ಸಮಸ್ತಗ್ರಹಗಳೂ ನಕ್ಷತ್ರ ಪುಂಜಗಳೂ, ಗಗನಲೋಕದ ಸಮಸ್ತ ಶಕ್ತಿಗಳೆಲ್ಲವೂ ಕಾರ್ಯನಿರತವಾಗಿವೆ. ಇವೆಲ್ಲವನ್ನೂ ವಿಚಾರಮಾಡಿ ನೋಡಿದರೆ, ಸಮಸ್ತಲೋಕವೂ ಕರ್ಮಾಧೀನವಾಗಿಯೇ ಸಂಚರಿಸುತ್ತವೆ.

**ಶಬ್ದಾರ್ಥ:** ವಿಭಾವಸು=ಸೂರ್ಯ; ತೀವಿ=ಅತಿಶಯವಾಗಿ (ಒಂದೇ ಸಮನೆ); * ನಿಲುಗಡೆ= ವಿರಾಮ; * ತಾರಾವಳಿ=ನಕ್ಷತ್ರಪುಂಜ; * ಭಾವಿಸುತ್ತಿರೆ=ವಿಚಾರಮಾಡಿನೋಡಿದರೆ; * ಕರ್ಮವಶದಿಂದ=ಕರ್ಮಾಧೀನವಾಗಿ; * ತಿರುಗುತಿರ್ಪವು=ಸಂಚರಿಸುತ್ತಲಿವೆ.

---

**ಅಹಿಪತಿಗೆ ನೆರೆ ತಪ್ಪದೆಂದಿಗು**
**ಮಹಿಯ ಧರಿಸಿಹ ಕರ್ಮವಾಪರಿ**
**ಸಹಜವಾದುದು ಕೂರ್ಮದಿಗ್ಗಜಗಳಿಗೆ ನೋಡಿದರೆ; ।**
**ದ್ರುಹಿಣ ಸೃಷ್ಟಿವಿಧಾನವನು ನಿ**
**ರ್ವಹಿಸಿಕೊಂಡಿಹ; ವಿಷ್ಣುರುದ್ರರ**
**ಲಹುದಲಾ! ಸ್ಥಿತ್ಯಂತಕರ್ಮಗಳೆಂದನಾ ಮುನಿಪ ॥ ॥೪೫॥**

**ತಾತ್ಪರ್ಯ:** ಆದಿಶೇಷನಿಗೆ ಭೂಮಿಯನ್ನು ಹೊತ್ತುಕೊಂಡಿರಬೇಕೆಂಬ ವಿಧಿ ಎಂದಿಗೂ ತಪ್ಪಿದ್ದಲ್ಲ; ಹಾಗೆ ನೋಡಿದರೆ ಆದಿಶೇಷನಂತೆಯೇ ಆದಿಕೂರ್ಮನಿಗೂ, ಅಷ್ಟ ದಿಗ್ಗಜಗಳಿಗೂ ಭೂಮಿಯನ್ನು ಹೊರುವುದು ನಿಯಮಿತವಾಗಿದೆ. ಇನ್ನು ಬ್ರಹ್ಮನು ಲೋಕಸೃಷ್ಟಿಯ ಕಾರ್ಯದಹೊಣೆ ಹೊತ್ತಿದ್ದಾನೆ. ವಿಷ್ಣು ರುದ್ರರು ರಕ್ಷಣೆ ಮತ್ತು ಸಂಹಾರಕಾರ್ಯಗಳ ಜವಾಬ್ದಾರಿ ಹೊಂದಿದ್ದಾರೆ ತಿಳಿ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * **ಅಹಿಪತಿ**=ಆದಿಶೇಷ; * **ಮಹಿ**=ಭೂಮಿ; * **ಕೂರ್ಮ**=ಆಮೆ; ಆಪರಿ=ಆದಿಶೇಷನು ಹೇಗೋ ಹಾಗೆ ತಾವೂ ಭೂಮಿಯನ್ನು ಹೊತ್ತಿರುವವರು.

**ಟಿಪ್ಪಣಿ:** ದಿಗ್ಗಜ=ಲೋಕವನ್ನು ಹೊತ್ತ ೮ ದಿಕ್ಕಿನ ಆನೆಗಳು (ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ) * **ದ್ರುಹಿಣ**=ಬ್ರಹ್ಮ * **ಸ್ಥಿತಿ+ಅಂತ** (ಸ್ಥಿತ್ಯಂತ) **ಕರ್ಮಗಳು**=ರಕ್ಷಣೆ ಮತ್ತು ಸಂಹಾರ ಕಾರ್ಯಗಳು ಕ್ರಮವಾಗಿ ವಿಷ್ಣುವಿನಿಂದಲೂ, ರುದ್ರನಿಂದಲೂ ಆಗುವುದೆಂದು ತಾತ್ಪರ್ಯ.

---

**ಬಲನಿಷೂದನ ಕಾಲಕಾಲದಿ**
**ಮಳೆಯ ಕರೆವುದು ಕರ್ಮ; ಜಲನಿಧಿ**
**ಬಳಸಿ ಭೂಮಿಯ ಮೇರೆದಪ್ಪದೆ ತೋರ್ಪುದೇ ಕರ್ಮ ।**
**ಉಳಿದ ದಿಕ್ಪಾಲಕರು, ಮನುಮುನಿ**
**ಗಳು, ಕುಲಾದ್ರಿಗಳೆಲ್ಲವಾಯಾ**
**ಕೆಲಸದಧಿಕಾರಿಗಳು ಕರ್ಮಾಧೀನರಾಗಿಹರು ॥** ॥೪೬॥

**ತಾತ್ಪರ್ಯ:** ಬಲನೆಂಬ ರಾಕ್ಷಸನನ್ನು ಕೊಂದ ಇಂದ್ರನು ಕಾಲಕಾಲಕ್ಕೆ ಸರಿಯಾಗಿ ಭೂಮಂಡಲದ ಮೇಲೆ ಮಳೆಸುರಿಸುವುದು ಅವನವಿಧಿ. ಭೂಮಿಯಮೇರೆಯನ್ನು ಬಿಡದೆ ಸುತ್ತಿಕೊಂಡು ನೆಲೆಯಾಗಿ ನಿಲ್ಲುವುದೇ ಸಮುದ್ರದ ಕರ್ಮ. ಅಷ್ಟ ದಿಕ್ಪಾಲಕರು, ಚತುರ್ದಶಮನುಗಳು, ಸಪ್ತಕುಲಾದ್ರಿಗಳು ತಮತಮಗೆವಿಧಿ ಗೊತ್ತುಮಾಡಿದ ಕರ್ಮಗಳನ್ನು ಮಾಡಲು ಅಧಿಕಾರಿಗಳಾಗಿದ್ದಾರೆ. ಹೀಗೆ ಸಮಸ್ತ ಲೋಕದವರೆಲ್ಲ ಕರ್ಮಾಧೀನರಾಗಿಯೇ ಇದ್ದಾರೆ.

**ಶಬ್ದಾರ್ಥ:** ಜಲನಿಧಿ=ಸಮುದ್ರ; ಬಲನಿಷೂದನ=ಬಲನೆಂಬ ರಾಕ್ಷಸನನ್ನು ಕೊಂದವನು, ಇಂದ್ರ; ನಿಷೂದನ=ಕೊಂದವನು

**ಟಿಪ್ಪಣಿ-೧: ಸಪ್ತ ಕುಲಾದ್ರಿಗಳು**- ಮಹೇಂದ್ರ, ಮಲಯ, ಸಹ್ಯ, ಸಾನುಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ ಈ ಏಳು ಪರ್ವತಗಳು.

**ಟಿಪ್ಪಣಿ-೨: * ಅಷ್ಟ ದಿಕ್ಪಾಲಕರು**- ಇಂದ್ರ, ಅಗ್ನಿ, ಯಮ, ನಿರ್ಯತಿ, ವರುಣ, ವಾಯು, ಕುಬೇರ, ಈಶ

**ಟಿಪ್ಪಣಿ-೩:** * (ಚತುರ್ದಶ) ಮನುಗಳು- ೧. ಸ್ವಾಯಂಭುವ, ೨. ಸ್ವಾರೋಚಿಷ, ೩. ಉತ್ತಮ, ೪. ತಾಮಸ, ೫. ರೈವತ, ೬. ಚಾಕ್ಷುಷ, ೭. ವೈವಸ್ವತ, ೮. ಸಾವರ್ಣಿ, ೯. ಧರ್ಮ, ೧೦. ಸಾವರ್ಣಿಕ, ೧೧. ಪಿಶಂಗ, ೧೨. ಅಪಿಶಂಗಾಭ, ೧೩. ಶಬಲ, ೧೪. ವರ್ಣಕ (ಶ್ರೀವತ್ಸ, ಪು-೨೨೨)

---

**ಇವರು ಮೊದಲಾಗೀಶ್ವರಾಜ್ಞೆಯ**
**ನವಗಳೆಯಲಳವಲ್ಲವೆಂದೆನೆ**
**ಶಿವಶಿವಾ! ಮೀರುವೊಡೆ ವಶವೇ? ದನುಜಮನುಜರಿಗೆ ।**

ಭವಜಲಧಿಯೊಳಗಾಳುತೇಳುತ
ಬವಣೆಬಡುತಿಹರೀಶ್ವರನ ಕೃಪೆ
ಸವನಿಸುವ ಪರಿಯಂತ ಗತಿಯನು ಕಾಣರವರೆಂದ ॥ ॥೪೭॥

ತಾತ್ಪರ್ಯ: ಇಂದ್ರ, ಸಮುದ್ರರಾಜ, ದಿಕ್ಪಾಲಕರು, ಮನುಮುನಿಗಳು, ಕುಲಾದ್ರಿಗಳು, ಈಶ್ವರನ ಅಪ್ಪಣೆಯನ್ನು ಅನುಸರಿಸಲಾಗುವುದಿಲ್ಲವೆಂದು ಹೇಳಲು ಶಕ್ಯವಿಲ್ಲ ಎಂದ ಮೇಲೆ ಅಕ್ಕಟಕ್ಕಟಾ (ಶಿವ ಶಿವಾ) ಇನ್ನುದಾನವರಿಗೆ ಮಾನವರಿಗೆ ಈಶ್ವರಾಜ್ಞೆಯನ್ನು ಅತಿಕ್ರಮಿಸಲು ಶಕ್ಯವೇ? ಸಂಸಾರ ಸಾಗರದಲ್ಲಿ ಮುಳುಗುತ್ತಾ ಏಳುತ್ತಾ ಒದ್ದಾಡುತ್ತಿರುವವರು. ಈ ದಾನವ ಮಾನವರಿಗೆ ಈಶ್ವರಾನುಗ್ರಹ ಸಿಗುವವರೆಗೆ ಮುಕ್ತಿಯನ್ನು ಹೊಂದಲಾರರು.

ಶಬ್ದಾರ್ಥ: ಇವರು=ಹಿಂದೆ ಹೇಳಿದ ಇಂದ್ರ, ಸಮುದ್ರರಾಜ, ದಿಕ್ಪಾಲಕರು, ಮನು ಮುನಿಗಳು, ಕುಲಾದ್ರಿಗಳು, ಅವಗಳೆಯಲು=ಮಾಡುವುದಿಲ್ಲವೆಂದು ಹೇಳಲು; ಬವಣೆ (ಭ್ರಮಣೆ)=ಕಷ್ಟ, ಒದ್ದಾಡುತ್ತಿರುವವರು; ಸವನಿಸುವ=ದೊರೆಯುವ; * ಪರಿಯಂತ=ವರೆಗೆ; * ಗತಿ=ಮುಕ್ತಿ; ಭವಜಲಧಿ=ಸಂಸಾರ ಸಾಗರ

ಪಾಠಾಂತರ: ಈಶ್ವರಾಜ್ಞೆಯ ನವಗಳೆಯಲು=ನವಗಣಿಸಲು (ಕು); ಮೀರುವರೆ=ಮೀರುವಡೆ (ಕು)

---

ಕಾಲ, ಕರ್ಮಾಧೀನವೆಂಬರು;
ಕೇಳು ದೈವದ ಸೂತ್ರವೆಂಬರು;
ಮೇಳಯಿಪ ಗ್ರಹಗತಿಗಳೆಂಬರು; ಪ್ರಾರಬುಧವೆಂದು; ।
ಭಾಳಲಿಖಿತವಿದೆಂದು; ಪ್ರಾಪ್ತಿಯ
ಮೂಲವೆಂದದದೃಷ್ಟವೆಂದದ
ಹೇಳುವರು ಬಲ್ಲವರಿದೀಶ್ವರನಾಜ್ಞೆಯೆಂದೆನುತ ॥ ॥೪೮॥

ತಾತ್ಪರ್ಯ: ಕುಮಾರನೆ ಕೇಳು, ಈ ನಾವು ಅನುಭವಿಸುವ ಕರ್ಮವನ್ನುಕುರಿತು ಹಲವುಬಗೆಯಾಗಿ ವ್ಯಾಖ್ಯಾನಿಸುತ್ತಾರೆ. ಕೆಲವರು ಈ ಅದೃಷ್ಟವನ್ನು ಅನುಭವಿಸುವ ಕಾಲವೆನ್ನುತ್ತಾರೆ, ಕರ್ಮಾಧೀನವನ್ನು ಇನ್ನುಕೆಲವರು ಭಗವಂತನಶಾಸನವೆನ್ನುವರು, ಮತ್ತೆಕೆಲವರು ಗ್ರಹಗತಿಗಳಿಂದ ಒದಗುವ ಪರಿಣಾಮವೆನ್ನುವರು. ಇನ್ನೂ ಕೆಲವರು ಪ್ರಾರಬ್ಧಕರ್ಮವೆಂದು, ಹಣೆಬರಹವೆಂದೂ, ನಮಗೆ ಲಭ್ಯವಾಗುವ ಭಾಗ್ಯದ ಆಧಾರವೆಂದೂ, ಕಾಣದ ಕೈವಾಡವೆಂದೂ ಭಗವಂತನ ಅನುಗ್ರಹವೆಂದೂ ತಿಳಿದವರು ಹೇಳುತ್ತಾರೆ.

ಶಬ್ದಾರ್ಥ: ಕಾಲ=ಈ ಅದೃಷ್ಟವನ್ನು ಅನುಭವಿಸುವ ಕಾಲವನ್ನು; ಮೇಳಯಿಪ=ಕೂಡುವ; ಭಾಳ=ಹಣೆ * ಲಿಖಿತ=ಬರಹ; * ಪ್ರಾಪ್ತಿಯ ಮೂಲ=ಲಭ್ಯವಾಗಲು ಆಧಾರ; * ಅದೃಷ್ಟ= ಕಾಣದ ಶಕ್ತಿಯ ಕೈವಾಡ; * ಈಶ್ವರಾಜ್ಞೆ=ಭಗವಂತನ ಅನುಗ್ರಹ; * ಬಲ್ಲವರು=ತಿಳಿದವರು ಜ್ಞಾನಿಗಳು

---

## ಬೇರೆಬೇರೆ ಮದಗಳು (೪೯-೬೪)

**ಇದನರಿಯದೀ ನರಸುರಾಸುರ**
**ರಧಿಕವಹ ಮೋಹಾಂಧಕಾರದ**
**ಉದಿಸಿದೀ ಹಮ್ಮಿನ ವಿಕಾರದ ಮದದ ಗರ್ವದಲಿ ।**
**ಮದಿಸಿ ಕುಲ, ಬಲ, ರೂಪು, ಯೌವನ,**
**ಸುದತಿ, ಸಂಪದ್ವಿದ್ಯೆ, ತಪವೆಂ**
**ಬುದರೊಳೊಡಲನು ಮರೆದು ಕೆಡುತಿಹರೆಂದನಾ ಮುನಿಪ ॥ ॥೪೯॥**

**ತಾತ್ಪರ್ಯ:** ಈ ಕರ್ಮದ ವಿಷಯವನ್ನು ಅರ್ಥಮಾಡಿಕೊಳ್ಳದೆ ಮಾನವರು, ದೇವತೆಗಳು, ರಾಕ್ಷಸರು, ಅತಿಯಾದಮೋಹವೆಂಬ ಕಗ್ಗತ್ತಲೆಯಲ್ಲಿ ಹುಟ್ಟಿದ ಅಹಂಕಾರವೆಂಬ ಗರ್ವದಿಂದ ಉನ್ಮತ್ತರಾಗಿ ಕುಲ, ಬಲ, ರೂಪು, ಯೌವನ, ಹೆಂಡತಿ, ಸಂಪತ್ತು, ವಿದ್ಯೆ, ತಪಸ್ಸು ಎಂಬ ಅಷ್ಟಮದಗಳಿಂದ ಮೈಮೇಲೆ ಎಚ್ಚರವಿಲ್ಲದೆ ನಾಶವಾಗುತ್ತಿದ್ದಾರೆ ಎಂದು ವ್ಯಾಸರು ಶುಕನಿಗೆ ಹೇಳಿದರು.

**ಶಬ್ದಾರ್ಥ:** * **ಸುರ**=ದೇವತೆ; * **ಅಸುರ**=ರಾಕ್ಷಸರು; * **ಮೋಹಾಂಧಕಾರ**=ಮೋಹವೆಂಬ ಕಗ್ಗತ್ತಲೆ * **ಹಮ್ಮಿನ**=ಅಹಂಕಾರದ; * **ಅಷ್ಟಮದಗಳು**= ಕುಲ, ಬಲ, ರೂಪ, ಯೌವನ, ಸುದತಿ, ಸಾಧನ, ಸಂಪತ್ತು, ವಿದ್ಯೆ ಇವುಗಳನ್ನು ಎಂಟು ಬಗೆ ಮದಗಳೆಂದು ಕರೆಯುತ್ತಾರೆ. **ಕೆಡುತಿಹರು**=ನಾಶವಾಗುತ್ತಿದ್ದಾರೆ; * **ಒಡಲನುಮರೆದು**=ಮೈಮರೆತು

---

**ತನ್ನ ಭುಜಗಳ ನೋಡಿಕೊಂಬನು;**
**ಸನ್ನೆಯನು ಮಾಡುವನು ಕಣ್ಣಿನ**
**ಲನ್ಯರೊಡಲನು ಕೆಲಕೆ ಕೆಡಹುತೆ ಗಹಗಹಿಸಿ ನಗುವ; ।**
**ತನ್ನತಂದನವೆಂದು ಪಾಡುವ;**
**ಕೆನ್ನೆಯಲಿ ತುರುಬಿಡುವನೊರಗಿಸಿ;**
**ಕುನ್ನಿ ಯೌವನವೆಂಬ ಸನ್ನಿವಿಕಾರವೆಡೆಗೊಂಡು ॥ ॥೫೦॥**

**ತಾತ್ಪರ್ಯ:** ಕ್ಷುದ್ರನಾದ ಮಾನವನು ಯೌವನಕಾಲದಲ್ಲಿ ತನ್ನ ದೇಹಶಕ್ತಿಗೆ ಸಮಾನವಾಗಿ ಇತರರು ಇಲ್ಲವೆಂದು ಭುಜಗಳನ್ನುಕುಣಿಸಿ ನೋಡಿಕೊಳ್ಳುತ್ತಾನೆ. ಯಾರನ್ನಾದರು ಕಂಡರೆ ಕಣ್ಸನ್ನೆ ಮಾಡುತ್ತಾನೆ. ಇತರರ ದೇಹವನ್ನು ಒದ್ದು ಪಕ್ಕಕ್ಕೆ ಬೀಳಿಸುತ್ತಾ ಗಹಗಹಿಸಿ ಅಹಂಕಾರದಿಂದ ನಗುವನು. ತನ್ನತಂದನ್ನ ಎಂದು ಕೇಕೆ ಹಾಕುತ್ತಾ ಹಾಡುವನು. ತನ್ನ ಕೆನ್ನೆಯ ಬಳಿಗೆ ಕೂದಲನ್ನು ಇಳಿ ಬಿಟ್ಟು ತುರುಬನ್ನು ಕಟ್ಟುತ್ತಾನೆ. ಹೀಗೆ ಯೌವನವೆಂಬ ಸನ್ನಿಗೆ ಒಳಗಾಗುತ್ತಾನೆ.

**ಶಬ್ದಾರ್ಥ:** **ಕೆಲಕೆ**=ಒಂದು ಪಕ್ಕಕ್ಕೆ; **ತನ್ನತಂದನ್ನ**=ಅರ್ಥವಿಲ್ಲದ ಹಾಡುಗಾರಿಕೆ; **ಕುನ್ನಿ**=ನಾಯಿಯಂಥ ಮನುಷ್ಯನು (ಇದು ಈ ಪದ್ಯದಲ್ಲಿ ಕರ್ತೃ); **ಸನ್ನಿವಿಕಾರ ವೆಡೆಗೊಂಡು**=ಸನ್ನಿಯ ವಿಕಾರವನ್ನು

ಆವರಿಸಿರುವುದರಿಂದ * ಸನ್ನಿ=ಮತಿಭ್ರಮೆ; * ತುರುಬು=ಕೂದಲನ್ನು ಗಂಟಿಕ್ಕು; * ಕೆಡಹುತೆ= ಬೀಳಿಸುತ್ತಾ.

---

**ಮಣಿಯನಾರಿಗು; ಮಾನ್ಯರನು ತಾ**
**ತೃಣಕು ಬಗೆಯನು; ಗುಣಿಗಳೊಳಗವ**
**ಗುಣವನೆಣಿಸುವ; ಕುಹಕಿಗಳು ಕೊಂಡಾಡೆ ಕೊನರುವನು; ।**
**ಅಣಕವಾಡುವನಾರನಾದರು;**
**ಸೆಣಸುವನು ಸಜ್ಜನರ ಕಂಡರೆ;**
**ಬಣಗುಮರ್ತ್ಯನು ಬರಿದೆ ಯೌವನವೆಂಬ ಗರ್ವದಲಿ ॥ ॥೫೧॥**

**ತಾತ್ಪರ್ಯ:** ವ್ಯರ್ಥವಾದ ಹರೆಯದ ಅಹಂಕಾರದಲ್ಲಿ ಹೀನಮಾನವನು ಯಾರಿಗೂ ತಲೆಬಾಗನು. ಗಣ್ಯರನ್ನು ಹುಲ್ಲಿಗಿಂತ ಕಡೆಯಾಗಿ ಭಾವಿಸುವನು. ಸದ್ಗುಣವಂತರಲ್ಲೂ ದೋಷಗಳನ್ನು ಹುಡುಕುತ್ತಾನೆ. ಕಪಟಿಗಳು ತನ್ನನ್ನು ಪ್ರಶಂಸಿಸಲು ಉಬ್ಬುತ್ತಾನೆ. ಸಿಕ್ಕವರನ್ನೆಲ್ಲ ಹಾಸ್ಯ ಮಾಡುವನು. ಸತ್ಪುರುಷರನ್ನು ಕಂಡರೆ ಜಗಳಕ್ಕಿಳಿಯುತ್ತಾನೆ.

**ಶಬ್ದಾರ್ಥ:** ಮಣಿಯನು=ಬಗ್ಗುವುದಿಲ್ಲ; ತೃಣಕೆ ಬಗೆಯನು=ಹುಲ್ಲಿಗಿಂತ ಕಡೆಯಾಗಿ ಕಾಣುವನು; ಕೊನರುವನು=ಉಬ್ಬುವನು; ಅಣಕವಾಡುವನು=ಹಾಸ್ಯ ಮಾಡುವನು

**ಪಾಠಾಂತರ:** ತೃಣಕು ಬಗೆಯನು=ಕೆಲವು ಕಡೆ ತೃಣಕೆ ಬಗೆವನು ಎಂದಿದೆ. ಎಂದರೆ ಹುಲ್ಲಿನಂತೆ ಕೀಳಾಗಿ ಕಾಣುವನು ಎಂದರ್ಥ.

---

**ರಕ್ಕಸನು ಮನೆಯವರ ಕಂಡರೆ;**
**ಕರ್ಕಶನು ನೆರೆಹೊರೆಗೆ; ಸರ್ವರ**
**ಸೊಕ್ಕಿವೆಕ್ಕಸವಾಗಿ ಗರ್ವದಿ ಧಿಕ್ಕರಿಸಿ ನುಡಿವ; ।**
**ಉಕ್ಕಿಯುರಿಯುತ್ತುತ್ತಮೋತ್ತಮ**
**ರೊಕ್ಕಲಿಗೆ ನೀರೆಳೆವನಕಟಾ!**
**ಮಕ್ಕಳಾಟಿಕೆಯಂತೆ ಕೆಕ್ಕನೆ ಕೆಲೆವನವನೆಂದ ॥ ॥೫೨॥**

**ತಾತ್ಪರ್ಯ:** ತಾರುಣ್ಯದಿಂದ ಸೊಕ್ಕಿದವನು ಮನೆಯವರ ಪಾಲಿಗೆ ರಕ್ಕಸನಾಗುತ್ತಾನೆ. ಅಕ್ಕಪಕ್ಕದವರೊಡನೆ ಕಠಿಣನಾಗಿ ನಡೆದುಕೊಳ್ಳುತ್ತಾನೆ. ಅತಿಯಾದ ಗರ್ವದಿಂದ ನಿರ್ದಯಿಯಾಗಿ ಎಲ್ಲರನ್ನೂ ತಿರಸ್ಕರಿಸಿ ಮಾತನಾಡುತ್ತಾನೆ. ಸದಾ ಆವೇಶಭರಿತನಾಗಿ ಶ್ರೇಷ್ಠರಾದವರ ಬಾಳ್ವೆಯನ್ನು ಹಾಳು ಮಾಡುವನಲ್ಲಾ ಅಯ್ಯೋ! ಇಂಥ ಸೊಕ್ಕಿನ ತರುಣನು ಮಕ್ಕಳ ಹುಡುಗಾಟದ ಹಾಗೆ ಅಟ್ಟಹಾಸದಿಂದ ಇದ್ದಕ್ಕಿದ್ದಂತೆ ಕೇಕೆ ಹಾಕುತ್ತಾನೆ. ಈ ರೀತಿ ವರ್ತನೆಗಳಿಂದ ಎಲ್ಲರಿಗೂ ದುಷ್ಟನಾಗಿ ವರ್ತಿಸುತ್ತಾನೆ.

**ಶಬ್ದಾರ್ಥ:** ಒಕ್ಕಲಿಗೆ ನೀರೆಳೆವನು=ಅವರ ಬಾಳುವಿಕೆಯನ್ನು ಹಾಳು ಮಾಡುವನು ಕೆಲೆವನು= ಆನಂದದಿಂದ ಗಟ್ಟಿಯಾಗಿ ಕೂಗುವನು * ಕರ್ಕಶನು=ಅತಿ ಕಠಿಣನು; ರಕ್ಕಸನು=ಕ್ರೂರಿ;

* ವೆಕ್ಕಸ=ನಿರ್ದಯಿ; * ಉಕ್ಕಿಉರಿಯುತ=ಆವೇಶಭರಿತನಾಗಿ; * ಕೆಕ್ಕನೆ=ಇದ್ದಕ್ಕಿದ್ದಂತೆ; * ಮಕ್ಕಳಾಟಿಕೆ=ಮಕ್ಕಳ ಹುಡುಗಾಟಿಕೆ

---

**ಲಶುನಮಾಂಸಕಳಂಜಮದ್ಯಗ**
**ಳಶನ; ವಾರಾಂಗನೆಯರಲಿ ದು**
**ರ್ವ್ಯಸನ; ಪಿಸುಣರ ಹಿಂಸಕರ ಗಡಣದಲಿ ನೆರೆಗೋಷ್ಠಿ; ।**
**ಹುಸಿಯನುಡಿ; ಹೊಸಪರಿಯ ವೇಷದಿ**
**ಹಸಿಯ ತುರಕನವೋಲು ಕತ್ತಿಯ**
**ಕೊಸರಿ ಝುಳಪಿಸಿ ಕೂಗಿ ಕೊನರುವನೊಡಲ ನೇವರಿಸಿ ॥ ॥೫೩॥**

**ತಾತ್ಪರ್ಯ:** ಬೆಳ್ಳುಳ್ಳಿ, ಸಾಕು ಪ್ರಾಣಿಗಳ ಮಾಂಸ, ಬೇಟೆಯಾಡಿದ ಕಾಡುಪ್ರಾಣಿಗಳ ಮಾಂಸ, ಮದ್ಯ ಮೊದಲಾದ ಆಹಾರ ಪದಾರ್ಥಗಳನ್ನು ತಿನ್ನುವುದು; ವೇಶ್ಯೆಯರ ಒಡನಾಟದ ಚಟ; ಚಾಡಿಕೋರರ ಹಿಂಸಾಚಾರಿಗಳ ಗುಂಪಿನಲ್ಲಿ ಕಾಲಹರಣ, ಸುಳ್ಳಾಡುವುದು, ಬಗೆ ಬಗೆಯ ವೇಷಗಳನ್ನು ಧರಿಸುವುದು, ಮುಂತಾದ ದುರ್ವರ್ತನೆಗಳಿಂದ ಪ್ರಾಯಮದದ ಆಕ್ರಮಣಕಾರಿಯ ಹಾಗೆ ಕತ್ತಿಯನ್ನು ಒರೆಯಿಂದ ಸೆಳೆದು ಝುಳಪಿಸುತ್ತಾ ಎದೆಯನ್ನು ಉಬ್ಬಿಸಿಕೊಂಡು ಆರ್ಭಟಿಸುತ್ತಾ ಮೆರೆಯುತ್ತಾನೆ.

**ಶಬ್ದಾರ್ಥ:** ಲಶುನ=ಬೆಳ್ಳುಳ್ಳಿ; ಕಳಂಜ=ವಿಷಯುಕ್ತವಾದ ಬಾಣದಿಂದ ಸತ್ತಮೃಗಪಕ್ಷಿಗಳ ಮಾಂಸ; ಪಿಶುಣರ=ಚಾಡಿಕೋರರ; ಹಸಿಯ=ಪ್ರಾಯಮದವುಳ್ಳ; ತುರುಕನವೋಲು=ಆಕ್ರಮಣಕಾರಿ ಹಾಗೆ; ಒಡಲನೇವರಿಸಿ=ಎದೆಯನ್ನು ಉಬ್ಬಿಸಿಕೊಂಡು; * ಕೊನರುವನು =ಮೆರೆಯುವನು; * ಕೂಗಿ =ಆರ್ಭಟಿಸುತ್ತಾ; * ಹುಸಿಯನಾಟ=ಸುಳ್ಳಾಡುವುದು; ಹಿಂಸಕರ ಗಡಣ=ಹಿಂಸಾಚಾರಿಗಳ ಹಿಂಡು; * ಕೊಸರಿ=ಸೆಳೆದು

---

**ತರ್ಕಶಾಸ್ತ್ರವ ಕಲಿತು, ವಾದದ**
**ಲುಕ್ಕಿ, ವೆಕ್ಕಸವಾಗಿ ಮಾನ್ಯರ**
**ಧಿಕ್ಕರಿಸಿ, ಸರ್ವಂಕಷತ್ವದಿ ಗರ್ವವೆಡೆಗೊಂಡು ।**
**ಬೆಕ್ಕನೇ ಬೆರೆತಿಹ ದುರಾತ್ಮನು**
**ಸೊಕ್ಕಿ ತಾ ಸರ್ವಜ್ಞನೆಂದು ಪ**
**ರಾಕ್ರಮದೊಳೊಡಲರಿಯ ವಿದ್ಯೋನ್ಮಾದವೆಡೆಗೊಂಡು ॥ ॥೫೪॥**

**ತಾತ್ಪರ್ಯ:** ವಿದ್ಯಾಮದದ ಪರಿಣಾಮವನ್ನು ಇಲ್ಲಿ ಹೇಳಲಾಗಿದೆ. ತರ್ಕಶಾಸ್ತ್ರವನ್ನು ಅಭ್ಯಾಸ ಮಾಡಿ ವಾದ ಚಾತುರ್ಯದಿಂದ ಉಬ್ಬಿ ಗರ್ವಿಷ್ಠನಾಗಿ ಹಿರಿಯರನ್ನು ಕಡೆಗಣಿಸಿ, ಎಲ್ಲರನ್ನು ವಾದದಲ್ಲಿ ಸೋಲಿಸುವೆನೆಂಬ ಮದದಲ್ಲಿ ಪೂರ್ಣವಾಗಿ ಮುಳುಗಿರುವ ದುಷ್ಟನು ತಾನೇ ಎಲ್ಲವನ್ನೂ ಅರಿತವನೆಂದು ಸರ್ವಜ್ಞನೆಂದು ಬೀಗುತ್ತಾ ವಿದ್ಯಾಗರ್ವದಿಂದ ಕೂಡಿ ಮೈಮೇಲೆ ಎಚ್ಚರವಿಲ್ಲದೆ ಹುಚ್ಚನಂತೆ ವರ್ತಿಸುವನು.

**ಶಬ್ದಾರ್ಥ:** * ವಾದದಲುಕ್ಕಿ=ವಾದ ಚಾತುರ್ಯದಿಂದ ಕೊಬ್ಬಿ; * ವೆಕ್ಕಸನಾಗಿ=ಗರ್ವಿಷ್ಠನಾಗಿ * ಮಾನ್ಯರನ್ನು=ಪೂಜ್ಯರನ್ನು; * ವಿದ್ಯೋನ್ಮಾದ=ವಿದ್ಯಾಗರ್ವ; ಒಡಲರಿಯ=ಮೈಮೇಲೆ ಎಚ್ಚರವಿಲ್ಲದವ, ಮದೋನ್ಮತ್ತ; ಬೆಕ್ಕನೆ=ಪೂರ್ಣವಾಗಿ

---

ಎನ್ನ ತಾಯಿ ಕುಲಕ್ಕೆ ಮಿಗಿಲಹ
ಳೆನ್ನ ಸತಿಯಳ ಹರೆಯವಾರಿಗೆ?
ಎನ್ನ ಪಿತನಿಂದಧಿಕರಾರೆನಗಾರು ಸರಿಯೆಂದು ।
ತನ್ನ ತಾ ಕೊಂಡಾಡುತನ್ಯರ
ಚುನ್ನವಾಡುವ; ಹೆಮ್ಮೆಯಿಂದವ
ತನ್ನ ನಗುವರನರಿಯ; ಕುಲಮದವೆಂಬ ಗರಹೊಡೆದು ॥ ॥೫೫॥

**ತಾತ್ಪರ್ಯ:** ಕುಲಮದವೆಂಬ (ಜಾತಿಯ ಸೊಕ್ಕಿನಿಂದ) ಭೂತಹಿಡಿದವರ ವರ್ತನೆ ಹೀಗಿರುತ್ತದೆ: ನನ್ನ ತಾಯಿಯ ವಂಶವೇ ಶ್ರೇಷ್ಠ; ನನ್ನ ಹೆಂಡತಿಯ ತಾರುಣ್ಯ ರೂಪವು ಇನ್ನಾರಿಗಿದೆ? ನನ್ನ ತಂದೆಗಿಂತ ಉತ್ತಮರು ಮತ್ತಾರು? ಇನ್ನು ನನಗೆ ಸರಿಸಮರು ಯಾರಿದ್ದಾರೆ? ಎಂಬುದಾಗಿ ಆತ್ಮಸ್ತುತಿ ಮಾಡಿಕೊಳ್ಳುತ್ತಾನೆ. ಆದರೆ ತನ್ನ ಕುಲಮದವನ್ನು ನೋಡಿ ಇತರರು ಅಪಹಾಸ್ಯದಿಂದ ನಗುತ್ತಾರೆ ಎಂಬುದನ್ನು ಅವನು ತಿಳಿಯುವುದಿಲ್ಲ.

**ಶಬ್ದಾರ್ಥ:** ಚುನ್ನವಾಡುವ=ಹಾಸ್ಯ ಮಾಡುವನು; ಗರ=ವಿಷ ಅಥವಾ ಗ್ರಹ (ಭೂತ) * ಮಿಗಿಲು=ಶ್ರೇಷ್ಠ; * ಹರೆಯವು=ತಾರುಣ್ಯ, ರೂಪ; * ಪಿತ=ತಂದೆ; * ತನ್ನ ತಾ ಕೊಂಡಾಡುತ= ಆತ್ಮಸ್ತುತಿ ಮಾಡಿಕೊಳ್ಳುತ್ತಾ; * ನಗುವರನು=ಅಪಹಾಸ್ಯ ಮಾಡುವರನ್ನು; * ಕುಲ ಮದ=ಜಾತಿ ಸೊಕ್ಕು

**ಟಿಪ್ಪಣಿ:** * ಅಷ್ಟಮದಗಳಲ್ಲಿ ಒಂದಾದ ಕುಲಮದದಿಂದ ಪೀಡಿತನಾದವನ ವರ್ತನೆಗಳನ್ನು ಇಲ್ಲಿ ವರ್ಣಿಸಿದೆ.

---

ಯೋಗಸಿದ್ಧಿಯ ಪಡೆದು, ರಾಜ್ಯದ
ಭೋಗವನು ಭೋಗಿಸಿ, ಪರಾಕ್ರಮಿ
ಯಾಗಿ, ಸಪ್ತದ್ವೀಪಗಳಿಗಧಿಪತಿಯು ತಾನೆನಿಸಿ, ।
ಯೋಗಿಯಾಗಿಹ ಕಾರ್ತವೀರ್ಯನು
ಭಾರ್ಗವನ ಪರಶುವಿಗೆ ಭುಜಗಳ
ನೀಗಿ ಕಳೆದನು ರಾಜ್ಯಮದದಲಿ ಮಗನೆ ಕೇಳೆಂದ ॥ ॥೫೬॥

**ತಾತ್ಪರ್ಯ:** ಯೋಗವಿದ್ಯಾಪ್ರಾವೀಣ್ಯ ಸಾಧಿಸಿ, ರಾಜ್ಯಾಧಿಕಾರದಿಂದ ಸಿಗುವ ಸಮಸ್ತ ಸುಖಗಳನ್ನು ಅನುಭವಿಸುತ್ತಾ ದಿಗ್ವಿಜಯದಿಂದ ಅಪ್ರತಿಮವೀರನಾಗಿ ಏಳುದ್ವೀಪ ಗಳನ್ನು ಗೆದ್ದು ಸಾರ್ವಭೌಮನೆನಿಸಿಕೊಂಡ ಯೋಗಿವರೇಣ್ಯನಾದ ಕಾರ್ತವೀರ್ಯ

ಚಕ್ರವರ್ತಿ ರಾಜ್ಯಮದದಿಂದ ಪರಶುರಾಮನನ್ನು ಎದುರಿಸಿ ಅವನ ಕೊಡಲಿಗೆ ಬಲಿಯಾಗಿ ತನ್ನಪ್ರಾಣವನ್ನು ಕಳೆದುಕೊಂಡನು ಎಂಬುದಾಗಿ ರಾಜ್ಯಮದದ ದುಷ್ಪರಿಣಾಮವನ್ನು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ: * ಯೋಗ ಸಿದ್ಧಿ=ಅಷ್ಟಯೋಗಗಳ ಪ್ರಾವೀಣ್ಯ; * ಭೋಗ=ಸುಖ; * ಪರಾಕ್ರಮಿ =ಸಾಹಸಿ * ಭಾರ್ಗವ=ಪರಶುರಾಮ; * ಪರಶು=ಕೊಡಲಿ; * ಭುಜಗಳ ನೀಗಿ ಕಳೆದನು** =ಪ್ರಾಣವನ್ನು ಕಳೆದುಕೊಂಡನು

**ಟಿಪ್ಪಣಿ-೧: ಸಪ್ತ ದ್ವೀಪಗಳು-** ೧. ಜಂಬೂ, ೨. ಪ್ಲಕ್ಷ, ೩. ಶಾಲ್ಮಲೀ, ೪. ಕುಶ, ೫. ಕ್ರೌಂಚ, ೬. ಶಾಕ, ೭. ಪುಷ್ಕರ (ವಿಷ್ಣು ಪುರಾಣ: ೨-೧-೧೧-೧೫)

## ಪೂರ್ವಕಥೆ : ಕಾರ್ತವೀರ್ಯನ ಕಥೆ

ಕಾರ್ತವೀರ್ಯನೆಂಬ ಕ್ಷತ್ರಿಯನು ತಪಸ್ಸನ್ನು ಮಾಡಿ ಸಹಸ್ರಬಾಹುಗಳನ್ನು ಪಡೆದ. ಅವುಗಳ ಬಲದಿಂದ ಉನ್ಮತ್ತನಾಗಿ ನಡೆಯುತ್ತಿದ್ದನು. ದೇವತೆಗಳು ಇವನಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು ಯೋಚಿಸಿ ಆ ಕಾರ್ಯವನ್ನು ಅಗ್ನಿಗೊಪ್ಪಿಸಿದರು. ಅಗ್ನಿಯು ಒಂದು ದಿನ ಬ್ರಾಹ್ಮಣವೇಷದಿಂದ ಅವನಬಳಿಗೆ ಯಾಚಕನಾಗಿ ಬಂದನು. ಏನು ಬೇಡಿದರೂ ಕೊಡುತ್ತೇನೆಂದು ಕಾರ್ತವೀರ್ಯನು ಹಿಂದುಮುಂದು ನೋಡದೆ ಮೊದಲೇ ಹೇಳಿಬಿಟ್ಟನು. ಆಮೇಲೆ ಅಗ್ನಿಯು ತನಗೆ ಜಗತ್ತಿನಲ್ಲಿರುವ ವನಗಳೆಲ್ಲಾ ಬೇಕೆಂದು ಕೇಳಿದನು. ರಾಜನು ಮಾತಿಗೆ ಕಟ್ಟುಬಿದ್ದು ಅವನ ಹಿಂದೆ ತಾನೂಹೊರಟು ಅವನಿಗೆ ಪ್ರತಿಬಂಧಕವಿಲ್ಲದೆ ಎಲ್ಲಾ ವನಗಳೂ ದೊರೆಯುವಂತೆ ಮಾಡಿದನು. ಈ ಸಡಗರದಲ್ಲಿ ವಸಿಷ್ಠರು ಆಶ್ರಮದಲ್ಲಿಲ್ಲದಾಗ ಅವರ ಆಶ್ರಮವೂ ಸುಟ್ಟು ಬೂದಿಯಾಯಿತು. ಆಗ ಅವರು ನಿನ್ನ ರಾಜ್ಯತ್ವದಮದವು ಸ್ವಲ್ಪ ದಿವಸಗಳಲ್ಲಿಯೇ ನಾಶವಾಗಲೆಂದು ಶಾಪವನ್ನು ಕೊಟ್ಟರು. ಆಮೇಲೆ ಕಾರ್ತವೀರ್ಯಾರ್ಜುನನ ಮಕ್ಕಳು ಜಮದಗ್ನಿ ಋಷಿಗಳ ಆಶ್ರಮಕ್ಕೆ ಹೋಗಿ ಅವರ ಮಗನಾದ ಪರಶುರಾಮನನಿಲ್ಲದಿರುವಾಗ ಬಲಾತ್ಕಾರದಿಂದ ಅವರ ಧೇನುವನ್ನು ಅಪಹಾರ ಮಾಡಿಕೊಂಡು ಹೋದರು. ಪರಶುರಾಮನು ಆಶ್ರಮಕ್ಕೆ ಬಂದು ಈ ಸುದ್ದಿಯನ್ನು ಕೇಳುತ್ತಲೇ ಕಾರ್ತವೀರ್ಯನ ಮೇಲೆ ಹೋಗಿ ಗೆದ್ದು ಆ ಧೇನುವನ್ನು ತಿರುಗಿ ತಂದನು. ಆಗ ಕಾರ್ತವೀರ್ಯನ ಮಕ್ಕಳು ಊರಲ್ಲಿರಲಿಲ್ಲ. ಊರಿಗೆ ಬರುತ್ತಲೇ ಆ ಮಕ್ಕಳೆಲ್ಲರೂ ಪರಶುರಾಮನಿಂದ ತಮ್ಮ ತಂದೆಗೆ ಆದ ಅವಮಾನಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಬಂದು ಜಗದಗ್ನಿ ಋಷಿಗಳನ್ನೇ ಕೊಂದು ಹಾಕಿದರು. ಆಗ ಪರಶುರಾಮನು ಅದರಿಂದ ಕ್ರುದ್ಧನಾಗಿ ಕಾರ್ತವೀರ್ಯನನ್ನೂ ಅವನ ಎಲ್ಲಾ ಮಕ್ಕಳನ್ನೂ ಯಮಲೋಕಕ್ಕೆ ಕಳುಹಿಸಿದ್ದಲ್ಲದೆ ಇಪ್ಪತ್ತೊಂದು ಸಲ ಭೂಮಿಯನ್ನೆಲ್ಲಾ ಸುತ್ತಿ ಸುತ್ತಿ ದುಷ್ಟ ಕ್ಷತ್ರಿಯರ ಹೆಸರಿಲ್ಲದಂತೆ ಮಾಡಿದನು.

---

**ಹೆಚ್ಚಿದತಿಕೋಪದಿ ತಪಸ್ಸಿನ**
**ಹೆಚ್ಚಳದೊಳಿಂದ್ರನ ಸಮೃದ್ಧಿಯ**
**ತುಚ್ಛವಾಗಿಯೇ ಮಾಡಿದನು ದುರ್ವಾಸ ರೋಷದಲಿ; ।**
**ಸಚ್ಚರಿತನಾದಂಬರೀಷಗೆ**
**ಮಚ್ಚರಿಸಲಚ್ಯುತನ ಚಕ್ರವು**
**ಹುಚ್ಚು ಮಾಡಿತು; ಗರ್ವವಾರಿಗು ಸರ್ವಥಾ ಬೇಡ ॥ ॥೫೭॥**

**ತಾತ್ಪರ್ಯ:** ದುರ್ವಾಸಮುನಿ ತನ್ನ ತಪಸ್ಸು ಅಧಿಕವಾದುದು ಎಂಬ ಗರ್ವದಲ್ಲಿ ರೋಷದಿಂದ ಉದ್ರಿಕ್ತನಾಗಿ ಇಂದ್ರನ ಸಿರಿವೈಭವವನ್ನು ಅಲ್ಪವನ್ನಾಗಿ ಮಾಡಿದನು (ನಾಶ ಮಾಡಿದನು). ಸದ್ಭಕ್ತನಾದ ಅಂಬರೀಷ ಮಹಾರಾಜನ ಬಗ್ಗೆ ದುರ್ವಾಸ ಅಹಂನಿಂದ ಅಸೂಯಾಪರನಾದಾಗ ವಿಷ್ಣು ತನ್ನ ಸುದರ್ಶನಚಕ್ರದಿಂದ ಲೋಕ ಲೋಕಗಳಲ್ಲಿ ಅಲೆದಾಡಿಸಿ ಅವನಲ್ಲಿ ದಿಗ್ಭ್ರಮೆ ಮೂಡಿಸಿದನು. ಆದಕಾರಣ ಎಂದಿಗೂ ಯಾರೂ ಗರ್ವಿಸಬಾರದು.

**ಶಬ್ದಾರ್ಥ: ಹೆಚ್ಚಳ=ಗರ್ವ; * ಸಮೃದ್ಧಿ=ಸಿರಿ, ವೈಭವ; * ತುಚ್ಛವಾಗಿ=ಅಲ್ಪವನ್ನಾಗಿ; * ಸಚ್ಚರಿತ =ಸದ್ಭಕ್ತ * ಮಚ್ಚರಿಸು=ಅಸೂಯೆಪಡು; * ಅಚ್ಯುತ=ವಿಷ್ಣು; * ಚಕ್ರ=ಸುದರ್ಶನ ಚಕ್ರ; * ಹುಚ್ಚು ಮಾಡಿತು=ದಿಗ್ಭ್ರಮೆ ಹಿಡಿಸಿತು.**

## ಪೂರ್ವಕಥೆ–೧: ದೂರ್ವಾಸರ ಗರ್ವ

ಮಹಾವಿಷ್ಣುಭಕ್ತನಾದ ಅಂಬರೀಷನೆಂಬ ರಾಜನು ಬಹುನಿಯಮದಿಂದ ದ್ವಾದಶೀ ವ್ರತವನ್ನು ನಡೆಸುತ್ತಿದ್ದನು. ಒಂದುದಿನ ಸಾಧನೀದ್ವಾದಶಿ ಎಂದರೆ ಆ ದಿವಸ ದ್ವಾದಶೀತಿಥಿಯು ಒಂದೆರಡುಗಳಿಗೆ ಮಾತ್ರವಿರುವದು. ಅಷ್ಟರೊಳಗಾಗಿ ಪಾರಣೆಯಾಗಿಯೇ ತೀರಬೇಕು. ಇಂಥದಿವಸ ದೂರ್ವಾಸರು ಅವನ ಮನೆಗೆ ಬಂದರು. ರಾಜನು ಅವರನ್ನು ಆದರಿಸಿ ಆದಿನದ ಆತಿಥ್ಯಕ್ಕೆ ಮಂತ್ರಾಕ್ಷತೆಯನ್ನು ಕೊಟ್ಟನು. ಅವರು ಅದನ್ನು ಸ್ವೀಕರಿಸಿ ಸ್ನಾನಕ್ಕಾಗಿ ನದಿಗೆ ಹೋದರು. ಅವರು ಶಿವಭಕ್ತರಾಗಿದ್ದದ್ದರಿಂದ ವೈಷ್ಣವ ಪ್ರಧಾನವಾದ ಈ ದ್ವಾದಶಿಯ ನೆನಪು ಬರಲಿಲ್ಲವೋ ಏನೋ! ಅಂತು ಅವರು ಬರುವದು ತಡವಾಯಿತು. ಆಗ ರಾಜನು ಉಭಯಸಂಕಟದಲ್ಲಿ ಬಿದ್ದನು. ಪಾರಣೆಯನ್ನು ಮಾಡದೆಬಿಟ್ಟರೆ ವ್ರತವು ಭಂಗವಾಗುವದು. ಪಾರಣೆಯನ್ನು ಮಾಡಿ ಬಿಟ್ಟರೆ ಅತಿಥಿಯನ್ನು ಉಪೇಕ್ಷೆಮಾಡಿದ ದೋಷಬರುವದು. ಇವೆರಡನ್ನೂ ತೂಕಕ್ಕೆ ಹಾಕಿ ನೋಡಿ ರಾಜನು ತೀರ್ಥಪ್ರಾಶನದ ಮೇಲೆ ತನ್ನ ಪಾರಣೆಯನ್ನು ಮುಗಿಸಿ ಊಟಕ್ಕೆ ಅತಿಥಿಗಾಗಿ ಕಾದುಕೊಂಡು ಕುಳಿತನು. ದೂರ್ವಾಸರು ತಮ್ಮ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಬಂದು ನೋಡುತ್ತಲೆ ತಮ್ಮ ಜ್ಞಾನದೃಷ್ಟಿಯಿಂದ ಅಲ್ಲಿ ನಡೆದ ಸಂಗತಿಯನ್ನೂಹಿಸಿದರು. ಒಡನೆ ಅವರು ತಮಗೆ ಅವಮಾನವಾಯಿತೆಂದು ಕ್ರುದ್ಧರಾಗಿ ರಾಜನ ಮೇಲೊಂದು ಭೂತವನ್ನು ಬಿಟ್ಟರು. ಭಗವದಾಜ್ಞೆಯಿಂದ ಆ ರಾಜನನ್ನು ರಕ್ಷಣೆ ಮಾಡಿಕೊಂಡಿದ್ದ ಚಕ್ರವು ಆ ಭೂತವನ್ನು ನುಂಗಿದ್ದಲ್ಲದೆ ಆ ದೂರ್ವಾಸರನ್ನೇ ನುಂಗುವುದಕ್ಕೆ ಹೊರಟಿತು. ಅದರ ಬೇಗೆಯನ್ನು ತಡೆಯಲಾರದೆ ದೂರ್ವಾಸರು ಬ್ರಹ್ಮನಿಗೂ, ಶಿವನಿಗೂ ಮೊರೆ ಹೊಕ್ಕು ಅಲ್ಲಿ ತಮ್ಮ ರಕ್ಷಣೆಯನ್ನು ಕಾಣದೆ ವಿಷ್ಣುವಿಗೆ ಶರಣುಹೊಕ್ಕರು. ವಿಷ್ಣು ತನ್ನ ಭಕ್ತರಿಗಿಂತ ತಾನು ಹೆಚ್ಚಿನವನಲ್ಲವೆಂದು ಹೇಳಿ ಅವರನ್ನು ಅಂಬರೀಷನ ಕಡೆಗೆ ಕಳುಹಿಸಿದನು. ದೂರ್ವಾಸರು ಅಂಬರೀಷನ ಬಳಿಗೆ ಬಂದು ಶರಣೆನ್ನುತ್ತಲೇ ಅಂಬರೀಷನು ತನ್ನ ಸ್ತೋತ್ರದಿಂದ ಚಕ್ರವನ್ನು ಶಾಂತಮಾಡಿದನು. ದೂರ್ವಾಸರು ಆ ಚಕ್ರದದೆಸೆಯಿಂದ ತಿರುಗಿಕೊಂಡು ಬರುವ ಹೊತ್ತಿಗೆ ಒಂದು ವರ್ಷವಾಗಿತ್ತು. ಅಲ್ಲಿಯವರೆಗೂ ಊಟವನ್ನು ಮಾಡದೆ ಅತಿಥಿಗಾಗಿ ಕಾದಿದ್ದ ಆ ರಾಜನು ಆ ದಿನ ಅತಿಥಿಯೊಡನೆ ಭೋಜನವನ್ನು ಮಾಡಿದನು. ಹೀಗೆ ದೂರ್ವಾಸರು ತಮ್ಮ ಗರ್ವದಿಂದ ಬರೀ ಹೊಟ್ಟೆಯಲ್ಲಿ ಒಂದು ವರ್ಷ ಅಲೆದಾಡಬೇಕಾಯಿತು.

## ಪೂರ್ವಕಥೆ-೨: ಇಂದ್ರನ ಗರ್ವ

ಒಂದಾನೊಂದು ಉತ್ಸವಕಾಲದಲ್ಲಿ ಇಂದ್ರನು ತನ್ನ ಐರಾವತದ ಮೇಲೆ ಮೆರವಣಿಗೆಯಲ್ಲಿ ಹೊರಟಿದ್ದನು. ಆ ದಿನ ಕೃಷ್ಣಪಕ್ಷದ ಚತುರ್ದಶಿಯಾಗಿತ್ತು. ದೂರ್ವಾಸರು ಆ ದಿನ ಶಿವಲೋಕದ ಯಾತ್ರೆಯನ್ನು ಮಾಡಿಕೊಂಡು ಅದೇ ಮಾರ್ಗವಾಗಿ ಬರುತ್ತ ಇಂದ್ರನನ್ನು ಕಾಣುತ್ತಲೇ ತಮ್ಮ ಕೈಯ್ಯಲ್ಲಿದ್ದ ಶಿವಪ್ರಸಾದವಾದ ಮಾಲಿಕೆಯನ್ನು ಅವನ ಕೈಗೆ ಕೊಟ್ಟರು. ಇಂದ್ರನು ಆ ಸಮಯದಲ್ಲಿ ಅವರಿಗೆ ವಂದನೆಯನ್ನು ಕೂಡ ಮಾಡದೆ ತನ್ನ ಉತ್ಸವ ಗರ್ವದಿಂದ ಆ ಮಾಲಿಕೆಯನ್ನು ತನ್ನ ಆನೆಯ ಮೇಲಿಟ್ಟನು. ಆಗ ಆ ಆನೆಯು ತನ್ನ ಸ್ವಭಾವಕ್ಕನುಸರಿಸಿ ಆ ಮಾಲೆಯನ್ನು ಸೊಂಡಿಲಿನಿಂದ ಎತ್ತಿ ಕಾಲಕೆಳಗೆ ಹಾಕಿಕೊಂಡು ಹೊಸಕಿಬಿಟ್ಟಿತು. ಶಿವಪ್ರಸಾದಕ್ಕೆ ಬಂದ ಈ ದುರವಸ್ಥೆಯನ್ನು ನೋಡಿ ದೂರ್ವಾಸರು ಒಡನೆ ನಿನ್ನ ಸರ್ವೈಶ್ವರ್ಯಕ್ಕೂ ಹಾನಿಯಾಗಲಿ ಎಂದು ಶಾಪವನ್ನು ಕೊಟ್ಟರು. ಇದರ ಫಲವಾಗಿ ದೈತ್ಯರು ದಂಡೆತ್ತಿ ಬಂದು ಸೋಲಿಸಿ ಇಂದ್ರನನ್ನು ದೇವಲೋಕದಿಂದ ಹೊರಕ್ಕೆ ಹಾಕಿಬಿಟ್ಟರು. ಹೀಗಾಗಿ ಅವನು ಬಹುಕಾಲ ತನ್ನ ಸರ್ವೈಶ್ವರ್ಯಗಳನ್ನು ಕಳೆದುಕೊಂಡು ಬಹು ದುಃಖವನ್ನನುಭವಿಸಿದನು. ಆಮೇಲೆ ದೇವತೆಗಳು ತಪಸ್ಸನ್ನು ಮಾಡಿ ಪುಣ್ಯವನ್ನು ಸಂಪಾದಿಸಿ ಅದರ ಪ್ರಭಾವದಿಂದ ಗೆದ್ದು ಇಂದ್ರನನ್ನು ಪೂರ್ವಪದವಿಗೆ ತರಬೇಕಾಯಿತು.

---

**ಸರ್ವಕರ್ಮಂಗಳಲಿ ದಕ್ಷನು,**
**ಸರ್ವಜನಪಾಲಕನು ದಕ್ಷನು**
**ಶರ್ವವಿರಹಿತವಾದ ಯಜ್ಞವ ಮಾಡೆ ಗರ್ವದಲಿ ।**
**ನಿರ್ವಹಿಸಲಾರದೆ ಸದಸ್ಯರು**
**ಸರ್ವಋತ್ವಿಕ್ಸಹಿತ ಕೆಟ್ಟರು**
**ಸರ್ವಥಾ ಮದ ಮಾನ ಮತ್ಸರ ಕೇಡು ಮರ್ತ್ಯರಿಗೆ** ॥೫೮॥

**ತಾತ್ಪರ್ಯ:** ಸಮಸ್ತಧರ್ಮಕರ್ಮಗಳಲ್ಲಿ ಸಮರ್ಥನಾದ, ಭೂಲೋಕದಲ್ಲಿ ಸಕಲ ಜನರನ್ನು ಕಾಪಾಡತಕ್ಕವನಾದ ದಕ್ಷಬ್ರಹ್ಮನು ಅಹಂಕಾರದಿಂದ ಶಿವನನ್ನು ಅಲಕ್ಷಿಸಿ ಯಜ್ಞವನ್ನು ಮಾಡಿದಾಗ ಆ ಪರಮೇಶ್ವರನು ಕ್ರೋಧಗೊಂಡಾಗ ಅದನ್ನು ಸಹಿಸ ಲಾಗದೆ ಸಭಿಕರು, ಋತ್ವಿಕ್ಕರು, ಪುರೋಹಿತರ ಸಮೇತ ನಾಶವಾದನು. ಆದುದರಿಂದ ಮದ (ಅಹಂ), ಮಾನ (ಅಭಿಮಾನ), ಮತ್ಸರ (ಅಸೂಯೆ) ಗಳು ಮನುಷ್ಯರಿಗೆ ವಿನಾಶಕಾರಿಯಾದವು.

**ಶಬ್ದಾರ್ಥ:** ದಕ್ಷ=ಸಮರ್ಥ; ದಕ್ಷ=ನವ ಪ್ರಜೇಶ್ವರಗಳಲ್ಲಿ ಒಬ್ಬನಾದ ದಕ್ಷ ಬ್ರಹ್ಮ * ಶರ್ವವಿರಹಿತ =ಶಿವನನ್ನು ಅಲಕ್ಷಿಸಿ (ಬಿಟ್ಟು); * ನಿರ್ವಹಿಸಲಾರದೆ=ಸಹಿಸಲಾಗದೆ; ಸದಸ್ಯರು=ಸಭಿಕರು; * ಕೆಟ್ಟರು=ನಾಶವಾದರು; * ಮದ=ಅಹಂಕಾರ; * ಮಾನ=ಅಭಿಮಾನ; * ಮತ್ಸರ=ಅಸೂಯೆ; ಮರ್ತ್ಯ=ಮಾನವ; ಕೇಡು=ನಾಶ

**ಟಿಪ್ಪಣಿ:** ಸರ್ವ ಕರ್ಮಂಗಳಲಿ ದಕ್ಷನು ಎಂಬಲ್ಲಿ ದಕ್ಷ ಎಂದರೆ ಸಮರ್ಥ. ಸರ್ವಜನ ಪಾಲಕನು ದಕ್ಷನು=ಎಂಬಲ್ಲಿ ದಕ್ಷನು ಎಂದರೆ ದಕ್ಷ ಬ್ರಹ್ಮನು, ದಕ್ಷನು ಎಂಬ ಪದ ಶ್ಲೇಷಾರ್ಥದಲ್ಲಿದೆ.

## ಪೂರ್ವಕಥೆ–೨: ದಕ್ಷನ ಗರ್ವ

ಒಂದು ದಿನ ದಕ್ಷ ಬ್ರಹ್ಮನು ತನ್ನ ಅಳಿಯನಾದ ಪರಮೇಶ್ವರನ ಮನೆಗೆ ಬಂದನು. ಆ ಸಮಯದಲ್ಲಿ ಪರಮೇಶ್ವರನು ಸ್ವಸ್ವರೂಪಾನುಸಂಧಾನದಲ್ಲಿದ್ದನೋ ಏನೋ! ದಕ್ಷಬ್ರಹ್ಮನಿಗೆ ವಂದನಾದಿಸತ್ಕಾರಗಳನ್ನೇನೂ ನಡೆಸಲಿಲ್ಲ. ಇದರಿಂದ ಅವನು ಕೋಪಗೊಂಡು ತನ್ನೂರಿಗೆ ಹೋದನು. ಆಮೇಲೆ ಅವನು ಒಂದು ಯಜ್ಞವನ್ನಾರಂಬಿಸಿದನು. ಆ ಯಜ್ಞದಲ್ಲಿ ಶಿವನಿಗೆ ಆಹುತಿಯನ್ನು ಕೊಡಲಾಗದೆಂದು ಮೊದಲೇ ಅವನು ನಿಶ್ಚಯಿಸಿದನು. ಇದರ ಸೂಚನೆ ಶಿವನಿಗೆ ಗೊತ್ತಿದ್ದದ್ದರಿಂದ ಅವನು ಆ ಯಜ್ಞಕ್ಕೆ ಹೊರಡಲೇ ಇಲ್ಲ. ಅವನ ಹೆಂಡತಿಯಾದ ದಾಕ್ಷಾಯಣಿಯು ತೌರುಮನೆಯ ಅಭಿಮಾನದಿಂದ ಹೇಗೋ ಗಂಡನಪ್ಪಣೆಯನ್ನು ಪಡೆದು ಅಲ್ಲಿಗೆ ಹೋದಳು. ಅಲ್ಲಿ ಯಾರೂ ಅವಳನ್ನು ಗೌರವಿಸಲಿಲ್ಲ. ಆದರೂ ಯಜ್ಞದಲ್ಲಿ ತನ್ನ ಗಂಡನಿಗೆ ಆಹುತಿಯು ದೊರೆಯುವದರಿಂದ ತನ್ನ ಗಂಡನಿಗಾಗುವ ಸತ್ಕಾರವೇ ತನಗೆಂದು ಭಾವಿಸಿಕೊಂಡಿದ್ದಳು. ಆದರೆ ಆಹುತಿಗಳನ್ನು ಕೊಡುವಾಗ ಮಂತ್ರದಲ್ಲಿ ಕ್ರಮ ಪ್ರಾಪ್ತವಾದ ಈಶ್ವರನ ಹೆಸರು ಬರುತ್ತಲೆ ಆಹುತಿಯನ್ನು ಕೊಡದಂತೆ ದಕ್ಷನು ತಡೆದನು. ಇದರಿಂದ ಶಿವರಹಿತವಾದ ಯಜ್ಞವು (ಅಶಿವ) ಅಮಂಗಲವಾಗಿ ತಂದೆಗೆ ಹಾನಿಯಾದೀತೆಂದು ದಾಕ್ಷಾಯಣಿಯು ಒಡನೆ ತನ್ನ ದೇಹವನ್ನೇ ಈಶ್ವರ ಪ್ರೀತ್ಯರ್ಥವಾದ ಆಹುತಿಯಾಗಿ ಮಾಡಿ ಉಭಯಕುಲವನ್ನೂ ಯಶಸ್ವಿಯಾಗಿ ಮಾಡಿದಳೆಂದು ಒಂದು ಪುರಾಣವು ಹೇಳುತ್ತದೆ. ತನ್ನ ಪತಿಗಾದ ಅವಮಾನವನ್ನು ಸಹಿಸಲಾರದೆ ತನ್ನ ಶರೀರದಲ್ಲಿಯೇ ಯೋಗಾಗ್ನಿಯನ್ನು ಆವಾಹನೆ ಮಾಡಿಕೊಂಡು ದೇಹತ್ಯಾಗ ಮಾಡಿದಳೆಂದು ಒಂದು ಪುರಾಣವು ಹೇಳುತ್ತದೆ. ಈ ಸುದ್ದಿ ತಿಳಿಯುತ್ತಲೇ ಪರಮೇಶ್ವರನು ಮಹಾಕೋಪದಿಂದ ತನ್ನ ಜಟೆಯನ್ನಪ್ಪಳಿಸಲು ಅದರಿಂದ ವೀರಭದ್ರನು ಹುಟ್ಟಿ ಯಜ್ಞಮಂಟಪಕ್ಕೆ ಬಂದು ಅಲ್ಲಿದ್ದವರನ್ನೆಲ್ಲಾ ಅಂಗಹೀನರನ್ನಾಗಿ ಮಾಡಿ ಯಜ್ಞವನ್ನು ಕೆಡಿಸಿ ತ್ರಿಶೂಲದಿಂದ ದಕ್ಷಬ್ರಹ್ಮನ ತಲೆಯನ್ನು ಕಡಿದು ಅಗ್ನಿಕುಂಡದಲ್ಲಿ ಹಾಕಿ ಹೋಮವನ್ನು ಮಾಡಿಬಿಟ್ಟನು. ಆಗ ಮುಂಡದಲ್ಲಿಯೇ ಜೀವಂತನಾಗಿದ್ದ ದಕ್ಷನು ವಿಷ್ಣು ಮೊದಲಾದವರ ಉಪದೇಶದಂತೆ ಶಿವನಿಗೆ ಶರಣುಹೋದನು. ಆಗ ಈಶ್ವರನು ಪ್ರತ್ಯಕ್ಷನಾಗಿ ಬಂದು ಕುರಿಯತಲೆಯನ್ನು ತಂದಿಟ್ಟು ದಕ್ಷನನ್ನು ಬದುಕಿಸಿ ಯಜ್ಞ ವಿಘ್ನಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಸಿ ಯಜ್ಞವನ್ನು ಪೂರ್ತಿ ಮಾಡಿದನು. ಹೀಗೆ ದಕ್ಷನು ತನ್ನ ಗರ್ವದಿಂದ ತಾನೇ ತನಗೆ ಕೇಡನ್ನುಂಟುಮಾಡಿಕೊಂಡನು.

---

**ದರ್ಪಕನು ಲಾವಣ್ಯದರ್ಪದೊ**
**ಳಿರ್ಪ ಮತಿಯಿಂ ಮೇಲನರಿಯದೆ**
**ತಪ್ಪುಮಾಡಿಯೆ ಕೆಟ್ಟನಕಟಾ ! ಸರ್ಪಭೂಷಣಗೆ, ।**
**ತಪ್ಪು, ಮದ, ಮಾತ್ಸರ್ಯ, ಮತ್ಸರಿ**
**ಗೊಪ್ಪುವುದೆ? ಅದನರಿಯರಹಹಾ!**
**ದರ್ಪಬುದ್ಧಿಯ ನೀಚರಿಗೆ ಗುರುದೈವವೆಲ್ಲಿಯದು? ॥ ॥೩೯॥**

ತಾತ್ಪರ್ಯ: ಮನ್ಮಥನು ರೂಪದಲ್ಲಿ ತನಗೆ ಸಮರಾರೂ ಇಲ್ಲವೆಂದು ಯಾವುದು ಒಳಿತು ಎಂಬುದನ್ನು ತಿಳಿಯದೆ ಅವಿವೇಕದ ಬುದ್ಧಿಯಿಂದ ನಾಗಭೂಷಣನಾದ ಶಿವನಿಗೆ ಅಪಚಾರಮಾಡಿ ನಾಶವಾದನು. ಅಯ್ಯೋ ದೇವರೇ! ಆದಕಾರಣ ಮನುಷ್ಯರಿಗೆ ಕೆಟ್ಟದ್ದನ್ನು ಮಾಡುವುದು, ಗರ್ವದಿಂದ ವರ್ತಿಸುವುದು, ಅಸೂಯೆ

ಪಡುವುದು, ಇತ್ಯಾದಿ ದುರ್ಗುಣಗಳು ತನಗೆ ಶೋಭಿಸುವುದಿಲ್ಲವೆಂದು ಆತನಿಗೆ ತಿಳಿಯುವುದಿಲ್ಲವಲ್ಲಾ! ಇಂಥ ಗರ್ವದಿಂದ ಕೂಡಿದ ಸ್ವಭಾವದ ಹೀನ ಜನರಿಗೆ ಗುರುವಿನ ಕಟಾಕ್ಷವಾಗಲಿ ದೈವಕೃಪೆಯಾಗಲಿ ಎಲ್ಲಿ ಸಿಗುತ್ತದೆ?

**ಶಬ್ದಾರ್ಥ: ದರ್ಪಕನು=ಮನ್ಮಥನು; ಮೇಲನು+ಅರಿಯದೆ=ಮುಂದಾಗುವುದನ್ನು ಅರಿಯದೆ; ದರ್ಪಬುದ್ಧಿ=ಗರ್ವದಿಂದ ಕೂಡಿದ ಬುದ್ಧಿ; ಸರ್ಪಭೂಷಣ=ಶಿವ; * ಮರ್ತ್ಯರು=ಮಾನವರು; * ಗುರುದೈವ=ಗುರುವಿನ ಅನುಗ್ರಹ ಮತ್ತು ದೈವಕೃಪೆ**

## ಪೂರ್ವಕಥೆ: ಮನ್ಮಥನ ದರ್ಪ

ದಕ್ಷಬ್ರಹ್ಮನ ಯಜ್ಞದಲ್ಲಿ ತನ್ನ ಗಂಡನಿಗೆ ಅವಮರ್ಯಾದೆಯಾದುದಕ್ಕಾಗಿ ದಾಕ್ಷಾಯಣಿಯು ದೇಹತ್ಯಾಗವನ್ನು ಮಾಡಿದಮೇಲೆ ಈಶ್ವರನು ವೈರಾಗ್ಯದಿಂದ ಅಂತರ್ಮುಖನಾಗಿ ಕುಳಿತುಬಿಟ್ಟನು. ಇತ್ತ ರಾಕ್ಷಸರ ಹಾವಳಿಯು ಬಹಳವಾಯಿತು. ಅವರಲ್ಲಿ ತಾರಕಾಸುರನೆಂಬ ರಾಕ್ಷಸನು ಬಹಳ ಉದ್ಧತನಾಗಿದ್ದನು. ಅವನಿಗೆ ಏಳುದಿನಗಳ ಶಿಶುವಿನಿಂದ ಮಾತ್ರ ಮರಣವಾಗತಕ್ಕದ್ದಿತ್ತು. ಆದ್ದರಿಂದ ಅವನ ಮೇಲೆ ಯಾರ ಕೈಯೂ ನಡೆಯುತ್ತಿರಲಿಲ್ಲ. ಏಳುದಿನಗಳ ಶಿಶು ಅವನ ಮುಂದೆ ಯುದ್ಧಕ್ಕೆ ನಿಲ್ಲಬೇಕಾದರೆ ಅದು ಪರಮೇಶ್ವರನ ಶಿಶುವಾದರೆ ಮಾತ್ರ ಸಾಧ್ಯವೆಂದು ದೇವತೆಗಳೆಲ್ಲರೂ ನಿಶ್ಚಯಿಸಿದರು. ಆಗ ಹೇಗಾದರೂ ಮಾಡಿ ಪರಮೇಶ್ವರನನ್ನು ಬಹಿರ್ಮುಖನನ್ನಾಗಿ ಮಾಡಬೇಕಾದ ಅಗತ್ಯವುಂಟಾಯಿತು. ಅಷ್ಟರಲ್ಲಿ ದಾಕ್ಷಾಯಣಿಯು ಹಿಮವತ್ಪರ್ವತರಾಜನ ಮಗಳಾಗಿ ಹುಟ್ಟಿ ಪಾರ್ವತಿಯೆಂಬ ಹೆಸರಿನಿಂದ ಬೆಳೆಯುತ್ತಿದ್ದಳು. ಈಶ್ವರನು ಬಹಿರ್ಮುಖನಾಗಲೆಂದು ದೇವತೆಗಳ ಪ್ರೇರಣೆಯಂತೆ ಹಿಮವಂತನು ಸರ್ವಾಂಗಸುಂದರಿಯಾದ ತನ್ನ ಮಗಳನ್ನು ಪರಮೇಶ್ವರನ ಸೇವೆಗಿಟ್ಟನು. ಆದರೂ ಈಶ್ವರನ ಮನಸ್ಸು ಚಲಿಸಲಿಲ್ಲ. ಆಗ ಮುಂದೇನು ಮಾಡಬೇಕೆಂದು ದೇವತೆಗಳೆಲ್ಲರೂ ತಲೆಯ ಮೇಲೆ ಕೈ ಇಟ್ಟುಕೊಂಡು ಕುಳಿತಾಗ ಮನ್ಮಥನು ಮುಂದೆ ಬಂದು ಜಂಭವನ್ನು ಕೊಚ್ಚಿ ತಾನು ಅವನನ್ನು ಬಹಿರ್ಮುಖನನ್ನಾಗಿ ಮಾಡುವೆನೆಂದು ಶಪಥವನ್ನು ತೊಟ್ಟು ಬಹಳ ಅಟ್ಟಹಾಸದಿಂದ ಚೈತ್ರ, ಮಂದಮಾರುತ, ಮುಂತಾದವರೊಡನೆ ಬಂದನು. ಅವರು ಬರುತ್ತಲೇ ಸಮಾಧಿ ನಿಷ್ಠರಾಗಿದ್ದ ಇತರ ಶಿವಗಣಗಳ ಮನಸ್ಸೆಲ್ಲ ಹೊರಗೆ ಬಂತು. ಶಿವನು ತನ್ನ ಸಮಾಧಿಯಿಂದ ಕದಲಲಿಲ್ಲ. ಆಗ ಮನ್ಮಥನು ತನ್ನ ಪುಷ್ಪಬಾಣವನ್ನು ಹೂಡಿ ಈಶ್ವರನಿಗೆ ಗುರಿಯಿಟ್ಟು ಹೊಡೆದನು. ದೇವತೆಗಳ ಕಾರ್ಯಕ್ಕೆ ಸಾಧಕವಾದ ಈಶ್ವರನೇನೋ ಬಹಿರ್ಮುಖನಾದನು. ಇದರಿಂದ ಮುಂದೆ ಷಣ್ಮುಖನು ಹುಟ್ಟಿ ತಾರಕನನ್ನು ಗೆಲ್ಲುವುದಕ್ಕೆ ಅವಕಾಶವೂ ಆಯಿತು. ಆದರೆ ತನ್ನ ಅಗ್ನಿನೇತ್ರವನ್ನು ಬಿಡುತ್ತಲೇ ಮುಂದೆಯೇ ನಿಂತಿದ್ದ ಮನ್ಮಥನು ಉರಿದು ಗುಡ್ಡೆಯಾಗಿ ಬಿದ್ದನು. ಹೀಗೆ ಮನ್ಮಥನು ಮಹೇಶ್ವರನ ಮೇಲೆ ತನ್ನ ದರ್ಪವನ್ನು ತೋರಿಸುವುದಕ್ಕೆ ಹೋಗಿ ತನ್ನನಾಶವನ್ನು ತಾನೇ ಮಾಡಿಕೊಂಡನು.

---

**ಶೀಘ್ರದಿಂದಲಿ ಯಾಜ್ಞವಲ್ಕ್ಯ ಸ**
**ಮಗ್ರವಿದ್ಯೆಯ ಕಲಿತು ಮದದಿಂ**
**ವ್ಯಗ್ರನಾಗುತ್ತುಳಿದವರ ಜರಿದಾಡೆ ಗುರು ಕನಲಿ ।**
**ಅಗ್ನಿಸನ್ನಿಭನಾಗಿ ವಿದ್ಯೆಯ**
**ಭಗ್ನವಾಗಿಸಿ ಕಾರಿಸಿದನ**
**ತ್ಯುಗ್ರದೊಳಗದರಿಂದ ಗುರುಹಿರಿಯರಲಿ ಮದಬೇಡ ॥ ॥೬೦॥**

**ತಾತ್ಪರ್ಯ:** ಯಾಜ್ಞವಲ್ಕ್ಯನು ಶೀಘ್ರಗತಿಯಲ್ಲಿ ಸಕಲವಿದ್ಯೆಗಳನ್ನು ಕಹೋಳನಿಂದ ಕಲಿತು ವಿದ್ಯಾಮದದಿಂದ ಉನ್ಮತ್ತನಾಗುತ್ತ ವಾದದಲ್ಲಿ ಇತರ ಶಿಷ್ಯರನ್ನು ಸೋಲಿಸಿ ದೂಷಿಸಿದಾಗ ಗುರು ಕಹೋಳ ಕೆಂಡಾಮಂಡಲವಾಗಿ ಅವನಿಗೆ ಅನುಗ್ರಹಿಸಿದ ವಿದ್ಯೆಯನ್ನು ವ್ಯರ್ಥವಾಗುವಂತೆ ಅತಿಕೋಪದಿಂದ ಕಕ್ಕಿಸಿದನು. ಆದಕಾರಣ ಗುರುವಿನಲ್ಲಾಗಲಿ, ಹಿರಿಯರಲ್ಲಾಗಲಿ ವಿದ್ಯಾಮದದಿಂದ ವರ್ತಿಸಬಾರದು.

**ಶಬ್ದಾರ್ಥ: ಅಗ್ನಿಸನ್ನಿಭನಾಗಿ=ಬೆಂಕಿಯಂತೆ ತಾಪಕೊಂಡು; ಕನಲಿ=ಕೋಪಗೊಂಡು; ಜರಿದಾಡೆ=ದೂಷಿಸಲು; ವ್ಯಗ್ರನಾಗುತ್ತ=ಕೆಂಡಾಮಂಡಲವಾಗಿ**

**ಪಾಠಾಂತರ: ಯಾಜ್ಞವಲ್ಕ್ಯ ಕಹೋಳನಲಿ ಸಮಗ್ರ ವಿದ್ಯೆಯ ಕಲಿತು ವಾದದಿ ನಿಗ್ರಹ ಸ್ಥಾನವನು ಗುರುವಿಗೆ ಮಾಡೆ ಕೋಪದಲಿ** – ಎಂದು ಬಹು ಪ್ರತಿಗಳಲ್ಲಿ ಪಾಠಾಂತರವಿದೆ. ಯಾಜ್ಞವಲ್ಕ್ಯದಿಂದ ಮೊದಲಿಗೆ ಬಂದು ಜಕಾರ ಪ್ರಾಸ ಬಂದಾಗ ಗಕಾರ ಪ್ರಾಸ ತಪ್ಪುತ್ತದೆ. ಆದ್ದರಿಂದ ಪದ್ಯವನ್ನು ತಿದ್ದಿದೆ.

## ಪೂರ್ವಕಥೆ–೧ :

ಈ ಮೂಲದ ಪ್ರಕಾರ (ಈ ಪಾಠಾಂತರ ಅನುಸಾರ) ಯಾಜ್ಞವಲ್ಕ್ಯರು ಕಹೋಳನೆಂಬ ಗುರುವಿನಲ್ಲಿ ಅಧ್ಯಯನ ಮಾಡಿದರೆಂದು ತಿಳಿಯುತ್ತದೆ. ಇದಕ್ಕೆ ನಮಗೆಲ್ಲಿಯೂ ಆಧಾರವು ದೊರೆತಿಲ್ಲ. ವಿಷ್ಣುಪುರಾಣದಲ್ಲಿ ಯಾಜ್ಞವಲ್ಕ್ಯರ ಗುರು ವೈಶಂಪಾಯನರು ಎಂದಿದೆ. ಯಾಜ್ಞವಲ್ಕ್ಯರಿಗೂ ಕಹೋಳನಗೂ ಸಂಬಂಧಪಟ್ಟ ಕಥೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಬಂದಿದೆ. ಆದರೆ ಅಲ್ಲಿ ಕಹೋಳನು ಯಾಜ್ಞವಲ್ಕ್ಯರ ಗುರುವಲ್ಲ. ಅಲ್ಲಿ ಅವನು ಯಾಜ್ಞವಲ್ಕ್ಯರಿಂದ ನಿಗ್ರಹಸ್ಥಾನವನ್ನು ಪಡೆದಿರುವುದು ನಿಜ. ಆದರೆ ಅವರ ವಿದ್ಯೆಯನ್ನು ಕಕ್ಕಿಸಿಲ್ಲ, ವಿದ್ಯೆಯನ್ನು ಕಕ್ಕಿಸಿದ ಕಥೆ ಬೇರೆಯಿದೆ.

## ಪೂರ್ವಕಥೆ–೨ : ಯಾಜ್ಞವಲ್ಕ್ಯರ ಗರ್ವ

ಯಾಜ್ಞವಲ್ಕ್ಯರ ಗುರುಗಳಾದ ವೈಶಂಪಾಯನರು ಒಂದು ಸಲ ಕಾರಣಾಂತರದಿಂದ ನಿಯಮಿತಕಾಲದಲ್ಲಿ ಸಭೆಗೆ ಹೋಗಲಿಲ್ಲ. ಆ ಸಭೆಯಲ್ಲಿ ಒಂದು ಬ್ರಹ್ಮಹತ್ಯಾದೋಷದ ನಿರ್ಣಯವಾಗಬೇಕಾಗಿತ್ತು. ಇವರು ಆ ಸಭೆಗೆ ಹೋಗದೆ ಇದ್ದದ್ದರಿಂದ ಸಭೆಯವರು ಈ ಬ್ರಹ್ಮಹತ್ಯಾ ದೋಷವು ಇವರದೇ ಆಗತಕ್ಕದ್ದೆಂಬಭಿಪ್ರಾಯಪಟ್ಟರು. ನಿಜವಾಗಿ ಆ ದೋಷವು ತಮಗಿರಲಿಲ್ಲವಾದರೂ ವೈಶಂಪಾಯನರು ತಮಗೆ ಆ ಅಪವಾದವು ಬಂದದ್ದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ತಮ್ಮ ಶಿಷ್ಯರಿಗೆಲ್ಲ ಒಂದು ಅನುಷ್ಠಾನವನ್ನು ಮಾಡ ಹೇಳಿದರು. ಆಗ ಯಾಜ್ಞವಲ್ಕ್ಯರು ಉಳಿದವರನ್ನೆಲ್ಲ ತುಚ್ಛಮಾಡಿ ಆ ದೋಷವನ್ನು ತನ್ನೊಬ್ಬನ ಅನುಷ್ಠಾನವೇ ಕಳೆಯಬಲ್ಲುದೆಂದು ಹೇಳಿದರು. ಹೀಗೆ ಉಳಿದವರನ್ನೆಲ್ಲಾ ಕಡೆಗಂಡದ್ದು ವೈಶಂಪಾಯನರಿಗೆ ಸರಿ ಬೀಳಲಿಲ್ಲ. ಒಡನೆ ಅವರು ತಮ್ಮ ಶಿಷ್ಯತ್ವವನ್ನು ಬಿಟ್ಟುಹೋಗೆಂದುಹೇಳಿದರು. ಹಾಗೆಯೇ ಆಗಲೆಂದು ಯಾಜ್ಞವಲ್ಕ್ಯರು ಹೊರಡುತ್ತಲೇ ವೈಶಂಪಾಯನರು ತಮ್ಮ ಉಪದೇಶವನ್ನೆಲ್ಲಾ ಹಿಂದಕ್ಕೆ ಕೊಟ್ಟು ಹೋಗಬೇಕೆಂದರು. ಹಾಗೂ ಆಗಲೆಂದು ಯಾಜ್ಞವಲ್ಕ್ಯರು ತಾವು ಅಭ್ಯಾಸ ಮಾಡಿದ್ದ ಕೃಷ್ಣ ಯಜುರ್ವೇದವನ್ನೆಲ್ಲಾ ವಾಂತಿ ಮಾಡಿದರು. ಆಗ ಆ ವೇದವನ್ನು ಬಿಡಲಾರದೆ ಕೆಲವುಋಷಿಗಳು ತಿತ್ತಿರಿಪಕ್ಷಿಗಳ ರೂಪದಲ್ಲಿ ಬಂದು ಅದನ್ನು ಗ್ರಹಣಮಾಡಿದ್ದರಿಂದ ಈಗ ಅದು ತೈತ್ತಿರೀಯವೆಂಬ ಶಾಖೆಯೆಂದು ಹೆಸರಾಗಿರುವದೆಂತಲೂ ಯಾಜ್ಞವಲ್ಕ್ಯರು ಆಮೇಲೆ

ಸೂರ್ಯನಿಗೆ ಶರಣುಹೊಕ್ಕು ಅವನ ಅನುಗ್ರಹದಿಂದ ಶುಕ್ಲಯಜುರ್ವೇದವನ್ನು ಗ್ರಹಣ ಮಾಡಿದರೆಂತಲೂ ಕಥೆಯಿದೆ. ಅಂತು ಯಾಜ್ಞವಲ್ಕ್ಯರು ತಮ್ಮ ಗರ್ವಕ್ಕೆ ಫಲವಾಗಿ ವಿದ್ಯೆಯನ್ನು ಕಳೆದುಕೊಂಡು ಆಮೇಲೆ ಅದನ್ನು ಪಡೆಯುವದಕ್ಕೆ ಬಹು ಸಾಹಸವನ್ನು ಮಾಡಬೇಕಾಯಿತು.

---

**ಪರಶುರಾಮನು ಕ್ಷಾತ್ರಕುಲವನು**
**ತರಿದು, ನಿಃಕ್ಷತ್ರವನು ಮಾಡಿಯೆ,**
**ಧರೆಯ ಕಶ್ಯಪಗಿತ್ತೆನೆಂಬೀ ಶೌರ್ಯಗರ್ವದಲಿ ।**
**ಅರಿಯದೇ ರಘುಪತಿಯ ಸತ್ತ್ವವ**
**ಪರಭವನೈದಿದನು ಬಲುಮೆಯ**
**ತೆರನ ಪರಿಯಿದು ಮಗನೆ; ಬಲುಮದ ಕಷ್ಟ ಕೇಳೆಂದ ॥ ॥೬೧॥**

**ತಾತ್ಪರ್ಯ:** ಜಮದಗ್ನಿಪುತ್ರನಾದ ಪರಶುರಾಮನು ೨೧ ಸಲ ದಂಡಯಾತ್ರೆ ಮಾಡಿ ಕ್ಷತ್ರಿಯರ ಸಮೂಹವನ್ನೆಲ್ಲ ಕೊಂದು ಕ್ಷತ್ರಿಯಕುಲವೇ ಭೂಲೋಕದಲ್ಲಿ ಇಲ್ಲದಂತೆ ಮಾಡಿದನು. ಗೆದ್ದ ಭೂಮಿಯನ್ನೆಲ್ಲ ಕಶ್ಯಪಮುನಿಗೆ ದಾನವಾಗಿತ್ತನು. ಈ ಒಂದು ಶೌರ್ಯದ ಅಹಂಕಾರದಿಂದ ಶ್ರೀರಾಮನ ಶಕ್ತಿ ಸಾಮರ್ಥ್ಯವನ್ನು ತಿಳಿಯದೆ ಅವನೊಡನೆ ಯುದ್ಧ ಮಾಡಿ ಸೋಲನ್ನು ಅನುಭವಿಸಿದನು. ಇದು ಶೌರ್ಯದ ಮದದ ಪರಿಣಾಮಕ್ಕೆ ಸಾಕ್ಷಿ ಆಗಿದೆ. ಆದ್ದರಿಂದ ಶಕ್ತಿಯ ಮದ ಬಹಳ ಕೇಡನ್ನುಂಟು ಮಾಡುತ್ತದೆ ಎಂದು ತಿಳಿಯಬೇಕು.

**ಶಬ್ದಾರ್ಥ : ನಿಃಕ್ಷತ್ರವನು ಮಾಡಿ**=ಕ್ಷತ್ರಿಯರೇ ಇಲ್ಲದಂತೆ ಮಾಡಿ; **ಕಶ್ಯಪ ಮುನಿ**=ಪರಶುರಾಮನ ಗುರು * **ಪರಿಭವನೈದಿದನು**=ಸೋಲನ್ನು ಅನುಭವಿಸಿದನು; * **ಬಲುಮೆ**=ಶೌರ್ಯ; * **ತರಿದು**=ಕೊಂದು; * **ಕ್ಷಾತ್ರಕುಲವನು**=ಕ್ಷತ್ರಿಯ ವಂಶವನ್ನು

## ಪೂರ್ವಕಥೆ : ಪರಶುರಾಮನ ಗರ್ವ

ಕಾರ್ತವೀರ್ಯನ ಮಕ್ಕಳು ತಮ್ಮ ತಂದೆಯನ್ನು ಕೊಂದರೆಂಬ ಸಿಟ್ಟಿನಿಂದ ಭೂಮಂಡಲವನ್ನೆಲ್ಲ ಇಪ್ಪತ್ತೊಂದು ವೇಳೆ ಸುತ್ತಿ ದುಷ್ಟ ಕ್ಷತ್ರಿಯರನ್ನೆಲ್ಲ ಕೊಂದು ಭೂಮಿಯನ್ನೆಲ್ಲ ಗೆದ್ದ ಆ ಪರಶುರಾಮನು ಆಮೇಲೆ ಯಜ್ಞವನ್ನಾರಂಭಿಸಿ ಅದರಲ್ಲಿ ಭೂಮಿಯನ್ನೆಲ್ಲ ಕಶ್ಯಪರಿಗೆ ದಾನ ಮಾಡಿದ್ದನು. ಹೀಗೆ ಕ್ಷಾತ್ರ ತೇಜಸ್ಸಿನ ಹೆಸರಿಳಿಸಿ ಬಿಟ್ಟೆನೆಂದು ಅವನಿಗೊಂದು ಗರ್ವವಿತ್ತು. ಇತ್ತ ದಾಶರಥಿರಾಮನು ಅಯೋಧ್ಯೆಯಲ್ಲಿ ಶಿವಧನುರ್ಭಂಗವನ್ನು ಮಾಡಿ ಸೀತೆಯನ್ನು ಪಾಣಿಗ್ರಹಣ ಮಾಡಿದನೆಂಬ ಸುದ್ದಿ ಎಲ್ಲೆಲ್ಲಿಯೂ ಹರಡಿತು. ಇದು ಕಿವಿಗೆ ಬೀಳುತ್ತಲೇ ಮಹೇಂದ್ರಪರ್ವತದಲ್ಲಿ ತಪಸ್ಸಿನಲ್ಲಿದ್ದ ಪರಶುರಾಮನು ತನ್ನ ವೈಷ್ಣವಧನುಸ್ಸಿನೊಡನೆ ಹೊರಟು ದಾಶರಥಿರಾಮನ ಸೊಕ್ಕಡಗಿಸಬೇಕೆಂದು ಬಂದನು. ದಾಶರಥಿರಾಮನು ವಿವಾಹವನ್ನು ಮಾಡಿಕೊಂಡು ಮಿಥಿಲೆಯಿಂದ ಅಯೋಧ್ಯೆಗೆ ಹೋಗುವಾಗ ದಾರಿಯಲ್ಲಿ ಇವರಿಬ್ಬರ ಸಮಾಗಮವಾಯಿತು. ಪರಶುರಾಮನು ಒಳ್ಳೆಯ ದರ್ಪದಿಂದ ದಾಶರಥಿರಾಮನನ್ನು ಅಡ್ಡಗಟ್ಟಿ ಹಳೇಶೈವಚಾಪವನ್ನು ಮುರಿದದ್ದು ದೊಡ್ಡದಲ್ಲವೆಂದು ಹೇಳಿ ತನ್ನ ವೈಷ್ಣವಚಾಪವನ್ನು ಮುಂದಕ್ಕೆ ಹಿಡಿದನು. ಒಡನೆ ದಾಶರಥಿರಾಮನು ಅದನ್ನು ಅವನ ಕೈಯಿಂದ ಸೆಳೆದುಕೊಂಡು ಲೀಲಾಮಾತ್ರದಿಂದ ಅದರಲ್ಲಿ ಬಾಣವನ್ನು ಹೂಡಿ ಗುರಿಯನ್ನು

ಕೇಳಿದನು. ಆಗ ತೇಜೋಹೀನನಾದ ಪರಶುರಾಮನು ಹುಸಿಯಾಗದಂಥ ಆ ರಾಮಬಾಣಕ್ಕೆ ಗುರಿಯನ್ನು ತೋರಿಸಲೇಬೇಕಾಗಿ ಬಂದದ್ದರಿಂದ ತನ್ನ ಪರಲೋಕ ಸಾಧನದ ಪುಣ್ಯವನ್ನೆಲ್ಲ ಆ ಬಾಣಕ್ಕೆ ಬಲಿಯಾಗಿ ಕೊಟ್ಟನು. ಹೀಗೆ ಪರಶುರಾಮನು ತನ್ನ ಗರ್ವದಿಂದ ಸದ್ಗತಿಯ ಸಾಧನವನ್ನೆಲ್ಲ ಹಾಳುಮಾಡಿಕೊಂಡು ಮತ್ತೆ ಅದನ್ನು ಕೂಡಿಹಾಕಿಕೊಳ್ಳುವದಕ್ಕಾಗಿ ತಪಶ್ಚರ್ಯೆಗೆ ಹೋದನು.

---

**ಮಚ್ಚರದಿ ವಿಂಧ್ಯಾದ್ರಿ ಮೇರುವ**
**ತುಚ್ಛವಾಗಿಯೇ ಮಾಡಿ ಬೆಳೆದು ಮ**
**ಹೋಚ್ಚ್ರಯದಲಾದಿತ್ಯಮಂಡಲಕಡ್ಡವಾಗಿರಲು ।**
**ಸಚ್ಚರಿತನಾಗಿದ್ದಗಸ್ತ್ಯನು**
**ಹೆಚ್ಚು ತಾನೆಂದೆಂಬ ಗರ್ವವ**
**ನುಚ್ಚುಮಾಡಿಯೆ ನೆಲದ ಸಮದಲಿ ಬೆಚ್ಚಿ ಬೆರೆಸಿದನು ॥ ॥೬೨॥**

**ತಾತ್ಪರ್ಯ:** ವಿಂಧ್ಯ ಪರ್ವತವು ಅಸೂಯೆಯಿಂದ ಮೇರುಪರ್ವತವನ್ನು ತಿರಸ್ಕಾರದಿಂದ ನೋಡಿ ಬಹಳ ಎತ್ತರವಾಗಿ ಸೂರ್ಯಮಂಡಲಕ್ಕೆ ಅಡ್ಡವಾಗುವಂತೆ ಬೆಳೆಯಿತು. ಆಗ ಸಜ್ಜನನಾದ ಅಗಸ್ತ್ಯನು ತಾನೇಹೆಚ್ಚೆಂಬ ವಿಂಧ್ಯಪರ್ವತದ ಅಹಂಕಾರವನ್ನು ದೇವತೆಗಳ ಕೋರಿಕೆಯಮೇರೆಗೆ ನುಚ್ಚುನೂರು ಮಾಡುತ್ತ ಅದನ್ನು ತುಳಿದು ನೆಲದ ಮಟ್ಟಕ್ಕೆ ಬೆಸುಗೆ ಹಾಕಿದಂತೆ ಕುಗ್ಗಿಸಿದನು.

**ಶಬ್ದಾರ್ಥ:** * **ವಿಂಧ್ಯಾದ್ರಿ**=ವಿಂಧ್ಯಪರ್ವತ; * **ಮೇರು**=ಮೇರುಪರ್ವತ; * **ತುಚ್ಛವಾಗಿ ಮಾಡಿ** =ತಿರಸ್ಕಾರದಿಂದ ನೋಡಿ; * **ಮಹಾ+ಉಚ್ಚ್ರಾಯದಲಿ**=ಬಹಳ ಎತ್ತರವಾಗಿ; * **ಸಚ್ಚರಿತ**=ಸಜ್ಜನ; **ನುಚ್ಚು ಮಾಡಿ**=ನುಚ್ಚುನೂರು ಮಾಡಿ (ನಾಶಮಾಡಿ); * **ನೆಲದಸಮದಲಿ**=ನೆಲದಮಟ್ಟಕ್ಕೆ **ಬೆಚ್ಚಿ**=ಬೆಸುಗೆ ಹಾಕಿ; * **ಬೆರಸಿದನು**=ಕುಗ್ಗಿಸಿದನು

**ಟಿಪ್ಪಣಿ–೧:** ವಿಂಧ್ಯ ಪರ್ವತವು ವಿಷ್ಣು ಪುರಾಣದಲ್ಲಿ ಹೇಳಿರುವ ಪ್ರಕಾರ (೨–೩–೩–) ಮಹೇಂದ್ರ–ಮಲಯ–ಸಹ್ಯ–ಶಕ್ತಿಮಾನ್–ಋಕ್ಷಮಾನ್–ವಿಂಧ್ಯ–ಪಾರಿಯಾತ್ರ ಎಂಬ ಸಪ್ತಕುಲ ಪರ್ವತಗಳಲ್ಲಿ ಒಂದಾಗಿದೆ.

**ಟಿಪ್ಪಣಿ–೨:** ಮೇರು ಪರ್ವತವು ಗರುಡಪುರಾಣದ (೧೫–೬೦–೬೧) ಪ್ರಕಾರ ಮೇರು–ಮಂದರ–ಕೈಲಾಸ–ಹಿಮಾಚಲ–ನಿಷಧ–ಗಂಧಮಾನದ–ರಮಣ ಎಂಬ ಸಪ್ತ ಕುಲ ಪರ್ವತಗಳಲ್ಲಿ ಒಂದಾಗಿದೆ. (ಶ್ರೀವತ್ಸ ನಿಘಂಟು ಪುಟ ೮೫)

## ಪೂರ್ವಕಥೆ: ವಿಂಧ್ಯ ಪರ್ವತದ ಗರ್ವ

ಒಮ್ಮೆ ನಾರದರು ವಿಂಧ್ಯಪರ್ವತದ ಮುಂದೆ ಸೂರ್ಯನು ಮೇರುವನ್ನು ಸುತ್ತುವನೇ ಹೊರತು ಇನ್ನೊಂದನ್ನಲ್ಲ ವೆಂದು ಮುಂತಾಗಿ ಮೇರುಪರ್ವತವನ್ನು ಹೊಗಳಿದರು. ಇದನ್ನು ಕೇಳುತ್ತಲೇ ವಿಂಧ್ಯಪರ್ವತವು ತಾನೂ ಅಷ್ಟು ದೊಡ್ಡವನೆನಿಸಿಕೊಳ್ಳಬೇಕೆಂಬ ಇಚ್ಛೆಯನ್ನು ತಂದುಕೊಂಡಿತು. ಸೂರ್ಯನು ತನ್ನ ಸುತ್ತು ಸುತ್ತುವಂತೆ ಆಗುವಹಾಗೆ ವಿಂಧ್ಯ ಪರ್ವತವು ಸೂರ್ಯ ಮಂಡಲದವರೆಗೂ ಬೆಳೆಯಿತು. ಹೀಗೆ ಅದು ಸೂರ್ಯಮಂಡಲಕ್ಕೆ ಅಡ್ಡವಾಗಿ ನಿಂತೇ ಬಿಟ್ಟದ್ದರಿಂದ ಭೂಮಿಗೆ ಹಗಲೇ ಆಗದೆಹೋಯಿತು. ಇದರಿಂದ ವೈದಿಕ ಕರ್ಮಗಳೆಲ್ಲ

ನಿಂತುಹೋಗಿ ದೇವತೆಗಳು ಹವಿರ್ಭಾಗವಿಲ್ಲದೆ ಉಪವಾಸದಿಂದಿರಬೇಕಾಯಿತು. ಸೂರ್ಯ ಕಿರಣಗಳಿಲ್ಲದ್ದರಿಂದ ಭೂಲೋಕದ ಸ್ಥಿತಿಯೂ ತಲೆಕೆಳಗಾಗುವದಕ್ಕಾರಂಭಿಸಿತು. ಆಗ ದೇವತೆಗಳೆಲ್ಲರೂ ಸೇರಿ ವಿಂಧ್ಯಪರ್ವತದ ಗುರುವಾದ ಅಗಸ್ತ್ಯರ ಸಹಾಯವನ್ನು ಬೇಡಿದರು. ಅಗಸ್ತ್ಯರು ಅದಕ್ಕೊಪ್ಪಿ ಉತ್ತರ ದೇಶದಿಂದ ದಕ್ಷಿಣ ದೇಶದ ಕಡೆಗೆ ಬರುತ್ತಿರುವಾಗ ಅವರನ್ನು ಕಾಣುತ್ತಲೇ ವಿಂಧ್ಯಪರ್ವತವು ಮಹತ್ತಾದ ಗುರುಭಕ್ತಿಯಿಂದ ದೀರ್ಘದಂಡ ನಮಸ್ಕಾರವನ್ನು ಮಾಡಿತು. ಆಗ ಅಗಸ್ತ್ಯರು ತಾವು ಹಿಂದಿರುಗಿ ಬರುವವರೆಗೂ ಹೀಗೆಯೇ ಇರೆಂದು ಅದಕ್ಕೆ ಹೇಳಿ ದಕ್ಷಿಣದೇಶಕ್ಕೆ ಬಂದರು. ಅವರು ಮತ್ತೆ ಉತ್ತರಕ್ಕೆ ಹಿಂದಿರುಗಲೂ ಇಲ್ಲ. ವಿಂಧ್ಯಪರ್ವತವು ಏಳಲೂ ಇಲ್ಲ. ಹೀಗೆ ವಿಂಧ್ಯಪರ್ವತವು ತಾನು ಸೂರ್ಯನನ್ನು ಕೂಡ ಅಡ್ಡಗಟ್ಟುವೆನೆಂಬ ಗರ್ವವನ್ನು ವಹಿಸಿದ್ದಕ್ಕೆ ಫಲವಾಗಿ ಯಾವಜ್ಜೀವವೂ ನೆಲಹಿಡಿದಿರಬೇಕಾಯಿತು.

---

**ಕುಲ, ಬಲ, ಧನಾಕಾರ, ಯೌವನ,**
**ಲಲನೆ, ರಾಜ್ಯಗಳೆಂಬ ಮದಗಳು**
**ತಲೆಯ ಹಿಡಿದಿರೆ ರಾಜರಾಜನ ನಿಜಕುಮಾರಕರು ।**
**ಜಲದೊಳಂಗನೆಯರ ಸಮೇಳದ**
**ಲೊಲಿದು ವಿಹರಿಸುತಿರಲು ನಾರದ**
**ಮುಳಿದು ಶಪಿಸಲು ಮರಗಳಾದರು ಮಗನೆ ಕೇಳೆಂದ ॥ ॥೬೩॥**

**ತಾತ್ಪರ್ಯ:** ಕುಲಮದ, ಶೌರ್ಯಮದ, ಧನಮದ, ಆಕಾರ (ರೂಪ) ಮದ, ಯೌವನಮದ, ಸ್ತ್ರೀಮದ, ರಾಜ್ಯಮದ, ವಿದ್ಯಾಮದಗಳೆಂಬ ಅಷ್ಟಮದಗಳು ನೆತ್ತಿಗೇರಿದ್ದು ಕುಬೇರನ ಮಕ್ಕಳಾದ ನಳಕೂಬರ ಮತ್ತು ಮಣಿಗ್ರೀವರೆಂಬ ಇಬ್ಬರುಮಕ್ಕಳು ಸರೋವರದಲ್ಲಿ ನಾನಾ ಯುವತಿಯರ ಜೊತೆಯಲ್ಲಿ ನೀರಾಟ ಆಡುತ್ತಿದ್ದರು. ದೇವಪುತ್ರರಾಗಿಯೂ ಮಾನವರಂತೆ ಕೇಳಿ ಆಡುತ್ತಿದ್ದುದ್ದನ್ನು ಕಂಡು ನಾರದನು ಕೋಪಗೊಂಡು ಅವರಿಗೆ ಶಾಪಕೊಟ್ಟಾಗ ಅವಳಿ ಮರಗಳಾದರು ಎಂದು ಮಗ ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * ತಲೆಯ ಹಿಡಿದಿರೆ=ನೆತ್ತಿಗೇರಿರಲು; * ರಾಜರಾಜನ=ಕುಬೇರನ; * ನಿಜಕುಮಾರರು =ಮಕ್ಕಳು * ಸಮೇಳ=ನೀರಾಟ; ಮುಳಿದು=ಸಿಟ್ಟಾಗಿ

**ಟಿಪ್ಪಣಿ-೧:** ಕುಲ, ಬಲ, ಧನ, ಆಕಾರ, ಯೌವನ, ಲಲನೆ, ರಾಜ್ಯ ಮದಗಳೆಂಬ ೭ ಮದಗಳನ್ನು ಇಲ್ಲಿ ಹೇಳಿದೆ, ವಿದ್ಯಾಮದ ಸೇರಿ ಇವನ್ನು ಅಷ್ಟಮದಗಳೆನ್ನುತ್ತಾರೆ. ಈ ಪದ್ಯದಲ್ಲಿ ೭ ಮದಗಳನ್ನು ಹೇಳಿದೆ, ವಿದ್ಯಾಮದ ಬಿಟ್ಟಿದೆ. ಮದಗಳ ಬಗ್ಗೆ ಹೆಚ್ಚಿನ ವಿವರಗಳಿಗೆ ಶ್ರೀವತ್ಸ ನಿಘಂಟುವನ್ನು (ಪುಟ-೨೨೦) ನೋಡಿ.

## ಪೂರ್ವಕಥೆ-೧: ಕುಬೇರನ ಮಕ್ಕಳ ಮದೋನ್ಮತ್ತತೆ

ನಲಕೂಬರ ಮತ್ತು ಮಣಿಗ್ರೀವ ಎಂಬಿಬ್ಬರು ಕುಬೇರನ ಮಕ್ಕಳು ಒಂದುವೇಳೆ ಅನೇಕ ಯುವತಿಯರೊಡನೆ ಜಲಕ್ರೀಡೆಯನ್ನಾಡುತ್ತಿದ್ದರು. ಜಲಕ್ರೀಡೆಯಲ್ಲಿ ಎಲ್ಲರೂ ಬರೀ ಮೈಯಲ್ಲಿರುವ ಪದ್ಧತಿ. ಹೀಗಿರುವಾಗ ನಾರದರು ಆ ಮಾರ್ಗವಾಗಿ ಬಂದರು. ಅವರನ್ನು ಕಾಣುತ್ತಲೇ

ಸ್ತ್ರೀಯರೆಲ್ಲರೂ ನಾಚಿಕೆಯಿಂದ ತಮ್ಮ ಅವಯವಗಳನ್ನು ಮುಚ್ಚಿಕೊಳ್ಳುವ ಯತ್ನವನ್ನಾದರೂ ಮಾಡಿದರು. ಕುಬೇರನಮಕ್ಕಳು ತಮ್ಮಕುಲ, ಬಲ, ಧನ, ಆಕಾರ, ಪ್ರಾಯ, ಸ್ತ್ರೀ ಸಾನ್ನಿಧ್ಯ-ಮೊದಲಾದ ಮದದಿಂದ ಕಣ್ಣುಕಾಣದವರಾಗಿ ತಮ್ಮ ಉನ್ಮತ್ತಾವಸ್ಥೆಯಲ್ಲಿಯೇ ತಾವು ನರ್ತಿಸುತ್ತಿದ್ದರು. ಲೋಕಪಾಲಕನಪುತ್ರರಾಗಿದ್ದೂ ಕೂಡ ದೇಹಾಭಿಮಾನದಿಂದ ಕೂಡಿ ಸ್ಥಾವರ ಗಳಂತೆ ವರ್ತಿಸಿದ್ದನ್ನು ಕಂಡು ಅಸಹ್ಯಗೊಂಡು ನಾರದರು ಅವರಿಗೆ ಮರಗಳಾಗಿರೆಂದು ಶಾಪವನ್ನು ಕೊಟ್ಟರು. ಅದರಂತೆ ಕುಬೇರನ ಮಕ್ಕಳು ಅರ್ಜುನ (ಮತ್ತಿ) ವೃಕ್ಷಗಳಾಗಿ ತಮ್ಮ ಮದೋನ್ಮತ್ತತೆಯ ಫಲವನ್ನು ಕೈತುಂಬ ಉಂಡರು. ಆಮೇಲೆ ಎಷ್ಟೋಕಾಲದ ಮೇಲೆ ಶ್ರೀಕೃಷ್ಣನು ಬಾಲಲೀಲೆಯಿಂದ ಒರಳುಕಲ್ಲನ್ನು ಕಿತ್ತುಕೊಂಡು ಓಡುವಾಗ ಆ ಒರಳು ಈ ಎರಡು ಮತ್ತೀಮರಗಳ ನಡುವೆ ಹಾದು ಅವುಗಳನ್ನು ಕೆಡವಿದ ಮೇಲೆ ಅವರಿಗೆ ಆ ಜನ್ಮ ಹೋಯಿತು.

---

**ಮಚ್ಚರದೊಳಿತರರಿಗೆ ಹಾನಿಯ**
**ಹೆಚ್ಚಿಸುವರತಿ ಮೂರ್ಖತನದಲಿ**
**ಹುಚ್ಚುಹಿಡಿದವರಾಗುತೊಬ್ಬರಿಗೊಬ್ಬರಿದಿರಾಗಿ; ।**
**ನಿಚ್ಚನಿಚ್ಚಲು ಹೋರುವರು ಗಜ**
**ಕಚ್ಛಪನ್ಯಾಯದಲಿ; ಸರ್ಪವು**
**ಕಚ್ಚೆ ಬರಿಬಾಯೆಂಬ ಗಾದೆಯ ತೆರದಿ ನಿಷ್ಫಲವು ॥ ॥೬೪॥**

ತಾತ್ಪರ್ಯ: ವಿಂದ, ಅನುವಿಂದರೆಂಬ ಅಣ್ಣತಮ್ಮಂದಿರು ಆಸ್ತಿಯ ಮೋಹದಿಂದ ಅವಿವೇಕಿಗಳಾಗಿ ದುರಾಶಾಮತ್ತರಾಗಿ ಒಬ್ಬರಿಗೊಬ್ಬರು ಅಸೂಯೆಯಿಂದ ಕಚ್ಚಾಡುತ್ತಾ ಉಳಿದವರಿಗೆ ಹೆಚ್ಚು ಹೆಚ್ಚಾಗಿ ತೊಂದರೆಯುಂಟುಮಾಡುತ್ತಿದ್ದರು. ಪರಿಣಾಮವಾಗಿ ಋಷಿಯ ಶಾಪದ ಫಲವಾಗಿ ಆನೆ-ಆಮೆ ನ್ಯಾಯದ ಹಾಗೆ ಪ್ರತಿನಿತ್ಯವೂ ಕಾದಾಡುತ್ತಲೇ ಇದ್ದರು. ಹಾವು ಕಚ್ಚಿದರೂ ಅದರ ಬಾಯಿಗೆ ಆಹಾರವೇನೂ ಸಿಗುವುದಿಲ್ಲ ಎಂಬ ಗಾದೆಯಂತೆ ದ್ವೇಷಾಸೂಯೆಗಳಿಂದ ಹೋರಾಡಿ ಪರರಿಗೆ ಕೇಡೆಣಿಸಿದ ವಿಂದಾನುವಿಂದರಿಗೆ ಏನೂ ಪ್ರಯೋಜನವಾಗಲಿಲ್ಲ. ಅದರಿಂದ ಮತ್ಸರ ಸಲ್ಲದು.

**ಶಬ್ದಾರ್ಥ: * ಮಚ್ಚರ=ಮತ್ಸರ, ಅಸೂಯೆ; ನಿಚ್ಚ-ನಿತ್ಯ; * ನಿಚ್ಚನಿಚ್ಚಲು=ಪ್ರತಿನಿತ್ಯ, ಸದಾ * ಹೋರುವರು=ಕಾದಾಡುವರು; * ಕಚ್ಚೆ=ಕಚ್ಚಲು; * ಗಾದೆ=ಅನುಭವದ ವಾಣಿ; ಸರ್ಪ ಕಚ್ಚೆ ಬರಿ ಬಾಯ್=ಹಾವು ಕಚ್ಚಿದರೆ ಅದರ ಬಾಯಿಗೆ ಆಹಾರವೇನೂ ಸಿಗುವುದಿಲ್ಲ.**

**ಟಿಪ್ಪಣಿ-೧: ಗಜಕಚ್ಛಪನ್ಯಾಯ=ಆನೆಯು ಯಾರನ್ನೂ ಲಕ್ಷ್ಯದಲ್ಲಿಡದ ಪ್ರಾಣಿ, ಆಮೆ (ಕಚ್ಛಪ) ಬಹು ಹೆದರುವ ಸ್ವಭಾವದ ದಡ್ಡ ಪ್ರಾಣಿ. ಇವೆರಡೂ ತಮ್ಮ ತಮ್ಮ ಯೋಗ್ಯತೆಗಳನ್ನು ನೋಡಿಕೊಳ್ಳದೆ ಒಂದಕ್ಕೊಂದು ಹೋರಾಡುವರು.**

ವಿಭಾವಸು ಮತ್ತು ಸುಪ್ರತೀಕ ಎಂಬಿಬ್ಬರು ಋಷಿಗಳಿದ್ದರು. ಇವರಿಬ್ಬರೂ ಅಣ್ಣತಮ್ಮಂದಿರು. ಕಿರಿಯವನಾದ ಸುಪ್ರತೀಕನು ತನಗೆ ದಾಯದಭಾಗವನ್ನು ಕೊಡಬೇಕೆಂದು ಅಣ್ಣನಾದ ವಿಭಾವಸುವನ್ನು ಪೀಡಿಸುವದಕ್ಕಾರಂಭಿಸಿದನು. ವಿಭಕ್ತ ಕುಟುಂಬದವರೆನಿಸಿಕೊಳ್ಳುವುದು ಹಿರಿಯವನಿಗೆ ಇಷ್ಟವಿರಲಿಲ್ಲ. ಅವಿಭಕ್ತನೆನಿಸಿಕೊಳ್ಳುವದು ಕಿರಿಯವನಿಗೆ ಇಷ್ಟವಿರಲಿಲ್ಲ. ಇಬ್ಬರೂ ತಮ್ಮತಮ್ಮ ಹಠವನ್ನೇ ಹಿಡಿದರು. ದಿನದಿನಕ್ಕೆ ಇವರ ವಾದ ವಿವಾದವು ಬೆಳೆಯಿತು. ಕೊನೆಗೆ ಇಬ್ಬರಿಗೂ ಕೋಪೋದ್ರೇಕವಾಗಿ ಒಬ್ಬರಿಗೊಬ್ಬರು ಶಾಪವನ್ನು ಕೊಟ್ಟರು. ತಮ್ಮನ ಶಾಪದಿಂದ

ವಿಭಾವಸು ಮೂರು ಯೋಜನ ಎತ್ತರವೂ ಹತ್ತು ಯೋಜನ ಸುತ್ತಳತೆಯೂ ಉಳ್ಳ ಆಮೆಯಾದನು. ಅಣ್ಣನ ಶಾಪದಿಂದ ಸುಪ್ರತೀಕನು ಆರು ಯೋಜನ ಎತ್ತರವೂ ಅದರ ಎರಡರಷ್ಟು ಅಗಲವೂ ಉಳ್ಳ ಗಜವಾದನು. ಇವರಿಬ್ಬರೂ ಹಿಂದಿನಜನ್ಮದಲ್ಲಿ ಒಬ್ಬರಿಗೊಬ್ಬರು ಹೋರಾಡಿದ ಫಲವಾಗಿ ದೈವಯೋಗದಿಂದ ಮತ್ತೆ ಒಂದೇ ಸರೋವರದಲ್ಲಿ ಸೇರಿ ನಿತ್ಯವೂ ಜಗಳವಾಡುತ್ತಿದ್ದರು. ಆಮೆಯು ಗಜವನ್ನು ನೀರೊಳಕ್ಕೆಳೆಯುವದು, ಗಜವು ಆಮೆಯನ್ನು ನೀರ ಮೇಲಕ್ಕೆಳೆಯುವದು. ಇವೆರಡೂ ಹೀಗೆ ಕಾದಾಡುತ್ತಿದ್ದಾಗ ಅಮೃತವನ್ನು ತರುವದಕ್ಕಾಗಿ ಪ್ರಯಾಣ ಮಾಡುತ್ತಿದ್ದ ಗರುಡನು ತನ್ನ ತಂದೆಯ ಆಜ್ಞೆಯಂತೆ ಇವೆರಡನ್ನೂ ನುಂಗಿ ನೀರು ಕುಡಿದನಂತೆ. ಅಣ್ಣತಮ್ಮಂದಿರಿಬ್ಬರ ಪಾಲಿನ ಹೋರಾಟವು ಗರುಡನ ಹೊಟ್ಟೆ ತುಂಬುವದಕ್ಕೆ ಸಾಧಕವಾಯಿತು.

---

## ಕಾಮಕ್ರೋಧಾದಿಗಳು (೬೫–೭೭)

**ಕೋಪ ತನ್ನನು ಸುಡುವುದದರಿಂ**
**ಪಾಪಿ; ಗುರುಹಿರಿಯರ ಮನಕೆ ಸಂ**
**ತಾಪಕಾರಣವಾಗಿಹುದು; ಸೈರಣೆ ಸಮಾಧಾನ ।**
**ಪೋಪುದೊಡಲನು ಮರೆವನದರಿಂ**
**ಭಾಪು! ಕೋಪದ ಮಹಿಮೆಯೆಂತುಟೊ!!**
**ಶಾಪದಿಂದ ವಸಿಷ್ಠನೂರ್ವಶಿಗುದಿಸನೇ? ಮುನ್ನ ॥** **॥೬೫॥**

**ತಾತ್ಪರ್ಯ:** ಕೋಪವೆಂಬುದು ಆಯಾ ವ್ಯಕ್ತಿಯನ್ನೇ ಸುಟ್ಟು ನಾಶಮಾಡಲು ಯತ್ನಿಸುತ್ತದೆ. ಪರಿಣಾಮವಾಗಿ ಪಾಪಕೃತ್ಯ ಮಾಡುತ್ತಾ ಮಹಾಪಾಪಿ ಆಗುತ್ತಾನೆ. ಕೋಪ ಸಾಮಾನ್ಯರಿಗಷ್ಟೇ ಅಲ್ಲ ಗುರುಹಿರಿಯರ ಮನಸ್ಸಿನ ಸಂಕಟಕ್ಕೆ ಕಾರಣ ವಾಗುತ್ತದೆ. ಸಹನೆ, ಸಮಾಧಾನವನ್ನು ಕೋಪಿಷ್ಠನು ಕಳೆದುಕೊಳ್ಳುತ್ತಾನೆ. ಫಲವಾಗಿ ಮೈಮೇಲೆ ಎಚ್ಚರತಪ್ಪಿ ವರ್ತಿಸುತ್ತಾನೆ. ಭಲೆ! ಕೋಪದ ಪರಿಣಾಮವನ್ನು ಎಷ್ಟೆಂದು ಹೇಳೋಣ! ಪೂರ್ವದಲ್ಲಿ ವಸಿಷ್ಠ ಮಹರ್ಷಿ ಕೋಪದ ಫಲವಾಗಿ ಊರ್ವಶಿಯ ಗರ್ಭದಲ್ಲಿ ಹುಟ್ಟಬೇಕಾಯಿತು.

**ಶಬ್ದಾರ್ಥ: * ಸಂತಾಪ=ಸಂಕಟ; * ಸೈರಣೆ=ಸಮಾಧಾನ; * ಪೋಪುದು=ಹೋಗುವುದು; * ಒಡಲನು ಮರೆವನು=ಮೈಮೇಲೆ ಎಚ್ಚರತಪ್ಪಿ ವರ್ತಿಸುತ್ತಾನೆ; * ಉದಿಸನೇ=ಹುಟ್ಟಲಿಲ್ಲವೇ!**

### ಪೂರ್ವಕಥೆ : ವಸಿಷ್ಠರ ಕೋಪ

ವಸಿಷ್ಠರು ಬ್ರಹ್ಮನ ಮಾನಸಪುತ್ರರು. ಇವರು ಇಕ್ಷ್ವಾಕುವಂಶದ ಪುರೋಹಿತರು. ಒಮ್ಮೆ ಆ ವಂಶದಲ್ಲಿ ಪ್ರಸಿದ್ಧನಾದ ನಿಮಿ ಚಕ್ರವರ್ತಿಯು ದೊಡ್ಡದೊಂದು ಯಾಗವನ್ನು ಹೂಡಿ ಅದರ ಪೌರೋಹಿತ್ಯಕ್ಕೆ ವಸಿಷ್ಠರಿಗೆ ಅಕ್ಷತೆಯನ್ನು ಕಳುಹಿಸಿದನು. ಅದೇ ಸಮಯದಲ್ಲಿ ದೇವೇಂದ್ರನೊಂದು ಯಾಗವನ್ನು ನಡೆಸುತ್ತಿದ್ದದ್ದರಿಂದ ವಸಿಷ್ಠರು ಅದನ್ನು ಮುಗಿಸಿಕೊಂಡು ಬಂದು ಮಾಡಿಸುವುದಾಗಿ ಹೇಳಿ ಇಂದ್ರಲೋಕಕ್ಕೆ ಹೋದರು. ಇತ್ತ ನಿಮಿಯು ತನ್ನ ಯಾಗಕ್ಕೆ ಅನೇಕ ಋಷಿಗಳು ಬಂದು ನೆರೆದಿದ್ದರಿಂದ ಅದನ್ನು ಮುಂದಕ್ಕೆ ಹಾಕಲಿಚ್ಛಿಸದೆ ಬೇರೆಯವರ ಪೌರೋಹಿತ್ಯದಿಂದ ಯಾಗವನ್ನು ಮುಗಿಸಿಬಿಟ್ಟನು. ಆಮೇಲೆ ವಸಿಷ್ಠರು ಇಂದ್ರಲೋಕದಿಂದ ಹಿಂದಿರುಗಿ ನಿಮಿಯ ಬಳಿಗೆ ಬಂದಾಗ ನಿಮಿಯು ಮಲಗಿದ್ದನು. ತನ್ನನ್ನು ಬಿಟ್ಟು ಯಾಗವನ್ನು ಮಾಡಿದ ಈ ರಾಜನು ತನ್ನನ್ನು ಅಲಕ್ಷ್ಯ

ಮಾಡಿ ಮಲಗಿರುವನೆಂದು ತಿಳಿದು ವಸಿಷ್ಠರು ಕೋಪದಿಂದ ಅವನಿಗೊಂದು ಶಾಪವನ್ನು ಕೊಟ್ಟರು. ಆಗ ನಿರಪರಾಧಿಯಾದ ತನಗೆ ಶಾಪವನ್ನು ಕೊಟ್ಟಿದ್ದಕ್ಕಾಗಿ ಅವನು ದೇಹಾಂತರವನ್ನು ಪಡೆಯಿರೆಂದು ವಸಿಷ್ಠರಿಗೆ ಶಾಪವನ್ನು ಕೊಟ್ಟನು. ಆಮೇಲೆ ವಸಿಷ್ಠರು ಬ್ರಹ್ಮನ ಬಳಿಗೆ ಹೋಗಿ ಈ ಸಂಗತಿಯನ್ನು ತಿಳಿಸಿದರು. ಬ್ರಹ್ಮನು ವಸಿಷ್ಠರ ಯೋಗ್ಯತೆಗೆ ತಕ್ಕ ದೇಹಪ್ರಾಪ್ತಿಗೆ ತಕ್ಕ ಸ್ಥಳವು ಯಾವುದೆಂದು ವಿಚಾರಮಾಡಿ ಅವರನ್ನು ವರುಣಲೋಕದಲ್ಲಿದ್ದ ಮಿತ್ರಾವರುಣರ ಕಡೆಗೆ ಕಳುಹಿಸಿದನು. ಮಿತ್ರಾವರುಣರು ಅಲ್ಲಿ ವರುಣನು ಮಾಡುತ್ತಿದ್ದ ಒಂದು ಯಾಗಸಮಾರಂಭದಲ್ಲಿ ನೃತ್ಯವನ್ನು ಮಾಡುತ್ತಿದ್ದ ಊರ್ವಶಿಯನ್ನು ಕಂಡು ಕಾಮವಿಕಾರವನ್ನು ಹೊಂದಿದರಂತೆ. ಆ ಸಂದರ್ಭದಲ್ಲಿ ಅಷ್ಟು ಮಾತ್ರದಿಂದಲೇ ವಸಿಷ್ಠರು ಹೊಸದೇಹವನ್ನು ಪಡೆದರಂತೆ. ಇದು ದೇವೀಭಾಗವತದ ಕಥೆ. ಈ ಕಥೆಯನ್ನು ಶ್ರೀ ಶಂಕರಭಗವತ್ಪಾದರು ಯಾವದವಸ್ಥಿತಿರಾಧಿಕಾರಿಕಾಣಾಂ ಎಂಬ ಬ್ರಹ್ಮ ಸೂತ್ರ ಭಾಷ್ಯದಲ್ಲಿಯೂ ಉದಾಹರಿಸಿದ್ದಾರೆ. ಊರ್ವಶಿಯ ಸಾನ್ನಿಧ್ಯ ಪ್ರಭಾವವಾದ ಮಿತ್ರಾವರುಣರ ಕಾಮವಿಕಾರ ಮಾತ್ರದಿಂದ ಶರೀರವನ್ನು ಪಡೆದವರಾದ್ದರಿಂದ ವಸಿಷ್ಠರನ್ನು ಊರ್ವಶೀಪುತ್ರರೆನ್ನುವದು ಉಪಚಾರದ ಮಾತು. ಅದು ಹೇಗಾದರೂ ಇರಲಿ, ನಿಮಿಯ ಅಪರಾಧದ ತೂಕವನ್ನು ನೋಡದೆ ತಮ್ಮ ಕೋಪದ ಕೈಯಲ್ಲಿ ಸಿಕ್ಕಿದ ತಪ್ಪಿಗೆ ವಸಿಷ್ಠರು ಊರ್ವಶೀಪುತ್ರರಾಗಬೇಕಾಯಿತು.

---

**ಕಣ್ಣುಗಳು ಕೆಂಪಾಗೆ, ಮೋರೆಯ**
**ಬಣ್ಣವತಿರೌದ್ರವನು ತಳೆದಿರ**
**ಲನ್ನಪಾನದಲಿಚ್ಛೆಗೆಟ್ಟುರೆ ಕೋಪತಾಪದಲಿ ।**
**ಉಣ್ಣದುರಿಯುತ ಗುರುಹಿರಿಯರನು**
**ಕಣ್ಣುಗಾಣದೆ ಬರಿದೆ ಬಗುಳುವ,**
**ಸನ್ನಿಹಿಡಿದವನಂತೆ ನಡುಗುವ, ಕುಣಿವ, ಕೂಗುವನು ॥ ॥೬೬॥**

**ತಾತ್ಪರ್ಯ:** ಅತಿಯಾಗಿ ಕೋಪಾಗ್ನಿಗೆ ಒಳಗಾದವನ ಕಣ್ಣುಗಳು ಕೆಂಪಾಗುತ್ತವೆ. ಮುಖದ ಬಣ್ಣ ಕೆಟ್ಟು ಅತಿಘೋರಾಕಾರವನ್ನು ಹೊಂದುತ್ತಾನೆ. ಅನ್ನಪಾನಗಳಲ್ಲಿ ಆಸಕ್ತಿಯಿಲ್ಲದವನಾಗಿ ಆಹಾರಾದಿಗಳನ್ನು ಸ್ವೀಕರಿಸದೆ ಆವೇಶದಿಂದ ಗುರುಹಿರಿಯರನ್ನು ಕಣ್ಣುಕಾಣದೆ ಕುರುಡನಂತೆ ಲೆಕ್ಕಿಸದೆ ಅರ್ಥವಿಲ್ಲದ ಮಾತುಗಳಿಂದ ಹರಟುತ್ತಾ ಬುದ್ಧಿಭ್ರಮಣೆ ಆದವನಂತೆ ಕಂಪಿಸುತ್ತಾ ಕುಣಿಯುತ್ತಾ ಹುಚ್ಚುಹುಚ್ಚಾಗಿ ಕಿರುಚಾಡುತ್ತಾನೆ.

**ಶಬ್ದಾರ್ಥ:** * **ಮೋರೆ**=ಮುಖ; * **ಇಚ್ಛೆಗೆಟ್ಟು**=ಆಸಕ್ತಿಯಿಲ್ಲದವನಾಗಿ; * **ಉರೆ**=ಅತಿಯಾದ; * **ಉಣ್ಣದೆ**=ಆಹಾರಾದಿ ಸ್ವೀಕರಿಸದೆ; * **ಬಗುಳುವ**=ಹರಟುವ; * **ಸನ್ನಿ ಹಿಡಿದವನಂತೆ** =ಬುದ್ಧಿಭ್ರಮಣೆ ಆದವನ ಹಾಗೆ; * **ಕಣ್ಣುಗಾಣದೆ**=ಕಣ್ಣುಕಾಣದ ಕುರುಡನಂತೆ; * **ಕೂಗುವನು** =ಕಿರುಚಾಡುವನು

**ಟಿಪ್ಪಣಿ :** ಈ ಪದ್ಯಕ್ಕೆ ಹೊ.ಚಿ.ನವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ವಾಸಿಪಂಥಗಳೆಂಬ ಬಲುಮೆಯ**
**ಪಾಶದಲಿ ದೃಢವಾಗಿ ಬಿಗಿವಡೆ**
**ದಾ ಸುಯೋಧನಪಾಂಡುಪುತ್ರರು ಬಂಧುಜನಸಹಿತ ।**

**ನಾಶವಾದರು ಮೂರ್ಖತನದಿಂ**
**ದೇಸುಪುಣ್ಯವ ಗಳಿಸಿಕೊಂಡರು**
**ದ್ವೇಷವೆಂಬೀ ದೋಷದಿಂದಲಿ ಲೇಸು ದೊರಕುವದೆ ? ॥ ॥೬೭॥**

**ತಾತ್ಪರ್ಯ:** ಆ ದುರ್ಯೋಧನ ಮತ್ತು ಪಂಚಪಾಂಡವರು, ಬಂಧುಮಿತ್ರರ ಸಮೇತ ಹಠ ಮತ್ತು ಜೂಜು ಮತ್ತು ಮೂರ್ಖತನಗಳೆಂಬ ಬಲವಾದ ಪಾಶಗಳಿಂದ ಬಂಧಿತರಾಗಿ ನಾಶವಾದರು. ಎಷ್ಟೇ ಪುಣ್ಯವನ್ನು ಅವರು ಸಂಪಾದಿಸಿದರೂ ಹಗೆತನವೆಂಬ ದುಷ್ಟಸ್ವಭಾವದಿಂದ ಶ್ರೇಯಸ್ಸು ಅವರಿಗೆ ಸಿಗಲಿಲ್ಲ.

**ಶಬ್ದಾರ್ಥ:** **ವಾಸಿ**=ಹಠ; **ಪಂಥ**=ಜೂಜು; * **ದೃಢವಾಗಿ ಬಿಗಿನಡೆದು**=ಬಲವಾಗಿ ಬಂಧಿತರಾಗಿ; * **ಏಸು**=ಎಷ್ಟೊಂದು; * **ದೋಷ**=ದುಷ್ಟ ಸ್ವಭಾವ (ತಪ್ಪು); * **ಲೇಸು** (ಶ್ರೇಯಸ್ಸು).

## ಪೂರ್ವಕಥೆ : ಕೌರವಪಾಂಡವರ ಹಗೆತನ

ಧೃತರಾಷ್ಟ್ರ, ಪಾಂಡು ಎಂಬಿಬ್ಬರು ಅಣ್ಣತಮ್ಮಂದಿರಿದ್ದರು. ಧೃತರಾಷ್ಟ್ರನ ನೂರೊಂದು ಮಕ್ಕಳೂ ಪಾಂಡುವಿನ ಐವರುಮಕ್ಕಳೂ ಚಿಕ್ಕಂದಿನಂದಲೂ ಕೂಡಿ ಬೆಳೆಯುತ್ತಲೇ ಇದ್ದರೂ ಅವರಲ್ಲಿ ಒಳಗೊಳಗೇ ದಾಯಾದಮತ್ಸರವು ಬೆಳೆಯುತ್ತಲೇ ಇತ್ತು. ಆಟದಲ್ಲಿ ಕೂಡ ನೂರೊಂದು ಜನರೇ ಒಂದುಗುಂಪು; ಐವರೇ ಒಂದುಗುಂಪು. ನೂರೊಂದು ಜನರಿಗೆ ಕೌರವರೆಂದೂ ಐವರಿಗೆ ಪಾಂಡವರೆಂದೂ ಪ್ರಸಿದ್ಧಿ. ಪಾಂಡವರು ದೊಡ್ಡವರಾಗುವದಕ್ಕೆ ಮುಂಚೆಯೇ ಪಾಂಡುರಾಜನು ತೀರಿಕೊಂಡದ್ದರಿಂದ ಪಾಂಡವರು ಧೃತರಾಷ್ಟ್ರನ ಪೋಷಣೆಯಲ್ಲಿಯೇ ಬೆಳೆದರು. ಆದರೆ ಧೃತರಾಷ್ಟ್ರನು ಜೀವಂತನಾಗಿದ್ದದ್ದರಿಂದ ಸ್ವಭಾವವಾಗಿ ಕೌರವರ ಪ್ರತಿಷ್ಠೆಯೇ ಹೆಚ್ಚಾಗಿತ್ತು. ಕೌರವರು ಪಾಂಡವರನ್ನು ಹೇಗಾದರೂ ಮಾಡಿ ತೀರಿಸಿಬಿಡಬೇಕೆಂದು ಒಮ್ಮೆ ಅವರನ್ನೆಲ್ಲಾ ಒಂದು ಅರಗಿನ ಮನೆಯಲ್ಲಿಳಿದುಕೊಂಡಿರುವಂತೆ ಮಾಡಿ ಅದಕ್ಕೆ ಬೆಂಕಿಯನ್ನು ಹಚ್ಚಿದರು. ಪಾಂಡವರಲ್ಲೊಬ್ಬನಾದ ಭೀಮನು ತನ್ನ ಸಾಹಸದಿಂದ ತಮ್ಮ ಪರಿವಾರವನ್ನು ಕಟ್ಟಿಕೊಂಡು ಸುರಂಗಮಾರ್ಗವಾಗಿ ಆ ಸ್ಥಳವನ್ನು ಬಿಟ್ಟು ಪಾರಾದನು. ಆಮೇಲೆ ಪಾಂಡವರು ಬಂದು ತಮ್ಮ ಪಾಲನ್ನು ಕೇಳಿದಾಗ ಸರಿಯಾಗಿ ಕೊಡದೆ ಕೌರವರು ಮೋಸಗಾರಿಕೆಯ ಪಗಡೆಯಾಟದಿಂದ ಪಾಂಡವರನ್ನು ಸೋಲಿಸಿ ಅವರು ಹನ್ನೆರಡು ವರ್ಷ ವನವಾಸವನ್ನೂ ಒಂದುವರ್ಷ ಅಜ್ಞಾತವಾಸವನ್ನೂ ಮಾಡಿಕೊಂಡಿರುವ ಕಟ್ಟಿಗೆ ಒಳಪಡಿಸಿದ್ದಲ್ಲದೆ ಅವರ ಹೆಂಡತಿಯಾದ ದ್ರೌಪದಿಯನ್ನು ಸಭಾಮಂಟಪಕ್ಕೆ ಎಳೆದು ತರಿಸಿ ಸೀರೆಯನ್ನು ಸುಲಿಯುವುದರ ಮೂಲಕ ಆಕೆಯ ಮಾನಭಂಗವನ್ನು ಮಾಡಲು ಯತ್ನಿಸಿದರು. ಆಕೆ ದೇವರಿಗೆ ಶರಣುಹೊಕ್ಕು ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡಳು. ಆಮೇಲೆ ಪಾಂಡವರು ಕಾಡಿನಲ್ಲಿರುವಾಗ ಅಲ್ಲಿಗೆ ಹೋಗಿ ತಮ್ಮ ಅಟ್ಟಹಾಸವನ್ನು ತೋರಿಸಿ ಅವರ ಹೊಟ್ಟೆಯುರಿಯುವಂತೆ ಮಾಡಬೇಕೆಂದು ಕೌರವರು ಏನೇನೋ ಪ್ರಯತ್ನಗಳನ್ನು ಮಾಡಿದರು. ಆದರೆ ಅವೆಲ್ಲಾ ಇವರಿಗೇ ತಿರುಗಿ ಬಡಿದವು. ಅಜ್ಞಾತವಾಸದಲ್ಲಿದ್ದಾಗವರ ಗುರ್ತು ಹಿಡಿದು ಮತ್ತೆ ಅವರಿಗೆ ಹದಿಮೂರು ವರ್ಷಕ್ಕೆ ತಾಂಬೂಲವನ್ನು ಕೊಡಬೇಕೆಂದು ಸಂಚು ನಡೆಸಿದರು. ಅದೂ ಸಾಗಲಿಲ್ಲ. ಕೊನೆಗೆ ಪಗಡೆಯಾಟದ ಫಲವನ್ನೆಲ್ಲ ಅನುಭವಿಸಿ ಹಿಂದಿರುಗಿದ ಪಾಂಡವರು ತಮಗೆ ನ್ಯಾಯವಾಗಿ ಬರತಕ್ಕ ಪಾಲನ್ನು ಕೊಡದಿದ್ದರೆ ಕ್ಷಾತ್ರಧರ್ಮದಂತೆ ಸರ್ವಸ್ವವನ್ನೂ ತೆಗೆದುಕೊಂಡೇ ತೀರಬೇಕೆಂದು ಹಠವನ್ನು ಹಿಡಿದರು. ಕೌರವರ ಕಡೆ ಹನ್ನೊಂದಕ್ಷೋಹಿಣಿ, ಪಾಂಡವರ ಕಡೆ ಏಳಕ್ಷೋಹಿಣಿ–ಹೀಗೆ ಕುರುಕ್ಷೇತ್ರದಲ್ಲಿ ಹದಿನೆಂಟಕ್ಷೋಹಿಣಿಯ ದಂಡು ಸೇರಿ ಯುದ್ಧವನ್ನು ನಡೆಸಿತು. ಕೊನೆಗೆ

ಪಾಂಡವರೇ ಜಯಭೇರಿಯನ್ನು ಹೊಡೆಸಿದರು. ನ್ಯಾಯವಾದ ಪಕ್ಷವನ್ನು ಹಿಡಿದಿದ್ದ ಅವರಿಗೆ ಇದು ಎಷ್ಟೇ ಒಪ್ಪಿದ್ದರೂ ಆ ಯುದ್ಧದಲ್ಲಿ ತಂದೆ, ಮಾವ, ಅಣ್ಣ, ತಮ್ಮ, ಗುರು, ಶಿಷ್ಯ, ಬಂಧು, ಬಳಗ-ಮೊದಲಾದ ಯಾವ ವಾವೆಗಳನ್ನೂ ನೋಡದೆ ಒಬ್ಬರನ್ನೊಬ್ಬರು ಕಡಿದಾಡಿ ಹದಿನೆಂಟಕ್ಷೋಹಿಣಿಯ ಪ್ರಜೆಯೂ ಏಕಕಾಲದಲ್ಲಿ ನೆಲಕ್ಕೊರಗಿತು. ಕೌರವಪಾಂಡವರ ಹಗೆತನವು ಇಂಥ ಭಯಂಕರವಾದ ಪ್ರಲಯಕ್ಕೆ ಕಾರಣವಾಯಿತು.

---

**ಇಂಪು ತರತರವಾಗಲಕಟ! ಪ**
**ರಂಪರೆಯನೀಕ್ಷಿಸದೆ, ಗುಹ್ಯದ**
**ಲಂಪಟತ್ವದೊಳಿರುತ, ವೃದ್ಧಾಚಾರವನು ಬಿಟ್ಟ ।**
**ಕೆಂಪುತುಟಿಯಬಲೆಯರ ರೂಪಿನ**
**ಲಂಪಟದ ಪುರುಷರನು ರತಿಪತಿ**
**ಕಂಪುದೋರದವೋಲು ಕೊರಳನು ಕಂಪಿಸದೆ ಕೊಯ್ವ ॥ ॥೬೮॥**

**ತಾತ್ಪರ್ಯ :** ಸ್ತ್ರೀಮೋಹದ ಅಭಿಲಾಷೆ ಪುರುಷರಿಗೆ ನಾನಾಬಗೆಯಲ್ಲಿ ಇರುತ್ತದೆ. ಈ ಆಸಕ್ತಿ ಪರಂಪರಾಗತ ಶಿಷ್ಟಾಚಾರಗಳನ್ನು ಲಕ್ಷಿಸದೆ ಸ್ತ್ರೀಸಂಭೋಗಾಸಕ್ತಿಯಲ್ಲಿ ನಿರತರಾಗಿ ಕೆಂದುಟಿಯ ಚೆಲುವೆಯರ ಆಕರ್ಷಣೆಯಲ್ಲಿ ತಲ್ಲೀನರಾದ ಸ್ತ್ರೀಲಂಪಟ ಪುರುಷರ ಕೊರಳನ್ನು ಯಾರಿಗೂ ತಿಳಿಯದಹಾಗೆ ಸದ್ದಿಲ್ಲದೆ ನಿರ್ದಯಿಯಾಗಿ ಕತ್ತರಿಸುತ್ತಾನೆ.

**ಶಬ್ದಾರ್ಥ:** ಗುಹ್ಯ= ಸ್ತ್ರೀಪುರುಷರು ಮುಚ್ಚಿಕೊಂಡಿರುವ ಅವಯವಗಳು (ಭಗ, ಶಿಶ್ನ), ಲಂಪಟತ್ವ= ಆಸಕ್ತಿ, ಕಂಪುದೋರದವೋಲು=ಯಾರಿಗೂ ತಿಳಿಯದ ಹಾಗೆ, * ರತಿಪತಿ=ಮನ್ಮಥ, * ಕಂಪಿಸದೆ =ಅಳುಕದೆ, * ಕೊಯ್ವ=ಕತ್ತರಿಸುತ್ತಾನೆ, * ವೃದ್ಧಾಚಾರ=ಶಿಷ್ಟಾಚಾರ, * ಇಂಪು=ಅಭಿಲಾಷೆ.

**ಪಾಠಾಂತರ :** ಕೆಂಪುದೋರದವೋಲು=ರಕ್ತವು ಕಾಣದಂತೆ ಎಂಬ ಪಾಠಾಂತರ ಕೆಲವು ಕಡೆ ಉಂಟು. ಇಲ್ಲಿ ಕಂಪುದೋರದವೋಲು=ಯಾರಿಗೂ ತಿಳಿಯದಹಾಗೆ ಎಂಬ ಪಾಠವನ್ನು ಇಲ್ಲಿ ಸ್ವೀಕರಿಸಿದೆ.

---

**ಹರನ ಹಣೆಗಣ್ಣಿಂದಲುರಿದವ**
**ಮರಳಿ ಮನಸಿಜನೆನಿಸಿ ಲೋಕವ**
**ಸರಳಮೊನೆಯಲಿ ಕೊರಳಕೊಯ್ವನು ಸಾಯದಂದದಲಿ; ।**
**ಪರಿಹರಿಸಲಳವಲ್ಲವಾರಿಗು;**
**ಹರಿಹರಬ್ರಹ್ಮಾದಿಗಳು ಸ್ತ್ರೀ**
**ಪುರುಷವರ್ಗಮಿದೆಲ್ಲ ಗುಹ್ಯದ ಲಂಪಟದ ಬದುಕು ॥ ॥೬೯॥**

**ತಾತ್ಪರ್ಯ:** ಶಿವನ ಹಣೆಗಣ್ಣಿನಿಂದ ಸುಟ್ಟುಬೂದಿಯಾದವನು ಮತ್ತೆ ಮನುಷ್ಯರ ಮನಸ್ಸಿನಲ್ಲಿ ಹುಟ್ಟಿ ಮನಸಿಜ ಎನಿಸಿಕೊಂಡನು. ತನ್ನ ಹರಿತ ಬಾಣಗಳಿಂದ ಲೋಕದಜನರನ್ನು ಜೀವ ಹೋಗದಂತೆ ಹಿಂಸಿಸುವನು. ಇದನ್ನು ತಪ್ಪಿಸಿಕೊಳ್ಳಲು

ಸ್ತ್ರೀಪುರುಷರಲ್ಲಿ ಯಾರಿಗೂ ಸಂಭೋಗಾಸಕ್ತಿಯ ಬದುಕನ್ನು ಬಿಡಲು ಸಾಧ್ಯವಿಲ್ಲ. ಇದನ್ನು ತಪ್ಪಿಸಲು ಹರಿಹರಬ್ರಹ್ಮಾದಿಗಳಿಗೂ ಶಕ್ಯವಿಲ್ಲ.

**ಶಬ್ದಾರ್ಥ:** * ಹರ=ಶಿವ; ಮನಸಿಜ=ಮನುಷ್ಯರ ಮನಸ್ಸಿನಲ್ಲಿ ಹುಟ್ಟುವನು; * ಬಾಣದ ಮೊನೆ=ಹರಿತವಾದ ಬಾಣ; * ಕೊರಳಕೊಯ್ವನು=ಹಿಂಸಿಸುತ್ತಾನೆ; * ಸಾಯದ ಅಂದದಲಿ=ಜೀವ ಹೋಗದಂತೆ; * ಗುಹ್ಯದ ಲಂಪಟ=ಸಂಭೋಗಾಸಕ್ತಿ

**ಟಿಪ್ಪಣಿ :** ಈ ಪದ್ಯಕ್ಕೆ ಹೊ.ಚಿ.ನವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಮೂರುಕಾಲದಿ ಮುಳುಗಿ ನೀರಲಿ,**
**ನಾರಸೀರೆಯನುಟ್ಟು, ಪರ್ಣಾ**
**ಹಾರದಲಿ, ಮಳೆಗಾಳಿಗಂಜದೆ, ಬಿಸಿಲ ಲೆಕ್ಕಿಸದೆ, ।**
**ಘೋರತಪವನು ಮಾಡಿ, ವನವನು**
**ಸೇರಿಕೊಂಡಿಹ ಮುನಿಗಳೆಲ್ಲರು**
**ನಾರಿಯರ ವಶರಾಗಿಹೋದರು ಮಾರಗಿದಿರಾರು? ॥ ॥೭೦॥**

**ತಾತ್ಪರ್ಯ:** ಬೆಳಿಗ್ಗೆ, ಮಧ್ಯಾಹ್ನ, ಸಂಜೆ ತ್ರಿಕಾಲಗಳಲ್ಲಿ ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ಮಾಡಿಕೊಂಡು, ನಾರುಬಟ್ಟೆಯನ್ನು ಧರಿಸುತ್ತಾ, ತರಗೆಲೆಗಳನ್ನು ಭಕ್ಷಿಸುತ್ತಾ, ಮಳೆಗಾಳಿಗೆ ಅಳುಕದೆ, ಬಿಸಿಲಿನ ತಾಪಕ್ಕೆ ಅಂಜದೆ ಘೋರತಪಸ್ಸನ್ನು ಮಾಡುತ್ತಾ, ಕಾಡಿನಲ್ಲಿ ಕಾಲಕಳೆಯುವ ಎಲ್ಲ ಮುನಿಗಳು ಸ್ತ್ರೀ ವ್ಯಾಮೋಹಕ್ಕೆ ಒಳಗಾಗಿ ಹೋದರು. ಲೋಕದಲ್ಲಿ ಮನ್ಮಥನೆಂಬ ಮಹಾವೀರನಿಗೆ ಎದುರು ನಿಲ್ಲುವವರು ಯಾರೂ ಇಲ್ಲ.

**ಶಬ್ದಾರ್ಥ:** ಮೂರು ಕಾಲ=ಬೆಳಿಗ್ಗೆ, ಮಧ್ಯಾಹ್ನ, ಸಂಜೆ=ತ್ರಿಕಾಲ; ನಾರಸೀರೆ=ನಾರು ಬಟ್ಟೆ; ಪರ್ಣಾಹಾರ=ತರಗೆಲೆ ಆಹಾರ; ಮಾರ=ಮನ್ಮಥ

---

**ಆರುಮಿಲ್ಲದ ವಿಪಿನದಲಿ ಹಾ**
**ಳೂರ ಕೋಳಕೆ ಕಾಲ ತಗಲಿಸಿ,**
**ದಾರಿಗರಿಗವ ಹಲ್ಲುಗಿರಿವಂದದಲಿ ಸಂಸೃತಿಯ ।**
**ಘೋರದುಃಖಾಟವಿಯ ಮಧ್ಯದಿ**
**ಮಾರನೆಂಬ ಕಿರಾತನೊಡ್ಡಿದ**
**ನಾರಿಯೆಂಬೀ ಬಲೆಗೆ ಬಿದ್ದವಗಾರು ಗತಿಯೆಂದ ॥ ॥೭೧॥**

**ತಾತ್ಪರ್ಯ:** ನಿರ್ಜನವಾದ ಕಾಡಿನಲ್ಲಿ 'ಹಾಳೂರಕೋಳ'ವೆಂಬ ಸಂಕೋಲೆಗೆ ಕಾಲುಸಿಕ್ಕಿಕೊಂಡು ಬಿಡಿಸಿಕೊಳ್ಳಲಾರದೆ ದಾರಿಯಲ್ಲಿಹೋಗುವ ಪ್ರಯಾಣಿಕರಿಗೆ 'ಬಿಡಿಸಿರಪ್ಪಾ' ಎಂಬುದಾಗಿ ಗೋಗರೆಯುವ ರೀತಿಯಲ್ಲಿ ಸಂಸಾರವೆಂಬ ಭಯಂಕರವಾದ ದುಃಖಾರಣ್ಯದ ನಡುವೆ ಮನ್ಮಥನೆಂಬ ಬೇಡನು ಬೀಸಿದ ಸ್ತ್ರೀ ಎಂಬ ಜಾಲದಲ್ಲಿ ಸಿಲುಕಿದವನನ್ನು ಪಾರು ಮಾಡುವವರು ಯಾರಿದ್ದಾರೆ?

**ಶಬ್ದಾರ್ಥ:** * ಆರುಂ ಇಲ್ಲದ ವಿಪಿನ=ನಿರ್ಜನವಾದ ಕಾಡು; * ಕೋಳ=ಸೆರೆ, ಬೇಡಿ; * ಕಾಲ ತಗಲಿಸಿ=ಕಾಲು ಸಿಕ್ಕಿಸಿಕೊಂಡು; * ದಾರಿಗರು=ಪ್ರಯಾಣಿಕರು; * ಸಂಸೃತಿ=ಸಂಸಾರ; * ದುಃಖ ಅಟವಿ=ಶೋಕವೆಂಬ ಕಾಡು; * ಮಾರ=ಮನ್ಮಥ; ಕಿರಾತ=ಬೇಡ; * ನಾರಿ=ಸ್ತ್ರೀಮೋಹ; * ಬಲೆ=ಜಾಲ; * ಆರು ಗತಿ=ಯಾರುದಿಕ್ಕು?

**ಟಿಪ್ಪಣಿ :** ಈ ಪದ್ಯಕ್ಕೆ ಹೊ.ಚಿ.ನವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಬಡಿಶಗತವಹ ಮತ್ಸ್ಯನಂದದಿ**
**ಕೆಡೆದು, ಬಡಿಗಲ್ಲಿನಲಿ ಹೆಗ್ಗಣ**
**ಮಿಡುಕುವಂದದಿ ಮದನಶರಮಾಯಾಪ್ರಬಂಧದಲಿ ।**
**ತೊಡರಿ, ಮಡದಿಯ ನೋಟವೆಂಬೀ**
**ತಡಿಕೆವಲೆಯಲಿಸಿಕ್ಕಿ, ರೆಕ್ಕೆಯ**
**ಕಡಿದ ಪಕ್ಷಿಯ ತೆರದೊಳಡಿಯಿಡಲಾರನವನೆಂದ ॥ ॥೭೨॥**

**ತಾತ್ಪರ್ಯ:** ಗಾಳಕ್ಕೆ ಸಿಲುಕಿಕೊಂಡ ಮೀನಿನ ಹಾಗೆ ಬಂಧನಕ್ಕೆ ಸಿಕ್ಕಿಬಿದ್ದಿರುವ ಇತರರು ಬೀಸುವ ಕಲ್ಲೇಟಿಗೆ ಸಿಕ್ಕಿದ ಹೆಗ್ಗಣ ಕಣ್ಣುಕಣ್ಣು ಬಿಡುವ ಹಾಗೆ, ಮನ್ಮಥನ ಮೋಹವೆಂಬ ಮಾಯೆಯ ಕಟ್ಟಿನಲ್ಲಿ ಸಿಲುಕಿ, ಸ್ತೀಯರ ಕಡೆಗಣ್ಣೋಟವೆಂಬ ತಡಿಕೆಬಲೆಯೆಂಬ ದಟ್ಟಜಾಲದಲ್ಲಿ ಸೆರೆಯಾದ ರೆಕ್ಕೆಗಳನ್ನು ಕತ್ತರಿಸಿಹಾಕಿದ ಹಕ್ಕಿಯ ಪಾಡಿನಂತೆ ಮುಂದಕ್ಕೆ ಚಲಿಸಲಾರದೆ ಮಾನವನು ನರಳುತ್ತಿರುವನು.

**ಶಬ್ದಾರ್ಥ:** ಬಡಿಶ=ಮೀನನ್ನು ಹಿಡಿಯುವ ಗಾಳ; ಬಡಿಗಲ್ಲಿನಲಿ=ಇತರರು ತನ್ನ ಮೇಲೆ ಒಗೆಯುತ್ತಿರುವ ಕಲ್ಲಿನಿಂದ; ಮಿಡುಕುವಂದದಿ=ಕಣ್ಣುಕಣ್ಣು ಬಿಡುವ ಹಾಗೆ; * ಪ್ರಬಂಧದಿ=ಕಟ್ಟಿನಲ್ಲಿ; ತಡಿಕೆ ಬಲೆ=ತಪ್ಪಿಸಿಕೊಳ್ಳಲಾಗದಂತೆ ಒತ್ತೊತ್ತಾಗಿ ಹೆಣೆದಿರುವ ಬಲೆ; * ಅಡಿಯಿಡಲಾರನು =ಹೆಳವನಂತೆ ಚಲಿಸಲಾರ

---

**ಕರಿ, ತುರಗ, ಪಶು, ಪಕ್ಷಿ, ಮೃಗ, ಸೂ**
**ಕರ, ಶುನಕ, ಮಾರ್ಜಾಲ, ಕುಕ್ಕುಟ,**
**ಸರಘ, ಶಲಭ, ಸರೀಸೃಪಾಳಿ, ಜಳೂಕ, ಕ್ರಿಮಿ, ಕೀಟ, ।**
**ಪುರಗಗನಜಲವನಚರಂಗಳು**
**ಸುರನರೋರಗರೆಲ್ಲ ಮಿಥುನೀ**
**ಕರಿಸಿಕೊಂಡಿಹರ್ರೈಸೆ! ಗುಹ್ಯದ ಲಂಪಟದ ಬದುಕು ॥ ॥೭೩॥**

**ತಾತ್ಪರ್ಯ:** ಆನೆ, ಕುದುರೆ, ದನ, ಹಕ್ಕಿ, ಜಿಂಕೆ, ಹಂದಿ, ನಾಯಿ, ಬೆಕ್ಕು, ಕೋಳಿ, ಜೇನ್ನೊಣ, ಪತಂಗ, ಹಾವುಗಳ ಗುಂಪು, ಜಿಗಣೆ, ಸೂಕ್ಷ್ಮಜೀವಿಗಳು, ಹುಳುಗಳು, ಊರಲ್ಲಿ ಸಾಕುವಪ್ರಾಣಿಗಳು (ಪುರಚರ) ಆಕಾಶದಲ್ಲಿ ಹಾರುವ ಹಕ್ಕಿಗಳು (ಗಗನಚರ), ನೀರಿನಲ್ಲಿರುವ ಜೀವಿಗಳು (ಜಲಚರ) ಕಾಡಿನಲ್ಲಿರುವ ಪ್ರಾಣಿಗಳು (ವನಚರ),

ಸ್ವರ್ಗಲೋಕದ ದೇವತೆಗಳು, ಭೂಲೋಕದ ಮಾನವರು, ಪಾತಾಳಲೋಕದ ನಾಗರು, ಮೊದಲಾದವರೆಲ್ಲ ಎಲ್ಲಬಗೆಯ ಹೆಣ್ಣು-ಗಂಡುಗಳು ಜೋಡಿಯಾಗಿ ಸಂಭೋಗಾಸಕ್ತಿಯ ಬದುಕಿನಲ್ಲಿ ನಿರತವಾಗಿವೆ. ಆಹಾ!

**ಶಬ್ದಾರ್ಥ:** * ಕರಿ=ಆನೆ; * ತುರಗ=ಕುದುರೆ; * ಪಶು=ದನ; * ಪಕ್ಷಿ=ಹಕ್ಕಿ; * ಮೃಗ=ಜಿಂಕೆ, ಸೂಕರ=ಹಂದಿ; ಶುನಕ=ನಾಯಿ, *ಮಾರ್ಜಾಲ=ಬೆಕ್ಕು; ಸರಘ=ಜೇನ್ನೊಣ; ಶಲಭ=ಪತಂಗ; ಸುರ=ದೇವತೆಗಳು; ನರ=ಮಾನವರು; ಉರಗ=ನಾಗರು; * ಗುಹ್ಯ ಲಂಪಟದ ಬದುಕು =ಸಂಭೋಗಾಸಕ್ತಿಯ ಜೀವನ; * ಮಿಥುನೀಕರಿಸಿಕೊಂಡಿಹರು=ಹೆಣ್ಣು, ಗಂಡು ಜೋಡಿಯಾಗಿ ಕ್ರೀಡಾನಿರತರಾಗಿಹರು.

**ಪಾಠಾಂತರ:** ಕುಕ್ಕುಟ, ಸರಘ, ಶಲಭ, ಸರಿಸೃಪ, ಜಳೂಕ=ಮರ್ಕಟ, ಸರಟ, ಕುಕ್ಕುಟ, ಶಲಭ, ಸರೀಸೃಪ, ಜಲೂಕ (ಕು)

---

**ಸ್ತ್ರೀ ಪುರುಷರೆಂದೆಂಬ ಭೇದದ**
**ರೂಪಗಳ ಕಲ್ಪಿಸಿ, ರತೀಚ್ಛೆಯ**
**ಲಾಪರಿಯಲನ್ಯೋನ್ಯಸಂಗದಿ ಸಖ್ಯವನು ಗೈಸಿ, ।**
**ಈಪರಿಯ ವೀರ್ಯದಲಿ ಸಂತತಿ**
**ರೂಪನಾಮಗಳಾಗಿ ಪಸರಿಪ**
**ನೀ ಪರಿಯಿದೀಶ್ವರನ ಲೀಲಾಜಾಲ ನೋಡೆಂದ ॥ ॥೭೪॥**

**ತಾತ್ಪರ್ಯ:** ಹೆಣ್ಣು, ಗಂಡುಗಳೆಂಬ ವ್ಯತ್ಯಾಸಗಳಿಂದ ರೂಪಭೇದಗಳನ್ನು ಉಂಟುಮಾಡಿ ಸಂಸರ್ಗದ ಆಸೆ ಮೂಡಿಸಿ ಪರಸ್ಪರ ಸಂಭೋಗದ ಸುಖವನ್ನುಂಟು ಮಾಡಿ ಆ ಮೂಲಕ ವೀರ್ಯ ಸಂಯೋಗವಾಗಿ ಸಂತಾನ ಮೂಡಿಸಿ ಆ ಸಂತಾನಕ್ಕೆ ಹತ್ತಾರು ರೂಪನಾಮಗಳನ್ನು ನೀಡಿ ಪ್ರಜಾವೃದ್ಧಿ ಮಾಡಿದನು. ಈ ಕಾರ್ಯ ಪರಮೇಶ್ವರನ ಲೀಲಾಸಮೂಹವಾಗಿದೆ. ಯಾರಿಗೂ ತಿಳಿಯಲು ಅಸಾಧ್ಯವಾಗಿದೆ.

**ಶಬ್ದಾರ್ಥ:** ಪಸರಿಪನು=ಹರಡುವನು; ಲೀಲಾಜಾಲ=ಲೀಲೆ ಎಂಬ ಬಲೆ ಅಥವಾ ಲೀಲೆಗಳ ಸಮೂಹ; * ರತೀಚ್ಛೆ=ಸಂಸರ್ಗದ ಆಸೆ; ಅನ್ಯೋನ್ಯ ಸಂಗದಿ ಸಖ್ಯ=ಸಂಭೋಗದ ಸುಖ

---

**ಸ್ತ್ರೀಯರಿಗೆ ಪುರುಷೇಚ್ಛೆ, ಪುರುಷರಿ**
**ಗಾ ಯುವತಿಯರೊಳಿಚ್ಛೆಯಿಂತೀ**
**ನ್ಯಾಯದ ಪರಂಪರೆಯ ನೋಡಲನಾದಿಸಿದ್ಧವಲಾ ।**
**ಮಾಯೆ ತಾನಾ ಬ್ರಹ್ಮನೇ ಮೊದ**
**ಲಾ ಯಿರುವೆ ಕಡೆಯಾಗಿ ನಡೆದಿರೆ**
**ಬಾಯಮಾತಿನಲೇನು ಬರಿದೇ ಬಿಡದು ಕಡುಮೋಹ ॥ ॥೭೫॥**

**ತಾತ್ಪರ್ಯ:** ಹೆಣ್ಣಿಗೆ ಗಂಡಿನಮೇಲೆ ಆಸೆ, ಗಂಡಿಗೆ ಹೆಣ್ಣಿನಲ್ಲಿ ಆಸೆ. ಈ ರೀತಿಯ ಮೋಹಧರ್ಮವು ನಡೆದುಕೊಂಡು ಬಂದ ಪದ್ಧತಿಯಾಗಿದೆ. ಇದು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದೆ ಎಂದು ತಿಳಿಯುತ್ತದೆ. ಬಹುದೊಡ್ಡವನಾದ ಚತುರ್ಮುಖಬ್ರಹ್ಮನಿಂದ ಮೊದಲ್ಗೊಂಡು ಬಹುಸಣ್ಣದಾದ ಇರುವೆಯವರೆಗೆ ಹೆಣ್ಣು-ಗಂಡಿನ ಮೋಹವೆಂಬ ಬಲೆಯಲ್ಲಿ ಎಲ್ಲರನ್ನು ಮಾಯೆ ತಾನಾಗಿ ಬೀಳಿಸಿರುವಾಗ ನಾವು ಆ ಬಗ್ಗೆ ಸುಮ್ಮನೆ ಮಾತಾಡಿದರೆ ಏನು ಬಂತು? ಏನೇ ಮಾಡಿದರೂ ಆ ಆಕರ್ಷಣೆ ಯಾರನ್ನೂ ಸುಮ್ಮನೆ ಬಿಡುವುದಿಲ್ಲ.

**ಶಬ್ದಾರ್ಥ:** ಇಚ್ಛೆ=ಮೋಹ; * ನ್ಯಾಯದ ಪರಂಪರೆ=ಮೋಹ ಧರ್ಮ ನಡೆದುಕೊಂಡು ಬಂದ ರೀತಿ; * ಅನಾದಿ ಸಿದ್ಧ=ಬಹು ಪ್ರಾಚೀನ ಕಾಲದಿಂದಲೂ ಬಂದಿದೆ; * ಆ ಬ್ರಹ್ಮನೇ ಮೊದಲು=ಆ ಬಹು ದೊಡ್ಡವನಾದ ಚತುರ್ಮುಖ ಬ್ರಹ್ಮನಿಂದ ಮೊದಲುಗೊಂಡು; * ಆ ಇರುವೆ ಕಡೆಯಾಗಿ=ಬಹು ಸಣ್ಣದಾದ ಇರುವೆತನಕ

**ಪಾಠಾಂತರ:** ತಾನಾ ಬ್ರಹ್ಮನೇ ಮೊದಲಾ ಎಂಬಲ್ಲಿ='ಬ್ರಹ್ಮಾರಭ್ಯವಾಗಿರುತೀ' ಎಂದಿದೆ ಕೆಲವು ಕಡೆಗಳಲ್ಲಿ, * ಮಾಯೆಯಾಟಕೆ ಬ್ರಹ್ಮನೆ ಮೊದಲಾ (ಅರಾಸೇ) (ಅ ಆ ಇ) ಎಂದಿದೆ.

---

**ಆವನಾಗಲಿ ಚೆಲುವನಾಗಿರೆ**
**ಭಾವೆ ಬಯಸುವಳವನ; ಭಾವೆಯ**
**ದಾವಳಾಗಲಿ ಚೆಲುವೆಯಾಗಿರೆ ಪುರುಷ ಕಾಮಿಸುವ; ।**
**ಈ ವಿಧದಲನ್ಯೋನ್ಯದೃಷ್ಟಿಯ**
**ಲಾವರಿಸಿ ಮೋಹಾತಿಶಯದಲಿ**
**ಸಾವರೆಂತುಟೊ! ದೇವಮಾಡಿದ ಮಾಯೆಯಕಟೆಂದ ॥ ॥೭೬॥**

**ತಾತ್ಪರ್ಯ:** ಸುಂದರಪುರುಷನು ಅಣ್ಣ, ತಮ್ಮ, ಬಂಧು, ಬಳಗ, ಪರಕೀಯ, ವಿದೇಶಿ ಯಾರೇ ಆಗಿರಲಿ ಅವನು ಚೆಲುವನಾಗಿದ್ದನೆಂದು ವಾವೆವರಸೆಗಳನ್ನು ಲೆಕ್ಕಿಸದೆ ಸ್ತ್ರೀ ಸುಂದರನಾದ ಅವನನ್ನು ಕಂಡು ಮೋಹಗೊಳ್ಳುತ್ತಾಳೆ. ಇದೇ ರೀತಿಯಲ್ಲಿ ಅಕ್ಕ, ತಂಗಿ, ಬಂಧು, ಬಳಗ, ಅವಿವಾಹಿತೆ, ಅನ್ಯ ಸ್ತ್ರೀ, ವಿದೇಶಿಯಳು ಯಾವ ಸ್ತ್ರೀಯೇ ಆಗಿರಲಿ ಅವಳು ಚೆಲುವೆ ಆಗಿದ್ದರೆ ಸಾಕು ಪುರುಷನು ಅವಳಲ್ಲಿ ಮೋಹಗೊಳ್ಳುತ್ತಾನೆ. ಈ ರೀತಿಯಲ್ಲಿ ಸ್ತ್ರೀಪುರುಷರಿಬ್ಬರೂ ಪರಸ್ಪರ ಸೌಂದರ್ಯದ ನೋಟಕ್ಕೆ ಒಳಗಾಗಿ ಒಬ್ಬರು ಇನ್ನೊಬ್ಬರಿಗಾಗಿ ಮೋಹದ ಪರವಶತೆಯಿಂದ ಪ್ರಾಣಬಿಡಲೂ ಸಿದ್ಧರಾಗಿರುವರು ಅಯ್ಯೋ! ದೇವರುಮಾಡಿದ ಮಾಯೆಯ ಪ್ರಭಾವವನ್ನು ಎಷ್ಟೆಂದು ಹೇಳೋಣ!

**ಶಬ್ದಾರ್ಥ:** ಭಾವೆ=ಭಾಮೆ, ಸ್ತ್ರೀ; * ಕಾಮಿಸುವ=ಮೋಹಿಸುವ; * ಅನ್ಯೋನ್ಯ ದೃಷ್ಟಿ=ಪರಸ್ಪರ ಸೌಂದರ್ಯ ನೋಟ; * ಮಾಯೆ=ಬಯಲಭ್ರಮೆ

---

**ಸ್ತ್ರೀ ಪುರುಷರಿಗೆ ಸರಸ ಮಿಗೆ ಸ**
**ಲ್ಲಾಪದಿಂದಲಿ ಮದನಕದನೋ**
**ದ್ದೀಪನದಲನ್ಯೋನ್ಯವತಿಶಯವಾಗುತನುರಾಗ ।**
**ಲೇಪವಡೆದಿರೆ, ಚಿತ್ತದಲಿ ಸಂ**
**ತಾಪವಗಲಿದರವರಿಗವರಿಗೆ**
**ಭಾಪು! ಮಾಯೆಯ ಪರಿಯದೆಂತುಟೊ! ಬಯಲಭ್ರಮೆ ಬಿಡದು ॥ ॥೭೭॥**

**ತಾತ್ಪರ್ಯ:** ಹೆಣ್ಣು, ಗಂಡುಗಳು ಸೌಂದರ್ಯಕ್ಕೆ ಮರುಳಾಗಿ ಮಾತುಕಥೆ ಆಡುತ್ತಾ ವಿನೋದದಿಂದ ಹೆಚ್ಚು ಹೆಚ್ಚು ಆಕರ್ಷಿತರಾಗಿ ಸಂಭೋಗಸುಖದಲ್ಲಿ ಸಂಪರ್ಕ ಪರಸ್ಪರ ಅಧಿಕವಾಗುತ್ತ, ಮೋಹದ ಬಂಧನಕ್ಕೆ ಒಳಗಾದಾಗ ಇದ್ದಕ್ಕಿದ್ದಂತೆ ಒಬ್ಬರು ಇನ್ನೊಬ್ಬರು ದೂರ ಸರಿಯಬೇಕಾಗಿ ಬಂದರೆ ಅವರಿಬ್ಬರ ಮನಸ್ಸಿನಲ್ಲಿ ತಡೆಯಲಾಗದ ವಿರಹಉಂಟಾಗಿ ತೊಳಲಾಡುತ್ತಾರೆ. ಭಲೆ! ಮಾಯೆಯ ಮಹಿಮೆಯನ್ನು ಎಷ್ಟೆಂದು ಹೇಳೋಣ, ಯಾರೊಬ್ಬರೂ ಮಾಯೆಯ ಭ್ರಾಂತಿ ವಿಲಾಸದಿಂದ ತಪ್ಪಿಸಿಕೊಳ್ಳಲಾರರು.

**ಶಬ್ದಾರ್ಥ :** * ಲೇಪ=ಬಂಧನ; ಚಿತ್ತ=ಮನಸ್ಸು; * ಬಯಲ ಭ್ರಮೆ=ಭ್ರಾಂತಿ ವಿಲಾಸ; * ಮದನ ಕದನ=ಸಂಭೋಗ ಸುಖ; * ಉದ್ದೀಪನದಲಿ=ವೃದ್ಧಿಗೊಳಿಸುತ್ತಾ; * ಅನ್ಯೋನ್ಯವು =ಪರಸ್ಪರ ಸ್ನೇಹ; ಅನುರಾಗ=ಮೋಹ

**ಅನ್ವಯ ಕ್ರಮ :** ಚಿತ್ತದಲಿ ಸಂತಾಪನಗಲಿದರವರಿಗವರಿಗೆ=ಅಗಲಿದರೆ ಅವರಿಗವರಿಗೆ ಚಿತ್ತದಲಿ ಸಂತಾಪವು ಆಗುವುದೆಂದು ಭಾವ.

---

## ಮಾಯೆ (೭೮)

**ಮಾಯೆಯೆಂದೆನಲೇನು? ವಿಷಯನಿ**
**ಕಾಯಲಂಪಟತನವದರೊಳಗು**
**ಮಾ ಯುವತಿಯಲಿ ನೋಟಬೇಟದಿ ಕೂಟವನು ಪಡೆದು, ।**
**ಕಾಯವವಳಿಗಧೀನವಾಗಿರೆ,**
**ಗಾಯವಡೆದಂಗಜನ ಬಾಣಕೆ,**
**ಬಾಯಕಿಸಿದಾಯಾಸಗೊಂಬುದೆ ಮಾಯೆ ಕೇಳೆಂದ ॥ ॥೭೮॥**

**ತಾತ್ಪರ್ಯ:** ಮಾಯೆ ಎಂದರೇನು? ಪುರುಷನು ಹೊರಗಣ ಭೋಗಸಾಧನಗಳಲ್ಲಿ ಆಸಕ್ತನಾಗಿರುವುದೇ ಅದರ ಲಕ್ಷಣವಾಗಿದೆ. ಅದೇರೀತಿ ತಾನು ಆಸಕ್ತನಾದ ಯುವತಿಯ ಚೆಲುವಿನಆಕಾರ ಮತ್ತು ಆಕರ್ಷಣೆಗಳಿಂದ ಅವಳ ದೇಹಸಂಗಮಾಡಿ ತನ್ನನ್ನು ಪೂರಾ ಅವಳಿಗೆ ಒಪ್ಪಿಸಿ ಮನ್ಮಥನ ಬಾಣವೆಂಬ ಸ್ತ್ರೀಮೋಹದ ಪೆಟ್ಟಿಗೆಸಿಲುಕಿ ನೋಯುವುದು ಮತ್ತು ಹಾತೊರೆದು ಬಳಲುವುದೇ ಮಾಯೆಯಾಗಿದೆ.

**ಶಬ್ದಾರ್ಥ:** ವಿಷಯ ನಿಕಾಯ ಲಂಪಟತನವು=ಹೊರಗಣ ಭೋಗಸಾಧನಗಳಲ್ಲಿ ಆಸಕ್ತನಾಗಿರುವುದು; ಕೂಟ=ಸಂಗ; * ನೋಟಬೇಟ=ದೇಹದ ಚೆಲುವು ಮತ್ತು ಆಕರ್ಷಣೆ; * ಕಾಯ=ದೇಹ; * ಅಂಗಜನ ಬಾಣಕ್ಕೆ=ಮೋಹಕ್ಕೆ ಮನ್ಮಥನ ಬಾಣವೆಂಬ; * ಬಾಯಕಿಸಿದು=ಹಾತೊರೆದು; * ಆಯಾಸಗೊಂಬುದು=ಬಳಲುವುದು.

---

## ಶರೀರದ ಹೊಲಸು (೭೯-೮೪)

ಚೆಂದುಟಿಯ, ಥಳಥಳಿಪ ಕದಪಿನ,
ಕುಂದರದನದ, ಕುಟಿಲಕುಂತಲ
ದಿಂದೆಸೆವ ಪೆರೆನೊಸಲ, ಬೆಳಗುವ ಸೋಗೆಗಣ್ಣುಗಳ, ।
ಮಂದಹಾಸದಲಿಂದು ಸೌಖ್ಯವಿ
ದೆಂದು ಕೊರಚಾಡುವರು ಶ್ಲೇಷ್ಮದ
ಮಂದಿರದ ಬಾಗಿಲುಗಳಂದದ ಮುಖದ ಚಂದವನು ॥ ॥೭೯॥

**ತಾತ್ಪರ್ಯ:** ಸ್ತ್ರೀಯರ ಕೆಂಪಾದ ತುಟಿಗಳು, ಹೊಳೆಹೊಳೆವ ಕೆನ್ನೆಗಳು, ಮೊಲ್ಲೆ ಮೊಗ್ಗಿನಂತಿರುವ ಬಿಳುಪಾದ ಹಲ್ಲುಗಳು, ಕೊಂಕಾದ ಮುಂಗುರುಳುಗಳಿಂದ ಕಂಗೊಳಿಸುವ ಚಂದ್ರನಂತೆ ದುಂಡಾದ ಕಾಂತಿಯುಕ್ತ ಹಣೆಯೂ, ನವಿಲಿನ ಕಣ್ಣುಗಳಂಥ ಕಣ್ಣುಗಳ, ಪ್ರಕಾಶವೂ, ಮುಖಭಾವದಲ್ಲಿರುವ ಮುಗುಳನಗೆಯೂ ಕೂಡಿರುವ ಸ್ತ್ರೀಯರ ಚೆಲುವಾದ ಮುಖವು ಸುಖದಾಯಕವೆಂದು ಇಲ್ಲದ ಸೌಂದರ್ಯದ ಗುಣಗಳನ್ನು ಆರೋಪಿಸಿ ಕೊಂಡಾಡುತ್ತಿದ್ದಾರೆ. ಆದರೆ ವಾಸ್ತವದಲ್ಲಿ ಚೆಲುವಾಗಿ ಕಾಣುವ ನಾರಿಯರ ಮುಖವು ಕಫದ (ಗೊಣ್ಣೆಯ ಮನೆ) ಮಂದಿರದ ಪ್ರವೇಶ ದ್ವಾರವಾಗಿದೆ.

**ಶಬ್ದಾರ್ಥ:** ಪೆರೆನೊಸಲ=ಚಂದ್ರನಂಥ ಹಣೆಯ; ಸೋಗೆಗಣ್ಣುಗಳ=ನವಿಲಿನ ಕಣ್ಣುಗಳಂಥ ಕಣ್ಣುಗಳು; ಕೊರಚಾಡುವರು=ಇಲ್ಲದ ಗುಣಗಳನ್ನು ಆರೋಪಿಸಿ ಹೇಳುವರು; ಶ್ಲೇಷ್ಮದ ಮಂದಿರ=ಕಫದ ಮನೆ (ಗೊಣ್ಣೆಯ ಮನೆ); * ಮಂದಹಾಸ=ಮುಗುಳುನಗೆ; * ಕುಟಿಲಕುಂತಳ =ಕೊಂಕಾದ ಮುಂಗುರುಳು; * ಕುಂದರದನ=ಮೊಲ್ಲೆಯಂಥ ಬಿಳುಪಾದ ಹಲ್ಲಿನ ಸಾಲು; * ಕದಪು=ಕೆನ್ನೆ; * ಚೆಂದುಟಿ=ಕೆಂಪಾದ ತುಟಿಗಳು; ಸೋಗೆಗಣ್ಣು=ನವಿಲಿನ ಕಣ್ಣು.

---

ಕಚ್ಚೆ ಪಚ್ಚಳಗಳನು ನೋಡಿದೊ
ಡಚ್ಚ ಹೇಸಿಗೆ; ವಸ್ತ್ರದಿಂದಲಿ
ಮುಚ್ಚಿಹುದು; ಮೂಢರಿಗೆ ನೋಡಲು ಮೋಹಕರವಹುದು; ।
ಹುಚ್ಚರದ ಕಣ್ಣಾಗಣರೇತಕೆ!
ನಿಚ್ಚನಿಚ್ಚಲು ತೋಳ ತೊಡೆಗಳ
ಸ್ವಚ್ಛವಾಗಿಯೆ ತೊಳೆದೊಡಲ್ಲದೆ ಹೊದ್ದಲಳವಲ್ಲ ॥ ॥೮೦॥

**ತಾತ್ಪರ್ಯ:** ಹೆಣ್ಣು ಉಡುವ ಸೀರೆಯ ಕಚ್ಚೆಹಾಕುವ ಭಾಗದ ಅಂಗಾಂಗವನ್ನು (ತೊಡೆಸಂದಿ=ಯೋನಿಭಾಗ) ನೋಡಿದರೆ ನಿಜಕ್ಕೂ ಅಪ್ಪಟ ಹೊಲಸಿನ ಭಾಗ. ಅದು ಆಕರ್ಷಕವಾದ ಸೀರೆಯಿಂದ ಮುಚ್ಚಿರುತ್ತದೆ ಅಷ್ಟೆ. ಮೂರ್ಖರಿಗೆ ನೋಡಲು ಆ ಭಾಗ ಸುಂದರವಾಗಿ ಕಾಣುತ್ತದೆ. ಇದರಿಂದ ಅವರು ಹುಚ್ಚರಾಗಿದ್ದಾರೆ. ಸರಿಯಾಗಿ ಕಣ್ಣುಬಿಟ್ಟು ನೋಡಿ ಏಕೆ ನಿಜ ತಿಳಿಯಬಾರದು? ಪ್ರತಿನಿತ್ಯವೂ ತೋಳುತೊಡೆಗಳನ್ನು ನಿರ್ಮಲವಾಗಿ ಶುದ್ಧಗೊಳಿಸದ ಹೊರತು ಅದರ ಸಮೀಪಕ್ಕೆ ಸುಳಿಯಲು ಸಾಧ್ಯವಿಲ್ಲ.

**ಶಬ್ದಾರ್ಥ:** ಕಚ್ಚೆ=ಸೀರೆಯನ್ನು ತೊಡೆಯ ಸಂದಿಯಿಂದ ಹಾಯಿಸಿ ಹಿಂದೆ ಕಟಿಭಾಗದಲ್ಲಿ ಸಿಕ್ಕಿಸಿ ಉಡುವ ವಸ್ತ್ರ ವಿನ್ಯಾಸ (ತೊಡೆ ಸಂದಿ, ಯೋನಿಭಾಗ) ಪಚ್ಚಳ=ಸೆರಗು ಹೊದಿಕೆಯ ಭಾಗ (ತೋಳ ಸಂದಿ) ಕಂಕಳು ಹೇಸಿಗೆ=ಹೊಲಸು; * ಮೂಢ=ಮೂರ್ಖ; * ಕಣ್ಣಾಗಣರು=ಕಣ್ಣು ಬಿಟ್ಟು ನೋಡುವುದಿಲ್ಲ; ನಿಚ್ಚ ನಿಚ್ಚಲು=ಪ್ರತಿನಿತ್ಯ; ಹೊದ್ದಲು=ಸಮೀಪಕ್ಕೆ ಹೋಗಲು; ಅಳವಲ್ಲ=ಶಕ್ಯವಿಲ್ಲ

**ಟಿಪ್ಪಣಿ:** ಕಚ್ಚೆ=ಕೌಪೀನ, ಪಚ್ಚಳ (ಪ್ರಕ್ಷಾಳ), ಬಚ್ಚಲು ಮನೆಗಳು ಎಂಬ ಅರ್ಥವನ್ನು ಚಿದಂಬರಯ್ಯನವರು ನೀಡಿದ್ದಾರೆ. ಈ ಸಂದರ್ಭಕ್ಕೆ ಅಷ್ಟು ಸೂಕ್ತವಲ್ಲ. ಪದ್ಯದಲ್ಲಿ ಸ್ತ್ರೀಯರ ತೋಳುಸಂದಿ, ತೊಡೆಸಂದಿಗಳನ್ನು, ತೋಳು ತೊಡೆಗಳ ಪದಕ್ಕೆ ಅನ್ವಯಿಸಬೇಕಾಗಿದೆ. ಆ ಕಾರಣದಿಂದ ಚಿದಂಬರಯ್ಯನವರ ಅರ್ಥ ಅಷ್ಟಾಗಿ ಹೊಂದುವುದಿಲ್ಲ. ಆದ ಕಾರಣ ತೊಡೆ ಸಂದಿ (ಯೋನಿ), ತೋಳು ಸಂದಿ (ಕಂಕುಳು) ಅರ್ಥವನ್ನು ಇಟ್ಟುಕೊಳ್ಳಲಾಗಿದೆ (ಅನುವಾದಕ).

---

**ಬಂಡರಂಗನೆಯರ ಶರೀರವ**
**ಕಂಡುಮೋಹಿಪರೇಕೆ? ಮೂತ್ರದ**
**ಗಂಡಿ ಹಿತ್ತಿಲಬಾಗಿಲಂದದೊಳಿಹುದಲಾ ಕುಂಡಿ; ।**
**ಚೆಂಡಿನಂದದಿ ಬಿಗಿದ ಮಾಂಸದ**
**ದಿಂಡು ಮೊಲೆಗಳು; ಮುಖವು ಶ್ಲೇಷ್ಮದ**
**ಜೊಂಡು; ಕಸದಂತೆಸೆವ ಕೇಶವು ಮುಸುಕಿಹುದು ಮಂಡೆ ॥ ॥೮೧॥**

**ತಾತ್ಪರ್ಯ:** ನಾಚಿಕೆಗೆಟ್ಟ ನಾರಿಯರ ಶರೀರವನ್ನು ಕಂಡು ಪುರುಷರು ಆಕರ್ಷಿತರಾಗುವುದು ಏಕೋ ತಿಳಿಯದಾಗಿದೆ. ಕುತೂಹಲದ ತೊಡೆಯಸಂದಿ ಮೂತ್ರದ ಕಂಡಿಯಾಗಿದೆ; ಇನ್ನು ಕುಂಡಿ; ಹಿತ್ತಲಬಾಗಿಲಲ್ಲಿರುವ ಹೊಲಸಿನ ನೆಲೆಯಾಗಿದೆ; ಗುಂಡಾದ ಚೆಂಡಿನಂಥ ಮೊಲೆಗಳು ಗಟ್ಟಿಯಾದ ಮಾಂಸದ ಮುದ್ದೆಗಳು; ಮುಖವು ಕಫದ ನೀರಿನಲ್ಲಿ ಕೊಳೆತ ಕಸದಂತೆ ಇದೆ; ಸುಂದರವೆಂದು ಭಾವಿಸುವ ಕೂದಲ ರಾಶಿಯು ಆವರಿಸಿದ ತಲೆ ಕಸ, ತುಂಬಿದ ಗೊಬ್ಬರದ ರಾಶಿಯಾಗಿದೆ. ಹೀಗೆ ಮೂರ್ಖರು ಅಸಹ್ಯದ ವಸ್ತುಗಳೆಂದು ತಿಳಿಯದೆ ನಾರಿಯನ್ನು ಸುಂದರ ವಸ್ತುಗಳ ಸಂಗ್ರಹವೆಂದು ಭಾವಿಸುತ್ತಾರೆ.

**ಶಬ್ದಾರ್ಥ:** ಬಂಡರು=ನಾಚಿಕೆಗೆಟ್ಟವರು; * ಮೋಹಿಪರು=ಆಕರ್ಷಿತರಾಗುವರು * ಮೂತ್ರದ ಗಂಡಿ=ಯೋನಿ; * ಕುಂಡಿ=ಪಿರ್ರೆ; * ದಿಂಡು=ಗಟ್ಟಿ; ಶ್ಲೇಷ್ಮ=ಕಫ (ಗೊಣ್ಣೆ); * ಜೊಂಡು=ನೀರಿನಲ್ಲಿ ಕೊಳೆತ ಕಸ; * ಮಂಡೆ=ತಲೆ

**ಟಿಪ್ಪಣಿ:** * ಹೊರ ಆಕಾರದಿಂದ ಸುಂದರವಾಗಿದೆ ಎಂದು ಮೂರ್ಖರು ಭಾವಿಸುತ್ತಾರೆ. ಆದರೆ ವಾಸ್ತವವಾಗಿ ದೇಹದ ಅಂಗಾಂಗಗಳು ಅಸಹ್ಯವಾಗಿರುವುದೆಂದು ಕವಿ ಇಲ್ಲಿ ಬಣ್ಣಿಸಿದ್ದಾನೆ.

---

**ಎಲುನರವಸೃಜ್ಮಾಂಸ ಸಂಕುಲ**
**ಹೊಲಸು ನಾರಲು ಕಂಡು ಹೇಸದೆ,**
**ಲಲನೆಯೆಂಬೀ ರಕ್ತಮಲವೆಲುಮಾಂಸಪಿಂಡದಲಿ ।**
**ಬಲುಮೆಯಾಗಿಯೆ ಭ್ರಮೆಯೊಳೊಂದಿದ**
**ಹೊಲೆಮನಕೆ ಹೋಲಿಕೆಯ ಪೇಳುವೆ**
**ಕೊಳೆತು ನಾರುವ ಹಡಿಕೆಗೆಳಸುವ ಹಳೆಯನಾಯಂತೆ ॥ ॥೮೨॥**

**ತಾತ್ಪರ್ಯ:** ಎಲುಬು, ನರ, ರಕ್ತ, ಮಾಂಸಗಳೆಂಬ ಕೊಳಕುರಾಶಿ ನಾರಿ ನಾತ ಬಡಿಯುತ್ತಿದ್ದರೂ ಅದನ್ನು ಕಂಡು ಅಸಹ್ಯಗೊಳ್ಳದೆ ಸುಂದರಸ್ತ್ರೀ ಎಂಬ ರೂಪದಲ್ಲಿ ಈ ರಕ್ತ, ಅಮೇಧ್ಯ, ಎಲುಬು, ಮಾಂಸದ ಮುದ್ದೆಯ ದೇಹದ ಬಗ್ಗೆ ಮೋಹದ ಭ್ರಾಂತಿಯಲ್ಲಿ ಬಿಡದೆ ದೃಢವಾದ ಆಕರ್ಷಣೆ ಹೊಂದಿರುವ ಪುರುಷನ ಹೊಲಸು ಮನಸ್ಸು, ಕೊಳೆತು ನಾರಿದ ಗಬ್ಬುನಾತದ ಮಾಂಸವನ್ನು ಬಯಸುತ್ತಿರುವ ಮುದಿನಾಯಿಗೆ ಸಮಾನವಾಗಿದೆ ಎಂದು ಹೇಳಬೇಕಾಗಿದೆ.

**ಶಬ್ದಾರ್ಥ: ಅಸೃಕ್**=ರಕ್ತ; * **ಸಂಕುಲ**=ಸಮೂಹ; **ಹೊಲಸು**=ಕೊಳಕು ರಾಶಿ; * **ಲಲನೆ**=ಸುಂದರ ಸ್ತ್ರೀ; * **ಬಲುಮೆಯಾಗಿಯೆ**=ದೃಢವಾಗಿಯೇ; * **ಭ್ರಮೆ**=ಮೋಹದ ಭ್ರಾಂತಿ; * **ಹೊಲೆಮನ**=ಮಲಿನ ಮನಸ್ಸು; * **ಹಡಿಕೆ**=ಕೆಟ್ಟವಾಸನೆಯ; * **ಹಳೆಯ ನಾಯಿ**=ಮುದಿನಾಯಿ

**ಟಿಪ್ಪಣಿ: ಹಳೆಯ ನಾಯಂತೆ**– ಹೇಸಿಗೆಯ ಶರೀರವನ್ನು ಎಷ್ಟು ಸಲ ಮೋಹಿಸಿದರೂ ಇನ್ನೂ ಅದರ ಹೊಲಸಿನ ವಿಚಾರವೇ ಮನಸ್ಸಿಗೆ ಬರಲಿಲ್ಲವೆಂಬುದನ್ನು ತೋರಿಸುವುದಕ್ಕೆ ಇಲ್ಲಿ ಹಳೆಯ ನಾಯ ನಿದರ್ಶನವು ಬಂದಿದೆ.

---

**ಗ್ರಾಮಸೂಕರಗೆಂತಮೇಧ್ಯವೆ**
**ಪ್ರೇಮವಾಗಿಹುದಾಪರಿಯೊಳೇ**
**ರಾಮಣೀಯಕ ಕಾಮುಕಗೆ ಕಾಮಿನಿಯ ದೇಹವಿದು ।**
**ಹಾ ! ಮಹೇಶ್ವರ !! ಎಂತು ಹಿತವೋ**
**ತಾಮಸರಿಗೀ ಮನುಜದೇಹವು**
**ರೋಮಮಲವೆಲುಮಾಂಸಮಜ್ಜಾದಿಗಳ ಸಂಕುಲವು ॥ ॥೮೩॥**

**ತಾತ್ಪರ್ಯ:** ಹಳ್ಳಿ ಹಂದಿಗೆ ಹೇಲು ಎಂದರೆ ಬಲು ಇಷ್ಟ. ಅದೇ ರೀತಿಯಾಗಿ ಕಾಮುಕನಿಗೆ ಹೆಣ್ಣಿನ ದೇಹ (ಎಂಬ ಹೊಲಸು) ಆಕರ್ಷಣೀಯವಾಗಿದೆ. ಅಯ್ಯೋ, ಶಿವನೇ! ತಲೆಯ ಕೇಶರಾಶಿ, ನಿತಂಬಗಳ ಮಲ, ದೇಹದ ವಕ್ರಾಕಾರದ ಎಲುಬುಗಳು, ಮಾಂಸಖಂಡಗಳು, ಎಲುಬಿನ ಸಾರಗಳಿಂದ ಕೂಡಿದ ಮಾನವ ದೇಹ ಅಜ್ಞಾನಿಗಳಿಗೆ

ಅದು ಹೇಗೆ ಸೊಗಸು ಎನ್ನಿಸುತ್ತದೋ ದೇವರೇ ಬಲ್ಲ!

**ಶಬ್ದಾರ್ಥ:** * **ಗ್ರಾಮ ಸೂಕರ**=ಹಳ್ಳಿ ಹಂದಿ; **ಅಮೇಧ್ಯ**=ಹೇಲು; * **ಪ್ರೇಮವಾಗಿಹುದು**=ಬಲು ಇಷ್ಟವಾಗಿದೆ; * **ಆಪರಿ**=ಆ ರೀತಿ; **ರಾಮಣೀಯಕ**=ಆಕರ್ಷಣೀಯ; * **ಹಾ ಮಹೇಶ್ವರ!**=ಅಯ್ಯೋ ಶಿವನೆ!; * **ತಾಮಸರಿಗೆ**=ಅಜ್ಞಾನಿಗಳಿಗೆ; **ಮಜ್ಜಾದಿಗಳು**=ಎಲುಬಿನ ಸಾರ ಇತ್ಯಾದಿ

**ಅನ್ವಯ:** ಕಾಮುಕನಿಗೆ ಕಾಮಿನಿಯ ದೇಹವಿದು ರಾಮಣೀಯಕ ಎಂದು ಅನ್ವಯ ಮಾಡಬೇಕು.

---

**ಮೆಚ್ಚಿದವರಿಗೆ ಮರಣ ಸುಖವೆಂ**
**ದುಚ್ಚರಿಸಿ ಹೇಳುವರು; ಮೂತ್ರದ**
**ಬಚ್ಚಲಾಗಿಹ ಕೊಚ್ಚೆಗೇತಕೆ ಮೆಚ್ಚಿಮರುಳಾಗಿ? ।**
**ಬೆಚ್ಚಿ ಬೆರೆಯುತ ಭ್ರಾಂತರಾಗಿಹ**
**ರಚ್ಚ ಹೇಸಿಗೆಗೇತಕಕಟಾ!**
**ಬಿಚ್ಚಿಹೇಳಲು ಹುರುಳಕಾಣೆನು ತುಚ್ಛತನುವಿದನು ॥ ॥೮೪॥**

**ತಾತ್ಪರ್ಯ:** ಪುರುಷರು ಉಚ್ಚೆಯ ಬಚ್ಚಲಗುಂಡಿಯಾಗಿರುವ ಜಾಗಕ್ಕೆ (ಯೋನಿಸುಖಕ್ಕೆ) ಆಕರ್ಷಿತರಾಗಿ ಇದೇ ಪರಮಸುಖವೆಂದು ಭ್ರಾಂತಿಗೆ ಒಳಗಾಗುತ್ತಾರೆ. ಈ ರೀತಿ ಮರಣಸುಖವನ್ನು ಎಂದರೆ ಮರಣಕಾಲದಲ್ಲಿ ಮೈಮೇಲೆ ಎಚ್ಚರವಿಲ್ಲದಂತೆ ಯಾವ ಸುಖದುಃಖಗಳ ಜ್ಞಾನವೂ ಇರುವುದಿಲ್ಲವೋ ಅಂಥ ಜ್ಞಾನದ ಅಭಾವವನ್ನೇ ಪಾಮರರು ಪರಮಸುಖವೆಂದು ತಿಳಿದು ಮೆಚ್ಚುತ್ತಾ ಅದನ್ನೇ ಹೊಗಳುತ್ತಾ ಇರುತ್ತಾರೆ. ಏತಕ್ಕೆ ಹೀಗೆ ಮಾಡುತ್ತಾರೆ? ಅಯ್ಯೋ ದೇವರೇ! ಅಪ್ಪಟ ಹೊಲಸಿನಲ್ಲಿಯೇ ಬೆಸೆದುಕೊಂಡು ನಾವೇ ಪರಮಸುಖಿಗಳೆಂದು ಗರ್ವಿಸುತ್ತಾ ಪುರುಷರು ಮರುಳರಾಗಿ ದ್ದಾರಲ್ಲಾ! ಅಸಹ್ಯಕರವಾದ ಈ ಹೀನಶರೀರ ಸುಖವನ್ನು ಇವರು ವಿವರವಾಗಿ ವರ್ಣಿಸುವುದರಲ್ಲಿ ನಾನು ಯಾವ ಪ್ರಯೋಜನವನ್ನೂ ಕಾಣೆನು.

**ಶಬ್ದಾರ್ಥ:** **ಬೆಚ್ಚಿ**=ಅದರಲ್ಲಿಯೇ ಬೆಸೆದುಕೊಂಡು, **ಬೆರೆಯುತ**=ಪರಮಸುಖಿಗಳೆಂದು ಗರ್ವಿಸುತ್ತಾ; * **ಮೂತ್ರದ ಬಚ್ಚಲು**=ಉಚ್ಚೆಯ ಬಚ್ಚಲಗುಂಡಿ (ಯೋನಿ); * **ಭ್ರಾಂತಿ**=ಭ್ರಮೆ; * **ಅಚ್ಚಹೇಸಿಗೆಗೆ**=ಅಪ್ಪಟ ಹೊಲಸಿಗೆ; * **ಬಿಚ್ಚಿ ಹೇಳಲು**=ವಿವರಿಸಲು; **ಹುರುಳು**=ಪ್ರಯೋಜನ; **ತುಚ್ಛತನು**=ಹೀನ ಶರೀರ

**ಟಿಪ್ಪಣಿ:** **ಮರಣ ಸುಖ**=ಮರಣ ಕಾಲದಲ್ಲಿ ಮೈಮೇಲಿನ ಎಚ್ಚರವಿಲ್ಲದ್ದರಿಂದ ಸುಖ-ದುಃಖಗಳ ಜ್ಞಾನವು ಇರುವುದಿಲ್ಲವಷ್ಟೆ. ಈ ಜ್ಞಾನದ ಅಭಾವವನ್ನೇ ಪಾಮರರು ಸುಖವೆಂದು ತಿಳಿಯುತ್ತಾರೆ.

---

## ಗುಹ್ಯದ ಲಂಪಟ (೮೫–೯೫)

ಮಡದಿಯಳಪೇಕ್ಷೆಯಲಿ ಧನವನು
ಪಡೆದು ಮದನಾತುರನು ಮದುವೆಯ
ಸಡಗರದಲಾದವನು ಸಂಭ್ರಮದಿಂದಲಾಕೆಯನು ।
ಬಿಡದೆ ರಮಿಸುತಲಿರ್ದು ಸ್ವರ್ಗವ
ಪಡೆವೆನೆಂಬಿಚ್ಚೆಯಲಿ ಕ್ರತುಗಳ
ನೊಡರಿಸುವನಿಹಪರದಿ ಗುಹ್ಯದ ಲಂಪಟವ ಬಯಸಿ ॥ ॥೮೫॥

ತಾತ್ಪರ್ಯ: ಕಾಮಾತುರನು ಅನ್ಯಾಯಮಾರ್ಗದಲ್ಲಿ ಹಣಸಂಪಾದನೆ ಮಾಡಿ ನಿರಂತರ ಹೆಣ್ಣಿನಸುಖಕ್ಕಾಗಿ ಹೆಂಡತಿಯೊಬ್ಬಳು ಬೇಕೆಂದು ಆಸೆಪಟ್ಟು ಉತ್ಸಾಹದಿಂದ ಆಡಂಬರದಲ್ಲಿ ಹೆಣ್ಣನ್ನು ಮದುವೆಯಾಗುತ್ತಾನೆ. ಅನಂತರ ಅವಳಜತೆ ಎಡಬಿಡದೆ ದೇಹದಸುಖವನ್ನು ಪಡೆಯುತ್ತಿದ್ದು ಅದುಸಾಲದೆಂದು ರಂಭೆ, ಊರ್ವಶಿ, ಮೊದಲಾದವರೊಡನೆ ಸಂಭೋಗಸುಖ ಪಡೆಯಲು ಸ್ವರ್ಗಪ್ರಾಪ್ತಿಗಾಗಿ ನಾನಾ ಬಗೆಯ ಇಹಪರ ಸಾಧನವಾದ ಯಜ್ಞಯಾಗಾದಿಗಳನ್ನು ಮಾಡುತ್ತಾನೆ. ಪುರುಷನ ಹೆಣ್ಣಿನ ಸುಖಾಸಕ್ತಿಗೆ ಮಿತಿಯೆಲ್ಲಿದೆ?

**ಶಬ್ದಾರ್ಥ: * ಮಡದಿ=ಹೆಂಡತಿ; * ಅಪೇಕ್ಷೆ=ಆಸೆ; * ಧನವನು ಪಡೆದು=ಹಣ ಸಂಪಾದಿಸಿ; * ಸಂಭ್ರಮ=ಉತ್ಸಾಹ; * ಸಡಗರ=ಆಡಂಬರ; * ರಮಿಸು=ದೇಹಸುಖ ಪಡೆ; * ಕ್ರತು =ಯಜ್ಞಯಾಗಾದಿಗಳು; ಒಡರಿಸುವನು=ಮಾಡುವನು; * ಗುಹ್ಯದ ಲಂಪಟ=ಸಂಭೋಗಾಸಕ್ತಿ;**

---

ಸ್ತ್ರೀಪುರುಷಸಂಯೋಗವೆಂಬುದು
ಕಾಪಥವಲಾ! ಕಷ್ಟ!! ಹರಹರ!!!
ಸೋಪಹಾಸವು ತಿಳಿದು ಹೇಳಲು; ಶ್ರೀಪತಿಯೆ ಬಲ್ಲ; ! ।
ಹ್ರೀಪದವು, ಕ್ಷಣಸುಖವಿಕಾರವು,
ಗೋಪ್ಯವೇಕಾಂತ್ಯೆಕನಿಷ್ಠವು
ಭಾಪು! ಮಾಯಾಭ್ರಾಂತಿಯೆಂತುಟೊ!! ಗ್ರಾಮ್ಯಧರ್ಮದಲಿ ॥ ॥೮೬॥

ತಾತ್ಪರ್ಯ: ಹೆಣ್ಣು ಗಂಡಿನ ಸಮಾಗಮ ಎಂಬುದು ಕೆಟ್ಟದಾರಿ, ಬಲು ನೀಚ ಕಾರ್ಯ! ಹಾ, ಪರಮೇಶ್ವರ! ಹೇಳಿದಷ್ಟೂ ನಗೆಗೀಡು ಆಗುವ ಸಂಗತಿ ಆಗಿದೆ. ಇದರ ದುಷ್ಪರಿಣಾಮ ತಿಳಿದು ವಿವರಿಸಲು ಆ ಶ್ರೀಹರಿಗೇ ಶಕ್ಯ! ಈ ನಶ್ವರ ಕಾಮಸುಖವು ಲಜ್ಜಾಸ್ಪದವಾದುದು (ಹ್ರೀಪದವು) ಯಾರಿಗೂ ಹೇಳಬಾರದಂತಹುದು (ಗೋಪ್ಯವು), ಯಾರಿಗೂ ಎಂದಿಗೂ ಕಾಣದಂತೆಯೇ ಮಾಡತಕ್ಕದ್ದು (ಏಕಾಂತ್ಯೆಕನಿಷ್ಠವು). ಅಹ! ಇಂಥ ಅನಾಗರಿಕ ಕೃತ್ಯದಲ್ಲಿ (ಗ್ರಾಮ್ಯಧರ್ಮ) ಸುಖವಿದೆಯೆಂದು ಭ್ರಮೆಗೆ ಒಳಗಾದವರ ಮರುಳತನವನ್ನು ಏನೆಂದು ಹೇಳೋಣ!

**ಶಬ್ದಾರ್ಥ:** ಕಾಪಥ=ಕೆಟ್ಟ ಹಾದಿ ; ಸೋಪಹಾಸವು=ನಗೆಗೀಡು; ಹ್ರೀಪದವು=ನಾಚಿಕೆಗೆ ಆಸ್ಪದವು; * ಕ್ಷಣಸುಖವಿಕಾರ=ನಶ್ವರಕಾಮಸುಖ; ಗೋಪ್ಯವು=ಯಾರಿಗೂ ಹೇಳಬಾರದಂಥದ್ದು; ಏಕಾಂತೈಕನಿಷ್ಠವು=ಎಂದೂ ಯಾರಿಗೂ ಕಾಣದಂತೆಯೇ ಮಾಡತಕ್ಕದ್ದು; ಗ್ರಾಮ್ಯಧರ್ಮ =ಅನಾಗರಿಕಕೃತ್ಯ

---

ಬಾಲ್ಯವಾರ್ಧಕ್ಯದೊಳಗೆಳ್ಳನಿ
ತಿಲ್ಲ ತನಗೆ ಸ್ವತಂತ್ರ; ಯೌವನ
ದಲ್ಲಿ ನಡೆವುದು ನಾಲ್ಕುದಿನವದು ತೋರುತಡಗುವುದು; !
ಸಲ್ಲಲಿತಸೌಂದರ್ಯಸೌಖ್ಯವ
ದೆಲ್ಲ ನಿಮಿಷಕೆ ವಿರಸವಪ್ಪುದು;
ಬಲ್ಲ ವಿದ್ವಜ್ಜನರು ಮೊದಲಾಗೆಲ್ಲ ಭ್ರಮಿಸುವರು ॥ ॥೮೭॥

**ತಾತ್ಪರ್ಯ:** ಎಳೆಯತನದಲ್ಲಿ ಮತ್ತು ಮುಪ್ಪಿನಲ್ಲಿ ಪರಾಧೀನವಾದ ಕಾರಣ ಎಳ್ಳಷ್ಟೂ ಸ್ವಾತಂತ್ರ್ಯ ಪುರುಷರಿಗಿರುವುದಿಲ್ಲ. ಇನ್ನು ಹರೆಯದಲ್ಲಿ ಉತ್ಸಾಹದಲ್ಲಿ ಸ್ವೇಚ್ಛೆಯಿಂದ ವರ್ತಿಸಲು ಸ್ವಲ್ಪಕಾಲ (ನಾಲ್ಕು ದಿನ) ಅವಕಾಶವಿರುತ್ತದೆ. ಆಮೇಲೆ ಆ ಅವಕಾಶವೂ ಕಣ್ಣೆದುರಿಗೇ ಮಾಯವಾಗುತ್ತದೆ. ಆಕರ್ಷಣೀಯವಾದ ದೇಹದ ಚೆಲುವು ಮತ್ತು ಅಂಗಾಂಗ ಸುಖಾನುಭವವು ನಿಮಿಷಮಾತ್ರದಲ್ಲಿ ನೀರಸವೆನಿಸುತ್ತದೆ. ಇದೆಲ್ಲವನ್ನೂ ತಿಳಿದಂಥವರಾಗಿದ್ದರೂ ವಿದ್ವಾಂಸರು, ಸಾಧುಗಳು, ಮುಂತಾದವರು ಸಂಭೋಗ ಸುಖವೇ ಪರಮಸುಖವೆಂದು ಭಾವಿಸುತ್ತಾರೆ.

**ಶಬ್ದಾರ್ಥ:** * ಬಾಲ್ಯ=ಎಳೆಯತನ; * ವಾರ್ಧಕ್ಯ=ಮುಪ್ಪು; * ಸ್ವತಂತ್ರ=ಸ್ವೇಚ್ಛೆ; ಯೌವನ=ಹರೆಯ; * ನಾಲ್ಕುದಿನ=ಸ್ವಲ್ಪಕಾಲ; ಸಲ್ಲಲಿತ=ಆಕರ್ಷಣೀಯ; * ಸೌಂದರ್ಯ=ದೇಹದ ಚೆಲುವು; ವಿರಸವಪ್ಪುದು=ನೀರಸವೆನಿಸುವುದು; * ವಿದ್ವಜ್ಜನ=ವಿದ್ವಾಂಸ.

**ಟಿಪ್ಪಣಿ :** ಈ ಪದ್ಯಕ್ಕೆ ಹೊ.ಚಿ.ನವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಬ್ರಹ್ಮಮೊದಲಾದೆಲ್ಲರ ಮನೋ
ಧರ್ಮವಿದು: ಹಗಲಿರುಳು ತಾವೇ
ಬ್ರಹ್ಮರೆಂದುಂ ತಮ್ಮ ಚರ್ಯವೆ ಸಚ್ಚರಿತವೆಂದು ।
ಬ್ರಹ್ಮವನು ಬೋಧಿಪರು ಪರರಿಗೆ;
ತಮ್ಮ ನಡತೆಯ ನೋಡಿ ತಮಗದು
ಧರ್ಮವೆಂಬರು; ಮಗನೆ ಮಾಯೆಯ ಗೆಲುವಡಳವಲ್ಲ ॥ ॥೮೮॥

**ತಾತ್ಪರ್ಯ:** ಸೃಷ್ಟಿ ಕರ್ತನಾದ ಚತುರ್ಮುಖಬ್ರಹ್ಮ ಮೊದಲಾದವರೆಲ್ಲ ಮಾಯೆಯ ಭ್ರಾಂತಿಗೆ ಒಳಗಾದ ಮನೋಧರ್ಮದವರಾಗಿದ್ದಾರೆ. ಅಹೋರಾತ್ರಿಗಳಲ್ಲಿ ಎಡಬಿಡದೆ ಮಾಯೆಗೆ ಒಳಗಾಗಿದ್ದರೂ ನಾವೇ ಪರಬ್ರಹ್ಮ ಸ್ವರೂಪರು, ನಮ್ಮ ವರ್ತನೆಯೇ

ಸನ್ನಡತೆಯೆಂದು, ಪರಬ್ರಹ್ಮ ಸ್ವರೂಪಜ್ಞಾನವನ್ನು ಇತರರಿಗೆ ತಿಳಿಸಲು ಯತ್ನಿಸುವರು. ನೀವೇಕೆ ಹೀಗೆ ಮಾಯೆಗೆ ಒಳಗಾಗಿರುವಿರಿ? ಎಂದು ಅವರ ನಡತೆಯನ್ನು ಕುರಿತು ಪ್ರಶ್ನಿಸಿದರೆ, ಅದು ತಮಗೆ ಯೋಗ್ಯವಾದ ಸ್ವಧರ್ಮವೆಂದು ಹೇಳುತ್ತಾರೆ. ಇದರರ್ಥ, ಮಾಯೆಯನ್ನು ಗೆಲ್ಲಲು ಹರಿಹರ ಬ್ರಹ್ಮಾದಿಗಳಿಗೂ ಶಕ್ಯವಿಲ್ಲ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** ಬ್ರಹ್ಮ=ಚತುರ್ಮುಖ ಬ್ರಹ್ಮ; ಬ್ರಹ್ಮರು=ಪರಬ್ರಹ್ಮಸ್ವರೂಪರು; ಬ್ರಹ್ಮವನು=ಪರಬ್ರಹ್ಮ ಜ್ಞಾನವನ್ನು; ತಮಗದು ಧರ್ಮ=ಸ್ವಧರ್ಮ; ಮಾಯೆ=ಮೋಹದ ಭ್ರಾಂತಿಯನ್ನು

---

**ಮಚ್ಚ ಜಿಹ್ವಾಲಂಪಟದಿ, ಗಜ**
**ಕಚ್ಚೆಯಲಿ, ನೇತ್ರದಲಿ ಶಲಭ, ಶ್ರು**
**ತೇಚ್ಛೆಯಲಿ ದರ್ವೀಕರನು, ಘ್ರಾಣೇಚ್ಛೆಯಲಿ ಭ್ರಮರ ।**
**ಹುಚ್ಚುಗೊಂಡೊಂದೊಂದು ವಿಷಯಕೆ**
**ಮೆಚ್ಚಿ ಕೆಟ್ಟವು; ಪಂಚವಿಧವಿಷ**
**ಯೇಚ್ಛೆಯಲಿ ತಗಲಿರ್ಪ ಮನುಜನು ಕೆಡುವದೇನರಿದು ॥ ೮೯ ॥**

**ತಾತ್ಪರ್ಯ:** ಮೀನು ನಾಲಗೆಯ ಚಪಲದಿಂದ ಗಾಳಕ್ಕೆ ಸಿಕ್ಕಿ ಬೀಳುತ್ತದೆ; ಗಂಡಾನೆಯು ಹೆಣ್ಣಾನೆಯ ಮೈಸ್ಪರ್ಶಕ್ಕೆ ಮಾರುಹೋಗುತ್ತದೆ; ಪತಂಗವು ದೀಪದ ಬೆಳಕಿಗೆ ವಶವಾಗುತ್ತದೆ; ಹಾವು ಕಿವಿಯಲ್ಲಿ ಪುಂಗಿಯ ದನಿ ಕೇಳಿ ಮೋಸ ಹೋಗುತ್ತದೆ. ಹೂವಿನ ವಾಸನೆಗೆ ದುಂಬಿಯು ಮೈಮರೆಯುತ್ತದೆ. ಹೀಗೆ ಒಂದೊಂದು ಇಂದ್ರಿಯಸುಖವನ್ನು ಅಪೇಕ್ಷಿಸಿ ಮೀನು, ಆನೆ, ಪತಂಗ, ಹಾವು, ದುಂಬಿಗಳು, ಮೋಹಗೊಂಡು ಕೆಡುವಾಗ ಇನ್ನು ಪಂಚೇಂದ್ರಿಯಗಳಿಂದ ಸುಖಕ್ಕೆ ಹಾತೊರೆದು ದೇಹಸುಖಕ್ಕೆ ಆಸೆಪಡುವ ಮನುಷ್ಯನು ಕೆಡುವುದರಲ್ಲಿ ಏನಾಶ್ಚರ್ಯವಿದೆ?

**ಶಬ್ದಾರ್ಥ:** ಮಚ್ಚ=ಮತ್ಸ್ಯ (ಮೀನು); ದರ್ವೀಕರ=ಹಾವು; ಶಲಭ=ಪತಂಗ; ಭ್ರಮರ=ದುಂಬಿ; ಗಜ=ಆನೆ; ಘ್ರಾಣ=ಮೂಗಿನಲ್ಲಿ ವಾಸನೆ ಹಿಡಿಯುವುದು

**ಟಿಪ್ಪಣಿ–೧:** ಪಂಚವಿಧವಿಷಯೇಚ್ಛೆಯಲಿ ತಗಲಿರ್ಪ ಮನುಜನು ಕೆಡುವುದೇನರಿದು:

ಮೀನಿನ ನಾಲಗೆಯು ಗಾಳದ ತುದಿಯ ಮಾಂಸದ ರುಚಿಗೂ, ಗಂಡಾನೆಯ ಮೈ ಹೆಣ್ಣಾನೆಯ ಮೈ ಸ್ಪರ್ಶಕ್ಕೂ, ಪತಂಗದ ಕಣ್ಣು ದೀಪದ ರೂಪಿಗೂ, ಹಾವಿನ ಕಿವಿಯು ನಾಗಸ್ವರದ ದನಿಗೂ, ದುಂಬಿಗಳ ಮೂಗು ಹೂವಿನ ವಾಸನೆಗೂ ಮೋಸ ಹೋಗುವುವು. ಮೋಹಗೊಂಡ ಮನುಷ್ಯನಿಗೆ ಈ ಐದು ಇಂದ್ರಿಯಗಳ ಇಚ್ಛೆಯೂ ಬಲವಾಗಿರುವುದರಿಂದ ಇವನು ಕೆಡುವುದು ಏನು ಆಶ್ಚರ್ಯ?

**ಟಿಪ್ಪಣಿ–೨:** * ಈ ಅಭಿಪ್ರಾಯವನ್ನು ಶ್ರೀಶಂಕರಾಚಾರ್ಯರು ವಿವೇಕ ಚೂಡಾಮಣಿಯಲ್ಲಿ ಒಂದು ಶ್ಲೋಕದಲ್ಲಿ ಹೇಳಿರುವರು. ವಿವೇಕ ಚೂಡಾಮಣಿಯ ಶ್ಲೋಕ ಹೀಗಿದೆ:

**ಶಬ್ದಾದಿಭಿಃ ಪಂಚಭಿರೇವ ಪಂಚ**
**ಪಂಚತ್ವಮಾಪುಃ ಸ್ವಗುಣೇವ ಬದ್ಧಾಃ**
**ಕುರಂಗ–ಮಾತಂಗ–ಪತಂಗ–ಮೀನ**
**ಭೃಂಗಾ ನರಃ ಪಂಚರಂಚಿತಃ ಕಿಮ್**

*(ವಿವೇಕ ಚೂಡಾಮಣಿ: ಶ್ಲೋಕ ೭೬; ಸಂ: ಆದಿದೇವಾನಂದ, ೧೯೬೧; ಪ್ರ: ರಾಮಕೃಷ್ಣಾಶ್ರಮ, ಮೈಸೂರು)*

ಜಿಂಕೆ, ಆನೆ, ಮಿಡತೆ, ಮೀನು, ದುಂಬಿ–ಈ ಐದು ಜೀವಿಗಳು ಶಬ್ದವೇ ಮೊದಲಾದ ಪಂಚ ವಿಷಯಗಳಲ್ಲಿ ತಮ್ಮತಮ್ಮ ಅಭಿಲಾಷೆಗೆ ಗೋಚರವಾಗಿರುವ ಯಾವುದೇ ಒಂದು ಗುಣಕ್ಕೆ ಬದ್ಧವಾಗಿ ಮೃತ್ಯುವನ್ನು ಹೊಂದುತ್ತವೆ. ಇನ್ನು ಪಂಚೇಂದ್ರಿಯ ಗಳಿಂದಲೂ ಕೂಡಿರುವ ಮನುಷ್ಯನ ವಿಷಯದಲ್ಲಿ ಹೇಳತಕ್ಕದ್ದೇನು?

(ಜಿಂಕೆಯು ಕಿವಿಯಲ್ಲಿ ಕೇಳುವ ಬೇಟೆಗಾರನು ಮಾಡುವ ಶಬ್ದದಿಂದಲೂ, ಆನೆಯು ಮೈಯಿಂದ ಹೆಣ್ಣಾನೆಯ ಸ್ಪರ್ಶದಿಂದಲೂ, ಮಿಡತೆಯು ಕಣ್ಣಿನಲ್ಲಿ ನೋಡುವ ದೀಪದ ರೂಪದಿಂದಲೂ, ಮೀನು ಗಾಳದಹುಳುವಿನ ರುಚಿಯಿಂದಲೂ, ದುಂಬಿಯು ಪುಷ್ಪದ ಪರಿಮಳದಿಂದಲೂ ನಾಶವಾಗುತ್ತದೆ. ಹೀಗೆ ಒಂದೊಂದು ಇಂದ್ರಿಯವಶಕ್ಕೆ ಒಳಪಟ್ಟ ಜಂತುವಿನ ಅವಸ್ಥೆಯೇ ಹೀಗಾದರೆ ಪಂಚೇಂದ್ರಿಯಗಳ ಹೊಡೆತಕ್ಕೆ ಸಿಕ್ಕಿ ಬಿದ್ದಿರುವ ಮನುಷ್ಯನ ಗತಿಯೇನು?– ಆದಿ ದೇವಾನಂದರ ವಿವೇಕಚೂಡಾಮಣಿಯ ಅನುವಾದ)

---

**ಕುಂಭಕುಚಗಳಿಗೆಳಸುತೂರ್ವಶಿ**
**ರಂಭೆ ಮೊದಲಾದಪ್ಸರೆಯರನು**
**ಸಂಭ್ರಮದಲನುಭವಿಸಿ ದಣಿಯದೆ, ಗೌತಮನ ಸತಿಗೆ ।**
**ಹಂಬಲಿಸಿ ಕಪಟದಲಿ ರಮಿಸಲು**
**ಜಂಭವೈರಿಗೆ ಯೋನಿಯೊಡಲನು**
**ತುಂಬಿತದರಿಂ ಕಾಮಕವಧಿಯ ಕಾಣೆ ನಾನೆಂದ ॥** ॥೯೦॥

**ತಾತ್ಪರ್ಯ:** ಇಂದ್ರನು ಊರ್ವಶಿ, ರಂಭೆ ಮೊದಲಾದ ಅಪ್ಸರೆಯರ (ದೇವಲೋಕದ ಸುಂದರಿಯರ) ಕೊಡಮೊಲೆಗಳ ಸೆಳೆತಕ್ಕೆ ಒಳಗಾಗಿ ಸಡಗರದಿಂದ ಸುಖಾನುಭವ ಹೊಂದಿದರೂ ತೃಪ್ತನಾಗದೆ ಗೌತಮ ಋಷಿಯಸತಿ ಅಹಲ್ಯೆಗೆ ಆಸೆಪಟ್ಟು ಮೋಸದಿಂದ ಅವಳೊಂದಿಗೆ ಸುಖಿಸಿದಾಗ (ಜಂಭಾಸುರನನ್ನು ಕೊಂದ) ಇಂದ್ರನಿಗೆ ಮೈಯೆಲ್ಲ ಯೋನಿಯ ಗುರುತಾಯಿತು. ಆದಕಾರಣ ಕಾಮಲಾಲಸೆಗೆ ಕೊನೆಯೇ ಇಲ್ಲ ಎನ್ನಲು ಈ ಪ್ರಸಂಗ ಸಾಕ್ಷಿ ಆಗಿದೆ.

**ಶಬ್ದಾರ್ಥ:** ಕುಂಭಕುಚ=ಕೊಡಮೊಲೆ; ಜಂಭವೈರಿಗೆ ಯೋನಿಯೊಡಲನು ತುಂಬಿತು=ಇಂದ್ರನಿಗೆ ಮೈಯೆಲ್ಲ ಯೋನಿಯ ಗುರುತಾಯಿತು; ಅವಧಿ=ಕೊನೆ, ಅಂತ್ಯ; ಒಡಲನುತುಂಬಿತು=ಮೈಯೆಲ್ಲಾ ಆಯಿತು;

### ಪೂರ್ವಕಥೆ: ಇಂದ್ರನ ಕಾಮಾಂಧತೆ

ಇಂದ್ರನು ಒಮ್ಮೆ ದಿಗ್ವಿಜಯಕ್ಕಾಗಿ ಹೊರಟಿದ್ದಾಗ ದಾರಿಯಲ್ಲಿ ಗೌತಮರ ಆಶ್ರಮದಲ್ಲಿ ಅವರ ಪತ್ನಿಯಾದ ಅಹಲ್ಯೆಯನ್ನು ಕಂಡು ಆಕೆಯ ರೂಪಲಾವಣ್ಯಕ್ಕೆ ಮರುಳಾಗಿದ್ದನು. ದಿಗ್ವಿಜಯವೆಲ್ಲ ಮುಗಿದಮೇಲೆ ಇಂದ್ರನ ಮನಸ್ಸು ಅಹಲ್ಯೆಯನ್ನು ನೆನೆಸಿಕೊಂಡಿತು. ಕಾಮಾಂಧತೆಯು ಮನುಷ್ಯನಿಂದ ಎಂಥೆಂಥ ಕೆಲಸಗಳನ್ನು ಮಾಡಿಸೀತೆಂದು ಹೇಳಲಾಗುವದಿಲ್ಲ. ರಾತ್ರಿಕಾಲದಲ್ಲಿ ಗೌತಮರು ಹೊರಗೆ ಹೋಗುವಂತೆ ಮಾಡಿ ಅಹಲ್ಯೆಯನ್ನು ವಶಮಾಡಿಕೊಳ್ಳಬೇಕೆಂಬ ಹಂಚಿಕೆಯನ್ನು ಹೂಡಿ ಇಂದ್ರನು ಕೋಳಿಯಾಗಿ ಬಂದು ನಡುರಾತ್ರಿಯಲ್ಲಿ ಗೌತಮರ ಆಶ್ರಮದ ಹತ್ತಿರ ಕೂಗಿದನು. ಬೆಳಕುಹರಿಯುವಹೊತ್ತೆಂದು ತಿಳಿದು ಗೌತಮರು ಒಡನೆ ಎದ್ದು ತಮ್ಮ ಸ್ನಾನಾಹ್ನಿಕಕ್ಕಾಗಿ ನದಿಗೆ ಹೋದರು. ಇತ್ತ ಇಂದ್ರನು ಗೌತಮರ ವೇಷದಿಂದ ಅಹಲ್ಯೆಯ ಬಳಿಗೆ ಬಂದು ಕೊನೆಗೆ ತಾನು ಇಂದ್ರನೆಂದೂ ತನಗೆ ವಶಳಾಗಿ ದೇವಸುಖದ ಸವಿಯನ್ನು ನೋಡೆಂದೂ ಅಹಲ್ಯೆಗೆ ಹೇಳಿದನು. ಅಹಲ್ಯೆಯೂ ಈ ಅಭಿಪ್ರಾಯಕ್ಕೆ ಮನಸ್ಸನ್ನು ಸೋತಳು. ಇಂದ್ರನ ಇಷ್ಟಾರ್ಥವೂ ನೆರವೇರಿತು. ಅಷ್ಟು ಹೊತ್ತಿಗೆ ಗೌತಮರು ನದಿಗೆ ಹೋಗಿ ಲಕ್ಷ್ಯಪೂರ್ವಕವಾಗಿ ಆಕಾಶವನ್ನು ನೋಡಿ ಇನ್ನೂ ಸ್ನಾನದ ಹೊತ್ತಲ್ಲವೆಂದು ತಿಳಿದು ಮನೆಗೆ ಹಿಂದಿರುಗಿದರು. ಅವರು ಬಾಗಿಲಿಗೆ ಬರುವಹೊತ್ತಿಗೆ ಗೌತಮರ ವೇಷದಲ್ಲಿದ್ದ ಇಂದ್ರನು ಹೊರಬಿದ್ದನು. ಗೌತಮರಿಗೆ ಎಲ್ಲವೂ ಗೊತ್ತಾಯಿತು. ಆಗ ಅವರು ವೃಷಣಹೀನನಾಗೆಂದು ಇಂದ್ರನಿಗೂ, ಶಿಲೆಯಾಗೆಂದು ಅಹಲ್ಯೆಗೂ ಶಾಪವನ್ನು ಕೊಟ್ಟು ತಾವು ತಪಸ್ಸಿಗೆ ತೆರಳಿದರು. ಹೀಗೆ ಇಂದ್ರನು ತನ್ನ ಒಂದುದಿನದ ಕಾಮಾಂಧತೆಯಿಂದ ಮುಂದಿನಸುಖದ ಆಧಾರವನ್ನೇ ಕಳೆದುಕೊಂಡು ಎಷ್ಟೋದಿನಗಳು ಬಾಯಿಬಾಯಿ ಬಿಡುತ್ತಿರಬೇಕಾಯಿತು.

---

**ಕ್ಲುಪ್ತಿಯಲಿ ಹಯಮೇಧಶತವನು**
**ತಪ್ಪದೆಲ್ಲವ ಮಾಡಿ ನಹುಷನು**
**ಸಪ್ತಋಷಿಗಳು ದಂಡಿಯನು ಹೊರೆ ಶಚಿಯಪೇಕ್ಷೆಯಲಿ ।**
**"ಸರ್ಪ, ಸರ್ಪ" ಎನಲ್ಕಗಸ್ತ್ಯನು**
**ಸರ್ಪವಾಗೆಂದಿತ್ತ ಶಾಪವ;**
**ಮುಪ್ಪಲಾ ಮರ್ತ್ಯರಿಗೆ ಮದನಾತುರದ ಕಳವಳವು ॥ ॥೯೧॥**

ತಾತ್ಪರ್ಯ: ವಿಧಿಪ್ರಕಾರವಾಗಿ ನೂರು ಅಶ್ವಮೇಧಯಾಗಗಳನ್ನು ಎಡಬಿಡದೆ ಒಂದಾದ ಮೇಲೆ ಒಂದರಂತೆ ಮಾಡಿ ನಹುಷನು ಶಚಿ ಹೇಳಿದ ಪ್ರಕಾರ ಆಕೆಯ ಇಷ್ಟದಂತೆ ಅಗಸ್ತ್ಯ ಮತ್ತು ಸಪ್ತರ್ಷಿಗಳ ಕೈಲಿ ಪಲ್ಲಕ್ಕಿಯನ್ನು ಹೊರೆಸಿಕೊಂಡು ಬರುವಾಗ 'ಬೇಗಬೇಗ ನಡೆಯಿರಿ' ಎನ್ನಲು ಆಗ ಪಲ್ಲಕ್ಕಿ ಹೊರುತ್ತಿದ್ದವರಲ್ಲಿ ಒಬ್ಬರಾದ ಅಗಸ್ತ್ಯರು ಕೋಪದಿಂದ ಸರ್ಪವಾಗು ಎಂದು ನಹುಷನಿಗೆ ಶಾಪವಿತ್ತರು. ಆದಕಾರಣ ಮನುಷ್ಯರಿಗೆ ಕಾಮಾತುರದ ಚಿಂತೆ ಮುಪ್ಪನ್ನು ಬರಿಸುತ್ತದೆ ಎಂದರೆ ಸಾವನ್ನು ಹತ್ತಿರ ತರುತ್ತದೆ.

ಶಬ್ದಾರ್ಥ: ಕ್ಲುಪ್ತಿಯಲಿ=ವಿಧಿಪ್ರಕಾರ; ಸರ್ಪ ಸರ್ಪ ಎನಲ್ಕೆ=ನಹುಷನು ಬೇಗ ಬೇಗ ನಡೆ ಎನ್ನಲು; ಸರ್ಪವಾಗೆಂದು (ಅಗಸ್ತ್ಯರು ನಹುಷನಿಗೆ) ಹಾವಾಗೆಂದು (ಶಾಪವನ್ನು ಕೊಟ್ಟರು).

**ಟಿಪ್ಪಣಿ-೧: ಸಪ್ತರ್ಷಿಗಳು:** ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ (ವೈವಸ್ವತ ಮನ್ವಂತರದಲಿ) ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ (ಸ್ವಾಯಂಭುವ ಮನ್ವಂತರದಲ್ಲಿ) (ಶ್ರೀವತ್ಸ ನಿಘಂಟು; ಪು-೫೪)

**ಟಿಪ್ಪಣಿ-೨:** ಅಗಸ್ತ್ಯರು ಸಪ್ತರ್ಷಿಗಳಲ್ಲಿ ಒಬ್ಬರು ಎಂದಿದೆ ಕೆಲವು ಕಡೆಗಳಲ್ಲಿ. ಪಲ್ಲಕ್ಕಿ ಹೊರುತ್ತಿದ್ದುದ್ದು ೮ ಮಂದಿ, ಸಪ್ತರ್ಷಿಗಳು ಮತ್ತು ಅಗಸ್ತ್ಯರು ಎಂಬುದು ಸರಿ. ಸಪ್ತರ್ಷಿಗಳಲ್ಲಿ ಅಗಸ್ತ್ಯರು ಒಬ್ಬರಲ್ಲ.

## ಪೂರ್ವಕಥೆ : ನಹುಷನ ಕಾಮಾಂಧತೆ

ಬ್ರಹ್ಮಹತ್ಯಾದೋಷವು ತನ್ನನ್ನು ತಿನ್ನುವುದಕ್ಕೆ ಬಂದಾಗ ಇಂದ್ರನು ಎಲ್ಲಿಗೋ ಹೋಗಿ ನೀರೊಳಗೆ ಅಡಗಿಕೊಂಡುಬಿಟ್ಟಿದ್ದನು. ಇತ್ತ ದೇವತೆಗಳಿಗೆ ತಮ್ಮ ನಾಯಕನಿಲ್ಲದೆ ತೊಂದರೆಯಾಗಿತ್ತು. ಆಗ ಋಷಿಗಳೆಲ್ಲರೂ ವಿಚಾರಮಾಡಿ ನಹುಷನೆಂಬ ರಾಜನನ್ನು ಇಂದ್ರಪದವಿಗೆ ತಂದಿಟ್ಟರು. ನಹುಷನು ಇಂದ್ರನ ಪದವಿಗೆ ತಕ್ಕ ಅರ್ಹತೆಯನ್ನು ಹೊಂದಿರಲಿಲ್ಲವಾದರೂ ಅವರು ಪಡೆದಿದ್ದ ಯೋಗ್ಯತೆಯು ಆ ಅಧಿಕಾರ ಸ್ಥಾನದ ಕೆಲವು ವ್ಯವಹಾರವನ್ನು ಸಾಗಿಸುವದಕ್ಕೆ ಸಾಕಾಗಿತ್ತು. ಹೀಗಿರುವಾಗ ನಹುಷನು ತನಗೆ ದೊರೆತಷ್ಟು ಗೌರವಕ್ಕೆ ತೃಪ್ತಿಪಡದೆ ಶಚೀದೇವಿಯ ಮೇಲೆ ಕಣ್ಣನ್ನು ಹಾಕಿದನು. ಯಾರು ಎಷ್ಟು ಹೇಳಿದರೂ ನಹುಷನು ತನ್ನ ಕಾಮಾಂಧತೆಯನ್ನು ಹಿಮ್ಮೆಟ್ಟಿಸಿಕೊಳ್ಳಲಿಲ್ಲ. ಆಗ ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ಒಂದು ಉಪಾಯವನ್ನು ಹೂಡಿದರು. ಅದೇನೆಂದರೆ: ಋಷಿಗಳನ್ನು ವಾಹನವನ್ನಾಗಿ ಮಾಡಿಕೊಂಡು ಬಂದರೆ ನಿನ್ನಿಷ್ಟವನ್ನು ಸಲ್ಲಿಸುವೆನೆಂದು ಶಚೀದೇವಿಯಿಂದ ಹೇಳಿಸಿದರು. ಅದೇನು ದೊಡ್ಡಮಾತೆಂದು ನಹುಷನು ಋಷಿಗಳನ್ನು ಕರೆಯಿಸಿ ತನ್ನ ಪಲ್ಲಕ್ಕಿಯನ್ನು ಹೊರುವಂತೆ ಆಜ್ಞಾಪಿಸಿದನು. ಇಂದ್ರನ ಸ್ಥಾನವನ್ನು ಗೌರವಿಸಬೇಕೆಂಬ ಬುದ್ಧಿಯಿಂದ ಅವರು ಪಲ್ಲಕ್ಕಿಯನ್ನು ಹೊತ್ತರು. ಆ ಋಷಿಗಳಲ್ಲಿ ಅಗಸ್ತ್ಯರು ಒಬ್ಬರಾಗಿದ್ದರು. ಅವರ ಮೈಕಟ್ಟು ಕುಳ್ಳಾಗಿತ್ತು. ಆದ್ದರಿಂದ ಅವರು ಇತರರೊಡನೆ ದೊಡ್ಡ ಹೆಜ್ಜೆಯನ್ನು ಹಾಕುವದಕ್ಕೆ ಆಗುತ್ತಿರಲಿಲ್ಲ. ಹೀಗಾಗಿ ತನ್ನ ಪ್ರಯಾಣವು ತಡವಾಗುತ್ತಿರುವುದನ್ನು ಕಂಡು ಶಚೀದೇವಿಯ ಮೇಲಣ ಕಾಮುಕತೆಯಿಂದ ಮುಂಗಾಣದ ನಹುಷನು "ಸರ್ಪ, ಸರ್ಪ" (ಬೇಗ ನಡೆ, ಬೇಗ ನಡೆ) ಎಂದು ತನ್ನ ಕಾಲನ್ನು ಮುಂದು ಮಾಡಿದನು. ಆ ಕಾಲು ಅಗಸ್ತ್ಯರಿಗೆ ತಾಕಿತು. ಒಡನೆ ಅವರು ಕೋಪದಿಂದ "ಸರ್ಪೋ ಭವ" (ಹಾವಾಗಿ ಹೋಗು) ಎಂದು ಆ ಪಲ್ಲಕ್ಕಿಯನ್ನು ಕೆಳಕ್ಕೆ ಎತ್ತಿಹಾಕಿದರು. ನಹುಷನು ಹಾವಾಗಿ ಹರಿದು ಹೋದನು. ತನಗೆ ಪೂರ್ಣವಾದ ಅರ್ಹತೆಯಿಲ್ಲದಿದ್ದರೂ ಸುದೈವದಿಂದ ದೊರೆತ ಪದವಿಗೆ ತೃಪ್ತನಾಗದೆ ತನ್ನ ಯೋಗ್ಯತೆಯನ್ನು ಮೀರಿ ಕಾಮಾಂಧನಾದದ್ದಕ್ಕಾಗಿ ನಹುಷನು ಇಂದ್ರಪದವಿಯನ್ನು ಕಳೆದುಕೊಂಡು ವಿಷಪ್ರಾಣಿಯಾಗಿ ಹುತ್ತದಲ್ಲಿ ಅಡಗಿಕೊಂಡು ಬಾಳುಮಾಡಬೇಕಾಯಿತು.

---

**ಮೃಗಮಿಥುನದಂದದಲಿ ರಮಿಸಲು**
**ಮಗನೆ, ಮುನಿಗಳು ಪಾಂಡುರಾಯನು**
**ತೆಗೆಯಲಸುವನು ಶಪಿಸಿದರು 'ನಿಜಸತಿಯ ಕೂಡಿದರೆ ।**
**ಹೋಗು ಯಮನ ಪುರಿಗೆ'ನುತಲಾ ಸತಿ**
**ಯಗಲಿಕೆಯಲಿದ್ದವನು ಮನಸಿಜ**
**ನುಗಿದ ಖಡ್ಗದಿ ಮಡಿದ ಮಡದಿಯ ತನುವೊಳೆಡೆಗೆಡೆದು ॥ ॥೯೨॥**

**ತಾತ್ಪರ್ಯ:** ಕಿಂದಮ ಋಷಿಗಳು ಪತ್ನಿಯೊಡನೆ ಜೋಡಿಜಿಂಕೆಗಳಾಗಿ ಕಾಡಿನಲ್ಲಿ ಹಗಲು ರಮಿಸುತ್ತಿರುವಾಗ ಬೇಟೆಗಾಗಿ ಕಾಡಿಗೆ ಬಂದ ಪಾಂಡುರಾಜನು ಬಾಣ

ಹೊಡೆದು ಆ ದಂಪತಿಗಳ ಪ್ರಾಣವನ್ನು ತೆಗೆಯಲು ಆಗ ಕಿಂದಮ ಋಷಿ "ನೀನು ನಿನ್ನ ಹೆಂಡತಿಯೊಡನೆ ಸಮಾಗಮ ಹೊಂದಿದ ಕೂಡಲೇ ಸಾವನ್ನಪ್ಪು" ಎಂದು ಶಾಪವಿತ್ತನು. ಒಮ್ಮೆ ಮಾದ್ರಿಯಿಂದ ಅಗಲಿ ವಿರಹದಲ್ಲಿದ್ದ ಪಾಂಡು ತನ್ನ ಸತಿ ಮಾದ್ರಿಯಲ್ಲಿ ಮೋಹಪೀಡಿತನಾಗಿ ಕೂಡಿದಾಗ ಸಾವನ್ನಪ್ಪಿದನು.

**ಶಬ್ದಾರ್ಥ:** ಮೃಗಮಿಥುನದಂದದಲಿ=ಜಿಂಕೆಗಳ ಹೆಣ್ಣು ಗಂಡಿನ ಜೋಡಿಯಂತೆ; ಮುನಿಗಳು= ಕಿಂದಮನೆಂಬ ಮುನಿಯೂ ಅವನ ಹೆಂಡತಿಯೂ; ಆ ಸತಿಯ=ಮಾದ್ರಿಯ; ಮಡಿದ= ಸತ್ತನು; ಎಡೆಗೆಡೆದು=ಆಲಿಂಗಿಸಿ; * ಅಸು=ಪ್ರಾಣ; ಯಮನಪುರಿಗೆ=ಸಾವಿಗೆ; * ಮನಸಿಜ= ಮನ್ಮಥ; * ಅಗಲಿಕೆ=ವಿರಹ; * ನಿಜಸತಿಯ ಕೂಡಿದರೆ=ಹೆಂಡತಿಯೊಡನೆ ಸಮಾಗಮ ಹೊಂದಿದರೆ; * ಯಮನಪುರಿಗೆ ಹೋಗು=ಸಾವನ್ನು ಅಪ್ಪು; ಮಡದಿ=ಹೆಂಡತಿ;

## ಪೂರ್ವಕಥೆ: ಪಾಂಡುರಾಜನ ಕಾಮಾಂಧತೆ

ಕಿಂದಮನೆಂಬ ಒಬ್ಬ ಋಷಿ ಇದ್ದನು. ಒಂದು ದಿನ ಹಗಲು ದಾಂಪತ್ಯಸುಖವನ್ನು ಪಡೆದು ನೋಡಬೇಕೆಂದು ಅವನಿಗೆ ಇಚ್ಛೆಯಾಯಿತು. ಮನುಷ್ಯನಾಗಿ ಹಾಗೆಮಾಡುವುದು ಅಯೋಗ್ಯವಾಗಿತ್ತು. ಆದ್ದರಿಂದ ಆ ಋಷಿದಂಪತಿಗಳು ಜಿಂಕೆಗಳಾಗಿ ರಮಿಸುತ್ತಿದ್ದರು. ಅದೇ ಕಾಲದಲ್ಲಿಯೇ ಅಲ್ಲಿಗೆ ಬೇಟೆಗೆಬಂದಿದ್ದ ಪಾಂಡುರಾಜನು ಅದನ್ನು ಕಂಡು ಬೇಟೆಯ ವ್ಯಸನದಿಂದ ಬಾಣವನ್ನು ಬಿಟ್ಟನು. ಆ ಬಾಣವು ಜಿಂಕೆಯಾಗಿದ್ದ ಕಿಂದಮನಿಗೆ ತಾಕಿ ಉಸಿರು ಮೇಲಕ್ಕೆ ಹತ್ತಿಬಂತು. ತಾನು ಪಡೆಯಬೇಕೆಂದಿದ್ದ ಸ್ತ್ರೀ ಸುಖವಿನ್ನೂ ಪೂರ್ಣವಾಗದೆ ಇದ್ದದ್ದಕ್ಕಾಗಿ ವ್ಯಥೆಪಡುತ್ತ ಕಿಂದಮನು "ನೀನೂ ಇದೇ ಅವಸ್ಥೆಯಲ್ಲಿಯೇ ಸಾಯಿ"ಯೆಂದು ಪಾಂಡುರಾಜನಿಗೆ ಶಾಪವನ್ನು ಕೊಟ್ಟು ತಾನು ಸತ್ತನು. ಇತ್ತ ಪಾಂಡುರಾಜನು ಇನ್ನು ಆ ಸುಖವನ್ನು ಕಳೆದುಕೊಂಡು ರಾಜ್ಯಾದಿಗಳೇಕೆಂದು ಕಾಡಿನಲ್ಲಿಯೇ ವಿರಕ್ತನಾಗಿ ತಪಶ್ಚರ್ಯೆಗೆ ನಿಂತನು. ಹೀಗಿರುವಲ್ಲಿ ಒಂದುದಿನ ಅಲ್ಲಿಯ ಋಷಿಗಳೆಲ್ಲರೂ ಬ್ರಹ್ಮಲೋಕಕ್ಕೆ ಹೊರಟಿದ್ದರು. ಪಾಂಡುರಾಜನು ತಾನೂ ಹೊರಟನು. ಮಕ್ಕಳಿಲ್ಲದವರಿಗೆ ಬ್ರಹ್ಮಲೋಕದ ಪ್ರವೇಶವಿಲ್ಲವೆಂದು ಋಷಿಗಳು ಅವನನ್ನು ಹಿಂದಕ್ಕೆ ಕಳುಹಿಸಿದರು. ಈ ಮಾತಿನಿಂದ ಪಾಂಡುರಾಜನು ಬಹಳ ಚಿಂತೆಯನ್ನು ಹಚ್ಚಿಕೊಳ್ಳಲು ಅವನ ಹೆಂಡತಿಯಾದ ಕುಂತೀದೇವಿಯು ಗಂಡನ ಹಿತವನ್ನು ಮಾಡಬೇಕೆಂದು ದೂರ್ವಾಸರಿಂದ ಕೆಲವು ಮಂತ್ರಗಳನ್ನು ಪಡೆದು ಆ ಮಂತ್ರಗಳ ಫಲವಾಗಿ ತಾನು ಮೂರುಮಕ್ಕಳನ್ನು ಹಡೆದು ಕೊಟ್ಟದ್ದಲ್ಲದೆ ಮಾದ್ರಿಗೊಂದು ಮಂತ್ರವನ್ನು ಕೊಟ್ಟು ಆಕೆಯ ಹೊಟ್ಟೆಯಲ್ಲೆರಡು ಮಕ್ಕಳಾಗುವಂತೆ ಮಾಡಿದಳು. ಹೀಗೆ ಮಕ್ಕಳಾದರೂ ಪಾಂಡುರಾಜನಿಗೆ ಕಾಮಾಂಧತೆ ಹೋಗಲಿಲ್ಲ. ಒಂದು ದಿನ ಮಾದ್ರಿಯು ತೆಳ್ಳಗಿರುವ ಬಟ್ಟೆಯನ್ನುಟ್ಟುಕೊಂಡು ತನ್ನನ್ನುಪಚರಿಸುವಾಗ ಎಷ್ಟು ಬೇಡವೆಂದರೂ ಆಕೆಯನ್ನು ಗಟ್ಟಿಯಾಗಿ ಆಲಿಂಗನ ಮಾಡಿಕೊಂಡುಬಿಟ್ಟನು. ಕಿಂದಮಋಷಿಯ ಶಾಪವು ಫಲಿಸುವದಕ್ಕೆ ಅದು ಸಮಯವಾಯಿತು. ಹೀಗಾಗಿ ಪಾಂಡುರಾಜನು ಒಂದಾಲಿಂಗನದ ಸುಖಕ್ಕಾಗಿ ತನ್ನದೊಂದು ಜನ್ಮವನ್ನೇ ಮಾರಗೊಟ್ಟನು.

---

**ದುರುಳರಾವಣ ಕೀಚಕಾದಿಗ**
**ಳಿರದೆ ಪರಸತಿಗಳುಪಿ ಕೊರಳನು**
**ಕೊರೆಸಿಕೊಂಡರು ಪುತ್ರಮಿತ್ರಭ್ರಾತೃಜನಸಹಿತ ।**

**ಅರರೆ! ಮದನಜ್ವಾಲೆ ಯಾರನು**
**ಹುರಿಕರಿಯ ಮಾಡದು! ಮಹಾತ್ಮರು**
**ಬರಿದೆ ಬ್ರಹ್ಮವ ನುಡಿವರಲ್ಲದೆ ಬಿಡರು ಮಡದಿಯರ ॥ ॥೯೩॥**

**ತಾತ್ಪರ್ಯ:** ದುಷ್ಟರಾವಣ ಮೋಹಿಕೀಚಕ ಮೊದಲಾದವರು ಪರನಾರಿಯರಿಗಾಗಿ ಆಸೆಪಟ್ಟು ಮಗ, ಗೆಳೆಯ, ಸೋದರ, ಬಂಧು-ಬಳಗ ಸಮೇತ ಪ್ರಾಣತೆತ್ತರು. ಅರೆರೆ! ಪರಸ್ತ್ರೀ ವ್ಯಾಮೋಹವೆಂಬ ಕಾಮದುರಿ ಎಂಥವರನ್ನೇ ಆಗಲಿ ಸುಟ್ಟು ಬೂದಿಯಾಗುವಂತೆ ಮಾಡುತ್ತದೆ. ಮಹಾತ್ಮರು ಎಂದೆನಿಸಿಕೊಂಡ ಎಷ್ಟೋ ಜನರು ಬಾಯಲ್ಲಿ ಸುಮ್ಮನೆ ವೈರಾಗ್ಯವನ್ನು ಬೋಧಿಸುತ್ತಾರೆ ಹೊರತು ಸ್ತ್ರೀ ಸುಖವನ್ನು ಬಿಡಲಾರರು; ಋಷಿಗಳಾದರೂ ಪತ್ನಿಯರೊಂದಿಗಿರುತ್ತಾರೆ.

**ಶಬ್ದಾರ್ಥ:** ದುರುಳ=ದುಷ್ಟ; ಪರಸತಿ=ಅನ್ಯನಾರಿ; * ಪುತ್ರ=ಮಗ; * ಮಿತ್ರ=ಗೆಳೆಯ; ಭ್ರಾತೃ=ಸೋದರ; * ಮದನಜ್ವಾಲೆ=ಕಾಮದುರಿ (ಸ್ತ್ರೀಮೋಹ); * ಹುರಿಕರಿಮಾಡು=ಸುಟ್ಟುಬೂದಿ ಮಾಡು; (ಹುರಿದದ್ದು ಕಪ್ಪಾಗಿ, ಹೆಚ್ಚಾಗಿ ಕಪ್ಪಾಗಿ ಸೀಯುವಂತೆ ಮಾಡೀತು!). * ಬರಿದೆ=ಸುಮ್ಮನೆ; ಬ್ರಹ್ಮವ ನುಡಿ=ವೈರಾಗ್ಯ ಬೋಧಿಸುತ್ತಾರೆ.

**ಟಿಪ್ಪಣಿ-೧: ಮಹಾತ್ಮರು-** ಮಹಾತ್ಮರೆಂದು ಹೇಳಿಸಿಕೊಳ್ಳುವ ಕೆಲವರು ಎಂದು ಅರ್ಥವನ್ನು ಮಾಡಬೇಕು. ಏಕೆಂದರೆ ಎಲ್ಲಾ ಮಹಾತ್ಮರ ಯೋಗ್ಯತೆಯ ಕಲಂಕಯುಕ್ತವೇ ಆದರೆ ಮಡದಿಯರನು ಬಿಡುವ ವೈರಾಗ್ಯವಿನ್ನೆಲ್ಲಿ ಬರಬೇಕು? ಆದ್ದರಿಂದ ಇಲ್ಲಿ ವಿರಕ್ತರಾದ ಮಹಾತ್ಮರನ್ನು ತೆಗೆದುಕೊಳ್ಳಬಾರದು.

## ಪೂರ್ವಕಥೆ : ರಾವಣನ ಕಾಮಾಂಧತೆ

ರಾವಣನಿಗೆ ಸೀತೆಯ ಮೇಲೆ ಮೊದಲಿನಿಂದಲೂ ಮನಸಿತ್ತು. ಅವನು ಆಕೆಯ ಸ್ವಯಂವರ ಕಾಲದಲ್ಲಿಯೇ ಅಲ್ಲಿಗೆ ಬಂದಿದ್ದನು. ಆದರೆ ಆಗ ಪಣವಾಗಿಟ್ಟಿದ್ದ ಶೈವಧನುಸ್ಸನ್ನು ಹೂಡುವುದು ಅವನಿಗಾಗಲಿಲ್ಲ. ಈಚೆಗೆ ರಾಮನು ಆಕೆಯನ್ನು ಮದುವೆಯಾಗಿ ಕಾಡಿಗೆ ಬಂದ ಮೇಲೆ ಶೂರ್ಪನಖಿಯೂ ರಾಮಲಕ್ಷ್ಮಣರನ್ನು ಮದುವೆಯಾಗಬೇಕೆಂಬ ಕುತೂಹಲದಿಂದ ಓಡಾಡಿ ಕೊನೆಗೆ ತಾನೇ ಮಾನಭಂಗವನ್ನು ಹೊಂದಿದ್ದಾಗ ಆ ರಾಕ್ಷಸಿಗೆ ಮತ್ತೊಂದು ಯೋಚನೆ ತೋರಿತು. ಸೀತೆಯ ಮೇಲೆ ತಮ್ಮ ಅಣ್ಣನಾದ ರಾವಣನಿಗೆ ಇಚ್ಛೆಯನ್ನು ಹುಟ್ಟಿಸಿದರೆ ಆಗ ರಾಮಲಕ್ಷ್ಮಣರಿಗೆ ಹೆಂಡತಿಯಿಲ್ಲದಂತಾಗಿ ಅವರು ತನ್ನನ್ನು ಮದುವೆಯಾಗುವರೆಂದು ತಾನೇ ಮನಸ್ಸಿನಲ್ಲಿ ಗುಣಾಕಾರವನ್ನು ಹಾಕಿಕೊಂಡು ರಾವಣನ ಬಳಿಗೆ ಬಂದು ಅವನ ಮುಂದೆ ಸೀತೆಯ ಸೌಂದರ್ಯವನ್ನು ವರ್ಣಿಸಿದಳು. ಆಗ ರಾವಣನು ಯತಿ ವೇಷವನ್ನು ಧರಿಸಿ ರಾಮಲಕ್ಷ್ಮಣರಿಲ್ಲದ ಸಮಯವನ್ನು ನೋಡಿ ಭಿಕ್ಷಕ್ಕೆಂದು ಬಂದು ಸೀತೆಯನ್ನು ಅಪಹರಿಸಿಕೊಂಡು ಬಂದನು. ಆದರೇನು? ಸೀತೆಯ ಮನಸ್ಸು ರಾವಣನಿಗೆ ಸೋಲಲಿಲ್ಲ. ಆಮೇಲೆ ರಾಮನು ಸೀತೆಯನ್ನು ಹುಡುಕಿಕೊಂಡು ದಂಡೆತ್ತಿ ಬಂದಮೇಲೆ ರಾವಣನು ಮಾಯೆಯಿಂದ ರಾಮನ ಶಿರಸ್ಸನ್ನು ಮಾಡಿ ಸೀತೆಯ ಮುಂದಿಟ್ಟು ಇನ್ನಾದರೂ ನನ್ನ ಪತ್ನಿಯಾಗೆಂದು ಪರಿಪರಿಯಿಂದ ಹೇಳಿದನು, ಮತ್ತು ಹೇಳಿಸಿದನು. ಆಕೆ ಒಪ್ಪಲಿಲ್ಲ. ಅವನ ತಮ್ಮಂದಿರಾದ ಕುಂಭಕರ್ಣ ವಿಭೀಷಣರು ಕೂಡ ಸೀತೆಯನ್ನು ಬಿಟ್ಟುಬಿಡಹೇಳಿದರು. ಪ್ರಾಣವನ್ನಾದರೂ ಬಿಟ್ಟೇನೇ ಹೊರತು ಪ್ರಯತ್ನಮಾಡಿ ತಂದ ಸೀತೆಯನ್ನು ಉಪಭೋಗಮಾಡದೆ ಬಿಡಲಾರೆನೆಂದು ಅವನು ರಾಮನೊಡನೆ ಯುದ್ಧವನ್ನು ಮಾಡಿ ತನ್ನ ಕಾಮಾಂಧತೆಗಾಗಿ ತನ್ನ ಬಂಧುವರ್ಗದವರನ್ನೂ ಸರ್ವಸ್ವವನ್ನೂ ನಾಶಮಾಡಿಕೊಂಡು ತಾನೂ ಪ್ರಾಣತ್ಯಾಗ ಮಾಡಿದನು.

## ಪೂರ್ವಕಥೆ : ಕೀಚಕನ ಕಾಮಾಂಧತೆ

ವಿರಾಟರಾಯನ ಭಾವಮೈದುನನಾದ ಕೀಚಕನು ಒಂದುದಿನ ತನ್ನ ಅಕ್ಕನಾದ ಸುಧೇಷ್ಣೆಯ ಓಲಗಕ್ಕೆ ಬಂದನು. ಅಲ್ಲಿದ್ದ ದ್ರೌಪದಿಯನ್ನು ನೋಡಿ ಅವನ ಮನಸ್ಸು ಕಾಮವಿಕಾರವನ್ನು ಹೊಂದಿತು. ಒಡನೆ ಅವನು ಆಕೆಯ ಮುಂದೆ ಓಲಗದಲ್ಲಿಯೇ ತನ್ನ ಚೇಷ್ಟೆಯನ್ನು ಹೊರಗೆಡವಿದನು. ದ್ರೌಪದಿಯು ಒಪ್ಪಲಿಲ್ಲ. ದ್ರೌಪದಿಯು ಕೀಚಕನಿಗೆ ಸೇರಿದರೆ ಮುಂದೆ ತನ್ನ ಗಂಡನು ಆಕೆಯ ಬಲೆಗೆ ಬೀಳಬಹುದಾದ ಸಂಭವವಿರಲಾರದೆಂಬ ಕಲ್ಪನೆಯೂ ಸುಧೇಷ್ಣೆಗೆ ಇತ್ತು. ದ್ರೌಪದಿಯು ಓಲಗದಲ್ಲಿ ನಾಚಿಕೆಯಿಂದ ಕೀಚಕನನ್ನು ತಿರಸ್ಕಾರ ಮಾಡಿದಳೆಂದು ಅರ್ಥವನ್ನು ಮಾಡಿಕೊಂಡು ಆದಿನ ತನ್ನ ತಮ್ಮನಿಗೆ ಸಮಾಧಾನವನ್ನು ಹೇಳಿ ಕಳುಹಿಸಿದಳು. ಆಮೇಲೊಂದು ಉತ್ಸವದದಿನ ಕೀಚಕನ ಮನೆಯಲ್ಲಿ ಉತ್ತಮವಾದ ಮಧು (ಸುರಾ)ವಿರುವದೆಂದು ದ್ರೌಪದಿಗೆ ಅದನ್ನು ತರ ಹೇಳಿದಳು. ದ್ರೌಪದಿಯು ಕೀಚಕನ ಮನೆಗೆ ತನ್ನನ್ನು ಕಳುಹಿಸಬಾರದೆಂದರೂ ಸುಧೇಷ್ಣೆ ಒಪ್ಪಲಿಲ್ಲ. ಉಪಾಯಾಂತರವಿಲ್ಲದೆ ದ್ರೌಪದಿಯು ತನ್ನ ರಕ್ಷಣೆಯ ಭಾರವನ್ನು ಸೂರ್ಯನಿಗೆ ಒಪ್ಪಿಸಿ ಅಲ್ಲಿಗೆ ಹೋಗುತ್ತಲೇ ತನ್ನ ಅಕ್ಕನು ಆಕೆಯನ್ನೊಪ್ಪಿಸಿ ತನ್ನ ಉಪಭೋಗಕ್ಕಾಗಿ ಕಳುಹಿಸಿರುವಳೆಂದೇ ಭ್ರಾಂತಿಗೊಂಡು ಕೀಚಕನು ಮುಂದೆ ಬಂದು ತನ್ನ ಚೆಲ್ಲಾಟವನ್ನು ಬಿಚ್ಚಿದನು. ನ್ಯಾಯವಾದ ಮಾತುಗಳಿಗೆ ಅವನು ಬಗ್ಗದೆ ಹೋದದ್ದರಿಂದ ವೀರಕ್ಷತ್ರಿಯ ಸ್ತ್ರೀಯಾದ ದ್ರೌಪದಿಯು ಅವನನ್ನು ಎಡಗಾಲಿನಿಂದೊದೆದು ಹೊಸಕಿ ತಾನು ವೇಗದಿಂದ ಮನೆಗೆ ಹೊರಟಳು. ಅಷ್ಟರಲ್ಲಿಯೇ ಕೀಚಕನು ಚೇತರಿಸಿಕೊಂಡು ಆಕೆಯನ್ನು ಹಿಂದಟ್ಟಿಕೊಂಡು ಹೋಗಿ ಹಿಡಿಯುವದಕ್ಕೆ ತುಡುಕಿದನು. ಗುಪ್ತರಾಗಿದ್ದ ಸೂರ್ಯದೂತರು ಕೀಚಕನ್ನು ಗುದ್ದಿ ಚೆನ್ನಾಗಿ ಹಣ್ಣುಮಾಡಿದರು. ಆದರೂ ಕೀಚಕನು ದ್ರೌಪದಿಯನ್ನು ಅಟ್ಟಿಸಿಕೊಂಡು ಬಂದು ರಾಜದ್ವಾರದ ಮುಂದೆ ಕಾಲಿನಿಂದ ಒದೆದನು. ಆಗ ದ್ರೌಪದಿಯು ಗಟ್ಟಿಯಾಗಿ ಅಳುತ್ತ ಸಭಿಕರಿಗೆ ಮೊರೆಯಿಟ್ಟಳು. ಯಾರೂ ಆಕೆಯ ರಕ್ಷಣೆಗೆ ಬರಲಿಲ್ಲ. ಕೊನೆಗೆ ಆ ರಾತ್ರಿ ಏಕಾಂತದಲ್ಲಿ ಭೀಮನನ್ನು ಕಂಡು ಅವನಿಗೆ ಸಿಟ್ಟು ಹತ್ತುವಂತೆ ಮಾಡಿದಳು. ಆಗ ಗಂಡಹೆಂಡಿರಿಬ್ಬರೂ ಮಾತಾಡಿಕೊಂಡು ಮರುದಿನ ನರ್ತನಾಗಾರದಲ್ಲಿ ನಿರ್ದಿಷ್ಟಸ್ಥಳದಲ್ಲಿ ಕೀಚಕನನ್ನು ಬರಮಾಡಬೇಕೆಂದು ಗೊತ್ತುಮಾಡಿದರು. ಕೀಚಕನು ಮತ್ತೊಮ್ಮೆ ದ್ರೌಪದಿಯನ್ನು ಒಪ್ಪಿಸಿಕೊಳ್ಳಬೇಕೆಂದು ಬಂದಾಗ ದ್ರೌಪದಿಯು ಸಮಾಧಾನದಿಂದ ಆ ಸ್ಥಾನಸಂಕೇತವನ್ನು ಹೇಳಿದಳು. ಕೀಚಕನು ಆ ರಾತ್ರಿ ಅದರಂತೆ ಅಟ್ಟಹಾಸದಿಂದ ಅಲ್ಲಿಗೆ ಬಂದನು. ಆ ಸಮಯದಲ್ಲಿ ಭೀಮಸೇನನು ಅಲ್ಲಿ ಕಾದಿದ್ದು ಕೀಚಕನ ಹೆಸರಿಲ್ಲದಂತೆ ಮಾಡಿ ಹೊರಟುಹೋದನು. ಕೀಚಕನ ದುಷ್ಟತನವನ್ನು ಬಯಲಿಗೆ ತರಬೇಕೆಂದು ದ್ರೌಪದಿಯು ಬೀದಿಗೆ ಬಂದು ಕೀಚಕನ ಮರಣದ ಸುದ್ದಿಯನ್ನು ಹರಡಿದಳು. ಒಡನೆ ಕೀಚಕನ ತಮ್ಮಂದಿರು ನೂರು ಮಂದಿ ದ್ರೌಪದಿಯನ್ನು ಹಿಡಿದು ಕೀಚಕನೊಡನೆ ಸುಟ್ಟುಬಿಡುವೆವೆಂದು ಒಯ್ಯುತ್ತಿರಲು ದ್ರೌಪದಿಯ ಆಕ್ರಂದನ ಧ್ವನಿಯನ್ನು ಕೇಳಿ ಭೀಮಸೇನನು ರೋಷದಿಂದ ಬಂದು ಅವರೆಲ್ಲರನ್ನೂ ಹುಡಿಗುಟ್ಟಿಬಿಟ್ಟನು. ಭೀಮನ ಪರಾಕ್ರಮದಿಂದ ದ್ರೌಪದಿಯು ತನ್ನ ಪಾತಿವ್ರತ್ಯವನ್ನುಳಿಸಿಕೊಂಡು ಸುರಕ್ಷಿತಳಾದಳು. ಕೀಚಕನು ಮಾತ್ರ ತನ್ನ ದುಷ್ಟವಾದ ಇಚ್ಛೆಯನ್ನು ಹಿಮ್ಮೆಟ್ಟಿಸಿಕೊಳ್ಳಲಾರದೆ ತಾನೂ ತನ್ನ ಪರಿವಾರವೂ ಯಮನಗರದ ದಾರಿಯನ್ನು ಹಿಡಿಯಬೇಕಾಯಿತು.

---

**ಆವನಾಗಲಿ ಸೊಬಗು, ಚೆಲುವಿಕೆ,**
**ಹಾವಭಾವ, ವಿಲಾಸವೆಸೆದಿಹ**
**ಭಾವೆಯರನೇಕಾಂತದೆಡೆಯೊಳು ಕಂಡು ಮೋಹಿಸದೆ ।**

**ಧೀವಶದಿ ದೃಢಚಿತ್ತನಾಗಿರೆ**
**ದೇವನಾತನು; ಸಿದ್ಧಿಸುವುದೈ**
**ಕೇವಲಾನಂದಾನುಭವವಹ ಮೋಕ್ಷವವಗೆಂದ ॥** ॥೯೪॥

**ತಾತ್ಪರ್ಯ:** ಯಾವ ಪುರುಷನೇ ಆಗಲಿ, ಅಂಗಾಂಗಗಳ ಅಂದಚೆಂದಗಳ ವಿಶೇಷ ಸೌಂದರ್ಯದಿಂದ ಕಣ್ಣು, ಕೈಸನ್ನೆಗಳ ವೈಯ್ಯಾರಗಳಿಂದ ಬಳುಕಿಬಾಗುವ ಸುಂದರಿಯನ್ನು ಕಂಡಾಗ ಸುಖಿಸಲು ಆಸೆಪಡದ ಮನಸ್ಸು, ಬುದ್ಧಿಯನ್ನು ಸ್ವಾಧೀನದಲ್ಲಿಟ್ಟುಕೊಂಡು ಗಟ್ಟಿಮನಸ್ಸಿನಿಂದ ಇರುವವನೇ ದೇವಸಮಾನ ಮಾನವನಾಗುತ್ತಾನೆ (ಶ್ರೇಷ್ಠನು). ಅಂಥ ಸಂಯಮಿಗೆ ಪೂರ್ಣಬ್ರಹ್ಮಾನಂದಾನುಭವವಾಗುವ ಮುಕ್ತಿಯು ಸಿಗುವುದು ಖಚಿತ ಎಂದು ವ್ಯಾಸರು ನುಡಿದರು.

**ಶಬ್ದಾರ್ಥ:** * **ಸೊಬಗು**=ಅಂದಚೆಂದ; * **ಚೆಲುವಿಕೆ**=ವಿಶೇಷ ಸೌಂದರ್ಯ; **ಹಾವಭಾವ**=ಕಣ್ಣು ಕೈಸನ್ನೆಗಳು; **ಧೀವಶದಿ**=ಮನಸ್ಸನ್ನು ಬುದ್ಧಿಯ ಸ್ವಾಧೀನದಲ್ಲಿಟ್ಟುಕೊಂದು (ವಿಚಾರದ ಬಲದಿಂದ ಮನಸ್ಸನ್ನು ಅಯೋಗ್ಯವಾದ ಪ್ರವೃತ್ತಿಯಿಂದ ಹಿಮ್ಮೆಟ್ಟಿಸುತ್ತಾ); * **ದೃಢಚಿತ್ತ**=ಗಟ್ಟಿ ಮನಸ್ಸು; **ಮೋಕ್ಷ**=ಮುಕ್ತಿ; **ದೇವನು**=ದೇವಸಮಾನ ಮಾನವನು (ಸರ್ವಶ್ರೇಷ್ಠನು).

---

**ಅದು ನಿಮಿತ್ತದಿ ಮಗನೆ, ಗೆಲಲರಿ**
**ದಧಿಕರಿಂಗೀ ಮಾಯೆ; ತಾನೇ**
**ಸುದತಿಯಾಕಾರದಲಿ ಮೋಹಿಸಿ, ಸಕಲಜೀವರನು ।**
**ಸದೆಬಡಿಗರನು ಮಾಡಿ, ಪಾದದ**
**ಲೊದೆದು, ಹೇಳಿದ ತೆರದಲೆಲ್ಲರು**
**ಬದಿಗರಾಗಿರೆ ಮಾಡುತಿರ್ಪುದು ಬಂಟರಂದದಲಿ ॥** ॥೯೫॥

**ತಾತ್ಪರ್ಯ:** ಸ್ತ್ರೀಮೋಹವೆಂಬ ಮಾಯೆಯನ್ನು ಎಂಥ ಬಲಿಷ್ಠರಾದರೂ ಗೆಲ್ಲುವುದು ಅಸಾಧ್ಯ. ಆದ ಕಾರಣದಿಂದಲೇ ಈ ಮಾಯೆ ತಾನಾಗಿಯೇ ಎಲ್ಲರನ್ನು ಸುಂದರ ಸ್ತ್ರೀ ಆಕಾರದಲ್ಲಿ ಆಕರ್ಷಿಸುತ್ತದೆ. ಎಲ್ಲ ಜೀವಿಗಳನ್ನು ಮೋಹ ಮದದಿಂದ ಚೆನ್ನಾಗಿ ಚಚ್ಚಿ ಪುರುಷರು ಬಂಟರಾಗಿ ಹತ್ತಿರವಿದ್ದು ಸೇವೆ ಮಾಡುವ ಹಾಗೆ ಮಾಡುತ್ತದೆ.

**ಶಬ್ದಾರ್ಥ:** **ಮೋಹಿಸಿ**=ಮೋಹಗೊಳಿಸಿ; **ಸದೆಬಡಿಗರನು**=ಚೆನ್ನಾಗಿ ಬಡಿಸಿಕೊಳ್ಳುವಂಥವರನ್ನಾಗಿ ಮಾಡಿ; **ಬಂಟರಂದದಲಿ**=ಎಂಬುದು ಬದಿಗರಾಗಿರೆ ಎಂಬುದಕ್ಕೆ ಹೋಲಿಕೆ; **ಬಂಟರು**=ಸೇವಕರು, ಗುಲಾಮರು; * **ಸುದತಿ**=ಚೆಲುವೆ; **ಬದಿಗರು**=ಹತ್ತಿರವಿರುವವರು

**ಟಿಪ್ಪಣಿ–೧:** * ಕಾವ್ಯಗಳಲ್ಲಿ ಸ್ತ್ರೀಯರನ್ನು ಸುಂದರಿಯರೆಂದು ಹೇಳುವಾಗ ಅಂಗಾಂಗಗಳಲ್ಲಿ ಒಂದರ ವಿಶೇಷ ಸೌಂದರ್ಯದಿಂದ ಆಕರ್ಷಿಸುವಳು ಎಂಬರ್ಥದಲ್ಲಿ ಚೆಲುವೆಯರೆಂದು ಹೇಳುತ್ತಾರೆ.

**ಸುದತಿ** ಎಂದರೆ ಸೊಗಸಾದ ದಂತಪಂಕ್ತಿಯಿಂದ ಸುಂದರಿ ಎನಿಸಿಕೊಂಡವಳು.

**ಚಂದ್ರಮುಖಿ**=ಚಂದ್ರನಂತೆ ಸೊಗಸಾದ ಮುಖವುಳ್ಳವಳು, ಆದಕಾರಣ ಚೆಲುವಾದವಳು, ಇತ್ಯಾದಿ

ಸಿಂಹಕಟಿ=ಸಿಂಹದ ಸೊಂಟದ ಹಾಗೆ ಸಣ್ಣದಾದ ನಡುವು ಇರುವವಳು. ಆ ಮೂಲಕ ಚೆಲುವೆ ಎನಿಸಿಕೊಂಡವಳು.

---

## ಪರಲೋಕದ ಅನಿತ್ಯತ್ವ (೯೬-೧೦೩)

ಸಪ್ತತಂತುವ ಮಾಡಿ, ಭೂಮಿಯೊ
ಳುತ್ತಮ ಕ್ಷೇತ್ರಗಳ ಮೆಟ್ಟಿ, ಸ
ಮಸ್ತ ನದಿಯೊಳು ಮಿಂದು, ಪುಣ್ಯಾರಣ್ಯಗಳ ಹೊಕ್ಕು ।
ಸತ್ತ ಮನುಜನು ಪುಣ್ಯಲೋಕವ
ಹತ್ತಿ ಹಲಕೆಲಕಾಲವಿದ್ದವ
ಮತ್ತೆ ತಲೆಕೆಳಗಾಗುತುರುಳುವ, ಬುತ್ತಿ ತೀರಿದರೆ ॥ ॥೯೬॥

ತಾತ್ಪರ್ಯ: ಅಶ್ವಮೇಧವೇ ಮೊದಲಾದ ಏಳುಬಗೆಯ ಯಜ್ಞಗಳನ್ನು ನೆರವೇರಿಸಿ, ಭೂಲೋಕದಲ್ಲಿರುವ ಪುಣ್ಯಕ್ಷೇತ್ರಗಳನ್ನೆಲ್ಲಾ ದರ್ಶಿಸಿ, ಎಲ್ಲಾ ಪುಣ್ಯನದಿಗಳಲ್ಲಿ ಸ್ನಾನಮಾಡಿ ಧರ್ಮಾರಣ್ಯಗಳಿಗೆಲ್ಲಾ ಯಾತ್ರೆಮಾಡಿದ ಮನುಷ್ಯನು ಸತ್ತಮೇಲೆ ತಾನುಮಾಡಿದ ಪುಣ್ಯಕಾರ್ಯಗಳ ಫಲವಾಗಿ ಸ್ವರ್ಗಲೋಕವನ್ನು ಸೇರಿ ಸಾಕಷ್ಟುಕಾಲ ಸುಖವನ್ನು ಅನುಭವಿಸುತ್ತಾನೆ. ಅನುಭವಿಸಬೇಕಾದ ಪುಣ್ಯದಗಂಟು ಮುಗಿದಕೂಡಲೇ ಭೂಲೋಕಕ್ಕೆ ತಲೆಕೆಳಕಾಗುತ್ತ ಉರುಳುತ್ತಾ ಬೀಳುತ್ತಾನೆ.

ಶಬ್ದಾರ್ಥ: ಸಪ್ತ ತಂತು=ಏಳು ಛಂದಸ್ಸುಗಳಿಂದ ಅಥವಾ ಅಗ್ನಿಯ ಏಳು ನಾಲಿಗೆಗಳಿಂದ ಪೂರ್ಣಮಾಡಿದ ಯಜ್ಞಗಳು; ಅವ=ಮನುಷ್ಯನು; ಬುತ್ತಿ=ಅನುಭವಿಸಬೇಕಾದ ಪುಣ್ಯದ ಗಂಟು; ಉತ್ತಮಕ್ಷೇತ್ರ=ಪುಣ್ಯಕ್ಷೇತ್ರ; * ಮಿಂದು=ಸ್ನಾನಮಾಡಿ; * ಪುಣ್ಯಾರಣ್ಯ=ಧರ್ಮಕ್ಷೇತ್ರ; * ಪುಣ್ಯಲೋಕ=ಸ್ವರ್ಗ; * ಹಲಕೆಲಕಾಲ=ಸಾಕಷ್ಟು ಅವಧಿ

---

ಅನ್ನಪಾನವ ಬಿಟ್ಟು, ವನದಲಿ
ಪರ್ಣಶಾಲೆಯೊಳಿದ್ದು, ಜಲದಲಿ
ತನ್ನ ದೇಹವ ತೊಳೆದು, ಮಳೆಚಳಿಗಳಿಗೆ ಕಂಗೆಡದೆ ।
ಪುಣ್ಯಗಳನಾರ್ಜಿಸಿದ ಮನುಜನು
ಪುಣ್ಯಲೋಕವನೈದಿ ಕಡೆಯಲಿ
ಕಣ್ಣೀರಲಿ ಕೈಯ ತೊಳೆಯುತ ಕೆಡೆವ ಮೇದಿನಿಗೆ ॥ ॥೯೭॥

ತಾತ್ಪರ್ಯ: ಅನ್ನನೀರು ಬಿಟ್ಟು ಉಪವಾಸವ್ರತಗಳನ್ನು ಮಾಡುತ್ತಾ ಕಾಡಿನಲ್ಲಿ ಗುಡಿಸಲಿನಲ್ಲಿ ವಾಸಮಾಡುತ್ತಾ ಚಳಿಮಳೆಗಾಳಿಗೆ ದಿಕ್ಕೆಡದೆ ನದಿನೀರಿನಲ್ಲಿ ಮುಳುಗಿ ಸ್ನಾನಮಾಡುತ್ತಾ ಇವುಗಳ ಫಲವಾಗಿ ಪುಣ್ಯಗಳಿಸಿದ ಮಾನವನು ಸ್ವರ್ಗವನ್ನು ಸೇರಿ ಸುಖ ಅನುಭವಿಸಿ ಆ ಪುಣ್ಯ ಫಲವೆಲ್ಲ ಮುಗಿದಮೇಲೆ ಕೊನೆಯಲ್ಲಿ ಪುಣ್ಯವೆಲ್ಲಾ ಮುಗಿಯಿತಲ್ಲಾ ಎಂದು ಬಹಳವಾಗಿ ಕಣ್ಣೀರಿಡುತ್ತಾ ಮತ್ತೇ ಭೂಮಿಗೆ ಬಂದು ಬೀಳುತ್ತಾನೆ.

**ಶಬ್ದಾರ್ಥ:** ಕಣ್ಣನೀರಲಿ ಕೈಯ ತೊಳೆಯುತ=ಬಹಳವಾಗಿ ಅಳುತ್ತಾ; ಕೆಡೆವ=ಕೆಳಕ್ಕೆ ಬೀಳುತ್ತಾನೆ; * ಅನ್ನ ಪಾನವ ಬಿಟ್ಟು=ಉಪವಾಸವ್ರತ ಮಾಡುತ್ತಾ; * ದೇಹವ ತೊಳೆದು=ಸ್ನಾನ ಮಾಡುತ್ತಾ; ಪುಣ್ಯಲೋಕ=ಸ್ವರ್ಗ; * ಕಡೆಯಲ್ಲಿ=ಗಳಿಸಿದ ಪುಣ್ಯವೆಲ್ಲ ಮುಗಿದಮೇಲೆ; * ಮೇದಿನಿಗೆ =ಭೂಮಿಗೆ; ಕಂಗೆಡದೆ=ದಿಕ್ಕೆಡದೆ

---

**ಉಕ್ತದಕ್ಷಿಣೆಗಳನು ತಪ್ಪದೆ**
**ಋತ್ವಿಜರಿಗೊಲಿದಿತ್ತು, ಸಾಂಗದಿ**
**ಸಪ್ತತಂತುವ ಮಾಡಿ, ಕಡೆಯಲಿ ಸ್ವರ್ಗವನು ಸೇರಿ, ।**
**ವೃತ್ತಕುಚಕುಂಭಗಳಲೆಸೆವ ತಿ**
**ಲೋತ್ತಮೆಯನನುಭವಿಸಿ, ಭೋಗಾ**
**ಸಕ್ತಿ ತೀರದೆ ಕೆಡೆವ ಭೂಮಿಗೆ ಪುಣ್ಯತೀರುತಲೆ ॥ ॥೯೮॥**

**ತಾತ್ಪರ್ಯ:** ಏಳು ಬಗೆಯ ಯಜ್ಞಗಳನ್ನು (ಸಪ್ತ ತಂತು) ಕ್ರಮಬದ್ಧವಾಗಿ ಮಾಡಿ ಶಾಸ್ತ್ರದಲ್ಲಿ ಹೇಳಿರುವಷ್ಟು ದಕ್ಷಿಣೆಗಳನ್ನು ತಪ್ಪದೆ ಯಜ್ಞಪುರೋಹಿತರಿಗೆ (ಋತ್ವಿಜರಿಗೆ) ನೀಡಿ ದೊರಕಿದ ಪುಣ್ಯದಿಂದ ನರಜನ್ಮ ಮುಗಿದಮೇಲೆ ಸ್ವರ್ಗಲೋಕ ಸೇರಿ ಅಲ್ಲಿ ದುಂಡಾದ ಕೊಡಮೊಲೆಗಳಿಂದ ಕಂಗೊಳಿಸುವ ತಿಲೋತ್ತಮೆಯರಂಥ ಅಪ್ಸರೆಯರೊಡನೆ ಸುಖ ಅನುಭವಿಸಿದರೂ ಅತೃಪ್ತರಾಗಿ ಮಾಡಿದ ಪುಣ್ಯತೀರಿದ ಫಲವಾಗಿ ಮಾನವ ಭೂಲೋಕಕ್ಕೆ ಬಂದು ಬೀಳುತ್ತಾನೆ.

**ಶಬ್ದಾರ್ಥ:** **ಉಕ್ತ**=ಇಷ್ಟು ಕೊಡಬೇಕೆಂದು ಶಾಸ್ತ್ರದಲ್ಲಿ ಹೇಳಿರುವಂತೆ; * **ದಕ್ಷಿಣೆ**=ಸಂಭಾವನೆಯ ಧನ, ಕಾಣಿಕೆ; * **ಋತ್ವಿಜರು**=ಯಜ್ಞ ಪುರೋಹಿತ; * **ಸಪ್ತತಂತು**=ಏಳು ಛಂದಸ್ಸುಗಳ (ಮಂತ್ರಗಳಿಂದ) ಅಥವಾ ಅಗ್ನಿಯ ಏಳು ನಾಲಿಗೆಗಳಿಂದ (ಹವಿಸ್ಸು ಸ್ವೀಕರಿಸಿದ) ಯಜ್ಞಗಳು; **ವೃತ್ತಕುಚಕುಂಭ**=ದುಂಡಾದ ಕೊಡಮೊಲೆ; **ತಿಲೋತ್ತಮೆ**=ಸ್ವರ್ಗಲೋಕದ ಪ್ರಸಿದ್ಧ ಅಪ್ಸರೆ; **ಭೋಗಾಸಕ್ತಿ**=ದೇಹ ಸುಖ; **ಕೆಡೆವ**=ಕೆಳಕ್ಕೆ ಬೀಳುವನು

**ಟಿಪ್ಪಣಿ:** **ಸಪ್ತ ತಂತು**– ೭ ಬಗೆ ಯಜ್ಞ: ೧. ಅಗ್ನಿಷ್ಟೋಮ, ೨. ಅಶ್ವಮೇಧ, ೩. ಬಹುಸುವರ್ಣಕ, ೪. ರಾಜಸೂಯ, ೫. ಗೋಮೇಧ, ೬. ವೈಷ್ಣವ, ೭. ಮಾಹೇಶ್ವರ (ಶ್ರೀವತ್ಸ ನಿಘಂಟು; ಪುಟ ೨೪೫)

---

**ಆಸನವ ಬಲಿದಸು ಸುಷುಮ್ನದಿ**
**ಸೂಸೆ ಸಿರದಲಿ ನಡೆಸಿ, ಮೆಲ್ಲನೆ**
**ಲೇಸೆನಿಪ ನಿಜಬ್ರಹ್ಮರಂಧ್ರದಿ ನಡೆದು, ಸುರಪಥದಿ ।**
**ಭಾಸಮಾನದಿ ಸತ್ಯಲೋಕಾ**
**ವಾಸಿಯಾಗಿಹ ಯೋಗಿ ಪುಣ್ಯದ**
**ರಾಶಿ ತೀರಲು ಮರಳಿ ಧಾರಿಣಿಗುರುಳಿ ಬೀಳುವನು ॥ ॥೯೯॥**

**ತಾತ್ಪರ್ಯ:** ಅಷ್ಟಾಂಗಯೋಗಗಳಲ್ಲಿ ಒಂದಾದ ಆಸನವೆಂಬ ಯೋಗದಲ್ಲಿ ದೃಢ ಮನಸ್ಕನಾಗಿ ಸುಷುಮ್ನನಾಳದಲ್ಲಿ ಹೊರಹೊಮ್ಮಿ ಮೆಲ್ಲಮೆಲ್ಲನೆ ಚಲಿಸಿ ಉತ್ತಮವಾದ

ಬ್ರಹ್ಮರಂಧ್ರದಿಂದ ಹೊರಟು ಗಗನದಲ್ಲಿ ವಿರಾಜಿಸುತ್ತಿರುವ ಸತ್ಯಲೋಕಕ್ಕೆ ಹೋಗಿ ಸೇರಿ ಅಲ್ಲಿ ವಾಸಿಸುತ್ತಿರುವ ಯೋಗಿಪುರುಷನೂ ಸಹ ತನ್ನ ಪುಣ್ಯದರಾಶಿ ಮುಗಿದ ಕೂಡಲೆ ಮರಳಿ ಭೂಮಿಗೆ ಉರುಳಿ ಬೀಳುತ್ತಾನೆ.

**ಶಬ್ದಾರ್ಥ:** ಆಸನವಬಲಿದು=ಬಹಳ ಹೊತ್ತಾದರೂ ಆಯಾಸವಾಗದಂತೆ ಒಂದು ಗೊತ್ತಾದ ರೀತಿಯಲ್ಲಿ ಕುಳಿತುಕೊಂಡು; ಅಸು=ಪ್ರಾಣವಾಯು; * ಸುಷುಮ್ನ=ಇದು ಬೆನ್ನ ಹುರಿಯ ನಡುವೆ ಇರುವ ಒಂದು ಸೂಕ್ಷ್ಮವಾದ ನಾಡಿ. ಯೋಗಿಗಳು ತಮ್ಮ ಉಸಿರನ್ನು ಇದರಲ್ಲಿ ನುಗ್ಗಿಸಿ ಅದರ ಮೂಲಕ ಕುಂಡಿಲಿನಿ ಎಂಬ ಒಂದು ಶಕ್ತಿಯನ್ನು ಎಬ್ಬಿಸುವರು.

**ಟಿಪ್ಪಣಿ-೧:** ಬ್ರಹ್ಮರಂಧ್ರ- ನಡುನೆತ್ತಿಯಲ್ಲಿ ಮೆತ್ತಗಿರುವ ಸ್ಥಳ. ಗರ್ಭದಲ್ಲಿ ಶರೀರ ರಚನೆಯೆಲ್ಲ ಆದ ಮೇಲೆ ಚೈತನ್ಯವು "ಸಮೇವ ಸೀಮಾನಂ ವಿದ್ಯಾರ್ಯೈತಯಾ ದ್ವಾರಾ ಪ್ರಾಪದ್ಯತ" ಎಂಬ ಐತರೇಯ ಶ್ರುತಿಯಂತೆ ಈ ಮಾರ್ಗದಿಂದ ಪ್ರವೇಶಿಸಿರುವದೆಂತಲೂ "ತಯೋರ್ಧ್ವ ಮಾಯನ್ನಮೃತತ್ವಮೇತಿ" ಎಂಬ ಕಠಶ್ರುತಿಯಂತೆ ಸಾಯುವಾಗಲೂ ಈ ಮಾರ್ಗದಿಂದ ಹೊರಟವರಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದೆಂತಲೂ ತಿಳಿಯಬೇಕು.

**ಟಿಪ್ಪಣಿ-೨ :** ಸುರಪಥ- "ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ" ಎಂಬ ಗೀತೋಕ್ತಿಯಂತೆ ಅಗ್ನಿದೇವತೆ, ಜ್ಯೋತಿರ್ದೇವತೆ, ಅಹರ್ದೇವತೆ, ಶುಕ್ಲಪಕ್ಷ ದೇವತೆ, ಉತ್ತರಾಯಣ ದೇವತೆ ಇವರು ಕರೆದುಕೊಂಡು ಹೋಗುವ ಮಾರ್ಗ.

---

**ಮಾಡಿ ಷೋಡಶದಾನವನು, ಮನ**
**ಬೇಡಿದಂದದಲನ್ನಪಾನವ**
**ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಗಳ ಮುಗಿಸಿ, ।**
**ಖೋಡಿಯಲ್ಲದ ಪುಣ್ಯಫಲ ಕೈ**
**ಗೂಡೆ, ಪರಲೋಕದಲಿ ಭೋಗಿಸಿ**
**ಕೂಡೆ ಕೆಡೆವ ವಿಮಾನದಿಂದವ ಬಾಡಿ ಬಸವಳಿದು ॥ ॥೧೦೦॥**

**ತಾತ್ಪರ್ಯ:** ಹದಿನಾರು ಮಹಾದಾನಗಳನ್ನು ಮಾಡಿ ಜನ ಕೇಳಿಕೊಂಡಾಗಲೆಲ್ಲಾ ಅವರಿಗೆಲ್ಲಾ ಅನ್ನಾಹಾರಗಳನ್ನು ನೀಡಿ, ಎಲ್ಲ ಬ್ರಾಹ್ಮಣರಿಗೆ ಯಜ್ಞಾದಿಕರ್ಮಗಳನ್ನು ಸತ್ರಭಾವಿಗಳನ್ನು ನಿರ್ಮಿಸುವ ಧಾರ್ಮಿಕಕಾರ್ಯಗಳನ್ನು ನೆರವೇರಿಸಿ ಅವರನ್ನು ತೃಪ್ತಿಗೊಳಿಸಿದ್ದರಿಂದ ದೊರೆತ ಶ್ರೇಷ್ಠವಾದ ಪುಣ್ಯಫಲಗಳ ಫಲವಾಗಿ ಸ್ವರ್ಗಲೋಕದಲ್ಲಿ ಸುಖಗಳನ್ನು ಅನುಭವಿಸುತ್ತಾನೆ. ಪುಣ್ಯಫಲಗಳೆಲ್ಲ ಮುಗಿದಕೂಡಲೆ ಆತನು ದುಃಖದಿಂದ ಸೊರಗಿ ಮೂರ್ಛೆಹೋಗಿ ಸ್ವರ್ಗದಿಂದ ಕೆಳಕ್ಕೆ ಉರುಳುತ್ತಾನೆ.

**ಶಬ್ದಾರ್ಥ:** * ಷೋಡಶ=ಹದಿನಾರು; * ಅನ್ನಪಾನ=ಅನ್ನ ನೀರು; * ಇಷ್ಟಿ=ಯಜ್ಞಾದಿ ಕರ್ಮ; ಪೂರ್ತ=ಸತ್ರ, ಭಾವಿ ಮುಂತಾದ ಧರ್ಮಕಾರ್ಯ; ಖೋಡಿಯಲ್ಲದ=ಕೀಳಲ್ಲದ (ಶ್ರೇಷ್ಠವಾದ), ಕೆಡೆವ=ಬೀಳುವನು; ಅವ=ಅವನು; ಬಾಡಿ=ಸೊರಗಿ; ಬಸವಳಿದು=ಮೂರ್ಛೆಯನ್ನು ಹೊಂದಿ;

**ಟಿಪ್ಪಣಿ-೧:** ಷೋಡಶದಾನ- ಸಾಮಾನ್ಯವಾಗಿ ೧೬ ದಾನಗಳೆಂದರೆ ೧. ಗೋದಾನ, ೨. ಭೂದಾನ, ೩. ತಿಲದಾನ, ೪. ಹಿರಣ್ಯದಾನ, ೫. ಆಜ್ಯದಾನ, ೬. ವಸ್ತ್ರದಾನ,

೭ ಧಾನ್ಯದಾನ, ೮. ಗುಡದಾನ, ೯. ಕೌಪ್ಯದಾನ, ೧೦. ಲವಣದಾನ, ೧೧. ಗೃಹದಾನ, ೧೨. ಕನ್ಯಾದಾನ, ೧೩. ಅನ್ನದಾನ, ೧೪. ಶಯ್ಯಾದಾನ, ೧೫. ದೀಪದಾನ, ೧೬ ಜಲದಾನ.

**ಟಿಪ್ಪಣಿ-೨: ಶಬ್ದೌಘಕಲ್ಪದ್ರುಮಕಾರ ನಿಘಂಟನಲ್ಲಿ ೧೬ ದಾನಗಳನ್ನು ಹೀಗೆ ಹೇಳಿದ್ದಾನೆ:**

'ಆದ್ಯಸ್ತು ಸರ್ವದಾನಾನಾಂ' ತುಲಾಪುರುಷ (ಸಂಜ್ಞಿತಂ)
ಹಿರಣ್ಯಗರ್ಭದಾನಂ (ಚ) ಬ್ರಹ್ಮಾಂಡಂ (ತದನಂತರಂ)
ಕಲ್ಪಪಾದಪದಾನಂ (ಚ) ಗೋಸಹಸ್ರಂ (ತು ಪಂಚಮಂ)
ಹಿರಣ್ಯಕಾಮಧೇನು (ಶ್ಚ) ಹಿರಣ್ಯಾಶ್ವ (ಸ್ತಥೈವ ಚ)
ಪಂಚಲಾಂಗಲಕಂ (ತದ್ವತ್) ಧಾರಾದಾನಂ (ತಥೈವ ಚ)
ಹಿರಣ್ಯಾಶ್ವರಥ (ಸ್ತದ್ವತ್) ಹೇಮಹಸ್ತಿರಥ (ಸ್ತಥಾ)
ದ್ವಾದಶಂ ವಿಷ್ಣುಚಕ್ರಂ (ಚ ತತ) ಸ್ತಲ್ಪಲತಾ (ತ್ಮಕಂ)

ಸಪ್ತಸಾಗರದಾನಂ (ಚ) ರತ್ನಧೇನು (ಸ್ತಥೈವ ಚ)
ಮಹಾಭೂತಘಟ 'ಸ್ತದ್ವತ್ಷೋಡಶಃ ಪರಿಕೀರ್ತಿತಃ' ॥

**ಟಿಪ್ಪಣಿ-೩:** ದಾನಗಳ ಸಂಖ್ಯೆ ಕೇವಲ ೧೬ ಅಷ್ಟೇಅಲ್ಲ ೩, ೪, ೫, ೭, ೮, ೧೦, ೧೨ ೧೩, ಬಗೆಗಳ ದಾನಗಳನ್ನು ಧಾರ್ಮಿಕಗ್ರಂಥಗಳಲ್ಲಿ ಹೇಳಲಾಗಿದೆ (ವಿವರಗಳಿಗೆ ಶ್ರೀವತ್ಸ ನಿಘಂಟು ಪುಟ: ೧೩೫-೧೩೬ ನೋಡಿ)

---

**ಶೈವವೈಷ್ಣವವೆಂಬ ಬಹುವಿಧ**
**ಭಾವಭೇದಗಳಾದ ತತ್ತ**
**ದ್ದೇವತಾರಾಧನೆಯನುಪಚಾರವನು ಮುದದಿಂದ ।**
**ಭಾವಶುದ್ಧಿಯೊಳೊಂದಿ ಮಾಡಿದ**
**ಜೀವಿ ಲೋಕಾಂತರದಿ ಭೋಗಿಸು**
**ತೀ ವಸುಧೆಗವ ಮರಳುವನು ಹಳೆಯಂತೆ ನರನಾಗಿ ॥ ॥೧೦೧॥**

**ತಾತ್ಪರ್ಯ:** ಶೈವ (ಶಿವಭಕ್ತಿ), ವೈಷ್ಣವ (ವಿಷ್ಣು ಭಕ್ತಿ) ಮೊದಲಾದ ನಾನಾ ದೇವತಾ ಭಾವಗಳಿಂದ ಸ್ವಧರ್ಮಾನುಸಾರ ಆಯಾಯಾ ದೇವತಾರಾಧನೆಯನ್ನು ಷೋಡಶೋಪಚಾರಗಳನ್ನು ಉತ್ಸಾಹಪೂರ್ಣನಾಗಿ ಶುದ್ಧಮನದಿಂದ ಮಾಡುವ ನರನು ಯಾರೇಆಗಲಿ ಆತನು ತನ್ನ ಭಕ್ತ್ಯಾರಾಧನೆಯ ಫಲವಾಗಿ ಬೇರೆಬೇರೆ ಪುಣ್ಯಲೋಕ ಗಳನ್ನು ಸೇರಿ ಸುಖ ಅನುಭವಿಸುತ್ತಾನೆ. ಅನಂತರ ಈ ಭೂಮಿಗೆ ಹಿಂದಿನ ಜನ್ಮದ ಹಳೆಯಮಾನವನಾಗಿಯೇ ಹಿಂದಿರುಗುತ್ತಾನೆ. ಇದರರ್ಥವೇನೆಂದರೆ ಸಕಲ ಧರ್ಮದೇವತಾ ಭಕ್ತಿಯಿಂದ ಪಡೆದ ಫಲಗಳೆಲ್ಲ, ತಾತ್ಕಾಲಿಕವಾಗಿದ್ದು ಶಾಶ್ವತ ಮುಕ್ತಿಗಳಿಸಲಾರದೆ ಮೊದಲಿನಂತೆಯೇ ಇರುತ್ತಾನೆ.

**ಶಬ್ದಾರ್ಥ:** ಒಂದಿ=ಕೂಡಿ; ಅವ=ಅವನು; ಮರಳುವನು=ಹಿಂದಿರುಗುವನು; * ಶೈವ =ಶಿವಭಕ್ತಿಯವನು; * ವೈಷ್ಣವ=ವಿಷ್ಣುಭಕ್ತಿಯವನು; * ಭಾವಶುದ್ಧಿ=ನಿರ್ಮಲಚಿತ್ತ;

* ಲೋಕಾಂತರದಿ=ಬೇರೆ ಪುಣ್ಯಲೋಕಗಳಲ್ಲಿ; * ಭೋಗಿಸುತ=ಸುಖ ಅನುಭವಿಸುತ್ತ; ಉಪಚಾರ=ಷೋಡಶೋಪಚಾರ ಸೇವೆ.

ಟಿಪ್ಪಣಿ-೧: ಉಪಚಾರ- ದೇವತಾರಾಧನೆಯಲ್ಲಿ ದೇವರಿಗೆ ಮಾಡುವ ಸೇವೆಗಳು ನಾನಾ ಬಗೆಯಲ್ಲಿವೆ. ೩, ೫, ೮, ೧೦, ೧೬, ೧೮, ೩೨, ೩೬, ಬಗೆಯ ಉಪಚಾರಗಳಿವೆ. ಇವುಗಳಲ್ಲಿ ಪ್ರಸಿದ್ಧವಾದವು ಷೋಡಶ (೧೬) ಉಪಚಾರ. ಈ ಉಪಚಾರಗಳಿಗೆ ಒಂದೊಂದಕ್ಕೂ ಪುಣ್ಯಫಲಗಳಿವೆ. ಇದರಿಂದ ನರನು ದೇವಲೋಕದಲ್ಲಿ ಸುಖ ಅನುಭವಿಸುತ್ತಾನೆ.

ಟಿಪ್ಪಣಿ-೨: ಉಪಚಾರ ೧೬- ಆವಾಹನ, ಆಸನ, ಪಾದ್ಯ, ಅರ್ಘ್ಯ, ನಾದೋದ್ವರ್ತನ, ವಸ್ತ್ರ, ಉಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಆಚಮನ, ಫಲ, ತಾಂಬೂಲ, ಪ್ರದಕ್ಷಿಣ

ಟಿಪ್ಪಣಿ-೩: ಉಪಚಾರ ಫಲಗಳು ೧೬- ಶತಕ್ರತುಫಲ, ಶಕ್ತತ್ವ ಪಾತಕ ನಾಶ; ಪಾಪನಾಶ, ಸರ್ವಭಯನಾಶ, ಆಯುಷ್ಯವರ್ಧನ, ಬ್ರಹ್ಮಲೋಕಪ್ರಾಪ್ತಿ, ಗಂಧರ್ವತ್ವ, ಪುಣ್ಯಪ್ರಾಪ್ತಿ, ಪಾಪದಹನ, ಮೃತ್ಯುವಿನಾಶ, ಸರ್ವಕಾಮಪ್ರಾಪ್ತಿ, ಶುಚಿತ್ವ, ಸ್ವರ್ಗ, ರೂಪ, ಸತ್ಯಲೋಕಪ್ರಾಪ್ತಿ. (ಶ್ರೀವತ್ಸ ನಿಘಂಟು; ಪುಟ-೪೭)

---

ಅದು ನಿಮಿತ್ತದಿ ಮಗನೆ, ವಿಷಯಾ
ಸ್ಪದನೆನಿಸಿ, ಬಹುಕರ್ಮಜಾಲದಿ
ಕುದಿದು, ಕೋಟಲೆಗೊಂಡು, ಕಷ್ಟಿಸಿ, ಸತ್ತು, ಸ್ವರ್ಗವನು, ।
ಮುದದಲೈದಿದ ಮರ್ತ್ಯ ಭೋಗಿಸಿ,
ತುದಿಯಕಾಲಕೆ ಪುಣ್ಯತೀರಲು,
ಗದಗದಿಸಿ ಗಡಗಡನೆ ನಡುಗುತ ಕೆಡೆವ ಮೇದಿನಿಗೆ ॥ ॥೧೦೨॥

ತಾತ್ಪರ್ಯ: ಆದಕಾರಣ ಹಿಂದಿನ ಪದ್ಯಗಳಲ್ಲಿ ಹೇಳಿದ ರೀತಿಯಲ್ಲಿ ಇಂದ್ರಿಯ ಸುಖಗಳನ್ನು ಬಯಸಿ ಅನೇಕ ಪಾಪಪುಣ್ಯಗಳಿಗೆ ಬಾಧ್ಯನಾಗುತ್ತಾನೆ. ಫಲವಾಗಿ ನಾನಾಪಾಪಗಳ ಪುಣ್ಯಗಳಫಲಗಳನ್ನು ಅನುಭವಿಸುತ್ತಾನೆ. ಪಾಪಕರ್ಮಗಳ ಫಲವಾಗಿ ನೊಂದು ಕಷ್ಟಗಳಿಗೆಒಳಗಾಗಿ ಸಾವನ್ನು ಅಪ್ಪಿದ ಮೇಲೆ ಪುಣ್ಯಕರ್ಮಗಳ ಫಲವಾಗಿ ಸ್ವರ್ಗಸುಖವನ್ನು ಸಂತೋಷದಿಂದ ಹೊಂದುತ್ತಾನೆ. ಪುಣ್ಯಫಲ ಮುಗಿದ ಕಾಲಕ್ಕೆ ಕೊನೆಯಲ್ಲಿ ತಳಮಳದಿಂದ ತತ್ತರಿಸಿ ಗಡಗಡನೆ ನಡುಗುತ್ತಾ ಭೂಮಿಯ ಮೇಲೆ ಸ್ವರ್ಗದಿಂದ ಉರುಳುತ್ತಾ ಬೀಳುತ್ತಾನೆ.

ಶಬ್ದಾರ್ಥ: * ಅದು ನಿಮಿತ್ತದಿ=ಆದಕಾರಣ; * ವಿಷಯಾಸ್ಪದವೆನಿಸಿ=ಇಂದ್ರಿಯಸುಖಗಳನ್ನು ಬಯಸಿ; * ಬಹುಕರ್ಮಜಾಲ=ಅನೇಕ ಪಾಪಪುಣ್ಯಗಳ ಸಮೂಹ; ಕುದಿದು=ನೊಂದು; * ಕೋಟಲೆಗೊಂಡು=ತಾಪತ್ರಯಗಳಿಗೆ ಒಳಗಾಗಿ; * ಕಷ್ಟಿಸಿ=ಕಷ್ಟಗಳನ್ನು ಅನುಭವಿಸಿ; * ತುದಿಯ ಕಾಲಕೆ=ಮುಗಿದಕಾಲಕ್ಕೆ; * ಗದಗದಿಸಿ=ತತ್ತರಿಸುತ್ತಾ; ಮೇದಿನಿಗೆ=ಭೂಮಿಗೆ

**ಅಲ್ಪವಹ ಸುಖಕಾಶೆಪಟ್ಟು, ಮ**
**ಹಾಪ್ರಯತ್ನವ ಮಾಡಿ, ಕೆಡುವೀ**
**ಸ್ವಲ್ಪಗತಿಗಳ ಪಡೆದು, ಮೋಹದಿ ಮೂಢಮಾನವರು ।**
**ಮುಪ್ಪುರಿಯ ಮಾಯಾಪ್ರಬಂಧಕೆ**
**ತಪ್ಪದೊಳಗಾಗಿಪ್ಪರಾಗುತ**
**ಕ್ಲುಪ್ತದೊಳಗೆಡೆಯಾಡುತಿಹರಾ ಸ್ವರ್ಗನರಕದೊಳು ॥ ॥೧೦೩॥**

**ತಾತ್ಪರ್ಯ:** ಮೂರ್ಖಮಾನವನು ನಶ್ವರವಾದ ಅಲ್ಪಸುಖಕ್ಕಾಗಿ ಭಾರಿಸಾಹಸಗಳನ್ನು ಮಾಡುತ್ತಾ ಇಂದ್ರಿಯಮೋಹಕ್ಕೆ ಒಳಗಾಗಿ ಹಾಳಾಗುತ್ತಾನೆ. ಸತ್ವರಜತಮಗಳೆಂಬ ಮೂರು ಗುಣಗಳನ್ನು ಹೆಣೆದುಕೊಂಡಿರುವ ಮಾಯಾಜಾಲದಲ್ಲಿ ತಪ್ಪಿಸಿಕೊಳ್ಳಲಾಗದೆ ಸಿಲುಕಿರುವ ಮಾನವರು ರಂಕಲ್ ರಾಟೆಯಲ್ಲಿ ಕುಳಿತವರು ಅದರ ಪರಿಧಿಯಲ್ಲೇ ಸುತ್ತುತ್ತಿರುವಂತೆ ಸ್ವರ್ಗದಿಂದ ನರಕಕ್ಕೆ, ನರಕದಿಂದ ಸ್ವರ್ಗಕ್ಕೆ ಆ ಮಿತಿಯಲ್ಲೇ ಅಲೆದಾಡುತ್ತಿರುತ್ತಾರೆ.

**ಶಬ್ದಾರ್ಥ: ಮುಪ್ಪುರಿಯ**=ಸತ್ವ, ರಜ, ತಮ ಎಂಬ ಮೂರು ಗುಣಗಳು ಹೊಸೆದುಕೊಂಡಿರುವ; **ಮಾಯಾಪ್ರಬಂಧಕ್ಕೆ**=ಮಾಯಾರೂಪವಾದ ಬಲವಾದ ಕಟ್ಟುವಿಕೆಗೆ; * **ಮೂಢಮಾನವರು** =ಮೂರ್ಖ ಮನುಷ್ಯರು; * **ಕ್ಲುಪ್ತದೊಳು**=ಆ ಮಿತಿಯಲ್ಲೇ; * **ಎಡೆಯಾಡುತಿಹರು**= ಅಲೆದಾಡುತ್ತಿದ್ದಾರೆ; * **ಸ್ವರ್ಗನರಕದೊಳು**=ಸ್ವರ್ಗದಿಂದ ನರಕಕ್ಕೆ ನರಕದಿಂದ ಸ್ವರ್ಗಕ್ಕೆ; * **ತಪ್ಪದೆ ಒಳಗಾಗಿಪ್ಪರಾಗುತ**=ತಪ್ಪಿಸಿಕೊಳ್ಳಲಾರದೆ ಸಿಕ್ಕಿಕೊಂಡು.

---

## ಸಂಸಾರದ ದುಃಖಸ್ವರೂಪದ ಉಪಸಂಹಾರ (೧೦೪-೧೦೭)

**ತಿಳಿಯಲರಿಯದೆ ಬ್ರಹ್ಮವಿದ್ಯೆಯ**
**ಹಳಿವರಜ್ಞಾನಿಗಳು; ವೇದಗ**
**ಳೊಲಿದು "ನಾನ್ಯಃ ಪಂಥ"ವೆಂದಾವಾಗ ಸಾರುತಿರೆ ।**
**ಉಳಿದ ಮಾರ್ಗದಲೇನು ಫಲವೈ?**
**ಹಲವು ಯೋನಿಯ ತೊಳಲಿ ಬಳಲುವ**
**ಫಲವೆ ಅಲ್ಲದೆ ಕಾಣೆನವರಿಗೆ ಮೋಕ್ಷಸಂಪದವ ॥ ॥೧೦೪॥**

**ತಾತ್ಪರ್ಯ:** ಸಮಸ್ತವೇದಗಳು ಖಚಿತವಾಗಿ ಮೋಕ್ಷಕ್ಕೆ ಇದೊಂದೇ ದಾರಿ (ಬೇರೆ ದಾರಿ ಇಲ್ಲ=ನಾನ್ಯಃ ಪಂಥ) ಎಂದು ಸದಾಕಾಲವು ಘೋಷಿಸುತ್ತಿರುವಾಗ ಈ ಸತ್ಯವನ್ನು ಅರ್ಥಮಾಡಿಕೊಳ್ಳದೆ ಮೂಢರು ಬ್ರಹ್ಮವಿದ್ಯೆಯನ್ನು ದೂಷಿಸುತ್ತಾರೆ. ವೇದಮಾರ್ಗವೆಂಬ ರಾಜಮಾರ್ಗವನ್ನು ಬಿಟ್ಟರೆ ಉಳಿದ ಅಡ್ಡದಾರಿಗಳಿಂದ ಯಾವಪ್ರಯೋಜನವೂ ಇಲ್ಲ. ಉಳಿದ ಮಾರ್ಗಗಳನ್ನು ಅನುಸರಿಸುವವರಿಗೆ ನಾನಾಜನ್ಮಗಳಲ್ಲಿ ಹುಟ್ಟಿ ಸಾಯುತ್ತಾ ಒದ್ದಾಡುವುದರ ಹೊರತು ಬೇರೆ ಫಲವೇನೂ ಇಲ್ಲ. ಅಂಥವರಿಗೆ ಮೋಕ್ಷದ ಭಾಗ್ಯ ಎಂದಿಗೂ ಸಿಗುವುದಿಲ್ಲ.

**ಶಬ್ದಾರ್ಥ:** ಬ್ರಹ್ಮ ವಿದ್ಯೆಯ=ಪರಬ್ರಹ್ಮ ಸ್ವರೂಪವನ್ನು ತಿಳಿಸುವ ವೇದಾಂತವನ್ನು; ನಾನ್ಯಪಂಥ=ಬೇರೆ ದಾರಿ ಇಲ್ಲ; ಹಲವು ಯೋನಿಯ ತೊಳಲಿ=ಹಲವಾರು ಜನ್ಮಗಳನ್ನು ಹೊಂದಿ

**ಟಿಪ್ಪಣಿ–೧:** ನಾನ್ಯಃಪಂಥ– ನಾನ್ಯಃ ಪಂಥಾ ಅಯನಾಯ ವಿದ್ಯತೇ=ಪುರುಷಸೂಕ್ತ ೧೭ನೇ ಋಕ್ಕಿನಲ್ಲಿ ಬರುತ್ತದೆ.

**ಟಿಪ್ಪಣಿ–೨:** ಕೃಷ್ಣಯಜುರ್ವೇದದ ತೈತ್ತರೀಯ ಅರಣ್ಯಕದಲ್ಲಿ ಬರುವ ೨ ಋಕ್ಕುಗಳಲ್ಲಿ ಇದೊಂದು. ಇದನ್ನು ಉತ್ತರನಾರಾಯಣ ಅನುವಾಕ ಎನ್ನುವರು. ಪುರುಷಸೂಕ್ತದ (೧೬ ಋಕ್ಕುಗಳು) ನಾರಾಯಣ ಅನುವಾಕ ಎಂದು ಕರೆಯುತ್ತಾರೆ.

---

**ಬಹಳ ದುಃಖದಲಾರ್ಜಿಸಿರ್ಪಾ**
**ಬಹುಸುಕೃತಫಲರೂಪವೆನಿಸಿ**
**ರ್ದಿಹಪರದ ಭೋಗಕ್ಕೆ ಸುರನರದೇಹಗಳ ಧರಿಸಿ ।**
**ವಿಹರಿಸುತ್ತಿಹ ಜೀವ ಸಂಸೃತಿ**
**ಯಹಿತವೆಂದದ ತಿಳಿಯಲರಿಯನು;**
**ಮಹಿಮೆಯೆಂತುಟೊ! ಮಗನೆ, ಮಾಯೆಯ ಬಗೆಯ ಬಲುಬೇಟೆ ॥ ॥೧೦೫॥**

**ತಾತ್ಪರ್ಯ:** ಬಹಳ ಕಷ್ಟದಿಂದ ಸಂಪಾದಿಸಿದ ನಾನಾಬಗೆಯ ಪುಣ್ಯಗಳಿಗೆ ಪ್ರತಿಫಲವೆನಿಸಿದ ಈ ಲೋಕದ ಮತ್ತು ಪರಲೋಕದ ಸುಖಗಳನ್ನು ಅನುಭವಿಸಲು ಪುಣ್ಯಕರವಾದ ದೇವತಾ ಜನ್ಮಗಳನ್ನು ಪುಣ್ಯ ಪಾಪಮಿಶ್ರಿತ ಮಾನವಜನ್ಮಗಳನ್ನು ಹೊಂದಿ ಸುಖದುಃಖಗಳನ್ನು ಅನುಭವಿಸುವಂತೆ ಮಾಡುವ ಈ ದೇಹಾನುಭವದ ಸಂಸಾರವು ಶ್ರೇಯಸ್ಕರವಲ್ಲ ಎಂಬುದನ್ನು ಮಾನವ ತಿಳಿದಿಲ್ಲ. ಮಗು ಶುಕನೇ, ಮಾಯೆಯು ಎಷ್ಟು ಬಗೆಗಳಲ್ಲಿ ನರನನ್ನು ದೊಡ್ಡದಾಗಿ ಬೇಟೆಯಾಡುತ್ತದೆ ಹೇಳಲು ಅಸಾಧ್ಯ. ಅದರ ಮಹಿಮೆ ಅಪಾರವಾದುದು!

**ಶಬ್ದಾರ್ಥ:** ಸುರನರದೇಹಗಳು=ಪುಣ್ಯದಿಂದ ಸುರ (ದೇವತೆಗಳ) ದೇಹವು, ಪುಣ್ಯ ಪಾಪ ಮಿಶ್ರಣದಿಂದ ನರ (ಮನುಷ್ಯರ) ದೇಹವು ಬರುವುದು. * ಸುಕೃತ=ಪುಣ್ಯ; * ಭೋಗಕ್ಕೆ=ಸುಖಕ್ಕೆ; * ಸಂಸೃತಿ=ಸಂಸಾರ; * ಅಹಿತ=ಶ್ರೇಯಸ್ಕರವಲ್ಲ; ಅದ ತಿಳಿಯಲು ಅರಿಯನು=ಅದನ್ನು ಅರ್ಥ ಮಾಡಿಕೊಳ್ಳಲು ಅಶಕ್ತನು.

---

**ಹೆತ್ತ ಶಿಶುವಿಂಗಲ್ಲ, ವಿತ್ತವ**
**ನಿತ್ತ ವಿಟನಿಂಗಲ್ಲದೆಡೆಯಾ**
**ಡುತ್ತಲಿಹ ಬಾಣಂತಿಸೂಳೆಯ ಚೇಷ್ಟೆಯಂದದಲಿ ।**
**ವ್ಯರ್ಥವಾಗಿಯೆ ಕೆಡುವನಕಟಾ !**
**ಮರ್ತ್ಯನೆತ್ತಲು ಮುಟ್ಟ; ಜೀವ**
**ನ್ಮುಕ್ತನಾಗದೆ ಸರ್ವಥಾ ಸಂಸಾರ ಸುಖವಲ್ಲ ॥ ॥೧೦೬॥**

**ತಾತ್ಪರ್ಯ:** ಬಾಣಂತಿಯಾದ ಸೂಳೆಯ ಓಡಾಟದ ವರ್ತನೆಗಳಿಂದ ತಾನು ಹೆತ್ತ ಮಗುವಿನ ಹಸಿವನ್ನು ಅಡಗಿಸಲಾರಳು ಅಥವಾ ಹಣಕೊಟ್ಟ ವಿಟನಿಗೆ ಭೋಗೇಚ್ಛೆಯಾದರೆ ಅದನ್ನು ಆಗ ಪೂರ್ಣಮಾಡುವ ಸ್ಥಿತಿಯಲ್ಲಿ ಇರುವುದಿಲ್ಲ. ಹೀಗೆ ಇಬ್ಬರಿಗೂ ಉಪಯೋಗವಿಲ್ಲದವಳಾಗುತ್ತಾಳೆ. ಅದೇರೀತಿ ಇಹಕ್ಕೂಪರಕ್ಕೂ ಓಡಾಡುವ ಮಾನವನಿಗೆ ಸ್ವರ್ಗದಲ್ಲಾಗಲೀ, ಭೂಮಿಯಲ್ಲಾಗಲೀ ಎಲ್ಲಿಯೂ ಅವನಿಗೆ ನಿಲುಗಡೆಯೇ ಇಲ್ಲ. ವ್ಯರ್ಥವಾದ ಬದುಕಿನಿಂದ ನಾಶವಾಗುತ್ತದೆ. ಜೀವನ್ಮುಕ್ತನಾದ (ಬದುಕಿರುವಾಗಲೇ ಸ್ವರ್ಗ, ನರಕಗಳ ಸುತ್ತಾಟದ ನಿರ್ಬಂಧವನ್ನು ತಪ್ಪಿಸಿಕೊಂಡವನು) ಹೊರತು ಈ ಸಂಸಾರದಲ್ಲಿ ಸುಖ ಕಾಣಲಾರ.

**ಶಬ್ದಾರ್ಥ:** ಜೀವನ್ಮುಕ್ತ=ಬದುಕಿರುವಾಗಲೇ ಸ್ವರ್ಗನರಕಗಳ ಸುತ್ತಾಟದ ನಿರ್ಬಂಧವನ್ನು ತಪ್ಪಿಸಿಕೊಂಡವನು. ಎಡೆಯಾಡು=ಓಡಾಟ; ಚೇಷ್ಟೆ=ವರ್ತನೆ; ವಿಟ=ಹಣಕೊಟ್ಟು ಪರಸ್ತ್ರೀಯಲ್ಲಿ ಭೋಗ ಬಯಸುವವನು ಮಿಂಡ; * ಮರ್ತ್ಯನೆತ್ತಲು ಮುಟ್ಟ=ಇಹಕ್ಕೂ ಪರಕ್ಕೂ ಸಲ್ಲದ ಮಾನವ

**ಟಿಪ್ಪಣಿ : ಬಾಣಂತಿ ಸೂಳೆ**– ಈಕೆಯು ತನ್ನ ಓಡಾಟದಿಂದ ಮಗುವಿಗಾಗಲಿ, ವಿಟನಿಗೆ ಆಗಲಿ ಉಪಯೋಗವಿಲ್ಲದಿರುವವಳಾಗಿರುವಳು. ಇವಳ ಓಡಾಟದಿಂದ ಮಗುವಿನ ಹಸಿವೆಯು ಅಡಗುವುದಿಲ್ಲ, ಇವಳ ಓಡಾಟದಿಂದ ವಿಟನಿಗೆ ಭೋಗೇಚ್ಛೆಯುಂಟಾದರೆ ಅವಳು ಅದನ್ನು ಆಗ ಪೂರ್ಣಮಾಡುವ ಸ್ಥಿತಿಯಲ್ಲಿ ಇರುವುದಿಲ್ಲ.

---

**ಈ ತೆರದೊಳಿಹಪರದಿ ದುಃಖ**
**ವ್ರಾತವಲ್ಲದೆ ಕಾಣೆ ಗತಿಯನು**
**ಕಾತರಿಸಿ ಕಂಗೆಟ್ಟ ಮನುಜಗೆ; ಪೂರ್ವಪುಣ್ಯದಲಿ ।**
**ಸಾತಿಶಯವೈರಾಗ್ಯವೊದಗಿರ**
**ಲಾತ ಸಹಜಾನಂದಗುರುಪದ**
**ಸೇತುವಿಂ ಸಂಸಾರಶರಧಿಯ ದಾಂಟಿ ಸುಖಿಯಹನು ॥ ॥ ೧೦೭ ॥**

**ತಾತ್ಪರ್ಯ:** ಈ ರೀತಿಯಾಗಿ ಇಂದ್ರಿಯಸುಖ ಬಯಸಿ ಕಾತರತೆಯಿಂದ ದಿಕ್ಕೆಟ್ಟ ಮಾನವನಿಗೆ ಈ ಲೋಕದೊಳಗಾಗಲಿ, ಪರಲೋಕದೊಳಗಾಗಲಿ ಮುಕ್ತಿಯನ್ನು ಕಾಣಲು ಸಾಧ್ಯವಿಲ್ಲ. ದುಃಖ ಪರಂಪರೆಯೇ ಗತಿ. ಪೂರ್ವಜನ್ಮ ಪುಣ್ಯವಿಶೇಷದಿಂದ ಮಾನವನಿಗೆ ಈ ಲೋಕದ ಸುಖ ಬೇಡವೆಂಬುದಷ್ಟೇ ಅಲ್ಲದೆ ಹೆಚ್ಚಿನ ಪರಲೋಕದ ಸುಖವೂ ಬೇಡವೆನಿಸುವ ಸಂಶಯ ವೈರಾಗ್ಯ ಉಂಟಾದರೆ ಅಂಥವನು ಸಹಜಾನಂದನೆಂಬ ಗುರುಗಳ ಪಾದಗಳೆಂಬ ಸೇತುವೆ ಮೂಲಕ (ಗುರು ಸೇವೆಯಿಂದ) ಸಂಸಾರ ಸಾಗರವೆಂಬ ಸಾಗರದಿಂದ ಪಾರಾಗುತ್ತಾನೆ. ನಿತ್ಯಸುಖಿಯೆನ್ನಿಸುತ್ತಾನೆ.

**ಶಬ್ದಾರ್ಥ : ಸಾತಿಶಯ ವೈರಾಗ್ಯ**=ಈ ಲೋಕದ ಸುಖವು ಬೇಡ ಎಂಬುದಷ್ಟೇ ಅಲ್ಲದೆ ಹೆಚ್ಚಿನ ಪರಲೋಕ ಸುಖವೂ ಕೂಡ ಬೇಡ ಎನಿಸುವುದು.* **ದುಃಖವ್ರಾತ**=ದುಃಖ ಪರಂಪರೆ; * **ಕಂಗೆಟ್ಟ**=ದಿಕ್ಕೆಟ್ಟ; **ಸಹಜಾನಂದ ಗುರುಪದ**=ಸಹಜಾನಂದರೆಂಬ ಗುರುಗಳ ಪಾದಗಳು (ಗುರುಸೇವೆ); **ಸಹಜಾನಂದ**=ಮೋಕ್ಷಾನಂದ ಮುಕ್ತಿಯ ಸುಖ; **ಶರಧಿ**=ಸಾಗರ

ಟಿಪ್ಪಣಿ : ಸಹಜಾನಂದಗುರುಪದ-ಎಂಬಲ್ಲಿ ಶ್ಲೇಷಾರ್ಥವಿದೆ=ಸಹಜಾನಂದ ಗುರು ಚರಣಗಳು ಮುಕ್ತಿಯ ಸುಖನೀಡುವ ಗುರುಸೇವೆ

---

ಮಂಗಲ (೧೦೮)

ಪರಮ ಪುರುಷ, ಪರೇಶ, ಪಾವನ,
ಪರಮಗುಣಗಣನಿಲಯ, ಪಂಚಾ
ಕ್ಷರ, ಪರಂಜ್ಯೋತಿಪ್ರಕಾಶ, ಗಿರೀಶ, ಗೌರೀಶ, ।
ಶರಣಜನರಕ್ಷಕ, ಸಮಾಶ್ರಿತ
ವರದ, ವಂದ್ಯ, ವರೇಣ್ಯ, ವಿಶ್ವೋ
ದ್ಧರಣಕಾರಣ, ಮಲ್ಲಿಕಾರ್ಜುನ, ಸಲಹು ಮೂಜಗವ ॥ ॥೧೦೮॥

ತಾತ್ಪರ್ಯ : ಶ್ರೇಷ್ಠ ಪುರುಷ, ಪರಲೋಕದ ಒಡೆಯ, ಪರಿಶುದ್ಧನು, ಸದ್ಗುಣಗಳಿಗೆ ಆಶ್ರಯನು, ನಮಶ್ಶಿವಾಯ ಮಂತ್ರರೂಪಿ, ಪರಂಜ್ಯೋತಿಸ್ವರೂಪಿ ಹಿಮಾಲಯಾಧಿಪತಿ, ಪಾರ್ವತೀ ವಲ್ಲಭ, ಮೊರೆ ಹೊಕ್ಕ ಭಕ್ತರನ್ನು ಕಾಪಾಡುವವನು, ಇಷ್ಟಾರ್ಥಗಳನ್ನು ಅನುಗ್ರಹಿಸುವವನು, ಸಕಲಜನವಂದಿತ, ಲೋಕೋದ್ಧಾರಕ ಎನಸುವ ಶ್ರೀಶೈಲಗಿರಿಯ ಮಲ್ಲಿಕಾರ್ಜುನನೇ ಮೂರು ಲೋಕಗಳನ್ನು ಕಾಪಾಡು.

ಶಬ್ದಾರ್ಥ: ಪಂಚಾಕ್ಷರ=ನಮಃ ಶಿವಾಯ ಎಂಬ ಐದಕ್ಷರಗಳ ಮಂತ್ರಕ್ಕೆ ಅಧಿದೇವನಾಗಿರುವವನು; ಸಮಾಶ್ರಿತವರದ=ಶರಣು ಬಂದವರಿಗೆ ವರವನ್ನು ಕೊಡುವವನು; ವಿಶ್ವೋದ್ಧರಣ ಕಾರಣ =ಜಗತ್ತಿನ ಉದ್ಧಾರಕ್ಕೆ ಸಾಧನವಾಗಿರುವವನು; * ಮೂಜಗ=ಮೂರುಲೋಕ; ವಂದ್ಯ=ವಂದಿತ; ವರೇಣ್ಯ=ಶ್ರೇಷ್ಠ.

## ಮುಕ್ತಾಯ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ
ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ
ಅನುಭವಾಮೃತವೆಂಬ ಗ್ರಂಥದಲ್ಲಿ ವೈರಾಗ್ಯ ಪ್ರಕರಣವೆಂಬ
ಎರಡನೆಯ ಅಧ್ಯಾಯವು ಮುಗಿದುದು.

# ಸಾರಸಂಗ್ರಹ

## ಎರಡನೆಯ ಅಧ್ಯಾಯ – ವೈರಾಗ್ಯ ಪ್ರಕರಣ

ವಿಷಯಾಸಕ್ತಿಯು ಹೋಗಬೇಕಾದರೆ ಅದರಲ್ಲಿ ಹುರುಳಿಲ್ಲವೆಂದು ವಿಚಾರದಿಂದಲೆ ಚೆನ್ನಾಗಿ ಮನಗಾಣಬೇಕು. ಆಗ ಅದರಲ್ಲಿ ವೈರಾಗ್ಯವು ಹುಟ್ಟುವದು. ವಿಚಾರಮಾಡಿ ನೋಡಿದರೆ ನಾವು ವಿಷಯ ಸುಖಾಸೆಯಿಂದ ನಂಬಿಕೊಂಡಿರುವ ಹೆಂಡತಿ, ಮಕ್ಕಳು, ಹಣ, ಮನೆ–ಮೊದಲಾದವು ಗಳೆಲ್ಲ ಗಾಳಿಗಿದಿರಲ್ಲಿರುವ ದೀಪದಂತೆ ಆಗಲೋ, ಈಗಲೋ ಹೆಸರಿಲ್ಲದಂತೆ ಹೋಗತಕ್ಕವುಗಳು. ಇವುಗಳನ್ನು ನಂಬುವದರಿಂದ ನಾವು ಸ್ವರ್ಗಕ್ಕೂ ನರಕಕ್ಕೂ ಸುತ್ತಾಡುವವ ರಾಗುವೆವೇ ಹೊರತು ಬೇರೆ ಏನೂ ಇಲ್ಲ. ಈ ಶರೀರವೆಂಬುದು ಸ್ತ್ರೀಪುರುಷರ ಮಲದಿಂದ ಉತ್ಪನ್ನವಾದದ್ದು. ಅದರಲ್ಲಿ ಸಂತತಿಯನ್ನು ಬೆಳೆಸುತ್ತ ಕ್ರೀಡಿಸುವವರು ಮಲಕೂಪದ ಕ್ರಿಮಿಗಳ ಹೋಲಿಕೆಗೆ ಮಾತ್ರ ತಕ್ಕವರು. ಮರಣ ಬಂದಾಗ ಹೆಂಡಿರು ಮಕ್ಕಳು ಯಾರೂ ಸಹಾಯಕರಾಗ ಲಾರರು. ಈ ಹೆಂಡಿರು ಮಕ್ಕಳು ಮೊದಲಾದವರೆಲ್ಲ ಮಾರ್ಗ ಮಧ್ಯದ ಅರವಟ್ಟಿಗೆಯಲ್ಲಿ ಬೇರೆಬೇರೆ ದಾರಿಯಿಂದ ಬಂದುಸೇರಿ ಅಲ್ಲಿ ಸ್ವಲ್ಪಕಾಲವಿದ್ದು ಹೋಗುವವರಂತೆ ಯಾವುದೋ ಋಣಾನುಬಂಧದಿಂದ ಗಂಟು ಬಿದ್ದವರಾಗಿರುವರು. ನಮ್ಮ ಶರೀರವು ಕೂಡ ಮರಣಾನಂತರ ನಮ್ಮನ್ನು ಹಿಂಬಾಲಿಸದೆ ಹದ್ದು ಕಾಗೆಗಳ ಪಾಲಿಗೋ ಏನೋ ಆಗಿಬಿಡುವದು. ಈ ಸಾವನ್ನು ತಪ್ಪಿಸಿಕೊಳ್ಳುವ ಯೋಚನೆಯನ್ನು ಮನಸ್ಸಿಗೆ ತಂದುಕೊಳ್ಳದೆ ಉಳಿದ ಎಷ್ಟು ಪ್ರಯತ್ನವನ್ನು ಮಾಡಿದರೂ ಫಲವಿಲ್ಲ. ಸಂಸಾರದಲ್ಲಿ ತೋರುತ್ತಿರುವ ಅಷ್ಟಿಷ್ಟು ಸುಖವು (ಅಂಚಿಗೆ) ಜೇನುತುಪ್ಪವನ್ನು ಹಚ್ಚಿದ ಕತ್ತಿಯ ಧಾರೆಯನ್ನು ಮಾಧುರ್ಯದ ಆಶೆಗೆ ನೆಕ್ಕಿ ನಾಲಿಗೆಯನ್ನು ಸೀಳಿಕೊಂಡದ್ದಕ್ಕೆ ಹೋಲುವದು. ಹೀಗೆ ಅವರವರ ಕರ್ಮಾನುಗುಣವಾಗಿ ಸಂಸಾರದಲ್ಲಿ ಸುಖದುಃಖಗಳು ಮಿಶ್ರವಾಗಿ ಆಗುತ್ತಲೇ ಇರುವವು. ಈಶ್ವರನ ಅನುಗ್ರಹವಾಗುವವರೆಗೂ ಮರಣದ ಮತ್ತು ಕರ್ಮದ ಕಟ್ಟನ್ನು ಕಳೆದುಕೊಳ್ಳುವದಕ್ಕೆ ಯಾರಿಗೂ ಸಾಧ್ಯವಿಲ್ಲ. ಈ ರಹಸ್ಯವನ್ನರಿಯದ ಬಗೆಬಗೆಯ ಮದಗಳಿಂದ ಮೆರೆದವರೆಲ್ಲ ಮಣ್ಣುಮುಕ್ಕಿಹೋದರು. ಸಂಸಾರದಲ್ಲಿ ತೋರುವ ಅನೇಕ ಚಾಪಲ್ಯಗಳಲ್ಲಿ ಗುಹ್ಯದ ಚಾಪಲ್ಯವು ಬಹು ಹೆಚ್ಚಿನದು. ಜಗತ್ತೆಲ್ಲ ಇದರಿಂದಲೇ ಬೆಳೆದಿರುವದು.

* ಮಾಯೆಯೇ ಸ್ತ್ರೀಯಾಕಾರದಲ್ಲಿ ಜೀವರನ್ನೆಲ್ಲ ಮೋಹಗೊಳಿಸುತ್ತ ಅವರನ್ನು ಆಳುಗಳಾಗಿ ಮಾಡಿಕೊಂಡಿರುವದು. ಹೀಗೆ ಎಷ್ಟು ದಿನವಾದರೂ ಬೇಸರದೆ ಎಲುಬು, ನರ, ರಕ್ತ, ಮಾಂಸ, ಮಜ್ಜಾ–ಮೊದಲಾದ ಹೊಲಸಿನಿಂದ ಕೂಡಿದ ದೇಹಕ್ಕೆ ಬಾಯಿ ನೀರುಸುರಿಸುವದು ಹಳೇ ನಾಯ ಬಾಳು. ಇಹಲೋಕದ ಬಾಳು ಇಷ್ಟಾಯಿತು. ಪುಣ್ಯ ಕರ್ಮಗಳನ್ನು ಮಾಡಿ ಪರಲೋಕಕ್ಕೆ ಹೋದರೂ ಆ ಪುಣ್ಯ ತೀರುವವರೆಗೇ ಆ ಸುಖವು ಹೊರತು ಅದು ತೀರುತ್ತಲ್ಲೇ ಮತ್ತೆ ಭೂಮಿಯ ಮೇಲೆ ಹುಟ್ಟಿಯೇ ತೀರಬೇಕು. ಆದ್ದರಿಂದ ಸಂಸಾರದಲ್ಲಿ ಸುಖವಿಲ್ಲ. ಮೋಕ್ಷಕ್ಕೆ ಜ್ಞಾನದ ಹೊರತು ಎರಡನೆಯ ದಾರಿಯೇ ಇಲ್ಲ. ಇದನ್ನರಿತು ವಿಷಯಾಸಕ್ತಿಯನ್ನು ಬಿಟ್ಟು ವಿರಕ್ತನಾಗಿ ಜ್ಞಾನವನ್ನು ಪಡೆಯುವದು ಜಾಣತನ.

* ಕವಿಗಳು ಹೀಗೆ ಹೇಳುವದನ್ನು ನೋಡಿ ನಮ್ಮಲ್ಲಿ ಕೆಲವರು ನಮ್ಮವರೆಲ್ಲ ಸ್ತ್ರೀಯರನ್ನು ಜರಿಯುವ ಚಟವುಳ್ಳವರೆಂದು ತಿಳಿಯುವರು. ಇದು ತಪ್ಪು. ವೇದಾಂತವೆಲ್ಲ ಸಾಮಾನ್ಯವಾಗಿ ಗಂಡಸರಿಗೆ ಹೇಳಿದ್ದಾದ್ದರಿಂದ ಅವರಿಗೆ ವೈರಾಗ್ಯವು ಹುಟ್ಟುವದಕ್ಕಾಗಿ ಸ್ತ್ರೀಯರನ್ನು ಮಾಯೆಯೆಂದು ಕರೆಯುವದೂ ಅವರ ಮೇಲೆ ಜಿಹಾಸೆಯುಂಟಾಗುವಂತೆ ವರ್ಣಿಸುವದೂ ರೂಢಿಗೆ ಬಂದಿದೆ.

ಆದರೆ ಸ್ತ್ರೀಯರಿಗೆ ಬ್ರಹ್ಮವಿಚಾರದಲ್ಲಿ ಅಧಿಕಾರವೇ ಇಲ್ಲವೆಂದು ತಿಳಿಯಬಾರದು. ಗರ್ಗಿ, ವಾಚಕ್ನವಿ, ಮೈತ್ರೇಯಿ, ಸುಲಭಾ ಮುಂತಾದ ಎಷ್ಟೋ ಸ್ತ್ರೀಯರು ಬ್ರಹ್ಮ ವಿಚಾರದಲ್ಲಿ ಭಾಗಿಗಳಾಗಿದ್ದ ಕಥೆಗಳು ಉಪನಷತ್ತುಗಳಲ್ಲಿವೆ. ಆದ್ದರಿಂದ ಸ್ತ್ರೀಯರು ಈ ಗ್ರಂಥವನ್ನು ಓದುವಾಗ ತಮ್ಮ ಭಾಗಕ್ಕೆ ಪುರುಷರು ಮಾಯಾರೂಪಿಗಳೆಂದೂ ಪುರುಷರ ಶರೀರವು ತುಚ್ಛವೆಂದೂ ಅನ್ವಯಿಸಿಕೊಳ್ಳಬೇಕು. ಮುಖ್ಯವಾಗಿ ಮುಮುಕ್ಷುಗಳು ಕಾಮ ವಿಕಾರಕ್ಕೊಳಗಾಗ ಬಾರದೆಂಬುದೇ ತಾತ್ಪರ್ಯ.

*****

# ಮೂರನೆಯ ಅಧ್ಯಾಯ

## ತ್ವಂ ಪದಾರ್ಥ ಶೋಧನೆ

**ಸೂಚನೆ॥**

**ಸತ್ಯವತಿಯಾತ್ಮಜನು ಪುತ್ರಗೆ**
**ಪ್ರತ್ಯಗಾತ್ಮವೆನಿಪ್ಪ ತ್ವಂಪದ**
**ವಸ್ತುನಿರ್ದೇಶವನು ಬೋಧಿಸಿ ತಿಳುಹಿದನು ನಿಜವ ॥**

**ತಾತ್ಪರ್ಯ:** ಸತ್ಯವತಿಯ ಮಗ ವೇದವ್ಯಾಸನು ತನ್ನ ಮಗ ಶುಕಮುನಿಗೆ ಪ್ರತ್ಯಗಾತ್ಮವೆನಿಸುವ ನೀನು ಎಂಬ ಮಾತಿನ ವಿಷಯವಾದ ವಸ್ತುವಿನ ಗುರುತನ್ನು (ಪರಬ್ರಹ್ಮ ಸ್ವರೂಪ) ತಿಳಿಸಿದನು.

**ಶಬ್ದಾರ್ಥ:** ಪ್ರತ್ಯಗಾತ್ಮವೆನಿಪ=ಒಳಗಿರುವ ಆತ್ಮ; ತ್ವಂಪದ ವಸ್ತು ನಿರ್ದೇಶವನು=ನೀನು ಎಂಬ ಮಾತಿಗೆ ವಿಷಯವಾದ ವಸ್ತುವಿನ ಗುರುತನ್ನು; ಬೋಧಿಸಿ=ವಿವರಿಸಿ; * ನಿಜವ= ಪರಬ್ರಹ್ಮನ ಸ್ವರೂಪವನ್ನು; ಶಕ್ತಿಗೂ ತತ್ತ್ವಜ್ಞಾನಕ್ಕೂ ಅಂತರವುಂಟು ಎನ್ನುವ ಸಂಗತಿಯನ್ನು ವಿವರಿಸುವ ನಿಶ್ಚಯಜ್ಞಾನ.

**ಟಿಪ್ಪಣಿ–೧:** ತ್ವಂ ಪದಕ್ಕೆ ಪ್ರತ್ಯಗಾತ್ಮನೆಂಬುದೇ ಅರ್ಥ. ತತ್ ಪದ ಸಾಮಾನ್ಯಾಧಿಕರಣ್ಯದಿಂದ ಅದಕ್ಕೆ ಸದ್ವಿತೀಯತ್ವವೆಂಬ ಅರ್ಥವು ತ್ಯಾಜ್ಯವಾಗುತ್ತದೆ. ಏಕೆಂದರೆ ಆ ಪದವು ಅದ್ವಿತೀಯತ್ವಕ್ಕೆ ಇದು ವಿರುದ್ಧವಾಗಿರುತ್ತದೆ. (ಪಾರಿಭಾಷಿಕ ಪದಕೋಶ ಪುಟ–೧೪೮)

**ಟಿಪ್ಪಣಿ–೨:** ನಿಜವ=ಮಾಯಾ ಶಕ್ತಿಗೂ ತತ್ತ್ವ ಜ್ಞಾನಕ್ಕೂ ಅಂತರವುಂಟು ಎನ್ನುವ ಸಂಗತಿಯನ್ನು ವಿವರಿಸುವ ನಿಶ್ಚಯಜ್ಞಾನ

---

### ಇಷ್ಟದೇವತಾ ಸ್ತುತಿ ಮೊದಲಾದದ್ದು (೧–೩)

**ಭೂಮಿಜಲತೇಜೋऽನಿಲಾಂಬರ**
**ಸೋಮಸೂರ್ಯಾತ್ಮರ್ಕಳೆಂಬಿವು**
**ಕಾಮಹರ ಶ್ರೀಮಲ್ಲಿಕಾರ್ಜುನಗಷ್ಟಮೂರ್ತಿಗಳು; ।**
**ತಾಮಸರು ತಾವೇನಬಲ್ಲರು**
**ವ್ಯೋಮಕೇಶನಪಾರಮಹಿಮೆಯ**
**ರೋಮರೋಮದೊಳಡಗಿಹವು ಬ್ರಹ್ಮಾಂಡತಂಡಗಳು ॥ ॥೧॥**

**ತಾತ್ಪರ್ಯ:** ಮನ್ಮಥನನ್ನು ಸಂಹರಿಸಿದ ಶ್ರೀಶೈಲ ಮಲ್ಲಿಕಾರ್ಜುನನಾದ ಪರಮೇಶ್ವರನಿಗೆ ಅಷ್ಟಮೂರ್ತಿಯೆಂದು ಹೆಸರು. ಕ್ಷಿತಿಮೂರ್ತಿ, ಶರ್ವ, ಜಲಮೂರ್ತಿ ಭವ, ಅಗ್ನಿಮೂರ್ತಿ ರುದ್ರ, ವಾಯುಮೂರ್ತಿ ಉಗ್ರ, ಆಕಾಶಮೂರ್ತಿ ಭೀಮ, ಯಜಮಾನ

ಮೂರ್ತಿ ಪಶುಪತಿ, ಚಂದ್ರಮೂರ್ತಿ ಮಹಾದೇವ, ಸೂರ್ಯಮೂರ್ತಿ ಈಶಾನ, ಎಂಬ ಇವೇ ಶಿವನ ಅಷ್ಟಮೂರ್ತಿ ಸ್ವರೂಪ. ಪರಮೇಶ್ವರನ ಈ ಅಪಾರ ಮಹಿಮೆಯು ಮೂಢಜನರಿಗೆ ಏನು ತಿಳಿಯುತ್ತದೆ? ಅಪಾರ ಬ್ರಹ್ಮಾಂಡಗಳು ಆ ಸ್ವಾಮಿಯ ಕೇಶಕೇಶದಲ್ಲೂ ಅಳವಟ್ಟಿದೆ. ಅದಕ್ಕೆ ಅವನನ್ನು ವ್ಯೋಮಕೇಶನೆಂದು ಕರೆಯುತ್ತಾರೆ.

**ಶಬ್ದಾರ್ಥ:** ಆತ್ಮರ್ಕಳ್–ಯಜ್ಞಾಭಿಮಾನಿ ದೇವತಾಸ್ವರೂಪನಾದ ಯಜಮಾನ; ವ್ಯೋಮಕೇಶ=ಶಿವ, ಕಾಮಹರ=ಮನ್ಮಥ, ತಾಮಸರು=ಮೂಢರು

**ಟಿಪ್ಪಣಿ–೧:** ಭೂಮಿ ಜಲತೇಜೋऽನಿಲಾಂಬರ ಸೋಮ ಸೂರ್ಯಾತ್ಮರ್ಕಳ್= ೧. ಕ್ಷಿತಿಮೂರ್ತಿ ಶರ್ವ, ೨. ಜಲಮೂರ್ತಿ ಭವ, ೩. ಅಗ್ನಿಮೂರ್ತಿ ರುದ್ರ, ೪. ವಾಯುಮೂರ್ತಿ ಉಗ್ರ, ೫. ಆಕಾಶಮೂರ್ತಿ ಭೀಮ, ೬ ಯಜಮಾನಮೂರ್ತಿ ಪಶುಪತಿ, ೭ ಚಂದ್ರಮೂರ್ತಿ ಮಹಾದೇವ ೮. ಸೂರ್ಯಮೂರ್ತಿ ಈಶಾನ

**ಟಿಪ್ಪಣಿ–೨:** * ಅಷ್ಟಮೂರ್ತಿ=ಶಿವನ ೮ ರೂಪಗಳು, ದ್ರಾವಿಡ ಶೈಲ ಸಿದ್ಧಾಂತ ಗ್ರಂಥದಲ್ಲಿ ಅಪ್ಪರ್ ಅವರು ೧) ಯಜ್ಞದ ಯಜಮಾನ; ೨) ಒಳ್ಳೆಯದು; ೩) ಕೆಟ್ಟದ್ದು; ೪) ಗಂಡು ಹೆಣ್ಣು; ೫) ಪದಾರ್ಥಗಳ ಆಕಾರ; ೬) ನಿನ್ನೆ; ೭) ಇಂದು; ೮) ನಾಳೆ–ಇವು ಶಿವನ ಎಂಟು ರೂಪಗಳು ಎಂದಿದ್ದಾರೆ.

(ಪರಮಾರ್ಥ ಪದಕೋಶ ಪುಟ–೫೬) (ಹೆಚ್ಚಿನ ವಿವರಗಳಿಗೆ ಶ್ರೀವತ್ಸ ನಿಘಂಟು ಪುಟ–೨೪೧ ನೋಡಿ)

**ಪದ ವಿಭಾಗ:** ವ್ಯೋಮಕೇಶನ+ಅಪಾರಮಹಿಮೆಯ=ವ್ಯೋಮಕೇಶನಪಾರಮಹಿಮೆಯ

---

**ದುರ್ಮತಿಗಳಿಗೆ, ದುಷ್ಟರಿಗೆ, ದು**
**ಷ್ಕರ್ಮಿಗಳಿಗೆ, ದುರಾತ್ಮರಿಗೆ, ಕುಲ**
**ಧರ್ಮವನು ಬಿಟ್ಟನ್ಯಧರ್ಮವನಾಚರಿಸುವರಿಗೆ, ।**
**ಹೆಮ್ಮೆಯಲಿ ಹಿರಿದಾಗಿ ತಮ್ಮನು**
**ಪೆರ್ಮೆಯಿಂ ಕೊಂಡಾಡಿಕೊಳುತಿಹ**
**ದುರ್ಮದಾಂಧರಿಗುಸುರಬೇಡೀ ಅನುಭವಾಮೃತವ ॥ ॥೨॥**

**ತಾತ್ಪರ್ಯ :** ದುರ್ಬುದ್ಧಿಗಳಿಗೆ, ಕೆಡುಕರಿಗೆ, ಕೆಟ್ಟ ಕೆಲಸ ಮಾಡುವವರಿಗೆ, ಪಾಪಾತ್ಮರಿಗೆ, ಸ್ವಧರ್ಮವನ್ನು ತ್ಯಜಿಸಿ ಪರಧರ್ಮಾಚರಣೆಯಲ್ಲಿ ನಿರತರಾದವರಿಗೆ, ದುರಹಂಕಾರದಿಂದ ಬೀಗುತ್ತಾ, ತಮ್ಮನ್ನುತಾವೇ ಅತಿಶಯವಾಗಿ ಆತ್ಮಸ್ತುತಿ ಮಾಡಿ ಕೊಳ್ಳುತ್ತಾ ಇರುವವರಿಗೆ ದುರಹಂಕಾರದಿಂದ ಮತ್ತರಾದ ಅಜ್ಞಾನಿಗಳಿಗೆ ಈ ಅನುಭವಾಮೃತ ಕಾವ್ಯವನ್ನು ಹೇಳದಿರು.

**ಶಬ್ದಾರ್ಥ:** ದುರ್ಮತಿ=ದುರ್ಬುದ್ಧಿ; * ದುಷ್ಟ=ಕೆಡುಕ; * ಕುಲಧರ್ಮ=ಸ್ವಧರ್ಮ; * ಪೆರ್ಮೆ= ಗರ್ವ; * ದುರ್ಮದ=ದುರಹಂಕಾರ; * ಉಸುರಬೇಡಿ=ಹೇಳಬೇಡಿ; * ಕೊಂಡಾಡಿ ಕೊಳುತಿಹ =ಆತ್ಮಸ್ತುತಿ ಮಾಡಿಕೊಳ್ಳುತಿರುವ

**ಟಿಪ್ಪಣಿ-೧:** ಕಾವ್ಯದ ಪ್ರಾರಂಭದಲ್ಲಿ ಸುಜನಸ್ತುತಿ ದುರ್ಜನನಿಂದೆ ಪದ್ಯಗಳು ಇರುವುದು ಸಂಪ್ರದಾಯ. ಇಲ್ಲಿ ದುರ್ಜನನಿಂದೆ ಮಾಡಲಾಗಿದೆ.

**ಟಿಪ್ಪಣಿ-೨:** ಈ ಪದ್ಯಕ್ಕೆ ಹೊ.ಚಿ. ರವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಟಿಪ್ಪಣಿ ಅನುವಾದಕನದು.

---

**ನಿತ್ಯನಾತ್ಮನು; ಮಿಕ್ಕುದೆಲ್ಲವ**
**ನಿತ್ಯವೆಂದಿಹಪರದಿ ತಾ ಸುವಿ**
**ರಕ್ತನಾಗಿ, ಶಮಾದಿಷಟ್ಕವ ಪಡೆದು, ಮೋಕ್ಷವನು ।**
**ಅರ್ಥಿಸುತ ಸಾಧನಚತುಷ್ಟಯ**
**ಸತ್ಯಸಂಪತ್ತಿರ್ದು, ನಿರ್ಮಲ**
**ಚಿತ್ತನಾದುತ್ತಮಗೆ ಪೇಳೀ ಅನುಭವಾಮೃತವ ॥** ॥೩॥

**ತಾತ್ಪರ್ಯ:** ಸತ್ಯ ಜ್ಞಾನಾನಂದ ಸ್ವರೂಪಿಯಾದ ಆತ್ಮನೊಬ್ಬನೇ ಶಾಶ್ವತನೆಂದು ತಿಳಿದು ಉಳಿದುದೆಲ್ಲವು ಅಶಾಶ್ವತವೆಂದು ಬಗೆದು, ಈ ಲೋಕದ ಮತ್ತು ಪರಲೋಕದ ಸಂಬಂಧವಾದ ಸುಖಾಪೇಕ್ಷೆಗಳಲ್ಲಿ ವೈರಾಗ್ಯವುಳ್ಳವನಾಗಿ ಶಮ, ದಮ, ತಿತಿಕ್ಷೆ, ಉಪರತಿ, ಸಮಾಧಾನ, ಶ್ರದ್ಧೆಗಳೆಂಬ ಆರು ಸದ್ಗುಣಗಳನ್ನು ಹೊಂದಿ ನಿತ್ಯಾನಿತ್ಯವಿವೇಕ ಇಹ ಮುತ್ರಾರ್ಥ-ಫಲಭೋಗವಿರಾಗ-ಶಮಾದಿಷಟ್ಕ ಮುಮುಕ್ಷುತ್ವಗಳೆಂಬ ನಾಲ್ಕು ಗುಣಗಳ ಸತ್ಯಸಂಪತ್ತು ಗಳಿಸಿ ಚಿತ್ತಶುದ್ಧಿಯನ್ನು ಪಡೆದಂಥ ಉತ್ತಮನಿಗೆ ಈ ಅನುಭವಾಮೃತವನ್ನು ಹೇಳು.

**ಶಬ್ದಾರ್ಥ:** * **ಆತ್ಮನು**=ಸತ್ಯ ಜ್ಞಾನ ಆನಂದ ಸ್ವರೂಪಿಯಾದವನು; * **ನಿತ್ಯನು**=ಶಾಶ್ವತನು; * **ಅನಿತ್ಯನು**=ಅಶಾಶ್ವತನು; **ಇಹಪರದಿ**=ಈ ಲೋಕ ಮತ್ತು ಪರಲೋಕ ಸಂಬಂಧವಾದ ಸುಖಾಪೇಕ್ಷೆಗಳಲ್ಲಿ; * **ಸುವಿರಕ್ತನಾಗಿ**=ಪೂರ್ಣ ನಿರಪೇಕ್ಷಾಭಾವ ತಾಳಿ; **ಶಮಾದಿಷಟ್ಕವ**=ಶಮವೇ ಮೊದಲಾದ ಆರು ಗುಣಗಳನ್ನು ಹೊಂದಿ; **ಅರ್ಥಿಸುತ**=ಗಳಿಸುತ್ತ; **ನಿರ್ಮಲ ಚಿತ್ತನಾದವಗೆ**=ಚಿತ್ತ ಶುದ್ಧಿ ಪಡೆದಂಥವನಿಗೆ; **ಅನುಭವಾಮೃತ**=ಮೋಕ್ಷ ಆನಂದವೆಂಬ ಅಮೃತದ ಅನುಭವ

**ಟಿಪ್ಪಣಿ-೧: ಶಮಾದಿಷಟ್ಕ-** ೧) **ಶಮ** (ಮನೋನಿಗ್ರಹ); ೨) **ದಮ** (ಇಂದ್ರಿಯ ನಿಗ್ರಹ); ೩) **ತಿತಿಕ್ಷೆ**=(ಸುಖದುಃಖಗಳನ್ನು ಸಮಬುದ್ಧಿಯಿಂದ ಸಹಿಸುವುದು), ೪) **ಉಪರತಿ** (ಕರ್ಮದ ಗಡಿಬಿಡಿಯನ್ನು ಬಿಟ್ಟು ಶಾಂತನಾಗುವುದು); ೫) **ಸಮಾಧಾನ** (ಮನಸ್ಸಿನ ತಳಮಳಗಳಿಲ್ಲ ದಿರುವುದು); ೬) **ಶ್ರದ್ಧೆ** (ಗುರುವಿನಲ್ಲಿಯೂ, ವೇದಾಂತ ವಾಕ್ಯದಲ್ಲಿಯೂ ವಿಶ್ವಾಸವಿರುವುದು); ಈ ಆರು ಗುಣ ಸಂಪತ್ತು.

**ಟಿಪ್ಪಣಿ-೨:** * ಈ ಅನುಭವಾಮೃತವನ್ನು ಕೇಳಲು ಅಧಿಕಾರಿ ಯಾರು, ಅವನಿಗಿರಬೇಕಾದ ಅರ್ಹತೆಗಳೇನು ಎಂಬುದನ್ನು ಇಲ್ಲಿ ಹೇಳಲಾಗಿದೆ.

**ಟಿಪ್ಪಣಿ-೩: * ಸಾಧನ ಚತುಷ್ಟಯ:** ೧) **ನಿತ್ಯಾನಿತ್ಯ ವಿವೇಕ** (ನಿತ್ಯವಾದ ಆತ್ಮ ಸ್ವರೂಪವನ್ನೂ ಅನಿತ್ಯವಾದ ಅನಾತ್ಮವೆಂದರೆ ಹೊರಗಣ ವಿಷಯಗಳ ಸ್ವರೂಪವನ್ನು ಬಿಡಿಸಿ ತಿಳಿಯುವುದು.) ೨) **ಇಹ ಮುತ್ರಾರ್ಥ ಫಲಭೋಗ ವಿರಾಗ** (ಈ ಲೋಕದ ಮತ್ತು ಪರಲೋಕದ ಸುಖಗಳಲ್ಲಿ ಆಸಕ್ತಿ ಇಲ್ಲದಿರುವುದು) ೩) **ಶಮಾದಿಷಟ್ಕ** (ಟಿಪ್ಪಣಿ-೧ ನೋಡಿ) ೪) **ಮುಮುಕ್ಷುತ್ವ** (ಮುಕ್ತಿ ಹೊಂದಬೇಕೆಂಬ ಇಚ್ಛೆ) ಈ ನಾಲ್ಕು ಗುಣಗಳಿಗೆ ಸಾಧನಚತುಷ್ಟಯವೆನ್ನುತ್ತಾರೆ.

## ಆತ್ಮವಿದ್ಯೆಯ ಪ್ರಾಶಸ್ತ್ಯ (೪-೭)

ಹುಟ್ಟಿದರೆ ಸಾವಿಲ್ಲದಿಹ ಬಲು
ಬಟ್ಟೆಯನು ಸಾಧಿಸಲುಬೇಕದು
ನೆಟ್ಟನಳವಡದಿರ್ದೊಡೀ ತನುಬಿದ್ದ ಬಳಿಕಿನಲಿ ।
ಹುಟ್ಟದಿಹ ವಿದ್ಯೆಯನು ಕಲಿವುದು
ಸೃಷ್ಟಿಯೊಳಗುತ್ತಮವು; ಹೊಟ್ಟೆಗೆ
ಕಷ್ಟಬಡುವೀ ವಿದ್ಯೆಗಳ ಕಲಿತೇನು ಫಲವೆಂದ ॥ ॥೪॥

**ತಾತ್ಪರ್ಯ:** ನಾವು ಜನ್ಮ ತಳೆದಂತು ಆಗಿದೆ. ಇನ್ನು ಸಾವೆಂಬ ದುಃಖ ಬರದಂಥ ಶ್ರೇಷ್ಠದಾರಿಯಲ್ಲಿ ಹೋಗಲು ಶಕ್ತರಾಗಬೇಕು. ಅದನ್ನು ನೇರವಾಗಿ ಸಾಧಿಸಲು ಶಕ್ತರಲ್ಲದಿದ್ದರೆ ಈ ದೇಹ ನಾಶವಾದ ಬಳಿಕ ಮತ್ತೆ ಹುಟ್ಟದಂತೆ ಮುಕ್ತಿ ಹೊಂದುವ ಉಪಾಸನಾಸಿದ್ಧಿಯನ್ನು ಪಡೆಯಬೇಕು. ಇದನ್ನು ಬಿಟ್ಟು ಹೊಟ್ಟೆ ಪಾಡಿಗೆ ಒದ್ದಾಡುವ ಲೌಕಿಕ ವಿದ್ಯೆಗಳನ್ನು ಕಲಿತರೆ ಏನೂ ಪ್ರಯೋಜನವಿಲ್ಲ, ಸದ್ಗತಿ ದೊರೆಯಲಾರದು.

**ಶಬ್ದಾರ್ಥ:** * ಬಲು ಬಟ್ಟೆಯನು=ಶ್ರೇಷ್ಠಮಾರ್ಗವನ್ನು, * ಹೊಟ್ಟೆಗೆ ಕಷ್ಟಬಡುವೀವಿದ್ಯೆಗಳ=ಲೌಕಿಕ ವಿದ್ಯೆಗಳನ್ನು, * ಅಳವಡದಿರ್ದೊಡೆ=ಸಾಧಿಸಲು ಶಕ್ತರಲ್ಲದಿದ್ದರೆ

**ಟಿಪ್ಪಣಿ-೧:** ಹುಟ್ಟದರೆ ಸಾವಿಲ್ಲದಿಹ- ನಾವು ಹುಟ್ಟಿದ್ದಂತೂ ಆಗಿದೆಯಷ್ಟೆ. ಇನ್ನು ಸಾವೆಂಬ ದುಃಖವಾದರೂ ಬರದ ಹಾಗೆ ಇರುವ (ಸಾಯುವುದು ದೇಹವೇ ಆದ್ದರಿಂದ ಆತ್ಮನು ದೇಹಕ್ಕಿಂತ ಭಿನ್ನವಾದ ಬ್ರಹ್ಮನೆಂಬ ಜ್ಞಾನ ಉಂಟಾದರೆ ಆ ಆತ್ಮನಿಗೆ ಮರಣದ ಭಯ ಇಲ್ಲವಾಗುವುದೆಂದು ತಿಳಿಯಬೇಕು. ಬ್ರಹ್ಮಕ್ಕೆ ಎಂದಿಗೂ ಸಾವಿಲ್ಲ. ಜ್ಞಾನಿಯ ಪ್ರಾಣವು ಇದ್ದಲ್ಲಿಯೇ ಕರಗಿ ಹೋಗುವುದು. ಅದು ಶರೀರದಿಂದ ಹೊರ ಬೀಳುವುದಿಲ್ಲ.)

**ಟಿಪ್ಪಣಿ-೨:** ಈ ತನು ಬಿದ್ದ ಬಳಿಕಿನಲಿ ಹುಟ್ಟದಿಹ ವಿದ್ಯೆಯನು ಕಲಿವುದು- ಈ ಶರೀರವು ಸತ್ತ ಮೇಲೆ ಮತ್ತೆ ಹುಟ್ಟದಂತೆ ಮುಕ್ತಿಯಾಗುವಂಥ ಉಪಾಸನೆಯ ಸಿದ್ಧಿಯನ್ನು ಪಡೆಯಬೇಕೆಂದು ತಾತ್ಪರ್ಯ. ಉಪಾಸಕನು ಸಾಯುವಾಗ ಅವನ ಪ್ರಾಣವು ನಡುನೆತ್ತಿಯಿಂದ ಹೊರಬಿದ್ದು ಬ್ರಹ್ಮಲೋಕಕ್ಕೆ ಹೋಗುವುದು. ಅಲ್ಲಿ ಅವನಿಗೆ ಬ್ರಹ್ಮನೊಡನೆ ಮುಕ್ತಿಯಾಗುವುದು. ಆಗ ಅವನು ಸತ್ತ ಮೇಲೆ ಮತ್ತೆ ಹುಟ್ಟುವುದಿಲ್ಲ.

**ಟಿಪ್ಪಣಿ-೩:** ಏನು ಫಲವೆಂದ-ಹೊಟ್ಟೆಯ ಪಾಡಿನ ವಿದ್ಯೆಗಳಿಂದ ಹೊಟ್ಟೆಯ ಪಾಡು ನಡೆಯಬಹುದೇ ಹೊರತು ಸದ್ಗತಿಯೇನೂ ದೊರೆಯಲಾರದೆಂದು ತಾತ್ಪರ್ಯ.

---

ವೇದಶಾಸ್ತ್ರವನೋದಿದುದರಿಂ
ದಾದ ಫಲವೇನದರ ಸಾರವ
ಭೇದಿಸಿದರದು ಸಫಲವದನರಿಯದಿರೆ ನಿಷ್ಫಲವು; ।

**ಕಾದಹೊಟ್ಟೆಗೆ ಸ್ಪರ್ಶವೇದಿಯ**
**ಮೋದದಿಂದಡವಿಡುವ ತೆರದಿಂ**
**ದೋದಿದುದ ಮಾರುವರು ಮೂಢರು ವಿತ್ತಲೋಭದಲಿ ॥ ॥೫॥**

**ತಾತ್ಪರ್ಯ:** ಸರಿಯಾಗಿ ಅರ್ಥಮಾಡಿಕೊಳ್ಳದೆ ವೇದೋಪನಿಷತ್ತುಗಳನ್ನು ಅಭ್ಯಾಸ ಮಾಡಿದರೆ ಪ್ರಯೋಜನವಿಲ್ಲ. ಬ್ರಹ್ಮ ಸಾಕ್ಷಾತ್ಕಾರಕ್ಕಾಗಿ ಅದರ ಅಂತರಾರ್ಥವನ್ನು ಹುಡುಕಿ ತೆಗೆದರೆ ಸಾರ್ಥಕರೀತಿಯಲ್ಲಿ ಅದರ ಪ್ರಯೋಜನ ಲಭಿಸುತ್ತದೆ. ಇದನ್ನು ತಿಳಿಯದೆ ಅಭ್ಯಾಸಮಾಡಿದರೆ ಅಧ್ಯಯನಶ್ರಮವೆಲ್ಲ ವ್ಯರ್ಥವೇ ಸರಿ. ಇದಕ್ಕೊಂದು ದೃಷ್ಟಾಂತವೆಂದರೆ ಹಸಿದ ಹೊಟ್ಟೆಯ ವ್ಯಕ್ತಿಗೆ ಸ್ಪರ್ಶಮಣಿಯೊಂದನ್ನು ಕೊಟ್ಟರೆ ಅದನ್ನು ಒತ್ತೆಯಿಟ್ಟು ಹಣ ಪಡೆದು ಖುಷಿಯಿಂದ ಹಸಿವನ್ನು ಹೋಗಲಾಡಿಸಿಕೊಳ್ಳುವ ಹಾಗೆ ಮೂಢರು ವೇದಶಾಸ್ತ್ರಗಳ ಮಹಿಮೆಯನ್ನು ತಿಳಿಯದೆ ಹಣದಾಸೆಗೆ ಪರರಿಗೆ ಮಾರಿ ಹೊಟ್ಟೆಹೊರೆದುಕೊಳ್ಳುತ್ತಾರೆ. ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರಯತ್ನಿಸುವುದಿಲ್ಲ.

**ಶಬ್ದಾರ್ಥ:** * **ವೇದಶಾಸ್ತ್ರ**=ವೇದೋಪನಿಷತ್ತುಗಳು; * **ಸಾರವನ್ನು**=ಅಂತರಾರ್ಥವನ್ನು; **ಭೇದಿಸಿದರೆ**=ಹುಡುಕಿತೆಗೆದರೆ; **ಸ್ಪರ್ಶವೇದಿಯ**=ಸ್ಪರ್ಶಮಣಿಯನ್ನು; * **ಮೋದದಿಂದ** =ಸಂತೋಷದಿಂದ; * **ಮೂಢರು**=ಮೂರ್ಖರು; * **ವಿತ್ತಲೋಭದಲಿ**=ಹಣದಾಸೆಯಿಂದ

**ಟಿಪ್ಪಣಿ-೧: ಸ್ಪರ್ಶವೇದಿ**= ಸ್ಪರ್ಶಮಣಿಯು ಸ್ಪರ್ಶಮಾತ್ರದಿಂದ ಯಾವ ಲೋಹವನ್ನಾದರೂ ಬಂಗಾರವಾಗಿ ಪರಿವರ್ತಿಸುತ್ತದೆ.

---

**"ಬ್ರಹ್ಮ ವೇದ ಬ್ರಹ್ಮ"ವಹನೆಂ**
**ದೊಮ್ಮೆಯಾ ಶ್ರುತಿ ಸಾರುತಿರಲಾ**
**ಬ್ರಹ್ಮವದು ನೆರೆ ತಿಳಿಯಲರಿಯದಹಂಮಮತೆಯಿಂದ ।**
**ಕರ್ಮಕಿಂಕರರಾಗಿ ಬರಿದೇ**
**ಜನ್ಮ ಜರೆ ಮರಣಾದಿ ದುಃಖವ**
**ನೆಮ್ಮಿ ಬಳಲುವರೇಕೆ? ಕೃತದುಷ್ಕರ್ಮಫಲದಿಂದ ॥ ॥೬॥**

**ತಾತ್ಪರ್ಯ:** ಬ್ರಹ್ಮವನ್ನು ತಿಳಿದವನು ಬ್ರಹ್ಮನೇ ಆಗುವನು ಎಂದು ಜನತೆಯ ಹಿತಚಿಂತನೆಯಿಂದ ಕೂಡಿರುವ ವೇದವು ಹೇಳಿದೆ. ಹೀಗಿದ್ದೂ ಜನರು ಬ್ರಹ್ಮದ ಸತ್ಯಾರ್ಥವನ್ನು ಸರಿಯಾಗಿ ತಿಳಿಯದೆ ಅಹಂಕಾರ ಮತ್ತು ಮಮಕಾರಗಳಿಂದ ಕರ್ಮಕ್ಕೆ ದಾಸರಾಗಿ ಮಾಡಿದ ಪಾಪಗಳ ಪರಿಣಾಮವಾಗಿ ವ್ಯರ್ಥವಾಗಿ ಹುಟ್ಟು ಮುಪ್ಪು ಸಾವುಗಳನ್ನು ಹೊಂದಿ ಒದ್ದಾಡುತ್ತಿರುವರು. ಹೀಗೇಕೆ ಮಾಡುತ್ತಾರೋ ತಿಳಿಯದು.

**ಶಬ್ದಾರ್ಥ:** **ಬ್ರಹ್ಮವೇದ ಬ್ರಹ್ಮ**=ಬ್ರಹ್ಮವನ್ನು ತಿಳಿದವನು (ಬ್ರಹ್ಮವಿದ) ಬ್ರಹ್ಮವೇ ಆಗುವನು. (ಮಂಡಕ, ೩-೨-೯)**ನೆಮ್ಮಿ** =ನಂಬಿ (ಹೊಂದಿ); **ಅಹಂ ಮಮತೆಯಿಂದ**=ನಾನು ನನ್ನದು ಎಂಬ ಅಭಿಮಾನದಿಂದ; * **ಶ್ರುತಿ**=ವೇದ; * **ಕರ್ಮಕಿಂಕರ**=ಕರ್ಮದ ದಾಸ್ಯಕ್ಕೆ ಒಳಗಾಗಿ; * **ಕೃತದುಷ್ಕರ್ಮ ಫಲ**= ಮಾಡಿದ ಪಾಪಗಳ ಪರಿಣಾಮ; * **ಬಳಲುವರು**=ಒದ್ದಾಡುವರು.

**ಟಿಪ್ಪಣಿ–೧:** ಬ್ರಹ್ಮವೇ ಬ್ರಹ್ಮವಹ=ಸ ಯೋಹ ವೈ ತತ್ಪರಂ ಬ್ರಹ್ಮವೇದ ಬ್ರಹ್ಮೈವ ಭವತಿ=ಎಂದು ಮುಂಡಕೋಪನಿಷತ್ತು (೩–೨–೯) ಹೇಳುತ್ತದೆ. ಈ ಶ್ರುತಿವಾಕ್ಯದ ಭಾಗವನ್ನು ಕವಿ ಈ ಪದ್ಯದಲ್ಲಿ ಉಲ್ಲೇಖಿಸಿದ್ದಾನೆ. ಬ್ರಹ್ಮವನ್ನು ತಿಳಿದವನು ಬ್ರಹ್ಮನೇ ಆಗುವನು ಎಂದು ಈ ಶ್ರುತಿವಾಕ್ಯಕ್ಕೆ ಅರ್ಥ.

**ಟಿಪ್ಪಣಿ–೨:** ಒಮ್ಮೆ=ಇದಕ್ಕೆ 'ಒಂದು' ಸಾರಿ ಎಂದು ಅರ್ಥಮಾಡಬಾರದು. ಏಕೆಂದರೆ ಈ ಅಭಿಪ್ರಾಯವನ್ನು ವೇದವು ಅನೇಕಸಾರಿ ಹೇಳಿದೆ. ಜನತೆಯ ಹಿತಚಿಂತನೆಗಾಗಿ ಇರುವ ವೇದವು ಹೇಳಿದ ಮೇಲೆಯೂ ಕೂಡ ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು.

---

**"ಆತ್ಮವಿಚ್ಛೋಕಂ ತರತಿ" ಯೆಂ**
**ದೀತೆರದಿ ಶ್ರುತಿ ಸಾರುತಿರಲದ**
**ನೇತಕರಿಯದೆ ವಿಷಯಲಂಪಟರಾಗಿ ಕೆಡುತಿಹರು! ।**
**ಹೋತು ಸೋಗೆಯ ಮೆಲುವದಲ್ಲದೆ**
**ಪ್ರೀತಿಯಿಂದಲಿ ಕಬ್ಬು ಸವಿವುದೆ?**
**ಪಾತಕರಿಗೇಕನಘ ಪರಮಾನಂದ ಸೊಗಸುವುದು! ॥** ॥೭॥

**ತಾತ್ಪರ್ಯ:** 'ಆತ್ಮವನ್ನು ಅರಿತವನು ದುಃಖಸಾಗರವನ್ನು ದಾಟುವನು' ಎಂಬುದಾಗಿ ವೇದ ಘೋಷಿಸುತ್ತಿದೆ. ಆದರೂ ಈ ಸತ್ಯವನ್ನು ಯಾಕೋ ಏನೋ ಅರ್ಥಮಾಡಿ ಕೊಳ್ಳದೆ ಇಂದ್ರಿಯ ಸುಖದಲ್ಲಿ ಜನರು ಆಸಕ್ತರಾಗಿ ಕೆಟ್ಟುಹೋಗುತ್ತಿದ್ದಾರೆ. ಇದಕ್ಕೆ ದೃಷ್ಟಾಂತವೆಂದರೆ ಹೋತು ಕಬ್ಬಿನ ತೋಟ ಹೊಕ್ಕರೆ ಕಬ್ಬಿನ ತುದಿಯ (ರುಚಿಯಿಲ್ಲದ) ಹಸಿಗರಿಯನ್ನು ಮೆಲ್ಲುವುದಲ್ಲದೆ ಸಿಹಿಕಬ್ಬನ್ನು ರುಚಿ ನೋಡುವುದಿಲ್ಲ. ಹಾಗೆ ದುಷ್ಕರ್ಮಿಗಳಿಗೆ ನಿರ್ದೋಷಿಯಾದ ಪರಮಾತ್ಮನ ಪರಮಸುಖಾನುಭವ ರುಚಿಸುವುದಿಲ್ಲ.

**ಶಬ್ದಾರ್ಥ:** * ವಿಷಯಲಂಪಟರು=ಇಂದ್ರಿಯಸುಖಾಸಕ್ತರು; * ಹೋತು=ಗಂಡು ಮೇಕೆ; * ಸೋಗೆ=ಕಬ್ಬಿನ ತುದಿಯ ಹಸಿಗರಿ (ರುಚಿಯಿಲ್ಲದ್ದು); * ಪಾತಕರು=ದುಷ್ಕರ್ಮಿಗಳು; * ಅನಘ=ನಿರ್ದೋಷಿ; * ಪರಮಾನಂದ=ಪರಮ ಸುಖಾನುಭವ; * ಸೊಗಸು=ರುಚಿಸು

**ಟಿಪ್ಪಣಿ–೧**ಆತ್ಮವಿಚ್ಛೋಕಂ ತರತಿ=ಆತ್ಮವನ್ನು ಅರಿತವನು ಶೋಕ ಸಾಗರವನ್ನು ದಾಟುವನು. (ಛಾಂದೋಗ್ಯ ೭–೧–೩)

**ಟಿಪ್ಪಣಿ–೨:** ತರತಿ ಶೋಕಂ ತರತಿ ಪಾಪಾನಂ ಗುಹಾ ಗ್ರಂಥಿಭ್ಯೋ ವಿಮುಕ್ತೋऽಮೃತೋ ಭವತಿ (ಮುಂಡಕ ೩–೨–೯) (ಜೀವಂತವಿರುವಾಗಲೇ ಇಷ್ಟವಸ್ತು ವಿಯೋಗದಿಂದಾಗುವ ಸಮಸ್ತ ದುಃಖಗಳಿಂದಲೂ ಪಾಪ–ಪುಣ್ಯಗಳಿಂದ ಬಿಡುಗಡೆ ಹೊಂದಿ ಅಮೃತಪುತ್ರರಾಗುತ್ತಾರೆ. (ಮುಮುಕ್ಷುಬೋಧೆ ಪುಟ ೧೧–೧೨–ಸಜ್ಜನಗಡ ನಿವಾಸಿ ರಾಮಸ್ವಾಮಿ)

---

## ಜ್ಞಾನದಿಂದ ಮೋಕ್ಷ (೮-೧೦)

ದಾನವನು ಪಾತ್ರದಲಿ, ನಿಜಸಂ
ತಾನವನು ಪತ್ನಿಯಲಿ, ಯಜ್ಞವಿ
ಧಾನವನು ಸಾಂಗದಲಿ, ಮಾಡಲು ಸ್ವರ್ಗಸುಖವಹುದು ।
ಸ್ವಾನುಭವಸಂಸಿದ್ಧವಹ ಸು
ಜ್ಞಾನದಿಂದಲೆ ಮೋಕ್ಷವಲ್ಲದೆ
ಮಾನನಿಧಿ ಮತ್ತೇತರಿಂದಲು ಮೋಕ್ಷವಿಲ್ಲೆಂದ ॥ ॥೮॥

**ತಾತ್ಪರ್ಯ:** ದಾನವನ್ನು ಅರ್ಹರಾದವರಿಗೆ ನೀಡಬೇಕು. ಧರ್ಮಪತ್ನಿಯಲ್ಲಿ ತಾನು ಮಕ್ಕಳನ್ನು ಪಡೆಯಬೇಕು. ಶಾಸ್ತ್ರಾನುಸಾರ ಕ್ರಮಬದ್ಧವಾಗಿ ಯಜ್ಞಮಾಡಿದರೆ ಸ್ವರ್ಗ ಲೋಕದಲ್ಲಿ ಸುಖ ದೊರಕುತ್ತದೆ. ತನ್ನ ಅನುಭವದಿಂದ ಲಭಿಸಿದ ಬ್ರಹ್ಮಜ್ಞಾನದ ಫಲವಾಗಿ ಮುಕ್ತಿ ದೊರೆಯುತ್ತದೆ. ಇಂಥ ಸ್ವಾಭಿಮಾನಿಗೆ ಬೇರಾವುದರಿಂದಲೂ ಕೈವಲ್ಯ ಸಿಗದು.

**ಶಬ್ದಾರ್ಥ: * ಸಾಂಗದಲಿ=ವೇದೋಕ್ತ ಕ್ರಮದಲ್ಲಿ; * ಸಂಸಿದ್ಧವಹ=ದೊರಕುವ; * ಮಾನನಿಧಿ= ಸ್ವಾಭಿಮಾನಿಗೆ; * ಮೋಕ್ಷ=ಕೈವಲ್ಯ**

**ಟಿಪ್ಪಣಿ: ಜ್ಞಾನದಿಂದಲೆ ಮೋಕ್ಷ–** "ಜ್ಞಾನಾದೇವ ತು ಕೈವಲ್ಯ" ಎಂಬ ಶ್ರುತಿಯಂತೆ.

---

ಕರ್ಮಗಳು ನೆರೆ ಕಳ್ಳಹಣಗಳು;
ಧರ್ಮಗಳವೆಡವಟ್ಟು ತಿಳಿಯಲು;
ನಿರ್ಮಲಜ್ಞಾನೈಕಸಾರವೆ ಕೇಳದಪರಂಜಿ; ।
ಬ್ರಹ್ಮ ತಾನೆಂದೆಂಬುದೇ ಸೋ
ಹಮ್ಮೆನಿಪ ನಿಜಮುದ್ರೆಯದು ಶ್ರುತಿ
ಸಮ್ಮತವು ಲೋಕಾನುಮತವೆಲೆ ಮಗನೆ ಕೇಳೆಂದ ॥ ॥೯॥

**ತಾತ್ಪರ್ಯ:** ನಿತ್ಯನೈಮಿತ್ತಿಕ, ಕಾಮ್ಯ, ನಿಷಿದ್ಧ ಕರ್ಮಗಳು ಖೋಟಾ ನಾಣ್ಯಗಳು, ಚಲಾವಣೆಗೆ ಯೋಗ್ಯವಲ್ಲದವು. ಅಂತೆಯೇ ನೀತಿಪ್ರಧಾನವಾದ ಆಚಾರಗಳು ಚೆನ್ನಾಗಿ ಫಲಕೊಡುವಷ್ಟು ಸಾಮರ್ಥ್ಯವಿಲ್ಲದವು. ವೇದಾಂತಸಾರವಾದ ಬ್ರಹ್ಮತತ್ತ್ವವನ್ನು ಸಾರುವ ಶುದ್ಧ ಅದ್ವೈತದ ಅರಿವೇ ಶುದ್ಧ ಅಪರಂಜಿಯ ನಾಣ್ಯ. ಆ ಪರಬ್ರಹ್ಮವೇ ನಾನು (ಬ್ರಹ್ಮಾಹಮಸ್ಮಿ, ಸೋಽಹಂ) ಎಂಬ ಹಂಸಮಂತ್ರವೇ ಆ ನಾಣ್ಯದ ಮೇಲಿನ ರಾಜಮುದ್ರೆ ಆಗಿದೆ. ಈ ಮಾತು ಶ್ರುತಿಗಳು ಒಪ್ಪುವಂತಹವೂ ಲೋಕದಲ್ಲಿ ಜ್ಞಾನಿಗಳಿಗೆ ಸಮ್ಮತವೂ ಆಗಿದೆ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ: ಕಳ್ಳಹಣಗಳು=ಸಲ್ಲದ ನಾಣ್ಯಗಳು, ಖೋಟಾ ನಾಣ್ಯಗಳು; * ಎಡವಟ್ಟು= ಚೆನ್ನಾಗಿ ಫಲವನ್ನು ಕೊಡುವಷ್ಟು ಸಾಮರ್ಥ್ಯ ಇಲ್ಲವೆಂದರ್ಥ; * ಧರ್ಮ=ನಿತ್ಯ, ನೈಮಿತ್ತಿಕ, ಕಾಮ್ಯ**

ನಿಷಿದ್ಧಗಳೆಂಬ ನೀತಿಪ್ರಧಾನವಾದ ಆಚಾರಗಳು; * **ಸೋऽಹಮ್ಮೆನಿಪ ನಿಜಮುದ್ರೆ**=ಆ ಪರಬ್ರಹ್ಮವೇ ನಾನು ಎಂಬ ಹಂಸಮಂತ್ರದ ಅಭಿಪ್ರಾಯವೇ ತನ್ನ ಮುಖ್ಯ ಚಿಹ್ನೆ; * **ನಿರ್ಮಲಜ್ಞಾನೈಕಸಾರ**= ವೇದಾಂತ ಸಾರವಾದ ಬ್ರಹ್ಮ ತತ್ವವನ್ನು ಸಾರುವ ಶುದ್ಧ ಅದ್ವೈತದ ಅರಿವು; * **ಕೇಳದ ಅಪರಂಜಿ**=ಅಪರೂಪವಾದ ಅಪರಂಜಿ

---

**ತನ್ನ ತನ್ನೊಳು ತಿಳಿವುದಿದು ಸಾ**
**ಮಾನ್ಯವೇ? ಪೂರ್ವದಲಿ ಮಾಡಿದ**
**ಪುಣ್ಯಫಲವೊದಗದೊಡದಾರಿಗು ಸುಲಭವಲ್ಲಾಗಿ ।**
**ಮುನ್ನಲೆಂಬರು ಬ್ರಹ್ಮವಿದ್ಯೆಯ**
**ನಿರ್ಣಯಿಸಲರಿದೆಂದು; ಲೌಕಿಕ**
**ವನ್ನು ಕಳೆದದನರಿವುದೇ ತನಗುನ್ನತದ ಪದವಿ ॥೧೦॥**

**ತಾತ್ಪರ್ಯ:** ಈ ಲೋಕದಲ್ಲಿ ತನ್ನನ್ನು ತಾನು ತಿಳಿಯುವುದು ಎಂದರೆ 'ಆತ್ಮ ಸಾಕ್ಷಾತ್ಕಾರ' ಹೊಂದುವುದು. ಎಲ್ಲರಿಗೂ ಸುಲಭಸಾಧ್ಯವಾದ ಕೆಲಸವಲ್ಲ. ಪೂರ್ವ ಜನ್ಮದಲ್ಲಿ ಗಳಿಸಿದ ಪುಣ್ಯದಭಾಗ್ಯ ದೊರಕದ ಹೊರತು ಯಾರಿಗೂ ಅದು ಸುಲಭವಾಗಿ ದಕ್ಕದು ಎನ್ನುತ್ತಾರೆ. ಅದ್ವೈತಜ್ಞಾನವನ್ನು ಪಡೆಯುವುದು ಕಷ್ಟತರ ವಾದುದು ಎಂದು ಮೊದಲಿನಿಂದಲೂ ಹಿರಿಯರು ಹೇಳುತ್ತಾ ಬಂದಿದ್ದಾರೆ. ಏಕೆಂದರೆ ಬ್ರಹ್ಮವಿದ್ಯೆಯ ಆಳವನ್ನು ಕಂಡು ಹಿಡಿಯಲಾಗುವುದಿಲ್ಲ. ಲೋಕಸಂಬಂಧವಾದ ಮೋಹವನ್ನು ತೊರೆದು ಬ್ರಹ್ಮವಿದ್ಯೆಯನ್ನು ತಿಳಿಯುವುದೇ ಉನ್ನತ ಪದವಿಗಳಿಸಿದಂತೆ ಆಗುತ್ತದೆ ಎಂದು ಜ್ಞಾನಿಗಳ ಮತವಾಗಿದೆ.

**ಶಬ್ದಾರ್ಥ:** * **ತನ್ನ ತನ್ನೊಳು ತಿಳಿವುದು**=ಆತ್ಮ ಸಾಕ್ಷಾತ್ಕಾರ; * **ಪೂರ್ವದಲಿ**=ಪೂರ್ವ ಜನ್ಮದಲ್ಲಿ; **ಮುನ್ನಲಿ**=ಮೊದಲಿನಿಂದಲೂ; **ಬ್ರಹ್ಮ ವಿದ್ಯೆಯ ನಿರ್ಣಯಿಸಲು ಅರಿದು**=ಇದೇನು ಬ್ರಹ್ಮ ವಿದ್ಯೆಯೇ! ಎಂಬ ಗಾದೆಯ ಅನುವಾದ. ಬ್ರಹ್ಮ ವಿದ್ಯೆಯ ಆಳವನ್ನು ಕಂಡು ಹಿಡಿಯಲಾಗುವುದಿಲ್ಲ ಎಂದು ತಾತ್ಪರ್ಯ. * **ಲೌಕಿಕವನ್ನು**= ಲೋಕಸಂಬಂಧವಾದ ಮೋಹವನ್ನು

* **ಟಿಪ್ಪಣಿ–೧:** ಲೋಕದಲ್ಲಿ ಉಳಿದ ವಿದ್ಯೆಗಳನ್ನು ಕಲಿಯುವುದು ಸುಲಭ. ಬ್ರಹ್ಮ ವಿದ್ಯೆಯ ಗಳಿಕೆ ಬಲು ಕಷ್ಟ. ಈ ಬ್ರಹ್ಮ ವಿದ್ಯೆ ಕಲಿವ ವಿಧಾನ ಹರಿತವಾದ ಕತ್ತಿಯ ತುದಿಯ ಮೇಲೆ ನಡೆದಂತೆ. ಭೇದಿಸಲು ಅಸಾಧ್ಯವಾದ ಕೋಟೆಯಂತೆ ಇದೆ. ಆದ್ದರಿಂದ ಮಾರ್ಗದರ್ಶನ ಪಡೆಯಲು ಏಳಿರಿ, ಎದ್ದೇಳಿರಿ. ಜ್ಞಾನಿಗಳ ಬೋಧೆಯಿಂದ ಮುನ್ನಡೆಯಿರಿ ಎಂದು ಕಠೋಪನಿಷತ್ತು ಹೇಳುತ್ತದೆ. (ಕಠ–೪–೧೧–೨೧೦)

---

## ಅನುಭವದ ಹೆಚ್ಚುಗಾರಿಕೆ (೧೧–೧೨)

**ಬಾಯಬ್ರಹ್ಮವ ನುಡಿದ ಮಾತ್ರದಿ**
**ಮಾಯೆಯಳಿದುದೆ? ನಿಜಸುಖವು ತನ**
**ಗಾಯಿತೇ? ಕತ್ತಲೆಯ ಮನೆಯೊಳು ದೀಪವಾರ್ತೆಯನು ।**

**ಬಾಯಲಾಡಲು ಬಹಳ ಕತ್ತಲೆ**
**ಹೋಯಿತೇ? ಅದರಂತೆಯನುಭವ**
**ದಾಯತಿಕೆ ತನ್ನೊಳಗೆ ಜನಿಸದೆ ಬಾಯರಿವು ವ್ಯರ್ಥ ॥ ॥೧೧॥**

**ತಾತ್ಪರ್ಯ:** ಸಾಧನೆಯಿಲ್ಲದೆ ಬಾಯಿಮಾತಿನಲ್ಲಿ ಪರಬ್ರಹ್ಮ ಪರಬ್ರಹ್ಮ ನಾನು ಎಂದು ಜಪ ಮಾಡಿದ ಮಾತ್ರಕ್ಕೆ ಭ್ರಾಂತಿಜನ್ಯ ಅಜ್ಞಾನ ಹೋಗುತ್ತದೆಯೇ? ಮೋಕ್ಷ ಅವನಿಗೆ ಲಭಿಸುವುದೇ? ಕತ್ತಲೆಮನೆಯಲ್ಲಿ ಕುಳಿತು ದೀಪಬೇಕು, ದೀಪಬೇಕು ಎಂದು ಬಾಯಲ್ಲಿ ಹೇಳಿಕೊಂಡರೆ ದಟ್ಟವಾಗಿ ಆವರಿಸಿರುವ ಕತ್ತಲೆ ಮಾಯವಾದೀತೇ? ಅದೇ ರೀತಿಯಲ್ಲಿ ಅನುಭವಸಿದ್ಧವಾದ ಆತ್ಮಾನುಭವವನ್ನು ವಿಶಾಲವಾಗಿ ಆಳವಾಗಿ ಹೊಂದದೆ ಬರಿಯ ಬಾಯಿಮಾತಿನಲ್ಲಿ ಸತ್ಯಜ್ಞಾನ ಗಳಿಸುವೆನೆಂದರೆ ಏನೂ ಪ್ರಯೋಜನವಿಲ್ಲ.

**ಶಬ್ದಾರ್ಥ:** * **ಬಾಯಬ್ರಹ್ಮ**=ಮಾತಿನಲ್ಲಿ ಬ್ರಹ್ಮಜ್ಞಾನ ನುಡಿವುದು; **ಆಯತಿಕೆ**=ವಿಸ್ತಾರ; * **ನಿಜ ಸುಖ**=ಮೋಕ್ಷ; **ಬಾಯರಿವು**=ಬರಿ ಬಾಯಲ್ಲಿ ಆಡುವುದಕ್ಕೆ ಬರುವ ಜ್ಞಾನ

---

**ಕ್ಲೇಶಪಂಚಕಗಳನು ಕೆಡಿಸದೆ**
**ಪಾಶವೆಂಟನು ಪರಿಹರಿಸದಲೆ,**
**'ನೀ ಶಿವನು ನೀ ಬ್ರಹ್ಮ'ನೆಂದುಪದೇಶವನು ಮಾಡೆ ।**
**ಆ ಶಿವನು ಸೆರೆಯರಸನಂದದಿ**
**ಗಾಸಿಯಾಗುತ ಬದ್ಧನಾಗಿಹ;**
**ಲೇಸೆನಿಪ ನಿಜಸುಖವ ಪಡೆಯದೆ ಮುಕ್ತನೆಂತಹನು? ॥ ॥೧೨॥**

**ತಾತ್ಪರ್ಯ:** ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಐದು ಕ್ಲೇಶಗಳನ್ನು ನಿವಾರಿಸಿಕೊಳ್ಳದೆ, ಘೃಣಾ, ಶಂಕಾ, ಭಯ, ಲಜ್ಜಾ, ಜುಗುಪ್ಸಾ, ಕುಲ, ಶೀಲ, ಜಾತಿಗಳೆಂಬ ಎಂಟು ಬಂಧನಗಳನ್ನು ಕಳೆದುಕೊಳ್ಳದೆ ಇರುವ ಮಾಯಾ ಮೋಹಿತನಿಗೆ ನೀನೇ ಪರಶಿವನು, ನೀನೇ ಪರಬ್ರಹ್ಮನು ಎಂದು ಉಪದೇಶ ಮಾಡಿದರೆ ಶ್ರೇಷ್ಠ ಬ್ರಹ್ಮಾನಂದಜೀವಿಯಾಗಲು ಸಾಧ್ಯವೇ? ಅಂಥವನು ಮುಕ್ತನು ಹೇಗಾಗುತ್ತಾನೆ? ಅಂಥಾ ಜೀವಿ ಸೆರೆಮನೆಯಲ್ಲಿ ಬಂಧಿತನಾದ ಅರಸನಂತೆ ಸಂಕಷ್ಟಗಳಿಗೆ ಒಳಗಾಗಿ ನಿರ್ಬಂಧಿತನಾಗಿರುತ್ತಾನೆ.

**ಶಬ್ದಾರ್ಥ:** * **ನಿಜ ಸುಖವನು**=ಬ್ರಹ್ಮಾನಂದವನು; * **ಗಾಸಿಯಾಗುತ**=ಸಂಕಷ್ಟಗಳಿಗೆ ಗುರಿಯಾಗುತ್ತ; **ಬದ್ಧನಾಗಿಹ**=ನಿರ್ಬಂಧಿತನಾಗಿರುತ್ತಾನೆ.

**ಟಿಪ್ಪಣಿ–೧: ಕ್ಲೇಶಪಂಚಕ,** ಅಷ್ಟಪಾಶಗಳ ವಿವರಣೆಗೆ ಅಧ್ಯಾಯ–೧, ಪದ್ಯ–೨೨ರ ವಿವರಣೆ ನೋಡಿ.

**ಟಿಪ್ಪಣಿ–೨: ಸೆರೆಯರಸನಂದದಿ=ಬಂಧಿಯಾಗಿರುವ ದೊರೆಯಂತೆ (ಬೇಡಿದ ರಾಜ್ಯವನ್ನು ಕಳೆದುಕೊಂಡು, ರಾಜ್ಯವನ್ನು ತಿರುಗಿ ಪಡೆದಲ್ಲದೆ ಅವನು ನಿಜವಾದ ದೊರೆಯಾಗುವನೇ? ಅದರಂತೆ ಕ್ಲೇಶಗಳನ್ನು, ಪಾಶಗಳನ್ನು ಕಳೆದುಕೊಂಡರೆ ಮಾತ್ರ ಶಿವನಾಗುವನು).**

---

## ಏಕನಿಷ್ಠೆ (೧೩)

**ಎಲೆ ಧನಂಜಯ, ಸರ್ವಧರ್ಮವ**
**ನುಳಿದು ನನ್ನನೆ ಭಜಿಸು; ಪಾಪವ**
**ತೊಲಗಿಸುವೆ; ನಿನಗೀಗ ಮೋಕ್ಷವನಿತ್ತು ಸಲಹುವೆನು ।**
**ಹಲವು ಕೊಂಬೆಗೆ ಹಾರದೊಂದನೆ**
**ಬಲುವಿಡಿದು ಗತಿವಡೆವುದೆಂದದ**
**ತಿಳುಹಿದನು ಶ್ರೀಕೃಷ್ಣ ಗೀತಾಪರಿಸಮಾಪ್ತಿಯಲಿ ॥ ॥೧೩॥**

**ತಾತ್ಪರ್ಯ:** ಎಲೈ ಅರ್ಜುನನೇ, ವಿಹಿತ ಮತ್ತು ನಿಷಿದ್ಧ ಧರ್ಮಗಳನ್ನೆಲ್ಲ ಬಿಟ್ಟು ಸರ್ವ ಚೈತನ್ಯಸ್ವರೂಪನಾದ ನನ್ನನ್ನೊಬ್ಬನನ್ನೇ ಆರಾಧಿಸು. ಆಗ ನಿನ್ನ ಪಾಪ ಕರ್ಮಗಳನ್ನೆಲ್ಲ ಹೋಗಲಾಡಿಸುವೆ. ನಿನಗೆ ಕೂಡಲೆ ಮುಕ್ತಿಯನ್ನು ನೀಡಿ ಕಾಪಾಡುವೆನು. ಹಲವು ಕೊಂಬೆಗಳನ್ನು ಒಟ್ಟಿಗೆ ಹಿಡಿದು ಮರದ ತುದಿಗೇರಲು ಯತ್ನಿಸಿದರೆ ಸಾಧ್ಯವಾಗದು. ಒಂದೇ ಕೊಂಬೆಯನ್ನು ಒಂದು ಸಲಕ್ಕೆ ಬಲವಾಗಿ ಹಿಡಿದು ಸಾಗಿದರೆ ಮರದ ತುದಿ ಮುಟ್ಟಬಹುದು. ಇದನ್ನೇ ಶ್ರೀಕೃಷ್ಣ ಪರಮಾತ್ಮನು ಗೀತೆಯ ಮುಕ್ತಾಯದ ಭಾಗದಲ್ಲಿ ಬೋಧಿಸಿದ್ದಾನೆ.

**ಟಿಪ್ಪಣಿ–೧: ಸರ್ವಧರ್ಮವನುಳಿದು ನನ್ನನೆಭಜಿಸು: ಪಾಪವ ತೊಲಗಿಸುವೆ ನಿನಗೀಗ ಮೋಕ್ಷವನಿತ್ತು ಸಲಹುವೆನು: ಈ ಅಭಿಪ್ರಾಯಕ್ಕೆ ಆಧಾರವಾದ ಗೀತೆಯ ಶ್ಲೋಕವೆಂದರೆ–ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

[(೧೮–೬೬) **ಗೀತಾ ಶ್ಲೋಕದ ಅರ್ಥ:** ಧರ್ಮಗಳನ್ನೆಲ್ಲ ಎಂದರೆ ವಿಹಿತಗಳನ್ನು ಮಾತ್ರವೇ ಅಲ್ಲ; ನಿಷಿದ್ಧವಾದವುಗಳನ್ನು ಕೂಡ ಬಿಟ್ಟು ಎಂದರೆ ಕರ್ಮಗಳೆಲ್ಲ ದೇಹೇಂದ್ರಿಯಗಳಿಂದ ನಡೆಯತಕ್ಕವಗಳಾದ್ದರಿಂದ ಚೈತನ್ಯ ಸ್ವರೂಪವಾದ ತನಗೆ ಅವುಗಳ ಸಂಬಂಧವೇನೂ ಇಲ್ಲವೆಂದು ತಿಳಿದು ಹುಟ್ಟು, ಸಾವು ಮೊದಲಾದ ಏನೇನೂ ಇಲ್ಲದ ಸರ್ವ ಚೈತನ್ಯ ಸ್ವರೂಪನಾದ ನನ್ನೊಬ್ಬನನ್ನೇ ನಿನ್ನ ಆತ್ಮವೆಂದು ಶರಣು ಹೊಂದು. ನಾನು ಈ ಬಗೆಯ ನಿಶ್ಚಯವುಳ್ಳ ನಿನ್ನನ್ನು ಹುಟ್ಟು ಸಾವುಗಳ ಕಟ್ಟುಪಾಡು ಉಂಟು ಮಾಡುವ ಎಲ್ಲ ಕರ್ಮಗಳ ತೊಡಕಿನಿಂದಲೂ ಬಿಡಿಸುತ್ತೇನೆ–ಎಂದರೆ ನೀನು ನನಗೆ ಶರಣು ಬಂದದ್ದಕ್ಕೆ ಫಲವಾಗಿ ನನ್ನ ಸರ್ವ ಚೈತನ್ಯ ಸ್ವರೂಪವನ್ನು ನಿನಗೆ ತೋರಿಸಿ ಕರ್ಮಗಳು ನಿನ್ನನ್ನು ಸೋಂಕದಂತೆ ಮಾಡುತ್ತೇನೆ, ದುಃಖಿಸಬೇಡ.]

**(ಗೀತಾರ್ಥಚಂದ್ರಿಕೆ–ಪುಟ–೩೦೩–೩೦೪; ಹೊಸಕೆರೆಚಿದಂಬರಯ್ಯ)**

**ಟಿಪ್ಪಣಿ–೨: ಹಲವು ಕೊಂಬೆಗೆ ಹಾರದೊಂದನೆ ಬಲುವಿಡಿದು ಗತಿವಡೆವುದು:**

**ಈ ಅಭಿಪ್ರಾಯಕ್ಕೆ ಆಧಾರವಾದ ಗೀತೆಯ ಶ್ಲೋಕ (೨–೪) ವ್ಯವಸಾಯಾತಿಕಾ ಬುದ್ಧಿರೇಕೇಹ ಕುರುನಂದನ ಬಹುಶಾಖಾಹ್ಯನನ್ತಾಶ್ಚ ಬುದ್ಧಿಯೋಽವ್ಯವಸಾಯಿನಾಮ್॥**

**೨-೪೧ ಗೀತಾ ಶ್ಲೋಕದ ಅರ್ಥ:** ಅರ್ಜುನನೆ ಕೇಳು, ಈ ಕರ್ಮಯೋಗದಲ್ಲಿ ಕರ್ಮದಿಂದ ಪಡೆಯುವ ಫಲಗಳೆಲ್ಲ ಮೂರು ದಿನದ ಬಾಳಿನವುಗಳಾದ್ದರಿಂದ ಅವುಗಳ ಕಡೆಗೆ ಕಣ್ಣು ಹಾಕುವುದು ವ್ಯರ್ಥವೆಂದು ಆ ವಾಸನೆಗಳನ್ನೆಲ್ಲ ಹಿಮ್ಮೆಟ್ಟಿಸುವಂಥ ನಿರ್ಣಯ ಸ್ವರೂಪವಾದ ತಿಳಿವಳಿಕೆಯು ಏಕಮುಖವಾಗಿ ಆಗಿರುವುದು. ಆ ರೀತಿಯಲ್ಲಿ ವಿಚಾರದಿಂದ ನಿರ್ಣಯಕ್ಕೆ ಬರದೆ ಇರುವವರ ತಿಳಿವಳಿಕೆಗಳು ಬಗೆ ಬಗೆಯ ಫಲಗಳನ್ನು ಬಯಸುತ್ತ ಕಂಡ ಕಂಡ ಕಡೆಗೆ ತಿರುಗುವುದರಿಂದ ಅನೇಕ ಕವಲುಗಳಾಗಿ ಲೆಕ್ಕವಿಲ್ಲದಷ್ಟಿರುವುವು.

**(ಗೀತಾರ್ಥಚಂದ್ರಿಕೆ-ಪುಟ-೫೭; ಹೊಸಕೆರೆಚಿದಂಬರಯ್ಯ)**

---

## ಐಕ್ಯದ ಮಹತ್ವ (೧೪-೧೫)

**ಮತಗಳಲಿ ಬಹುವಿಧದ ಮುಕ್ತಿಯ**
**ಗತಿಗಳನು ಪೇಳಿದೊಡದೆಲ್ಲವು**
**ಕ್ಷಿತಿಯೊಳೆಕ್ಕೆಯ ಹಾಲು ಕಳ್ಳಿಯ ಹಾಲದೆಂಬಂತೆ ।**
**ಅತಿಶಯದ ಗೋಕ್ಷೀರವಪ್ಪುದೆ?**
**ಶ್ರುತಿವಿದಿತ ಸಾಯುಜ್ಯಮೋಕ್ಷ**
**ಕ್ಕಿತರಗತಿಗಳು ಸರಿಬಹವೆ? ಶುಕಯೋಗಿ, ಕೇಳೆಂದ ॥ ॥೧೪॥**

**ತಾತ್ಪರ್ಯ:** ಬೇರೆ ಬೇರೆ ಶಾಸ್ತ್ರಗಳಲ್ಲಿ ನಾನಾ ಬಗೆಯ ಮೋಕ್ಷದ ರೀತಿಗಳನ್ನು (ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳೆಂಬ) ಕುರಿತು ಹೇಳಿದ್ದರೂ ಅವೆಲ್ಲವೂ ಈ ಭೂಮಿಯಲ್ಲಿರುವ ಎಕ್ಕೆ ಗಿಡದ ಹಾಲು, ಕಳ್ಳಿ ಗಿಡದ ಹಾಲು ಇದ್ದಂತೆ. ಅವು ಉತ್ಕೃಷ್ಟವಾದ ಹಸುವಿನ ಹಾಲಿಗೆ ಸಮಾನವಲ್ಲ. ವೇದೋಕ್ತವಾದ ಸಾಯುಜ್ಯ (ಜೀವನ್ಮುಕ್ತಿ) ವೆಂಬ ರೀತಿಗೆ ಇತರ ಮಾರ್ಗಗಳು ಸರಿ ತೂಗಲಾರವು ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ :** **ಅತಿಶಯದ**=ಉತ್ಕೃಷ್ಟವಾದ; * **ಗೋಕ್ಷೀರ**=ಹಸುವಿನ ಹಾಲು; * **ಶ್ರುತಿವಿದಿತ** =ವೇದೋಕ್ತವಾದ

**ಟಿಪ್ಪಣಿ-೧: ಇತರ ಗತಿಗಳು: ಸಾಲೋಕ್ಯ** (ಇಷ್ಟ ದೇವತೆಯ ಲೋಕವನ್ನು ಪಡೆಯುವುದು); **ಸಾಮೀಪ್ಯ** (ಇಷ್ಟ ದೇವತೆಯ ಸಮೀಪವನ್ನು ಪಡೆಯುವುದು), **ಸಾರೂಪ್ಯ** (ಇಷ್ಟ ದೇವತೆಯ ಆಕಾರವನ್ನು ಪಡೆಯುವುದು). ಇವುಗಳೆಲ್ಲ ಹೇಗೆ ಎಕ್ಕೆಯ ಹಾಲು ಮೊದಲಾದವು ನಿಜವಾದ ಹಸುವಿನ ಹಾಲಿನಂತಲ್ಲವೊ ಹಾಗೆ ನಿಜವಾದ ಮುಕ್ತಿಗಳಲ್ಲ.

**ಟಿಪ್ಪಣಿ-೨: ಸಾಯುಜ್ಯ**=ಉಪಾಸನೆಯಿಂದ (ಪ್ರಾಣನಲ್ಲಿಯೇ) ಒಂದಾಗಿ ಬಿಡುವುದು (ಬೃಹ-೧) ಜೀವನ್ಮುಕ್ತಿ (ಪಾರಿಭಾಷಿಕ ಶಬ್ದ ಕೋಶ-ಪುಟ-೩೧೮)

---

**ಸ್ವಾನುಭವ ಗುರುವಾಕ್ಯ ಶಾಸ್ತ್ರ**
**ಜ್ಞಾನವೊಂದೇ ಪರಿಯದೆನಿಸೆ, ನಿ**
**ದಾನಿಸಿಯೆ ನಿಶ್ಚಯಿಸಿ, ನಿರ್ಗುಣವಾದ ನಿಜಪದವ ।**

ಧ್ಯಾನಿಸುತ್ತಿರೆ ವರಸಮಾಧಿಯ
ಮೌನಮುದ್ರೆಯ ಧರಿಸಿ ಮೆರೆದಿಹ
ಮಾನನಿಧಿ ಮದನಾರಿಯೆನಿಸುವ; ಮರ್ತ್ಯನವನಲ್ಲ ॥೧೫॥

**ತಾತ್ಪರ್ಯ:** ಆತ್ಮಾನುಭವ, ಗುರೂಪದೇಶ, ಶಾಸ್ತ್ರಪರಿಣಿತಿ ಇವು ಮೂರೂ ಒಂದೇ ರೀತಿಯಾಗಿರುವುದೇ ಎಂದು ವಿಚಾರಮಾಡಿ ನಿಶ್ಚಲಮನದಿಂದ ನಿರಾಕಾರ ರೂಪಿ ಬ್ರಹ್ಮ ಸ್ವರೂಪವನ್ನು ಚಿಂತಿಸಬೇಕು. ಆಗ ಹೆಚ್ಚಿನ ಸಮಾಧಿಯ ರೂಪವಾದ ಮೌನ ಲಕ್ಷಣವನ್ನು ಹೊಂದಿ ವಿರಾಜಮಾನನಾದವನೇ ಮಾನ ನಿಧಿ (ಅಧಿಕಗುಣ ಶ್ರೇಷ್ಠ) ಮಹೇಶ್ವರನೆನಿಸಿಕೊಳ್ಳುತ್ತಾನೆ. ಮಾನವ ಮಾತ್ರನಾಗಿ ಆಗುವುದಿಲ್ಲ.

**ಶಬ್ದಾರ್ಥ:** * ಸ್ವಾನುಭವ=ಆತ್ಮಾನುಭವ; ವರ ಸಮಾಧಿಯ ಮೌನ ಮುದ್ರೆಯ=ಹೆಚ್ಚಿನ ಸಮಾಧಿಯ ರೂಪವಾದ ಮೌನ ಲಕ್ಷಣವನ್ನು; * ಮರ್ತ್ಯನವನಲ್ಲ=ಕೇವಲ ಮಾನವನಲ್ಲ; * ಗುರುವಾಕ್ಯ =ಗುರೂಪದೇಶ

**ಟಿಪ್ಪಣಿ-೧:** ಇಲ್ಲಿ ಹೇಳಿರುವ ಧ್ಯಾನ ಸಮಾಧಿಗಳು ಯೋಗದಲ್ಲಿ ಹೇಳಿದ ಧ್ಯಾನ ಸಮಾಧಿಗಳಲ್ಲ *(ಅನುಭವಾಮೃತ ತಾತ್ಪರ್ಯ-ಅರಾಸೇ-ಪುಟ-೬೨)*

---

## ಗುರ್ವನುಗ್ರಹ (೧೬-೧೭)

ಬಾಲ್ಯವಾರ್ಧಕ್ಯಗಳೊಳೆಳ್ಳನಿ
ತಿಲ್ಲ ತನಗೆ ಸ್ವತಂತ್ರ; ಯೌವನ
ದಲ್ಲಿ ತನ್ನಾಧೀನವಹ ಸ್ವಾತಂತ್ರ್ಯಮುಳ್ಳಲ್ಲಿ ।
ಮೆಲ್ಲಮೆಲ್ಲನೆ ಸಂಸ್ಕೃತಿಯ ತೊಡ
ಕೆಲ್ಲವನು ಸಡಿಲಿಸಿ, ಕೃಪಾಳಹ
ಬಲ್ಲಗುರುವನು ಸೇರಿ, ತನ್ನನು ತಿಳಿಯಲವ ಮುಕ್ತ ॥ ॥೧೬॥

**ತಾತ್ಪರ್ಯ:** ಮನುಷ್ಯನು ಎಳೆಯತನದಲ್ಲಿ ಮತ್ತು ಮುಪ್ಪಿನಲ್ಲಿ ಅಶಕ್ತತೆ ಕಾರಣದಿಂದ ಪರಾವಲಂಬಿಯಾಗಿರುತ್ತಾನೆ. ಆದ್ದರಿಂದ ತನ್ನಿಚ್ಛೆಯಂತೆ ಸ್ವಪ್ರಯತ್ನದಿಂದ ವರ್ತಿಸಲು ಸ್ವತಂತ್ರನಾಗಿರಲು ಸ್ವಲ್ಪವೂ ಶಕ್ಯವಿಲ್ಲ. ಆದರೆ ತರುಣನಾದಾಗ ಸ್ವಾವಲಂಬಿಯಾಗಿ ವರ್ತಿಸಬಲ್ಲ. ಆಗ ಕ್ರಮಕ್ರಮವಾಗಿ ತಾನು ಸಿಲುಕಿಕೊಂಡ ಸಂಸಾರದ ಬಂಧನಗಳನ್ನು ಬಿಡಿಸಿಕೊಂಡು ಸಮರ್ಥ ಸದ್ಗುರುವಿನ ಬಳಿಗೆ ಹೋಗಿ ಆತ್ಮಜ್ಞಾನ ಗಳಿಸಿದರೆ ಆತನು ಮುಕ್ತನೆನಿಸಿಕೊಳ್ಳುತ್ತಾನೆ.

**ಶಬ್ದಾರ್ಥ:** * ಬಾಲ್ಯ=ಎಳೆಯತನ; ವಾರ್ಧಕ್ಯ=ಮುಪ್ಪು; * ಎಳ್ಳನಿತಿಲ್ಲ=ಸ್ವಲ್ಪವೂ ಶಕ್ಯವಿಲ್ಲ; * ಸಂಸ್ಕೃತಿ=ಸಂಸಾರ; * ಕೃಪಾಳಹ=ಕರುಣಾಶಾಲಿ ಆದ; * ಬಲ್ಲ ಗುರು=ಸಮರ್ಥ ಸದ್ಗುರು; * ತನ್ನನು ತಿಳಿಯಲು=ಆತ್ಮ ಜ್ಞಾನ ಗಳಿಸಲು;

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಅದುನಿಮಿತ್ತದಿ ಮಗನೆ ಸದ್ಗುರು**
**ಪದಪಯೋಜವ ನೆಮ್ಮಿ, ಶಾಸ್ತ್ರವ**
**ವಿದಿತವಾಗಿಹುದೆನಿಸಿ, ಮನವರಿವಂತೆ ಪ್ರಶ್ನೆಗಳ ।**
**ಮುದವೊದವೆ ವಿನಯೋಕ್ತಿಯಲಿ ಮಾ**
**ಡಿದೊಡದೇ ಅನುಕೂಲತರ್ಕವು;**
**ಸದಮಲಾತ್ಮಜ್ಞಾನ ಕೇಳದರಿಂದ ಸಿದ್ಧಿಪುದು ॥ ॥೧೭॥**

**ತಾತ್ಪರ್ಯ:** ಎಲೈ ಶುಕನೆ, ಗುರು ಅನಿವಾರ್ಯವಾದ್ದರಿಂದ ಸದ್ಗುರುವಿನ ಪಾದಕಮಲಗಳನ್ನು ಆಶ್ರಯಿಸಿ ಸಕಲ ಶಾಸ್ತ್ರಗಳನ್ನು ವಿವರವಾಗಿ ತಿಳಿಯುವಾಗ ಪ್ರಶ್ನೆಗಳು ಸಂದೇಹಗಳು ಮನಸ್ಸಿಗೆ ಬಂದಾಗ ವಿನಯದಿಂದ ತೃಪ್ತಿಯಾಗುವಂತೆ ಉತ್ತರಗಳನ್ನು ಪಡೆದರೆ, ಆಗ ಮುಕ್ತಿಗೆ ಸಾಧನವಾದ ವೇದಾರ್ಥವನ್ನು ತಿಳಿಯುವ ಯುಕ್ತಿ ಸಿದ್ಧಿಸುತ್ತದೆ. ಇದೇ ಈ ಅನುಕೂಲ ತರ್ಕ. ಇದರ ಸಿದ್ಧಿಯಿಂದ ಶುದ್ಧ ಆತ್ಮಜ್ಞಾನ ಲಭಿಸುತ್ತದೆ.

**ಶಬ್ದಾರ್ಥ:** ನೆಮ್ಮಿ=ಆಶ್ರಯಿಸಿ; ಮನವರಿವಂತೆ ಪ್ರಶ್ನೆಗಳ=ಪ್ರಶ್ನೆ ಮಾಡಿ ಉತ್ತರ ಪಡೆಯಬೇಕು; ಮುದವೊದವೆ=ಸಂತೋಷವುಂಟಾಗುವಂತೆ; ಅನುಕೂಲ ತರ್ಕ=ವೇದದ ಅರ್ಥಕ್ಕೆ ಬೆಂಬಲವಾದ ಯುಕ್ತಿ

**ಟಿಪ್ಪಣಿ-೧:** ಮನವರಿವಂತೆ ಪ್ರಶ್ನೆಗಳ=ಮನಸ್ಸಿಗೆ ಬೋಧೆಯಾಗುವಂತಹ ಪ್ರಶ್ನೆಗಳನ್ನು ಮಾಡಿ ಆತ್ಮ ಜ್ಞಾನಪಡೆಯಬೇಕೆಂದು ಗೀತೆಯಲ್ಲಿ ಶ್ರೀಕೃಷ್ಣನು (ಅ-೪- ಶ್ಲೋಕ-೩೪) ಹೇಳಿದ್ದಾನೆ.

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ (೪-೩೪)**

[ಜ್ಞಾನವು ದೊರೆಯುವ ಉಪಾಯವನ್ನು ತಿಳಿದುಕೊ, ಗುರುಗಳು ಪರಮಾತ್ಮ ಸ್ವರೂಪ, ತಿಳಿದವರು, ನಿಜವನ್ನು ಕಣ್ಣಾರೆ ಕಂಡವರೂ ಆಗಿರುತ್ತಾರೆ, ನೀನು ಅವರಿಗೆ ನಮಿಸಿ ಬಂಧಮೋಕ್ಷಗಳೆಂದರೇನು ಇತ್ಯಾದಿ ಪ್ರಶ್ನೆಮಾಡುತ್ತಾ ಅವರ ಮನವೊಲಿಸಿ ಸೇವೆ ಮಾಡುವುದರಿಂದ ಜ್ಞಾನವನ್ನು ಪಡೆಯಬಹುದು] *ಗೀತಾರ್ಥ ಚಂದ್ರಿಕೆ-ಪುಟ-೧೧೬*

---

**ವಿಷಯಸೂಚನೆ (೧೮)**

**ಕೇಳು ಶುಕ ದೃಗ್ದೃಶ್ಯ ಭೇದವ,**
**ಪೇಳುವೆನು ಕ್ಷೇತ್ರಜ್ಞ ಕ್ಷೇತ್ರಗ**
**ಳೋಳಿಹ ವಿಭಾಗದ ವಿವೇಕವ, ಪಂಚಕೋಶಗಳ, ।**
**ಕಾಳುಮತಗಳ ಖಂಡನೆಗಳನು,**
**ಸ್ಥೂಲ ಮೊದಲಹ ತನುವಿನಳತೆಯ,**
**ಮೇಲೆ ತ್ವಂಪದಲಕ್ಷ್ಯವಹ ಚಿತ್ಸುಖದ ವಿವರಣೆಯ ॥ ॥೧೮॥**

**ತಾತ್ಪರ್ಯ:** ನೋಡುವ ಆತ್ಮ, ಹೊರಗೆ ಕಾಣುವ ಅನಾತ್ಮ ಇವುಗಳಿಗಿರುವ ವ್ಯತ್ಯಾಸವನ್ನು, ಕ್ಷೇತ್ರಗಳನ್ನು ತಿಳಿಯುವವನು ಮತ್ತು ಶರೀರ ಮೊದಲಾದ ಹೊರಗಣ ವಿಷಯಗಳು ಇವುಗಳ ವಿವೇಚನೆಯನ್ನು ಅನ್ನಮಯ, ಪ್ರಾಣಮಯ, ಮನೋಮಯ, ಪ್ರಜ್ಞಾಮಯ, ಆನಂದಮಯಗಳೆಂಬ (ಐದು ಬಗೆಯ ಕೋಶಗಳನ್ನು) ಕುತ್ಸಿತ ಮತಗಳ ದೋಷಾರೋಪಣೆಗಳನ್ನು ಖಂಡಿಸುವುದನ್ನು, ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳ ಸ್ವರೂಪ ವೇನೆಂಬುದನ್ನು ಅನಂತರ ಮಾತಿನಿಂದ ನೇರವಾಗಿ ಹೇಳಲ್ಪಡದೆ ಆ ಮಾತಿನ ಸಂಬಂಧದಿಂದ ಗೊತ್ತಾಗುವ ವಸ್ತುವಾದ ಚಿದಾನಂದವನ್ನು ತಿಳಿಸುತ್ತೇನೆ.

**ಶಬ್ದಾರ್ಥ:** **ದೃಕ್‌ದೃಶ್ಯ**=ದೃಕ್ (ನೋಡುವವನು ಆತ್ಮ) ದೃಶ್ಯ (ಹೊರಗೆ ಕಾಣುವುದು ಅನಾತ್ಮ); **ಕ್ಷೇತ್ರಜ್ಞಕ್ಷೇತ್ರಗಳು**=ಕ್ಷೇತ್ರಗಳನ್ನೆಲ್ಲ ತಿಳಿಯುವವನು ಮತ್ತು ಶರೀರ ಮೊದಲಾದ ಹೊರಗಣ ವಿಷಯಗಳು; **ಕಾಳು**=(ಕಾಡು) ಕುತ್ಸಿತ; **ಲಕ್ಷ್ಯ**=ಮಾತಿನಿಂದ ನೇರವಾಗಿ ಹೇಳಲ್ಪಡದೆ ಆ ಮಾತಿನ ಸಂಬಂಧದಿಂದ ಗೊತ್ತಾಗುವ ವಸ್ತು, **ಸ್ಥೂಲಮೊದಲಹತನಾವಿನಳತೆಯ**=ಸ್ಥೂಲ ಸೂಕ್ಷ್ಮಶರೀರಗಳ ಸ್ವರೂಪವೇನೆಂಬುದನ್ನು

**ಟಿಪ್ಪಣಿ-೧: ಪಂಚಕೋಶ:** ೧) **ಅನ್ನಮಯ** (ಸ್ಥೂಲ ದೇಹ); ೨) **ಪ್ರಾಣಮಯ** (ಉಸಿರು); ೩) **ಮನೋಮಯ** (ಮನಸ್ಸು); ೪) **ವಿಜ್ಞಾನಮಯ** (ಬುದ್ಧಿ); ೫) **ಆನಂದಮಯ** (ವಿಷಯ ಸುಖದ ಅನುಭವ) ಎಂಬ ಐದು ಬಗೆ ಕೋಶಗಳು; **ಕೋಶ**=ಆತ್ಮನ ಮುಸುಕು (ಆವರಣ)- 'ಪಾರಿಭಾಷಿಕಕೋಶ-ಪುಟ-೧೮೧'

---

## ಪ್ರಶ್ನೆ (೧೯-೨೦)

**ಗುರುವೆ ಬಿನ್ನಹ, ಜೀವಪರಮರ**
**ಪರಿಯದೆಂತೈ? ವಾಚ್ಯಲಕ್ಷ್ಯದ**
**ತೆರನದಾವುದು? ಲಕ್ಷಣೆಯಲದಕೈಕ್ಯವೆಂತಹುದು? ।**
**ಎರಡು ತನುವೆಂತಾಯಿತೊಬ್ಬಗೆ?**
**ದೊರೆವುದೆಂತದ್ವೈತ ನಿಜಸುಖ**
**ವರಿದಲಾ! ಈ ಸಂಶಯವ ಪರಿಹರಿಸಬೇಕೆಂದ ॥ ॥೧೯॥**

**ತಾತ್ಪರ್ಯ:** ಶುಕಯೋಗಿಯು ತಂದೆ ವ್ಯಾಸಮಹರ್ಷಿಗಳನ್ನು ಹೀಗೆ ಪ್ರಶ್ನಿಸಿದನು. ಸದ್ಗುರುವೇ ನನ್ನದೊಂದು ಕೋರಿಕೆ ಇದೆ ಆಲಿಸಬೇಕು ಎಂದು ಕೆಲವು ಪ್ರಶ್ನೆಗಳನು ಮುಂದಿಟ್ಟನು. ೧) ಜೀವಾತ್ಮ ಪರಮಾತ್ಮರ ಸ್ವರೂಪ ಹೇಗಿದೆ? ೨) ಮಾತಿನಿಂದ ನೇರವಾಗಿ ಹೇಳಲ್ಪಡುವ ವಸ್ತು (ವಾಚ್ಯಾರ್ಥ) ಲಕ್ಷ್ಯವಾದ ಅರ್ಥವನ್ನು ತೆಗೆದು ಕೊಂಡಾಗ (ಲಕ್ಷ್ಯಾರ್ಥ) ಜೀವಾತ್ಮ ಪರಮಾತ್ಮರ ವಿಮರ್ಶೆ ಹೇಗೆ? ೩) ಲಕ್ಷ್ಯಾರ್ಥವನ್ನು ತೆಗೆದುಕೊಂಡಾಗ ಜೀವ-ಪರಮಾತ್ಮರ ಐಕ್ಯ ಹೇಗೆ? ೪) ಒಬ್ಬನಾಗಿರುವ ಪರಮಾತ್ಮನಿಗೆ ತನ್ನ ಪರಮಾತ್ಮ ಸ್ವರೂಪವೂ ಜೀವ ಸ್ವರೂಪವೂ

(ದ್ವೈತ) ಹೇಗಾಯಿತು? ೫) ಹೀಗೆ ದ್ವೈತವಿದ್ದರೆ ಅದ್ವೈತವೆಂಬ ನಿಜವಾದ ಪರಮ ಸುಖ (ಸಾಯುಜ್ಯ) ಹೇಗೆ ದೊರೆಯುವುದು? ಅಸಾಧ್ಯವಲ್ಲವೇ? ಈ ಎಲ್ಲ ಅನುಮಾನಗಳನ್ನು ಸದ್ಬೋಧೆಯಿಂದ ನಿವಾರಿಸಬೇಕು ಎಂದನು.

**ಶಬ್ದಾರ್ಥ: ಜೀವ ಪರಮರ**=ಜೀವ ಪರಮಾತ್ಮರ; **ವಾಚ್ಯ**=ಮಾತಿನಿಂದ ನೇರವಾಗಿ ಹೇಳಲ್ಪಡುವ ವಸ್ತು; **ಲಕ್ಷಣೆಯಲಿ**=ಲಕ್ಷ್ಯವಾದ ಅರ್ಥವನ್ನು ತೆಗೆದುಕೊಂಡಾಗ; **ಎರಡು ತನುವೆಂತಾಯಿತೊಬ್ಬಗೆ?**=ಒಬ್ಬನಾಗಿರುವ ಪರಮಾತ್ಮನಿಗೆ ತನ್ನ ಪರಮಾತ್ಮ ಸ್ವರೂಪವೂ ಜೀವ ಸ್ವರೂಪವೂ ಎರಡೂ ಹೇಗಾಯಿತು? **ಅರಿದಲಾ**=ಬಹು ಅಸಾಧ್ಯ! ಅಥವಾ ಆಶ್ಚರ್ಯ! * **ಬಿನ್ನಹ**=ಕೋರಿಕೆ; * **ಪರಿ**=ರೀತಿ, ವಿವರಣೆ, ಲಕ್ಷಣ; **ಎರಡು ತನು**=ಜೀವಾತ್ಮ, ಪರಮಾತ್ಮ; **ಸಂಶಯ**=ಅನುಮಾನ;

**ಟಿಪ್ಪಣಿ–೧: * ಗುರುವೆ**=ತಂದೆಯನ್ನು ಗುರುವೆಂದು ತಿಳಿಯುತ್ತಾರೆ. ಆದಕಾರಣ ಇಲ್ಲಿ ಶುಕ ತನ್ನ ತಂದೆಯನ್ನು ಗುರುವೆ ಎಂದಿದ್ದಾನೆ.

**ಟಿಪ್ಪಣಿ–೨:** ಗೀತೆಯಲ್ಲಿ ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ (೪–೩೪) ಹೇಳಿದ್ದಾನೆ. ಅದಕ್ಕೆ ಈ ಪದ್ಯ ಉದಾಹರಣೆ ಆಗಿದೆ. ೩–೧೭ ಪದ್ಯದ ಟಿಪ್ಪಣಿ ನೋಡಿ.

---

**ಸಚ್ಚಿದಾನಂದೈಕರಸವೇ**
**ಹುಚ್ಚುಗೊಂಡೆರಡಾಗಿ, ತನ್ನೊಳು**
**ಹೆಚ್ಚುಕುಂದಿನ ಹೆಸರ ಭೇದಭ್ರಾಂತಿಯಾಗಿರಲು ।**
**ಅಚ್ಚರಿಯದೆನಗಾಯ್ತು; ಕರುಣಿಸು**
**ಸಚ್ಚರಿತ ನೀನೆನಲು, ಮುನಿಪತಿ**
**ಹೆಚ್ಚಿ ಮನದಲಿ, ಮಗನ ಮಾತಿಗೆ ಮೆಚ್ಚಿ ಹೇಳಿದನು ॥ ॥೨೦॥**

**ತಾತ್ಪರ್ಯ:** ಸತ್ಯ ಸ್ವರೂಪ, ಜ್ಞಾನ ಸ್ವರೂಪ, ಬ್ರಹ್ಮ ಸ್ವರೂಪವಾಗಿದ್ದು ಎಲ್ಲವೂ ಒಂದಾಗಿರುವ ಎಂದರೆ ಏಕರೂಪಿ ಪರಬ್ರಹ್ಮನು. ಹುಚ್ಚು ಹಿಡಿದವನಂತೆ (ಭ್ರಾಂತನಾಗಿ) ಜೀವ ಈಶ್ವರ ಎಂದು ಎರಡು ಬಗೆಯಾಗಿ ಈಶ್ವರನು ಹೆಚ್ಚಿನವನು ಎಂದು ಜೀವನು ಕಡಿಮೆಯವನು ಎಂದು ಅವೆರಡೂ ಬೇರೆ ಬೇರೆಯೆಂಬ ತಪ್ಪು ತಿಳಿವಳಿಕೆಯಿಂದ ನಾನು ಬೆರಗಾಗಿದ್ದೇನೆ. ಸಚ್ಚರಿತನಾದ ಸದ್ಗುರುವೇ ಈ ಬಗ್ಗೆ ಸುಜ್ಞಾನವನ್ನು ಉಂಟುಮಾಡು ಎಂದಾಗ ವ್ಯಾಸ ಮುನಿ ಅಧಿಕಸಂತಸದಿಂದ ಮಗನ ಮಾತನ್ನು ಮೆಚ್ಚಿಕೊಂಡು ಅವನ ಪ್ರಶ್ನೆಗಳಿಗೆ ಉತ್ತರಿಸಿದನು.

**ಶಬ್ದಾರ್ಥ: ಹುಚ್ಚುಗೊಂಡೆರಡಾಗಿ**=ಹುಚ್ಚು ಹಿಡಿದಂತೆ ಜೀವ ಈಶ್ವರ ಎಂದು ಎರಡು ಬಗೆಯಾಗಿ; **ಹೆಚ್ಚುಕುಂದಿನ**=ಈಶ್ವರನು ಹೆಚ್ಚಿನವನು ಜೀವನು ಕಡಿಮೆಯವನೆಂದೂ **ಭೇದಭ್ರಾಂತಿ**=ಅವೆರಡೂ ಬೇರೆ ಬೇರೆಯೆಂಬ ತಪ್ಪು ತಿಳಿವಳಿಕೆ * **ಹೆಚ್ಚಿಮನದಲಿ**=ಅಧಿಕ ಸಂತಸದಿಂದ

---

## ಲಕ್ಷ್ಯಾರ್ಥ ವಿಚಾರ (೨೧-೨೪)

ಜೀವನಾರೆಂದೆನಲು ಹಮ್ಮಿನ
ಭಾವವುಳ್ಳವನೀಶ್ವರನು ಮಾ
ಯಾವಿಲಾಸ ವಿಚಿತ್ರರೂಪನು; ವಾಚ್ಯವಿವು ತಿಳಿಯೆ; ।
ಈ ವಿರೋಧಾಂಶಗಳ ಕಳೆಯ
ಲ್ಕಾವುದುಳಿವುದೊ ಲಕ್ಷಣೆಯದೆ ನಿ
ಜಾವಬೋಧವು; ಲಕ್ಷ್ಯವೆರಡೊಂದೆಂಬುದೈಕ್ಯಾರ್ಥ ॥ ॥೨೧॥

**ತಾತ್ಪರ್ಯ:** ಜೀವನು ಅಂದರೆ ಯಾರು ಎಂದು ಕೇಳುವೆಯಾ? ಹೇಳುವೆನು. ನಾನೆಂಬ ಅಭಿಮಾನವುಳ್ಳವನು. ಈಶ್ವರನಾದರೋ ತನ್ನ ಅಧೀನದಲ್ಲಿ ಇರುವ ಮಾಯಾಶಕ್ತಿಯ ಆಟವಾಗಿ ಬಗೆಬಗೆಯ ರೂಪಗಳಿಂದ ಕಾಣುವನು. ಇವೆರಡೂ ಜೀವೇಶ್ವರತತ್ವದ ವಾಚ್ಯಶಬ್ದಗಳಾಗಿವೆ. ಈ ಜೀವೇಶ್ವರತತ್ವದಲ್ಲಿ ಜೀವನು ಅಹಂಕಾರಿಯಾಗಿರುವುದೂ ಈಶ್ವರನು ಮಾಯಾಶಕ್ತಿಯಿಂದ ಕೂಡಿರುವುದೂ ಒಂದಕ್ಕೊಂದು ವಿರೋಧವಾಗಿದೆ. ಈ ಅಹಂಕಾರ ಮತ್ತು ಮಾಯಾ ವಿಲಾಸಗಳೆಂಬ ಅಂಶಗಳನ್ನು ವಿಚಾರಮಾಡಿ ಕಳೆದರೆ ಉಳಿಯುವುದು ಒಂದೇ ಚೈತನ್ಯ. ನಿಜ ಜ್ಞಾನವು ಅದೇ ಲಕ್ಷಣೆ. ಇನ್ನು ಲಕ್ಷ್ಯವೆಂಬುದು ಜೀವನ ಅಹಂಕಾರವನ್ನು ಕಳೆದ ಮೇಲೆ ಉಳಿದ ಚೈತನ್ಯವೂ ಈಶ್ವರನ ಮಾಯಾಶಕ್ತಿಯನ್ನು ಕಳೆದ ಮೇಲೆ ಉಳಿದ ಚೈತನ್ಯವೂ ಎರಡೂ ಒಂದೇ ಎಂದು ತಿಳಿಯುವುದು.

**ಶಬ್ದಾರ್ಥ:** **ಹಮ್ಮಿನ ಭಾವವುಳ್ಳವನು**=ನಾನೆಂಬ ಅಭಿಮಾನವುಳ್ಳವನು; **ಹುಚ್ಚು ಗೊಂಡೆರಡಾಗಿ** =ಹುಚ್ಚು ಹಿಡಿದಂತೆ ಜೀವ, ಈಶ್ವರ ಎಂದು ಎರಡು ಬಗೆಯಾಗಿ; **ಹೆಚ್ಚುಕುಂದಿನ**=ಈಶ್ವರನು ಹೆಚ್ಚಿನವನು ಎಂದು ಜೀವನು ಕಡಿಮೆಯವನೆಂದೂ; **ಭೇದಭ್ರಾಂತಿ**=ಅವೆರಡೂ ಬೇರೆ ಬೇರೆಯೆಂಬ ತಪ್ಪು ತಿಳಿವಳಿಕೆ; **ಮಾಯಾವಿಲಾಸವಿಚಿತ್ರರೂಪನು** =ತನ್ನ ಅಧೀನದಲ್ಲಿರುವ ಮಾಯಾಶಕ್ತಿಯ ಆಟವಾಗಿ ಬಗೆ ಬಗೆಯ ರೂಪಗಳಿಂದ ಕಾಣುವನು; **ವಿರೋಧಾಂಶಗಳ**=ಜೀವನು ಅಹಂಕಾರಿಯಾಗಿರುವುದೂ, ಈಶ್ವರನು ಮಾಯಾಶಕ್ತಿಯಿಂದ ಕೂಡಿರುವುದೂ ಒಂದಕ್ಕೊಂದು ವಿರೋಧವಾಗಿದೆ. **ಲಕ್ಷ್ಯವೆರಡು**=ಜೀವನ ಅಹಂಕಾರವನ್ನು ಕಳೆದ ಮೇಲೆ ಉಳಿದ ಚೈತನ್ಯವು ಈಶ್ವರನ ಮಾಯಾಶಕ್ತಿಯನ್ನು ಕಳೆದ ಮೇಲೆ ಉಳಿದ ಚೈತನ್ಯವು ಎರಡೂ ಒಂದು.
* **ಐಕ್ಯಾರ್ಥ**=ಸಾಯುಜ್ಯದ ಲಕ್ಷಣ;

**ಟಿಪ್ಪಣಿ-೧:** **ಹಮ್ಮಿನಭಾವವುಳ್ಳವನು**=ನಾನೆಂಬ ಅಭಿಮಾನವುಳ್ಳವನು; ಈ ಮಾತಿನ ವಿವರಣೆ ಹೀಗಿದೆ: ನಾನು ನೀನು ಎಂಬ ಮಾತಿಗೆ ಲಕ್ಷ್ಯಾರ್ಥವು ಬ್ರಹ್ಮವಾದರೂ ವಾಚ್ಯಾರ್ಥವು ಜೀವನಾಗುವುದು. ಜೀವನ ಲಕ್ಷಣದ ವಿಷಯದಲ್ಲಿ ವೇದಾಂತಿಗಳಲ್ಲಿ ಎರಡು ಮುಖ್ಯವಾದ ಮತ ಭೇದಗಳಿವೆ. ಶುದ್ಧಚೈತನ್ಯವೂ ಅಂತಃಕರಣವೂ ಅಂತಃಕರಣದಲ್ಲಿ ಬಿದ್ದಿರುವ ಪ್ರತಿಬಿಂಬವೂ ಕೂಡಿ ಜೀವವೆನ್ನುವದು ಒಂದು ಮತ; ಇದನ್ನು ಪ್ರತಿಬಿಂಬವಾದ ಎನ್ನುವರು.

ಅಂತಃಕರಣದ ಉಪಾಧಿಯಿಂದ ಕೂಡಿದ ಕೇವಲ ಚೈತನ್ಯವೇ ಜೀವವೆನ್ನುವುದು ಇನ್ನೊಂದು ಮತ. ಇದನ್ನು ಅವಿಚ್ಛಿನ್ನವಾದ ಎನ್ನುವರು.

ಈ ಬೇರೆ ಬೇರೆ ವಾದಿಗಳು ತಮ್ಮತಮ್ಮ ವಾದದ ಶ್ರೇಷ್ಠತೆಯನ್ನು ಸಾಧಿಸುವುದಕ್ಕೆ ಹೋಗುವುದುಂಟು. ಆದರೆ ಹೀಗೆ ಮಾಡುವುದರಲ್ಲಿ ಹುರುಳಿಲ್ಲ. ಜೀವನು ಪ್ರತಿಬಿಂಬನೆಂದು ಅಥವಾ ಉಪಾಧಿಯಿಂದ ಕೂಡಿದ ಬ್ರಹ್ಮವೆಂದು ಹೇಳುವುದು ಚೈತನ್ಯದಲ್ಲಿ ಜೀವತ್ವವು ಆರೋಪಿತವೆಂಬಷ್ಟು ಮಾತ್ರವನ್ನು ಹೇಳುವುದಕ್ಕೆ ಹೊರತು ಪ್ರತಿಬಿಂಬವು ನಿಜವಾಗಿ ಬಿದ್ದಿರುವುದೆಂದೂ ಅಂತಃಕರಣವು ನಿಜವಾಗಿ ಉಪಾಧಿಯಾಗಿರುವುದೆಂದೂ ತಿಳಿಯುವಷ್ಟು ದೂರಕ್ಕೆ ಇದರ ಅರ್ಥವನ್ನು ಜಗ್ಗಬಾರದು. ಹಮ್ಮಿನ ಭಾವವುಳ್ಳವನೆಂದು ಮೇಲಿನ ಎರಡು ಮತಗಳಿಗೂ ಅಗತ್ಯವಾದ ಮಾತೇ ಆಗಿರುವುದು. ಪ್ರತಿಬಿಂಬದಲ್ಲಾಗಲಿ ಉಪಾಧಿಯಿಂದ ಕೂಡಿದ ಚೈತನ್ಯದಲ್ಲಾಗಲಿ ಹಮ್ಮಿನ ಭಾವ ಇರುವಿಕೆಯೇ ಜೀವನ ಲಕ್ಷಣವು. ಶ್ರೀಮಚ್ಛಂಕರ ಭಗವತ್ಪಾದರು ಮೇಲಿನ ಎರಡು ದೃಷ್ಟಾಂತಗಳನ್ನಲ್ಲದೇ ಆರೋಪಿತತ್ವವನ್ನು ಸೂಚಿಸುವಂಥ ಆಕಾಶದ ಕಪ್ಪು ಮೊದಲಾದ ಎಷ್ಟೋ ದೃಷ್ಟಾಂತಗಳನ್ನು ಸಮಯಾನುಸಾರವಾಗಿ ಉದಾಹರಿಸುವುದುಂಟು. ಇದರಿಂದ ಎರಡೂ ಬೇರೆ ಬೇರೆ ಪಕ್ಷಗಳೇ ಅಲ್ಲ. ಆದ ಕಾರಣ ಇಲ್ಲಿ ಈ ಗ್ರಂಥಕಾರನು (ಮಹಲಿಂಗರಂಗ) ಯಾವ ಪಕ್ಷವನ್ನೂ ಎತ್ತಿ ಹಿಡಿಯದೆ ಈ ಲಕ್ಷಣವನ್ನು ಹೇಳಿರುವುದು. ಅವನ ಅನುಭವದ ತಿರುಳನ್ನು ಸೂಚಿಸುವುದು.

---

**'ತತ್ತ್ವಮಸಿ' ಎಂಬುದರೊಳಗೆ ವಾ**
**ಚ್ಯಾರ್ಥದಲ್ಲಿ ವಿರೋಧವಾಗಲು,**
**ಮಿಥ್ಯವನು ಕಳೆಕಳೆದು, ಪದಗಳ ಶೋಧನೆಯ ಮಾಡಿ, ।**
**ಸತ್ಯವಹ ಲಕ್ಷ್ಯಾರ್ಥವನು ಮಿಗೆ**
**ತಥ್ಯಲಕ್ಷಣೆಯಿಂದ ಲಕ್ಷಿಸೆ,**
**ಪ್ರತ್ಯಗಾತ್ಮಪರಾತ್ಮರೈಕ್ಯವು ಸಿದ್ಧಿಸುವದೆಂದ ॥ ॥೨೨॥**

**ತಾತ್ಪರ್ಯ:** ತತ್ತ್ವಮಸಿ (ತತ್+ತ್ವಂ+ಅಸಿ) ನೀನು ಅದೇ ಆಗಿದ್ದೀಯೆ ಎಂಬುದರೊಳಗೆ ತ್ವಂ ಎಂಬುದು ಜೀವಾತ್ಮ. ತತ್ ಎಂಬುದು ಪರಮಾತ್ಮ. ಅಹಂಕಾರರೂಪಿ ಜೀವಾತ್ಮ, ಮಾಯಾ ವಿಲಾಸರೂಪಿ ಪರಮಾತ್ಮ ಎಂಬ ಹೆಸರಿನಲ್ಲಿ ಕಾಣುವ ವಾಚ್ಯಾರ್ಥದಲ್ಲಿ ವಿರೋಧವು ತೋರಿದರೆ ಅದು ನಿಜವಾದ ಅರ್ಥವಲ್ಲ. ಅಹಂಕಾರ–ಮಾಯಾ ವಿಲಾಸಗಳನ್ನು ಜೀವ–ಈಶ್ವರ ಪದಗಳ ನಿಜವಾದ ಅರ್ಥವನ್ನು ಶೋಧನೆ ಮಾಡಿ ಸುಳ್ಳಾದ ಅಹಂಕಾರ–ಮಾಯೆಗಳನ್ನು ತೆಗೆದು ಹಾಕಿದರೆ ನಿಜವಾದ ಲಕ್ಷ್ಯಾರ್ಥವನ್ನು ಸತ್ಯ ಲಕ್ಷಣೆಯಿಂದ (ತಥ್ಯದರ್ಶನ) ನೋಡಿದರೆ ನಮ್ಮೊಳಗಿರುವ ಶುದ್ಧಾತ್ಮವೂ ಶ್ರುತಿಯಲ್ಲಿ ಹೇಳಿರುವ ಪರಬ್ರಹ್ಮವೂ ಎರಡೂ ಒಂದೇ ಎಂದು ನಿರ್ಧಾರವಾಗುವುದು.

**ಶಬ್ದಾರ್ಥ :** **ತಥ್ಯಲಕ್ಷಣೆ**=ಸತ್ಯಶೋಧನೆ, ತಥ್ಯ ದರ್ಶನ; **ತತ್ತ್ವಮಸಿ**=ನೀನು ಅದೇ ಆಗಿದ್ದೀ; **ಮಿಥ್ಯವನು**=ಸುಳ್ಳಾದುದನ್ನು; (ಜೀವನ ಅಹಂಕಾರವೂ ಈಶ್ವರನ ಮಾಯಾಶಕ್ತಿಯೂ ಸುಳ್ಳಾದವುಗಳು) **ಸತ್ಯವಹ ಲಕ್ಷ್ಯಾರ್ಥವನು**=ನಿಜವಾದ ಲಕ್ಷ್ಯಾರ್ಥವನ್ನು; **ಪ್ರತ್ಯಗಾತ್ಮ**= ನಿಮ್ಮೊಳಗಿರುವ ಶುದ್ಧಾತ್ಮ; **ಪರಾತ್ಮ**=ಶ್ರುತಿಯಲ್ಲಿ ಹೇಳಿರುವ ಪರಬ್ರಹ್ಮ; **ಐಕ್ಯವು**=ಎರಡೂ ಒಂದೆಂಬುದು.

**ಟಿಪ್ಪಣಿ–೧: ವಾಚ್ಯಾರ್ಥದಲಿ**=ತ್ವಂ ನೀನು ಎಂಬ ಮಾತಿಗೆ ಜೀವನು ಎಂದರ್ಥವಾಗುವುದು. ಇದಕ್ಕೆ ವಾಚ್ಯಾರ್ಥವೆಂದು ಹೆಸರು.

**ಟಿಪ್ಪಣಿ–೨:** ಲಕ್ಷ್ಯಾರ್ಥವನು=ನೀನು ಎಂಬ ಮಾತಿನ ಲಕ್ಷ್ಯಾರ್ಥವು ಅಹಂಕಾರ ವಿರಹಿತವಾದ ಚೈತನ್ಯ. ವಾಚ್ಯಾರ್ಥ ಹೊಂದದ ಕಡೆಯಲ್ಲಿ (ವಿರೋಧವಾದಾಗ) ಲಕ್ಷ್ಯಾರ್ಥವನ್ನು ಮಾಡಬೇಕೆಂದು ನಿಯಮವುಂಟು.

**ಟಿಪ್ಪಣಿ–೩:** ತತ್ತ್ವಮಸಿ=ನೀನು ಅದೇ ಆಗಿದ್ದೀ. ಇದಕ್ಕೆ ಛಾಂದೋಗ್ಯ ಉಪನಿಷತ್ತಿನಲ್ಲಿ ಅನೇಕ ಉಲ್ಲೇಖಗಳಿವೆ. ತತ್ ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ (ಛಾಂದೋಗ್ಯ) (೬–೮–೭, ೬–೧೦–೧೩, ೬–೧೨–೩, ೬–೧೪–೩, ೬–೧೬–೩, ೬–೯–೪, ೬–೧೧–೩, ೬–೧೩–೩, ೬–೧೫–೩, ನೋಡಿ)

**ಟಿಪ್ಪಣಿ–೪:** ಸತ್ಯವಹ ಲಕ್ಷಾರ್ಥಮಿಗೆ=(ನಿಜವಾದ ಲಕ್ಷ್ಯಾರ್ಥವನ್ನು ಎಂದರೆ ಹೆಸರಿನಿಂದ ನೇರವಾಗಿ ಕಾಣುವ ವಾಚ್ಯಾರ್ಥದಲ್ಲಿ ವಿರೋಧ ತೋರಿದರೆ ಅದು ನಿಜವಾದ ಅರ್ಥವಲ್ಲ. ಅದಕ್ಕೆ ಸಂಬಂಧಪಟ್ಟ ಮತ್ತೊಂದು ಅರ್ಥವನ್ನು ತೆಗೆದುಕೊಳ್ಳಬೇಕು. ಉದಾಹರಣೆಗೆ ಕಲ್ಲೆದೆಯೆಂದರೆ ಕಲ್ಲಿನಲ್ಲಿ ಮಾಡಿದ ಎದೆ ಎಂಬುದು ವಾಚ್ಯಾರ್ಥವಷ್ಟೆ; ಈ ಅರ್ಥವು ಹೊಂದುವುದಿಲ್ಲವಾದ್ದರಿಂದ ನಿಜವಾದದ್ದಲ್ಲ; ಆದ್ದರಿಂದ ಕಲ್ಲಿನಂತೆ ಕಠಿಣವಾದ ಎಂಬ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳಬೇಕು. ಈ ವಾಚ್ಯಾರ್ಥವು ನಿಜವಾದ ಅರ್ಥವಾಗುವುದು.

**ಟಿಪ್ಪಣಿ–೫:** ಮಿಥ್ಯವನು=ಸುಳ್ಳಾದುದನ್ನು (ಜೀವನ ಅಹಂಕಾರವು ಈಶ್ವರನ ಮಾಯಾಶಕ್ತಿಯೂ ಸುಳ್ಳಾದವು)

---

**ಅಂದು ತುಂಗಾತೀರದಲಿ ವಟು**
**ವಿಂದು ಗಂಗಾತೀರದಲಿ ಯತಿ**
**ಯೆಂದದೊಬ್ಬನ ದೇಹಮಾತ್ರವ ಲಕ್ಷಿಸುವ ತೆರದಿ ।**
**ಅಂದು ಇಂದೆಂಬೆರಡು ತೆರನನು**
**ಸಂದ ಲಕ್ಷಣೆಯಿಂದ ಕಳೆದುಳಿ**
**ದೊಂದಖಂಡಾದ್ವೈತನಿಜಸುಖ ಲಕ್ಷ್ಯವೆನಿಸುವುದು ॥ ॥೨೩॥**

**ತಾತ್ಪರ್ಯ:** ಒಬ್ಬ ವ್ಯಕ್ತಿ ಆ ಕಾಲದಲ್ಲಿ ತುಂಗಾತೀರದಲ್ಲಿ ಬಾಲಕನಾಗಿ ಬ್ರಹ್ಮಚಾರಿ ಆಗಿದ್ದು ಈ ಕಾಲದಲ್ಲಿ ಆ ವಟುವೇ ವೃದ್ಧನಾಗಿ ಯತಿಯಾಗಿ ಗಂಗಾತೀರದಲ್ಲಿ ಇದ್ದಾಗ ಬೇರೆ ಬೇರೆ ವ್ಯಕ್ತಿ ಎನಿಸುತ್ತದೆ. ಕಾಲ ಭೇದ ಹಾಗೂ ಆಶ್ರಮ ಭೇದವೆಂಬ ಎರಡು ಭೇದಗಳನ್ನು ಕಡೆಗಣಿಸಿ ಆ ವ್ಯಕ್ತಿಯ ದೇಹವನ್ನು ಗಮನಿಸಿದರೆ ಒಬ್ಬನೇ ವ್ಯಕ್ತಿ ಎಂದು ತಿಳಿಯುತ್ತದೆ. ಇದರಂತೆ ಸತ್ಯಕ್ಕೆ ವಿರೋಧವಾದ ಮಿಥ್ಯಾ ಧರ್ಮವನ್ನು ತೊರೆದ ಅಖಂಡವಾದ ಬ್ರಹ್ಮಾನಂದವು ಲಕ್ಷ್ಯಾರ್ಥವಾಗುತ್ತದೆ.

**ಶಬ್ದಾರ್ಥ:** ಅಂದು ಇಂದು=ಆ ಕಾಲ ಈ ಕಾಲ (ಕಾಲ ಭೇದ); ವಟು=ಬಾಲಕ ಬ್ರಹ್ಮಚಾರಿ, (ಆಶ್ರಮ ಭೇದ); ಯತಿ=ವೃದ್ಧ ಸಂನ್ಯಾಸಿ (ಆಶ್ರಮ ಭೇದ), ಯೋಗಿಯಾಗಬಹುದು, ತರುಣನೂ ಸಂನ್ಯಾಸಿಯಾಗಿದ್ದಾನು.

**ಟಿಪ್ಪಣಿ–೧:** ಲಕ್ಷ್ಯ=ಅಲ್ಲಿ ಅಂದು ಇಂದು ಎಂಬಿವು ಕಾಲಭೇದವನ್ನು ಹೇಳುವ ಮಾತುಗಳು. ವಟು, ಯತಿ ಎಂಬಿವು ಆಶ್ರಮ ಭೇದವನ್ನು ಹೇಳುವ ಮಾತುಗಳು. ಕಾಲಗಳಿಗೂ ಆಶ್ರಮಗಳಿಗೂ

ಐಕ್ಯವು ಕೂಡುವುದಿಲ್ಲ. ಇವೆರಡನ್ನೂ ಬಿಟ್ಟು ಉಳಿದ ದೇಹ ಮಾತ್ರ ಒಂದೇ ಆಗುವುದು. ವಾಕ್ಯದಲ್ಲಿ ಬೋಧಿತವಾದ ಐಕ್ಯವು ಇದೇ. ಇದರಂತೆ ವಿರೋಧವಾದ ಮಿಥ್ಯಾ ಧರ್ಮಗಳನ್ನು ಉಳಿದ ವಸ್ತುವೇ 'ತತ್ತ್ವಮಸಿ' ವಾಕ್ಯದ ಲಕ್ಷ್ಯಾರ್ಥವು.

---

**ಪದಗಳೆರಡರ ಶೋಧನೆಯ ಮಾ**
**ಡಿದರೆ ನಿಜಮಾದುಳಿಮೆ ನಿಲುವದು;**
**ವಿದಿತಮಾಗಿಯೆ ಹಂಸ ನೀರಕ್ಷೀರಭೇದವನು ।**
**ಮುದವೊದವೆ ಬೇರ್ಪಡಿಸುವಂದದಿ**
**ಮೊದಲು ಲಕ್ಷ್ಯವ ಸಾಧಿಸುತ್ತಲಿ**
**ತುದಿಯಲೈಕ್ಯವ ಪಡೆಯೆ ನಿತ್ಯಾನಂದವಹುದೆಂದ ॥ ॥೨೪॥**

**ತಾತ್ಪರ್ಯ:** ಎಲ್ಲರಿಗೂ ತಿಳಿದಿರುವಂತೆ ಹಂಸವು ನೀರಿಗೂ ಹಾಲಿಗೂ ಇರುವ ಭೇದವನ್ನು ತಿಳಿದು ಖುಷಿಯಿಂದ ಬೇರೆ ಮಾಡುವಂತೆ ತತ್ ಮತ್ತು ತ್ವಂ ಎಂಬ ಎರಡು ಪದಗಳ ಬಗ್ಗೆ ವಿಚಾರ ಮಾಡಿದರೆ ನಿಜವಾದ ಶೇಷವೇ ಉಳಿಯುತ್ತದೆ. ಮೊದಲು ವಿರೋಧಾಂಶ ತ್ಯಜಿಸಿ ನಿಶ್ಚಿತಾಂಶ ತಿಳಿದರೆ ಕೊನೆಗೆ ಐಕ್ಯ ಹೊಂದಿದರೆ ಆಗ ನಿತ್ಯಾನಂದ ಸಿಗುತ್ತದೆ.

**ಶಬ್ದಾರ್ಥ:** ಪದಗಳೆರಡು=ತತ್ ಮತ್ತು ತ್ವಂ ಪದಗಳು; **ಉಳಿಮೆ**=ಶೇಷ; **ವಿದಿತಮಾಗಿಯೆ** =ಎಲ್ಲರಿಗು ತಿಳಿದಂತೆ; **ನೀರಕ್ಷೀರ ಭೇದವನು**=ಹಾಲು ಮತ್ತು ನೀರಿನ ವ್ಯತ್ಯಾಸವನ್ನು

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

## ದೃಗ್ದೃಶ್ಯಭೇದ (೨೫–೩೪)

**ತ್ವಂಪದದ ಲಕ್ಷ್ಯವನು ಸಾಧಿಸು;**
**ವಿಂಪಿನಿಂ ದೃಗ್ದೃಶ್ಯಭೇದ ಪ**
**ರಂಪರೆಯನೀಕ್ಷಿಸುವ ತೆರನನು ತಿಳುಪುವೆನು ನಿನಗೆ; ।**
**ಸೊಂಪಿನೀ ತನು ಕರಣ ದೃಶ್ಯವು;**
**ತಾಂ ಪೊಳೆವ ತತ್ಸಾಕ್ಷಿ ದೃಕ್ಕದು;**
**ಪೆಂಪು ಮಿಗೆ ದೃಗ್ದೃಶ್ಯಗಳ ನೀಂ ಲಕ್ಷಿಸುವದೆಂದ ॥ ॥೨೫॥**

**ತಾತ್ಪರ್ಯ:** ತ್ವಂ ಲಕ್ಷ್ಯವನ್ನು ಸಾಧಿಸುವ ಅಭಿಲಾಷೆಯಿಂದ ದೃಕ್ (ನೋಡುವವನು ಆತ್ಮ) ದೃಶ್ಯ (ಹೊರಗೆ ಕಾಣುವುದು ಅನಾತ್ಮ) ಇವುಗಳ ಭೇದವನ್ನು ತಿಳಿದುಕೊಳ್ಳುವ ರೀತಿಯನ್ನು ಶುಕನೇ ನಿನಗೆ ಹೇಳುತ್ತೇನೆ. ಹೊರಗೆ ಕಾಣುವ ಸೊಗಸಾದ ಈ ಶರೀರ ಮತ್ತು ಇಂದ್ರಿಯಗಳೇ ದೃಶ್ಯವು. ಅದರಲ್ಲಿ ಸಾಕ್ಷೀಭೂತವಾಗಿ ದೇಹೇಂದ್ರಿಯ ಗಳನ್ನು ನೋಡುತ್ತಿರುವ ಚೇತನವೇ ದೃಕ್. ಈ ದೃಕ್‌ದೃಶ್ಯಗಳಿಂದ ಆನಂದವುಕ್ಕುವಂತೆ ಜ್ಞಾನ ಸಾಧನೆ ಮಾಡುವತ್ತ ಲಕ್ಷ್ಯ ನೀಡಬೇಕು.

**ಶಬ್ದಾರ್ಥ: * ಸೊಂಪಿನ ಈತನು=ಸೊಗಸಾದ ಈ ಶರೀರ; ಕರಣ=ಇಂದ್ರಿಯಗಳು; ತತ್ ಸಾಕ್ಷಿ=ದೇಹವನ್ನೂ, ಇಂದ್ರಿಯಗಳನ್ನೂ ನೋಡುತ್ತಿರುವ ಚೇತನ; ಪೆಂಪುಮಿಗೆ=ಆನಂದ ಉಕ್ಕುವಂತೆ * ಲಕ್ಷಿಸುವುದು=ತಿಳಿಯಬೇಕು, ಗಮನಿಸಬೇಕು**

---

**ಆವುದೊಂದಿದಿರಾಗಿ ತೋರ್ಪುದ**
**ದೇ ವಿಚಾರಿಸೆ ದೃಶ್ಯವೆನಿಪುದು;**
**ಭಾವಿಸುತಲದ ಕಾಂಬುದೇ ದೃಕ್ಕೆಂದು ಪೇಳುವರು; ।**
**ಈ ವಿಧದಲೀ ದೇಹದೊಳಗೊಳ**
**ಗೋವಿ ದೃಗ್ದೃಶ್ಯಗಳ ಸಾಧಿಸಿ,**
**ತೀವಿ ಪ್ರತ್ಯಗ್ಬೋಧವನು ಸಂಪಾದಿಸುವದೆಂದ ॥ ॥೨೬॥**

**ತಾತ್ಪರ್ಯ:** ದೃಕ್ ದೃಶ್ಯಗಳನ್ನೇ ಕವಿ ಮತ್ತೊಂದು ರೀತಿಯಲ್ಲಿ ಈ ಪದ್ಯದಲ್ಲಿ ವಿವರಿಸುತ್ತಾನೆ. ಯಾವುದಾದರೂ ಒಂದು ಪದಾರ್ಥ ಪ್ರತ್ಯಕ್ಷವಾಗಿ ಕಾಣಿಸಿದಾಗ ಅದನ್ನು ಅರಿತರೆ ಅದೇ ದೃಶ್ಯವೆನಿಸುತ್ತದೆ. ಸಮ್ಯಕ್ ಜ್ಞಾನದಿಂದ ಆ ವಸ್ತುವಿನ ಸ್ವರೂಪದ ಬಗ್ಗೆ ವಿಚಾರ ಮಾಡಿದಾಗ ತಿಳಿಯುವ ಸಂಗತಿಯೇ ದೃಕ್ ಎಂದು ಹೇಳುವರು. ಈ ರೀತಿಯೊಳಗೆ ದೇಹದೊಳಗೆ ಹೊರಗೆ ಇರುವ ಅವಯವಗಳನ್ನೆಲ್ಲ ಪ್ರೀತಿಯಿಂದ ಪೂರ್ಣವಾಗಿ ದೃಕ್ ದೃಶ್ಯಗಳನ್ನು ಅರಿಯುತ್ತಾ ತನ್ನೊಳಗೆ ತುಂಬಿರುವ ಶುದ್ಧಾತ್ಮನ ಅರಿವನ್ನು ಸಂಪಾದಿಸಬೇಕು ಎಂದನು.

**ಶಬ್ದಾರ್ಥ: ಓವಿ=ಪ್ರೀತಿಯಿಂದ; ಪ್ರತ್ಯಗ್ಬೋಧ=ತನ್ನೊಳಗಿರುವ ಶುದ್ಧಾತ್ಮನ ಅರಿವು; * ಭಾವಿಸುತ=ವಿಚಾರಿಸುತ; * ಕಾಂಬುದು=ಅರಿಯುವುದು; * ತೀವಿ=ಪೂರ್ಣವಾಗಿ, ತುಂಬಿದ**

---

**ಕೇಳು ಶುಕ, ರೂಪಗಳು ದೃಶ್ಯಗ**
**ಳಾಲಿಸಲು ಕಾಂಬಕ್ಷಿ ದೃಕ್ಕು; ವಿ**
**ಶಾಲಲೋಚನ ದೃಶ್ಯವದನರಿದಿಪ್ಪ ಮನ ದೃಕ್ಕು; ।**
**ಮೇಲೆ ಕೇಳ್ಮನ ದೃಶ್ಯವಾ ಮನ**
**ದೇಳಿಗೆಯ ಭಾವಿಸುವ ಸಾಕ್ಷಿಯೆ**
**ಮೂಲದೃಕ್ಕದರಿಂದ ದೃಕ್ಕೊಳಗಿಲ್ಲ ಕೇಳೆಂದ ॥ ॥೨೭॥**

**ತಾತ್ಪರ್ಯ:** ಎಲೈ ಶುಕನೇ ಕೇಳು, ಮೂಲ ದೃಕ್ಕನ್ನು ಕಂಡು ಹಿಡಿಯುವ ಬಗೆ ಎಂತೆಂದರೆ–ರೂಪುಗಳು ಎಂದರೆ ಹೊರಗಣ ವಿಷಯಗಳೆಲ್ಲ ದೃಶ್ಯಗಳು (ಇಂದ್ರಿಯಗಳು) ಅವುಗಳನ್ನು ನೋಡುವ ಕಣ್ಣು (ಜ್ಞಾನೇಂದ್ರಿಯಗಳು) ದೃಕ್ಕು. ಇನ್ನು ಒಳಗೊಳಗೆ ಶೋಧಿಸುತ್ತಾ ಹೊರಗೆ ಕಣ್ಣು ದೃಶ್ಯವಾಗುವುದು ಮತ್ತು ಆ ಜ್ಞಾನೇಂದ್ರಿಯಗಳನ್ನೆಲ್ಲ ಅರಿಯುವಂಥ ಮನಸ್ಸು ದೃಕ್ಕಾಗುವುದು. ಇನ್ನೂ ಒಳ ಹೊಕ್ಕು ನೋಡಿದರೆ ಆ ಮನವು ದೃಶ್ಯವಾಗುವುದು. ಆ ಮನದ ಆಟಗಳನ್ನೆಲ್ಲ

ಅರಿಯುವ ಸಾಕ್ಷಿ ಚೈತನ್ಯವು ದೃಕ್ಕಾಗುವುದು. ಅದೇ ಮೂಲ ದೃಕ್ ಅದಕ್ಕೆ ಇನ್ನೊಂದು ದೃಕ್ ಇಲ್ಲ.

**ಶಬ್ದಾರ್ಥ: * ರೂಪುಗಳು**=(ಹೊರಗಣ ವಿಷಯಗಳು) ದೃಶ್ಯಗಳು; *** ಕಾಂಬಕ್ಷಿ ದೃಕ್ಕು**=ಅವುಗಳನ್ನು ಕಾಣುವ ಕಣ್ಣು ದೃಕ್ಕು; **ವಿಶಾಲಲೋಚನ ದೃಶ್ಯ**=ಇನ್ನೂ ಒಳಗೊಳಗೆ ಶೋಧಿಸುತ್ತಾ ಹೋದರೆ ಆ ಆಳನೋಟದಕಣ್ಣು ದೃಶ್ಯವೆನಿಸುತ್ತದೆ.; *** ಅದನರಿದಿಪ್ಪ ಮನದೃಕ್ಕು**=ಆ ಕಣ್ಣನ್ನು (ಜ್ಞಾನೇಂದ್ರಿಯಗಳನ್ನು ಅರಿಯುವ ಮನಸ್ಸು ದೃಕ್ಕು; *** ಮೇಲಿಕೀಳ್ ಮನ ದೃಶ್ಯವು**=ಇನ್ನೂ ಒಳಹೊಕ್ಕು ನೋಡಿದರೆ ಆ ಮನಸ್ಸು) ದೃಶ್ಯವಾಗುತ್ತದೆ; **ಆ ಮನದ ವಿಳಿಗೆಯ ಭಾವಿಸುವ ಮೂಲ ದೃಕ್**=ಇನ್ನೂ ಒಳ ಹೊಕ್ಕು ನೋಡಿದರೆ ಆ ಮನಸ್ಸಿಗೆ ಆಟಗಳನ್ನೆಲ್ಲ ಅರಿಯುವಂಥ ಸಾಕ್ಷಿ ಚೈತನ್ಯವೇ ದೃಕ್ಕಾಗುತ್ತದೆ. ಅದೇ ಮೂಲ ದೃಕ್

**ಟಿಪ್ಪಣಿ: ಮೂಲ ದೃಕ್**– ವಿಷಯಗಳು ಯಾವಾಗಲೂ ದೃಶ್ಯವೆ; ಇಂದ್ರಿಯಗಳು, ಮನಸ್ಸುಗಳು ಒಮ್ಮೆ ದೃಶ್ಯಗಳು ಆಗುವುವು; ಒಮ್ಮೆ ದೃಕ್ಕೂ ಆಗುವುವು. ಸಾಕ್ಷಿ ಚೈತನ್ಯವು ಮಾತ್ರ ಯಾವಾಗಲೂ ದೃಕ್ಕೆ. ಅದರಿಂದ ದೃಕ್ ಒಳಗಿಲ್ಲ=ಅದಕ್ಕೆ ಇನ್ನೊಂದು ದೃಕ್ಕಿಲ್ಲ ಅದೇ ಮೂಲ ದೃಕ್.

**ಮೂಲ ದೃಕ್ಕು**– ಮೂಲದೃಕ್ಕನ್ನು ಕಂಡುಹಿಡಿವ ಬಗೆಯೆಂತೆಂದರೆ: ರೂಪುಗಳೆಲ್ಲ (ಹೊರಗಣ ವಿಷಯಗಳೆಲ್ಲ) ದೃಶ್ಯಗಳು; ಅವುಗಳನ್ನು ನೋಡುವ ಕಣ್ಣು ದೃಕ್ಕು (ಪದ್ಯದಲ್ಲಿ ಕಣ್ಣನ್ನು ದೃಕ್ಕೆಂದಿದ್ದರೂ ಕಣ್ಣೊಂದನ್ನೇ ದೃಕ್ಕೆಂದು ತಿಳಿಯಬಾರದು. ಕಣ್ಣೆಂಬ ಮಾತಿನಿಂದ ಜ್ಞಾನೇಂದ್ರಿಯ ಗಳನ್ನೆಲ್ಲ ಗ್ರಹಿಸಬೇಕು. ವಿಷಯಗಳನ್ನೆಲ್ಲ ಒಂದಲ್ಲೊಂದು ರೀತಿಯಿಂದ ಅರಿಯುವಂಥ ಚರ್ಮ, ಕಣ್ಣು, ಕಿವಿ, ನಾಲಿಗೆ, ಮೂಗು ಈ ಐದು ಜ್ಞಾನೇಂದ್ರಿಯಗಳನ್ನೂ ದೃಕ್ಕುಗಳೆಂದು ತಿಳಿಯಬೇಕು. ಇನ್ನೂ ಒಳಗೊಳಗೆ ಶೋಧಿಸುತ್ತ ಹೋದರೆ ಕಣ್ಣು ದೃಶ್ಯವಾಗುವುದು. (ಜ್ಞಾನೇಂದ್ರಿಯಗಳೆಲ್ಲ ದೃಶ್ಯವಾಗುವುದೆಂದರ್ಥ); ಮತ್ತು ಆ ಜ್ಞಾನೇಂದ್ರಿಯಗಳನ್ನೆಲ್ಲ ಅರಿಯುವಂಥ ಮನಸ್ಸು ದೃಕ್ಕಾಗುವುದು; ಇನ್ನೂ ಒಳಹೊಕ್ಕು ನೋಡಿದರೆ ಆ ಮನವು ದೃಶ್ಯವಾಗುವುದು; ಆ ಮನಸ್ಸಿನ ಆಟಗಳನ್ನೆಲ್ಲ ಅರಿಯುವಂಥ ಸಾಕ್ಷಿಚೈತನ್ಯವು ದೃಕ್ಕಾಗುವುದು. ಅದೇ ಮೂಲದೃಕ್ಕು. ಅದಕ್ಕೆ ಇನ್ನೊಂದು ದೃಕ್ಕಿಲ್ಲ. ಇದರಿಂದ ಒಂದು ಸಂಗತಿಯನ್ನು ಗ್ರಹಿಸಬಹುದು. ಅದೇನೆಂದರೆ: ಒಮ್ಮೆ ದೃಶ್ಯಗಳೂ ಆಗುವುವು; ಒಮ್ಮೆ ದೃಕ್ಕೂ ಆಗುವವು; ಸಾಕ್ಷಿಚೈತನ್ಯವು ಮಾತ್ರ ಯಾವಾಗಲೂ ದೃಕ್ಕೇ.

---

**ನೀಲ, ಪೀತ, ಶ್ವೇತ, ರಕ್ತ,**
**ಸ್ಥೂಲ, ಸೂಕ್ಷ್ಮ, ಕೃಶೋಚ್ಚ ನೀಚ ವಿ**
**ಶಾಲವಹ ರೂಪುಗಳು ಬಹುವಿಧವಾದ ದೃಶ್ಯಗಳು; ।**
**ಆಲಿಸಿದೊಡದರಂದವನು ಸ**
**ಮ್ಮೇಳದಿಂದಲಿ ಕಾಂಬ ನೇತ್ರವ**
**ಹೇಳುವರು ದೃಕ್ಕೆಂದು ಶುಕಯೋಗೀಂದ್ರ ಕೇಳೆಂದ ॥ ॥೨೮॥**

**ತಾತ್ಪರ್ಯ:** ಕರಿದು, ಹಳದಿ, ಬಿಳಿದು, ಕೆಂಪು, ದಪ್ಪ, ಸಣ್ಣ, ತೆಳು, ಶ್ರೇಷ್ಠ, ಕನಿಷ್ಠ, ವಿಸ್ತಾರ ಆಗಿರುವ ಹತ್ತಾರು ರೂಪುಗಳು (ಆಕಾರಗಳೆಲ್ಲ) ಬಗೆ ಬಗೆಯಾದ ದೃಶ್ಯ ಗಳೆನಿಸಿಕೊಳ್ಳುತ್ತವೆ. ವಿಚಾರಮಾಡಿ ನೋಡಿದರೆ ಬೇರೆ ಬೇರೆಯಾಗಿ ಅವೆಲ್ಲದರ ಸ್ವರೂಪವನ್ನು ಬಗೆ ಬಗೆಯಾದ ದೃಶ್ಯಗಳೆಂತಲೂ ಅವನ್ನೆಲ್ಲಾ ಪ್ರತ್ಯಕ್ಷವಾಗಿ ಕಾಣುವ

ಕಣ್ಣುಗಳನ್ನು ದೃಕ್ ಎಂದೂ ಹೇಳುತ್ತಾರೆ. ಶುಕಯೋಗೀಂದ್ರನೇ ಈ ವಿಚಾರವನ್ನು ತಿಳಿದಿಕೊ ಎಂದು ವ್ಯಾಸರು ಹೇಳಿದರು.

**ಶಬ್ದಾರ್ಥ:** * ನೀಲ=ಕರಿದು; * ಪೀತ=ಹಳದಿ; * ಶ್ವೇತ=ಬಿಳಿ; * ರಕ್ತ=ಕೆಂಪು; * ಸ್ಥೂಲ=ದಪ್ಪ; * ಸೂಕ್ಷ್ಮ=ಸಣ್ಣದು; * ಕೃಶ=ತೆಳು; * ಉಚ್ಚ=ಶ್ರೇಷ್ಠ; * ನೀಚ=ಕನಿಷ್ಠ ಸಮ್ಮೇಳದಿಂದಲಿ=ಬೇರೆ ಬೇರೆಯಾಗಿ ಇವೆಲ್ಲವನ್ನೂ; ಕಾಂಬ=ಕಾಣುವ; ನೇತ್ರ=ಕಣ್ಣು (ಜ್ಞಾನೇಂದ್ರಿಯ)

---

**ಆಂಧ್ಯ, ಮಾಂದ್ಯ, ಪಟುತ್ವಭೇದದ**
**ಲೊಂದಿ ತೋರುವ ಲೋಚನವು ಹಲ**
**ವಂದವಾಗಿಯೆ ದೃಶ್ಯವದನರಿದಿಪ್ಪ ಮನ ದೃಕ್ಕು; ।**
**ಕುಂದುಹೆಚ್ಚಿನ ಹರ್ಷರೋಷಗ**
**ಳಿಂದ ಕಾಮಾದಿಗಳ ಕುರುಹಿನ**
**ಚಂದವಹ ಮನ ದೃಶ್ಯ; ದೃಕ್ಕದನರಿವ ಬರಿಯರಿವು ॥ ॥೨೯॥**

**ತಾತ್ಪರ್ಯ:** ಕುರುಡು, ಚುರುಕಾಗಿಲ್ಲದಿರುವುದು, ಸಾಮರ್ಥ್ಯ, ಮುಂತಾದ ಭೇದಗಳನ್ನು ತೋರುವ ಕಣ್ಣು ಹಲವು ರೀತಿಯ ದೃಶ್ಯಕ್ಕೆ ಪ್ರತೀಕವಾಗಿದೆ. ಆ ದೃಶ್ಯವನ್ನು ತಿಳಿಯುವ ಮನಸ್ಸು ದೃಕ್ ಎನಿಸಿಕೊಳ್ಳುತ್ತದೆ. ಕುಗ್ಗುವುದು, ಹಿಗ್ಗುವುದು, ಆನಂದ, ರೋಷಗಳಿಂದ, ಕಾಮ ಕ್ರೋಧಾದಿಗಳ ಚಿಹ್ನೆಗಳಿಂದ (ಕಂಗೊಳಿಸುವ) ಕೂಡಿದ ಮನಸ್ಸು ದೃಶ್ಯವಾಗುತ್ತದೆ. ಆಗ ಅದನ್ನು ತಿಳಿಯುವ ಶುದ್ಧ ಜ್ಞಾನವು (ಚೈತನ್ಯ ಮಾತ್ರವಾದ ಸಾಕ್ಷಿ) ದೃಕ್ ಎನಿಸಿಕೊಳ್ಳುತ್ತದೆ.

**ಶಬ್ದಾರ್ಥ:** ಆಂಧ್ಯ=ಕುರುಡು; ಮಾಂದ್ಯ=ಚುರುಕಾಗಿಲ್ಲದಿರುವುದು; ಪಟುತ್ವ=ಸಾಮರ್ಥ್ಯ; ಒಂದಿ=ಕೂಡಿ; ಬರಿಯರಿವು=ಚೈತನ್ಯ ಮಾತ್ರವಾದ ಸಾಕ್ಷಿ; ಕಾಮಾದಿ=ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಾದಿಗಳು; ಕುರುಹು=ಚಿಹ್ನೆ; ಚಂದವಹ=ಕಂಗೊಳಿಸುವ

---

**ಬುದ್ಧಿಮನವೆಂಬೆರಡು ರೂಪನು**
**ಹೊದ್ದಿ ತೋರ್ಪುದು ಕರಣವೊಂದೇ;**
**ಬುದ್ಧಿ ನಿರ್ಮಲವಹುದು, ಮಲಿನಾಕಾರವಾ ಮನವು; ।**
**ಬುದ್ಧಿಯರಿವುದು, ಮರೆವುದಾಮನ;**
**ನಿರ್ಧರಿಸಲಾ ಮರವೆಯರಿವೆಯ**
**ಬದ್ಧರೂಪವನರಿವರಿವೆ ದೃಕ್ಕೆನಿಸಿ ತೋರುವದು ॥ ॥೩೦॥**

**ತಾತ್ಪರ್ಯ:** ಕರಣವೆಂದರೆ ಪ್ರಕೃತಿರೂಪವಾದ ಇಂದ್ರಿಯವು ಅರ್ಥಾತ್ ಅಂತಃಕರಣವು. ಇದು ಬುದ್ಧಿ ಮತ್ತು ಮನಸ್ಸು ಎಂಬ ಎರಡು ರೂಪಗಳನ್ನು ಹೊಂದಿ ಕಾಣಿಸಿ ಕೊಳ್ಳುತ್ತದೆ. ನಿಶ್ಚಯಿಸುವ ಸ್ವಭಾವವಾದ ಬುದ್ಧಿಯು ಶುದ್ಧವಾಗಿರುವುದು; ಸಂಶಯ ಸ್ವಭಾವದ ಮನಸ್ಸು ಅಶುದ್ಧವಾಗಿರುವುದು. ಬುದ್ಧಿ ಯಾವುದನ್ನಾದರೂ ಗ್ರಹಿಸುತ್ತದೆ,

ಮನಸ್ಸು ತಿಳಿದುದನ್ನು ಮರೆತು ಬಿಡುತ್ತದೆ. ವಿಷಯವನ್ನು ಅರಿತೆನೆಂಬ ಬುದ್ಧಿ ಅಥವಾ ವಿಷಯವನ್ನು ಮರೆತೆನೆಂಬ ಮನಸ್ಸಿನ ವಿಚಾರವನ್ನು ತಿಳಿದುಕೊಳ್ಳುವ ಜ್ಞಾನವೇ ದೃಕ್ ಎನ್ನಿಸಿಕೊಳ್ಳುತ್ತದೆ. ಇದನ್ನು ಖಚಿತವಾಗಿ ತಿಳಿ.

**ಶಬ್ದಾರ್ಥ:** ಬುದ್ಧಿ=ನಿಶ್ಚಯಿಸುವ ಸ್ವಭಾವದ್ದು; ಮನ=ಸಂಶಯ ಸ್ವಭಾವದ್ದು (ಈ ಅರ್ಥವನ್ನು ಕವಿಯು ಮುಂದೆ ೪೮ನೇ ಪದ್ಯದಲ್ಲಿ ತಾನೇ ಹೇಳುವನು); ಕರಣ=ಅಂತಃಕರಣ; ಬದ್ಧರೂಪವ =ವಿಷಯವನ್ನು ಅರಿದೆನೆಂದು ಅಥವಾ ವಿಷಯವನ್ನು ಮರೆದೆನೆಂದು ವಿಚಾರಕ್ಕೆ ಕಟ್ಟುಬಿದ್ದಿರುವಂಥ.

---

**ದೇಹದಿಂದಿಂದ್ರಿಯಗಳಧಿಕವ**
**ದೂಹಿಸಲ್ಕಿಂದ್ರಿಯಗಳೆನಿಪ ಸ**
**ಮೂಹದಿಂ ಮನ ಮೇಲು; ಮನದಿಂದುತ್ತಮವು ಬುದ್ಧಿ; ।**
**ಓಹೊ! ಬುದ್ಧಿಯನರಿವ ಸಾಕ್ಷಿಯೆ**
**ಸೋಽಹಮೆನಿಸುವ ಪ್ರತ್ಯಗಾತ್ಮನು,**
**ಮೋಹರಹಿತನು; ತಿಳಿಯಲುತ್ತಮನಾತನಿಂದಿಲ್ಲ ॥** ॥೩೧॥

**ತಾತ್ಪರ್ಯ:** ಶರೀರಕ್ಕಿಂತಲೂ ಪಂಚೇದ್ರಿಯಗಳು ಹೆಚ್ಚು, ಯೋಚಿಸಿದರೆ ಪಂಚೇಂದ್ರಿಯ ಗಳಿಗಿಂತ ಮನಸ್ಸು ಶ್ರೇಷ್ಠ; ಮನಸ್ಸಿಗಿಂತ ಬುದ್ಧಿ ಉತ್ಕೃಷ್ಟವಾದುದು. ಅಂತಹ ಬುದ್ಧಿಯನ್ನು ತಿಳಿದುಕೊಳ್ಳಬಲ್ಲ ಸಾಕ್ಷೀರೂಪನಾದ ಸೋಹಂ ಎಂದು ಕರೆಸಿಕೊಳ್ಳುವ ಪ್ರತ್ಯಗಾತ್ಮನೇ (ಎಲ್ಲರಿಗಿಂತ ಒಳಗಿರುವ ಮೋಹರಹಿತನಾದ ಆತ್ಮನೇ) ಎಲ್ಲರಿಗಿಂತ ಉತ್ತಮನಾದವನು.

**ಶಬ್ದಾರ್ಥ:** ಭೂತಪಂಚಕ=ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಅವ್ಯಕ್ತ=ಜಗತ್ತಿನ ಮೂಲ ಬೀಜವಾದ ಪ್ರಕೃತಿ, ದಶವಿಧಜಾತವಾದಿಂದ್ರಿಯನಿಕರ=ಕರ್ಮೇಂದ್ರಿಯಗಳೈದು (ವಾಕ್, ಪಾಣಿ, ಪಾದಪಾಯು ಉಪಸ್ಥ) ಮತ್ತು ಬುದ್ಧೀಂದ್ರಿಯಗಳು ಐದು (ಹಿಂದೆ ೨೭ನೇ ಪದ್ಯದಲ್ಲಿದೆ), ಪ್ರಾಣಾದಿವಾಯುಗಳು=ಪ್ರಾಣ, ಅಪಾನ, ವ್ಯಾನ, ಸಮಾನ, ಧೃತಿ=ದೇಹೇಂದ್ರಿಯಗಳನ್ನು ಎತ್ತಿಹಿಡಿದಿರುವುದು, ಸಂಘಾತ=ದೇಹೇಂದ್ರಿಯಗಳ ಗುಂಪು

**ಟಿಪ್ಪಣಿ–೧:** ದೇಹದಿಂದ ಇಂದ್ರಿಯಗಳು ಅಧಿಕವದು, ಊಹಿಸಲ್ಕೆ ಇಂದ್ರಿಯಗಳೆನಿಪ ಸಮೂಹದಿಂ ಮನಮೇಲು, ಮನದಿಂದ ಉತ್ತಮವು ಬುದ್ಧಿ, ಓಹೋ! ಬುದ್ಧಿಯನರಿವ ಸಾಕ್ಷಿಯೇ ಸೋಽಹಮೆನಿಸುವ ಪ್ರತ್ಯಗಾತ್ಮನು=ಈ ಪದ್ಯ ಭಾಗವು–

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾಬುದ್ಧಿರ್ಯೋರ್ಬುದ್ಧೇಃ ಪರತಸ್ತುಸಃ ॥**

ಎಂಬ ಗೀತಾ ಭಾಗದ ಅಭಿಪ್ರಾಯದ (ಗೀತೆ ೩–೪೨) ಅನುವಾದ : [ಇಂದ್ರಿಯಗಳು ಹೆಚ್ಚಿನ ಯೋಗ್ಯತೆಯವುಗಳೆನ್ನುವರು. ಇಂದ್ರಿಯಗಳಿಗಿಂತ ಮನಸ್ಸು ಹೆಚ್ಚಿನದು; ಮನಸ್ಸಿಗಿಂತಲೂ ಬುದ್ಧಿ ಹೆಚ್ಚಿನದು, ಒಳಗಿರುವ ಆತ್ಮನು ಬುದ್ಧಿಗಿಂತ ಹೆಚ್ಚಿನವನು.] (ಗೀತೆಯ ಕೈಗನ್ನಡಿ–ಹೊ. ಚಿದಂಬರಯ್ಯ; ಪುಟ–೯೭)]

**ಟಿಪ್ಪಣಿ-೨:** ಉತ್ತಮನಾತನಿಂದಿಲ್ಲ=ಇದು "ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾ ಸಾ ಪರಾಗತಿಃ" ಎಂಬ ಶ್ರುತಿಯ ಅಭಿಪ್ರಾಯ.

---

**ಭೂತಪಂಚಕ, ಬುದ್ಧ್ಯಹಂಕೃತಿ,**
**ಸಾತಿಶಯದವ್ಯಕ್ತ, ದಶವಿಧ**
**ಜಾತವಾದಿಂದ್ರಿಯನಿಕರ, ಪ್ರಾಣಾದಿವಾಯುಗಳು, ।**
**ಚೇತನಾಧೃತಿದುಃಖಸುಖಸಂ**
**ಘಾತವಿಚ್ಛಾದ್ವೇಷವೆಂಬಿವ**
**ನಾತುಮಜ್ಞರು ಕ್ಷೇತ್ರವೆಂದಿದ ಹೇಳುತಿಹರೆಂದ ॥ ॥೩೨॥**

**ತಾತ್ಪರ್ಯ:** ಭೂಮಿ, ಜಲ, ಅಗ್ನಿ, ವಾಯು, ಆಕಾಶವೆಂಬ ಪಂಚಭೂತಗಳನ್ನು, ಮನೋಬುದ್ಧಿ, ಅಹಂಕಾರ ಭೇದಗಳನ್ನೂ, ವಿಶೇಷವೆನಿಸಿದ ಜಗತ್ತಿನ ಮೂಲ ಬೀಜವಾದ ಪ್ರಕೃತಿಯನ್ನೂ, ವಾಕ್, ಪಾಣಿ, ಪಾದ, ವಾಯು, ಉಪಸ್ಥೆಗಳೆಂಬ ಐದು ಕರ್ಮೇಂದ್ರಿಯಗಳನ್ನೂ ಕಣ್ಣು, ಕಿವಿ, ಚರ್ಮ, ನಾಲಗೆ, ಮೂಗು ಎಂಬ ಐದು ಜ್ಞಾನೇಂದ್ರಿಯಗಳನ್ನು ಒಟ್ಟು ಹತ್ತು ಇಂದ್ರಿಯಗಳ ಗುಂಪನ್ನೂ, ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನಗಳೆಂಬ ಪಂಚವಾಯುಗಳನ್ನೂ, ಚೇತನಾ, ಧೃತಿ, ದುಃಖ, ಸುಖ, ಇಚ್ಛಾ, ದ್ವೇಷ, ಇವುಗಳನ್ನು ಸೇರಿಸಿ ದೇಹವನ್ನು ಆತ್ಮ ಜ್ಞಾನಿಗಳು ಕ್ಷೇತ್ರವೆಂದು ಕರೆಯುತ್ತಿದ್ದಾರೆ.

**ಟಿಪ್ಪಣಿ:** ಕ್ಷೇತ್ರ=ಈ ಪದ್ಯವು ಭಗವದ್ಗೀತೆಯ ೧೩ನೇ ಅಧ್ಯಾಯದ ೫ ಮತ್ತು ೬ನೇ ಶ್ಲೋಕಗಳ ತಾತ್ಪರ್ಯವಾಗಿದೆ. ಕ್ಷೇತ್ರ ಎಂದರೇನು? ಎಂಬುದರ ವಿವರ ಇಲ್ಲಿದೆ. ಗೀತಾರ್ಥ ಚಂದ್ರಿಕೆ ಗ್ರಂಥದಲ್ಲಿ ಚಿದಂಬರಯ್ಯನವರು ಗೀತೆಯ ಶ್ಲೋಕವನ್ನು ಹೀಗೆ ವಿವರಿಸಿದ್ದಾರೆ:

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ ॥(೧೩-೫)ಗೀತೆ**
**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥(೧೩-೬) ಗೀತೆ**

**ಶಬ್ದಾರ್ಥ:** ಮಹಾಭೂತಾನಿ=ಬಿಡಿ ಬಿಡಿಯಾದ ಎಲ್ಲ ವಸ್ತುಗಳಲ್ಲಿಯೂ ವ್ಯಾಪಿಸಿಕೊಂಡಿರುವ ನೆಲ, ಜಲ, ಅಗ್ನಿ, ವಾಯು, ಆಕಾಶ-ಈ ಸೂಕ್ಷ್ಮ ಭೂತಗಳು; ಅಹಂಕಾರಃ=ಆ ಮಹಾ ಭೂತಗಳಿಗೂ ಕಾರಣವಾಗಿ ಶರೀರದಲ್ಲಿ ನಾನು ನಾನೆಂದು ತೋರಿಸಿಕೊಳ್ಳುವಂಥ ಅಹಂಕಾರ ತತ್ತ್ವವು, ಬುದ್ಧಿಃ=ಅಹಂಕಾರಕ್ಕೂ ಕಾರಣವಾದ ಮಹತ್ತತ್ತ್ವವು; ಅವ್ಯಕ್ತಮೇವಚ=ಬುದ್ಧಿಗೆ ಕಾರಣವಾದ ಮಾಯಾ ಶಕ್ತಿ; ದಶೇಂದ್ರಿಯಾಣಿ=ಹತ್ತು ಇಂದ್ರಿಯಗಳು (ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಗಳು); ಏಕಂಚ=ಅಂತಃಕರಣ ಒಂದು; ಇಂದ್ರಿಯಗೋಚರಾಃ=ಐದು ಜ್ಞಾನೇಂದ್ರಿಯಗಳಿಗೆ ಸಂಬಂಧಿಸಿದಂಥ; ಪಂಚಚ=ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳು; ಇಚ್ಛಾ=ಹಿಂದೆ ಸುಖವಾಗಿ ಕಂಡದ್ದು ಮತ್ತು ಸಿಗಲೆಂಬ ಬಯಕೆ; ದ್ವೇಷಃ=ಹಿಂದೆ ದುಃಖವಾಗಿ ಕಂಡದ್ದು ಈಗ ತೊಲಗಲೆಂಬ ಹಗೆತನ; ಸುಖಂ=ಮನಸ್ಸಿನ ಪ್ರಸನ್ನತೆಗೆ ಸಾಧನವಾದ

ಅನುಕೂಲ; ದುಃಖಂ=ಮನಸ್ಸಿನ ತಳಮಳಕ್ಕೆ ಸಾಧನವಾದ ಅನನುಕೂಲಗಳು; ಸಂಘಾತ =ಇವೆಲ್ಲವನ್ನು ಒಳಗೊಂಡ ದೇಹ, ಇಂದ್ರಿಯ ಮೊದಲಾದವುಗಳ ಗುಂಪು; ಚೇತನಾ=ಕಾದ ಕಬ್ಬಿಣದಲ್ಲಿ ತೋರುವ ಅಗ್ನಿಯಂತೆ ಆತ್ಮ ಚೈತನ್ಯದ ನೆರವನ್ನು ಪಡೆದು ದೇಹೇಂದ್ರಿಯಗಳಲ್ಲಿ ಕಾಣಿಸಿಕೊಳ್ಳುವ ಮನಸ್ಸಿನ ವೃತ್ತಿ; ಧೃತಿಃ=ದೇಹೇಂದ್ರಿಯಾದಿಗಳನ್ನು ಹಿಡಿದು ನಿಲ್ಲಿಸುವ ಪ್ರಯತ್ನ; ಏತತ್ ಕ್ಷೇತ್ರಂ=ಇದು ಕ್ಷೇತ್ರವೆಂದು; ಸಮಾಸೇನ=ಸಂಗ್ರಹವಾಗಿ; ಸವಿಕಾರಂ=ಹುಟ್ಟು, ಸಾವು ಮೊದಲಾದ ವಿಕಾರಗಳುಳ್ಳ ಎಲ್ಲ ವಸ್ತುಗಳಿಂದ ಕೂಡಿ; ಉದಾಹೃತಂ=ಹೇಳಲ್ಪಟ್ಟಿತು. ಇವೆಲ್ಲವೂ ಕ್ಷೇತ್ರಜ್ಞನ ಬೆಳಕಿನಿಂದ ಬೆಳಗುವ ಕಾರಣ ಜಡವಾದ ಇವು ಕ್ಷೇತ್ರವೆನಿಸುವುದು.

---

**ಈ ವಿಧದ ಕ್ಷೇತ್ರವನು ಬಲ್ಲವ**
**ನಾವನವ ಕ್ಷೇತ್ರಜ್ಞನೆನಿಸುವ;**
**ದೇವತಿರ್ಯಙ್ಮರ್ತ್ಯ ಸಚರಾಚರಜಗತ್ತಿನಲಿ ।**
**ಜೀವಭೂತನು; ಪ್ರತ್ಯಗೆನಿಸುವ;**
**ಕೇವಲ ಚಿದಾನಂದಮಯ ಸ**
**ದ್ಭಾವ; ಸಹಜಾದ್ವೈತ; ನಿಜವದು ಮಗನೆ ಕೇಳೆಂದ ॥ ॥೩೩॥**

**ತಾತ್ಪರ್ಯ:** (ಹಿಂದಿನ ಪದ್ಯದಲ್ಲಿ ವಿವರಿಸಿದ) ಕ್ಷೇತ್ರದ ಸ್ವರೂಪವನ್ನು ತಿಳಿದವನೇ ಕ್ಷೇತ್ರಜ್ಞನು ಎನ್ನಿಸುತ್ತಾನೆ. ದೇವತೆಗಳು, ಪಶುಪಕ್ಷಿ ಆದಿಜೀವಿಗಳು, ಮಾನವರು ಮೊದಲಾದ ಜೀವಜಡಗಳಿಗೆ ಪ್ರಾಣಾಧಾರ ಆಗಿದ್ದಾನೆ. ಅವನೇ (ಅಂತರಾತ್ಮ) ಎಲ್ಲ ಒಳಗಿರುವವನಾಗಿದ್ದಾನೆ. ಶುದ್ಧ ಚಿದಾನಂದ ರೂಪಿಯೂ, ಸತ್ಯ ಸ್ವರೂಪಿಯೂ ಆಗಿ ಸಹಜವಾದ ಅದ್ವೈತ ತತ್ತ್ವರೂಪಿ (ಪರಬ್ರಹ್ಮ)ಯೂ ಆಗಿದ್ದಾನೆ ಎಂದು ತಿಳಿ ಎಂಬುದಾಗಿ ಶುಕನಿಗೆ ವ್ಯಾಸರು ಹೇಳಿದ್ದಾರೆ.

**ಶಬ್ದಾರ್ಥ:** * ದೇವತಿರ್ಯಙ್ಮರ್ತ್ಯ=ದೇವತೆಗಳು ಪ್ರಾಣಿಗಳು ಮಾನವರು; * ಸಚರಾಚರ=ಜೀವ-ಜಡ; * ಜೀವಭೂತ=ಪ್ರಾಣಾಧಾರ; ಪ್ರತ್ಯಗೆನಿಸುವ=ಒಳಗಿರುವವನು; ಸದ್ಭಾವ=ಸತ್ಯಸ್ವರೂಪಿ

**ಟಿಪ್ಪಣಿ:** 'ಕ್ಷೇತ್ರವನು ಬಲ್ಲವನಾವನವ ಕ್ಷೇತ್ರಜ್ಞನೆನಿಸುವ': ಈ ಅಭಿಪ್ರಾಯವು ಗೀತೆಯ ೧೩-೧ರಲ್ಲಿ ಹೇಳಿರುವುದೇ ಆಗಿದೆ.

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ (ಗೀತೆ ೧೩-೧)**

[ಅರ್ಜುನ, ಈ ಶರೀರವು ಹೊಲವೆನಿಸುವುದು; ಇದನ್ನು ಯಾವನು (ತನ್ನ ಹೊರಗಿನದಾಗಿ) ತಿಳಿಯುತ್ತಿರುವನೋ ಅವನನ್ನು ಹೊಲದ ತಿಳಿವುಗಾರನೆಂದು ತಿಳಿದವರು ಹೇಳುವರು] (ಅನುವಾದ: ಗೀತೆಯ ಕೈಗನ್ನಡಿ-ಹೊಸಕೆರೆ ಚಿದಂಬರಯ್ಯ-ಪುಟ-೨೫೮)

---

**ತನುವಿನೊಳಗಸುವಸುವಿನೊಳಗಿಹ**
**ಮನ, ಮನದೊಳಿಹ ಕರ್ತ, ಕರ್ತನ**
**ನೆನಹಿನೊಳಗಿಹ ಭೋಕ್ತ್ಯ, ಭೋಕ್ತೃವಿನೊಳಗೆ ನಿಜಸಾಕ್ಷಿ ।**

**ಎನಿಸಿಕೊಂಡಿಹ ಪ್ರತ್ಯಗಾತ್ಮನ**
**ಘನವಿವೇಕದಿ ತಿಳಿದನಾತ್ಮಗ**
**ಳನಿತುವನು ಬೇರ್ಪಡಿಸೆ ಚಿದ್ರೂಪಾಗಿ ತೋರುವನು ॥ ॥೩೪॥**

**ತಾತ್ಪರ್ಯ:** ಈ ದೇಹದೊಳಗೆ ಪಂಚಪ್ರಾಣ ಪ್ರತಿಷ್ಠಿತವಾಗಿರುತ್ತದೆ. ಪಂಚಪ್ರಾಣದಲ್ಲಿ ಮನಸ್ಸು ಇರುವುದು. ಮನಸ್ಸಿನಲ್ಲಿ ಕರ್ತೃವಿರುವನು; ಆ ಕರ್ತೃವಿನ ಪ್ರಜ್ಞೆಯಲ್ಲಿ ಭೋಕ್ತೃವಿರುವನು; ಭೋಕ್ತೃವಿನಲ್ಲಿ ನಿಜಸಾಕ್ಷಿ ಎನ್ನಿಸಿಕೊಂಡಿರುವ ಪ್ರತ್ಯಗಾತ್ಮನಿರುತ್ತಾನೆ. ಅವನನ್ನು ಘನವಾದ ವಿವೇಚನೆಯಿಂದ ಅರಿತವನು ಆತ್ಮಗಳನ್ನೆಲ್ಲ ಪ್ರತ್ಯೇಕಿಸಿದರೆ ಜ್ಞಾನರೂಪಿಯಾದ ಶುದ್ಧ ಚೈತನ್ಯನು ತೋರುವನು. ಶುದ್ಧಚೈತನ್ಯ ಹೊರತು ಉಳಿದವೆಲ್ಲ ಜಡವೂ ಮಿಥ್ಯವೂ ಆಗಿದೆ.

**ಶಬ್ದಾರ್ಥ:** ತನುವಿನೊಳಗೆ+ಅಸು, ಅಸುನಿನೊಳಗೆ+ಇಹ ಮನ=ದೇಹದಲ್ಲಿ ಪ್ರಾಣ; ಪ್ರಾಣದಲ್ಲಿರುವುದು ಮನಸ್ಸು; ಮನದೊಳಿಹ ಕರ್ತ=ಮನಸ್ಸಿನೊಡನೆ ಕೂಡಿರುವ ಚೈತನ್ಯಕ್ಕೆ ಕರ್ತನೆಂದು ಹೆಸರು; * ಭೋಕ್ತೃ=ಶರೀರ, ಇಂದ್ರಿಯಗಳು, ಮನಸ್ಸು ಇವುಗಳಿಂದ ವಿಷಯಗಳನ್ನು ಅನುಭವಿಸುವ ಆತ್ಮ. ಅನುಭವಿಸುವ ಸ್ವಭಾವದ ಜೀವ; * ಪ್ರತ್ಯಗಾತ್ಮ=ಅಂತರಾತ್ಮ, ಶರೀರದ ಸ್ವರೂಪ; ಚಿದ್ರೂಪ=ಜ್ಞಾನರೂಪ; ಅನಿತುವನು=ಅವನ್ನೆಲ್ಲಾ;

---

## ಆತ್ಮನು ಅನ್ನಮಯಾದಿ ಕೋಶಗಳಿಗಿಂತ ಬೇರೆ (೩೫-೫೨)

**ಸಾವಯವವೀ ತನುವು, ಜಡದೃ**
**ಶ್ಯಾವಲಂಬನವನ್ನಮಯ; ಷ**
**ಡ್ಭಾವ ವಿಕೃತಿಯನುಳ್ಳುದಿದು; ಬಾಲ್ಯಾದ್ಯವಸ್ಥೆಗಳ ।**
**ಓವಿಕೊಂಡಿಹುದಹಹ! ಶಕಟದ**
**ಭಾವದಲಿ ಪ್ರೇರಕನಧೀನವು;**
**ಭಾವಿಸಲು ಭೌತಿಕವಪಾತ್ರವು ಮಗನೆ ಕೇಳೆಂದ ॥ ॥೩೫॥**

**ತಾತ್ಪರ್ಯ:** ಈ ಶರೀರವು ಕೈಕಾಲು ಮೊದಲಾದ ಅವಯವಗಳಿಂದ ಕೂಡಿದ್ದಾಗಿದೆ. ಇದು ಜಡತ್ವಕ್ಕೂ ದೃಶ್ಯತ್ವಕ್ಕೂ ಆಶ್ರಯದಾತವಾಗಿರುವುದು. ಈ ಶರೀರವು ವಿಶೇಷವಾಗಿ ಅನ್ನದಿಂದ ಬೆಳೆದ ಸ್ಥೂಲ ದೇಹವಾಗಿದೆ. ಆರು ಬಗೆಯ ವಿಕಾರಗಳನ್ನು ಈ ಶರೀರ ಹೊಂದಿದೆ. ೧) ಅಸ್ತಿ (ಇರುತ್ತದೆ) ಎಂಬ ಅವಸ್ಥೆಯ ಬಾಲ್ಯ, ೨) ಜಾಯತೇ (ಹುಟ್ಟುತ್ತದೆ) ಎಂಬವಸ್ಥೆಯ ಯೌವನ, ೩) ವರ್ಧತೇ (ಬೆಳೆಯುತ್ತದೆ) ಎಂಬ ಕೌಮಾರ; ೪) ವಿದರಿಣಮತೇ (ಮಾರ್ಪಡುತ್ತದೆ) ಎಂಬ ವಾರ್ಧಕ್ಯ; ೫) ಅಪಕ್ಷೀಯತೇ (ಸವೆಯುಯತ್ತದೆ) ಎಂಬ ವೃದ್ಧತ್ವ; ೬) ವಿನಶ್ಯತಿ (ಮರಣ ಹೊಂದುತ್ತದೆ) ಎಂಬ ಸಾವು ಈ ರೀತಿ ಆರು ಅವಸ್ಥೆಗಳನ್ನು ದೇಹ ಅವಲಂಬಿಸಿದೆ. ಹೇರನ್ನು ತುಂಬಿದ ಗಾಡಿಯು ಅದನ್ನು ನಡೆಸುವ ಸಾರಥಿಯ (ಚಾಲಕನ) ಸ್ವಾಧೀನ ದಲ್ಲಿರುವಂತೆ ಈ ಶರೀರವು ಪ್ರೇರಕನ ಅಧೀನದಲ್ಲಿರುವುದು. ವಿಚಾರಮಾಡಿ ನೋಡಿದರೆ ಪಾಂಚಭೌತಿಕವಾದ ಈ ಶರೀರವು ಆತ್ಮನೆಂಬ ಹೆಸರಿಗೆ ಯೋಗ್ಯವಲ್ಲ.

**ಶಬ್ದಾರ್ಥ:** **ಸಾವಯವ**=(ಸ+ಅವಯವ) ಕೈಕಾಲು ಮೊದಲಾದ ಅವಯವಗಳಿಂದ ಕೂಡಿದ; **ಜಡದೃಶ್ಯಾವಲಂಬನ**=ಜಡತ್ವಕ್ಕೂ ದೃಶ್ಯತ್ವಕ್ಕೂ ಆಶ್ರಯವಾಗಿರುವುದು; **ಶಕಟ**=ಗಾಡಿ; **ಅಪಾತ್ರವು** =ಆತ್ಮನೆಂಬ ಹೆಸರಿಗೆ ಯೋಗ್ಯವಲ್ಲ.

**ಟಿಪ್ಪಣಿ–೧:** **ಅನ್ನಮಯ**=ವಿಶೇಷವಾಗಿ ಅನ್ನದಿಂದ ಬೆಳೆದ ಸ್ಥೂಲ ದೇಹ (ಅನ್ನಮಯವಾದ ದೇಹವೇ ಆತ್ಮನು ಎನ್ನುವುದು ಅಸುರರ ಸ್ವಾಮಿಯಾದ ವೀರೋಚನನ ಸಿದ್ಧಾಂತ. ಇದನ್ನು ಕೆಲವರು ಪಾಮರರು ಅನುಸರಿಸುತ್ತಾರೆ.)

**ಟಿಪ್ಪಣಿ–೨ಷಡ್ಭಾವ ವಿಕೃತಿ:** ೧) **ಅಸ್ತಿ** (ಇರುತ್ತದೆ) ಎಂಬ ಭಾವದ ಬಾಲ್ಯ; ೨) **ಜಾಯತೇ** (ಹುಟ್ಟುತ್ತದೆ) ಎಂಬವಸ್ಥೆಯ ಯೌವನ; ೩) **ವರ್ಧತೇ** (ಬೆಳೆಯುತ್ತದೆ) ಎಂಬ ಅವಸ್ಥೆಯ ಕೌಮಾರ; ೪) **ವಿಪರಿಣಮತೇ** (ಮಾರ್ಪಡುತ್ತದೆ) ಎಂಬ ವಾರ್ಧಕ್ಯ; ೫) **ಅಪಕ್ಷೀಯತೆ** (ಸವೆಯುತ್ತದೆ) ಎಂಬ ವೃದ್ಧತ್ವ; ೬) **ವಿನಶ್ಯತಿ** (ಮರಣ ಹೊಂದುತ್ತದೆ) ಎಂಬ ಸಾವು. ಈ ರೀತಿ ಆರು ಅವಸ್ಥೆಗಳನ್ನು ದೇಹ ಹೊಂದಿದೆ.

---

**ನಿದ್ದೆಯಲಿ ಕೆಡೆದಿಪ್ಪುದಾಕ್ಷಣ**
**ವೆದ್ದರದು ಸಂಚರಿಸುತಿಪ್ಪುದು;**
**ಹೊದ್ದಿದಸು ತೊಲಗಿದರೆ ಕಾಷ್ಠಪ್ರಾಯವಾಗಿಹುದು; ।**
**ಉದ್ದದೆಲುನರಮಾಂಸಚರ್ಮದಿ**
**ಬದ್ಧವಹ ದುರ್ಗಂಧವಶುಚಿಯ**
**ಮೇಧ್ಯಪೂರಿತಭಾಂಡವೀ ತನುವಧ್ರುವವಿದೆಂದ ॥** ॥೩೬॥

**ತಾತ್ಪರ್ಯ:** ಈ ಶರೀರವು ನಿದ್ರಾವಸ್ಥೆಯಲ್ಲಿ ಎಚ್ಚರವಿಲ್ಲದೆ ಜಡವಾಗಿ ಬಿದ್ದಿರುತ್ತದೆ. ಜಾಗ್ರತಾವಸ್ಥೆಯಲ್ಲಿ ಎಚ್ಚರಗೊಂಡ ಕೂಡಲೇ ಪ್ರಾಣ ಬಂದು ಚಲಿಸತೊಡಗುತ್ತದೆ. ಈ ಶರೀರವನ್ನು ಆಶ್ರಯಿಸಿದ ಪ್ರಾಣ ತೊಲಗಿದ ಕೂಡಲೇ ಶರೀರವು ಒಣ ಕಟ್ಟಿಗೆಯಂತೆ ನಿಶ್ಚಲವಾಗುತ್ತದೆ. ಉದ್ದವಾಗಿರುವ ಎಲುಬುಗಳು ನರಗಳು, ಮಾಂಸಖಂಡಗಳು, ಚರ್ಮದಿಂದ ಕೂಡಿದ ದುರ್ವಾಸನೆಯ ಮಲಿನವಾದ ಮಲದಿಂದ ತುಂಬಿದ ಮಡಕೆಯಾದ ಶರೀರವು ಎಂದಿಗೂ ಶಾಶ್ವತವಲ್ಲ ಎಂದು ತಿಳಿಯಬೇಕು.

**ಶಬ್ದಾರ್ಥ:** **ಕಾಷ್ಠಪ್ರಾಯ**=ಒಣಗಿದ ಕಟ್ಟಿಗೆಯಂತೆ; **ಅಧ್ರುವ**=ಅಶಾಶ್ವತ; * **ಹೊದ್ದಿದ** =ಆಶ್ರಯ ಹೊಂದಿರುವ; * **ಅಸು**=ಪ್ರಾಣ; * **ಉದ್ದದೆಲು**=ಉದ್ದವಾದ ಎಲುಬು; * **ಬದ್ಧವಹ** =ಚರ್ಮದಿಂದ ಕೂಡಿದ; * **ದುರ್ಗಂಧ**=ದುರ್ವಾಸನೆ; * **ಅಶುಚಿ**=ಮಲಿನ; * **ಅಮೇಧ್ಯ**=ಮಲ;

---

**ಎಲು, ನರಂಗಳು, ಮಜ್ಜೆ ತಂದೆಯ**
**ಮಲದಲಾದವು; ತಾಯರಕ್ತವೆ**
**ಬಲಿದು ನೆತ್ತರ, ಮಾಂಸ, ಚರ್ಮಗಳಾಗಲದರಿಂದ ।**
**ಲಲನೆ ಪುರುಷ ವ್ಯಕ್ತಿಯೆಂಬುದು**
**ತಿಳಿಯಲವಯವ ಭೇದವಲ್ಲದೆ**
**ಮಲದ ಜಂಗಮಭಾಂಡವೀ ತನುವಾತ್ಮನಲ್ಲೆಂದ ॥** ॥೩೭॥

ತಾತ್ಪರ್ಯ: ನಿನ್ನ ದೇಹ, ಮೂಳೆ, ನರಗಳು, ಅಸ್ತಿಸಾರ, ಇವು ಮೂರು ತಂದೆಯ ಮಲದಿಂದ ಈ ದೇಹಕ್ಕೆ ಬಂದು ಸೇರಿದವು. ತಾಯಿಯ ರೇತಸ್ಸು ವೃದ್ಧಿಸಿ ರಕ್ತ, ಮಾಂಸ, ಚರ್ಮ ಇವು ಮೂರು ಉಂಟಾದವು. ಆದಕಾರಣ ವಿಚಾರಮಾಡಿದರೆ ಈ ದೇಹದಲ್ಲಿ ಸ್ತ್ರೀಪುರುಷರೆಂಬ ವ್ಯಕ್ತಿಭೇದವು ಹೊರನೋಟಕ್ಕೆ ಮಾನವ ಅಂಗಾಂಗ ಭೇದದಿಂದ ಬೇರೆಬೇರೆಯೆಂದು ಅನ್ನಿಸಿದರೂ ವಾಸ್ತವವಾಗಿ ಈ ಶರೀರವು ಹೊಲಸಿನಿಂದ ತುಂಬಿದ ಓಡಾಡುವ ಮಡಕೆಯೇ ಹೊರತು ಶರೀರವೇ ಆತ್ಮವಲ್ಲ ಎಂದು ತಿಳಿ.

**ಶಬ್ದಾರ್ಥ: * ಮಜ್ಜೆ=ಅಸ್ತಿಸಾರ (ಮೂಳೆಯಲ್ಲಿರುವ ಮೆದುವಾದ ಕೊಬ್ಬಿನ ಪದಾರ್ಥ) ಮಲ=ಹೊಲಸು; * ಲಲನೆ=ಸ್ತ್ರೀ; * ಅವಯವ ಭೇದ=ಅಂಗಾಂಗ ವ್ಯತ್ಯಾಸ; ಮಲದ ಜಂಗಮ ಭಾಂಡ=ಹೊಲಸಿನಿಂದ ತುಂಬಿದ ಓಡಾಡುವ ಮಡಕೆ; * ತನು=ಶರೀರ;**

---

**ಎಲೆಲೆ, ಭ್ರಮಿಸಲದೇಕೆ? ತಂದೆಯ**
**ಮಲವಲಾ! ಮಮಕರಿಸಿ ಬರಿದೇ**
**ಬಳಲಿ ಸಲಹುವೆನೆಂದು ಬಗೆವುದು ಮರುಳುತನ ಮಗನೆ ।**
**ತಿಳಿದುನೋಡಲು ಮಾಸಮಾಸದ**
**ಹೊಲೆಯನೆತ್ತರು ತಾಯುದರದೊಳು**
**ಬಲಿಬಲಿದು ಬೆಳೆದಾಯಿತೀ ಹೊಲೆದೇಹ ತಾನಲ್ಲ ॥ ॥೩೮॥**

ತಾತ್ಪರ್ಯ: ಎಲೈ ಮಾನವನೆ ಈ ಶರೀರದ ಬಗ್ಗೆ ಏಕೆ ಮೋಹವನ್ನು ಹೊಂದುವೆ. ಇದು ತಂದೆಯ ಹೊಲಸಿನಿಂದ ಮೂಡಿಬಂದ ದೇಹ, ಶುಕನೆ ಕೇಳು ವ್ಯರ್ಥ ಶ್ರಮದಿಂದ ನನ್ನದೆಂದು ಮೋಹಗೊಂಡು, ಈ ಶರೀರವನ್ನು ಕಾಪಾಡುತ್ತೇನೆ ಎಂದು ಭಾವಿಸುವುದು ಹುಚ್ಚುತನ. ಹೊಲಸಾದ ವೀರ್ಯವು ತಾಯಿಯ ಗರ್ಭದಲ್ಲಿ ಪ್ರತಿತಿಂಗಳಿಗೂ ಪ್ರವರ್ಧಮಾನವಾಗುತ್ತಾ ಬಲಿತು, ಮಾಂಸಪಿಂಡ ರೂಪ ತಳೆದು ಅಂಗಾಂಗ ಹೊಂದಿ ಶಿಶುವಾಗಿ ಹೊರಬಂದೆ ನೀನು. ಆದಕಾರಣ ಹೊಲಸಿನಿಂದ ರೂಪುಗೊಂಡ ಈ ದೇಹ ಆತ್ಮವಲ್ಲ.

**ಶಬ್ದಾರ್ಥ: * ಮಮಕರಿಸಿ=ನನ್ನದೆಂದು, ಮೋಹಗೊಂಡು; ಮಾಸಮಾಸದ=ಪ್ರತಿ ತಿಂಗಳ; ಹೊಲೆಯ=ಮುಟ್ಟಿನ; ಹೊಲೆದೇಹ=ಅಶುಚಿಮಯವಾದ ದೇಹ; * ಬಲಿಬಲಿದು ಬೆಳೆದು=ಪ್ರತಿ ತಿಂಗಳೂ ಪ್ರವರ್ಧಮಾನವಾಗುತ್ತಾ ಬಲಿತು; * ತಾನಲ್ಲ=ಆತ್ಮವಲ್ಲ**

---

**ಈಸುಪರಿಯಲಿ ತೋರ್ಪ ತನುವನು**
**ಮೋಸದಲಿ ತಾನೆಂದು ಬಹಳಾ**
**ಯಾಸದಿಂದಲಿ ಗಾಸಿಯಾದೆನಲಾ! ವೃಥಾ ಎನುತ ।**
**ಈ ಶರೀರದ ಮೇಲಣಾಶಾ**
**ಪಾಶವನು ನೆರೆ ಹರಿದು, ನೀನ**
**ಭ್ಯಾಸವನು ಮಾಡುವದು ಮನದಲಿ ಮಗನೆ ಕೇಳೆಂದ ॥ ॥೩೯॥**

**ತಾತ್ಪರ್ಯ:** ಈ ರೀತಿಯಾಗಿ ಹೊರ ನೋಟಕ್ಕೆ ಆಕರ್ಷಕನಾಗಿ ಕಾಣುವ ಶರೀರವನ್ನು ತಪ್ಪು ತಿಳಿವಳಿಕೆಯಿಂದ ಇದೇ ಆತ್ಮವೆಂದು ತಿಳಿದು ಈ ಶರೀರಕ್ಕಾಗಿ ವ್ಯರ್ಥವಾಗಿ ಶ್ರಮಿಸಿ ಕಷ್ಟ ಕೋಟಲೆಗೆ ಒಳಗಾದೆನಲ್ಲಾ! ಎಂದು ತಿಳಿದು, ಈ ದೇಹದ ಮೇಲಿನ ಮೋಹವೆಂಬ ಬಂಧವನು ಪೂರ್ತಿಯಾಗಿ ಕಿತ್ತೊಗೆದು ಈ ಶರೀರ ನಾನಲ್ಲ ಎಂಬ ಆತ್ಮ ಚಿಂತನೆಯನ್ನು ನೀನು ಮತ್ತೆ ಮನಸ್ಸಿಗೆ ತಂದುಕೊಳ್ಳುವ ಅಭ್ಯಾಸವನ್ನು ಮಾಡು ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * **ಈಸುಪರಿಯಲಿ**=ಈ ರೀತಿಯಾಗಿ; * **ತೋರ್ಪ**=ತೋರುವ;; **ಮೋಸದಲಿ**=ತಪ್ಪು ತಿಳಿವಳಿಕೆಯಿಂದ; * **ಗಾಸಿಯಾದೆ**=ಕಷ್ಟಕೋಟಲೆಗೆ ಒಳಗಾದೆ; * **ಆಶಾಪಾಶವನು ನೆರೆ ಹರಿದು**=ಮೋಹವೆಂಬ ಬಂಧವನ್ನು ಪೂರ್ತಿಯಾಗಿ ಕಿತ್ತೊಗೆದು; **ಅಭ್ಯಾಸವನು**=ಈ ಶರೀರ ನಾನಲ್ಲವೆಂಬ ಕಲ್ಪನೆಯನ್ನು ಮತ್ತೆ ಮತ್ತೆ ಮನಸ್ಸಿಗೆ ತಂದು ಕೊಳ್ಳುವ ಪದ್ಧತಿಯನ್ನು

---

**ಪ್ರಾಣಗಳು ಬಹುವಿಧಗಳಾಗಿಯೆ**
**ಕಾಣಿಸುವವೀ ದೇಹಚೇಷ್ಟೆಗೆ**
**ಪ್ರಾಣವೆನಿಸುತ ನಾಡಿಗಳೊಳಲ್ಲಲ್ಲಿ ಪಸರಿಸುತ ।**
**ಮಾಣದಾ ತಿದಿಯಿಂದ ಹೊರಡುವ**
**ಕೇಣದನಿಲನ ತೆರದೊಳೆಸೆವೀ**
**ಘ್ರಾಣದೊಳಗುಚ್ಛ್ವಾಸ ನಿಶ್ವಾಸಗಳು ನೀನಲ್ಲ ॥** ॥೪೦॥

**ತಾತ್ಪರ್ಯ:** ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನಗಳೆಂಬ ಪಂಚ ಪ್ರಾಣಗಳೇ, ನಾನಾ ಬಗೆಯಲ್ಲಿ ಈ ದೇಹದಲ್ಲಿ ಕಾಣಿಸಿಕೊಳ್ಳುತ್ತವೆ. ಇವು ದೇಹದೊಳಗಿನ ೭೨ ಲಕ್ಷ ನಾಡಿಗಳಲ್ಲಿ ಹರಡಿಕೊಂಡು ಶರೀರದ ಚಲನೆಗೆ ಸಾಮರ್ಥ್ಯವನ್ನು ಕೊಡುವ ಪ್ರಾಣವಾಯುವಾಗಿದೆ. ಎಡಬಿಡದೆ ಚರ್ಮದ ಊದುಚೀಲದಿಂದ (ತಿತ್ತಿ) ಹೊರ ಬರುವ ದೋಷಪೂರ್ಣ ಉಸಿರು ಗಾಳಿಯಾಗಿ ಮೂಗಿನಿಂದ ಬಿಡುವ ಹೊರ ಉಸಿರು ತೆಗೆದುಕೊಳ್ಳುವ ಒಳಉಸಿರಿನ ಪ್ರಾಣಮಯಕೋಶ ನೀನಲ್ಲ ಎಂದು ತಿಳಿ.

**ಶಬ್ದಾರ್ಥ:** **ಪ್ರಾಣಗಳು**=ಪಂಚಪ್ರಾಣಗಳು; **ಘ್ರಾಣ**=ಮೂಗು; **ಪ್ರಾಣ**=ಸಾಮರ್ಥ್ಯವನ್ನು ಕೊಡತಕ್ಕದ್ದು;

**ಟಿಪ್ಪಣಿ–೧:** **ಉಚ್ಛ್ವಾಸ ನಿಶ್ವಾಸಗಳು ನೀನಲ್ಲ**=ಹಿರಣ್ಯಗರ್ಭೋಪಾಸಕರು ಪ್ರಾಣವನ್ನೇ ಆತ್ಮವೆಂದು ತಿಳಿಯುತ್ತಾರೆ. ನೀನು ಉಚ್ಛ್ವಾಸ ನಿಶ್ವಾಸಗಳನ್ನು ಆತ್ಮವೆಂದು ತಿಳಿಯಬೇಡ.

**ಟಿಪ್ಪಣಿ–೨:** **ನಾಡಿಗಳು**: ನಾಡಿಗಳ ಸಂಖ್ಯೆ ೭೨ ಲಕ್ಷವೆಂದು ಯೋಗ ಶಾಸ್ತ್ರದಲ್ಲಿ ಹೇಳಿದೆ.

---

**ಪ್ರಾಣ ಹೃದಯದೊಳಿಹುದು; ಗುದದಲ**
**ಪಾನ, ನಾಭೀಸ್ಥಾನದಲ್ಲಿ ಸ**
**ಮಾನ; ತಿಳಿಯಲುದಾನ ಮಿಗೆ ಕಂಠಪ್ರದೇಶದಲಿ; ।**

ವ್ಯಾನ ಸರ್ವಶರೀರದಲ್ಲಿಹು
ದೀನಿಯಮದಲಿ ಪಂಚವಿಧ ಸಂ
ಸ್ಥಾನದಲಿ ತಮ್ತಮ್ಮಕೃತ್ಯಗಳಲ್ಲಿ ವರ್ತಿಪುವು ॥ ॥೪೧॥

ನಮ್ಮ ದೇಹದಲ್ಲಿ ಪಂಚಪ್ರಾಣಗಳು ನೆಲಸಿರುವ ರೀತಿಯನ್ನು ಈ ಪದ್ಯದಲ್ಲಿ ಹೇಳಲಾಗಿದೆ. ಹೃದಯಸ್ಥಾನದಲ್ಲಿ ಪ್ರಾಣವಿದೆ; ಗುದಸ್ಥಾನದಲ್ಲಿ ಅಪಾನವಿದೆ; ನಾಭಿ ಸ್ಥಾನದಲ್ಲಿ ಸಮಾನವಿದೆ; ಮುಖ್ಯ ಕಂಠಸ್ಥಾನದಲ್ಲಿ ಉದಾನವಿದೆ; ಇಡೀ ದೇಹವನ್ನೆಲ್ಲ ವ್ಯಾನ ಆವರಿಸಿದೆ. ಈ ರೀತಿ ಪಂಚರೂಪಗಳಲ್ಲಿ ಪ್ರಾಣಗಳಿದ್ದು ಇವು ತಮ್ಮತಮ್ಮ ಕಾರ್ಯಗಳಲ್ಲಿ ತೊಡಗಿರುತ್ತವೆ.

ಶಬ್ದಾರ್ಥ: ಸಂಸ್ಥಾನ=ರೂಪ; * ನಿಯಮ=ವ್ಯವಸ್ಥೆ; * ಹೃದಯ=ಗುಂಡಿಗೆ; ಗುದ=ಆಸನ (ತಿಕ); * ನಾಭಿ=ಹೊಕ್ಕಳು; * ಕಂಠ=ಕುತ್ತಿಗೆ; * ಕೃತ್ಯ=ಕಾರ್ಯನಿರ್ವಹಣೆ;

ಟಿಪ್ಪಣಿ–೧: ಪ್ರಾಣ ಹೃದಯದೊಳಿಹುದು; ಗುದದಲಪಾನ, ನಾಭೀಸ್ಥಾನದಲ್ಲಿ ಸಮಾನ; ತಿಳಿಯಲುದಾನಮಿಗೆ ಕಂಠ ಪ್ರದೇಶದಲಿ; ವ್ಯಾನ ಸರ್ವ ಶರೀರದಲ್ಲಿಹುದು=ಈ ಪದ್ಯಭಾಗವು ಅಮರಕೋಶದ ಕೆಳಕಂಡ ಪದ್ಯದ ತಾತ್ಪರ್ಯವಾಗಿದೆ.

ಟಿಪ್ಪಣಿ: ಹೃದಿ ಪ್ರಾಣೋಗುದೇಽಪಾನಸ್ಸಮಾನೋ ನಾಭಿ ಸಂಸ್ಥಿತಃ ।
ಉದಾನಃ ಕಂಠದೇಶಸ್ಥ್ತು ವ್ಯಾನಸ್ಸರ್ವಶರೀರಗಃ ॥

---

ಚೇತನವ ಪಡೆದಾತ್ಮನಿಂದಲಿ,
ಭೂತತನು ಕರಣೇಂದ್ರಿಯಂಗಳ
ಹೇತುವೆನಿಸುತ, ಹಸಿವುತೃಷೆಗಳ ಬಾಧೆಗೊಳಗಾಗಿ, ।
ಓತು ತಾನಾ ಲಿಂಗದೇಹ ಸ
ಮೇತದಿಂ ಗಮನಾಗಮನಗಳ
ಲೀತೆರದಿ ವಿಹರಿಸುವ ಪ್ರಾಣಗಳಾತ್ಮನಲ್ಲೆಂದ ॥ ॥೪೨॥

ತಾತ್ಪರ್ಯ: ಪಂಚಪ್ರಾಣಗಳು ಆತ್ಮನಿಂದ ಚೈತನ್ಯವನ್ನು ಪಡೆದುಕೊಂಡಿವೆ. ಪಂಚ ಭೂತಗಳಿಂದ ಕೂಡಿದ ಈ ಶರೀರದ ಅಂತಃಕರಣ ಇಂದ್ರಿಯಗಳಿಗೆ ಕಾರಣೀ ಭೂತವೆನಿಸಿ ಹಸಿವು ಬಾಯಾರಿಕೆಗಳ ಬಾಧೆಗಳಿಗೆ ಒಳಗಾಗಿರುತ್ತವೆ. ಲಿಂಗ ದೇಹದಲ್ಲಿ ಗಮನ ಆಗಮನ ಚಲನೆಗಳಿಂದ ವಿಹರಿಸುತ್ತಿರುವ ಪಂಚ ವಾಯುಗಳು ಆತ್ಮನಲ್ಲ ಎಂದು ತಿಳಿಯಬೇಕು.

ಶಬ್ದಾರ್ಥ: ಭೂತತನು=ಪಂಚಭೂತಗಳಿಂದ ಕೂಡಿದ ಶರೀರ; ಕರಣ=ಮನಸ್ಸು, ಬುದ್ಧಿ, ಇತ್ಯಾದಿ ಜ್ಞಾನೇಂದ್ರಿಯಗಳು; ಓತು=ಹೊಂದಿ

ಟಿಪ್ಪಣಿ–೧: ಲಿಂಗದೇಹ=ಪಂಚಭೂತ, ದಶೇಂದ್ರಿಯ, ಪ್ರಾಣ, ಅಂತಃಕರಣಗಳಿಂದ ಕೂಡಿದ ಶರೀರ (ಬೃಹದಾರಣ್ಯಕ–II–೬ ನೋಡಿ) ಶ್ರೀವತ್ಸ ನಿಘಂಟು ಪುಟ–೨೬೫

ಟಿಪ್ಪಣಿ-೨: ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಪ್ರಾಣಗಳು ಜಡವಾತ್ಮನಜಡನು;**
**ಪ್ರಾಣಗಳನಿತ್ಯಗಳು, ನಿತ್ಯ**
**ಜ್ಞಾನಮಯನೀ ಆತ್ಮ; ಚಲನಾತ್ಮಂಗಳೀ ಪ್ರಾಣ ।**
**ಸ್ಥಾಣುವಚಲನು ಪೂರ್ಣನಾತ್ಮನು;**
**ಪ್ರಾಣಗಳು ತಿಳಿ ದೃಶ್ಯ, ಸಾಧನ**
**ವೀ ನಿಜಾತ್ಮನು ಸಾಕ್ಷಿ ಚೈತನ್ಯಾತ್ಮ ನೋಡೆಂದ ॥ ॥೪೩॥**

**ತಾತ್ಪರ್ಯ:** ಪ್ರಾಣ, ಆತ್ಮಗಳ ಲಕ್ಷಣಗಳನ್ನು ಈ ಪದ್ಯದಲ್ಲಿ ಹೇಳಿದೆ; ಪಂಚಪ್ರಾಣಗಳು ಜಡರೂಪಿ, ಆತ್ಮನು ಚೈತನ್ಯರೂಪಿ; ಆತ್ಮನು ಜ್ಞಾನಮಯನು, ಪ್ರಾಣಗಳು ನಶ್ವರ ವಾದವು; ಪ್ರಾಣವು ಚಲನರೂಪಿ, ಆತ್ಮನು ಸ್ಥಿರರೂಪಿ, ಪೂರ್ಣನು. ಪ್ರಾಣಗಳು ದೃಶ್ಯವೂ ಸಾಧನರೂಪಿಯೂ ಆಗಿವೆ. ಆತ್ಮನು ಸಾಕ್ಷೀಭೂತನೂ ಚೈತನ್ಯರೂಪನೂ ಆಗಿದ್ದಾನೆ.

**ಶಬ್ದಾರ್ಥ:** ದೃಶ್ಯಸಾಧನ=ದೃಶ್ಯವಾಗಿಯೂ ಸಾಧನವಾಗಿಯೂ ಇರುವುವು; * ಜಡ= ಚಲನರಹಿತ; * ಅಜಡ=ಚಲನಯುಕ್ತ; * ಸ್ಥಾಣು=ಸ್ಥಿರನು.

---

**ಲಿಂಗದೇಹವ ಕೂಡಿ, ಬಹುಜ**
**ನ್ಮಂಗಳಲಿ ತೊಳತೊಳಲುವೀ ಪ್ರಾ**
**ಣಂಗಳಾತುಮನೆಂದು ಬರಿದೇ ಭಂಗಪಟ್ಟದಕೇ ।**
**ಕಂಗೆಡುತ ಕಳವಳಿಸಿ, ತನುವನು**
**ಹಿಂಗಲಾತುಮನಳಿದನೆಂದದ**
**ಸಂಗರಹಿತಾತ್ಮನೊಳಗಾರೋಪಿಸುವರಕಟೆಂದ ॥ ॥೪೪॥**

**ತಾತ್ಪರ್ಯ:** ಪಂಚಪ್ರಾಣಗಳಿಂದ ಕೂಡಿದ ಸೂಕ್ಷ್ಮಶರೀರವನ್ನು ಪಡೆಯುತ್ತಾ ಅನೇಕ ಜನ್ಮಗಳನ್ನು ತಾಳಿ ವಿಲವಿಲನೆ ಒದ್ದಾಡುತ್ತಾ ಈ ಪಂಚಪ್ರಾಣಗಳೇ ಆತ್ಮನೆಂದು ಅರ್ಥವಿಲ್ಲದ ಭ್ರಮೆಯಿಂದ ಕಷ್ಟಕೋಟಲೆಗೆ ಮಾನವರು ಒಳಗಾಗುತ್ತಾರೆ. ಆದರೂ, ಈ ಶರೀರಕ್ಕಾಗಿ ಉದ್ವೇಗಗೊಂಡು ಹಾತೊರೆಯುತ್ತಾರೆ. ಪಂಚಪ್ರಾಣಗಳು ಈ ಶರೀರವನ್ನು ಬಿಟ್ಟು ತೊಲಗಿದಾಗ ಆತ್ಮನು ನಾಶ ಹೊಂದಿದನು ಎಂಬುದಾಗಿ, ಪ್ರಾಣದ ಸಂಬಂಧವು ಆತ್ಮನಿಗೆ ಇಲ್ಲದಿದ್ದರೂ ಆತ್ಮನೇ ಪ್ರಾಣನೆಂದೂ ಪ್ರಾಣನೇ ಆತ್ಮನೆಂದೂ ಆರೋಪಿಸುತ್ತಾರಲ್ಲಾ, ಅಯ್ಯೋ ದೇವರೇ!

**ಶಬ್ದಾರ್ಥ:** * ಲಿಂಗದೇಹ=ಪಂಚಪ್ರಾಣಗಳಿಂದ ಕೂಡಿದ ಸೂಕ್ಷ್ಮ ಶರೀರ; * ಪ್ರಾಣಂಗಳು =ಪಂಚ ಪ್ರಾಣಗಳು (ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ, ಎಂಬ ಐದು ಬಗೆ ಉಸಿರುಗಳು); * ಭಂಗಪಡು=ಕಷ್ಟಕೋಟಲೆಗೆ ಒಳಗಾಗು; * ಸಂಗರಹಿತನು=ಪ್ರಾಣಕ್ಕೂ, ಆತ್ಮಕ್ಕೂ ಸಂಬಂಧವಿಲ್ಲದಿರುವ ಜೀವಿ, ಹಿಂಗಲು=ಬಿಡಲು, ಅದ=ಆ ಮರಣವು

ಟಿಪ್ಪಣಿ-೧: ಆರೋಪಿಸುವರು=ಪ್ರಾಣದ ಸಂಬಂಧ ಆತ್ಮನಿಲ್ಲದಿದ್ದರೂ ಆತ್ಮನೇ ಪ್ರಾಣನೆಂದೂ ಪ್ರಾಣನೇ ಆತ್ಮನೆಂದೂ ಆರೋಪಿಸುವರು.

ಟಿಪ್ಪಣಿ-೨: * ಲಿಂಗಶರೀರ=ಮನಸ್ಸು ಮುಂತಾದವುಗಳಿಂದಾಗಿರುವ ಸೂಕ್ಷ್ಮ ಶರೀರ (ಈಶೋಪನಿಷತ್ತು)

---

ಇನಿತು ವಿಧವಾಗಿರ್ದ ಪ್ರಾಣಗ
ಳನಿತನಾತ್ಮಗಳೆಂದು ತಿಳಿದವ
ಘನವಿವೇಕದಿ ನೇತಿಗಳೆದದರಲ್ಲಿ ಮಮತೆಯನು ।
ನೆನೆಯದದರ ನಿಮಿತ್ತ ಕಾರಣ
ವೆನಿಪ ನಿಜ ಚೈತನ್ಯವಸ್ತುವ
ನನಘ, ನಿನ್ನೊಳು ಕಂಡು ನೀನೆಂದದನು ಚಿಂತಿಪುದು ॥ ॥೪೫॥

ತಾತ್ಪರ್ಯ: ಹಲವು ಬಗೆಗಳಾಗಿ ತೋರುವ ಪ್ರಾಣಗಳನ್ನೆಲ್ಲಾ ಅನಾತ್ಮ (ಆತ್ಮವಲ್ಲ) ಎಂದು ತಿಳಿದು ಪ್ರಾಜ್ಞನಾಗಿ ಹಿರಿದಾದ ವಿವೇಚನಾಶಕ್ತಿಯಿಂದ ಆತ್ಮನನ್ನು ನೇತಿ ಮಾರ್ಗದಿಂದ ತಿಳಿದು ಅದರಲ್ಲಿ ಮಮಕಾರ ಹೊಂದದೆ ಅದೇನಿದ್ದರೂ ಪ್ರಾಣಗಳಿಗಿಂತ ಬೇರೆಯಾಗಿದ್ದು ಪ್ರಾಣಗಳು ಎದ್ದು ಕಾಣುವಂತೆ ಮಾಡಿರುವ ನಿಮಿತ್ತ ಕಾರಣವೆಂದು ತಿಳಿದು, ಪಾಪರಹಿತನೇ, ಸತ್ಯ ಸ್ವರೂಪವಾದ ಚೈತನ್ಯವನ್ನು, 'ತ್ವಂ' ಪದವನ್ನು ನೀನೇ ಎಂದು ಚಿಂತನೆ ಮಾಡು.

ಶಬ್ದಾರ್ಥ: ನೇತಿಗಳೆದು=ನೇತಿ ಮಾರ್ಗದಲ್ಲಿ ಆತ್ಮ ಸ್ವರೂಪ ಇದಲ್ಲ ಇದಲ್ಲ ಎಂದು ಚಿಂತಿಸಿ; ನೆನೆಯದೆ ಅದರ ನಿಮಿತ್ತ ಕಾರಣ=ಪ್ರಾಣಗಳಿಗಿಂತ ಬೇರೆಯಾಗಿದ್ದು ಪ್ರಾಣಗಳು ಎದ್ದು ಕಾಣುವಂತೆ ಮಾಡಿರುವ; ಅನಘ=ಪಾಪರಹಿತನೆ; * ಮಮತೆ=ಮಮಕಾರ;

ಪದ ವಿಭಾಗ: ಪ್ರಾಣಗಳನಿತನಾತ್ಮಗಳೆಂದು=ಪ್ರಾಣಗಳು+ಅನಿತು+ಅನಾತ್ಮಗಳು+ಎಂದು ಬಿಡಿಸಿ ಕೊಳ್ಳಬೇಕು.

---

ಶ್ರೋತ್ರಶಬ್ದವ, ನೇತ್ರರೂಪವ,
ಗಾತ್ರವಾ ಸ್ಪರ್ಶನವ, ಜಿಹ್ವೆ ರ
ಸೋತ್ಕರವ, ಗಂಧವನು ನಾಸಿಕವರಿವವಿಂತೈಸೆ ।
ಪುತ್ರ ಕೇಳೊಂದೊಂದು ವಿಷಯಕೆ
ಪಾತ್ರವೀ ಶ್ರೋತ್ರಾದಿಗಳು; ಸ
ರ್ವತ್ರ ಸಾಕ್ಷಿಕನಾತ್ಮನಿಂದ್ರಿಯವಾತ್ಮನಲ್ಲೆಂದ ॥ ॥೪೬॥

ತಾತ್ಪರ್ಯ: ಪಂಚಜ್ಞಾನೇಂದ್ರಿಯಗಳಲ್ಲಿ ಶಬ್ದವನ್ನು ಕಿವಿಯು, ಕಣ್ಣು ರೂಪವನ್ನೂ, ಚರ್ಮವು ಸ್ಪರ್ಶವನ್ನೂ, ನಾಲಗೆಯು ಹುಳಿ, ಉಪ್ಪು, ಖಾರ, ಇತ್ಯಾದಿ ಷಡ್ರಸ ಭೇದಗಳನ್ನೂ, ಮೂಗು ಸುಗಂಧ ದ್ರವ್ಯವನ್ನೂ ಗ್ರಹಿಸುತ್ತವೆ. ಆದಕಾರಣ ಈ ಜ್ಞಾನೇಂದ್ರಿಯಗಳಲ್ಲಿ ಒಂದೊಂದು ಇಂದ್ರಿಯಗಳು ಒಂದೊಂದು ವಿಷಯವನ್ನು

ಮಾತ್ರ ಗ್ರಹಿಸಲಿಕ್ಕೆ ಯೋಗ್ಯವಾಗಿವೆ. ಎಲ್ಲೆಡೆ ವ್ಯಾಪಿಸಿ ಸಾಕ್ಷೀಭೂತನಾಗಿರುವ ಸರ್ವಜ್ಞನಾದ ಆತ್ಮನು ಎಲ್ಲವನ್ನೂ ಅರಿಯಬಲ್ಲವನಾಗಿದ್ದಾನೆ. ಆದ್ದರಿಂದ ಇಂದ್ರಿಯಗಳನ್ನು ಆತ್ಮನೆಂದು ತಿಳಿಯಬಾರದು ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** ಗಾತ್ರ=ಶರೀರ (ಇಲ್ಲಿ ತ್ವಗಿಂದ್ರಿಯ ಚರ್ಮ ಎಂಬ ಅರ್ಥವನ್ನು ತೆಗೆದುಕೊಳ್ಳಬೇಕು; ಇಂದ್ರಿಯವಾತ್ಮನಲ್ಲೆಂದ=ನಿರೀಶ್ವರವಾದಿಗಳಾದ ಲೋಕಾಯತರು ಇಂದ್ರಿಯಗಳನ್ನೇ ಆತ್ಮವೆನ್ನುತ್ತಾರೆ. ಇಂದ್ರಿಯವು ಆತ್ಮನಲ್ಲವೆಂದು ತಿಳಿ; * ಶ್ರೋತ್ರ=ಕಿವಿ; * ನೇತ್ರ=ಕಣ್ಣು, * ಜಿಹ್ವೆ=ನಾಲಗೆ; * ನಾಸಿಕ=ಮೂಗು; * ಗಂಧ=ವಾಸನೆ; * ರಸೋತ್ಕರವ=ಷಡ್ರಸಗಳ ರುಚಿಯನ್ನು;

**ಟಿಪ್ಪಣಿ=ಷಡ್ರಸ=ಮಧುರ (ಸಿಹಿ); ಲವಣ (ಉಪ್ಪು); ಕಟು (ಖಾರ); ಕಷಾಯ (ಒಗರು); ತಿಕ್ತ (ಕಹಿ); ಆಮ್ಲ (ಹುಳಿ) (ಶ್ರೀವತ್ಸನಿಘಂಟು-ಪುಟ-೨೫೫)**

---

ತನ್ನತನ್ನಯ ವಿಷಯಗಳನವು
ನನ್ನಿಯಲಿ ಬೇರರಿವ ಕತದಿಂ
ಭಿನ್ನವಿಷಯಗಳಾದ ಶ್ರೋತ್ರಾದಿಗಳನಾತ್ಮಗಳು; ।
ತನ್ನ ನಿಜರೂಪಲ್ಲವಾ ಚೈ
ತನ್ಯ ವಸ್ತುವಿನಿಂದ ಜಡದೃ
ಶ್ಯಾನ್ಯಸಾಧನವಾದಿವುಗಳುರೆ ಚೇಷ್ಟಿಸುತ್ತಿಹವು ॥ ॥೪೭॥

**ತಾತ್ಪರ್ಯ:** ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು (ಕಣ್ಣು ದೃಶ್ಯವನ್ನು, ಮೂಗುವಾಸನೆಯನ್ನು, ಇತ್ಯಾದಿ) ವಾಸ್ತವದಲ್ಲಿ ಪ್ರತ್ಯೇಕವಾಗಿ ಅರಿಯುವ ಗುಣ ಗಳಾಗಿವೆ. ಆದ ಕಾರಣ ಭಿನ್ನ ಭಿನ್ನ ವಿಷಯಗಳ ಇಂದ್ರಿಯಗಳು ಅನಾತ್ಮಗಳು. ಅವು ಆತ್ಮದ ನಿಜ ರೂಪಗಳಲ್ಲ. ಚೈತನ್ಯ ವಸ್ತುವಿನಿಂದ ಬೇರೆಯಾದ ಜಡ, ದೃಶ್ಯ, ತಮ ಇತ್ಯಾದಿಗಳಿಗೆ ಸಾಧನಗಳಿಂದ ಕೆಲಸ ಮಾಡುವುದರಿಂದ ಇವು ಆತ್ಮವಲ್ಲ.

**ಶಬ್ದಾರ್ಥ:** ಕತದಿಂ=ಕಾರಣದಿಂದ; ಭಿನ್ನ ವಿಷಯಗಳಾದ=ಬೇರೆ ಬೇರೆ ವಿಷಯಗಳನ್ನು ಅರಿಯುವ (ಇಂದ್ರಿಯಗಳು) ಅನಾತ್ಮಗಳು; **ಶ್ರೋತ್ರಾದಿಗಳು ಅನಾತ್ಮಗಳು**=ಕಿವಿ ಮುಂತಾದ ಪಂಚೇದ್ರಿಯಗಳು ಆತ್ಮವಲ್ಲ; ಜಡದೃಶ್ಯಾನ್ಯ ಸಾಧನ=(ಇಂದ್ರಿಯಗಳು) ಜಡ, ದೃಶ್ಯ ಮತ್ತು ತಮಗಿಂತ ಬೇರೆಯಾದ ಆತ್ಮನಿಗೆ ಸಾಧನವಾದ ಕೆಲಸಗಳನ್ನು ಮಾಡತಕ್ಕವು; * **ಚೇಷ್ಟಿಸುತ್ತಿಹವು** =ಕಾರ್ಯವೆಸಗುತ್ತಿರುವುವು;

**ಟಿಪ್ಪಣಿ: ಶ್ರೋತ್ರಾದಿಗಳು ಅನಾತ್ಮಗಳು**=ಇಂದ್ರಿಯಗಳು ಆತ್ಮನಾದರೆ ಎಲ್ಲ ವಿಷಯಗಳೂ ಎಲ್ಲ ಇಂದ್ರಿಯಗಳಿಗೂ ತಿಳಿಯಬೇಕು; ಹಾಗೆ ಅನುಭವದಲ್ಲಿಲ್ಲ; ಎಲ್ಲ ತಿಳಿವುಗಳೂ ಒಬ್ಬನಿಗೇ ಆಗುವುದೆಂದು ಅನುಭವವಿದೆ; ಆದ್ದರಿಂದ ಆತ್ಮನು ಇಂದ್ರಿಯಗಳಿಗಿಂತ ಬೇರೆ. ಶ್ರೋತ್ರಾದಿಗಳು (ಪಂಚೇಂದ್ರಿಯಗಳೂ) ಅನಾತ್ಮಗಳು.

---

ಮನವೆ ಸಂಶಯರೂಪು; ಬುದ್ಧಿಯ
ನೆನಹು ನಿಶ್ಚಯರೂಪು; ಚಿತ್ತದ
ಘನತೆ ಬಹುಕಾಲಾನುಭವಸಂಸ್ಮರಣರೂಪಾಗಿ ।

**ತನುವಿನೊಳು ಪ್ರಾಣೇಂದ್ರಿಯಗಳೊಳ**
**ಗನಿತರಲಿ ತಾನೆಂಬ ಬಲು ಹ**
**ಮ್ಮನುಕರಿಸಿಕೊಂಡಿಪ್ಪುದದರಿಂದಾತ್ಮನಲ್ಲೆಂದ ॥ ॥೪೮॥**

**ತಾತ್ಪರ್ಯ:** ಪ್ರಾಣಗಳೂ ಆತ್ಮವಲ್ಲ; ಇಂದ್ರಿಯಗಳೂ ಆತ್ಮವಲ್ಲ ಎಂದ ಮೇಲೆ ಮನಸ್ಸನ್ನು ಆತ್ಮವೆಂದು ಕರೆಯಬಹುದೇ? ಇಲ್ಲ, ಏಕೆಂದರೆ ಮನಸ್ಸು ಚಂಚಲ ಸ್ವಭಾವದ್ದಾಗಿದೆ. ತೇಜೋರೂಪವಾದ ಬುದ್ದಿ ನಿಶ್ಚಯಿಸುವ ಗುಣ ಹೊಂದಿದೆ. ಇನ್ನು ಚಿತ್ತದ ಹಿರಿಮೆ ಎಂದರೆ ದೀರ್ಘಕಾಲದ ಅನುಭವಗಳನ್ನು ಸ್ಮರಣೆಗೆ ತಂದುಕೊಳ್ಳುವ ಗುಣಹೊಂದಿದೆ. ಹಾಗೆಯೇ, ಶರೀರದೊಳಗಿರುವ ಪಂಚಪ್ರಾಣಗಳ ಇಂದ್ರಿಯಗಳಲ್ಲಿ ನಾನು ಎಂಬ ಅಹಂಕಾರ ಆವರಿಸಿಕೊಂಡಿದೆ. ಹೀಗೆ ಭಿನ್ನ ಗುಣಗಳಿರುವ ಅಂತಃಕರಣದ ವೃತ್ತಿಗಳಾದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಇವು ಆತ್ಮನಲ್ಲ.

**ಶಬ್ದಾರ್ಥ:** * **ಅಂತಃಕರಣ ಚತುಷ್ಟಯ**=ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ; **ಘನತೆ**=ಹೆಚ್ಚುಗಾರಿಕೆ (ಬಹುಕಾಲದ ಅನುಭವವನ್ನು ಸ್ಮರಿಸುವುದೇ ಚಿತ್ತದ ಹೆಚ್ಚುಗಾರಿಕೆ); **ಆತ್ಮನಲ್ಲೆಂದ**=ಅಂತಃಕರಣದ ವೃತ್ತಿಗಳಾದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಇವು ಆತ್ಮನಲ್ಲ; * **ಪ್ರಾಣೇಂದ್ರಿಯಗಳೊಳು**=ಪಂಚ ಪ್ರಾಣಗಳಿರುವ ಇಂದ್ರಿಯಗಳಲ್ಲಿ; * **ಬಲು ಅಹಮ್ಮನು**=ಬಲವಾದ ಅಹಂಕಾರವನ್ನು

---

**ಬುದ್ಧಿಸುಖದುಃಖೇಚ್ಛೆ ಮೊದಲಾ**
**ಗಿರ್ದ ನವವಿಧಗುಣಗಳಲಿ ಮೆರೆ**
**ದಿರ್ದು, ಗುಣಿಯೆಂದೆನಿಸಿ, ಕರ್ತೃತ್ವಾಭಿಮಾನದಲಿ ।**
**ಬದ್ಧನಾಗಿಹಪರಕೆ ತೊಳಲುತ,**
**ಮದ್ದಲೆಯೊಳೆಡೆಯಾಡುವಿಲಿಯಂ**
**ತಿದ್ದವನು ತಿಳಿ ವ್ಯಾವಹಾರಿಕನಾತ್ಮನಲ್ಲೆಂದ ॥ ॥೪೯॥**

**ತಾತ್ಪರ್ಯ:** ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ, ಎಂದು ವೈಶೇಷಿಕರು ಹೇಳುವಂತೆ ೯ ಗುಣಗಳಲ್ಲಿ ಕಾಣಿಸಿಕೊಂಡು ಆತ್ಮಗುಣಿ ಗುಣವುಳ್ಳದ್ದು ಎನಿಸಿಕೊಳ್ಳುತ್ತದೆ. ಕರ್ತೃತ್ವದ ಅಭಿಮಾನದಲ್ಲಿ ಈ ಲೋಕದಲ್ಲೂ ಪರಲೋಕದಲ್ಲೂ ಸಿಲುಕಿ ಮದ್ದಲೆಯೊಳಗೆ ಸಿಕ್ಕಿಕೊಂಡು ಅತ್ತಿಂದಿತ್ತ ಇತ್ತಿಂದತ್ತ ಸುಳಿದಾಡುತ್ತ ತೊಳಲಾಡುವ ಇಲಿಯಂತೆ ಇರುವವನೆ (೯ ಗುಣಗಳಿಂದ ಕೂಡಿ) ಶುದ್ಧ ವ್ಯಾವಹಾರಿಕನು. ಆದಕಾರಣ ಬುದ್ದಿ ಆತ್ಮನಲ್ಲ ಎಂದು ತಿಳಿಯತಕ್ಕದ್ದು.

**ಶಬ್ದಾರ್ಥ: ಎಡೆಯಾಡುವ**=ಸುತ್ತಾಡುವ; **ವ್ಯಾವಹಾರಿಕನು**=ಮೇಲೆ ಹೇಳಿದ ೯ ಗುಣಗಳಿಂದಕೂಡಿ ವ್ಯವಹಾರವನ್ನು ಮಾಡುವವನು; **ಮದ್ದಲೆ**=ಚರ್ಮವಾದ್ಯ, ಮೃದಂಗ (ಕೈಯಲ್ಲಿ ಬಾರಿಸುವುದು) ಡೋಲು (ಕೋಲಿನಲ್ಲಿ ಬಾರಿಸುವುದು)

---

ನಿರುತವೀ ಕರಣೇಂದ್ರಿಯಂಗಳು
ಭರದಿ ನಿದ್ರೆಯೊಳಡಗುತಿರೆ ನಿ
ರ್ಭರದ ನಿಜಸುಖವುಚ್ಚಳಿಸಿ ಪೊಳೆದಿಹುದವಿದ್ಯೆಯಲಿ ।
ಮರಳಿ ಜಾಗ್ರದವಸ್ಥೆಯೊಳಗಿದು
ತೆರಳಿ ಪೋದಂತಿರ್ಪುದದರಿಂ
ನಿರತಿಶಯನಿಜನಿತ್ಯಸಹಜಾನಂದವಲ್ಲೆಂದ ॥ ॥೫೦॥

**ತಾತ್ಪರ್ಯ:** ಸದಾ ಈ ಅಂತಃಕರಣ ಇಂದ್ರಿಯಗಳು ಗಾಢ ನಿದ್ರೆಯಲ್ಲಿ ಅಡಗಿ ಹೋದಾಗ ಅಧಿಕವಾದ ತನ್ನ ಸುಖಸ್ವರೂಪವು ಅವಿದ್ಯೆಯ ಜಗತ್ತಿನ ಸ್ವರೂಪದಲ್ಲಿ ಎದ್ದು ಬೆಳಗುವುದು. ಮತ್ತೆ ಎಚ್ಚರವಾದರೆ ಈ ಸುಖವೆಂಬುದು ದೂರವಾಗುವುದು. ಆದಕಾರಣ ಈ ಕರಣಗಳ ವೃದ್ಧಿಕ್ಷಯರೂಪವಾದ ಜಾಗ್ರದವಸ್ಥೆಯಲ್ಲೂ ಸುಷುಪ್ತಿಯಲ್ಲೂ ತೋರುವ ಸುಖವು ಅವಿದ್ಯೆಯ ರೂಪವಾದುದೇ ಹೊರತು ಅದು ತಾನೇತಾನಾಗಿರುವ ಶುದ್ಧವಾದ ಆನಂದವಲ್ಲ.

**ಶಬ್ದಾರ್ಥ:** ನಿರ್ಭರದ=ಹೆಚ್ಚಾದ; ನಿಜಸುಖವುಚ್ಚಳಿಸಿಪೊಳೆದಿಹುದು=ತನ್ನ ಸುಖ ಸ್ವರೂಪವು ಎದ್ದು ಬೆಳಗುವುದು, ಅವಿದ್ಯೆಯಲಿ=ಇಂದ್ರಿಯಗಳ ಮತ್ತು ಮನಸ್ಸಿನ ಬೀಜ ರೂಪವಾದ ಅವಿದ್ಯೆಯಲ್ಲಿ (ಅಜ್ಞಾನದಲ್ಲಿ)

**ಟಿಪ್ಪಣಿ-೧:** ನಿರತಿಶಯನಿಜನಿತ್ಯಸಹಜಾನಂತವಲ್ಲೆಂದ- ನಿದ್ರೆಯಲ್ಲಿ ವಿಷಯ ಸುಖದ ಸೋಂಕಿಲ್ಲದಿದ್ದರೂ ಅದರ ಕಾರಣ ಸ್ವರೂಪವಿರುವುದರಿಂದ ಅದರಲ್ಲಿ ಸಿಕ್ಕಿ ಬಿದ್ದಾಗ ಎದ್ದು ಬೆಳಗುವ ಸುಖವು ಅದರ ಮುಸುಕಿನಿಂದ ಮರೆಯಾಗುವುದಾದ್ದರಿಂದ ಈ ಮರೆಯೂ ಇಲ್ಲದ ಸುಖವಷ್ಟು ಹೆಚ್ಚಿನದಲ್ಲದೆಯೂ, ಎಚ್ಚರವಾದೊಡನೆ ಮತ್ತೆ ವಿಷಯ ಸುಖದ ಮರೆಯನ್ನು ಪಡೆಯುವುದಾಗಿಯೂ ಇರುವುದರಿಂದ ಅದು ತಾನೇ ತಾನಾಗಿರುವ ಶುದ್ಧವಾದ ಆನಂದವಲ್ಲ.

**ಟಿಪ್ಪಣಿ-೨:** ಅವಿದ್ಯೆ (ಅಜ್ಞಾನ)- ಅವಿದ್ಯೆಯೆಂದರೆ ಪರಮಾತ್ಮನ ನಿಜ ಸ್ವರೂಪವನ್ನು ತಿಳಿಯದಿರುವಿಕೆ ಎಂದು ಈ ಗ್ರಂಥಕಾರನೇ ಮುಂದೆ ೩ನೇ ಅಧ್ಯಾಯದಲ್ಲಿ ೧೦೭, ೧೦೮, ೧೪೪ ೪ನೇ ಅಧ್ಯಾಯದ ೪೧ ೧೦ನೇ ಅಧ್ಯಾಯದ ೭, ೪೪ ಪದ್ಯಗಳಲ್ಲಿ ಹೇಳಿದ್ದಾನೆ. ಪರಮಾತ್ಮನ ನಿಜಸ್ವರೂಪ ತಿಳಿಯದಿರುವುದರಿಂದ ಆ ಪರಮಾತ್ಮನೇ ಜಗತ್ತಿನ ಸ್ವರೂಪದಿಂದ ಕಾಣುತ್ತಿರುವನೆಂದು ವೇದಾಂತದ ಸಿದ್ಧಾಂತ. ಆದ್ದರಿಂದ ಅವಿದ್ಯೆಯು ಜಗತ್ತಿನ ಬೀಜರೂಪ. ಈ ಅವಿದ್ಯೆಯು ಮೂರವಸ್ಥೆಗಳಲ್ಲಿಯೂ ಇರುವುದರಿಂದ ಸುಖವು ಅದರಲ್ಲಿ ಮೂರವಸ್ಥೆಗಳಲ್ಲಿಯೂ ಎದ್ದು ಬೆಳಗುತ್ತಿರುವುದು ಎನ್ನಬೇಕಾದರೂ ಅದರ ಕಾರ್ಯಾವಸ್ಥೆಗಳಾದ ಎಚ್ಚರ ಕನಸುಗಳಲ್ಲಿ ವಿಷಯ ಸುಖಗಳು ಅದನ್ನು ಇನ್ನಷ್ಟು ಮರೆಮಾಡಿರುವುವು. ಅದರ ಕಾರಣಾವಸ್ಥೆಯಾದ ನಿದ್ರೆಯಲ್ಲಿ ವಿಷಯ ಸೋಂಕಿಲ್ಲದೆ ಅದು ಎದ್ದು ಬೆಳಗುವುದೆಂದು ಹೇಳಿಸಿಕೊಳ್ಳುವುದು.

---

ಈ ಶರೀರ ಪ್ರಮುಖವಾಗಿಹ
ಕೋಶಪಂಚಕವಾತ್ಮನಲ್ಲೆಲೆ;
ಈ ಶರೀರದೊಳಾತ್ಮನೆಂತಿಹನೆನಲು ಕೇಳದನು ।

**ಈ ಸಕಲಕರಣಗಳ ಮೀರಿಹ**
**ಶೇಷಿತವೆ ತಿಳಿಯಾತ್ಮನವನನೆ**
**ಆ ಶ್ರುತಿ ಗುಹಾಹಿತಪರಬ್ರಹ್ಮವೆಂದು ಸಾರುವದು ॥ ॥೫೧॥**

**ತಾತ್ಪರ್ಯ:** ಈ ಶರೀರದಲ್ಲಿ ಪ್ರಧಾನವಾಗಿರುವ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯಗಳೆಂಬ ಪಂಚಕೋಶಗಳು ಆತ್ಮನಲ್ಲ ಎಂದು ಹೇಳಿದಾಗ ಶಿಷ್ಯನು ಕೇಳುತ್ತಾನೆ. ಪಂಚಕೋಶಗಳು ಆತ್ಮವಲ್ಲ ಎಂದರೆ ಈ ಶರೀರದೊಳಗೆ ಇರುವ ಆತ್ಮನು ಹೇಗಿದ್ದಾನೆ? ಅದಕ್ಕೆ ವ್ಯಾಸರು ಉತ್ತರಿಸುತ್ತಾರೆ "ಮನಸ್ಸನ್ನೂ ಇಂದ್ರಿಯಗಳನ್ನೂ ಮೀರಿರುವ ಶೇಷಿತವೆ ಎಂದರೆ ಇದೂ ಬ್ರಹ್ಮವಲ್ಲ, ಅದೂ ಬ್ರಹ್ಮವಲ್ಲ ಎಂದು ಕಳೆದ ಮೇಲೆ ಉಳಿದಿದ್ದೇ ಆತ್ಮನು'. ಶ್ರುತಿಗಳು ಬ್ರಹ್ಮನ ವರ್ಣನೆ ಮಾಡುತ್ತಾ 'ಹೃದಯದಲ್ಲಿರುವ ಆತ್ಮನೇ ಪರಬ್ರಹ್ಮ' ಎಂದು ಹೇಳುತ್ತವೆ.

**ಶಬ್ದಾರ್ಥ:** ಸಕಲ ಕರಣಗಳ=ಮನಸ್ಸನ್ನೂ ಇಂದ್ರಿಯಗಳನ್ನೂ; **ಶೇಷಿತವೆ**=ಇದೂ ಬ್ರಹ್ಮವಲ್ಲ, ಇದೂ ಬ್ರಹ್ಮವಲ್ಲ ಎಂದು ಕಳೆದ ಮೇಲೆ ಉಳಿದದ್ದೆ ಪ್ರತ್ಯಗಾತ್ಮ.

**ಟಿಪ್ಪಣಿ–೧: ಕೋಶಪಂಚಕ:** ಅನ್ನಮಯ (ಸ್ಥೂಲದೇಹ); ಪ್ರಾಣಮಯ (ಉಸಿರು); ಮನೋಮಯ (ಮನಸ್ಸು), ವಿಜ್ಞಾನಮಯ (ಬುದ್ಧಿ), ಆನಂದಮಯ (ವಿಷಯಸುಖದ ಅನುಭವ), ಇವು ಒಂದಕ್ಕಿಂತ ಒಂದು ಸೂಕ್ಷ್ಮವಾಗಿ ಇರುವ ಕೋಶಗಳು.

**ಟಿಪ್ಪಣಿ–೨: ಗುಹಾಹಿತ ಪರಬ್ರಹ್ಮ**= "ಗುಹಾಹಿತಂ ಗಹ್ವರೇಷ್ಠಂ ಪುರಾಣಂ" ಎಂದು ಶ್ರುತಿಯಲ್ಲಿ ಬ್ರಹ್ಮನ ವರ್ಣನೆ ಇರುವುದು. ಗುಹೆಯೆಂದರೆ ಹೃದಯವು, ಅದರಲ್ಲಿ ತೋರುವುದರಿಂದ ಆತ್ಮನಿಗೆ ಗುಹಾಹಿತನೆಂದು ಸಂಜ್ಞೆ

---

**ಕೇಳುಶುಕ, ನೀನ್ಯೆದು ಪದರದ**
**ಚೀಲದೊಳಗಿಹ ರತ್ನದಂತೀ**
**ಸ್ಥೂಲ ಸೂಕ್ಷ್ಮಗಳಾದ ಕೋಶಗಳೊಳಗೆ ಥಳಥಳಿಸಿ ।**
**ಥಾಳಿಸುತ್ತಿಹ ಪ್ರತ್ಯಗಾತ್ಮನ**
**ಹೇಳುವರು ಸಚ್ಚಿತ್ಸುಖೈಕ ನಿ**
**ರಾಳ ನಿರ್ಗುಣ ಬ್ರಹ್ಮವೆಂದದ ಬಲ್ಲಯೋಗಿಗಳು ॥ ॥೫೨॥**

**ತಾತ್ಪರ್ಯ:** ಶುಕನೆ ಕೇಳು, ನೀನು ಐದು ಪದರಗಳಿಂದ ಕೂಡಿರುವ ಚೀಲದೊಳಗೆ ಇರುವ ಐದು ರತ್ನಗಳಂತೆ ಸ್ಥೂಲವೂ, ಸೂಕ್ಷ್ಮವೂ ಆದ ಪಂಚಕೋಶಗಳಲ್ಲಿ ಥಳಥಳನೆ ಎದ್ದು ಕಾಣುತ್ತಿರುವ ಪ್ರತ್ಯಗಾತ್ಮನೊಬ್ಬನೇ ಸತ್, ಚಿತ್, ಸುಖ, ಏಕ, ನಿರಾಗ (ನಿರಾಳ), ನಿರ್ಗುಣ, ಬ್ರಹ್ಮವೆಂದು ಆತ್ಮನನ್ನು ಕುರಿತು ಪ್ರಾಜ್ಞರಾದ ಯೋಗಿಗಳು ಹೇಳುತ್ತಾರೆ.

**ಶಬ್ದಾರ್ಥ:** * ಪ್ರತ್ಯಗಾತ್ಮ=ಒಳಗಿರುವ ನಿಜವಾದ ಆತ್ಮ, ಸರ್ವಸಾಕ್ಷಿ; ಥಾಳಿಸುತ್ತಿಹ=ಕೋಶಗಳಲ್ಲಿ ಎದ್ದು ಕಾಣುತ್ತಿರುವ; * ಪಾಠಾಂತರ= 'ನಿರಾಳ'ವೆಂದು ಉಳಿದ ಪ್ರತಿಗಳಲ್ಲಿದೆ 'ನಿರಾಗ' ಎಂಬ ಪದಕ್ಕೆ ಪಾಠಾಂತರ; 'ನಿರಾಳ' ಎಂದರೆ ನಿರ್ಮಲವಾದ * 'ನಿರಾಗ'=ನಿರ್ಮೋಹದ

**ಟಿಪ್ಪಣಿ:** ಐದು ಪದರದ ಚೀಲ=ರತ್ನಗಳನ್ನು ಇಡಲು ಐದು ಚೀಲಗಳು. ಒಂದರೊಳಗೆ ಒಂದು ಇರುವಂತೆ ಹೊಲಿದ ಚೀಲವನ್ನು ಹಿಂದೆ ಬಳಸುತ್ತಿದ್ದರು. ಸಾಮಾನ್ಯರು ಅಡಿಕೆ ಚೀಲವನ್ನಾಗಿ ಈ ಬಗೆಯ ಚೀಲವನ್ನು ಬಳಸುತ್ತಿದ್ದರು. ಇದನ್ನು ಸಂಚಿ ಎಂದು ಕರೆಯುತ್ತಿದ್ದರು.

---

### ಮಗ, ಶರೀರ ಮೊದಲಾದವುಗಳಲ್ಲಿ ಆತ್ಮನ ಅಧ್ಯಾರೋಪ ೫೩–೬೨

**ತನುಮನ ಪ್ರಾಣೇಂದ್ರಿಯಂಗಳ**
**ನನಿತನಾತ್ಮಗಳೆಂದು ಶ್ರುತಿಯು**
**ಕ್ತ್ಯನುಭವಗಳಿಂ ಸಿದ್ಧವಾಗಿಯೆ ತೋರುವಾತ್ಮನಲಿ ।**
**ತನಯ, ಕೇಳಾರೋಪಿಸುವರೀ**
**ತನುವು ಮೊದಲಾಗಿರ್ಪ ಕೋಶವ**
**ಬಿನುಗರಹ ವಾದಿಗಳು ದುರ್ಬಲಶ್ರುತಿಪರಾಯಣರು ॥ ॥೫೩॥**

**ತಾತ್ಪರ್ಯ:** ಶರೀರ, ಮನಸ್ಸು ಪ್ರಾಣ, ಇಂದ್ರಿಯಗಳು ಅವೆಲ್ಲವೂ ಆತ್ಮನಲ್ಲವೆಂದು (ಅನಾತ್ಮ) ವೇದಗಳಲ್ಲಿ ಹೇಳಿರುವ ವಾಕ್ಯಗಳಿಂದಲೂ, ಅನುಭವದಿಂದಲೂ ಪ್ರಮಾಣಿತವಾಗಿ ತೋರುತ್ತದೆ. ಯುಕ್ತಿಯ ಬೆಂಬಲ ಸಾಲದಿದ್ದರೂ ಶರೀರಾದಿಗಳೂ (ಪಂಚಕೋಶಗಳು) ಆತ್ಮನೆಂದೂ ಕ್ಷುದ್ರರಾದ ಕೆಲವು ಭಿನ್ನವಾದಿಗಳು ಹಲವು ದುರ್ಬಲವಾದ ಶ್ರುತಿ ವಾಕ್ಯಗಳ ಬಲದಿಂದ ವಾದಿಸುತ್ತಾರೆ ಶುಕನೇ ಕೇಳು ಎಂದರು ವ್ಯಾಸರು.

**ಶಬ್ದಾರ್ಥ:** * ಆರೋಪಿಸುವರು=ವಾದಿಸುವರು; ಅನಿತು=ಅವೆಲ್ಲವೂ; ಅನಾತ್ಮಗಳು =ಆತ್ಮವಲ್ಲವೆಂದು; ಬಿನುಗರುಅಹ=ಕ್ಷುದ್ರರಾದ; ಕೋಶವ=ಪಂಚಕೋಶಗಳನ್ನು

**ಟಿಪ್ಪಣಿ:** ದುರ್ಬಲಶ್ರುತಿಪರಾಯಣರು=ಯುಕ್ತಿಯ ಬೆಂಬಲವು ಸಾಲದಿದ್ದರೂ ಶರೀರಾದಿಗಳು ಆತ್ಮನೆಂದು ಹೇಳಿರುವ ಕೆಲವು ದುರ್ಬಲವಾದ ಶ್ರುತಿವಾಕ್ಯಗಳ ಬಲದಿಂದ ವಾದಿಸುತ್ತಾರೆ.

---

**ಸರ್ಪವಲ್ಲದ ರಜ್ಜುವಿನಲಾ**
**ಸರ್ಪವೆಂಬಾರೋಪಣವದೆನಿ**
**ಸಿಪ್ಪುದಧ್ಯಾರೋಪವಾಪರಿ ಕಲ್ಪಿತಗಳಾಗಿ ।**
**ತೋರ್ಪನಾತ್ಮಸಮೂಹವೆಲ್ಲವ**
**ನಲ್ಪಬ್ರಹ್ಮದಿ ಕಲ್ಪಿತಗಳಾ**
**ಗಿರ್ಪುವವನೇ ಆತ್ಮನೆಂಬರು ಮಗನೆ ವಾದಿಗಳು ॥ ॥ ೫೪ ॥**

**ತಾತ್ಪರ್ಯ:** ಹಾವಲ್ಲದ ಹಗ್ಗವನ್ನು ಹಾವೆಂದು ತಿಳಿಯುವುದು ಭ್ರಾಂತಿಜನ್ಯ ಸತ್ಯವಾಗಿದೆ. ಈ ಕಲ್ಪಿತ ಭಾವನೆಯನ್ನು ಅಧ್ಯಾರೋಪವೆನ್ನುತ್ತಾರೆ. ಈ ರೀತಿಯಾಗಿ ಅಜ್ಞಾನಜನ್ಯ ವಾದಮಾಡುವವರಿಗೆ ಕಲ್ಪಿತಭ್ರಾಂತಿಗಳಿಂದ ಕಾಣುವ ಅನಾತ್ಮ ಸಮೂಹಗಳಾದ ಪಂಚಕೋಶಗಳನ್ನೇ (ಅನಲ್ಪಬ್ರಹ್ಮ) ಮಹತ್ತಾದ ಪರಬ್ರಹ್ಮನಾಗಿರುವ ಆತ್ಮವೆಂದು ವಾದಿಸುತ್ತಾರೆ. ಇದು ಸತ್ಯದೂರವಾದುದು.

**ಶಬ್ದಾರ್ಥ:** ಅನಲ್ಪಬ್ರಹ್ಮ=ಮಹತ್ತಾದ ಬ್ರಹ್ಮ; ಪರಬ್ರಹ್ಮ; * ರಜ್ಜು=ಹಗ್ಗ; ವಾದಿಗಳು=ದುರ್ವಾದಿಗಳು

**ಟಿಪ್ಪಣಿ:** ಅಧ್ಯಾರೋಪ(ಣ)=ತತ್ವವನ್ನು ತಿಳಿಸುವುದಕ್ಕಾಗಿ ಶ್ರುತಿಯಲ್ಲಿಟ್ಟುಕೊಂಡಿರುವ ಕಲ್ಪನೆ (ಪ್ರಶ್ನ ೯೦). ಆತ್ಮನಲ್ಲಿ ಅಜ್ಞರು ಬುದ್ಧ್ಯಾದಿಗಳನ್ನು ಕಲ್ಪಿಸುತ್ತಾರೆ (ನೈಷ್ಕರ್ಮಸಿದ್ಧಿ ೧-೬೦) ಭ್ರಾಂತಿಯಿಂದ ಹಾಗೆಂದು ಹುಟ್ಟುಗಟ್ಟಿ ತಪ್ಪಾಗಿ ತಿಳಿದುಕೊಳ್ಳುವುದು (ಬೃಹದಾರಣ್ಯಕ ೧, ೧೫೨, ೧೫೩) (ಪಾರಿಭಾಷಿಕಪದಕೋಶ ಪುಟ-೧೫)

ತತ್ತ್ವವನ್ನು ತಿಳಿಸಲು ವೇದಾಂತದಲ್ಲಿ ಮಾಡುವ ಕಲ್ಪನೆ; ತಪ್ಪು ತಿಳುವಳಿಕೆಯಿಂದ ಮಾಡುವ ಆರೋಪ. ಹಗ್ಗದಲ್ಲಿ ಹಾವನ್ನು ಆರೋಪಿಸುವಂತೆ. (ಪರಮಾರ್ಥ ಪದಕೋಶ ಪುಟ-೨೩)

---

**ಕೆಲರು ಪ್ರಾಕೃತರೆಂಬರಾತ್ಮನು**
**ತಿಳಿಯೆ ಮಗನೆಂಬುವದು ಶ್ರುತಿ; ವೆ**
**ಗ್ಗಳದಿ ಮಗನನು ತಂದೆ ಮುದ್ದಿಪ ಯುಕ್ತಿ; ಮಗನಳಿಯೆ ।**
**ಅಳಿದೆತಾನೆಂಬನುಭವವಿರ**
**ಲ್ಕೆಲೆಮಗನೆ ಮಗನಾತ್ಮನೆಂದೇ**
**ಹಲುಬುವರು ದುರ್ಬಲದ ಶ್ರುತಿಯಕ್ತ್ಯನುಭವಗಳಿಂದ ॥ ॥೫೫॥**

**ತಾತ್ಪರ್ಯ:** ಪಾಮರರಾದ ದೇಹಾಭಿಮಾನಿಗಳು (ಪ್ರಾಕೃತರು) ವಿಚಾರ ಮಾಡುವ ಹಾಗೆ "ಆತ್ಮಾವೈ ಪುತ್ರನಾಮಾಸಿ" ಶ್ರುತಿ ವಾಕ್ಯದಂತೆ, ತಂದೆಯೇ ಮಗನು ಎಂಬಂತೆ ಪಂಚಕೋಶಗಳನ್ನೇ ಆತ್ಮನೆಂದು ಹೇಳುವರು. ಈ ಮಾತು ವಿಪರೀತಭಾವನೆಯಿಂದ ಕೂಡಿದೆ. ಮಗನನ್ನು ತಂದೆಯನ್ನೂ ಒಂದೇ ಎಂದು ತಿಳಿಯುವ ರೀತಿಯಾಗಿದೆ. ಇದು ಸರಿಯಲ್ಲ. ಏಕೆಂದರೆ ಮಗನು ಸತ್ತರೆ ತಂದೆ ಅಳಿದನೆಂದರ್ಥವೇ? ಇಲ್ಲವಲ್ಲಾ, ತಂದೆ ಬೇರೆ. ಮಗ ಬೇರೆ ಎಂಬುದು ಎಲ್ಲರ ಅನುಭವಕ್ಕೆ ತಿಳಿದ ಸಂಗತಿಯಾಗಿದೆ. ಹೀಗಿದ್ದರೂ ದುರ್ಬಲವಾದ ಶ್ರುತಿಗಳ ಮಾತುಗಳಿಂದ ಪಂಚಕೋಶಗಳೇ ಆತ್ಮನೆಂದು ಪ್ರಾಕೃತರು ಚಿಂತಿಸುತ್ತಾರೆ ಎಂದು ವ್ಯಾಸರು ಶುಕನಿಗೆ ಹೇಳಿದರು.

**ಶಬ್ದಾರ್ಥ:** * ಪ್ರಾಕೃತರು=ಪಾಮರರಾದ ದೇಹಾಭಿಮಾನಿಗಳು; ಶ್ರುತಿ=ಆತ್ಮಾ ವೈ ಪುತ್ರನಾಮಾಸಿ ಎಂಬ ಶ್ರುತಿವಾಕ್ಯ; ತಿಳಿಯೆ=ವಿಚಾರಮಾಡಿದರೆ; * ಹಲಬುವರು =ಚಿಂತಿಸುವರು; * ಅಳಿದೆತಾನು=ತಂದೆ ನಾಶವಾದನು ಏಕೆಂದರೆ ಮಗನೇ ತಂದೆ; * ವೆಗ್ಗಳದಿ =ವಿಪರೀತ ಭಾವನೆಯಿಂದ;

---

**"ಅನ್ನಮಯಮಾತ್ಮಾನ" ವೆಂದೇ**
**ನಿರ್ಣಯಿಪ ಶ್ರುತಿ; ಮಗನ ಬಿಟ್ಟ**
**ತ್ಯುನ್ನತದ ಕಿಚ್ಚೆದ್ದೋಡೋಡುವನೆಂಬ ಬಲುಯುಕ್ತಿ; ।**
**ಇನ್ನು ಕೃಶ ನಾ, ಸ್ಥೂಲ ನಾ, ಕೇ**
**ಳೇನ್ನುವನುಭವವಿರಲೆಲೇ ಸಂ**
**ಪನ್ನ ತನುವೇ ಆತ್ಮನೆಂಬರು ಕೆಲರು ವಾದಿಗಳು ॥ ॥೫೬॥**

**ತಾತ್ಪರ್ಯ:** ತೈತ್ತೀರೀಯದಲ್ಲಿ ಹೇಳಿದಂತೆ, "ಅನ್ನಮಯ ಕೋಶವೇ ಆತ್ಮನೆಂದು ಕೆಲವರು ತಿಳಿಯುತ್ತಾರೆ. ಆದರೆ ಇದು ಸರಿಯಲ್ಲ. ಏಕೆಂದರೆ ತಂದೆ ಮಕ್ಕಳು ಇಬ್ಬರು ವಾಸಮಾಡುವ ಮನೆಗೆ ಭಾರಿ ಬೆಂಕಿಬಿದ್ದಾಗ ಪ್ರಾಣಭಯದಿಂದ ತಂದೆ ಮಗನನ್ನು ಬಿಟ್ಟು ಓಡುತ್ತಾನೆ; ಮಗ ತಂದೆಯನ್ನು ಬಿಟ್ಟು ಪ್ರಾಣರಕ್ಷಣೆಗೆ ಓಡುತ್ತಾನೆ. ಈ ದೃಷ್ಟಾಂತದ ಪ್ರಕಾರ (ತರ್ಕದಿಂದ) ತಂದೆ (ಉಂಟು ಮಾಡಿದವನು) ಆತ್ಮನೆಂದೂ ತಂದೆಯಿಂದ (ಉಂಟಾದವನು) ಆದ ಮಗ, ಶರೀರವೆಂದೂ ಭಾವಿಸಲಾಗಿದ್ದು ಒಬ್ಬರನ್ನೊಬ್ಬರು ಬಿಟ್ಟು ಓಡುವುದರಿಂದ ಆತ್ಮ ಬೇರೆ, ದೇಹ ಬೇರೆ ಎಂದರ್ಥ ವಾಗುತ್ತದೆ. ಇನ್ನೊಂದು ದೃಷ್ಟಾಂತವೆಂದರೆ ಇನ್ನು ನಾನು ತೆಳ್ಳಗಿದ್ದೇನೆ; ನಾನು ದಪ್ಪಗಿದ್ದೇನೆ ಎಂದು ಜನ ಭಾವಿಸುವುದನ್ನು ಜೀವನಾನುಭವದಲ್ಲಿ ಕಂಡಿದ್ದೇನೆ. ಏಕೆಂದರೆ ಇವರೆಲ್ಲರೂ ದೇಹವನ್ನೇ ಆತ್ಮನೆಂದು ವಾದಿಸುವವರಾಗಿದ್ದಾರೆ. ಎಲೈ ಸಂಪನ್ನನಾದ ಮಗನೇ ಕೇಳು, ಈ ಬಗೆಯ ವಾದ ಸರಿಯಲ್ಲ.

**ಶಬ್ದಾರ್ಥ:** ಸಂಪನ್ನ=ಸಂಪನ್ನನಾದ ಮಗನೆ; **ಕೃಶ**=ತೆಳ್ಳಗೆ; * **ಸ್ಥೂಲ**=ದಪ್ಪ; * **ಅತ್ಯುನ್ನತದ ಕಿಚ್ಚಿದ್ದು** =ಭಾರಿ ಬೆಂಕಿ ಬಿದ್ದು; * **ಬಲುಯುಕ್ತಿ**=ದೃಷ್ಟಾಂತ, ತರ್ಕ; * **ವಾದಿಗಳು** =ದುರ್ವಾದಿಗಳು (ತಾರ್ಕಿಕರು), **ಮಗನ ಬಿಟ್ಟತ್ಯುನ್ನತದ ಕಿಚ್ಚಿದ್ದೋಡುವನೆಂಬ**=ಅತ್ಯುನ್ನತದ ಕಿಚ್ಚೊದೊಡೆ ಮಗನ ಬಿಟ್ಟೋಡುವನೆಂಬ

**ಟಿಪ್ಪಣಿ-೧:** 'ಅನ್ನಮಯಮಾತ್ಮಾನ'='ಅನ್ನಮಯಮಾತ್ಮಾನಮುಪಸಂಕ್ರಾಮತಿ' ಎಂದು ತೈತ್ತೀರೀಯ (೨-೮-೫)ದಲ್ಲಿ ಹೇಳಿದೆ.

---

**ಕೆಲಕೆಲರು ಚಾರ್ವಾಕರಿಂದ್ರಿಯ**
**ಗಳು ಕಲಹಿಸಿದವೆಂಬ ಶ್ರುತಿ; ಮೇ**
**ಳಳಿಯಲಿಂದ್ರಿಯ ತನುವೆ ವಿಷಯವನರಿಯದಿಹ ಯುಕ್ತಿ; ।**
**ತಿಳಿಯೆ, ಕಾಣೆನು, ಕೇಳೆನೇನನು,**
**ಸುಳಿದೆನೆಂಬನುಭವದಲಿಂದ್ರಿಯ**
**ಗಳನೆ ಆತುಮನೆಂದು ಪೇಳ್ವರು ಮಗನೆ ಕೇಳೆಂದ ॥** ॥೫೭॥

**ತಾತ್ಪರ್ಯ:** ಚಾರ್ವಾಕವಾದಿಗಳು ಕೆಲವರು ಇಂದ್ರಿಯಗಳೇ ಆತ್ಮನೆಂದು ಭಾವಿಸುವರು. ಈ ಇಂದ್ರಿಯಗಳಲ್ಲಿ ಯಾರು ಶ್ರೇಷ್ಠರು ಎಂದು ವಾದವುಂಟಾಯಿತು. ಈ ಸಂಸಾರದಲ್ಲಿ ಇಂದ್ರಿಯಗಳು ಅಳಿದರೆ ಎಂದರೆ ದೇಹದಿಂದ ಹೊರಕ್ಕೆಹೋದರೆ ಜಡದೇಹವು ವಿಷಯಗಳನ್ನು ತಿಳಿದುಕೊಳ್ಳದೆ ಹೋಗುವುದು ಎಂದು ವಾದವುಂಟಾಯಿತು. ವಿಚಾರ ಮಾಡಿದರೆ, ಕಣ್ಣು ಹೋದರೆ ಕಾಣುವುದಿಲ್ಲ, ಕಿವಿ ಇಲ್ಲವಾದರೆ ಏನೂ ಕೇಳಿಸುವುದಿಲ್ಲ, ಪಂಚ ಇಂದ್ರಿಯಗಳು ಇದ್ದರೆ ತಿಳಿಯುತ್ತದೆ ಎಂಬುದು ಅನುಭವದ ವಿಷಯ. ಆದ್ದರಿಂದ ಇಂದ್ರಿಯಗಳನ್ನೇ ಆತ್ಮನೆಂದು ಚಾರ್ವಾಕರು ಹೇಳುತ್ತಾರೆ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * ಯುಕ್ತಿ=ವಾದ; * ತನು=ಜಡದೆ * ಅಳಿಯಲು=ನಾಶವಾಗಲು;

**ಟಿಪ್ಪಣಿ-೧:** ಇಂದ್ರಿಯಗಳು ಕಲಹಿಸಿದವು- ತಮ್ಮಲ್ಲಿ ಯಾರು ಶ್ರೇಷ್ಠರೆಂದು ಇಂದ್ರಿಯ ಮೊದಲಾದವುಗಳಲ್ಲಿ ವಾದವುಂಟಾಯಿತು. ಅವು ಅದನ್ನು ನಿಶ್ಚಯಿಸಿಕೊಳ್ಳಲು ಬ್ರಹ್ಮನ ಬಳಿಗೆ ಹೋದವು. ಯಾರು ಹೊರಕ್ಕೆ ಹೊರಟರೆ ಶರೀರ ಅಮಂಗಲವಾಗುವುದೋ ಅವರು ಶ್ರೇಷ್ಠರೆಂದು ಬ್ರಹ್ಮನು ಹೇಳಿದನು. ವಾಕ್ಕು ಮೊದಲಾದವು ಹೊರಹೊರಟು ನೋಡಿದವು. ಶರೀರವು ಅಮಂಗಲವಾಗಲಿಲ್ಲ. ಪ್ರಾಣವು ಹೊರ ಹೊರಡುತ್ತಲೇ ಶರೀರವು ಅಮಂಗಲವೆನಿಸಿತು. ಆದ್ದರಿಂದ ಪ್ರಾಣವೇ ಶ್ರೇಷ್ಠವೆಂದು ಆಗ ನಿಶ್ಚಯವಾಯಿತು ಎಂದು ಪ್ರಶ್ನೋಪನಿಷತ್ತಿನಲ್ಲಿಯೂ, ಬೃಹದಾರಣ್ಯಕದಲ್ಲಿಯೂ, ಛಾಂದೋಗ್ಯದಲ್ಲಿಯೂ ಕಥೆಗಳು ಬಂದಿವೆ.

**ಪಾಠಾಂತರ:** ಇಂದ್ರಿಯಗಳು ಕಲಹಿಸಿದವೆಂಬ ಶ್ರುತಿ; ಮೇಣಳಿಯಲಿಂದ್ರಿಯ ಮೂಲ ತನುವೆ ವಿಷಯದನರಿಯದಿಹ ಯುಕ್ತಿ=ಇದರ ಭಿನ್ನಾರ್ಥ ಹೀಗಿದೆ: ಇಂದ್ರಿಯಗಳನು ಕಲಹಿಸಿದರೆಂಬ ಸಂಸ್ಮೃತಿಯಳಿಯಲೀ ಜಡ ದೇಹವಿಷಯ ವನರಿಯದೆಂಬುಕ್ತಿ (ಅನುಭವಾಮೃತ ಗ್ರಂಥ-ಅಜ್ಞಾತಟೀಕೆ)

---

ಮತ್ತೆ ಕೆಲಬರು ವಾದಿಗಳು ಹೇ
ಳುತ್ತಲಿಹರೀ ಪ್ರಾಣವಾತ್ಮನೆ
ನುತ್ತ, ಶ್ರುತಿಯೇ "ಪ್ರಾಣಮಯಮಾತ್ಮಾನ"ಮೆಂದಿಹುದ; ।
ಮತ್ತುಮಿಂದ್ರಿಯವದರ ಕತದಿಂ
ವರ್ತಿಸುತ್ತಿಹ ಯುಕ್ತಿಯಶನಾ
ಸಕ್ತಿಯಿಂ ಭೋಕ್ತೃತ್ವವೆಂಬನುಭವವದಾಗಿರಲು ॥ ॥೫೮॥

**ತಾತ್ಪರ್ಯ:** ಮತ್ತೆ ಕೆಲವರು "ಪ್ರಾಣಮಯಮಾತ್ಮಾನಮುಪಸಂಕ್ರಾಮತಿ" ಎಂಬ (ತೈತ್ತೀರಿಯ) ಶ್ರುತಿವಾಕ್ಯದ ಆಧಾರದ ಮೇಲೆ ಈ ಪ್ರಾಣವೇ ಆತ್ಮನೆಂದು ಹೇಳುತ್ತಾರೆ. ಮತ್ತು ಇಂದ್ರಿಯಗಳು ಆ ಕಾರಣದಿಂದ ಅನ್ನಪಾನಾದಿಗಳ ಆಸಕ್ತಿಯಿಂದ ಭೋಕ್ತೃತ್ವವೆನಿಸುವುದು ಅನುಭವಸಿದ್ಧ ಅಂಶವಾಗಿರುವುದರಿಂದ ಪ್ರಾಣಗಳು ಆತ್ಮನಲ್ಲ ಎಂದು ತಿಳಿಯತಕ್ಕದ್ದು.

**ಶಬ್ದಾರ್ಥ:** ಅದರಕತದಿಂ=ಪ್ರಾಣದ ಬಲದಿಂದ; ಅಶನಾಸಕ್ತಿ=ಅನ್ನಪಾನಾದಿಗಳ ಅಪೇಕ್ಷೆಯಿಂದ; ಭೋಕ್ತೃತ್ವ=ಅನುಭವಿಸುವ ಸ್ವಭಾವ (ಪಾರಿಭಾಷಿಕ ಶಬ್ದಕೋಶ; ಪುಟ-೨೩೯)

**ಟಿಪ್ಪಣಿ:** ಪ್ರಾಣಮಯಮಾತ್ಮಾನ=ಪ್ರಾಣಮಯಮಾತ್ಮಾನಮುಪ ಸಂಕ್ರಾಮಯತಿ=ಪ್ರಾಣವೇ ಆತ್ಮನು ಎಂದು ತೈತ್ತೀರೀಯದಲ್ಲಿ (೨-೮-೫)ಹೇಳಿದೆ.

---

ತನಯ ಕೆಲಬರು ವಾದಿಗಳು ಕೇ
ಳ್ಮನವೆ ಆತುಮನೆಂಬರೆಂತೆಂ
ದೆನೆ "ಮನೋಮಯಮಾತ್ಮ" ನೆಂಬಾ ಶ್ರುತಿಯಿಹುದರಿಂದ; ।

**ಮನವಡಗೆ ನಿದ್ದೆಯಲಿ ಪ್ರಾಣವು**
**ತನುವನರಿಯದ ಯುಕ್ತಿ; ನಾನಿದ**
**ನೆನೆದೆ, ನಾನಿದ ನೆನೆಯೆನೆಂಬನುಭವವದಾಗಿರಲು ॥ ॥೫೯॥**

**ತಾತ್ಪರ್ಯ:** ಶುಕನೆ ಕೇಳು, ಕೆಲವರು ವಾದಿಗಳು, ಮನಸ್ಸನ್ನೇ ಆತ್ಮವೆನ್ನುತ್ತಾರೆ. ಯಾಕೆಂದರೆ ತೈತ್ತಿರೀಯ ಉಪನಿಷತ್ತು 'ಮನೋಮಯಮಾತ್ಮಾಮುಪಸಂಕ್ರಾಮತಿ' ಎಂದು ಹೇಳುತ್ತದೆ. ಹೇಗೆಂದರೆ ನಿದ್ರಾವಸ್ಥೆಯಲ್ಲಿ ಮನಸ್ಸು ಅಡಗಿಕೊಂಡು ಪ್ರಾಣವಿದ್ದರೂ ತನ್ನ ಶರೀರವನ್ನು ಅರಿಯದೆ ಹೋಗುತ್ತದೆ. ಆದಕಾರಣ ಇದನ್ನು ನಾನು ನೆನೆದೆನು, ಅದನ್ನು ಸ್ಮರಣೆಗೆ ತರಲು ಆಗುವುದಿಲ್ಲ ಎಂಬ ಮಾತು ಅನುಭವವೇದ್ಯವಾಗಿರುವುದರಿಂದ ಮನಸ್ಸನ್ನು ಆತ್ಮವೆಂದು ಹೇಳಲಾಗದು.

**ಶಬ್ದಾರ್ಥ:** * **ತನಯ**=ಶುಕನೆ, * **ಮನವಡಗೆ ನಿದ್ರಾವಸ್ಥೆಯಲ್ಲಿ**=ನಿದ್ರಾವಸ್ಥೆಯಲಿ ಮನಸ್ಸು ಒಳಗಾಗಿ; **ಶ್ರುತಿಅಹುದು**=ತೈತ್ತೀರಿಯ ಉಪನಿಷತ್ ಹೇಳುತ್ತದೆ,

**ಟಿಪ್ಪಣಿ:** ಮನೋಮಯಮಾತ್ಮನ್=ಮನೋಮಯಮಾತ್ಮಾನುಮುಪ; ಸಂಕ್ರಾಮತಿ (ತೈತ್ತಿರೀಯ ೨-೮-೫);

---

**ವಾದಿಗಳು ಜಡಮೆಂಬರಿದ ಮೇ**
**ಣಾದರದಿ "ವಿಜ್ಞಾನಮಯ"ನೆಂ**
**ದೋದುವದು ಶ್ರುತಿ; ಕರ್ತೃವಿಲ್ಲದೆ ಮನವೆನಿಪ ಕರಣ ।**
**ಸಾಧಕವೆ ಅಲ್ಲೆಂಬ ಯುಕ್ತಿಯು**
**ಮೈದೆ ತಾನೇ ಕರ್ತೃ, ಭೋಕ್ತೃವು**
**ಮಾದೆ ನಾನೆಂಬನುಭವದಿ ವಿಜ್ಞಾನವೇ ಆತ್ಮ ॥ ॥೬೦॥**

**ತಾತ್ಪರ್ಯ:** ಕೆಲವರು ವಾದಿಗಳು "ವಿಜ್ಞಾನಮಯಮಾತ್ಮಾನಂ" ಎಂಬ ಶ್ರುತಿ ವಾಕ್ಯವನ್ನು ಆಧಾರವಾಗಿಟ್ಟುಕೊಂಡು ಬುದ್ಧಿಯೇ (ವಿಜ್ಞಾನಮಯಕೋಶ) ಆತ್ಮನೆಂದು ಹೇಳುವರು. ಕರ್ತೃವಿಲ್ಲದೆ ಮನಸ್ಸು ಎಂಬ ಕಾರಣ ಹೇಗೆ ಉಂಟಾಗುತ್ತದೆ? ಆದ್ದರಿಂದ ಈ ಯುಕ್ತಿವಾದ ವ್ಯರ್ಥವು. ತಾನೇ ಕರ್ತೃವೂ, ಭೋಕ್ತೃವೂ ಆಗಿರುವೆನೆಂಬ ಅನುಭವವಿರುವುದರಿಂದ ಮನಸ್ಸು ಕಾರಣ ಇವುಗಳಿಗೆ ಸಾಧನವಾದ ವಿಜ್ಞಾನ ಮಯಕೋಶವೇ ಆತ್ಮನೆಂದು ಹೇಳುವುದು ಸರಿಯಲ್ಲ.

**ಶಬ್ದಾರ್ಥ:** ವಿಜ್ಞಾನಮಯ=ಬುದ್ಧಿಯೇ ಆತ್ಮ; ಇದ=ಈ ಮನಸ್ಸನ್ನು (**ಯುಕ್ತಿಯುಂ**)+ಐದೆ=ಚೆನ್ನಾಗಿ; **ಕರ್ತೃ**=ಮಾಡುವವನು; **ಭೋಕ್ತೃ**=ಅನುಭವಿಸುವವನು.

**ಪಾಠಾಂತರ:** ಮಾದೆ ನಾನೆಂಬನುಭವದಿ ಎಂಬ ಪಾಠಕ್ಕೆ ಬದಲಾಗಿ 'ನಾನೆ ಎಂಬನುಭವವಿರಲು' ಎಂಬ ಪಾಠ ಇತರ ಪ್ರತಿಗಳಲ್ಲಿ (ಅರಾಸೆ, ಸಣ್ಣಯ್ಯ, ಕು ಇತ್ಯಾದಿ) ಇದೆ. ಇದು ಸೂಕ್ತ ಪಾಠ ಅಲ್ಲ. ನಾನೆ ಎಂಬ ಪದ ಪ್ರಾಸಕ್ಕೆ ಹೊಂದುವುದಿಲ್ಲ. (ಅನುವಾದಕರ ಟಿಪ್ಪಣಿ)

---

**ಕಂದ ಕೇಳಾನಂದವಾತುಮ**
**ನೆಂದು ಹೇಳುವ ಶ್ರುತಿ; ಸುಷುಪ್ತಿಯೊ**
**ಳೊಂದಿ ಬುದ್ಧ್ಯಾದಿಗಳು ಲಯವಹವೆಂದೆನಿಪ ಯುಕ್ತಿ; ।**
**ಇಂದು ಸುಖದಲಿ ನಿದ್ರೈಗೈದೆನಿ**
**ದೊಂದನೂ ನಾನರಿತುದಿಲ್ಲೆನು**
**ತೆಂದ ನುಡಿಯನುಭವದಲಾತುಮನೆಂಬರಿದನೆಂದ ॥ ॥೬೧॥**

ತಾತ್ಪರ್ಯ: ಶುಕನೆ ಕೇಳು, ಆನಂದಮಯವೇ ಆತ್ಮವೆಂದು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿದೆ. ನಿದ್ರೆಯಲ್ಲಿ ಆನಂದಮಯ (ಕೋಶ) ಒಂದೇ ಇರುವುದು ಪಂಚಕೋಶಗಳಲ್ಲಿ ಉಳಿದ ನಾಲ್ಕು (ಅನ್ನಮಯ ಬಿಟ್ಟು ಉಳಿದ ನಾಲ್ಕು ಕನಸಿನಲ್ಲಿರುವುದು) ಎಚ್ಚರದಲ್ಲಿ ಐದು ಕೋಶಗಳೂ ಇರುವುವು. ಆದ್ದರಿಂದ ನಿದ್ರಾವಸ್ಥೆಯಲ್ಲಿ ಬುದ್ಧಿ ಮೊದಲಾದವು ಪ್ರವೇಶಿಸುವುದಿಲ್ಲ ಎಂಬುದು ನಿಜವಿಚಾರವಾಗಿದೆ. ಈ ದಿನ ನಾನು ಸುಖವಾಗಿ ನಿದ್ರೆ ಮಾಡಿದೆ, ಪ್ರಾಪಂಚಿಕ ವ್ಯವಹಾರ ಒಂದಾದರೂ ಗೊತ್ತಾಗಲೇ ಇಲ್ಲ ಎಂದು ಹೇಳುವ ಅನುಭವವನ್ನೇ ಆತ್ಮನು ಎಂದು ತಿಳಿದೆ ಎಂದು ಕೆಲವರು ಹೇಳುವರು.

**ಶಬ್ದಾರ್ಥ: * ಅರಿದನು=ತಿಳಿದನು, * ಅರಿತುದಿಲ್ಲ=ಗೊತ್ತಾಗಲೇ ಇಲ್ಲ**

**ಪದ ವಿಭಾಗ: ನಿದ್ರೈಗೈದೆನು+ಇದೊಂದನೂ=ನಿದ್ರೈಗೈದೆನಿದೊಂದನೂ**

*** ಪಾಠಾಂತರ: ಸುಷುಪ್ತಿ=ನಿದ್ರೆ; "ಕೇಳಾನಂದವಾತುಮನೆಂದು ಹೇಳುವ ಶ್ರುತಿ"** ಎನ್ನುವ ಬದಲಾಗಿ ಕೆಲವು ಪ್ರತಿಗಳಲ್ಲಿ **"ಕೇಳಾನಂದವಾಡುವೆನೆಂದು"** (ನರಸಿಂಹಮೂರ್ತಿ, ಕಸಾಪ) **"ಕೇಳಾನಂದಮಯತಾನೆಂದು"** (ಅರಾಸೆ) ಎಂಬ ಪಾಠಾಂತರಗಳಿವೆ.

**ಟಿಪ್ಪಣಿ–೧:** ಆನಂದಮಯಮಾತ್ಮಾನಮುಪಸಂಕ್ರಾಮತಿ (ತೈ. ೨–೮–೫) ತೈತ್ತಿರೀಯ ಉಪನಿಷತ್ತಿನಲ್ಲಿ ಬ್ರಹ್ಮಾನಂದವಲ್ಲಿ (ವಲ್ಲಿ–೨) ಅನುವಾಕ–೮ರಲ್ಲಿ ೫ನೇ ಮಂತ್ರದಲ್ಲಿ ಈ ಮಾತು ಬರುತ್ತದೆ. ಈ ಮಂತ್ರದಲ್ಲಿ ಬರುವ ಉಪಸಂಕ್ರಾಮತಿ ಎಂಬ ಶಬ್ದಕ್ಕೆ 'ಪಡೆದು ಕೊಳ್ಳುತ್ತಾನೆ, ಬಂದು ಸೇರುತ್ತಾನೆ' ಎಂದು ಅರ್ಥಮಾಡಬಾರದು. ಇಲ್ಲಿ ಸಂಕ್ರಮಣವೆಂದರೆ ಅರಿತುಕೊಳ್ಳುತ್ತಾನೆ ಎಂದರ್ಥ. ಸಂಕ್ರಮಣ ಎಂದರೆ 'ಜ್ಞಾನ' ಆದ್ದರಿಂದ ಜ್ಞಾನೋತ್ಪತ್ತಿಯಿಂದ ಅವಿದ್ಯಾಭ್ರಾಂತಿಯ ನಾಶವೇ ಸಂಕ್ರಮಣ ಎಂದು ತಿಳಿಯಬೇಕು. (ತೈತ್ತಿರೀಯ ಉಪನಿಷತ್ತು, ಸ್ವಾಮಿ ಚಿನ್ಮಯಾನಂದ, ಪುಟ–೧೩೮)

**ಟಿಪ್ಪಣಿ–೨: ಆನಂದವಾತುಮನೆಂದು ಹೇಳುವ ಶ್ರುತಿ–** ಆನಂದಮಯಮಾತ್ಮಾನಮುಪಸಂಕ್ರಾಮತಿ (ತೈತ್ತಿರೀಯ ಬ್ರಹ್ಮಾನಂದವಲ್ಲಿ ೨ ಅನುವಾಕ ೮ ಮಂತ್ರ ೫). ಈ ಕನ್ನಡ ಪದ್ಯವು (೩–೬೧) ಗಾಢ ನಿದ್ರೆಯಲ್ಲಿ ಕಾಣುವ ಆನಂದಮಯಕೋಶವನ್ನು ಹೇಳುವುದು.

ಆನಂದಮಯವೆಂದರೆ ಭೋಕ್ತೃತ್ವ ಪ್ರಧಾನವಾದ ಅಹಂಕಾರ. ಆನಂದಮಯವು ಪ್ರಿಯ, ಮೋದ, ಪ್ರಮಾದ ಎಂಬ ಇವುಗಳನ್ನು ಅವಯವಗಳಾಗಿ ಉಳ್ಳದೆಂದು ತೈತ್ತಿರೀಯ ಶ್ರುತಿಯಲ್ಲಿದೆ. ಆದ್ದರಿಂದ ನಮಗೆ ಪ್ರಿಯ, ಮೋದ, ಪ್ರಮಾದಗಳಾಗುವಾಗಲೆಲ್ಲ ಅದನ್ನು ಆನಂದಮಯವೆಂದು ತಿಳಿಯಬೇಕು.

ತನಗಿಷ್ಟವೆಂದು ಕಾಣಬರುವುದು ಪ್ರಿಯ; ಅದು ದೊರೆತರೆ ಆಗುವ ಹರ್ಷ, ಮೋದ, ಅದನ್ನು ಅನುಭವಿಸುವುದರಿಂದಾಗುವ ಹರ್ಷವು ಪ್ರಮೋದ. ಈ ಪ್ರಿಯ, ಮೋದ, ಪ್ರಮೋದಗಳೆಂಬ ವಿಶೇಷಗಳು ಎಚ್ಚರ, ಕನಸುಗಳಲ್ಲಿ ಇರುವುದೇ ಹೊರತು ನಿದ್ರೆಯಲ್ಲಿಲ್ಲ. ನಿದ್ರೆಯಲ್ಲಿರುವುದು ಆನಂದ. ಸಾಮಾನ್ಯ ಎಚ್ಚರದಲ್ಲಿ ಐದು ಕೋಶಗಳೂ ಇರುವುವು. ಕನಸಿನಲ್ಲಿ ಅನ್ನಮಯದ ಹೊರತು, ಉಳಿದ ನಾಲ್ಕು ಇರುವುವು. ನಿದ್ರೆಯಲ್ಲಿ ಆನಂದಮಯವೂ ಒಂದೇ ಇರುವುದು.

---

**ಉತ್ತಮನೆ ಈ ಸೃಷ್ಟಿಗಿಂತಲ**
**ಸತ್ತೆ ಮೊದಲೆಂದೆಂಬ ಶ್ರುತಿ; ನೆರೆ**
**ಸುಪ್ತಿಯೊಳಗೀ ಸಕಲವೇನೂ ಇಲ್ಲದಿಹ ಯುಕ್ತಿ; ।**
**ಸುಪ್ತಿಕಾಲದಲಿಲ್ಲದವ ತಾ**
**ಮತ್ತೆ ತೋರಿಹನೆಂಬುವನುಭವ**
**ವ್ಯಕ್ತವಾಗಲಸತ್ತೆ ಆತುಮನೆಂದು ಪೇಳುವರು ॥ ॥೬೨॥**

**ತಾತ್ಪರ್ಯ:** ಶ್ರೇಷ್ಠ ಪುತ್ರನಾದ ಶುಕನೇ ಕೇಳು: ಅಸತ್ತೆ ಎಂಬುದು (ಮಿಥ್ಯಾ ಜ್ಞಾನ) ಈ ಸೃಷ್ಟಿಗಿಂತ ಮೊದಲೇ ಹುಟ್ಟಿತು ಎಂದು ಒಂದು ಶ್ರುತಿ ವಾಕ್ಯ ಸಾರುತ್ತದೆ. ಗಾಢ ನಿದ್ರೆಯಲ್ಲಿ ಯಾವ (ಸತ್ಯದ) ಅರಿವು ಇಲ್ಲದಿರುವುದರಿಂದ ಈ ಸಕಲವೂ ಇಲ್ಲವೇ ಇಲ್ಲ ಎಂಬಂತೆ ತೋರುತ್ತದೆ ಎಂಬುದೇ ತರ್ಕವು; ನಿದ್ದೆಯಲ್ಲಿ ಇಲ್ಲದವನು ಎದ್ದು ಬಂದಾಗ ಮತ್ತೆ ಕಾಣುತ್ತಿದ್ದಾನೆ ಎಂಬುದು ಅನುಭವದಿಂದ ತಿಳಿಯುತ್ತದೆ. ಆದ ಕಾರಣ ಅಸತ್ತೆ ಆತ್ಮನೆಂದು ಕೆಲವರು ಹೇಳುತ್ತಾರೆ.

**ಟಿಪ್ಪಣಿ–೧ : * ಅಸತ್ತೆ ಆತುಮನು–** ಅಸದ್ವಾ ಇದಮಗ್ರ ಆಸೀತ್ (ತೈ ೨–೭) ಬ್ರಹ್ಮಾನಂದವಲ್ಲಿ (೨) ಅನುವಾಕ ೭ ಮಂತ್ರ೧ರಲ್ಲಿ ಈ ಮಾತು ಬರುತ್ತದೆ. (ಸೃಷ್ಟಿಗೆ ಪೂರ್ವದಲ್ಲೇ ಅದು ಅವ್ಯಕ್ತವೇ ಆಗಿತ್ತು ಅದರಿಂದಲೇ ನಾಮರೂಪಗಳ ವ್ಯಾಕೃತವಾದ ಜಗತ್ತು ಉತ್ಪನ್ನವಾಯಿತು). ಇಲ್ಲಿ ಇದು ಮೊದಲೇ ಅಸತ್ತಾಗಿತ್ತು ಎಂದರೆ ವಿಂಗಡಣೆ ಇಲ್ಲದ ಅವಿಭಕ್ತವಾದ ಅವ್ಯಾಕೃತ ವಾದ (ಇಂದ್ರಿಯಗಳಿಗೆ ವ್ಯಕ್ತವಾಗದ) ಬೀಜರೂಪವಾದ ಬ್ರಹ್ಮ ಇತ್ತು ಎಂದರ್ಥ, ಶೂನ್ಯವೆಂದಲ್ಲ. (ತೈತ್ತಿರೀಯ ಉಪನಿಷತ್ತು–ಸ್ವಾಮಿ ಚಿನ್ಮಯಾನಂದ; ಪುಟ–೧೧೮)

**ಟಿಪ್ಪಣಿ–೨: ಸುಪ್ತಿ ಕಾಲದಲ್ಲಿಲ್ಲದವ–** ಗಾಢ ನಿದ್ರೆಯಲ್ಲಿ ಯಾವ ಅರಿವೂ ಇಲ್ಲದ ಆತ್ಮನೇ ಎಚ್ಚರದಲ್ಲಿ ತೋರುವನೆಂದೂ ಆದಕಾರಣ ಆತ್ಮವು ಶೂನ್ಯವೆಂದು ಮಾಧ್ಯಮಿಕ ಬೌದ್ಧರ ಅಭಿಪ್ರಾಯವಾಗಿದೆ.

---

## ಅಧ್ಯಾರೋಪದ ಖಂಡನೆ (೬೩–೬೭)

**ತನಯ, ಕೇಳ್ಪ್ರಾಕೃತರೆ ಮೊದಲಾ**
**ದಿನಿತು ವಾದಿಗಳೆಂದ ಶ್ರುತಿಯು**
**ಕ್ತ್ಯನುಭವಾಭಾಸಂಗಳಹ ಪುತ್ರಾದ್ಯನಾತ್ಮಗಳು ।**

**ತನತನಗೆ ಪರಿಭವವನೈದುವ**
**ವನಘ, ತಮ್ಮೊಳಗುತ್ತರೋತ್ತರ**
**ವೆನಿಪ ಶ್ರುತಿಯುಕ್ತ್ಯನುಭವಾಭಾಸಗಳ ವಶದಿಂದ ॥ ॥೬೩॥**

**ತಾತ್ಪರ್ಯ:** ಪುಣ್ಯಶಾಲಿ ಶುಕನೇ ಕೇಳು, ಪ್ರಾಕೃತರು ಮುಂತಾದ ವಾದಿಗಳೆಲ್ಲರು, ನೆಲೆಗೆನಿಂತ ಶ್ರುತಿಯಂತೆಯೂ, ಯುಕ್ತಿಯಂತೆಯೂ, ಅನುಭವದಂತೆಯೂ ತೋರತಕ್ಕ ಪುತ್ರ ದೇಹ, ಮನಸ್ಸು, ಇಂದ್ರಿಯ, ವಿಜ್ಞಾನ, ಆನಂದ ಎಂಬ ಅಸತ್ಯಗಳಿಂದ ಕೂಡಿರತಕ್ಕ ಪಂಚಕೋಶಗಳು ಒಂದಕ್ಕೊಂದು ಉತ್ತರೋತ್ತರವಾಗಿ ಅತಿಕ್ರಮಿಸುವುದರಿಂದ ಜಡವಾದ ಮಾಯಾ ಕಾರ್ಯವೆನ್ನಿಸಿಕೊಂಡು ಲಯವಾಗಿ ಹುರುಳಿಲ್ಲದವು ಆಗುತ್ತವೆ. ಆದುದರಿಂದ ಇವುಗಳೆಲ್ಲವನ್ನು ಆತ್ಮವೆಂದು ಹೇಳಲು ಸಾಧ್ಯವಿಲ್ಲ.

**ಶಬ್ದಾರ್ಥ:** **ಶ್ರುತಿಯುಕ್ತ್ಯದುಭವಾಭಾಸಂಗಳು**=ನೆಲೆಗೆ ನಿಂತಂಥ ಶ್ರುತಿಯಂತೆಯೂ ಯುಕ್ತಿಯಂತೆಯೂ ಅನುಭವದಂತೆಯೂ ತೋರತಕ್ಕವು; **ಪುತ್ರಾದ್ಯನಾತ್ಮಗಳು**=ಪುತ್ರರು ಮತ್ತು ಅನ್ನಮಯಾದಿ ಪಂಚಕೋಶಗಳು; **ಪರಿಭವವನೈದುವ** =ಹುರುಳಿಲ್ಲವೆಂದಾಗವವು; **ಉತ್ತರೋತ್ತರವೆನಿಪ**=ಮುಂದಮುಂದಣ ಮಗನು ಆತ್ಮನೆಂಬ ಶ್ರುತಿಯ ಮುಂದೆ ಅನ್ನಮಯಾತ್ಮಾನವೆಂಬ ಶ್ರುತಿಯಿಂದಲೂ (ಈ ಅನ್ನಮಯಮಾತ್ಮಾನವೆಂಬ ಶ್ರುತಿಯು ಅದರ ಮುಂದಣ ಇಂದ್ರಿಯಗಳೇ ಆತ್ಮವೆಂಬ ಶ್ರುತಿಯಿಂದಲೂ ತಳ್ಳಿಹಾಕಲ್ಪಡುವುವು) **ಶ್ರುತಿಯುಕ್ತ್ಯನುಭವಾಭಾಸಗಳ**=ಸರಿಯಾದ ಶ್ರುತಿ ಮೊದಲಾದವುಗಳಂತೆ ಕಾಣುವಂಥಾದ್ದು.
* **ಪ್ರಾಕೃತರು**=ಪ್ರಕೃತಿಯಿಂದಾದ ದೇಹಾದಿಗಳಲ್ಲಿ ಅಭಿಮಾನಿಗಳಾದ ವಾದಿಗಳು.

---

**ಸ್ಥೂಲಸೂಕ್ಷ್ಮನುಮಲ್ಲವಾತ್ಮನು,**
**ಹೇಳಲೇನಪ್ರಾಣನಮನಸ;**
**ಶೀಲವಂತನೆ ಕೇಳ ಕರ್ತೃವಭೋಕ್ತೃಚಿನ್ಮಯನು; ।**
**ಬಾಲಕನೆ ಚಿದ್ರೂಪು ಚಿತ್ಸುಖ**
**ಮೂಲವೆಂಬೀ ಪ್ರಬಲಶ್ರುತಿಶಿರ**
**ಜಾಲ ದುರ್ಬಲಶ್ರುತಿತತಿಗಳನು ಖಂಡಿಸುವದೆಂದ ॥ ॥೬೪॥**

**ತಾತ್ಪರ್ಯ:** ಸುಗುಣಿಯಾದ ಶುಕನೇ ಕೇಳು, ಆತ್ಮನು ಸ್ಥೂಲನೂ ಅಲ್ಲ; ಸೂಕ್ಷ್ಮವೂ ಅಲ್ಲ; ಹೆಚ್ಚಾಗಿ ಹೇಳುವುದೇನಿದೆ! ಆತ್ಮನು ಪ್ರಾಣನಲ್ಲ, ಮನಸ್ಸಲ್ಲ, ಕರ್ತೃವಲ್ಲ, ಭೋಕ್ತೃವಲ್ಲ– ಆತ್ಮನು ಚಿನ್ಮಯ, ಚಿದ್ರೂಪ, ಚಿತ್ಸುಖಗಳಿಗೆ ಮೂಲಕಾರಣನು ಎಂಬುದಾಗಿ ಪ್ರಬಲವಾದ ಶ್ರುತಿವಾಕ್ಯಗಳು ಹೇಳಿರುವುದರಿಂದ ದುರ್ಬಲ ಶ್ರುತಿವಾಕ್ಯಗಳು ತಿರಸ್ಕಾರಯೋಗ್ಯಗಳಾಗಿವೆ.

**ಪದ ವಿಭಾಗ:** * **ಹೇಳಲೇನಪ್ರಾಣಮನಸಶೀಲವಂತನೆ ಕೇಳಕರ್ತೃವಭೋಕ್ತೃ**=ಹೇಳಲೇನು+ಅಪ್ರಾಣ+ಅಮನಸ ಶೀಲವಂತನೇ ಕೇಳು+ಅಕರ್ತೃ+ಅಭೋಕ್ತೃ ಎಂದು ಪದ ವಿಭಾಗ;

**ಶಬ್ದಾರ್ಥ:** ಪ್ರಬಲಶ್ರುತಿಶಿರಜಾಲ=ಅಸ್ಥೂಲಂ, ಅಚಕ್ಷುಃ, ಅಪ್ರಾಣಂ, ಅಕರ್ತಾ, ಅಭೋಕ್ತಾ ಮತ್ತು ಚಿನ್ಮಾತ್ರಂ ಇವೇ ಮೊದಲಾದ ಪ್ರಬಲ ಶ್ರುತಿವಾಕ್ಯಗಳ ಸಮೂಹವು.

---

**ಘಟವ ಬೆಳಗುವ ದೀಪವೆಂತಾ**
**ಘಟಕೆ ಭಿನ್ನವೆ ಆಗಿ ತೋರ್ಪುದೊ**
**ಸಟೆಯೆನಿಪ ಪುತ್ರಾದ್ಯನಾತ್ಮಗಳನು ಪ್ರಕಾಶಿಸುವ ।**
**ದಿಟವೆನಿಪ ಪ್ರತ್ಯಕ್ಪ್ರಕಾಶವು**
**ಸಟೆಯ ಪುತ್ರಾದಿಗಳ ದೆಸೆಯಿಂ**
**ಘಟಿಸುವದು ಬೇರೆಂದು ಪೇಳ್ವುದು ಪ್ರಬಲತರಯುಕ್ತಿ ॥ ॥೬೫॥**

**ತಾತ್ಪರ್ಯ:** ಮಡಕೆಯನ್ನು (ಘಟಾಕಾಶ) ಪ್ರಕಾಶಪಡಿಸುವ ದೀಪವು ಹೇಗೆ ಆ ಮಡಕೆಗಿಂತ ಬೇರೆಯಾಗಿ ತೋರುವುದೋ ಹಾಗೆ ಅಸತ್ಯರೂಪಗಳಾದ ಪುತ್ರಾದಿ ಅನಾತ್ಮಗಳನ್ನು ಬೆಳಗುವ ಒಳಗಣ ಆತ್ಮಸ್ವರೂಪವಾದ ಜ್ಞಾನವು ಬೇರೆಯಾಗಿಯೇ ಇರುವುದು. ಮಿಥ್ಯಾರೂಪವಾದ ಪುತ್ರಾದಿಗಳ ಶರೀರದಿಂದ (ಅನಾತ್ಮಗಳಿಂದ) ಜ್ಞಾನರೂಪಿ ಆತ್ಮನು (ಪ್ರತ್ಯಕ್ ಪ್ರಕಾಶವು) ಬೇರೆಯಾಗಿದ್ದಾನೆ ಎಂದು ಪ್ರಬಲತರವಾದ ಯುಕ್ತಿಗಳು (ಶ್ರುತಿ ವಾಕ್ಯಗಳು) ಹೇಳುತ್ತವೆ.

**ಶಬ್ದಾರ್ಥ:** ಪ್ರತ್ಯಕ್‌ಪ್ರಕಾಶವು=ಒಳಗಣ ಆತ್ಮಸ್ವರೂಪವಾದ ಜ್ಞಾನವು; * **ಘಟ**=ಮಡಕೆ (ಘಟಾಕಾಶ); * **ಸಟೆ**=ಮಿಥ್ಯೆ; * **ಘಟಿಸುವುದು**=ಉಂಟಾಗುವುದು; * **ದಿಟ**=ಸತ್ಯ

---

ಬ್ರಹ್ಮವೇತ್ತರು ತಮ್ಮ ತಾವೇ
ಬ್ರಹ್ಮವೆಂದೆನುವಾಗ ತಮ್ಮನು
ಬ್ರಹ್ಮರೂಪಿನೊಳರಿಯುತಿರ್ಪನುಭವವು ಕಾಣುವದು; ।
ಬ್ರಹ್ಮವೀಪರಿ ಪ್ರಬಲವಹ ಶ್ರುತಿ
ಸಮ್ಮತವು; ಯುಕ್ತ್ಯನುಭವಗಳಿಂ
ಪೆರ್ಮೆವಡೆದಿರೆ ಮಿಥ್ಯದಾರೋಪಗಳು ತೊಲಗುವವು ॥ ॥೬೬॥

**ತಾತ್ಪರ್ಯ:** ಬ್ರಹ್ಮವಿದ್ಯೆಯನ್ನು ಬಲ್ಲವರು ಸದಾ ತಮ್ಮನ್ನು ತಾವೇ ಬ್ರಹ್ಮ ರೂಪಿಗಳನ್ನಾಗಿಯೇ ತಿಳಿಯುತ್ತಿರುವುದು ಅನುಭವಸಿದ್ಧಸತ್ಯವಾಗಿದೆ. ಇದು 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂಬ ಪ್ರಬಲವಾದ ಶ್ರುತಿಪ್ರಮಾಣದಿಂದಲೂ ಸಿದ್ಧವಾಗಿದೆ. ಈ ಎರಡೂ ಆತ್ಮಸಮ್ಮತವಾದ ಸಿದ್ಧಾಂತಗಳಿಂದ ಪುತ್ರಾದಿ ಅನಾತ್ಮರೂಪಗಳೇ ಬ್ರಹ್ಮವೆಂಬ ಮಿಥ್ಯಾರೋಪದ ವಿಚಾರಗಳು ಕ್ರಮೇಣ ಮರೆಯಾಗುವುದೇ ಹೆಚ್ಚುಗಾರಿಕೆಯಾಗಿದೆ.

**ಶಬ್ದಾರ್ಥ:** ಬ್ರಹ್ಮವೇತ್ತರು=ಬ್ರಹ್ಮವನ್ನು ತಿಳಿದವರು; **ಪೆರ್ಮೆವಡೆದಿರೆ**=ಹೆಚ್ಚುಗಾರಿಕೆ ಹೊಂದಿರಲು; * **ಯುಕ್ತ್ಯನುಭವಗಳಿಂ**=ಸಿದ್ಧಾಂತದಿಂದಲೂ ಅನುಭವದಿಂದಲೂ; * **ಮಿಥ್ಯಾದಾರೋಪಗಳು** =ಸುಳ್ಳು ಸಿದ್ಧಾಂತದ ವಿಚಾರಗಳು.

---

**ಮಗನೆ ಶ್ರುತಿಯುಕ್ತ್ಯನುಭವಂಗಳ**
**ಬಗೆಯಲಾತ್ಮನು ಸಿದ್ಧನಾಗಿರೆ**
**ನಗೆಯಲಾ! ದುರ್ಬಲದ ಶ್ರುತಿಯುಕ್ತ್ಯನುಭವಗಳಿಂದ ।**
**ಮಗನು ಮೊದಲಹವಾತ್ಮನೆಂಬೀ**
**ಬಗೆಯಲಾರೋಪಿತವು; ವಾದಿಗ**
**ಳಿಗೆ ಪರಸ್ಪರ ತಮ್ಮೊಳಗೆ ಖಂಡಿತಗಳಾಗಿಹವು ॥ ॥೬೭॥**

**ತಾತ್ಪರ್ಯ:** ಮಗನಾದ ಶುಕನೆ ಕೇಳು, ಉಪನಿಷತ್ ವಾಕ್ಯಗಳಿಂದಲೂ, ಇತರ ಸಿದ್ಧಾಂತಗಳಿಂದಲೂ ಅನುಭವದಿಂದಲೂ, ವಿಚಾರ ಮಾಡಿದಾಗ ಆತ್ಮನು ಇಂಥವನೇ ಎಂದು ಪ್ರತಿಪಾದಿತವಾಗಿರುವಾಗ ದುರ್ಬಲವಾದ (ಸಮರ್ಥನೀಯವಲ್ಲದ) ಶ್ರುತಿ ಯುಕ್ತಿ ಅನುಭವಗಳಿಂದ ಪುತ್ರಾದಿಗಳನ್ನು (ಅನಾತ್ಮವಾದ ಶರೀರ ಇತ್ಯಾದಿಗಳನ್ನು) ಆತ್ಮನೆಂದು ಬಗೆಯುವುದು ನಗೆಪಾಟಲಿಗೆ ಈಡಾಗುವ ಸಂಗತಿಯಲ್ಲವೇ! ಆದ್ದರಿಂದ ಈ ಬಗೆಯ ತಾರ್ಕಿಕರು ಪರಸ್ಪರ ತಮ್ಮಲ್ಲಿಯೇ ಮಂಡಿಸುತ್ತಿರುವ ವಾದಗಳು ತಪ್ಪೆಂದು ತೋರಿಸಲ್ಪಟ್ಟಿವೆ.

**ಶಬ್ದಾರ್ಥ:** ಬಗೆಯಲು=ವಿಚಾರ ಮಾಡಿದರೆ; ಖಂಡಿತಗಳಾಗಿಹವು=ಕತ್ತರಿಸಲ್ಪಟ್ಟವು ಆಗಿರುವುವು; (ತಪ್ಪೆಂದು ತೋರಿಸಲ್ಪಟ್ಟಂಥವುಗಳಾಗಿರುವುವು); * ದುರ್ಬಲವಾದ=ಸಮರ್ಥನೀಯವಲ್ಲದ;

---

## ಶರೀರತ್ರಯ ವಿಭಾಗ (೬೮-೮೮)

**ಸ್ಥೂಲಸೂಕ್ಷ್ಮಪರಂಗಳೆಂದೇ**
**ಹೇಳುವರು ಮೂರೆಂದು ತನುಗಳ;**
**ಸ್ಥೂಲವವಯವಗೂಡಿ ತೋರ್ಪುದು ಮಾಂಸಮಯಪಿಂಡ; ।**
**ಕೇಳು ಶುಕಯೋಗೀಂದ್ರ, ಸೂಕ್ಷ್ಮವೆ**
**ಸ್ಥೂಲ ತಾನೆಂದೆಂಬ ಹಮ್ಮು; ನಿ**
**ರಾಳ ನಿರ್ಗುಣವಸ್ತು ಪರವೆಂದೆಂಬ ನಿಜದೇಹ ॥ ॥೬೮॥**

**ತಾತ್ಪರ್ಯ:** ದೇಹವನ್ನು (ಸುಟ್ಟು ಹೋಗುವ ವಸ್ತು) ಸ್ಥೂಲ, ಸೂಕ್ಷ್ಮ, ಪರ ಎಂದು ಮೂರು ವಿಧವಾಗಿ ಕವಿಯು ವಿಂಗಡಿಸಿದ್ದಾನೆ. ಮಾಂಸಮಯವಾದ ಪಿಂಡಾಕಾರದ ಅವಯವವೇ ಸ್ಥೂಲ ಶರೀರ. ಈ ದೇಹವನ್ನೇ ತಾನು ಎನ್ನುವ ಅಹಂಕಾರವೇ ಸೂಕ್ಷ್ಮ ಶರೀರ. ದೇಹವೆಂಬ ಮಾತು ಸ್ಥೂಲಕ್ಕೂ ಸೂಕ್ಷ್ಮಕ್ಕೂ ಹೊಂದುವುದೇ ಹೊರತು ಪರನಾದ ಆತ್ಮನಿಗಲ್ಲ. ಆದ್ದರಿಂದ ಆ ಪರನಾದ ಆತ್ಮನು ನಿರಾಳನೂ ನಿರ್ಗುಣವಸ್ತುವಾಗಿರುವುದೇ ಅವನ ನಿಜವಾದ ದೇಹವಾಗಿದೆ.

**ಶಬ್ದಾರ್ಥ:** ಮೂರೆಂದು ತನುಗಳ=ಶರೀರವನ್ನು ಮೂರು ಬಗೆಯಾಗಿ; ಹಮ್ಮು=ಅಹಂಕಾರ;

**ಟಿಪ್ಪಣಿ-೧:** ಈ ಪದ್ಯದಲ್ಲಿ ಮಾಂಸಮಯವಾದ ದೇಹವನ್ನು ಸ್ಥೂಲವೆಂದೂ ಆ ಮಾಂಸಮಯ ದೇಹವನ್ನು ತಾನೆನ್ನುವ ಅಹಂಕಾರವನ್ನು ಸೂಕ್ಷ್ಮವೆಂದೂ ಯಾವುದರ ಬೆಂಬಲದಿಂದ ಈ ಎರಡು ದೇಹಗಳಿಗೂ ಶಕ್ತಿಯುಂಟಾಗುವುದೋ ಆ ನಿರ್ಗುಣವಸ್ತುವಾದ ಆತ್ಮವನ್ನು ಪರವೆಂದೂ ಕವಿಯು ದೇಹಗಳನ್ನು ಮೂರಾಗಿ ವಿಂಗಡಿಸಿದ್ದಾನೆ. ದೇಹವೆಂದರೆ ಸುಟ್ಟು ಹೋಗುವ ವಸ್ತು ಎಂದರ್ಥ. ಆದ್ದರಿಂದ ದೇಹವೆಂಬ ಮಾತು ಸ್ಥೂಲಕ್ಕೂ, ಸೂಕ್ಷ್ಮಕ್ಕೂ ಹೊಂದುವುದೇ ಹೊರತು ಪರನಾದ ಆತ್ಮನಿಗಲ್ಲ. ಆತ್ಮನು ನಾಶವಿಲ್ಲದವನು. ಆದರೂ ಎರಡು ಶರೀರಗಳನ್ನೂ ವಿವೇಕದಿಂದ ಕಳೆಯುತ್ತಲೆ ಅವುಗಳಿಗೆ ಬೆಂಬಲನಾಗಿದ್ದು ಆತ್ಮನು ತಾನಾಗಿ ಸಿಕ್ಕುವುದರಿಂದ ಅವನನ್ನು ಮೂರನೇ ದೇಹವೆನ್ನುವುದು ಹಿಂದಿನವುಗಳ ಸಂಬಂಧದ ಬರೀ ವಾಸನೆಯ ಮಾತು.

ಹೀಗೆ ದೇಹಗಳೆರಡೇ ಎಂಬ ಅಭಿಪ್ರಾಯವನ್ನು ಇಲ್ಲಿಯೇ ಮುಂದೆ ೭-೧೫, ೮-೨೮, ೧೦-೨೨, ೧೦-೨೯, ಈ ಪದ್ಯಗಳಲ್ಲಿಯೂ ಉಲ್ಲೇಖಿಸಿರುವನು. ಆದರೆ ಕಳೆಯತಕ್ಕ ಶರೀರಗಳು ಸ್ಥೂಲವೆಂದೂ, ಸೂಕ್ಷ್ಮವೆಂದೂ ಎರಡೇ ಅಲ್ಲದೆ ಕಾರಣವೆಂದು ಇನ್ನೊಂದೂ ಉಂಟೆಂದು ದೇಹಗಳನ್ನು ಮೂರಾಗಿ ವಿಂಗಡಿಸುವುದೇ ಹೆಚ್ಚು ರೂಢಿ. ಈ ಅಭಿಪ್ರಾಯವನ್ನು ಕವಿಯು ೭-೨೨ರಲ್ಲಿ ತೋರಿಸಿದ್ದಾನೆ. ಸ್ಥೂಲ ಸೂಕ್ಷ್ಮ ಶರೀರಗಳ ಮತ್ತು ಎಲ್ಲ ಜಗತ್ತಿನ ಬೀಜರೂಪಾವಸ್ಥೆಯಾದ ಅವಿದ್ಯೆಯೇ ಮೂರನೇ ದೇಹ. ಇದು ಗಾಢ ನಿದ್ರೆಯಲ್ಲಿ ತಾನೇ ತಾನಾಗಿ ಕಾಣುವುದು. ಇದರ ವಿಷಯಕ್ಕೆ ಹಿಂದಿನ ೫೦ನೇ ಪದ್ಯ ನೋಡಿ.

ಸ್ಥೂಲ, ಸೂಕ್ಷ್ಮ ಶರೀರಗಳಿಂದುಂಟಾಗುವಷ್ಟು ಪ್ರತ್ಯಕ್ಷವಾದ ಹಾನಿಯು ಈ ಮೂರನೇ ದೇಹದಿಂದ ಎದ್ದು ಕಾಣುವುದಿಲ್ಲವಾದ್ದರಿಂದ ಇದನ್ನೊಂದು ದೇಹವೆಂದೆಣಿಸದೆ ಇರುವುದೂ ಉಂಟು. ಈ ಅಭಿಪ್ರಾಯಕ್ಕೆ ಈ ಕೆಳಗೆ ಬರೆಯುವ ಶ್ರೀಮಚ್ಛಂಕರ ಭಗವತ್ಪಾದರ ಭಾಷ್ಯ ಭಾಗವೂ ಬೆಂಬಲವಾಗಿದೆ.

**ಮನಃ ಪ್ರಚಾರೋಪಾದಿ ವಿಶೇಷಸಂಬಂಧಾದಿಂದ್ರಿಯಾರ್ಥಾನ್**
**ಗೃಹ್ಣನ್ಸ್ತದ್ವಿಶೇಷಾಪನ್ನೋ ಜೀವೋ ಜಾಗರ್ತಿ;**
**ತದ್ವಾಸನಾವಿಶಿಷ್ಟಃ ಸ್ವಪ್ನಾನ್‌ಪಶ್ಯನ್‌ಮನಶ್ಶಬ್ದವಾಚ್ಯೋಭವತಿ;**
**ಸ ಉಪಾಧಿದ್ವಯೋಪರಮೇ ಸುಷುಪ್ತಾವಸ್ಥಾಯಾಮುಪಾಧಿಕೃತ**
**ವಿಶೇಷಾಭಾವಾತ್‌ಸ್ವಾತ್ಮನಿ ಪ್ರಲೀನ ಇವ**

(ಮನಃ ಪ್ರಚಾರದ ಉಪಾಧಿವಿಶೇಷದ ಸಂಬಂಧದ ವಿಷಯಗಳನ್ನು ಗ್ರಹಣಮಾಡುವ ಜೀವನು ಎಚ್ಚರದವನೆನಿಸುವನು; ಆ ವಾಸನೆಯಿಂದ ಕನಸುಗಾಣುವವನು ಮನಶ್ಶಬ್ದವಾಚ್ಯ ನಾಗುವನು; ಆ ಎರಡು ಉಪಾಧಿಗಳೂ ಕಳೆದು ಹೋಗಲಾಗಿ ಗಾಢ ನಿದ್ರೆಯಲ್ಲಿ ಉಪಾಧಿಕೃತವಾದ ಯಾವ ವಿಶೇಷವೂ ಇಲ್ಲದ್ದರಿಂದ ಅವನು ಆಗ ತನ್ನ ಆತ್ಮ ಸ್ವರೂಪದಲ್ಲಿ ಲಯವಾದ ಹಾಗೆ)

ರೂಢಿಯಂತೆ ಎಚ್ಚರದಲ್ಲಿ ಮೂರು ಬಗೆಗಳೂ ಇರುವುವು; ಕನಸಿನಲ್ಲಿ ಸ್ಥೂಲ ಶರೀರದ ಹೊರತು ಉಳಿದ ಎರಡೂ ಇರುವುವು. ನಿದ್ರೆಯಲ್ಲಿ ಕಾರಣ ಶರೀರ ಒಂದೇ ಇರುವುದು. ನಿದ್ರೆಯಲ್ಲಿ ಹೀಗೆ ಕಾರಣಶರೀರವೆಂಬ ಉಪಾಧಿ ಇದ್ದರೂ ಶ್ರೀಮದಾಚಾರ್ಯರು ಆಗ ಉಪಾಧಿಕೃತವಾದ ಯಾವ ವಿಶೇಷವೂ ಇಲ್ಲವೆಂದು ಬರೆದಿರುವುದಕ್ಕೆ ಮೂಲದಲ್ಲಿ (ಬೃಹದಾರಣ್ಯಕ ೪-೩-೨೧) ಆ ಸ್ಥಿತಿಯನ್ನು ಅಭಯವೆಂದು ಕರೆದಿರುವುದೇ ಆಧಾರ. ಆ ಅಭಯವೆಂಬ ಮಾತಿಗೆ ಭಯಪ್ರದವಾದ ಅವಿದ್ಯಾಕಾರ್ಯವಿಲ್ಲದ್ದು ಮಾತ್ರವೆಂದು ಸುಪ್ರಸಿದ್ಧರಾದ ಅನೇಕ ವ್ಯಾಖ್ಯಾನಕಾರರು ತಾತ್ಪರ್ಯವನ್ನು ತಿಳಿಸಿದ್ದಾರೆ. ಅದನ್ನು ನೋಡಿದರೆ ಮುಕ್ತಿಯ ಸ್ವರೂಪವನ್ನು ಮನಸ್ಸಿನಲ್ಲಿ ಒಡೆದು ಮೂಡುವಂತೆ ಮಾಡಬೇಕೆಂದು ಅದಕ್ಕೆ ನಿದ್ರೆಯ ಹೋಲಿಕೆಯನ್ನು

ಕೊಟ್ಟು ಹೇಳುವ ಆ ಸಡಗರದಲ್ಲಿ ಶ್ರುತಿಯು ತನ್ನ ಉದ್ದೇಶವನ್ನು ಸಾಧಿಸುವುದಕ್ಕಾಗಿ ಆ ನಿದ್ರೆಯಲ್ಲಿರುವ ಅವಿದ್ಯೆಯ ಕಾರಣ ರೂಪವನ್ನು ಕಡೆಗಂಡು, ದೊಡ್ಡವರಿಗೆ ಹೋಲಿಸುವಾಗ ಸಾಮಾನ್ಯರ ದೋಷವನ್ನು ಮರೆಗೆ ಇರಿಸುವಂತೆ, ಆ ದೋಷವನ್ನು ಮರೆಗಿಟ್ಟಂತೆ ಕಾಣುತ್ತದೆ. ಇಷ್ಟೇ ಹೊರತು ನಿದ್ರೆಯಲ್ಲಿ ಅವಿದ್ಯೆಯ ಕಾರಣರೂಪವಿರುವುದೆಂದು ಶ್ರುತಿಯೇ ಅನೇಕ ಕಡೆಗಳಲ್ಲಿ ಘಂಟಾಘೋಷವಾಗಿ ಹೇಳಿರುವುದರಿಂದ ರೂಢಿಯಂತೆ ನಿದ್ರೆಯಲ್ಲಿ ಅವಿದ್ಯೆಯೆಂಬ ಕಾರಣಶರೀರವಿರುವುದೆಂದೇ ಅರಿಯಬೇಕು.

**ಶಬ್ದಾರ್ಥ:** * ನಿರ್ಗುಣ=ಸತ್ತ್ವರಜಸ್ತಮೋಗುಣಗಳಿಲ್ಲದ ಪರಬ್ರಹ್ಮ (ಪಪ ಪುಟ-೨೧೫); ಯಾವ ಧರ್ಮವೂ ಇಲ್ಲದ ಆತ್ಮ (ಈಶ ೧೫); * ನಿರಾಳ=ಅನೂಹ್ಯವಾದ; ನಿರ್ಮಲವಾದ; * ಸ್ಥೂಲ ದೇಹ=ಮಾಂಸಮಯವಾದ ದೇಹ; * ಸೂಕ್ಷ್ಮ ದೇಹ=ಮಾಂಸಮಯವಾದ ದೇಹವನ್ನು ತಾನೆನ್ನುವ ಅಹಂಕಾರ; * ಪರದೇಹ=ಸ್ಥೂಲ, ಸೂಕ್ಷ್ಮ ದೇಹಗಳಿಗೆ ಶಕ್ತಿಯುಂಟುಮಾಡುವ ನಿರ್ಗುಣವಸ್ತುವಾದ ಆತ್ಮ;

---

**ಸ್ಥೂಲತನು ಸುಖದುಃಖದನುಭವ**
**ಕಾಲಯವು; ಘಟದಂತೆ ಜಡವಿದು;**
**ಕಾಲಕರ್ಮಾಧೀನವಾಗಿಹುದನ್ನಮಯ ಕೋಶ; ।**
**ಬಾಲ್ಯಯೌವನವಾರ್ಧಕಂಗಳ**
**ತಾಳಿ ಬಹುವಿಧವಾಗಿ ತೋರ್ಪುದು;**
**ಕೇಳು ಕಡೆಯಲಿ ನಾಯಿನರಿಕಿಚ್ಚಿಂಗೆ ಗುರಿಯಹುದು ॥ ॥೬೯॥**

**ತಾತ್ಪರ್ಯ:** ಸ್ಥೂಲ ಶರೀರವು ಸುಖದುಃಖಗಳನ್ನು ಅನುಭವಿಸಲು ನೆಲೆಯಾಗಿರುವುದು. ಅನ್ನಮಯವಾದ ಈ ಕೋಶವಾದ ಸ್ಥೂಲ ಶರೀರವು ಮಡಕೆಯ ಹಾಗೆ ಚೈತನ್ಯ ಹೀನವಾಗಿದೆ. ಸಾವಿಗೂ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಕ್ಕೂ ಒಳಗಾಗಿಹುದು. ಎಳೆತನ, ಹರೆಯ, ಮುಪ್ಪುಗಳೆಂಬ ಅವಸ್ಥೆಗಳಿಗೆ ಒಳಗಾಗಿ ಹಲವು ರೂಪಗಳನು ತಳೆಯುತ್ತದೆ. ಅವಸಾನ ಉಂಟಾದಾಗ ನಾಯಿ ನರಿಗಳು ಕಿತ್ತು ತಿನ್ನುತ್ತವೆ ಇಲ್ಲವೆ ಕಿಚ್ಚಿಗೆ ಒಳಗಾಗಿ ಸುಟ್ಟು ಹೋಗುತ್ತದೆ. ಹೀಗೆ ಜೀವನು ಹೋದ ಮೇಲೆ ಸ್ಥೂಲ ಶರೀರ ವ್ಯರ್ಥವೆನಿಸುತ್ತದೆ.

**ಶಬ್ದಾರ್ಥ:** ಕಾಲಕರ್ಮಾಧೀನವು=ಸಾವಿಗೂ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಕ್ಕೂ ಒಳಗಾಗಿರುವುದು * ಸ್ಥೂಲ ಶರೀರ=ಅನ್ನಮಯ ಕೋಶ, ಇಂದ್ರಿಯಗಳಿಗೆ ಗೋಚರವಾಗುವ ಶರೀರ (ಈಶ ೧೯) ಕಣ್ಣಿಗೆ ಕಾಣಿಸುವ ದೇಹ; * ಘಟ=ಮಡಕೆ, ಗಡಿಗೆ; * ಜಡ=ಚೈತನ್ಯ ಹೀನ; ಕಿಚ್ಚಿಂಗೆ ಗುರಿಯಹುದು=ಬೆಂಕಿಯಲ್ಲಿ ಸುಟ್ಟುಹೋಗುತ್ತದೆ; ದಹನ; * ಬಾಲ್ಯ=ಎಳೆಯತನ; ಯೌವನ=ಹರೆಯ; * ವಾರ್ಧಕ=ಮುಪ್ಪು;

---

**ಮಗನೆ, ಸೂಕ್ಷ್ಮಶರೀರವನೆ ತಾ**
**ಬಗೆಯುತಲಿ ತಾನೆಂದು, ಕರ್ಮದಿ**
**ನಗಣಿತಗಳಹ ಜನ್ಮಗಳ ಪಡೆದಧಿಕಪುಣ್ಯದಲಿ ।**

**ನೆಗೆದು ಸ್ವರ್ಗವನೈದಿ, ಪಾಪದಿ**
**ಹುಗಿದು ನರಕದೊಳಾಳಿ ತಿರುಗುವ;**
**ಬಿಗಿದು ರಾಟಾಳದಲಿ ಕಟ್ಟಿದ ಭಾಂಡದಂದದಲಿ ॥ ॥೭೦॥**

**ತಾತ್ಪರ್ಯ:** ಶುಕನೆ ಕೇಳು, ಇನ್ನು ಜೀವಿಯು ಸೂಕ್ಷ್ಮಶರೀರವನ್ನು ನಾನೇ ಎಂದು ತಿಳಿಯುತ್ತಾ ಪಾಪಪುಣ್ಯಕರ್ಮಗಳನ್ನು ಮಾಡುತ್ತಾ ಅಸಂಖ್ಯಾತ ಜನ್ಮಗಳನ್ನು ತಾಳುತ್ತಾನೆ. ಅಧಿಕಪುಣ್ಯಕರ್ಮಗಳನ್ನು ಮಾಡಿದಾಗ ಮೇಲಕ್ಕೆ ಹಾರಿ ಸ್ವರ್ಗ ಸುಖ ಅನುಭವಿಸುತ್ತಾನೆ. ಪಾಪಕರ್ಮಗಳಲ್ಲಿ ಹೂತುಕೊಂಡಾಗ ನರಕದಲ್ಲಿ ಬಿದ್ದು ಅಲೆದಾಡುತ್ತಾನೆ. ಹೀಗೆ ರಾಟಾಳ (ನೀರೆತ್ತುವ ಚಕ್ರದ ಏತ) ಯಂತ್ರದಲ್ಲಿ ಬಿಗಿದ ಮಡಕೆಯಂತೆ ಮೇಲಕ್ಕೂ ಕೆಳಕ್ಕೂ ತಿರುಗುತ್ತಿರುತ್ತಾನೆ.

**ಶಬ್ದಾರ್ಥ:** * **ಸೂಕ್ಷ್ಮ** ಶರೀರ=ಕರಣಗಳಿಂದಾದ ಶರೀರ; ಲಿಂಗ ಶರೀರ; ದಶೇಂದ್ರಿಯ, ಪಂಚ ಪ್ರಾಣ, ಮನಸ್ಸು, ಬುದ್ಧಿ=೧೭ ಸೇರಿ ಸೂಕ್ಷ್ಮಶರೀರವೆನಿಸಿಕೊಳ್ಳುತ್ತದೆ (ಪಪ ಪುಟ-೪೧೮); * **ಅಗಣಿತಗಳಹ**=ಅಸಂಖ್ಯಾತವಾದ; **ಹುಗಿದು**=ಹೂತುಕೊಂಡು; **ತಿರುಗುವ**=ತಿರುಗುವನು; **ಭಾಂಡ**=ಮಡಕೆ, ಗಡಿಗೆ, ಘಟ

**ಟಿಪ್ಪಣಿ-೧:** ರಾಟಾಳ=ಯಂತ್ರದ ಮೇಲೇರಿದ ಗಡಿಗೆಯು ಕೆಳಕ್ಕೆ ಹೋಗುತ್ತಲೂ ಮೇಲಕ್ಕೆ ಬರುತ್ತಲೂ ಇರುವುದು;

**ಟಿಪ್ಪಣಿ-೨:** ರಾಟಾಳ=ಬಾವಿಯಿಂದ ನೀರೆತ್ತುವ ಗಾಲಿಯ ಯಂತ್ರ (ಸಂಕನಿ-ಕಸಾಪ) (ರಾಟಣ, ರಾಟಳ, ರಾಟಾಳ ಎಂಬ ಪದ ರೂಪಗಳಿವೆ).

---

**ಏಸು ಕಲ್ಪಗಳಾದೊಡೆಯು, ಮಗು**
**ಳೇಸು ಬ್ರಹ್ಮಾಂಡಗಳು ಪುಟ್ಟಿದೊ**
**ಡೇಸು ಬ್ರಹ್ಮರು ಮಡಿದೊಡೆಯು ತಿಳಿ ಲಿಂಗದೇಹಕ್ಕೆ ।**
**ನಾಶವಿಲ್ಲೆಲೆ ಮಗನೆ, ಪಂಚ**
**ಕ್ಲೇಶಪಾಶದಿ ಬಿಗಿವಡೆದು, ಯಮ**
**ಪಾಶಕೊಳಗಾಗಿರ್ಪುದೆಂದಿಗು ಮೋಕ್ಷವಿಲ್ಲೆಂದ ॥ ॥೭೧॥**

**ತಾತ್ಪರ್ಯ:** ಎಷ್ಟೊಂದು ಕಲ್ಪಗಳ ಕಾಲಕಳೆದರೂ ಮತ್ತೆ ಎಷ್ಟೆಷ್ಟು ಬ್ರಹ್ಮಾಂಡಗಳಲ್ಲಿ ಜನಿಸಿದರೂ ಪ್ರಳಯವಾಗಿ ಎಷ್ಟೋಜನ ಬ್ರಹ್ಮರು ಆಗಿಹೋದರೂ ಈ ಲಿಂಗ ಶರೀರಕ್ಕೆ ನಾಶವಿಲ್ಲ ಎಂದು ಶುಕನೆ ಅರ್ಥಮಾಡಿಕೋ. ಪಂಚಕ್ಲೇಶಗಳೆಂಬ ಕುಣಿಕೆ ಹಗ್ಗದಿಂದ ಬಂಧಿಸಲ್ಪಟ್ಟು ಈ ಶರೀರವು ಯಮನ ಹಿಡಿತಕ್ಕೆ ಸದಾ ಒಳಗಾಗಿರುತ್ತದೆ. ಆದ್ದರಿಂದ ಈ ಕರ್ಮದೇಹಕ್ಕೆ ಎಂದೆಂದಿಗೂ ಮೋಕ್ಷವಿಲ್ಲ ತಿಳಿ.

**ಶಬ್ದಾರ್ಥ:** * **ಕಲ್ಪ**=ಬ್ರಹ್ಮನ ಒಂದು ದಿವಸ ಸಹಸ್ರಯುಗಗಳ ಕಾಲಾವಧಿ (ಸಂಕನಿ-ಕಸಾಪ); ೪೩೨ ಕೋಟಿ ಮನುಷ್ಯವರ್ಷಗಳಿಗೆ ಅಹೋರಾತ್ರರೂಪವಾದ ಒಂದುದಿನ ಇದನ್ನೇ ಕಲ್ಪವೆನ್ನುತ್ತಾರೆ.

(ಅಮರ ಕೋಶ, ರಂಗನಾಥಶರ್ಮ, ಪುಟ-೪೮೮ ಪರಿಶಿಷ್ಟ); ಮೋಕ್ಷ=ಬಿಡುಗಡೆ; ಏಸು =ಎಷ್ಟೊಂದು, ಅನೇಕ; ಪಾಶ=ಕುಣಿಕೆ ಹಗ್ಗ;

ಟಿಪ್ಪಣಿ: ಪಂಚಕ್ಲೇಶ-ಅಧ್ಯಾಯ ೧ ಪದ್ಯ ೨೨ರ ಟಿಪ್ಪಣಿ ನೋಡಿ.

---

ಈ ಪರಿಯಲೀ ಸೂಕ್ಷ್ಮತನು ಬಹು
ಪಾಪಪುಣ್ಯದ ಫಲದಿ ಸಂಸೃತಿ
ತಾಪದಲಿ ಬೆದಬೆದನೆ ಬೇಯುತಲಿರಲು, ವೈರಾಗ್ಯ ।
ಶ್ರೀಪತಿಯನುಗ್ರಹದಲುದಿಸಲು,
ಕಾಪಥವ ಪರಿಹರಿಸಿ, ಗುರುಕರು
ಣಾಪಯೋಧಿಯ ಪಡೆದು, ಜೀವನ್ಮುಕ್ತನಾಗಿಹನು ॥ ॥೭೨॥

ತಾತ್ಪರ್ಯ: ಈ ರೀತಿಯಲ್ಲಿ ಸೂಕ್ಷ್ಮಶರೀರವು ಅನೇಕ ಪಾಪಪುಣ್ಯಗಳ ಪರಿಣಾಮವಾಗಿ ಈ ಸಂಸಾರವೆಂಬ ಕಿಚ್ಚಿನಲ್ಲಿ ಬೆದಬೆದನೆ ಬೆಂದುಹೋಗುತ್ತಿರುವಾಗ ಶ್ರೀಮನ್ನಾರಾಯಣನ ಕೃಪೆಯಿಂದ ವೈರಾಗ್ಯಭಾವವು ಹುಟ್ಟಿದರೆ ಗುರುವಿನ ಅಪಾರಕರುಣೆಗೆ ಒಳಗಾಗಿ, ದೇಹಾದಿಗಳು ನಾನೆಂದು ತಿಳಿದು ಲೌಕಿಕದಲ್ಲಿ ಆಸಕ್ತನಾಗಿ ಕೆಟ್ಟಹಾದಿಯಲ್ಲಿ ಹೋಗುವುದನ್ನು ಬಿಟ್ಟು ಜೀವನ್ಮುಕ್ತನಾಗುತ್ತಾನೆ. (ಬದುಕಿರುವಾಗಲೆ ಮೋಕ್ಷಸುಖವನ್ನು ಅನುಭವಿಸುತ್ತಾನೆ.)

ಶಬ್ದಾರ್ಥ: * ಸಂಸೃತಿ=ಸಂಸಾರ; * ತಾಪದಲಿ=ಕಿಚ್ಚಿನಲಿ; * ಬೆದಬೆದನೆ=ಕೊತಕೊತನೆ; * ಬೇಯುತಿರಲು=ಕುದಿಯುತ್ತಿರಲು; * ಶ್ರೀಪತಿಯ=ಶ್ರೀಮನ್ನಾರಾಯಣನ; ಕಾಪಥವ=(ದೇಹಾದಿಗಳೇ ನಾನೆಂದು ತಿಳಿದು ವ್ಯವಹಾರದಲ್ಲಿ ಆಸಕ್ತನಾಗುವಂಥ) ಕೆಟ್ಟ ಹಾದಿಯನ್ನು; * ಗುರುಕರುಣಾ ಪಯೋಧಿಯ =ಅಪಾರ ಗುರುಅನುಗ್ರಹವನ್ನು; * ಕರುಣಾಪಯೋಧಿ=ಕರುಣಾ ಸಾಗರ; ಜೀವನ್ಮುಕ್ತನು=ಬದುಕಿರುವಾಗಲೇ ಮೋಕ್ಷಸುಖವನ್ನನುಭವಿಸುವವನು.

---

ಸ್ಥೂಲಸೂಕ್ಷ್ಮಗಳೆರಡು ಮಾಯೆಯು;
ಮೂಲಭೂತಮದೊಂದು ಪರವೇ;
ಕೇಳದೇ ತಾ ಸಾಕ್ಷಿಚೈತನ್ಯಾತ್ಮನೆನಿಸುವದು; ।
ಬಾಲಕನೆ ನೀನೆರಡುತನುವಿನ
ಮೇಲಣಭಿಮಾನವನು ಬಿಟ್ಟು, ನಿ
ರಾಳ ನಿಜ ನೀನೆಂದು ಚಿಂತಿಸುತಿರ್ಪುದನವರತ ॥ ॥೭೩॥

ತಾತ್ಪರ್ಯ: ಸ್ಥೂಲಶರೀರ, ಸೂಕ್ಷ್ಮಶರೀರಗಳೆರಡೂ ಮಾಯಾಸ್ವರೂಪದವು (ಅವಿದ್ಯಾ ಸಂಬಂಧವುಳ್ಳದ್ದು). ಪರದೇಹವೇ ಮೂಲಭೂತಸ್ವರೂಪದ್ದು. ಅದು ಸಾಕ್ಷಿಚೈತನ್ಯಾತ್ಮ ಸ್ವರೂಪವಾಗಿರುವುದು ನಿನಗೆ ತಿಳಿಯದೇ? ಶುಕನೆ ಕೇಳು, ಸ್ಥೂಲ, ಸೂಕ್ಷ್ಮ ಶರೀರಗಳ ಮೇಲಿನ ಅಭಿಮಾನವನ್ನು ತ್ಯಜಿಸಿ ಎರಡು ದೇಹಗಳಿಗಿಂತ ಮಿಗಿಲಾದ

ಪರಶರೀರವೆಂಬ ನಿರಾಳ ನಿಜಸ್ವರೂಪದ ಬ್ರಹ್ಮವು ನೀನೆಂದು ಸದಾ ಚಿಂತಿಸಿದರೆ ಜೀವನ್ಮುಕ್ತನಾಗುವೆ.

**ಶಬ್ದಾರ್ಥ:** * ಮಾಯೆಯ=ಅವಿದ್ಯಾ ಸಂಬಂಧವುಳ್ಳದ್ದು; * ಎರಡು ತನುವಿನ=ಸ್ಥೂಲಸೂಕ್ಷ್ಮ ಶರೀರಗಳ; * ಅನವರತ=ಸದಾ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಪ್ರಾಣಮನವಿಜ್ಞಾನಕೋಶ**
**ಶ್ರೇಣಿಯೆನಿಸಿದನಾದ್ಯವಿದ್ಯಾ**
**ಮಾನದಿಂ ಕಲ್ಪಿತದಿ ಮೆರೆವೀ ಲಿಂಗದೇಹವನು ।**
**ಮಾಣದಿದಿರಿಟ್ಟದರ ವಿಕೃತಿಯ**
**ಕಾಣುತಿಹ ತತ್ಸಾಕ್ಷಿಯೇ ನಿ**
**ರ್ವಾಣ ಸರ್ವನಿಯಂತೃವದು ನೀನೆಂದು ನಿಶ್ಚಯಿಸು ॥ ॥೭೪॥**

**ತಾತ್ಪರ್ಯ:** ಪ್ರಾಣಮಯಕೋಶ, ಮನೋಮಯಕೋಶ, ಅನ್ನಮಯಕೋಶ, ಆನಂದಮಯಕೋಶ, ವಿಜ್ಞಾನಮಯಕೋಶಗಳೆಂಬ ಐದುಕೋಶಗಳು ಅವಿದ್ಯೆಯೆಂದು ಅಳತೆಯಿಂದ ರೂಪುಗೊಂಡಿರುವ ಲಿಂಗಶರೀರವಾಗಿದೆ. ಈ ಸೂಕ್ಷ್ಮದೇಹವನ್ನು ತನ್ನ ಹೊರಗಣದು ಎಂದು ತಿಳಿದು ಅದರಿಂದ ಬೇರೆಯಾಗಿ ಅದರ ವಿಕಾರಗಳನ್ನು ವೀಕ್ಷಿಸುತ್ತಾ ಸಾಕ್ಷಿಯಾಗಿರುವವನೇ, ಸ್ವಯಂ ಪ್ರಕಾಶನೂ, ಮೋಕ್ಷ ಸಾಮ್ರಾಜ್ಯ ನಿಯಂತ್ರಕನೂ ಆದ ಪರಬ್ರಹ್ಮನು. ಆ ಪರಬ್ರಹ್ಮನೇ ನೀನೆಂದು ದೃಢವಾಗಿ ತಿಳಿ.

**ಶಬ್ದಾರ್ಥ:** ಕಲ್ಪಿತದಿ ಮೆರೆವ=ಮಾಯೆಯಿಂದ ಕಾಣಿಸಿಕೊಳ್ಳುವ; ಅವಿದ್ಯಾಮಾನದಿಂ =(ಅವಿದ್ಯೆಯೆಂಬ ಅಳತೆಯಿಂದ); ಇದಿರಿಟ್ಟು=ಸೂಕ್ಷ್ಮ ದೇಹವನ್ನು ತನ್ನ ಹೊರಗಣದೆಂದು ಪ್ರಮಾಣದಿಂದ ತಿಳಿದು ತಾನು ಅದಕ್ಕಿಂತ ಬೇರೆಯಾಗಿ; ಸರ್ವನಿಯಂತೃ=ಎಲ್ಲದರ ಮೇಲೆಯೂ ತನ್ನ ಅಧಿಕಾರವನ್ನು ನಡೆಸುವಂಥದ್ದು;

---

**ಮಗನೆ ತಿಲದೊಳು ತೈಲವನು, ಕಾ**
**ಷ್ಠಗಳೊಳಗ್ನಿಯ, ಕ್ಷೀರದೊಳು ಮಿಗೆ**
**ಸೊಗಸುವಾಜ್ಯವ, ಸಾಧಿಸುವ ತೆರದಂತೆ ತತ್ತ್ವಗಳ ।**
**ತೆಗೆತೆಗೆದು ಬೇರ್ಪಡಿಸಿ ನೋಡಲು,**
**ಮಿಗಿಲೆನಿಸಿ ತೋರ್ಪಡುತಲಿಹ ಚಿ**
**ದ್ಗಗನವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ॥೭೫॥**

**ತಾತ್ಪರ್ಯ:** ಶ್ರೀ ಶುಕನೇ ಕೇಳು, ಎಳ್ಳಿನಿಂದ ಎಣ್ಣೆಯನ್ನು ಕಟ್ಟಿಗೆಯಿಂದ, ಬೆಂಕಿಯನ್ನು (ಅರಣಿ) ಹಾಲಿನಿಂದ ರುಚಿಕರವಾದ ತುಪ್ಪವನ್ನು ಮಥನ ಮಾಡಿ ಬೇರ್ಪಡಿಸುವ

ಹಾಗೆ ಪಂಚಕೋಶ ತತ್ವಗಳು ಇತ್ಯಾದಿಗಳನ್ನು ಪ್ರತ್ಯೇಕಿಸಿ ನೋಡಿದಾಗ, ಅತಿಶಯವಾಗಿ ಕಾಣುವ ಕೊನೆಯಲ್ಲಿ ಉಳಿದಂಥ ಚಿದಾಕಾಶವೇ ನೀನಾಗಿರುವೆಯೆಂದು ನಿನ್ನೊಳಗಿರುವವನು ಚಿತ್ಸ್ವರೂಪಿ ಪರಬ್ರಹ್ಮನೆಂದು ನಿಶ್ಚಯವಾಗಿ ತಿಳಿ.

**ಶಬ್ದಾರ್ಥ:** * ತಿಲ=ಎಳ್ಳು; * ತೈಲ=ಎಣ್ಣೆ; * ಕಾಷ್ಠ=ಕಟ್ಟಿಗೆ; * ಕ್ಷೀರ=ಹಾಲು; * ಸಾಧಿಸುವತೆರ=ಮಥನಮಾಡಿ ಬೇರ್ಪಡಿಸು;

**ಟಿಪ್ಪಣಿ–೧:** * ಚಿದ್ಗಗನ–ಚಿದಾಕಾಶ; ಜ್ಞಾನರೂಪಿ ಭಗವಂತ ಆತ್ಮನು ತನ್ನ ಸಹಜಾವಸ್ಥೆಯಾದ ತುರೀಯದಲ್ಲಿ ಚಿತ್ಸ್ವರೂಪನಾಗಿರುತ್ತಾನೆ.

**ಟಿಪ್ಪಣಿ–೨:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಟಿಪ್ಪಣಿ, ಶಬ್ದಾರ್ಥ ಅನುವಾದಕನದು.

---

**ಸರಕು ತುಂಬಿದ ಮನೆಯನೆಲ್ಲವ**
**ತೆರವುಮಾಡುತ ತೆಗೆಯೆ ಬರಿಯಂ**
**ಬರವೆ ತುಂಬಿಹ ತೆರದಿ, ತನುವಿನೊಳಿರ್ದ ತತ್ತ್ವಗಳ ।**
**ಹೊರಗೆಳೆಯಲೊಂದೊಂದನವ ಮಿ**
**ಕ್ಕಿರೆ ನಿರಾಕರಿಸಲ್ಕೆ ಬಾರದ**
**ಪರತರಚಿದಾಕಾಶವೇ ನೀನೆಂದು ನಿಶ್ಚಯಿಸು ॥ ॥೭೬॥**

**ತಾತ್ಪರ್ಯ:** ಸಾಮಾನು ಸರಂಜಾಮು ತುಂಬಿರುವ ಮನೆಯನ್ನು ಖಾಲಿ ಮಾಡುವಾಗ ಒಂದೊಂದಾಗಿ ಎಲ್ಲ ಪದಾರ್ಥಗಳನ್ನು ಹೊರತೆಗೆದ ಮೇಲೆ ಆ ಮನೆಯ ತುಂಬ ಆಕಾಶವೇ (ಬಯಲ ರೂಪಿ ಚೈತನ್ಯ) ಉಳಿಯುವಂತೆ ಶರೀರದೊಳಗಿನ ತತ್ತ್ವಗಳೆಲ್ಲವನ್ನೂ ಒಂದೊಂದಾಗಿ ಹೊರತೆಗೆದಾಗ ಅಲ್ಲಿ ಉಳಿಯುವ ಕಳೆಯಲಾಗದ, ಶ್ರೇಷ್ಠವಾದ ಚಿದಾಕಾಶವೆ (ಬಯಲಿನಂತೆ ವ್ಯಾಪಕವಾಗಿ ಸೂಕ್ಷ್ಮವಾಗಿ ನಿರ್ಲೇಪನಾಗಿರುವ ಚೈತನ್ಯ) ನೀನಾಗಿರುವೆ ಎಂದು ನಿರ್ಧರಿಸು.

**ಶಬ್ದಾರ್ಥ:** ಹೊರಗೆಳೆಯಲು=ತಾನಲ್ಲವೆಂದು ಬೇರ್ಪಡಿಸಲಾಗಿ; ಚಿದಾಕಾಶ=ಬಯಲಿನಂತೆ ವ್ಯಾಪಕವಾಗಿ ಸೂಕ್ಷ್ಮವಾಗಿ; ನಿರ್ಲೇಪವಾಗಿರುವ ಚೈತನ್ಯ; * ಮಿಕ್ಕಿರೆ=ಉಳಿಯುವ; * ನಿರಾಕರಿಸಲ್ಕೆ ಬಾರದ=ಕಳೆಯಲಾಗದ; * ಪರತರ=ಶ್ರೇಷ್ಠತರವಾದ;

---

**ದೇಹವೇ ದೀವಿಗೆಯ ಕಂಬವ**
**ದಾ· ಹಣತೆಯೇ ಬಾಹ್ಯಕರಣಗ**
**ಳೂಹಿಸಲು ಪ್ರಾಣಾದಿವಾಯುವೆ ತೈಲದಂತದಕೆ; ।**
**ಗಾಹುಗತಕದ ಸೂಕ್ಷ್ಮತನುವೇ**
**ಮೂಹುರಿಯದಹ ವರ್ತಿಯಲ್ಲಿಯ**
**ದೇಹಿಯೇ ಚಿದ್ದೀಪವದು ನೀನೆಂದು ನಿಶ್ಚಯಿಸು ॥ ॥೭೭॥**

**ತಾತ್ಪರ್ಯ:** ರೂಪಕ ಅಲಂಕಾರದ ಮೂಲಕ ಈ ಪದ್ಯದಲ್ಲಿ ಚಿತ್ ಸ್ವರೂಪವನ್ನು ಕವಿ ತಿಳಿಸಿದ್ದಾನೆ. ಅನ್ನಮಯ ಕೋಶವಾದ ಈ ಶರೀರವೆ ಒಂದು ದೀಪದ ಕಂಬ. ಹೊರಗಿನ ಇಂದ್ರಿಯಗಳೇ ಹಣತೆ (ಎಣ್ಣೆಯ ಬಟ್ಟಲು) ಪ್ರಾಣ, ಅಪಾನ, ಸಮಾನ, ವ್ಯಾನ, ಉದಾನಗಳೆಂಬ ಪಂಚ ಪ್ರಾಣ (ವಾಯು)ಗಳೇ ಬಟ್ಟಲಿನ ಎಣ್ಣೆ. ಕಂಡೂ ಕಾಣದ ಹಾಗೆ (ಇಲ್ಲದೆ ಇರುವುದು ಇದ್ದ ಹಾಗೆ ಕಾಣುವಂತೆ) ಇರುವ ಸೂಕ್ಷ್ಮ ಶರೀರವೇ ಸತ್ತ್ವ ರಜತಮಗಳೆಂಬ ಮೂರು ಹುರಿಗಳಿಂದ ಹೊಸೆದಿರುವುದೇ ಬತ್ತಿ. ಅದರಲ್ಲಿ ದೇಹಕ್ಕೆ ಸ್ವಾಮಿಯಾಗಿ ಒಳಗಿರುವ ಬರಿ ಅರಿವಿನ ರೂಪವಾಗಿರುವ ಚಿತ್ ಎಂಬುದೇ ದೀಪ. ಆ ದೀಪವೇ ನೀನು ಎಂದು ತಿಳಿ.

**ಶಬ್ದಾರ್ಥ: ಗಾಹುಗತಕದ**=ಇಲ್ಲದೆ ಇರುವುದು ಇದ್ದಹಾಗೆ ಕಾಣುವಂಥ; **ಮೂಹುರಿ+ಅದು +ಅಹ**=ಸತ್ತ್ವ, ರಜ, ತಮ ಎಂಬ ಮೂರು ಗುಣಗಳಿಂದ ಹುರಿಗೊಂಡಿರುವಂಥ; **ವರ್ತಿ**=ಬತ್ತಿ; **ದೇಹಿಯೇ**=ದೇಹಕ್ಕೆ ಸ್ವಾಮಿಯಾಗಿ ಒಳಗೆ ಇರುವವನೇ.

* **ಟಿಪ್ಪಣಿ:** ಹಣಿತೆ, ಹಣತೆ ಎಂದು ಎರಡು ರೂಪಗಳಿವೆ. ಈ ಪದದ ಅರ್ಥ ಮಣ್ಣಿನ ಅಥವಾ ಲೋಹದ ದೀಪದ ಬಟ್ಟಲು; ಸೊಡರು.

---

**ದೃಶ್ಯ, ಜಡ, ಸಂಧಾನವೆನಿಸುವ**
**ನಶ್ವರದ ಮನ, ನೇತ್ರ, ವಾಗಾ**
**ದಿ ಸ್ವಚೇಷ್ಟಾದುರ್ಬಲಗಳಿಂತಾವನೊಬ್ಬನನು ।**
**ಆಶ್ರಯಿಸಿ ವ್ಯವಹರಿಸುತಿರ್ಪುವ**
**ಜಸ್ರ ತಮ್ಮಯ ವಿಷಯಗಳನಂ**
**ತಾ ಸ್ವಯಂಜ್ಯೋತಿಯೆ ಕಣಾ ನೀನೆಂದು ನಿಶ್ಚಯಿಸು ॥ ॥೭೮॥**

**ತಾತ್ಪರ್ಯ:** ಮನಸ್ಸು, ಇಂದ್ರಿಯಗಳನ್ನೂ ಜೀವನನ್ನೂ ಕೂಡಿಸುತ್ತವೆ. ನೇತ್ರ, ವಾಕ್ಕು ಮೊದಲಾದ ಇಂದ್ರಿಯಗಳು ಮನಸ್ಸಿಗೂ ವಿಷಯಗಳಿಗೂ ಗಂಟುಹಾಕುತ್ತದೆ. ಮನಸ್ಸು ಒಂದಾಗಿಸುವ ಈ ದೃಶ್ಯ, ಜಡಗಳು ತಮಗೆತಾವೇ ತಮ್ಮ ಕೆಲಸಗಳನ್ನು ಮಾಡುವ ಶಕ್ತಿ ಇಲ್ಲದವು. ಇವು ಯಾವುದನ್ನು ಆಶ್ರಯಿಸಿ ತಂತಮ್ಮ ವಿಷಯಗಳಲ್ಲಿ ಸದಾಕಾಲ ತೊಡಗಿರುವುವೋ ಅಂತಹ ಸ್ವಯಂ ಪ್ರಕಾಶವುಳ್ಳ ಪರಂಜ್ಯೋತಿಯೇ ನೀನೆಂದು ತಿಳಿ.

**ಶಬ್ದಾರ್ಥ: ದೃಶ್ಯ**=ನಮಗೆ ಹೊರಗಿನದಾಗಿ ಕಾಣತಕ್ಕದ್ದು; **ಜಡ**=ಅರಿಯುವ ಶಕ್ತಿ ಇಲ್ಲದ್ದು; **ಸಂಧಾನ**=ಎರಡನ್ನು ಕೂಡಿಸುವಂಥದ್ದು (ಉದಾಹರಣೆಗೆ ಮನಸ್ಸು ಇಂದ್ರಿಯಗಳನ್ನು ಜೀವನನ್ನೂ ಕೂಡಿಸುತ್ತವೆ; ನೇತ್ರ, ವಾಕ್ಕು ಮೊದಲಾದ ಇಂದ್ರಿಯಗಳು ಮನಸ್ಸಿಗೂ ವಿಷಯಗಳಿಗೂ ಗಂಟು ಹಾಕುತ್ತವೆ); **ಸ್ವಚೇಷ್ಟಾದುರ್ಬಲಗಳು**=ತಮಗೆ ತಾವೇ ತಮ್ಮ ಕೆಲಸಗಳನ್ನು ಮಾಡುವ ಶಕ್ತಿ ಇಲ್ಲದವುಗಳು, **ಅಜಸ್ರ**=ಸದಾಕಾಲ, * **ವಾಗಾದಿ**=ವಾಕ್ಕು ಮೊದಲಾದ

---

ತನುವು ಮೊದಲಾಗಿರ್ಪ ಕೋಶಗ
ಳನಿತನಾತ್ಮಗಳೆಂದು ಶ್ರುತಿಯು
ಕ್ತ್ಯನುಭವಗಳಿಂ ನೇತಿಗಳೆದಿನ್ನುಳಿದ ಶೇಷಿತವೆ ।
ತನಯ ಕೇಳ್ಪ್ರತ್ಯಕ್ಪ್ರಕಾಶವ
ದೆನಿಸಿ, ಜಡಕೋಶಗಳ ಬೆಳಗುವ
ಘನವದೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ॥೭೯॥

ತಾತ್ಪರ್ಯ: ಅನ್ನಮಯ ಕೋಶವಾದ ಶರೀರ ಮೊದಲಾದುವುಗಳೆಲ್ಲ ಅನಾತ್ಮಗಳೆಂದು ವೇದಪ್ರಮಾಣಗಳಿಂದ ಅಲ್ಲಗಳೆದ ಮೇಲೆ (ನೇತಿಗಳೆಂದು) ಉಳಿಯುವ ಶೇಷವೆನಿಸಿ ಕೊಂಡಿರುವ ನಿಜ ತತ್ತ್ವವೇ ಪ್ರತ್ಯಕ್ ಪ್ರಕಾಶವೆನಿಸುತ್ತದೆ. ಅದು ಜಡವಾಗಿರುವ ಕೋಶಗಳನ್ನು ಪ್ರಕಾಶಗೊಳಿಸುವ ಸಾಕ್ಷಿ (ಜ್ಞಾನದ ಗಟ್ಟಿ) ನೀನೆಂದು ನಿಶ್ಚಯಿಸು.

ಶಬ್ದಾರ್ಥ: ಅನಿತು+(ಎಲ್ಲವೂ)ಅನಾತ್ಮಗಳೆಂದು=ಎಲ್ಲವೂ ಅನಾತ್ಮಗಳೆಂದು; ಘನದ=ಜ್ಞಾನದ ಗಟ್ಟಿ; * ನೇತಿಗಳೆದು=ಅಲ್ಲಗಳೆದ ಮೇಲೆ; ಜಡ ಕೋಶ=ಪಂಚ ಕೋಶಗಳು; ಶೇಷಿತವೆ=ನೇತಿಗಳೆದ ಮೇಲೆ ಉಳಿಯುವ ನಿಜ ತತ್ವ; ಶ್ರುತಿಯುಕ್ತ್ಯನುಭವ=ವೇದ ಪ್ರಮಾಣಗಳು;

---

ತೋರುವೀ ತೋರಿಕೆಯನೆಲ್ಲವ
ಬೇರೆಬೇರೆಯೆ ಕಾಣ್ಬರಿವೆ ತಾ
ತೋರಿಕೆಗಳನಪೇಕ್ಷಿಸದ ಬರಿಯರಿವೆನಿಸುತಿಹುದು; ।
ಧೀರ, ಕೇಳಾ ಅರಿವೆ ಸಚ್ಚಿ
ತ್ಸಾರಸುಖವಹ ಬ್ರಹ್ಮ; ಸಹಜಾ
ಕಾರ; ಸಂವಿನ್ಮಾತ್ರವದು ನೀನೆಂದು ನಿಶ್ಚಯಿಸು ॥ ॥೮೦॥

ತಾತ್ಪರ್ಯ: ದೃಶ್ಯಗಳಾಗಿ ಕಾಣುವುದೆಲ್ಲವನ್ನೂ ಬೇರೆ ಬೇರೆಯಾಗಿ ತಿಳಿದು ಕೊಳ್ಳುವ ಜ್ಞಾನವು, ಸೂಕ್ಷ್ಮವಾದ ತೋರಿಕೆಗಳನ್ನೆಲ್ಲ ಕ್ರಮದಿಂದ ಒಂದೊಂದನ್ನು ತೊರೆಯುತ್ತ ಬಂದರೆ ಆಗ ಸಾಕ್ಷೀಭೂತವಾಗಿ ಉಳಿಯುವ ಸಮ್ಯಕ್‌ಜ್ಞಾನವಾಗುತ್ತದೆ. ಆ ಜ್ಞಾನವೇ ಸತ್‌ಚಿತ್‌ಸ್ವರೂಪವಾದ ಬ್ರಹ್ಮವೆಂದು ತಿಳಿ. ಅದು ಬ್ರಹ್ಮನ ಸಹಜವಾದ ಸ್ವರೂಪ ವಾಗಿರುತ್ತದೆ. ಜ್ಞಾನ ಮಾತ್ರವಾಗಿರುತ್ತದೆ (ಸಂವಿನ್ಮಾತ್ರ) ಅದೇ ನೀನೆಂದು ತಿಳಿ.

ಶಬ್ದಾರ್ಥ: ಸಂವಿನ್ಮಾತ್ರ=(ಸಂವಿತ್+ಮಾತ್ರ) ಜ್ಞಾನ ಮಾತ್ರ; * ಸಚ್ಚಿತ್ಸಾರಸುಖವಹ ಬ್ರಹ್ಮ =ಸಚ್ಚಿದಾನಂದ ಸ್ವರೂಪವಾಗಿರುವ ಪರಬ್ರಹ್ಮ; * ಅರಿವು=ಜ್ಞಾನ, ಸಮ್ಯಕ್ ಜ್ಞಾನ; * ತೋರುವ =ಕಾಣುವ; * ತೋರಿಕೆ=ದೃಶ್ಯಪ್ರಪಂಚ;

---

ಬಿಸಿಲದೊರೆ, ಸ್ವಪ್ನಪ್ರಪಂಚವು
ಹುಸಿಯ ತೋರಿಕೆಯಾಗಿ ತೋರ್ಪುವು;
ಸಸಿನೆ ತಿಳಿದವರಿಂದ ಬಾಧಿಸಿಕೊಂಬವದರಂತೆ ।

**ಪುಸಿಯ ತೋರ್ಕೆಯ ನೇತಿಯಿಂ ಶೇ**
**ಷಿಸಿದ ನಿಜ ನಿರ್ಬಾಧರೂಪವು**
**ಹೆಸರಳಿದ ಪರಬೊಮ್ಮವದು ನೀನೆಂದು ನಿಶ್ಚಯಿಸು ॥ ॥೮೧॥**

**ತಾತ್ಪರ್ಯ:** ಬಿಸಿಲತೊರೆ ಮತ್ತು ಕನಸಿನಲ್ಲಿ ನಡೆಯುವ ವಿದ್ಯಮಾನಗಳು ಸುಳ್ಳಿನ ನೋಟಗಳಾಗಿರುತ್ತವೆ. ಚೆನ್ನಾಗಿ ತಿಳಿದವರಿಗೆ ಸತ್ಯವಾಗಿರುವುದಿಲ್ಲ. ಈ ಸುಳ್ಳು ನೋಟಗಳನ್ನು ಎಂದರೆ ಪ್ರಾಣಾದಿ ತತ್ವಗಳ ಮಿಥ್ಯಾದೃಶ್ಯಗಳನ್ನು ಜ್ಞಾನದಿಂದ ನೇತಿ ಮಾರ್ಗದಲ್ಲಿ ಶೋಧಿಸಿದಾಗ ಕನಸಿನಂತೆ ಸುಳ್ಳಾಗದ, ರಾಗದ್ವೇಷಗಳಿಗೆ ಒಳಗಾಗದ ಹೆಸರಿಟ್ಟು ಹೇಳುವುದಕ್ಕೆ ಬಾರದ ಜ್ಞಾನರೂಪಿ ಪರಬ್ರಹ್ಮನೇ ನೀನೆಂದು ತಿಳಿ.

**ಶಬ್ದಾರ್ಥ: ಬಿಸಿಲದೊರೆ (ಬಿಸಿಲ+ತೊರೆ)**=ಬಿಸಿಲಿನಲ್ಲಿ ತೋರುವ ಸುಳ್ಳು ನದಿ. ಬೇಸಿಗೆಯಲ್ಲಿ ಸೂರ್ಯನ ಪ್ರಕಾಶದಿಂದ ನೀರು ಹರಿಯುವಂತೆ ಭ್ರಮೆ ಉಂಟುಮಾಡುವ ಮರೀಚಿಕೆ; * **ಸ್ವಪ್ನ ಪ್ರಪಂಚ**=ಕನಸಿನಲ್ಲಿ ನಡೆಯುವ ವಿದ್ಯಮಾನಗಳು; * **ಹುಸಿಯ ತೋರಿಕೆ**=ಸುಳ್ಳು ನೋಟ; * **ಬಾಧಿಸಿಕೊಂಬವು**=ಸುಳ್ಳೆನಿಸಿಕೊಳ್ಳುತ್ತವೆ; * **ಸಸಿನೆ ತಿಳಿದವರಿಂದ**=ಚೆನ್ನಾಗಿ ವಿಚಾರ ಮಾಡುವವರಿಂದ; * **ನಿರ್ಬಾಧರೂಪವು**=ಕನಸಿನ ಜಗತ್ತು ಎಚ್ಚರದಲ್ಲಿ ಸುಳ್ಳೆನಿಸಿಕೊಳ್ಳುವಂತೆ, ಸುಳ್ಳಾಗದೆ ಇರುವುದು (ಆತ್ಮ); **ಹೆಸರಳಿದ**=ಹೆಸರಿಟ್ಟು ಹೇಳುವುದಕ್ಕೆ ಬಾರದ;

---

**ಇದಮೆನುತ್ತಿದಿರಾಗಿ ತೋರುವು**
**ದದುವೆ ಬಾಧಿಸಿಕೊಂಬುದೊಮ್ಮೆಯು**
**ಮಿದಮೆನಿಸುತಿದಿರಿಸದೆ ತದ್ವ್ಯಾವೃತ್ತಿಮುಖದಿಂದ ।**
**ವಿಧಿಸಿ ಹೇಳಿಸಿಕೊಂಬ ನಿಜವೇ**
**ಸದಮಲಾನಂದೈಕಘನ; ಚಿ**
**ತ್ಪದವದೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ॥೮೨॥**

**ತಾತ್ಪರ್ಯ:** 'ಇದು' ಎಂದು ದೃಶ್ಯವಾಗಿ ಕಾಣುವುದೆಲ್ಲವೂ ಅಸತ್ಯವಾಗಿರುತ್ತವೆ. ಅದು ಆತ್ಮಕ್ಕೆ ಸಂಬಂಧದಿಂದ ಬೇರೊಂದು ವಸ್ತುವಾಗಿರುತ್ತದೆ. ಒಂದು ಸಲವಾದರೂ ಬೇರೆ ಎನಿಸದೆ, ದೃಶ್ಯವಾದುದೆಲ್ಲವನ್ನು ಇದಲ್ಲ, ಇದಲ್ಲ ಎಂಬ ರೂಪದಿಂದ ಎಂದು ಶೋಧಿಸಿದಾಗ ಉಳಿಯುವ ಸತ್ಯವೇ ಶುದ್ಧ ಜ್ಞಾನಾನಂದವೂ ಅಖಂಡವೂ ಆದ ಚಿತ್‌ಪದವೇ ನೀನು ಎಂದು ನಿನ್ನೊಳು ತಿಳಿ.

**ಶಬ್ದಾರ್ಥ: ಇದಮೆನುತ್ತ**='ಇದು' ಎಂದು ಹೇಳಿಸಿಕೊಳ್ಳುತ್ತ; **ಇದಿರಿಸದೆ**=ತನಗೆ ಹೊರಗಿನದಾಗದೆ; **ತದ್ವ್ಯಾವೃತ್ತಿ ಮುಖದಿಂದ**=ಇದಲ್ಲವಿದಲ್ಲ ಎಂಬ ರೂಪದಿಂದ; * **ಬಾಧಿಸಿಕೊಂಬುದು** =ಸುಳ್ಳಾಗುತ್ತದೆ; * **ಚಿತ್ಪದ**=ಚಿತ್ಸ್ವರೂಪ;

---

**ಅಂತುಇಂತೆನಬಾರದಾತ್ಮನ**
**ನೆಂತರಿಯಬೇಕೆನಲು ತಿಳಿ ನೀ**
**ನಂತು ಇಂತೆನಬಾರದಿಪ್ಪುದಚಿಂತ್ಯಚಿದ್ಘನವು; ।**

**ಅಂತದೇ ಆತ್ಮಸ್ವರೂಪವ**
**ನಂತಸುಖಮಯವದನು ನಿನ್ನೊಳು**
**ಭ್ರಾಂತಿಯುಳಿದನುಭವದೊಳದು ನೀನೆಂದು ನಿಶ್ಚಯಿಸು ॥ ॥೮೩॥**

**ತಾತ್ಪರ್ಯ:** ಆತ್ಮನು ಹಾಗಿದ್ದಾನೆ ಹೀಗಿದ್ದಾನೆ ಎಂದು ಹೇಳಲಾಗುವುದಿಲ್ಲ. ಹಾಗಾದರೆ ಆತ್ಮನ ಸ್ವರೂಪವನ್ನು ತಿಳಿಯುವುದು ಹೇಗೆ ಎಂದು ಕೇಳುವೆಯಾ? ಹೇಳುವೆನು ಕೇಳು. ಆತ್ಮನು ಹಾಗಿದ್ದಾನೆ, ಹೀಗಿದ್ದಾನೆ ಎಂದು ಹೇಳುವಂಥ ವಿಷಯವಲ್ಲ. ಅದನ್ನು ಅರಿಯುವ ಚೈತನ್ಯವನ್ನು ಅಂತು ಇಂತು ಎನ್ನುವುದಕ್ಕೆ ಬರುವುದಿಲ್ಲ. ಅದು ಚಿಂತಿಸಲಿಕ್ಕೆ ಸಾಧ್ಯವಿಲ್ಲದ ಚಿದ್ಘನವಾದ ಸ್ವರೂಪವು, ಅನಂತ ಸುಖರೂಪವಾದುದು. ಇದನ್ನು ಸಂಶಯರಹಿತನಾಗಿ ಸ್ವಾನುಭವದಿಂದ ಆ ಬ್ರಹ್ಮವೇ ನೀನೆಂದು ತಿಳಿ.

**ಶಬ್ದಾರ್ಥ:** **ಅಂತುಇಂತುಎನಬಾರದಿಪ್ಪುದು**=ಅಂತು ಇಂತು ಎನಿಸಿಕೊಳ್ಳುವುದೆಲ್ಲ ವಿಷಯವು. ಅದನ್ನು ಅರಿಯುವ ಚೈತನ್ಯವನ್ನು ಅಂತು ಇಂತು ಎನ್ನುವುದಕ್ಕೆ ಬರುವುದಿಲ್ಲ. * **ಭ್ರಾಂತಿ ಉಳಿದು**=ಸಂದೇಹವನ್ನು ತೊರೆದು; **ಅಚಿಂತ್ಯ**=ಚಿಂತಿಸಲು ಸಾಧ್ಯವಲ್ಲದ; **ಚಿದ್ಘನ**=ಚಿತ್ಸ್ವರೂಪ

---

**ಇಲ್ಲವೆಂಬುದು ಶೂನ್ಯವಾದಿಗೆ**
**ಸಲ್ಲದದು; ತಾನಿದಿರೊಳಿದ್ದೂ**
**ಇಲ್ಲವೆಂದೆಂಬಾಗ ತಾನೇ ಇಲ್ಲದಿರಬೇಕು! ।**
**ಇಲ್ಲವೆಂಬೀಸೊಲ್ಲು ತನಗಿ**
**ನ್ನೆಲ್ಲಿ ಬಂದುದು? ಬರಿಯ ಭ್ರಮೆಯದ**
**ನಿಲ್ಲವೆಂಬುದು ಬ್ರಹ್ಮವದು ನೀನೆಂದು ನಿಶ್ಚಯಿಸು ॥ ॥೮೪॥**

**ತಾತ್ಪರ್ಯ:** ನಾಸ್ತಿಕನಾದ ಶೂನ್ಯವಾದಿಗೂ ಇಲ್ಲವೆಂಬ ವಾದ ಸಲ್ಲದು. ತಾನು ಎದುರಿನಲ್ಲೇ ಇದ್ದುಕೊಂಡೂ ತಾನಿಲ್ಲ ಎಂದು ಹೇಳಬೇಕಾದರೆ ಹೇಳುವಂಥ ತಾನು ಇಲ್ಲದಿರಬೇಕಲ್ಲವೇ? ಹೇಳುವ ಅವನೇ ಇಲ್ಲದಿದ್ದರೆ ಇನ್ನು ಇಲ್ಲ ಎಂಬ ಮಾತು ಎಲ್ಲಿಂದ ಬರುತ್ತದೆ? ಆದ್ದರಿಂದ ಇಲ್ಲವೆಂಬ ಶೂನ್ಯವಾದ ಒಂದು ಭ್ರಮೆ ಅಷ್ಟೇ. ಎಲ್ಲವೂ ಇಲ್ಲವೆಂಬ ಸ್ಥಿತಿಯ ಸಾಕ್ಷಿಯೇ ಬ್ರಹ್ಮ. ಅದೇ ನೀನು ಎಂದು ನಿನ್ನಲ್ಲಿ ತಿಳಿದು ನಿರ್ಧಾರಮಾಡಿಕೊ.

**ಶಬ್ದಾರ್ಥ:** **ಸೊಲ್ಲು**=ಮಾತು, **ಬ್ರಹ್ಮ**=ಪರಬ್ರಹ್ಮ.(ಇಲ್ಲವೆಂಬುದು ಬ್ರಹ್ಮ, ಇಲ್ಲವೆಂಬ ಸ್ಥಿತಿಯ ಸಾಕ್ಷಿಯೇ ಬ್ರಹ್ಮವು.

**ಟಿಪ್ಪಣಿ:** **ಶೂನ್ಯವಾದಿ**=ಎಲ್ಲವೂ ಇಲ್ಲವೆಂಬ ಮಾಧ್ಯಮಿಕವಾದಿ (ಪಾಪ, ಪುಟ–೩೮೫) ಯಾವುದೂ ನಿಜವಾಗಿಲ್ಲವೆಂಬ ಬೌದ್ಧರವಾದ (ಪಾಶ, ಪುಟ–೨೯೨)

---

**ಪುತ್ರ, ಮಿತ್ರ, ಕಳತ್ರ, ತನು, ಧನ,**
**ಕ್ಷೇತ್ರ, ಮೊದಲಾದಖಿಳ ತನ್ನಯ**
**ವಸ್ತುಗಳನಾತ್ಮೀಯವೆಂದೇ ಬಗೆದು ಮಮಕರಿಸಿ ।**
**ಅತ್ಯಧಿಕಪ್ರಿಯರಸದೊಳಗೆ ಮುಳು**
**ಗುತ್ತಲಿರೆ ಪ್ರಿಯತರವಿದೆನಿಸಿದ**
**ನಿತ್ಯಸುಖವಹ ನಿನ್ನ ನೀನೆ ಅದೆಂದು ನಿಶ್ಚಯಿಸು ॥ ॥೮೫॥**

**ತಾತ್ಪರ್ಯ:** ಮಗ, ಸ್ನೇಹಿತ, ಹೆಂಡತಿ, ಶರೀರ, ದ್ರವ್ಯ, ಹೊಲ, ಮನೆ, ಮೊದಲಾದ ಸಮಸ್ತವು ನನಗೆ ಸೇರಿದವು ಇವು ನನಗೆ ಪ್ರಿಯವಾದವು ಎಂದು ತಿಳಿದು ತನ್ನದನ್ನಾಗಿ ಸುಖಿಸುತ್ತ ಅವುಗಳಲ್ಲಿ ಅತ್ಯಧಿಕ ಮೋಹದಿಂದ ತೇಲಿ ಮುಳುಗುತ್ತಿದ್ದರೆ ನಿಜ ಸುಖ ಬರಲಾರದು. ಹಾಗೆ ಮಾಡದೆ ಅದಕ್ಕೂ ಮಿಗಿಲಾದ ಆ ಸುಖರೂಪವನ್ನು ಅನುಭವಿಸುತ್ತಿರುವುದೇ ನೀನು ಎಂದು ತಿಳಿ.

**ಶಬ್ದಾರ್ಥ:** * ಪುತ್ರ=ಮಗ; * ಮಿತ್ರ=ಸ್ನೇಹಿತ; * ಕಳತ್ರ=ಹೆಂಡತಿ; * ತನು=ಶರೀರ; * ಧನ=ಐಶ್ವರ್ಯ; * ಕ್ಷೇತ್ರ=ಹೊಲ, ಮನೆ, ಆತ್ಮೀಯವೆಂದು=ನನ್ನವುಗಳು; ಮಮಕರಿಸಿ=ತನ್ನವೆಂದು ಮಾಡಿಕೊಂಡು

**ಟಿಪ್ಪಣಿ-೧:** ನಿತ್ಯಸುಖವಹ=ಪುತ್ರಾದಿಗಳು ತನ್ನವರೆಂಬುದರಿಂದಲೇ ಪ್ರಿಯವಾಗಿರುವ ಕಾರಣದಿಂದ ತಾನು ಎಲ್ಲಕ್ಕೂ ಪ್ರಿಯವಾಯಿತಾದ್ದರಿಂದ ನಿತ್ಯ ಸುಖರೂಪವಾಗಿರುವುದು. ಈ ವಿಷಯಕ್ಕೆ ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ..... ಆತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿತೀ ಇತ್ಯಾದಿ ಬೃಹದಾರಣ್ಯಕದಲ್ಲಿ ಹೇಳಿದೆ. ಎಂದರೆ ತನ್ನ ಇಚ್ಛಾಪೂರಣಕ್ಕಾಗಿಯೇ ಹೆಂಡತಿ ಮಕ್ಕಳ ಮೇಲೆ ಪ್ರೀತಿಯೆಂದು ತಾತ್ಪರ್ಯ.

**ಟಿಪ್ಪಣಿ-೨:** ಇಚ್ಛಾಪೂರಣ=ಇಷ್ಟಪೂರ್ತಿಗಾಗಿ. ಹೆಂಡತಿ ಮಕ್ಕಳು ಪ್ರಿಯವಾಗಿ ಕಾಣಿಸುವುದು ತನ್ನ ಆತ್ಮನಿಗಾಗಿ, ತನಗಾಗಿ ಮಾತ್ರವೇ ಪ್ರಿಯವಾಗಿರುತ್ತದೆ.

---

**ರತ್ನಮಯವಹ ಕೊಡದೊಳಗೆ ತೋ**
**ರುತ್ತಲಿಹ ದೀಪಪ್ರಕಾಶವು**
**ಸುತ್ತಲೆಲ್ಲಾ ಒಳಹೊರಗೆ ಬೆಳಗುತ್ತಲಿರ್ಪಂತೆ ।**
**ತತ್ತ್ವಮಯವಹ ದೇಹದೊಳು ಹೊರ**
**ಗೆತ್ತ ನೋಡಲು ಥಳಥಳಿಸಿ ಬೆಳ**
**ಗುತ್ತಲಿಹ ಚಿಜ್ಜ್ಯೋತಿಯೇ ನೀನೆಂದು ನಿಶ್ಚಯಿಸು ॥ ॥೮೬॥**

**ತಾತ್ಪರ್ಯ:** ರತ್ನಗಳಿಂದ ಮಾಡಿದ ಬಿಂದಿಗೆಯಲ್ಲಿ ಕಾಣುತ್ತಿರುವ ದೀಪದ ಬೆಳಕು ಒಳಗೂ ಹೊರಗೂ ಹರಡಿ ಸುತ್ತಲೂ ವ್ಯಾಪಿಸಿ ಬೆಳಗುತ್ತಿರುವ ಹಾಗೆ ಪಂಚ ಭೂತಗಳಿಂದ ಆಗಿರುವ ದೇಹದ ಒಳಗೆ ಹೊರಗೆ ಎತ್ತೆತ್ತಲೂ ಪ್ರಕಾಶಮಾನವಾಗಿ ಬೆಳಗುತ್ತಿರುವ ಜ್ಞಾನದ ಬೆಳಕೇ (ಚಿಜ್ಜ್ಯೋತಿಯೇ) ನೀನೆಂದು ತಿಳಿ.

**ಶಬ್ದಾರ್ಥ:** ತತ್ತ್ವಮಯವಹ=ಪಂಚಭೂತಗಳಿಂದ ಆಗಿರುವ; **ಚಿಜ್ಜ್ಯೋತಿ**=ಜ್ಞಾನದ ಬೆಳಕು.

**ಟಿಪ್ಪಣಿ:** ತತ್ತ್ವ-ಮಹಾ ಪ್ರಳಯದವರೆಗೆ ಇದ್ದುಕೊಂಡು ಪ್ರಾಣಿಗಳಿಗೆ ಭೋಗದಾಯಕವಾಗಿರುವುದರಿಂದ ಪಂಚಭೂತಗಳಿಗೆ ತತ್ತ್ವಗಳೆಂದು ಹೆಸರು. ತತ್ತ್ವವೆಂದರೆ ಇರುವ ವಸ್ತು ಎಂಬರ್ಥ.

---

**ಅರಿವಿನುಳಿಮೆಯೆ ತಾನು; ತನ್ನೊಳು**
**ಬರಿಯರಿವೆ ತೀವಿರ್ಪುದದರೊಳು**
**ಕರಣಗಳು ಸುಳಿದಾಡುತಿರ್ಪುವು ಗಗನಲತೆಯೊಳಗೆ ।**
**ಬೆರಸಿ ತಿರುಗುವ ಪಕ್ಷಿಗಳವೋ**
**ಲ್ನಿರುಪಮಚಿದಾಕಾಶವೆನಿಸಿದ**
**ಪರಮಸಂವಿದ್ರೂಪವೇ ನೀನೆಂದು ನಿಶ್ಚಯಿಸು ॥ ॥೮೭॥**

**ತಾತ್ಪರ್ಯ:** ವಿಷಯಗಳನ್ನೆಲ್ಲ 'ಇದು ತಾನಲ್ಲ, ಇದು ತಾನಲ್ಲ' ಎಂದು ಹೊರಗೆಳೆದ ಮೇಲೆ ಜ್ಞಾನರೂಪವಾಗಿ ಉಳಿದಿದ್ದು, ಅದು ನಿನ್ನಲ್ಲಿ ಶುದ್ಧಜ್ಞಾನರೂಪದಲ್ಲಿ ತುಂಬಿದೆ. ಆಕಾಶಕ್ಕೆ ಪಕ್ಷಿಗಳ ಸೋಂಕು ಹೇಗೆ ಇಲ್ಲವೋ ಹಾಗೆ ಜ್ಞಾನ ರೂಪವಾದ ಆತ್ಮನಿಗೆ ಇಂದ್ರಿಯಗಳ ವ್ಯವಹಾರದ ಸೋಂಕು ಇರುವುದಿಲ್ಲ. ಅದೇ ರೀತಿಯಲ್ಲಿ ಚಿದಾನಂದಾಕಾಶದಲ್ಲಿ ವಿಹರಿಸುತ್ತಿರುವ ಉತ್ಕೃಷ್ಟ ಜ್ಞಾನರೂಪನೇ ನೀನೆಂದು ತಿಳಿ.

**ಶಬ್ದಾರ್ಥ:** ಅರಿವಿನುಳಿಮೆ=ವಿಷಯಗಳನ್ನೆಲ್ಲ 'ಇದು ತಾನಲ್ಲ, ಇದು ತಾನಲ್ಲ' ಎಂದು ಹೊರಗಳೆದ ಮೇಲೆ ಜ್ಞಾನರೂಪನಾಗಿ ಉಳಿದದ್ದು; ಪರಮಸಂವಿದ್ರೂಪ=ಉತ್ಕೃಷ್ಟವಾದ ಜ್ಞಾನರೂಪ.

**ಪಾಠಾಂತರ:** ಅರಿವಿನುಳಿಮೆ=ಇದಕ್ಕೆ ಬೇರೆ ಪ್ರತಿಗಳಲ್ಲಿ **'ಅರಿವಿನುಳುಮೆ'** ಎಂದು ಪಾಠಾಂತರವಿದೆ. (ಕುಮಾಂಡೂರು ಪ್ರತಿ ಮತ್ತು ಅರಾಸೇ ಪ್ರತಿ ನೋಡಿ)

**ಟಿಪ್ಪಣಿ: ಗಗನಲತೆಯೊಳಗೆ ಬೆರಸಿ ತಿರುಗುವ ಪಕ್ಷಿಗಳವೋಲ್**-ಆಕಾಶದಲ್ಲಿ ಬಳ್ಳಿಯೇ ಇಲ್ಲ, ಆ ಬಳ್ಳಿಗಳ ಮೇಲೆ ಪಕ್ಷಿಗಳು ಒಂದಕ್ಕೊಂದು ಅಟ್ಟಿಕೊಂಡು ತಿರುಗುವುದಂತೂ ಇಲ್ಲವೇ ಇಲ್ಲ. ಇದರಿಂದ ಆಕಾಶಕ್ಕೆ ಪಕ್ಷಿಗಳ ಸೋಂಕು ಹೇಗೆ ಇಲ್ಲವೋ ಹಾಗೆ ಜ್ಞಾನ ರೂಪವಾದ ಆತ್ಮನಿಗೆ ಇಂದ್ರಿಯಗಳ ವ್ಯವಹಾರದ ಸೋಂಕೂ ಇಲ್ಲವೆಂದರ್ಥ.

---

**ಭಾವಿಸಲು ಬೇರಿಲ್ಲವಂತದ**
**ಭಾವವೆಂದೆನಬಾರದಿಹುದಿ**
**ನ್ನಾವ ತೆರನೆಂದೆನಲು ಕೇಳು ಸ್ವಭಾವವೆನಿಸಿರ್ದ ।**
**ಕೇವಲಾತ್ಮಸ್ವಪ್ರಕಾಶವೆ**
**ತೀವಿತೋರುತ್ತಿರ್ಪುದಂತದ**
**ಸಾವಧಾನದಿ ತಿಳಿದು ನೀನೆಂದದನು ನಿಶ್ಚಯಿಸು ॥ ॥ ೮೮ ॥**

**ತಾತ್ಪರ್ಯ:** ವಿಚಾರಮಾಡಿದರೆ ಅದು ತನಗಿಂತ ಬೇರೆಯಾದುದಲ್ಲ. ಹಾಗೆಂದು ಅದು ಇಲ್ಲವೆಂದೂ (ಅಭಾವ) ಹೇಳಲಾಗದು. ಹಾಗಾದರೆ ಅದು ಇರುವ ಬಗೆ

ಹೇಗೆ ಎಂದರೆ, ಕೇಳು ಹೇಳುವೆನು. ಸಹಜ ಸಿದ್ಧ (ಸ್ವಭಾವ)ವಾಗಿದ್ದು ಕೇವಲ ತಾನೇ ತಾನಾಗಿ ಬೆಳಗುವ ಆತ್ಮವೇ ಸ್ವಯಂಜ್ಯೋತಿಯಾಗಿ ಎಲ್ಲೆಲ್ಲೂ ತುಂಬಿ ಬೆಳಗುತ್ತಾ ಇದೆ. ಅದೇ ನೀನೆಂದು ತಾಳ್ಮೆಯಿಂದ ನಿರ್ಧರಿಸು.

**ಶಬ್ದಾರ್ಥ:** * **ಭಾವಿಸಲು**=ವಿಚಾರ ಮಾಡಿದರೆ; **ಬೇರೆ+ಇಲ್ಲ**= ತನಗಿಂತ ಬೇರೆ ಇಲ್ಲ; **ಅದ+ಅಭಾವ ಎಂದೆನಬಾರದು**=ಅದು ಇಲ್ಲವೆಂದೂ ಹೇಳಲಾಗದು; * **ಸ್ವಭಾವ**=ಸಹಜ ಸಿದ್ಧ; * **ಸಾವಧಾನದಿ**=ತಾಳ್ಮೆಯಿಂದ (ಸಾವಕಾಶವಾಗಿ); * **ತೀವಿ ತೋರುತಿರ್ಪುದು**=ಎಲ್ಲೆಲ್ಲೂ ತುಂಬಿ ಬೆಳಗುತ್ತಿದೆ; * **ಆತ್ಮಸ್ವಪ್ರಕಾಶ**=ಆತ್ಮವೇ ಸ್ವಯಂಜ್ಯೋತಿಯಾಗಿ;

---

## ಅವಸ್ಥಾತ್ರಯ ಸಾಕ್ಷಿತ್ವ (೮೯-೯೨)

**ವಿವಿಧವಹ ಸಂಸೃತಿ ಸಮಸ್ತವು**
**ವ್ಯವಹರಣೆ; ಜಾಗ್ರದಲಿ ತೋರ್ಪುದು;**
**ಸವನಿಸಿದ ತದ್ವಾಸನೆಯೆ ಸ್ವಪ್ನದಲಿ ತೋರುವದು ।**
**ಅವಿರಳದ ತಾಮಸವೆ ಸುಪ್ತಿಯ**
**ಲವಘಡಿಸಿ ತೋರುವದವಸ್ಥಾ**
**ನಿವಹದನುಭವಸಾಕ್ಷಿಯೇ ನೀನೆಂದು ನಿಶ್ಚಯಿಸು ॥** ॥೮೯॥

**ತಾತ್ಪರ್ಯ:** ನಾನಾ ವಿಧವಾಗಿ ತೋರುವ ಸಂಸಾರವೆಲ್ಲ ಬರೀ ವ್ಯವಹಾರ ಮಾತ್ರವಾಗಿ (ನಿಜವಾದದ್ದಲ್ಲ) ಜಾಗ್ರತಾವಸ್ಥೆಯಲ್ಲಿ (ಎಚ್ಚರದಲ್ಲಿ) ಕಾಣಿಸಿಕೊಳ್ಳುತ್ತದೆ. ಅದರಿಂದ ಪ್ರಾಪ್ತವಾದ ವಾಸನೆಯೆ (ರೂಢಿಯಾದ ಸಂಸಾರದ ನಡವಳಿಕೆಗಳು) (ಕನಸಿನಲ್ಲಿ) ಸ್ವಪ್ನಾವಸ್ಥೆಯಲ್ಲಿ ಕಾಣಿಸಿಕೊಳ್ಳುವುದು. ಈ ತಮೋಗುಣವೇ ದಟ್ಟ ಸುಪ್ತಾವಸ್ಥೆಯಲ್ಲಿ (ಗಟ್ಟಿ ಅಜ್ಞಾನ) ವ್ಯಾಪಕವಾಗಿ ಹರಡಿ ಕಾಣಿಸಿಕೊಳ್ಳುತ್ತದೆ. ಹೀಗೆ ಎಚ್ಚರ, ಕನಸು, ನಿದ್ರೆ, ಈ ಮೂರು ಅವಸ್ಥೆಗಳಿಗೆಲ್ಲ ಸಾಕ್ಷಿಯಾದವನು ನೀನೇ ಎಂದು ತಿಳಿ.

**ಶಬ್ದಾರ್ಥ:** **ವ್ಯವಹರಣೆ**=ಬರೀ ವ್ಯವಹಾರ ಮಾತ್ರ (ನಿಜವಾದದ್ದಲ್ಲ); **ಸವನಿಸಿದ**=ಪ್ರಾಪ್ತವಾದ; **ಅವಸ್ಥಾನಿವಹದನುಭವಸಾಕ್ಷಿ**=ಎಚ್ಚರ, ಕನಸು, ನಿದ್ರೆ, ಈ ಮೂರು ಅವಸ್ಥೆಗಳ ಅನುಭವಕ್ಕೆಲ್ಲ ಸಾಕ್ಷಿ ಆದವನು. **ಜಾಗ್ರದವಸ್ಥೆ**=ಎಚ್ಚರದಲ್ಲಿ; **ಸ್ವಪ್ನಾವಸ್ಥೆ**=ಕನಸಿನಲ್ಲಿ; **ಸುಪ್ತಾವಸ್ಥೆ**=ನಿದ್ರಾಸ್ಥಿತಿ; **ಅವಘಡಿಸಿ**=ವ್ಯಾಪಕವಾಗಿ ಹರಡಿ; **ಅವಿರಳದತಾಮಸವೆ**=ದಟ್ಟ ಅಜ್ಞಾನ

---

**ಜಾಗರಣದಲಿ ಸ್ವಪ್ನಸುಪ್ತಿಗ**
**ಳಾಗಿ ತೋರವು; ಸುಪ್ತಿಜಾಗ್ರಗ**
**ಳಾಗವಾ ಸ್ವಪ್ನದಲಿ; ಮೇಣಾಸ್ವಪ್ನ ಜಾಗರಣ ।**
**ಆಗಿ ತೋರವು ಸುಪ್ತಿಯಲಿ; ತಿಳಿ**
**ಜಾಗರಣೆ ಮೊದಲಾದವಸ್ಥೆಯ**
**ಭೋಗಸಾಕ್ಷಿಕವಾದರಿವೆ ನೀನೆಂದು ನಿಶ್ಚಯಿಸು ॥** ॥೯೦॥

**ತಾತ್ಪರ್ಯ:** ಎಚ್ಚರದ ಅವಸ್ಥೆಯಲ್ಲಿ ಕನಸು, ಗಾಢನಿದ್ರೆಗಳ ಸ್ಥಿತಿ ಕಂಡುಬರುವುದಿಲ್ಲ. ಕನಸಿನ ಅವಸ್ಥೆಯಲ್ಲಿ ಎಚ್ಚರ, ನಿದ್ರಾ ಸ್ಥಿತಿ ಉಂಟಾಗುವುದಿಲ್ಲ. ಗಾಢ ನಿದ್ರಾವಸ್ಥೆಯಲ್ಲಿ ಎಚ್ಚರ, ಕನಸಿನ ಸ್ಥಿತಿಗಳು ಇರುವುದಿಲ್ಲ. ಹೀಗೆ ಒಂದವಸ್ಥೆಯಲ್ಲಿ ಉಳಿದೆರಡು ಅವಸ್ಥೆಗಳು ಕಂಡುಬರುವುದಿಲ್ಲ. ಈ ಮೂರೂ ಅವಸ್ಥೆಗಳಲ್ಲಿ ತಪ್ಪದೆ ಇದ್ದುಕೊಂಡು ಆ ಎಲ್ಲ ಅನುಭವಗಳಿಗೂ ಸಾಕ್ಷಿಯಾಗಿರುವ ಸುಜ್ಞಾನವೇ ನೀನೆಂದು ನಿಶ್ಚಯಿಸು.

**ಶಬ್ದಾರ್ಥ:** * **ಜಾಗರಣ**=ಎಚ್ಚರದ ಅವಸ್ಥೆ; * **ಸ್ವಪ್ನ**=ಕನಸು; * **ಸುಪ್ತಿ**=ನಿದ್ರೆ; **ಭೋಗಸಾಕ್ಷಿಕವಾದ ಅರಿವೆ**=ಎಚ್ಚರ, ಕನಸು, ನಿದ್ರೆ, ಎಂಬ ಮೂರು ಅವಸ್ಥೆಗಳಲ್ಲಿ ತಪ್ಪದೆ ಇದ್ದುಕೊಂಡು ಆ ಎಲ್ಲ ಅನುಭವಗಳಿಗೂ ಸಾಕ್ಷಿಯಾಗಿರುವ ಸುಜ್ಞಾನ.

---

**ಮನವುಭಯಮುಖ ಮುಕುರದಂತಿಹು**
**ದನಘ, ನಿದ್ರೆಯ ಗವಸಣಿಗೆಯಿಂ**
**ಮನದೆಡೆಯೊಳೆಚ್ಚರಿಕೆಕನಸುಗಳಾಗಿ ತೋರುವವು; ।**
**ಇನಿತವಸ್ಥೆಯೊಳೊಂದಿ ತೋರುವ**
**ಮನದ ವ್ಯವಹಾರವನರಿವ ಚಿ**
**ದ್ಘನಪರಾಪರವಸ್ತುವೇ ನೀನೆಂದು ನಿಶ್ಚಯಿಸು ॥ ॥೯೧॥**

**ತಾತ್ಪರ್ಯ:** ಮನಸ್ಸು ಎರಡೂ ಕಡೆ ಕಾಣುವ ಕನ್ನಡಿಯಂತೆ ಇರುವುದು. ಈ ಮನಸ್ಸೆಂಬ ಕನ್ನಡಿಗೆ ನಿದ್ರೆಯೆಂಬ ಮುಸುಕು ಹಾಕಿದೆ. ಇದರ ಒಂದೆಡೆ ಕನಸೂ ಇನ್ನೊಂದೆಡೆ ಎಚ್ಚರವೂ ಕಾಣುತ್ತಿದೆ. ಈ ರೀತಿ ಮೂರು ಅವಸ್ಥೆಗಳನ್ನು ಹೊಂದಿದ ಮನದ ವಿದ್ಯಮಾನಗಳನ್ನು ತಿಳಿಯುವ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ಆವರಿಸಿರುವ ಚಿದ್ಘನ ವಸ್ತುವೇ (ಪರಬ್ರಹ್ಮನೇ) ನೀನೆಂದು ತಿಳಿ.

**ಶಬ್ದಾರ್ಥ:** **ಉಭಯಮುಖಮುಕುರ**=ಎರಡೂ ಕಡೆಯೂ ಕಾಣುವ ಕನ್ನಡಿ; * **ನಿದ್ರೆಯ ಗವಸಣಿಗೆ**=ತಮೋಗುಣವೆಂಬ ಮುಸುಕು; * **ಇನಿತು ಅವಸ್ಥೆಯೊಳು**=ನಿದ್ರೆ ಕನಸು ಎಚ್ಚರಗಳೆಂಬ ಅವಸ್ಥಾತ್ರಯದಲ್ಲಿ; * **ಚಿದ್ಘನ**=ಚಿದಾನಂದ ಸ್ವರೂಪವಾಗಿರುವ; * **ಪರಾಪರವಸ್ತು** =ಪರಬ್ರಹ್ಮ; **ಮನದ ಎಡೆಯೊಳು ಎಚ್ಚರಿಕೆ ಕನಸುಗಳಾಗಿ ತೋರುವುವು**=ಮನಸ್ಸು ಒಂದು ಕಡೆ ಎಚ್ಚರವನ್ನೂ ಇನ್ನೊಂದೆಡೆ ಕನಸನ್ನೂ ತೋರಿಸುವ ಕನ್ನಡಿಯಂತಿರುವುದು.

---

**ಕನಿಸಿನೊಳು ಕನಸಾಗಿ, ಬುದ್ಧಿಯ**
**ನೆನಹಿನೊಳು ನೆನಹಾಗಿ, ನಿದ್ರೆಯ**
**ಘನಸುಖದಿ ಸುಖವಾಗವಸ್ಥೆಗಳಾಗುಹೋಗಿನಲಿ ।**
**ತನಯ ಕೇಳ್ತತ್ಸಾಕ್ಷಿಯಾಗಿಯೆ**
**ಮನವಚನಗಳಿಗರಿಯಲಳವಡ**
**ದನುಪಮ ಪರಂಜ್ಯೋತಿಯೇ ನೀನೆಂದು ನಿಶ್ಚಯಿಸು ॥ ॥೯೨॥**

**ತಾತ್ಪರ್ಯ:** ಶುಕನೆ ಕೇಳು, ಕನಸಿನಲ್ಲಿ ಕನಸಿನ ತಿಳಿವಳಿಕೆಯ ರೂಪವಾಗಿ ಎಂದರೆ ಕನಸಾಗಿ ಕಾಣುವುದರ ಮೂಲಸ್ವರೂಪವಾಗಿ ಬುದ್ಧಿಯ ಜಾಗ್ರದಾವಸ್ಥೆಯಲ್ಲಿ ಚೇತನರೂಪವಾಗಿ ತಮೋ ಅವಸ್ಥೆಯಲ್ಲಿ ಅಡಗಿರುವ ಘನಸುಖದ ರೂಪವಾಗಿ ಹೀಗೆ ಅವಸ್ಥಾತ್ರಯದಲ್ಲಿ ಆ ಸಾಕ್ಷಿರೂಪವಾಗಿರುವ ಮನಸ್ಸು ಮಾತುಗಳಿಗೆ ತಿಳಿಯಲಾಗದ ರೀತಿಯಲ್ಲಿ ಅಳವಟ್ಟಿರುವ ಅನುಪಮ ಪರಂಜ್ಯೋತಿಯ ಸ್ವರೂಪನೇ (ಸರ್ವಸಾಕ್ಷಿಸ್ವರೂಪನೇ) ನೀನಾಗಿರುವೆ ಎಂದು ತಿಳಿ.

**ಶಬ್ದಾರ್ಥ: ಕನಸಿನೊಳು ಕನಸಾಗಿ**=ಕನಸಿನಲ್ಲಿ ಕನಸಿನ ತಿಳಿವಳಿಕೆಯ ರೂಪವಾಗಿ (ಕನಸಾಗಿ ಕಾಣುವುದರ ಮೂಲ ಸ್ವರೂಪವಾಗಿರುವ ಪರಂಜ್ಯೋತಿಯಾಗಿ ಎಂದು ತಾತ್ಪರ್ಯ); **ಸುಖವಾಗಿ+ಅವಸ್ಥೆ+ಆಗುಹೋಗಿನಲಿ**=ಅವಸ್ಥಾತ್ರಯಗಳ ವಿದ್ಯಮಾನಗಳಲ್ಲಿ ಮೂಲ ಸ್ವರೂಪದ ಸುಖವಾಗಿರುವ, **ತತ್‌ಸಾಕ್ಷಿ**=ಸರ್ವ ಸಾಕ್ಷಿ ಸ್ವರೂಪವಾಗಿರುವ ಪರಂಜ್ಯೋತಿ; **ತತ್**=(ಮನವಚನಗಳಿಗರಿಯಲಳವಡದ)**ಮನವಚನಗಳಿಗೆ+ಅರಿಯಲು+ಅಳವಡದ**=ಮನಸ್ಸು ಮಾತುಗಳಿಗೆ ಎಟುಕಲು ಅಸಾಧ್ಯವಾದ ಅದರಾಚೆಯ ಆತ್ಮ;

**ಟಿಪ್ಪಣಿ-೧: * ಅವಸ್ಥಾತ್ರಯಗಳ ಸಾಕ್ಷಿ-**

**"ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**

**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥"** (ಗೀತೆ=೧೩-೨೨)

ಕ್ಷೇತ್ರಜ್ಞನ ಸ್ವಭಾವವೂ ಪ್ರಭಾವವೂ ಏನೆಂದು ಇಲ್ಲಿ ಹೇಳಿದೆ. ಈ ಶ್ಲೋಕದ ತಾತ್ಪರ್ಯ ಹೀಗಿದೆ:

"ಯಜ್ಞ ಕರ್ಮದಲ್ಲಿ ಋತ್ವಿಕ್ಕುಗಳೂ ಯಜಮಾನನೂ ತಮಗೆ ಉಕ್ತವಾದ ಕರ್ಮಗಳನ್ನು ಮಾಡುತ್ತಿರುವಾಗ ಉಪದ್ರಷ್ಟನಾದವನು (ಹತ್ತಿರದಲ್ಲಿದ್ದು ನೋಡುತ್ತಿರುವವನು) ಋತ್ವಿಕ್ಕುಗಳೊಂದಿಗೆ ಋತ್ವಿಜನಾಗಿಯೂ ಯಜಮಾನನೊಂದಿಗೆ ಯಜಮಾನನಾಗಿಯೂ ಇರುವಂತೆ ಕಾಣಬಂದರೂ ಅವರೆಲ್ಲರಿಗಿಂತ ಬೇರೆಯಾಗಿ ತತ್ಸಾಕ್ಷಿಯಾಗಿ ಮಾತ್ರವೇ ಹೇಗಿರುವನೋ ಹಾಗೆಯೇ ಈ ದೇಹೇಂದ್ರಿಯಗಳಿಗಿಂತ ಭಿನ್ನವಾಗಿರುವ ಪುರುಷನು ಇವುಗಳಿಗಿಂತ ತಾನು ಪೃಥಕ್ಕಾಗಿದ್ದುಕೊಂಡು ಸಾಕ್ಷಿ ಆಗಿರುತ್ತಾನೆ. ಇಂಥ ಸರ್ವ ಸಾಕ್ಷಿ ನೀನೆಂದು ತಿಳಿ.

**ಟಿಪ್ಪಣಿ-೨: ಮನವಚನಗಳಿಗರಿಯಲಳವಡದ= "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ"** ಶ್ರುತಿ ಮಾತು ಮನಸ್ಸುಗಳಾಚೆ ಇರುವವನು.

---

## ಮನಸ್ಸಾಕ್ಷ್ಯತ್ವ (೯೩-೯೯)

**ಮನವನೇ ಕುರುಹಿಟ್ಟು ನೋಡಲು**
**ತನಗೆ ತಾನೇ ತೋರುತಿರ್ಪುದು**
**ಘನಪರಂಜ್ಯೋತಿಪ್ರಕಾಶವು ಮನಕೆ ತಾ ಸಾಕ್ಷಿ; ।**
**ನೆನೆವುದೇ ಮನದ ಸ್ವರೂಪವು;**
**ನೆನಹು ಕಾಮಾದಿಗಳೊಳೊಂದಿಹು**
**ದನಘ, ಕಾಮಾದಿಗಳ ಪಿಡಿದಾ ಮನವ ನಿಗ್ರಹಿಸು ॥** ॥೯೩॥

ತಾತ್ಪರ್ಯ: ಮನಸ್ಸನ್ನೇ ಲಕ್ಷ್ಯವಾಗಿಟ್ಟುಕೊಂಡು ನೋಡಿದರೆ ಘನಪರಂಜ್ಯೋತಿಯ ಪ್ರಕಾಶವು ತನಗೆ ತಾನೇ ಮನಸ್ಸಿಗೆ ಸಾಕ್ಷಿಯಾಗಿರುವುದು ಹೊಳೆಯುತ್ತದೆ. ಸ್ಮರಣೆಯೇ ಮನಸ್ಸಿನ ಸ್ವರೂಪವಾಗಿದೆ. ಮನಸ್ಸು ಕಾಮ, ಕ್ರೋಧ, ಲೋಭ, ಮೋದ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳಲ್ಲಿ ಸೇರಿಕೊಂಡಿದೆ. ಆದ್ದರಿಂದ ಆ ಮನಸ್ಸನ್ನು ನಿಗ್ರಹಿಸಬೇಕಾದರೆ ಅರಿಷಡ್ವರ್ಗಗಳನ್ನು ಜಯಿಸಬೇಕು ಎಂದರೆ ದೃಕ್‌ದೃಶ್ಯ ವಿವೇಚನೆಯಿಂದ ಸಾಧಿಸಿ ಉಳಿಯುವ ನಿಜವಾದ ಸಾಕ್ಷಿಯನ್ನು ಅರಿಯಬೇಕು.

ಶಬ್ದಾರ್ಥ: ಕುರುಹಿಟ್ಟು=ಲಕ್ಷ್ಯವಾಗಿಟ್ಟುಕೊಂಡು; ನೆನಹು=ಸ್ಮರಣೆ; ಮನಸ್ಸು ಕಾಮಾದಿಗಳು=ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗ

ಟಿಪ್ಪಣಿ: ಮನಸ್ಸಿನ ಷೋಡಶವಿಕಾರಗಳಿಗೆ ಅ.೬, ಪದ್ಯ ೨೬ನ್ನು ನೋಡಿ.

---

ಒಮ್ಮೆ ಕಾಮಾದಿಗಳೊಳೊಂದಿಹು
ದೊಮ್ಮೆ ವೈರಾಗ್ಯದೊಳು, ಸಂಸೃತಿ
ಧರ್ಮದೊಳಗೊಮ್ಮೊಮ್ಮೆ, ತತ್ತ್ವವಿಚಾರಚಿಂತೆಯೊಳು ।
ಒಮ್ಮೆ, ಪುಣ್ಯದೊಳೊಮ್ಮೆ, ಪಾಪದೊ
ಳೊಮ್ಮೆ, ಸುಖದುಃಖದಲಿ ತೊಡರಿಹು
ದೊಮ್ಮೆಯದನರಿದಿರ್ಪುದೇ ನೀನೆಂದು ನಿಶ್ಚಯಿಸು ॥ ॥೯೪॥

ತಾತ್ಪರ್ಯ: ಮನಸ್ಸು ಚಂಚಲವಾದುದು, ಅದು ಒಂದು ಬಾರಿ ಅರಿಷಡ್ವರ್ಗದಲ್ಲಿ ಸೇರಿದರೆ ಮತ್ತೊಮ್ಮೆ ವೈರಾಗ್ಯಭಾವದಲ್ಲಿ ಇರುತ್ತದೆ, ಇನ್ನೊಮ್ಮೆ ಸಂಸಾರ ಧರ್ಮದಲ್ಲಿ ಲೀನವಾಗಿರುತ್ತದೆ. ಮಗದೊಮ್ಮೆ ತತ್ತ್ವ ವಿಚಾರಗಳನ್ನು ಚಿಂತಿಸುತ್ತದೆ. ಒಂದೊಂದು ಸಾರಿ ಪುಣ್ಯಕಾರ್ಯದಲ್ಲೂ ಒಂದೊಂದು ಸಾರಿ ಪಾಪವರ್ತನೆಗಳಲ್ಲೂ ಭಾಗಿಯಾಗುತ್ತದೆ. ಹೀಗೆ ಸುಖದುಃಖಗಳಲ್ಲಿ ತೊಡಗಿರುವ ಮನಸ್ಸನ್ನು ತಿಳಿದು ಕೊಳ್ಳುವ ಜ್ಞಾನವೇ ನೀನೆಂದು ತಿಳಿ.

ಶಬ್ದಾರ್ಥ: ಅದನರಿದಿರ್ಪುದೇ=ಆ ಮನಸ್ಸನ್ನು ತಿಳಿದಿರುವುದೇ ನೀನು; * ಕಾಮಾದಿಗಳೊಳು =ಅರಿಷಡ್ವರ್ಗದಲ್ಲಿ; * ಸಂಸೃತಿ ಧರ್ಮದೊಳು=ಸಂಸಾರ ಧರ್ಮದಲ್ಲಿ; * ಚಿಂತೆ=ಚಿಂತನೆ; * ತೊಡರಿಹುದು=ತೊಡಗಿಕೊಂಡಿಹುದು;

---

ಅರಿವನರಿದಿಹೆನೆಂಬುದದು ಮನ
ವರಿವು ತಾನೆಂದೆಂಬುದದು ಮನ
ವರಿವಿನೊಳಗರಿವಾಗಿ ಬರಿಯರಿವಪ್ಪುದದು ಮನವು; ।
ಅರಿಯದೇನೂ ಕುರುಹುದೋರದೆ
ಬರಿಯ ಬೆಳಕಿನ ಬಳಕೆಯಾಗಿ
ರ್ಪರಿವಿನಾಕಾಶವೆ ಕಣಾ ನೀನೆಂದು ನಿಶ್ಚಯಿಸು ॥ ॥೯೫॥

**ತಾತ್ಪರ್ಯ:** ನನಗೆ ಇಂಥದ್ದರ ಜ್ಞಾನವಾಯಿತು ಎಂಬುದು ಕೂಡ ಮನಸ್ಸೇ ಆಗಿದೆ. ಏಕೆಂದರೆ ಈ ಅರಿವು ನನಗೆ ಇಂಥದ್ದರ ಜ್ಞಾನವಾಯಿತು ಎಂಬ ವಿಶೇಷ ರೂಪದಲ್ಲಿರುತ್ತದೆ. ಜ್ಞಾನಸ್ವರೂಪವೇ ನಾನೆಂಬುವುದು ಕೂಡ ಮನಸ್ಸೇ. ಏಕೆಂದರೆ ಈ ಅರಿವು ಜ್ಞಾನಸ್ವರೂಪವೇ ನಾನು ಎಂಬ ವಿಶೇಷರೂಪದಲ್ಲಿರುತ್ತದೆ. ಯಾವುದಾದರೊಂದು ವಿಷಯ ಜ್ಞಾನಸ್ವರೂಪವಾಗಿರದೆ ನಾನು ಶುದ್ಧಜ್ಞಾನ ಸ್ವರೂಪನು ಎನ್ನುವುದೂ ಮನಸ್ಸೇ ಆಗಿದೆ. ಏಕೆಂದರೆ ಈ ಅರಿವು ಶುದ್ಧಜ್ಞಾನ ಸ್ವರೂಪವೇ ನಾನೆಂಬ ವಿಶೇಷ ರೂಪವಾಗಿರುತ್ತದೆ. (ಮುಖ್ಯವಾಗಿ ಜ್ಞಾನದ ವಿಶೇಷ ರೂಪವೆಲ್ಲ ಮನಸ್ಸೇ ಆಗಿದೆ). ಅರಿವಿನ ಯಾವ ವಿಶೇಷರೂಪವೂ ಇಲ್ಲದೆ ಸ್ವಯಂ ಪ್ರಕಾಶದಿಂದ ಹೊಳೆಯುತ್ತಿರುವ ಜ್ಞಾನದ ಕಳೆಯಾಗಿ ಇರುವ ಚಿದ್ಘನಾಕಾಶವೇ ನೀನೆಂದು ನಿಶ್ಚಯಿಸು.

**ಟಿಪ್ಪಣಿ: ಅರಿವನರಿದಿಹೆನೆಂಬುದದು ಮನ**=ನನಗೆ ಇಂಥದರ ಜ್ಞಾನವಾಯಿತು ಎಂಬುದು ಕೂಡ ಮನಸ್ಸೇ. ಏಕೆಂದರೆ ಈ ಅರಿವು ನನಗೆ ಇಂಥದ್ದರ ಜ್ಞಾನವಾಯಿತೆಂಬ ವಿಶೇಷ ರೂಪದಲ್ಲಿರುತ್ತದೆ. **ಅರಿವು ತಾನೆಂದೆಂಬುದದು ಮನ**=ಜ್ಞಾನ ಸ್ವರೂಪನೇ ನಾನೆಂಬುವುದು ಕೂಡ ಮನಸ್ಸೆ. ಏಕೆಂದರೆ ಈ ಅರಿವು ಜ್ಞಾನ ಸ್ವರೂಪವೇ ನಾನು ಎಂಬ ವಿಶೇಷ ರೂಪದಲ್ಲಿರುತ್ತದೆ. **ಬರಿಯರಿವಪ್ಪುದು**= ಯಾವುದಾದರೊಂದು ವಿಷಯ ಜ್ಞಾನ ಸ್ವರೂಪವಾಗಿರದೆ ನಾನು ಶುದ್ಧ ಜ್ಞಾನ ಸ್ವರೂಪ ಎನ್ನುವುದು ಮನಸ್ಸೆ. ಏಕೆಂದರೆ ಈ ಅರಿವು ಶುದ್ಧ ಜ್ಞಾನ ಸ್ವರೂಪವೇ ನಾನೆಂಬ ವಿಶೇಷ ರೂಪದಲ್ಲಿರುತ್ತದೆ. (ಮುಖ್ಯವಾಗಿ ಜ್ಞಾನದ ವಿಶೇಷ ರೂಪವೆಲ್ಲ ಮನಸ್ಸೆ); **ಅರಿಯದೇನೂ**=ಅರಿವಿನ ಯಾವ ವಿಶೇಷರೂಪವೂ ಇಲ್ಲದೆ; * **ಅರಿಯದೇನೂ ಕುರುಹುತೋರದೆ**=ಏನೂ ತಿಳಿಯದೆ ಯಾವ ಗುರುತೂ ಕಾಣದೆ; * **ಅರಿವಿನಾಕಾಶ**=ಚಿದ್ಘವಾಕಾಶ; * **ಬರಿಯ ಬೆಳಕಿನ ಬಳಕೆ ಆಗಿ**=ಸ್ವಯಂ ಪ್ರಕಾಶದಿಂದ ಹೊಳೆಯುತ್ತಿರುವ ಜ್ಞಾನದ ಕಳೆ ಆಗಿರುವ.

---

**ಎನ್ನಮನವಿನ್ನರರೆ ಚಿಂತಿಸ**
**ಲನ್ಯವೇನೂ ಮುಂದೆ ತೋರದು;**
**ನಿನ್ನ ಕತದಿಂ ತಿಳಿದು ನಿಶ್ಚಯವಾಯಿತೆಂದೆನಲು ।**
**ತನ್ನ ಮನಸಿನ ಕದಡು ತಿಳಿದುದ**
**ನಿನ್ನು ತಾನೇ ತಿಳಿದು ಪೇಳುವ**
**ಸನ್ನುತಜ್ಞಾನೈಕನಿಧಿ ನೀನೆಂದು ನಿಶ್ಚಯಿಸು ॥** ॥೯೬॥

**ತಾತ್ಪರ್ಯ:** ಏನಾಶ್ಚರ್ಯ! ಇದುವರೆಗೆ ನಿನ್ನ ಬೋಧೆಯನ್ನು ಕೇಳಿ ನನ್ನ ಮನಸ್ಸು ಅನ್ಯವಸ್ತು ಯಾವುದು ಎಂದು ಚಿಂತಿಸಿದಾಗ ನನಗೆ ಅನ್ಯವಸ್ತು ಯಾವುದೂ ಕಂಡು ಬರಲೇ ಇಲ್ಲ. ದೃಕ್-ದೃಶ್ಯ ಭೇದ ಕ್ಷೇತ್ರ-ಕ್ಷೇತ್ರಜ್ಞ ಸ್ವರೂಪ, ಜೀವಸ್ವರೂಪ ಮೊದಲಾದ ಅರಿವನ್ನು ನಿನ್ನ ದೆಸೆಯಿಂದ ತಿಳಿದಿದ್ದರಿಂದ ಸರ್ವವೂ ನಾನೆಂದು ನಿರ್ಧಾರವಾಯಿತು ಎಂದು ಶುಕನು ಹೇಳಲು "ನಿನ್ನ ಮನಸ್ಸಿನ ಮಂದತ್ವವನ್ನು ಅರ್ಥ ಮಾಡಿಕೊಂಡೆಯಲ್ಲಾ ಅದನ್ನು ನಿನಗೆ ತಿಳಿಸಿ ಹೇಳಿದ ನಿನ್ನಲ್ಲಿನ ಶ್ರೇಷ್ಠ ಜ್ಞಾನ ನಿಧಿಯೇ ನೀನೆಂದು ತಿಳಿ" ಎಂದು ವ್ಯಾಸರು ಹೇಳಿದರು.

ಶಬ್ದಾರ್ಥ: ಕದಡು=ಮಂದತ್ವ, ಅಜ್ಞಾನ; * ಕತದಿಂ=ದೆಸೆಯಿಂದ; * ಸನ್ನುತ=ಶ್ರೇಷ್ಠ, * ಸನ್ನುತಜ್ಞಾನೈಕನಿಧಿ=ಶ್ರೇಷ್ಠವಾದ ಜ್ಞಾನದ ಏಕೈಕ ನಿಧಿಯೇ ನೀನು.

---

ನೆನಹಿನೊಡಲಾಗಿರ್ಪುದೇ ಮನ;
ಘನ ವಿವೇಕವೆ ಬುದ್ಧಿ; ವ್ಯವಹೃತಿ
ಯನುಭವದಲಭಿಮಾನ ರೂಪವೆ ಕೇಳಹಂಕಾರ; ।
ಇನಿತು ವಿಧವಾಗಿರ್ಪ ಕರಣವ
ತನಯ ಪ್ರೇರಿಸುತಿರ್ಪ ಸಾಕ್ಷಿಯ
ದನುಪಮಪರಂಜ್ಯೋತಿಯದೆ ನೀನೆಂದು ನಿಶ್ಚಯಿಸು ॥ ॥೯೭॥

ತಾತ್ಪರ್ಯ: ಸ್ಮರಣೆ, ಚಿಂತೆ, ಜ್ಞಪ್ತಿ, ಮೊದಲಾದ ವೃತ್ತಿಗಳ ನೆಲೆಯೇ ಮನಸ್ಸು. ಇವುಗಳಲ್ಲಿ ಸತ್ಯಾನ್ವೇಷಣೆ ಮಾಡುವ ಶ್ರೇಷ್ಠ ವಿವೇಕವೇ ಬುದ್ಧಿ; ವ್ಯವಹಾರದಲ್ಲಿ ಜಾಗ್ರತ, ಸ್ವಪ್ನ, ಸುಷುಪ್ತಿ ಅವಸ್ಥೆಗಳ ಅನುಭವದಲ್ಲಿ ಇಟ್ಟಿರುವ ಅಭಿಮಾನವೇ ಅಹಂಕಾರ; ಈ ರೀತಿ ಮನಸ್ಸು, ಬುದ್ಧಿ, ಅಹಂಕಾರ ಎಂಬ ರೂಪದಲ್ಲಿರುವ ಅಂತಃಕರಣವನ್ನು ಪ್ರೇರೇಪಿಸುತ್ತಿರುವವನೂ ಸರ್ವಸಾಕ್ಷಿರೂಪನೂ ಆದ ಅಸದೃಶ ಪರಂಜ್ಯೋತಿಸ್ವರೂಪನೇ ನೀನೆಂದು ತಿಳಿ.

ಶಬ್ದಾರ್ಥ: ಇನಿತುವಿಧವಾಗಿರ್ಪ ಕರಣವ=ಮನಸ್ಸು, ಬುದ್ಧಿ, ಅಹಂಕಾರ ಎಂಬ ರೂಪದಲ್ಲಿರುವ ಅಂತಃಕರಣವನ್ನು; * ಸಾಕ್ಷಿ=ಸಾಕ್ಷಿರೂಪನಾದವನು; * ಅನುಪಮ=ಅಸದೃಶ;

---

ತನ್ನ ಮನವೆಂಬಾಗ ಮನದಿಂ
ಭಿನ್ನ ತಾನೆಂದರಿದು, ಮನವನು
ತನ್ನಿದಿರ ದೃಶ್ಯತ್ವದಿಂ ಕುರುಹಿಟ್ಟು, ತನ್ಮನದ ।
ಗನ್ನಗತಕವನರಿವುತಿಹ ಸಂ
ಪನ್ನ ಸತ್ಯಜ್ಞಾನನಿಜಚೈ
ತನ್ಯವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ॥೯೮॥

ತಾತ್ಪರ್ಯ: ನನ್ನ ಮನಸ್ಸು ಎಂದಾಗ ನಾನು ಬೇರೆ, ಮನಸ್ಸು ಬೇರೆ ಎಂದು ಅರ್ಥ ಮಾಡಿಕೊಳ್ಳಬೇಕು. ಹೀಗೆ ತಿಳಿದು ಆ ಮನಸ್ಸನ್ನು ತನ್ನೆದುರು ದೃಶ್ಯತ್ವದಿಂದ ಕಾಣುವ ಗುರುತಾಗಿ ಭಾವಿಸಬೇಕು. ಆ ಮನಸ್ಸು ನಮಗೆ ಮೋಸಪಡಿಸುವ ಕಲ್ಪನೆಗಳನ್ನು ಮೂಡಿಸುತ್ತಾ ಮಾಡುವ ಬಗೆಬಗೆಯ ಚೇಷ್ಟೆಗಳನ್ನು ತಿಳಿದುಕೊಂಡು ಅದರಿಂದ ಬೇರೆಯಾದ ಸಕಲಗುಣಸಂಪನ್ನ ಸತ್ಯಜ್ಞಾನಸ್ವರೂಪನಾದ ಮೂಲ ಚೈತನ್ಯವೇ ನಾನೆಂದು ನಿನ್ನಲ್ಲಿಯೇ ನೀನರಿತುಕೊಳ್ಳಬೇಕು.

ಶಬ್ದಾರ್ಥ: ತನ್ಮನದ=ಆ ಮನಸ್ಸಿನ; ಗನ್ನಗತಕವ=ಮೋಸಪಡಿಸುವ ಕಲ್ಪನೆಗಳನ್ನು ಕೊಡುವಂಥ ಬಗೆ ಬಗೆಯ ಚೇಷ್ಟೆಗಳನ್ನು; * ಸಂಪನ್ನ=ಸಕಲಗುಣ ಸಂಪನ್ನ;

---

**ಸುರನರೋರಗನಲ್ಲ; ಮೇಣ್ಸ್ತ್ರೀ**
**ಪುರುಷವ್ಯಕ್ತಿಯದಲ್ಲ; ಬ್ರಾಹ್ಮಣ**
**ಧರಣಿಪತಿ ವೈಶ್ಯಾದಿವರ್ಣಾಶ್ರಮಗಳೇನಿಲ್ಲ;** ।
**ಕರಚರಣಮೂರ್ಧಾಕ್ಷಿನಾಸಿಕ**
**ವೆರಸಿದವಯವವಿಲ್ಲ; ನಿತ್ಯ**
**ಸ್ಫುರಿತಪರಮಾಕಾಶವದು ನೀನೆಂದು ನಿಶ್ಚಯಿಸು ॥ ॥೯೯॥**

**ತಾತ್ಪರ್ಯ:** ನೀನು ಯಾರು ಎಂಬುದನ್ನು ತಿಳಿ ಎಂಬುದನ್ನು ನೇತಿಮಾರ್ಗದಲ್ಲಿ ಹೇಳಲಾಗಿದೆ. ದೇವತೆಯಲ್ಲ, ಮಾನವನಲ್ಲ, ನಾಗಲೋಕದವನು ಅಲ್ಲ ಅಥವಾ ಹೆಣ್ಣಲ್ಲ, ಗಂಡಲ್ಲ, ಬ್ರಾಹ್ಮಣನಲ್ಲ, ಕ್ಷತ್ರಿಯನಲ್ಲ, ವೈಶ್ಯನಲ್ಲ, ಇತರೆ ವರ್ಗವನ್ನೊಳಗೊಂಡ ಯಾವುದೇ ವರ್ಣಾಶ್ರಮಕ್ಕೆ ಸೇರಿದವನಲ್ಲ. ಕೈಕಾಲು, ತಲೆ, ಕಣ್ಣು, ಮೂಗಿನಿಂದ ಕೂಡಿದ ಅಂಗಾಂಗಗಳ ಶರೀರವಲ್ಲ, ಸ್ವಯಂಪ್ರಕಾಶಮಾನನಾದ ಶಾಶ್ವತವಾದ ಚಿದಾಕಾಶ ರೂಪಿಯೇ ನೀನೆಂದು ತಿಳಿ.

**ಶಬ್ದಾರ್ಥ:** * **ಸುರ**=ದೇವತೆ; * ನರ=ಮಾನವ; * **ಉರಗ**=ನಾಗಲೋಕದವನು; * **ಮೇಣ್**=ಅಥವಾ; * **ಸ್ತ್ರೀ**=ಹೆಣ್ಣು; * **ಪುರುಷ**=ಗಂಡು; * **ಧರಣಿಪತಿ**=ಕ್ಷತ್ರಿಯ; * **ಕರ**=ಕೈ; * **ಚರಣ**=ಕಾಲು; * **ಮೂರ್ಧ**=ತಲೆ; **ಅಕ್ಷಿ**=ಕಣ್ಣು; * **ನಾಸಿಕ**=ಮೂಗು; * **ಬೆರಸಿದ**=ಒಳಗೊಂಡ; * **ಅವಯವ** =ಅಂಗಾಂಗ; * **ನಿತ್ಯಸ್ಫುರಿತ**=ಸ್ವಯಂಪ್ರಕಾಶವೆನಿಸಿದ; * **ಪರಮಾಕಾಶ**=ಚಿದಾಕಾಶ;

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

## ಪ್ರಶ್ನೆ (೧೦೦)

**ಏನುಮಲ್ಲದ ವಸ್ತು ನೀನೆಂ**
**ದೇ ನಿದಾನಿಸಿ ಪೇಳ್ದ ಬೆಡಗಿಂ**
**ತೇನು? ನಾನಾರೆಂಬುವದ ನಾನರಿವ ಪರಿಯೆಂತು?** ।
**ಸ್ವಾನುಭವವೆನಗಪ್ಪುದೆಂತೈ?**
**ಜ್ಞಾನವಂತನೆ, ಕರುಣಿಸೆನ್ನೀ**
**ದೀನತನವಳಿವಂತೆ ಸಲಹುವದೆಂದು ಶುಕ ನುಡಿದ ॥ ॥೧೦೦॥**

**ತಾತ್ಪರ್ಯ:** ವ್ಯಾಸರ ಮಾತನ್ನು ಆಲಿಸಿ ಶುಕನು ಕೇಳಿದನು; ಗುರುವೆ, ನಾನು ಎಂಬುದು ನಿಜವಾದ ಅರ್ಥದಲ್ಲಿ ಯಾವುದೂ ಅಲ್ಲದ ವಸ್ತು ಎಂದು ವಿಮರ್ಶಿಸಿ ಹೇಳಿದ ಒಗಟಿನ ಮಾತನ್ನು ಹೇಗರ್ಥ ಮಾಡಿಕೊಳ್ಳುವುದು? ಆತ್ಮರೂಪಿಯಾದ ನಾನು ಎಂಬುದನ್ನು ಶರೀರರೂಪಿಯಾದ ನಾನು ತಿಳಿಯುವ ರೀತಿ ಹೇಗೆ? ಸ್ವಯಂವೇದ್ಯವಾಗುವ ಬಗೆ ಹೇಗೆ? ಜ್ಞಾನರೂಪಿಯಾದ ವ್ಯಾಸನೇ ಅನುಗ್ರಹಿಸು. ಈ ನನ್ನ ಭ್ರಾಂತಿರೂಪವಾದ ಅಜ್ಞಾನವನ್ನು ದೂರ ಮಾಡಿ ಕಾಪಾಡು ಎಂದು ಪ್ರಾರ್ಥಿಸಿದನು.

**ಶಬ್ದಾರ್ಥ:** * ಏನುಮಲ್ಲದ=ಏನುಂ+ಅಲ್ಲದ=ಯಾವುದೂ ಆಗಿರದ; * ನಿದಾನಿಸಿ=ವಿಚಾರಿಸಿ; ಬೆಡಗು=ಒಗಟಿನಮಾತು; *ನಾನು=ಆತ್ಮರೂಪಿ; * ನಾನು=ಶರೀರರೂಪಿ; * ಸ್ವಾನುಭವವೆನಗಪ್ಪುದು =ಸ್ವಯಂ ವೇದ್ಯವಾಗುವುದು ಹೇಗೆ; * ಜ್ಞಾನವಂತ=ಜ್ಞಾನರೂಪಿ; * ದೀನತನವಳಿವಂತೆ= ಭ್ರಾಂತಿಜನ್ಯ ಅಜ್ಞಾನ ದೂರವಾಗುವಂತೆ; * ಸಲಹು=ಕಾಪಾಡು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

## ಜ್ಞಾನಸ್ವರೂಪ (೧೧೧-೧೨೦)

ಅನ್ಯರನು ನೀನಾರು ಹೇಳೆಂ
ದಿನ್ನು ಕೇಳುವದುಚಿತಮಲ್ಲದೆ
ತನ್ನ ತಾನಾರೆಂದು ಕೇಳುವದುಚಿತವೇ ಮಗನೆ? ।
ಕನ್ನಡಿಯೆ ಮುಂಗಯ್ಯ ಕಂಕಣ
ಕಿನ್ನು? ನಿನ್ನೊಳು ನಿನ್ನ ನಿಜ ಚೈ
ತನ್ಯವೆಂದದ ತಿಳಿದು ದೃಢತರವಾಗಿ ನಿಶ್ಚಯಿಸು ॥ ॥೧೧೧॥

**ತಾತ್ಪರ್ಯ:** ನಮ್ಮಿಂದ ಬೇರೆ ಆಗಿರುವುದು ಇದ್ದರೆ ಅದೇನು ಎಂದು ಕೇಳುವುದು ನ್ಯಾಯ. ಹಾಗಲ್ಲದೆ ನಾನೇ ಅದಾಗಿರುವಾಗ ಅದಾವುದು, ನಾನಾರು? ಎಂದು ಕೇಳುವುದು ಸರಿಯೆ? ಮುಂಗೈಯನ್ನು ಅಲಂಕರಿಸಿರುವ ಕಂಕಣವನ್ನು ಕಾಣಲು ಕನ್ನಡಿ ಬೇಕಾದೀತೇ? ನಿನ್ನಲ್ಲಿ ಇರುವ ನಿಜ ಚೈತನ್ಯರೂಪವೇ ನೀನಾಗಿರುವೆ ಎಂದು ತಿಳಿ. ಇದು ನಿಶ್ಚಯದ ಮಾತು ಎಂದು ಶುಕನಿಗೆ ವ್ಯಾಸ ಹೇಳಿದನು.

**ಶಬ್ದಾರ್ಥ:** * ಅನ್ಯರನು=ತನ್ನಿಂದ ಬೇರೆ ಆದುದನ್ನು; * ಉಚಿತ=ನ್ಯಾಯ; * ಮುಂಗೈ =ಮಣಿಕಟ್ಟು, ಕೈ ಮುಂಭಾಗ; * ಕಂಕಣ=ಕಡಗ; * ದೃಢತರವಾಗಿ=ಖಂಡಿತವಾಗಿ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

ನಾನರಿಯೆ ನಾನನ್ಯನೆಂಬುದ
ನೇನವಿಡಿದದನರಿವುತಿಹೆಯದು
ತಾನೆ ಬರಿಯರಿವಾಗಿ ತೋರ್ಪುದು; ಕುರುಹನಿಟ್ಟದನು ।
ಧ್ಯಾನಿಸುತ್ತಿರಲನವರತವಾ
ಜ್ಞಾನದಪರೋಕ್ಷಾನುಭವಸಂ
ಧಾನವಹ ನಿಜ ತೋರ್ಪುದದು ನೀನೆಂದು ನಿಶ್ಚಯಿಸು ॥ ॥೧೧೨॥

**ತಾತ್ಪರ್ಯ:** ನಾನು ಪುತ್ರ, ಶರೀರ ಮೊದಲಾದವುಗಳಿಗಿಂತ ಬೇರೆಯಾದವನು ಎಂಬುದನ್ನು ಯಾವುದರ ಆಧಾರದಿಂದ ತಿಳಿಯುತ್ತೀಯೋ ಅದು ತನ್ನಷ್ಟಕ್ಕೆ ತಾನೇ ಶುದ್ಧಜ್ಞಾನವಾಗಿ ತೋರುತ್ತಿರುವುದು. ನೀನು ಅದನ್ನೇ ಲಕ್ಷ್ಯವಾಗಿಟ್ಟುಕೊಂಡು

ಸದಾಕಾಲವು ಧ್ಯಾನಿಸುತ್ತಿದ್ದರೆ ಪ್ರತ್ಯಕ್ಷ ಅನುಭವವಾಗಿ ಸತ್ಯದರ್ಶನವಾಗುತ್ತದೆ. ಅದೇ ನೀನೆಂದು ನಿಶ್ಚಯಿಸಿಕೊ.

**ಶಬ್ದಾರ್ಥ:** * ನಾನು=ಆತ್ಮ; ಶುದ್ಧ ಜ್ಞಾನರೂಪಿ; * ಅರಿವು=ಜ್ಞಾನ; ಕುರುಹು=ಲಕ್ಷ್ಯ, ಗುರಿ; * ಧ್ಯಾನ=ಚಿಂತನೆ; ಅಪರೋಕ್ಷ+ಅನುಭವ=ಪ್ರತ್ಯಕ್ಷವಾಗಿ ಅನುಭವಕ್ಕೆ ಹೊಂದಿಕೆಯಾಗಿರುವುದು; ನಿಜ ತೋರ್ಪುದು=ಸತ್ಯ ದರ್ಶನ; ಅನ್ಯನು=ಪುತ್ರ, ಶರೀರ ಮೊದಲಾದವುಗಳಿಂದ ಬೇರೆ ಆದವನು; ಏನವಿಡಿದದನರಿವುತಿಹೆಯದು=ಪುತ್ರ ಮೊದಲಾದವರಿಗಿಂತ ನಾನು ಬೇರೆಯೆಂಬುದನ್ನು ತಿಳಿಯೆನೆಂದು ಯಾವುದರ ಆಧಾರದಿಂದ ತಿಳಿಯುತ್ತೀಯೋ ಅದು. (ಆ ಜ್ಞಾನದ); ಅಪರೋಕ್ಷಾನುಭವಸಂಧಾನವು=ಪ್ರತ್ಯಕ್ಷವಾಗಿ ಅನುಭವಕ್ಕೆ ಹೊಂದಿಕೆಯಾಗಿರುವುದು.

---

**ಅರಿವು ತಾನಾಗಿರ್ದು ತನ್ನನು**
**ವರಿಯೆನೆಂಬುದು ತನ್ನ ಬಾಯೊಳ**
**ಗಿರುವ ನಾಲಿಗೆಯಿಲ್ಲವೆಂಬನ ತೆರದಿ ಹಾಸ್ಯವಲಾ! ।**
**ಅರಿಯೆನೆಂಬುದನೇತರಿಂ ನೀ**
**ನರಿದೆಯಾ ಬರಿಯರಿವು ತಾನೇ**
**ನಿರುಪಮಚಿದಾನಂದವದು ನೀನೆಂದು ನಿಶ್ಚಯಿಸು ॥ ॥೧೦೩॥**

**ತಾತ್ಪರ್ಯ:** ಜ್ಞಾನಸ್ವರೂಪಿ ನೀನೇ ಆಗಿರುವಾಗ ನಿನ್ನನ್ನು ನೀನು ತಿಳಿಯಲಾರೆ ಎನ್ನುವ ವಿಚಾರ ಹೇಗಿದೆಯೆಂದರೆ ತನ್ನ ಬಾಯಲ್ಲಿ ಇರುವ ನಾಲಿಗೆ ಇಲ್ಲವೆನ್ನುವ ರೀತಿಯಲ್ಲಿ ನಗೆಗೇಡಿನ ಮಾತಿನಂತೆ ಆಗುತ್ತದೆ ಅಲ್ಲವೇ? ಎಲೈ ಶುಕನೇ ಕೇಳು, ನಾನು ತಿಳಿದಿಲ್ಲ ಎಂಬುದನ್ನು ಯಾವುದರಿಂದ ತಿಳಿದುಕೊಂಡಿರುವೆಯೋ ಆ ಬರಿಯ ಜ್ಞಾನವೇ ತಾನಾಗಿಯೇ ಅನುಪಮ ಚಿದಾನಂದವಾಗಿರುವುದು. ಆ ಆನಂದ ಸ್ವರೂಪನೇ ನೀನು ಎಂದು ದೃಢವಾಗಿ ತಿಳಿ.

**ಪದ ವಿಭಾಗ:** ತನ್ನನುವರಿಯೆನೆಂಬುದು=ತನ್ನ+ಅನುವ+ಅರಿಯೆನು+ಎಂಬುದು

**ಶಬ್ದಾರ್ಥ:** * ಹಾಸ್ಯವಲಾ!=ನಗೆಗೇಡಿನ ಮಾತಿನಂತೆ ಆಗುತ್ತದೆ ಅಲ್ಲವೇ? * ನಿರುಪಮ=ಅನುಪಮ;

---

**ಅರಿವುತಾನಾಗಿರ್ದು ತನ್ನನು**
**ಮರೆವ ಪರಿಯೆಂತಕಟ! ಸೂರ್ಯಗೆ**
**ಹಿರಿದು ಕತ್ತಲೆಯುಂಟೆ! ಬೆಡಗಿನ ನುಡಿಯಲಾ ನೋಡೆ! ।**
**ಅರಿಯಲಿಲ್ಲದು; ಮರೆಯಲಿಲ್ಲದು;**
**ಕುರುಹುತೆರಹೇನಿಲ್ಲವಿದ್ದಂ**
**ತಿರುತಿಹುದು; ನಿಜವಸ್ತುವದು ನೀನೆಂದು ನಿಶ್ಚಯಿಸು ॥ ॥೧೦೪॥**

**ತಾತ್ಪರ್ಯ:** ಆತ್ಮ ಜ್ಞಾನವು ತಾನೇ ಆಗಿದ್ದು ತನ್ನನು ತಾನು ಮರೆತೇ ಎಂದರೆ ಅದು ಹೇಗೆ ಸಾಧ್ಯ? ಸೂರ್ಯನಿಗಿಂತ ಕತ್ತಲೆ ದೊಡ್ಡದಾಗಲು ಶಕ್ಯವೇ? ವಿಚಾರ ಮಾಡಿದರೆ ಇದು ಅಚ್ಚರಿಯ ಮಾತಲ್ಲವೇ! ಅರಿಯಲ್ಪಟ್ಟದ್ದು ಆತ್ಮನಾಗುವುದಿಲ್ಲ ಅಂತೆಯೇ ಮರೆಯಲ್ಪಡುವುದೂ ಆತ್ಮವಲ್ಲ. ಇಂಥ ಗುರುತು ಉಳ್ಳದ್ದೆಂಬುದೂ ಇಂಥ ಪ್ರಕಾರದ್ದೆಂಬುದೂ ಆ ಅರಿವಿನ ಸ್ವರೂಪಕ್ಕೆ ಇಲ್ಲ. ಅದು ಇದ್ದ ಹಾಗೆಯೇ ಇರತಕ್ಕದ್ದು ಅದೇ ನಿಜವಾದ ವಸ್ತು. ಆ ವಸ್ತುವೇ ನೀನೆಂದು ದೃಢವಾಗಿ ತಿಳಿ.

**ಶಬ್ದಾರ್ಥ: ಹಿರಿದು=ಮೀರಿಸಿದ್ದು, ದೊಡ್ಡದು; ಬೆಡಗಿನ ನುಡಿಯಲಾ=ಅಚ್ಚರಿಯ ಮಾತಿದಲ್ಲವೇ?**

**ಟಿಪ್ಪಣಿ-೧: ಅರಿಯಲಿಲ್ಲದು=(ಆ ತನ್ನ ಅರಿವಿನ ಸ್ವರೂಪವು) ಅರಿಯಲ್ಪಡಲಿಲ್ಲ. (ಅರಿವೆಂಬ ಕ್ರಿಯೆಗೆ ವಿಷಯವಾಗಲಿಲ್ಲವೆಂದರ್ಥ) ವಿಷಯಭೂತವಾದ ವಿಶೇಷ ಜ್ಞಾನವು ಆತ್ಮನಲ್ಲವೆಂದು ೯೩ನೇ ಪದ್ಯದಲ್ಲಿ ಹೇಳಿದೆ. ಅರಿಯಲ್ಪಟ್ಟದ್ದು ಆತ್ಮನಾಗುವುದಿಲ್ಲವೆಂಬ ಅರ್ಥವನ್ನು "ಅವಿಜ್ಞಾತಂ ವಿಜಾನತಾಂ" ಎಂದು ಕೇನೋಪನಿಷತ್ತು ಹೇಳುತ್ತದೆ.**

**ಟಿಪ್ಪಣಿ-೨: ಮರೆಯಲಿಲ್ಲದು=ಅದು (ಆ ತನ್ನ ಅರಿವಿನ ಸ್ವರೂಪವು) ಮರೆಯಲ್ಪಡಲಿಲ್ಲ. (ಹೊರಗಣ ವಿಷಯಗಳನ್ನು ಮರೆಯಬಹುದು; ತನ್ನನ್ನು ತಾನು ಮರೆಯುವುದು ಅಸಂಭವವು; ಏಕೆಂದರೆ ಆ ತಾನು ಮರೆತವನ ಸ್ವರೂಪವಾಗಿಯೇ ಇರುವುದು).**

**ಟಿಪ್ಪಣಿ-೩: ಕುರುಹುತೆರಹೇನಿಲ್ಲ=ಇಂಥ ಗುರುತುಳ್ಳದೆಂದೂ ಇಂಥ ಪ್ರಕಾರದ್ದೆಂದೂ ಆ ಅರಿವಿನ ಸ್ವರೂಪಕ್ಕೆ ಇಲ್ಲ.**

---

**ನಾನು ನಾನೆಂದೆನ್ನುವೀ ಅಭಿ**
**ಮಾನವೇ ತಾನಲ್ಲವದನರಿ**
**ವಾ ನಿದಾನದ ಬರಿಯರಿವೆ ನೀನೆಂದು ತಿಳಿದದನು ।**
**ಸ್ವಾನುಭವಸುಜ್ಞಾನದಿಂದಲಿ**
**ತಾನರಿಯಲದು ನಿತ್ಯ ನಿಜ ನಿ**
**ರ್ಮಾನ ನಿರ್ಗುಣವಸ್ತುವದು ನೀನೆಂದು ನಿಶ್ಚಯಿಸು ॥ ॥೧೦೫॥**

**ತಾತ್ಪರ್ಯ:** ನಾನು, ನಾನು, ಎಂದು ಹೇಳುವ ಬಾಯಿಮಾತಿನ ಅಭಿಮಾನವೇ ನೀನಲ್ಲ; ಅದನ್ನು ತಿಳಿಯಲು ಮೂಲ ಕಾರಣವಾದ ಕೇವಲ ಜ್ಞಾನವೇ ನೀನೆಂದು ತಿಳಿ. ಆ ಜ್ಞಾನವನ್ನು ನಿನ್ನ ಸ್ವಂತ ಅನುಭವದಿಂದಲೂ ಸಮ್ಯಕ್‌ಜ್ಞಾನದಿಂದಲೂ ತಿಳಿದುಕೊಂಡರೆ ಆಗ ಸ್ಥಿರವಾಗಿಯೂ ಸತ್ಯವಾಗಿಯೂ ಅಳತೆಗೆ ಸಿಗದದ್ದಾಗಿಯೂ ಗುಣರಹಿತವಾಗಿಯೂ ಇರುವ ವಸ್ತು ನೀನೇ ಎಂದು ಖಂಡಿತವಾಗಿ ತಿಳಿಯುತ್ತದೆ.

**ಶಬ್ದಾರ್ಥ:** ನಿದಾನದ=ಮೂಲಕಾರಣವಾದ; ನಿರ್ಮಾನ=ಯಾವ ಅಳತೆಗೂ ಸಿಗದ; * ಸುಜ್ಞಾನ =ಸಮ್ಯಕ್‌ಜ್ಞಾನ; * ಸ್ವಾನುಭವ=ಸ್ವಂತ ಅನುಭವ.

---

ನನ್ನ ನಾನೆಂತರಿವೆನೆಂಬುದ
ಮುನ್ನಲರಿವರಿವಾತ್ಮನದು, ನೆರೆ
ತನ್ನ ತಾನೇ ತೋರುತಿರ್ಪುದು; ಸ್ವಪ್ರಕಾಶವದು; ।
ತನ್ನ ಬುದ್ಧಿಗೆ ಸಾಕ್ಷಿ; ತಿಳಿ ಚೈ
ತನ್ಯರೂಪವಖಂಡಮಯವದ
ನನ್ಯವಮಲಾನಂದ ನೀನೆಂದದನು ನಿಶ್ಚಯಿಸು ॥ ॥೧೦೬॥

ತಾತ್ಪರ್ಯ: ನನ್ನನ್ನು ನಾನು ಹೇಗೆ ತಿಳಿಯಬಲ್ಲೆನು ಎಂಬುದಾಗಿ ಮೊದಲಿಗೆ ತನ್ನನ್ನು ತಾನು ತಿಳಿಯಲಾಗದ ಅರಿವೇ ಆತ್ಮವು. ಏಕೆಂದರೆ ವಿಶೇಷತಃ ಅದು ತನ್ನನ್ನು ತಾನೇ ತೋರಿಸಿಕೊಳ್ಳುವುದು. ತನಗೆ ತಾನೇ ಬೆಳಗುವಂಥದ್ದು; ತನ್ನ ಬುದ್ಧಿಗೆ ಅದೇ ಸಾಕ್ಷೀಭೂತವಾಗಿದೆ; ಚೈತನ್ಯ ಸ್ವರೂಪವಾಗಿದೆ; ಪರಿಪೂರ್ಣ ರೂಪವಾಗಿದೆ; ತನ್ನನ್ನು ಬಿಟ್ಟರೆ ಬೇರೆಯಲ್ಲದ್ದಾಗಿದೆ; ಅನನ್ಯವೂ ನಿರ್ಮಲಾನಂದ ಸ್ವರೂಪವೂ ಆದ ಜ್ಞಾನವೇ ನೀನೆಂದು ತಿಳಿ.

ಶಬ್ದಾರ್ಥ: ಮುನ್ನಲು=ಮೊದಲಿಗೆ; ಅನನ್ಯವು=ತನ್ನನ್ನು ಬಿಟ್ಟು ಬೇರೆ ಅಲ್ಲದ್ದು; ಅಮಲಾನಂದ =ನಿರ್ಮಲ ರೂಪದ ಸಂತೋಷ; * ಅಖಂಡಮಯವು=ಪರಿಪೂರ್ಣ ರೂಪವು;

ಟಿಪ್ಪಣಿ: ಅರಿವ+ಅರಿವು+ಆತ್ಮನು+ಅದು=ತನ್ನನ್ನು ತಾನು ತಿಳಿಯಲಾರೆ ಎಂಬ ಅರಿವೇ ಆತ್ಮವು; ಈ ಅರ್ಥದಲ್ಲಿ "ವಿಜ್ಞಾತಮವಿಜಾನತಾಂ" ಎಂದು ಕೇನೋಪನಿಷತ್ತು ಹೇಳುತ್ತದೆ.

---

ಜ್ಞಾನದಿಂದಲಿ ತನ್ನನರಿಯೆನು
ತಾನೆನುತ್ತಿಹನದು ನಿಮಿತ್ತದಿ
ಜ್ಞಾನಪೂರ್ವಕವಾಗಿ ತೋರ್ಪುದು ಕೇಳದಜ್ಞಾನ ।
ಜ್ಞಾನದಿಂ ತೋರಿಸುತಲಿರ್ಪ
ಜ್ಞಾನ ಜಡದೃಶ್ಯಾನ್ಯವದರಿಂ
ಜ್ಞಾನವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ॥೧೦೭॥

ತಾತ್ಪರ್ಯ: ನಾನು ನನ್ನ ಜ್ಞಾನದಿಂದ ನನ್ನ ಸ್ವರೂಪವನ್ನು ವಿಷಯಭೂತವಾಗಿ ತಿಳಿದುಕೊಳ್ಳಲಾರೆನು. ಆ ಕಾರಣದಿಂದ ನನ್ನನ್ನು ನಾನು ತಿಳಿಯೆನು ಎನ್ನುವುದೂ ಒಂದು ಜ್ಞಾನವೇ ಆಗಿರುವುದರಿಂದ ನಮ್ಮ ಅಜ್ಞಾನವು ಜ್ಞಾನಪೂರ್ವಕವಾಗಿಯೇ ತೋರುವುದು. ಹೀಗೆ ಜ್ಞಾನದಿಂದಲಿ ತಿಳಿಯುವ ಅಜ್ಞಾನವು ಅರಿಯಲಾರದ್ದು, ಹೊರಗೆ ಕಾಣುವಂಥದ್ದು ಮತ್ತು ತನಗಿಂತ ಬೇರೆಯಾದದ್ದು (ಜಡ, ದೃಶ್ಯ, ಅನ್ಯವು) ಆಗಿದೆ. ಆದ್ದರಿಂದ ಜ್ಞಾನವೇ ನೀನೆಂದು ನಿನ್ನಲ್ಲಿ ನೀನೇ ತಿಳಿದು ಆತ್ಮಸ್ವರೂಪವನ್ನು ನಿರ್ಧರಿಸು.

ಪದ ವಿಭಾಗ: ತೋರಿಸುತಲಿರ್ಪಜ್ಞಾನವೇ=ತೋರಿಸುತಲಿರ್ಪ+ಅಜ್ಞಾನವೇ

**ಶಬ್ದಾರ್ಥ:** ಕೇಳದಜ್ಞಾನ=ಕೇಳು+ಅದು+ಅಜ್ಞಾನ=ನನ್ನನ್ನು ನಾನು ಅರಿಯೆನು ಎನ್ನುವುದೂ ಒಂದು ಜ್ಞಾನವೇ. ಆದ್ದರಿಂದ ನಮ್ಮ ಅಜ್ಞಾನವು ಜ್ಞಾನ ಪೂರ್ವಕವಾಗಿಯೇ ತೋರುವುದು; ಜ್ಞಾನದಿಂದಲಿ ತನ್ನನರಿಯೆನುತ ತಾನು ಎನುತಿಹನು=ನಾನು ನನ್ನ ಜ್ಞಾನದಿಂದ ನನ್ನ ಸ್ವರೂಪವನ್ನು ವಿಷಯಭೂತವಾಗಿ ತಿಳಿದುಕೊಳ್ಳಲಾರೆನು; ಜ್ಞಾನಪೂರ್ವಕವಾಗಿ ತೋರ್ಪುದು ಕೇಳದಜ್ಞಾನ=ನನ್ನನ್ನು ನಾನು ಅರಿಯೆನು ಎನ್ನುವುದೂ ಒಂದು ಜ್ಞಾನವೇ. ಆದ್ದರಿಂದ ನಮ್ಮ ಅಜ್ಞಾನವು ಜ್ಞಾನಪೂರ್ವಕವಾಗಿಯೇ ತೋರುವುದು. ಜಡದೃಶ್ಯಾನ್ಯ=ಅರಿಯಲಾರದ್ದು, ಹೊರಗೆ ಕಾಣುವಂಥದ್ದು ಮತ್ತು ತನಗಿಂತ ಬೇರೆಯಾದದ್ದು.

---

**ತನ್ನನರಿಯದವಿದ್ಯೆಗಿಂತಲು**
**ಮುನ್ನಲಿಹ ಸುಜ್ಞಾನವನು ಸಂ**
**ಕೀರ್ಣವಾದಜ್ಞಾನ ಮುಸುಕೆ ಸಮರ್ಥವಲ್ಲಾಗಿ ।**
**ಪೂರ್ಣಚಂದ್ರನ ಮುಸುಕಲರಿಯದ**
**ಚಿಹ್ನದಂತೆ ನಿರಾವರಣ ಪರಿ**
**ಪೂರ್ಣಪರಮಾನಂದವೇ ನೀನೆಂದು ನಿಶ್ಚಯಿಸು ॥ ॥೧೦೮॥**

**ತಾತ್ಪರ್ಯ:** ನನ್ನ ಸ್ವರೂಪವನ್ನು ನಾನು ತಿಳಿಯಲಾರೆ ಎನ್ನುವಾಗ ತಿಳಿಯದಿರುವಿಕೆ ಆವರಿಸುವ ಮುಂಚಿತವಾಗಿ ಅದನ್ನು ಅರಿಯುವ ಜ್ಞಾನ (ಸುಜ್ಞಾನ) ಬಂದಿರುತ್ತದೆ ಅಲ್ಲವೇ? ಜಡವಾದ ಗುಣಗಳ ಮಿಶ್ರಣವಾದ ಅಜ್ಞಾನವು ಆ ಸುಜ್ಞಾನವನ್ನು ಆವರಿಸಲು ಶಕ್ಯವಿಲ್ಲ. ಹೇಗೆಂದರೆ ಹುಣ್ಣಿಮೆಚಂದ್ರನನ್ನು ಯಾವ ಚಿಹ್ನೆಯೂ ಮುಚ್ಚಲು ಸಾಧ್ಯವಿಲ್ಲ. ಅದರಂತೆಯೇ ಯಾವ ಅಜ್ಞಾನದ ಮುಸುಕೂ ಆವರಿಸದೆ ಸಂಪೂರ್ಣವಾಗಿ ಆನಂದಮಯವೇ ಇರುವ ಆತ್ಮನೇ ನೀನೆಂದು ತಿಳಿ.

**ಶಬ್ದಾರ್ಥ:** ಮುನ್ನಲಿಹ ಸುಜ್ಞಾನ=ತನ್ನ ಸ್ವರೂಪವನ್ನು ತಾನು ತಿಳಿಯೆನು ಎನ್ನುವಾಗ ತಿಳಿಯದಿರುವಿಕೆಗಿಂತ ಮೊದಲು ಅದನ್ನರಿಯುವ ಜ್ಞಾನವಿದೆಯಲ್ಲ ಅದು. ಸಂಕೀರ್ಣವಾದ =ಜಡವಾದ ಗುಣಗಳಿಂದ ಮಿಶ್ರಣವಾದ; ನಿರಾವರಣ=ಯಾವ ಮುಸುಕೂ ಇಲ್ಲದ; ಚಿಹ್ನೆ=ಗುರುತು;

---

**ತನು, ಕರಣ ಮೊದಲಾದ ತತ್ತ್ವಗ**
**ಳನಿತರೊಳು ಪ್ರತಿಫಲಿಸಿ ಚೇತನ**
**ವೆನಿಸಿ ಸಕಲಾಧಾರವಾಗಿಹ ಚಿತ್ಸ್ವರೂಪವನು ।**
**ತನಗೆ ಕಾಣಿಸದೆಂಬುವನು ರಜ**
**ಕನವೊಲುದಕದೊಳಿರ್ದು ತೃಷೆಯಲಿ**
**ತನುವ ಬಿಟ್ಟಂತಕಟ! ತಾನೇ ತನಗೆ ಮರೆಯಹನು ॥ ॥೧೦೯॥**

**ತಾತ್ಪರ್ಯ:** ಶರೀರ, ಇಂದ್ರಿಯಗಳು ಇವೇ ಮೊದಲಾದ ಇಪ್ಪತ್ತೈದು ತತ್ತ್ವಗಳಲ್ಲೂ ಪ್ರತಿಬಿಂಬಿಸುತ್ತಾ ಚೈತನ್ಯವೆನ್ನಿಸಿಕೊಂಡು ಸಮಸ್ತಕ್ಕೂ ಆಧಾರವೆನಿಸಿರುವ

ಚಿತ್ಸ್ವರೂಪವನ್ನು ತನಗೆ ಕಾಣಿಸಲೇ ಇಲ್ಲವೆಂದು ಹೇಳತಕ್ಕ ಮಾನವ ಹೇಗಿದ್ದಾನೆ ಎಂದರೆ, ನೀರಿನಲ್ಲಿಯೇ ನಿಂತು ಬಟ್ಟೆಯನ್ನು ಒಗೆಯುತ್ತಾ ಬಾಯಾರಿಕೆಯಿಂದ ದೇಹತ್ಯಾಗ ಮಾಡಿದ ಅಗಸನಂತೆ ತನಗೇ ತಾನೇ ಅಜ್ಞಾನದಿಂದ ಮರೆಯಾಗಿರುತ್ತಾನೆ.

**ಶಬ್ದಾರ್ಥ:** ಪ್ರತಿಫಲಿಸಿ=ತನು, ಕರಣ, ಮೊದಲಾದವುಗಳ ಉಪಾಧಿಯುಳ್ಳವನಾಗಿ ಕಾಣಿಸಿಕೊಂಡು, ಅಥವಾ ತನು, ಕರಣ, ಮೊದಲಾದವುಗಳೇ ಚೈತನ್ಯವೆಂದು ಕಾಣುವ ಹಾಗೆ ಮಾಡಿ. * ತನಗೆ ಕಾಣಿಸದೆಂದು=ತನ್ನ ಅನುಭವಕ್ಕೆ ಬಾರದೆಂದು; * ರಜಕ=ಅಗಸ; ಉದಕ=ನೀರು; * ತೃಷೆ=ಬಾಯಾರಿಕೆ; ತನು=ಶರೀರ; * ಮರೆಯಹನು=ಅಡ್ಡಿಯಾಗಿಹನು;

---

**ಕಟ್ಟಳಿಲ್ಲದ ತನುಗಳನು ತಾ**
**ಮುಟ್ಟಿ ಮುಟ್ಟದವೋಲು ಬೆಳಗುತ**
**ನೆಟ್ಟನವ ಚೇಷ್ಟಿಸುತಲಿರುತಿಹ ಚೇತನಾತ್ಮಕನು; ।**
**ಘುಟ್ಟಿತಾಯಿಗೆ ತನ್ನ ತಾಯನು**
**ಹುಟ್ಟುಬಂಜೆಯೆನುತ್ತೆ ಯೋಚಿಪ**
**ಭ್ರಷ್ಟನೀಪರಿ ನಿಜವನರಿವನೆ? ಮಗನೆ, ಕೇಳೆಂದ ॥ ॥೧೧೦॥**

**ತಾತ್ಪರ್ಯ:** ಯಾವ ನಿರ್ಬಂಧಗಳೂ ಮಿತಿಗಳೂ ಇಲ್ಲದೆ ಅಂಟಿಯೂ ಅಂಟದ ಹಾಗೆ (ತಾವರೆ ಎಲೆಯ ಮೇಲಿನ ನೀರಿನ ಬಿಂದುವಿನ ಹಾಗೆ) ಶರೀರಗಳನ್ನು ಚೇತನಗೊಳಿಸುತ್ತಾ ಅವುಗಳಿಂದ ನೇರವಾಗಿ ಬಗೆಬಗೆಯ ಕೆಲಸಗಳನ್ನು ಮಾಡಿಸುತ್ತಾ ಇರುವ ಚೈತನ್ಯರೂಪಿ ಆತ್ಮನನ್ನು ತಿಳಿಯದವನು ಎಂಥವನಪ್ಪಾ ಎಂದರೆ, ತಾಯಿಯ ಹೊಟ್ಟೆಯಲ್ಲಿ ಹುಟ್ಟಿಬಂದರೂ ತನ್ನ ತಾಯಿಯನ್ನು ಬಂಜೆಯೆಂದು ಹೇಳುವಂಥ ಪತಿತನಾಗಿರುತ್ತಾನೆ. ಇಂಥವನು ಆತ್ಮ ಸ್ವರೂಪವನ್ನು ತಿಳಿಯಲಾರನು ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * ಕಟ್ಟಳೆ=ನಿರ್ಬಂಧ, ಮಿತಿ; * ಮುಟ್ಟಿಮುಟ್ಟದವೋಲು=ಅಂಟಿಯೂ ಅಂಟದ ಹಾಗೆ; * ಬೆಳಗುತ=ಪ್ರಕಾಶಿಸುತ; ನೆಟ್ಟನೆ=ನೇರವಾಗಿ; ಚೇತನಾತ್ಮಕನು ಅವ ಚೇಷ್ಟಿಸುತಲಿ ಇರುತಿಹನು=ಆ ಶರೀರಗಳನ್ನು ಚೈತನ್ಯರೂಪಿಯಾಗಿ ಕೆಲಸ ಮಾಡಿಸುತ್ತಿರುವನು; * ಭ್ರಷ್ಟ=ಪತಿತ;

---

**ನಳಿನಸಖನೆಂತೇಕಕಾಲದಿ**
**ಬೆಳಗುತಿಹನಕ್ಷಿಗಳನೆಲ್ಲರ**
**ತಿಳಿಯಲಾಪರಿಯಾತ್ಮ ತನುಕರಣಾದಿತತ್ತ್ವಗಳ ।**
**ಬೆಳಗುತಿಹನೊಂದೇ ಪರಿಯಲಿದ**
**ನೆಲೆಮಗನೆ, ತಿಳಿ, ಕತ್ತುರಿಯ ಪರಿ**
**ಮಳಕೆ ಕರಗಳನೆತ್ತಿ ತೋರಿಸಲೇಕೆ? ಹೇಳೆಂದ ॥ ॥೧೧೧॥**

ತಾತ್ಪರ್ಯ: ಸೂರ್ಯನು ಯಾವ ರೀತಿ ಒಂದೇ ಸಮಯದಲ್ಲಿ ಬೆಳಕನ್ನು ಬೀರಿ ಪ್ರಾತಃಕಾಲದಲ್ಲಿ ಎಲ್ಲರ ಕಣ್ಣುಗಳಲ್ಲೇ ಪ್ರಕಾಶವನ್ನು ಕಾಣುವ ಹಾಗೆ ಮಾಡುತ್ತಾನೋ ಅದೇ ರೀತಿಯಲ್ಲಿ ಆತ್ಮನು ಶರೀರ, ಇಂದ್ರಿಯ, ಪಂಚವಿಂಶತಿ ತತ್ತ್ವಗಳಲ್ಲೂ ಏಕರೀತಿಯಿಂದ ಪ್ರಕಾಶಿಸುತ್ತಿರುವನು. ಇದಕ್ಕೆ ದೃಷ್ಟಾಂತವನ್ನು ತಿಳಿಸುತ್ತೇನೆ ಶುಕನೆ ಕೇಳು, ಕಸ್ತೂರಿಯ ಪರಿಮಳಕ್ಕೆ ಇದು ಕಸ್ತೂರಿ ಪರಿಮಳ ಎಂದು ಕೈ ಎತ್ತಿ ಸಾರಿ ಹೇಳಬೇಕೇ? ಅದರ ಸುವಾಸನೆಯಿಂದ ತಾನಾಗಿಯೇ ತಿಳಿಯುತ್ತದೆ ಅಲ್ಲವೇ?

ಶಬ್ದಾರ್ಥ: ಅಕ್ಷಿಗಳನೆಲ್ಲರ (ಅಕ್ಷಿಗಳನು+ಎಲ್ಲರ) ಎಲ್ಲರ ಕಣ್ಣುಗಳನ್ನು; * ಕತ್ತುರಿ=ಕಸ್ತೂರಿ (ಪರಿಮಳ ದ್ರವ್ಯ); * ಕರ=ಕೈ;

ಟಿಪ್ಪಣಿ-೧: ಈ ಪದ್ಯವು ಹಸ್ತಾಮಲಕ ಸಂವಾದ ಸ್ತೋತ್ರದ ಶ್ಲೋಕವೊಂದರ ಅನುವಾದವಾಗಿ ತೋರುತ್ತದೆ. ಶ್ಲೋಕ ಹೀಗಿದೆ:

"ನಿಮಿತ್ತಂ ಮನಶ್ಚಕ್ಷುರಾದಿಪ್ರವೃತ್ತೌ
ನಿರಸ್ತಾಖಿಲೋಪಾದಿರಾಕಾಶ ಕಲ್ಪಃ ।
ರವಿರ್ಲೋಕ ಚೇಷ್ಟಾನಿಮಿತ್ತಂ ಯಥಾ
ಯಃ ಸ ನಿತ್ಯೋಪಲಬ್ಧಿಸ್ವರೂಪೋऽಹಮಾತ್ಮಾ" ॥

---

ಅರಿವು ಮನದಲಿ ಪೊಳೆಯಲಾ ಮನ
ದರಿವು ತಾನಾಗಿಂದ್ರಿಯಂಗಳೊ
ಳೆರಕವಾಗಿರಲಿಂದ್ರಿಯಗಳರ್ಥಗಳ ಗ್ರಹಿಸುವುವು; ।
ಪರಮಚೈತನ್ಯಾತ್ಮನಿವರೊಳು
ಬೆರಸಿಕೊಂಡಿರಲರಿಯಬಾರದೆ?
ಕೊರಳಹಾರಕೆ ಪರರ ಕೇಳಲದೇಕೆ? ಶುಕಯೋಗಿ ॥ ॥೧೧೨॥

ತಾತ್ಪರ್ಯ: ಮನಸ್ಸಿನಲ್ಲಿ ಚೈತನ್ಯವು ಕೂಡಿಕೊಳ್ಳಲು ಆ ಮನಸ್ಸು ಇಂದ್ರಿಯಗಳಲ್ಲಿ ಕೂಡಿಕೊಂಡು ಇಂದ್ರಿಯಗಳ ಅರ್ಥಗಳನ್ನು ಗ್ರಹಿಸುತ್ತವೆ, ಎಂದರೆ ಮನಸ್ಸಿನ ಆಭಾಸವೇ ಇಂದ್ರಿಯಗಳು; ಇಂದ್ರಿಯಗಳ ಆಭಾಸವೇ ಶರೀರ. ಹೀಗೆ ಚೈತನ್ಯ ರೂಪನಾದ ಆತ್ಮನು ಶರೀರದೊಳಗೆ ವ್ಯಾಪಿಸಿಕೊಂಡಾಗ ತನ್ನನ್ನು ತಾನು ತಿಳಿಯಲಿಕ್ಕೆ ಆಗದೇ? ತನ್ನ ಕೊರಳಲ್ಲಿ ತಾನು ಹಾಕಿಕೊಂಡಿರುವ ಹಾರವನ್ನು ತಾನು ಧರಿಸಿರುವುದು ಏನೆಂದು ಇತರರನ್ನು ಕೇಳಬೇಕೆ? ಶುಕಯೋಗಿಯೇ ಕೇಳು.

ಶಬ್ದಾರ್ಥ: ಅರಿವುಮನದಲಿ ಪೊಳೆಯಲು=ಮನಸ್ಸಿನಲ್ಲಿ ಚೈತನ್ಯವು ಕೂಡಿಕೊಳ್ಳಲು; ತಾನು+ಆಗ+ ಇಂದ್ರಿಯಗಳೊಳು ಪರಮ ಚೈತನ್ಯಾತ್ಮನಿವರೊಳು ಬೆರಸಿಕೊಂಡಿರಲರಿಯ ಬಾರದೆ?=ಚೈತನ್ಯ ದಾಭಾಸವೇ ಮನಸ್ಸು; ಮನಸ್ಸಿನ ಆಭಾಸವೇ ಇಂದ್ರಿಯಗಳು; ಇಂದ್ರಿಯಗಳ ಆಭಾಸವೇ ಶರೀರವು; ಹೀಗೆ ಚೈತನ್ಯವನ್ನರಿಯುವುದು; ಕಷ್ಟವೇನೂ ಅಲ್ಲ; ಆಭಾಸ=ಅದರಂತೆ ತೋರುವುದು ಎಂದರ್ಥ; ಎರಕವಾಗು=ಕೂಡಿಕೊಂಡು, ಬೆಸುಗೆಯಾಗಿ.

ನುಡಿವ, ನಡೆವ, ಪದಾರ್ಥಗಳ ನೆರೆ
ಹಿಡಿವ, ಬಿಡುವಾನಂದಿಸುವ ಬಹು
ಸಡಗರದ ಕರ್ಮೇಂದ್ರಿಯ ವ್ಯವಹಾರಗಳನುಳ್ಳ ।
ಜಡಶರೀರವದಾವನೊಬ್ಬನ
ಪಿಡಿದು ಚೇಷ್ಟಿಸುತಿರ್ಪುದಾ ಎಡೆ
ಬಿಡದ ಚೈತನ್ಯಾತ್ಮನೇ ನೀನೆಂದು ನಿಶ್ಚಯಿಸು ॥ ॥೧೧೩॥

ತಾತ್ಪರ್ಯ: ಮಾತನಾಡುವುದು, ನಡೆದಾಡುವುದು, ವಸ್ತುಗಳನ್ನು (ಭೋಗ ಸಾಮಗ್ರಿಗಳನ್ನು) ಪಡೆಯುವುದು, ಬಿಟ್ಟುಬಿಡುವುದು, ಅವುಗಳನ್ನು ಬಳಸಿಕೊಂಡು ಆನಂದಿಸುವುದು, ಈ ರೀತಿಯ ಸಡಗರ, ಸಂಭ್ರಮಗಳಿಂದ ಕೂಡಿದ ಅನೇಕ ಚಟುವಟಿಕೆಗಳನ್ನು ಕರ್ಮೇಂದ್ರಿಯಗಳ ಮೂಲಕ ಈ ಜಡಶರೀರದಲ್ಲಿರುವ ಚೈತನ್ಯವು ವ್ಯವಹರಿಸುತ್ತಿರುವುದು. ಈ ಜಡಶರೀರದಲ್ಲಿ ಸದಾ ಆವರಿಸಿರುವ ಚೈತನ್ಯರೂಪಿಯಾದ ಆತ್ಮನೇ ನೀನೆಂದು ತಿಳಿ ಶುಕಾ!

**ಶಬ್ದಾರ್ಥ:** ಬಹುಸಡಗರದ=ಅನೇಕ ವ್ಯವಹಾರಗಳನ್ನುಳ್ಳ * ಚೇಷ್ಟಿಸುತ್ತಿರ್ಪುದು=ಚಟುವಟಿಕೆಗಳನ್ನು ನಡೆಸುತ್ತಿರುವುದು;

**ಟಿಪ್ಪಣಿ:** ಜಡ ಶರೀರದಲ್ಲಿ ಅಡಗಿದ ಚೈತನ್ಯಾತ್ಮ ಅನೇಕ ಚಟುವಟಿಕೆಗಳನ್ನು ನಡೆಸುತ್ತದೆ ಎಂಬುದು ಈ ಗೀತೋಕ್ತಿಯನ್ನು ನೆನಪಿಸುತ್ತದೆ.

**ಉತ್ಕ್ರಾಂತಮಂತಂ ಸ್ಥಿತಂ ವಾಪಿ ಭುಜಾನಂ ವಾ ಗುಣಾನ್ವಿತಂ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥** –(ಗೀತೆ, ೧೫–೧೦)

(ದೇಹವನ್ನು ಬಿಟ್ಟೇಳುತ್ತಿದ್ದರೂ, ಇರುತ್ತಿದ್ದರೂ, ವಿಷಯಗಳನ್ನು ಭೋಗಿಸುತ್ತಿದ್ದರೂ ಗುಣಗಳಿಂದ ಕೂಡಿದ್ದರೂ ಅವನನ್ನು ಅವಿವೇಕಿಗಳು ನೋಡಲಾರರು, ತಿಳಿಗಣ್ಣಿನವರು ನೋಡುತ್ತಾರೆ)
**ಗೀತೆಯ ಕೈಗನ್ನಡಿ; ಹೊಸಕೆರೆ ಚಿದಂಬರಯ್ಯ, ಅನುವಾದ**

---

ಶುದ್ಧಸಂವಿತ್ತಾಗಿ ತೋರುತ
ಲಿದ್ದ ನಿಜವೇ ತಿಳಿದು ನೋಡಲು
ಬುದ್ಧಿ ಮೊದಲಾಗಿರ್ದ ತನುಕರಣಾದಿಯೊಳು ಪೊಳೆಯೆ ।
ಬುದ್ಧಿ ಮೊದಲಾಗಿರ್ದುವೆಲ್ಲವು
ನಿರ್ಧರಿಸೆ ಚೈತನ್ಯವನು ಪಡೆ
ದಿರ್ದ ಕತದಿಂ ಚೇತನಾತ್ಮಕವೆನಿಸಿಕೊಂಡಿಹವು ॥ ॥೧೧೪॥

ತಾತ್ಪರ್ಯ: ಯೋಚನೆ ಮಾಡಿ ನೋಡಿದರೆ ಶುದ್ಧ ಚೈತನ್ಯವು ಶರೀರ, ಇಂದ್ರಿಯ, ಅಂತಃಕರಣಗಳಲ್ಲಿ ಉಪಾಧಿಯಿಂದ ಕೂಡಿದಂತೆ ಕಂಡು ಬರುತ್ತಿರುವುದು ಅಥವಾ ಬುದ್ಧಿ ಮೊದಲಾದ ಶರೀರ, ಇಂದ್ರಿಯ ಮೊದಲಾದವು ಗಳೆಲ್ಲವು ಅವೇ

ಚೈತನ್ಯವೆಂಬಂತೆ ಕಂಡುಬರುವಾಗ, ಆ ಚೇತನಾತ್ಮಕವಾದ ನಿಜವೇ ಆತ್ಮನೆಂತಲೂ, ಅವನೇ ನೀನೆಂದು ತಿಳಿ.

ಶಬ್ದಾರ್ಥ: * ಶುದ್ಧ ಸಂವಿತ್=ಶುದ್ಧ ಚೈತನ್ಯ; * ನಿಜವೇ=ಆತ್ಮವೇ; * ಕತದಿಂ=ಕಾರಣದಿಂದ; * ಚೇತನಾತ್ಮಕ=ಚೈತನ್ಯ ಸ್ವರೂಪವಾದ; ತನುಕರಣಾದಿಗಳು=ಶರೀರ ಇಂದ್ರಿಯಗಳೇ ಮೊದಲಾದವು;

ಟಿಪ್ಪಣಿ: ತನುಕರಣಾದಿಗಳು ಪೊಳೆಯೆ=ಚೈತನ್ಯವು ತನುಕರಣಾದಿಗಳೆಂಬ ಉಪಾಧಿಯಿಂದ ಕೂಡಿದಂತೆ ಕಾಣಬರಲು ಅಥವಾ ತನುಕರಣಾದಿಗಳೇ ಚೈತನ್ಯವೆಂಬಂತೆ ಕಾಣಬರಲು

---

ಗುರುವೆ, ಬುದ್ಧಿಯ ವೃತ್ತಿಗಳನರಿ
ವರಿವೆ ಆತುಮನೆಂದು ಪೇಳ್ದಿರಿ;
ಕುರುಹನಿಟ್ಟದನರಿವ ಪರಿಯೆಂತೆನಲು ಕರುಣದಲಿ ।
ಅರಿವ ಪರಿಯೆಂತೆಂಬ ಬುದ್ಧಿಯ
ನರಿವರಿವೆ ಆತುಮನೆನುತ್ತದ
ಕುರುಹನಿಟ್ಟದನರಿತುಕೋ ನೀನೆಂದು ಪೇಳಿದನು ॥ ॥೧೧೫॥

ತಾತ್ಪರ್ಯ: ವ್ಯಾಸಗುರುವರ್ಯರೆ, ಬುದ್ಧಿಯವಿಕಾರ ವಿಶೇಷಗಳನ್ನು ಅರಿಯುವುದೇ ಆತ್ಮನೆಂದು ತಿಳಿಸಿದಿರಿ. ಆದರೆ ಆ ಬುದ್ಧಿ ವೃತ್ತಿಗಳನ್ನು ಲಕ್ಷ್ಯದಿಂದ ತಿಳಿದುಕೊಳ್ಳುವ ಬಗೆ ಹೇಗೆ? ಎಂದು ಶುಕನು ಕೇಳಿದನು. ಆಗ ವ್ಯಾಸನು ಶುಕನತ್ತ ಕೃಪಾಕಟಾಕ್ಷ ಬೀರಿ ಹೇಳಿದನು. ಆ ಬುದ್ಧಿವಿಕಾರ ವಿಶೇಷಗಳನ್ನು ತಿಳಿಯುವ ರೀತಿ ಹೇಗೆಂದು ಚಿಂತಿಸುವ ಆ ತಿಳಿವಳಿಕೆಯೇ ಆತ್ಮ, ಅದೇ ನೀನು ಎಂದು ತಿಳಿಸಿದನು.

ಶಬ್ದಾರ್ಥ: ಅರಿವ+ಅರಿವೆ=ತಿಳಿಯುವ ರೀತಿ ಹೇಗೆಂಬ ಬುದ್ಧಿಯನ್ನು ತಿಳಿವ ತಿಳಿವಳಿಕೆ; * ಗುರುವೆ=ವ್ಯಾಸನೇ; * ವೃತ್ತಿ=ಅಂತಃಕರಣದ ವಿಕಾರ ವಿಶೇಷಗಳು; * ಕುರುಹು=ಗುರುತು, ಲಕ್ಷ್ಯ, ಗುರಿ; * ಪರಿ=ರೀತಿ; * ಕರುಣದಲಿ=ಕೃಪಾಕಟಾಕ್ಷದಲ್ಲಿ;

---

ಬುದ್ಧಿಯುದಯಾಸ್ತಗಳ ಹುಟ್ಟಿದ
ಬುದ್ಧಿಯರಿಯದು; ತಿಳಿಯಲೀಪರಿ
ಬುದ್ಧಿಯುದಯಾಸ್ತಗಳನಂತದನರಿವ ಪರಿಗಳನು ।
ಬುದ್ಧಿಯನುಸಂಧಾತೃವೆನಿಸು
ತ್ತಿರ್ದರಿವೆ ತಾನರಿವುದದರಿಂ
ಶುದ್ಧಸಹಜಾನಂದವೇ ನೀನೆಂದು ನಿಶ್ಚಯಿಸು ॥ ॥೧೧೬॥

ತಾತ್ಪರ್ಯ: ವೃತ್ತಿಗಳನ್ನು (ಪ್ರಾಣದ ವ್ಯಾಪಾರ) ಹೊಂದಿದ ಬುದ್ಧಿಯು ತನ್ನಲ್ಲಿ ವೃತ್ತಿಗಳು ಎಷ್ಟು ಸಾರಿ ಹುಟ್ಟುತ್ತದೆ, ನಾಶವಾಗುತ್ತದೆ ಎಂಬುದನ್ನು ತಿಳಿಯದು. ಅದನ್ನು ತಿಳಿಯಬೇಕಾದರೆ ಹುಟ್ಟಿ ಅಳಿವ ವೃತ್ತಿಗಳನ್ನು ಒಳಗೊಂಡ ಬುದ್ಧಿಗೆ

ಸಾಕ್ಷಿಯಾಗಿ ಅದರ ವ್ಯವಹಾರಗಳನ್ನೆಲ್ಲ ನೋಡುವ ಜ್ಞಾನವೇ ಆತ್ಮನೆಂದು ತಿಳಿ, ಆ ಆತ್ಮನ ಸ್ವರೂಪವನ್ನು ತಿಳಿಯುವುದರಿಂದ ಉಂಟಾಗುವ ಶುದ್ಧ ಸಹಜಾನಂದ ಸ್ವರೂಪನೇ ನೀನೆಂದು ತಿಳಿ.

**ಶಬ್ದಾರ್ಥ:** ಹುಟ್ಟಿದ ಬುದ್ಧಿಅರಿಯದು=ವೃತ್ತಿಗಳನ್ನು ಪಡೆದ ಬುದ್ಧಿಯು ತಾನು ವೃತ್ತಿಗಳನ್ನು ಪಡೆದುದನ್ನು ತಿಳಿಯದು (ಯಾರೂ ತಮ್ಮ ಹುಟ್ಟನ್ನು ಸಾವನ್ನು ತಾವು ತಿಳಿಯಲಾರರಷ್ಟೇ). ಬುದ್ಧಿಯನುಸಂಧಾತೃ=ಬುದ್ಧಿಗೆ ಸಾಕ್ಷಿಯಾಗಿ ಅದರ ವ್ಯವಹಾರಗಳನ್ನೆಲ್ಲ ನೋಡುವವನು.

---

ಸಿದ್ಧಸಾಧನವಾಗಿ ತೋರ್ಪಾ
ಬುದ್ಧಿ ಮೊದಲಾಗಿರ್ದುದೆಲ್ಲವ
ಹೊದ್ದಲಾಚೈತನ್ಯ ವಿಷಯಗ್ರಾಹಿಯೆನಿಸುವನು; ।
ಬುದ್ಧಿವೃತ್ತಿಗಳಳಿದೊಡಾಕ್ಷಣ
ಶುದ್ಧಬುದ್ಧವಿಮುಕ್ತ ನಿಜವಾ
ದದ್ವಯಾನಂದೈಕರಸಮಯವಸ್ತುವೆನಿಸುವನು ॥ ॥ ೧೧೭ ॥

**ತಾತ್ಪರ್ಯ:** ಪ್ರಾಣಿಗಳಿಗೆ ಸ್ವಭಾವವಾಗಿ ಬಂದಿರುವ ಸಾಧನಗಳ ರೂಪವಾಗಿ ಕಾಣಿಸುವ ಬುದ್ಧಿ ಇಂದ್ರಿಯಗಳು ಮತ್ತು ದೇಹ ಇವುಗಳೆಲ್ಲವನ್ನು ತಾನು ಹೊಂದಿ ಚೈತನ್ಯಮಯಿಯಾಗಿ ವಿಷಯಗ್ರಾಹಿ (ವಿಷಯಗಳನ್ನು ತಿಳಿಯುವವನು) ಎನ್ನಿಸಿಕೊಳ್ಳುತ್ತಾನೆ. ಆ ಬುದ್ಧಿ, ಇಂದ್ರಿಯ, ಶರೀರಗಳು ಅಳಿದರೆ ಆ ಕೂಡಲೇ ವಿಷಯಿಯಾದ ಆತ್ಮನು ಆಗಿದ್ದವನು ದೋಷರಹಿತ, ಜ್ಞಾನಸ್ವರೂಪಿ ಮತ್ತು ಬಂಧನ ರಹಿತನಾದ ನಿಜವಾದ ಏಕೈಕ ಆನಂದರಸಮಯನಾದ ಪರಬ್ರಹ್ಮನೇ ಅವನಾಗುತ್ತಾನೆ.

**ಶಬ್ದಾರ್ಥ:** ಸಿದ್ಧಸಾಧನವಾಗಿ=ಪ್ರಾಣಿಗಳಿಗೆ ಸ್ವಭಾವವಾಗಿ ಬಂದಿರುವ ಸಾಧನಗಳ ರೂಪವಾಗಿ; ಬುದ್ಧಿಮೊದಲಾಗಿರ್ದುದೆಲ್ಲವ=ಬುದ್ಧಿ, ಇಂದ್ರಿಯಗಳು ಮತ್ತು ದೇಹ ಇವುಗಳನ್ನು; ಶುದ್ಧಬುದ್ಧವಿಮುಕ್ತ=ದೋಷವಿಲ್ಲದ್ದು, ಜ್ಞಾನಸ್ವರೂಪವಾದದ್ದು ಮತ್ತು ಕಟ್ಟುಗಳನ್ನೆಲ್ಲ ಕಳಚಿಕೊಂಡಿರುವಂಥದ್ದು; (ಈ ಮಾತುಗಳನ್ನು ಶ್ರೀಶಂಕರಭಗವತ್ಪಾದರು ತಮ್ಮ ಗ್ರಂಥಗಳಲ್ಲಿ ಬಹಳ ಕಡೆ ಉಪಯೋಗಿಸಿದ್ದಾರೆ.) * ವಿಷಯಗ್ರಾಹಿ=(ವಿಷಯಿಯಾದ ಆತ್ಮ)

---

ಹಗಲು ಸೂರ್ಯನ ಬೆಳಕಿನಲಿ ರೂ
ಪಗಳು ತೋರ್ಪವು; ರಾತ್ರಿಯಲಿ ದೀ
ಪಗಳ ತೇಜದಿ; ದೀಪಸೂರ್ಯರು ತೋರ್ಪರಕ್ಷಿಯಲಿ; ।
ಮುಗಿದು ಮುಚ್ಚಿದ ಕಣ್ಣು ಬುದ್ಧಿಯ
ಬಗೆಯಲರುಹಿಸಿಕೊಂಬುದಾ ಬು
ದ್ಧಿಗಳನರಿವುದು ಚಿತ್ತದೇ ನೀನೆಂದು ನಿಶ್ಚಯಿಸು ॥ ॥ ೧೧೮ ॥

**ತಾತ್ಪರ್ಯ:** ಹಗಲಿನಲ್ಲಿ ಸೂರ್ಯನ ಬೆಳಕಿನಲ್ಲಿ ವಸ್ತು ಸ್ವರೂಪಗಳು ಕಾಣಿಸಿಕೊಳ್ಳುವುವು, ರಾತ್ರಿಯಲ್ಲಿ ದೀಪದ ಬೆಳಕಿನಲ್ಲಿ ಚಂದ್ರ ನಕ್ಷತ್ರಗಳ ಮೂಲಕ ವಸ್ತು ಸ್ವರೂಪಗಳು ಕಾಣಿಸಿಕೊಳ್ಳುವುವು. ಇಂತಹ ಸೂರ್ಯಚಂದ್ರರನ್ನು ಕಾಣಿಸುವ ಕಣ್ಣುಗಳನ್ನು ಮುಚ್ಚಿಕೊಂಡ ಕೂಡಲೇ ಬುದ್ಧಿಯ ಭಾವನೆಯಲ್ಲಿ ಸೂರ್ಯ ದೀಪರು ಅರಿವಾಗುವರು. ಆ ಬುದ್ಧಿಯ ವ್ಯಾಪಾರವನ್ನು ತಿಳಿದುಕೊಳ್ಳುವ ಚಿತ್ತೆಂಬ ಜ್ಞಾನವೇ ನೀನೆಂದು ತಿಳಿ.

**ಟಿಪ್ಪಣಿ-೧:** "ರಾತ್ರಿಯಲಿ ದೀಪಗಳ ತೇಜದಿ" ಎಂಬ ಮಾತುಗಳ ಮುಂದೆ "ರೂಪಗಳು ತೋರ್ಪವು" ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

**ಟಿಪ್ಪಣಿ-೨:** ಈ ಅಭಿಪ್ರಾಯಕ್ಕೆ (ಟಿಪ್ಪಣಿ-೧) ಆಧಾರವಾಗಿ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಇರುವುದೇನೆಂದರೆ:

**"ಯಾಜ್ಞವಲ್ಕ್ಯ ಕಿಂ ಜ್ಯೋತಿರಯಂ ಪುರುಷ ಇತಿ.....**
**ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ,**
**ಶಾಂತೇಽಗ್ನೌ, ಶಾಂತಾಯಾಂವಾಚಿ, ಕಿಂ ಜ್ಯೋತಿರೇವಾಯಂ**
**ಪುರುಷ ಇತ್ಯಾತ್ಮೈವಾಸ್ಯ ಜ್ಯೋತಿರ್ಭವತೀತ್ಯಾತ್ಮನೈವಾಯಂ**
**ಜ್ಯೋತಿಷಾಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ"**

ಯಾಜ್ಞವಲ್ಕ್ಯನೇ, ಈ ಪುರುಷನಿಗೆ ಬೆಳಕು ಯಾವುದು?

(ಎಲೈ ಯಾಜ್ಞವಲ್ಕ್ಯನೇ, ಆದಿತ್ಯನೂ ಅಸ್ತನಾಗಿ, ಚಂದ್ರನೂ ಮುಳುಗಿ, ಅಗ್ನಿಯೂ ಆರಿ ಹೋಗಿ ಮಾತೂ ಹಿಮ್ಮೆಟ್ಟಿರುವಾಗ ಯಾವುದೊಂದು ಬೆಳಕು ಈತನಿಗೆ ಸಹಾಯಕವಾಗಿರುವುದು? (ಉತ್ತರ: ಆತ್ಮನೇ ಈತನಿಗೆ ಬೆಳಕಾಗಿರುವುದು. ತನ್ನ ಬೆಳಕಿನಿಂದಲೇ ಈತನು ಇರುತ್ತಾನೆ, ಸಂಚರಿಸುತ್ತಾನೆ, ಕೆಲಸ ಮಾಡುತ್ತಾನೆ ಮತ್ತು ಹಿಂದಿರುಗುತ್ತಾನೆ).

**ಟಿಪ್ಪಣಿ-೩:** ಮುಗಿದು ಮುಚ್ಚಿದ ಕಣ್ಣು ಬುದ್ಧಿಯ ಬಗೆಯಲರುಹಿಸಿಕೊಂಬುದು=ಕಣ್ಣನ್ನು ಮುಚ್ಚಿಕೊಂಡರೂ ಆ ಸ್ಥಿತಿಯನ್ನು ಬುದ್ಧಿಯು ಸಾಕ್ಷಿಯಾಗಿ ನೋಡುತ್ತಿರುವುದು.

---

**ಇರುಳು ಮನೆಯಲಿ ಮಲಗಿ ನಿದ್ರೆಯ**
**ಭರದಲೆದ್ದವ ಮೆಲ್ಲಮೆಲ್ಲನೆ**
**ಕರದಿ ಕಂಬವ ಹುಡುಕಿ ತಡವರಿಸುತ್ತ ಭೀತಿಯಲಿ ।**
**ಹೊರಡುವನು ಪೂರ್ವಾನುಭವ ಸಂ**
**ಸ್ಮರಣಸಾಧನಬುದ್ಧಿಯಿಂದೀ**
**ಪರಿಯ ಬುದ್ಧಿಯನರಿವರಿವೆ ನೀನೆಂದು ನಿಶ್ಚಯಿಸು ॥ ॥ ೧೧೯ ॥**

**ತಾತ್ಪರ್ಯ:** ರಾತ್ರಿ ಕಾಲದಲ್ಲಿ ಮನೆಯಲ್ಲಿ ಮಲಗಿದ್ದವನು ನಿದ್ರಾವೇಶದಲ್ಲಿ ಎದ್ದು ಪೂರ್ವದ ಅನುಭವದ ನೆನಪಿನ ಸಾಧನದಿಂದ ಮೆಲ್ಲ ಮೆಲ್ಲನೆ ಕಂಬವನ್ನು ಹುಡುಕುತ್ತಾ ಭಯದಲ್ಲಿ ತಡವರಿಸುತ್ತಾ ಹೊರಡುವನು. ಈ ರೀತಿಯ ಪೂರ್ವಾನುಭವವು

ನೆನಪಿಗೆ ಬಂದುದು ಬುದ್ಧಿಯ ಬಲದಿಂದಲೇ ಹೊರತು ಮತ್ತಾವುದರಿಂದಲೂ ಅಲ್ಲ. ಈ ಬುದ್ಧಿಯ ಸ್ವರೂಪವನ್ನು ತಿಳಿಯುವ ಅರಿವೇ ನೀನೆಂದು ನಿರ್ಧಾರವಾಗಿ ತಿಳಿ.

**ಶಬ್ದಾರ್ಥ:** * ಇರುಳು=ರಾತ್ರಿ ಕಾಲದಲ್ಲಿ; ಭೀತಿಯಲಿ=ಹೆದರಿಕೆಯಲ್ಲಿ; ಕರದಿ=ಕೈಯಿಂದ; * ಪೂರ್ವಾನುಭವ ಸಂಸ್ಮರಣಸಾಧನ=ಮೊದಲು ಗಳಿಸಿದ ಅನುಭವದ ನೆನಪೆಂಬ ಸಾಧನದಿಂದ;

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಮಗನೆ, ಗಾಯತ್ರಿಯಲಿ ಪೇಳಿದ**
**ಬಗೆಯಲೇ ತಿಳಿ; ನಮ್ಮ ಬುದ್ಧಿಗೆ**
**ಮಿಗಿಲೆನಿಸಿ ಬೋಧಿಸುವುದಾವುದು ನೋಡಲಾ ನಿಜವೇ ।**
**ಅಗಣಿತಮಹಾತೇಜ ಸೂರ್ಯಾ**
**ದಿಗಳ ಬೆಳಗುವುದಾಗಿ ನಾವದ**
**ಹಗಲಿರುಳು ಧ್ಯಾನಿಸುವುದದು ನೀನೆಂದು ನಿಶ್ಚಯಿಸು ॥ ॥೧೨೦॥**

**ತಾತ್ಪರ್ಯ:** ಶುಕನೆ ಕೇಳು, ಬುದ್ಧಿಯನ್ನು ಪ್ರೇರಿಸುವ ಮಿಗಿಲಾದ ದೇವನನ್ನು ನಾವು ಧ್ಯಾನಿಸುತ್ತೇವೆ ಎಂಬುದು ಗಾಯತ್ರೀ ಮಂತ್ರದ ತಾತ್ಪರ್ಯ. ಇದ ನೀನು ತಿಳಿ. ಅದೇ ರೀತಿಯಲ್ಲಿ ನಮ್ಮ ಬುದ್ಧಿಗೆ ಮೀರಿದ ಅದಾವ ಶಕ್ತಿ ನಮ್ಮನ್ನು ಪ್ರೇರಿಸುವುದೋ ಅದೇ ಸತ್ಯವು. ಅದು ಅಪಾರವಾದ ತೇಜಃಪುಂಜಗಳಿಂದ ಕೂಡಿದ ಸೂರ್ಯಾದಿ ಜ್ಯೋತಿರ್ಮಂಡಲಗಳನ್ನೂ ಪ್ರಕಾಶಿಸುತ್ತದೆ. ನಾವು ಹಗಲೂ ರಾತ್ರಿ ಧ್ಯಾನಮಾಡುವ ಆ ಚಿದಾತ್ಮಕ ಜ್ಯೋತಿಯೇ ನೀನೆಂದು ತಿಳಿ.

**ಶಬ್ದಾರ್ಥ: ಗಾಯತ್ರಿಯಲಿ ಪೇಳಿದ ಬಗೆ**=ಬುದ್ಧಿಯನು ಪ್ರೇರಿಸುವ ದೇವನನ್ನು ಧ್ಯಾನಿಸುತ್ತೇವೆ ಎಂಬುದೇ ಗಾಯತ್ರಿ ಮಂತ್ರದ ತಾತ್ಪರ್ಯವು. **ಬುದ್ಧಿಗೆ ಮಿಗಿಲೆನಿಸಿ ಬೋಧಿಸುವುದು**=ಬುದ್ಧಿಯನ್ನು ಪ್ರೇರಿಸುವಂಥದ್ದು;

**ಟಿಪ್ಪಣಿ: ಅಗಣಿತ ಮಹಾತೇಜ ಸೂರ್ಯಾದಿಗಳ ಬೆಳಗುವುದಾಗಿ= "ತಸ್ಯ ಭಾಸಾ ಸರ್ವಮಿದಂ ವಿಭಾತಿ"** ಎಂಬ ಶ್ರುತಿಯ ಅರ್ಥ ಈ ಮಾತಿನಲ್ಲಿದೆ.

---

## ಬುದ್ಧಿಗೂ ಆತ್ಮನಿಗೂ ಭೇದ (೧೨೧-೧೩೬)

**ಬುದ್ಧಿಯರಿವುದೊ ವಸ್ತುವನು? ತಾ**
**ಶುದ್ಧವಸ್ತುವೆ ತನ್ನನರಿವುದೊ?**
**ಬುದ್ಧಿವಸ್ತುಗಳೊಳಗೆ ತಿಳಿಯುವದಾವುದೆಂದೆನಲು ।**
**ಬುದ್ಧಿಯರಿಯದು ವಸ್ತುವನು; ತಾ**
**ಶುದ್ಧವಸ್ತುವೆ ತನ್ನನರಿವುದು;**
**ಬುದ್ಧಿ ಸಾಧನವಾಗಿಹುದರಿಂದನ್ಯ ಜಡ ದೃಶ್ಯ ॥ ॥೧೨೧॥**

ತಾತ್ಪರ್ಯ: ಬುದ್ಧಿ ಮತ್ತು ಶುದ್ಧವಸ್ತು (ಆತ್ಮ)ವನ್ನು ಕುರಿತು ಈ ಪದ್ಯದಲ್ಲಿ ಹೇಳಿದೆ: "ಬುದ್ಧಿಯು ಶುದ್ಧವಾದ ವಸ್ತುವನ್ನು (ಆತ್ಮವನ್ನು) ತಿಳಿಯಬಲ್ಲುದೇ? ಅಥವಾ ಶುದ್ಧವಸ್ತುವಾದ ಆತ್ಮವೇ ತನ್ನನ್ನು ತಾನು ತಿಳಿಯಬಲ್ಲುದೇ? ಎಂದು ಕವಿಯೇ ಪ್ರಶ್ನೆ ಹಾಕಿ ಉತ್ತರಿಸುತ್ತಾನೆ. ಬುದ್ಧಿ ಮತ್ತು ಶುದ್ಧವಾದ ಆತ್ಮವನ್ನು ಬುದ್ಧಿ ತಿಳಿಯಲಾರದು" ಆತ್ಮವೇ ತನ್ನನ್ನು ತಾನು ತಿಳಿಯಲು ಶಕ್ಯ. ಏಕೆಂದರೆ ಬುದ್ಧಿಯು ಸಾಧನವಾದ ಕಾರಣದಿಂದ ಅದು ಜಡವೂ ದೃಶ್ಯವು ಅನ್ಯವೂ ಆಗಿರುತ್ತದೆ.

ಶಬ್ದಾರ್ಥ: ವಸ್ತುವನು=ಶುದ್ಧವಸ್ತುವಾದ ಆತ್ಮನನ್ನು; ಬುದ್ಧಿವಸ್ತುಗಳೊಳಗೆ=ಬುದ್ಧಿ ಮತ್ತು ಶುದ್ಧ ವಸ್ತುವಾದ ಆತ್ಮ ಇವೆರಡರಲ್ಲಿ; ಬುದ್ಧಿಸಾಧನವಾಗಿಹುದು=ಬುದ್ಧಿಯು ಉಪಕರಣವಾಗಿದೆ; * ಅನ್ಯ ಜಡದೃಶ್ಯ=ಆತ್ಮವಾದ ಬೇರೆಯೂ ಚೈತನ್ಯರಹಿತವೂ ರೂಪಾತ್ಮಕವೂ ಆಗಿದೆ ಎಂದರೆ ಬುದ್ಧಿಯ ಸಾಧನವಾದ ಕಾರಣದಿಂದ ಜಡವೂ, ದೃಶ್ಯವೂ, ಅನ್ಯವೂ ಆಗಿರುವುದೆಂದು ತಾತ್ಪರ್ಯ

---

ಬುದ್ಧಿ ಚೇತನವಪ್ಪುದಾತ್ಮನ
ಹೊದ್ದಿ; ತಾನದನರಿಯಲರಿಯದು;
ಬುದ್ಧಿಯಿಂದಲಿ ತಿಳಿವುದಾತ್ಮನನೆಂಬುದುಪಚಾರ; ।
ಹೊದ್ದಿ ಸೂರ್ಯಪ್ರಭೆಯ ಕನ್ನಡಿ
ಶುದ್ಧಮೆನೆ ತಾ ಪೊಳೆವುದಲ್ಲದೆ
ಸಿದ್ಧವಹ ರವಿಯಂ ಪ್ರಕಾಶಿಸಲರಿಯದಂದದಲಿ ॥ ॥೧೨೨॥

ತಾತ್ಪರ್ಯ: ಬುದ್ಧಿಯು ಆತ್ಮನ ಆಶ್ರಯದಿಂದ ಚೇತನ ಎನ್ನಿಸಿಕೊಳ್ಳುತ್ತದೆ. ತಾನೇ ಆತ್ಮನನ್ನು ತಿಳಿಯಲು ಶಕ್ಯವಿಲ್ಲ. ಆದ ಕಾರಣ ಬುದ್ಧಿಯಿಂದಲೆ ಆತ್ಮನನ್ನು ತಿಳಿಯುವುದು ಸಾಧ್ಯ ಎಂಬ ಮಾತು ಕೇವಲ ಉಪಚಾರದ ಮಾತು. ಶುದ್ಧಕನ್ನಡಿಯು ಸೂರ್ಯನ ಕಿರಣಗಳಿಂದ ತಾನು ಥಳಥಳಿಸಿ ಆ ಪ್ರಕಾಶದಿಂದ ಬೇರೆ ವಸ್ತುವನ್ನು ಬೆಳಗಿತೇ ಹೊರತು ಸ್ವಪ್ರಕಾಶವಾದ ಸೂರ್ಯನನ್ನು ತೋರಿಸಲಾಗದೆ ಇರುವಹಾಗೆ ಬುದ್ಧಿ ಇರುತ್ತದೆ.

ಶಬ್ದಾರ್ಥ: ಅದನು=ಆತ್ಮನನ್ನು; ಅರಿಯಲರಿಯದು=ತಿಳಿಯಲು ಸಾಧ್ಯವಿಲ್ಲ; ಸಿದ್ಧವಹರವಿಯನು ಪ್ರಕಾಶಿಸಲರಿಯದಂದದಲಿ=ಕನ್ನಡಿಯು ಸೂರ್ಯನಿಂದ ತಾನು ಥಳಥಳಿಸಿ ಆ ಪ್ರಕಾಶದಿಂದ ಬೇರೆ ವಸ್ತುವನ್ನು ಬೆಳಗೀತೇ ಹೊರತು ಸ್ವಪ್ರಕಾಶನಾದ ಸೂರ್ಯನನ್ನು ತೋರಿಸಲಾರದೆ ಇರುವ ಹಾಗೆ ಬುದ್ಧಿ ಇರುತ್ತದೆ. ಪಾಠಾಂತರ ಕೆಲವು ಪ್ರತಿಗಳಲ್ಲಿ ರವಿಯಂ ಬದಲಾಗಿ ರವಿಯನು ಎಂದಿದೆ.

---

ಅರಸಿನ ಸಮೀಪದಲಿ ಸಲಿಗೆಯೊ
ಳಿರುವ ಸಚಿವನ ಸ್ವಪ್ರಯೋಜನ
ಕರಸು ನೀನೆನಗೆಂಬ ಪರಿಯುಪಚಾರ ಲೋಕದಲಿ; ।
ಪರಮಪುರುಷನ ಸನ್ನಿಧಿಯಲಿಹ
ಕರಣವಾತುಮನೆಂಬರಜ್ಞರು;
ಅರಸುಸಚಿವರ ತೆರದಲಾತುಮಬುದ್ಧಿಭೇದಗಳು ॥ ॥೧೨೩॥

**ತಾತ್ಪರ್ಯ:** ರಾಜನ ಬಳಿ ಅವನಿಗೆ ಪ್ರೀತಿಪಾತ್ರನಾಗಿ ಸಲಿಗೆಯೊಳಗೆ ಇರುವ ಮಂತ್ರಿಯನ್ನು ತಮ್ಮ ಸ್ವಂತ ಪ್ರಯೋಜನಕ್ಕಾಗಿ ಮಂತ್ರಿಯನ್ನು ನೀನೇ ರಾಜನೆಂದು ಹೊಗಳುವುದನ್ನು ಲೋಕದಲ್ಲಿ ಕಾಣುತ್ತೇವೆ. ಅದರಂತೆ ಪರಮ ಪುರುಷನಾದ ಆತ್ಮನ ಸನ್ನಿಧಿಯಲ್ಲಿರುವ ಬುದ್ಧಿಯನ್ನೇ ಅಜ್ಞಾನಿಗಳು ಆತ್ಮನೆಂದು ತಿಳಿಯುತ್ತಾರೆ. ಈ ರೀತಿ ರಾಜ-ಮಂತ್ರಿಗಳ ಸಂಬಂಧದ ಹಾಗೆ ಆತ್ಮ-ಬುದ್ಧಿಗಳಿಗೆ ವ್ಯತ್ಯಾಸವಿದೆ.

**ಶಬ್ದಾರ್ಥ:** ಸಚಿವನ=ಮಂತ್ರಿಯನ್ನು; * ಸ್ವಪ್ರಯೋಜನಕ್ಕೆ=ಸ್ವಾರ್ಥಕ್ಕೆ; ಕರಣ=ಸಾಧನವಾದ ಬುದ್ಧಿ; ಅಜ್ಞರು=ಅಜ್ಞಾನಿಗಳು; ಪರಮಪುರುಷನ=ಆತ್ಮನ

---

**ಬುದ್ಧಿವಂತನೆ ಗಾಜುಮಣ್ಣಿನ**
**ಶುದ್ಧಸಾರದಲಾದ ದರ್ಪಣ**
**ಸಿದ್ಧವಹ ಮುಖದರ್ಶನಕೆ ತಾ ಯೋಗ್ಯವಾದಂತೆ ।**
**ಶುದ್ಧವಹ ಸತ್ತ್ವಪ್ರಧಾನದ**
**ಬುದ್ಧಿ ಮಾಯಾಕಾರ್ಯವಾಗಿಯು**
**ನಿರ್ಧರಿಸಲಾತ್ಮನ ವಿಚಾರಿಸಲಹುದು ಸಾಧನವು ॥ ॥೧೨೪॥**

**ತಾತ್ಪರ್ಯ:** ಜಾಣನೇ ಕೇಳು, ಗಾಜನ್ನು ಮಾಡುವ ಮಣ್ಣನ್ನು ಶುದ್ಧಗೊಳಿಸಿ ಅದರ ಸಾರದಿಂದ ತಯಾರಿಸಿದ ಕನ್ನಡಿಯು ನಾವು ನಮ್ಮ ಮುಖ ನೋಡಿಕೊಳ್ಳಲು ಸಾಧ್ಯವಾಗುವ ರೀತಿ ಸಿದ್ಧಗೊಳ್ಳುತ್ತದೆ. ಅದೇರೀತಿ ವಿಚಾರಮಾಡಿದರೆ ನಿರ್ಮಲವಾದ ಸತ್ತ್ವಪ್ರಧಾನವಾದ ಕನ್ನಡಿಯಂಥಾದ ಬುದ್ಧಿಯು ಮಾಯೆಯಿಂದ ಆವರಿಸಿದ ಆತ್ಮನ ಸ್ವರೂಪವನ್ನು ನಿರ್ಧರಿಸಲು ಸಾಧನವಾಗಬಲ್ಲದು ಎಂದರೆ ಶುದ್ಧ ಬುದ್ಧಿಯು ಆತ್ಮನ ಪ್ರಕಾಶತೋರಲು ಸಾಧನವೇ ಹೊರತು ಅದೇ ಆತ್ಮವಲ್ಲ.

**ಶಬ್ದಾರ್ಥ: ಗಾಜುಮಣ್ಣಿನ**=ಗಾಜನ್ನು ಮಾಡುವ ಮಣ್ಣಿನ; **ನಿರ್ಧರಿಸಲು**=ಆತ್ಮನ ವಿಚಾರವನ್ನು ಗೊತ್ತು ಮಾಡಲು; * **ಮಾಯಾಕಾರ್ಯವಾಗಿಯು**=ಬುದ್ಧಿಯನ್ನೇ ಮಾಯೆ ಆವರಿಸಿರುವುದನ್ನು;

---

**ಸಕಲವನು ಬೆಳಗುವ ದಿನೇಶನು**
**ಮುಕುರದಲಿ ಪ್ರತಿಬಿಂಬಿಸಲು ತ**
**ನ್ಮುಕುರ ಕೋಣೆಯ ಕತ್ತಲೆಯ ಪರಿಹರಿಸುವಂದದಲಿ ।**
**ಪ್ರಕಟಿಸಲು ಚಿಜ್ಜ್ಯೋತಿಯಂತ**
**ರ್ಮುಖದಿ ಬುದ್ಧಿಯೊಳಂತರಂಗದಿ**
**ವಿಕೃತಿಕರಮಾಯಾಂಧಕಾರವನಳಿಪುದಾ ಬುದ್ಧಿ ॥ ॥೧೨೫॥**

**ತಾತ್ಪರ್ಯ:** ಲೋಕದಲ್ಲಿ ಸಮಸ್ತ ಪದಾರ್ಥಗಳನ್ನು ಪ್ರಕಾಶಗೊಳಿಸುವ ಭಾಸ್ಕರನು ಕನ್ನಡಿಯಲ್ಲಿ ಪ್ರತಿಫಲಿಸಿದರೆ ಆ ಕನ್ನಡಿಯ ಬೆಳಕು ಕೋಣೆಯಲ್ಲಿರುವ ಕತ್ತಲೆಯನ್ನು

ಹೇಗೆ ಹೋಗಲಾಡಿಸುತ್ತದೆಯೋ ಅದರ ನಮ್ಮೊಳಗಿರುವ ಚಿತ್ಪ್ರಕಾಶ (ಆತ್ಮದ ಬೆಳಕು) ಅಂತರಂಗದಿಂದ ಹೊರಹೊಮ್ಮಿ ಬುದ್ಧಿಯಲ್ಲಿ ಪ್ರತಿಫಲಿಸಿದರೆ ಆಗ ನಮ್ಮ ಹೃದಯವೆಂಬ ಕೋಣೆಯಲ್ಲಿರುವ ಬಗೆಬಗೆಯ ರೂಪಗಳಿಂದ ಕೂಡಿರುವ ಮಾಯೆ ಯೆಂಬ ಕತ್ತಲೆಯನ್ನು ತೊಲಗಿಸುತ್ತದೆ. ಅಂಥ ಚಿಜ್ಜ್ಯೋತಿಯೇ ನೀನೆಂದು ತಿಳಿ.

**ಶಬ್ದಾರ್ಥ:** ಮುಕುರದಲಿ=ಕನ್ನಡಿಯಲ್ಲಿ; ವಿಕೃತಿಕರ=ಬಗೆಬಗೆಯ ರೂಪಗಳನ್ನು ತೋರಿಸುವಂಥ; * ಅಂಧಕಾರ=ಕತ್ತಲೆ; * ಚಿಜ್ಜ್ಯೋತಿ (ಚಿತ್+ಜ್ಯೋತಿ) ಚಿತ್‌ಪ್ರಕಾಶ; * ದಿನೇಶ=ಭಾಸ್ಕರ; * ಸಕಲವನು=ಜಗತ್ತಿನ ಸಮಸ್ತ ಪದಾರ್ಥಗಳನ್ನು;

---

ಬರಿಯರಿವ ತಾ ತನ್ನ ಬುದ್ಧಿಯೊ
ಳರಿಯಲಪ್ಪುದದೆಂತೆನಲು ನಿಜ
ದರಿವು ಸಾಕ್ಷಾತ್ತನಗೆ ತಾನೇ ಲಕ್ಷ್ಯವಲ್ಲಾಗಿ ।
ಪರಮಸಾಧನದರ್ಪಣವು ಮುಖ
ದರುಶನಕ್ಕಾಪರಿಯೊಳಾತ್ಮನ
ನರಿವುದಕೆ ನಿಜಬುದ್ಧಿ ಸಾಧನ ಮಗನೆ ಕೇಳೆಂದ ॥ ॥೧೨೬॥

**ತಾತ್ಪರ್ಯ:** ಶುದ್ಧಜ್ಞಾನವು ತಾನೇ ತನ್ನನ್ನು ತಿಳಿಯಲು ಸಾಧ್ಯವೇ ಎಂದು ಕೇಳಿದರೆ ಶುದ್ಧಸತ್ಯರೂಪಿ ಜ್ಞಾನವು ತನಗೆ ತಾನೇ ತಿಳಿಯಲು ಸಾಧನವಾಗಲಾರದು. ತನ್ನ ಮುಖವನ್ನು ನೋಡಿಕೊಳ್ಳಲು ತನಗೆ ತಾನೇ ಆಗದು. ಕನ್ನಡಿ ಶ್ರೇಷ್ಠಸಾಧನವಾಗಿರುತ್ತದೆ. ಹಾಗೆಯೇ ತನ್ನಲ್ಲಿರುವ ಆತ್ಮನನ್ನು ತಿಳಿಯಲು ನಿಜಬುದ್ಧಿಯು ಸಾಧನವಾಗಿರುತ್ತದೆ. ಪುತ್ರನಾದ ಶುಕನೇ ಕೇಳೆಂದ.

**ಶಬ್ದಾರ್ಥ:*** ಲಕ್ಷ್ಯ=ಗುರಿ; * ದರ್ಪಣ=ಕನ್ನಡಿ; * ಬರಿ ಅರಿವ=ಶುದ್ಧಜ್ಞಾನವು

* **ಪಾಠಾಂತರ:** ಕೆಲವು ಪ್ರತಿಗಳಲ್ಲಿ ಬರಿಯರಿವ ಪಾಠಕ್ಕೆ ಬದಲಾಗಿ ಬರಿಯರಿವು, ಬರಿಯರಿವೆ ಪಾಠಗಳಿವೆ (ಅರಾಸೇ, ಪಾಠ-ಅಜ್ಞಾತವಿಡಿ)

**ಟಿಪ್ಪಣಿ:** ನಿಜಬುದ್ಧಿಸಾಧನ=ಮುಖವು ತನ್ನನ್ನು ತಾನು ಅರಿಯಲಾರದೆ ಕನ್ನಡಿಯ ಸಾಧನದಿಂದ ಪ್ರತಿಬಿಂಬದ ಮೂಲಕವಾಗಿ ಅರಿತು ಕೊಳ್ಳುವುದಷ್ಟೇ; ಇದರಂತೆ ಅರಿವು ಚೇತನದಂತೆ ತೋರುವ ಬುದ್ಧಿಯ ಮೂಲಕವಾಗಿ ತನ್ನನ್ನು ತಾನೇ ಅರಿತುಕೊಳ್ಳುವುದು.

---

ಬುದ್ಧಿ ಸಾಧನಮಾತ್ರವಲ್ಲದೆ
ಹೊದ್ದುತಾತ್ಮನನರಿಯಲರಿಯದು;
ಬುದ್ಧಿ ಸಾಧನವಾದೊಡಾತ್ಮನು ತನ್ನ ತಾನರಿವ; ।
ನಿರ್ಧರಿಸಲರಿವಂಶವಾತ್ಮನು;
ಬುದ್ಧಿ ತಾ ಜಡ, ದೃಶ್ಯ, ಸಾಧನ;
ಬುದ್ಧಿಯಾತ್ಮನನರಿವುದೆಂಬುದು ಮರುಳುಮಾತೆಂದ ॥ ॥೧೨೭॥

**ತಾತ್ಪರ್ಯ:** ಬುದ್ಧಿಯು ಆತ್ಮನನ್ನು ಅರಿಯಲು ಸಾಧನಮಾತ್ರವಾಗಿದೆ. ತಾನೇ ಆತ್ಮನನ್ನು ಅರಿಯಲಾಗದು. ಬುದ್ಧಿ ಸಾಧನವಾದಾಗ ಆತ್ಮನು ತನ್ನನ್ನುತಾನು ತಿಳಿಯಬಲ್ಲನು. ವಿಚಾರಮಾಡಿ ನೋಡಿದರೆ ಆತ್ಮನು ತಿಳಿಯುವ ಸ್ವಭಾವವುಳ್ಳ ಚೈತನ್ಯ ರೂಪಿ ದೃಕ್ಕಾಗಿರುವನು. ಬುದ್ಧಿಯು ಜಡವೂ ದೃಶ್ಯವು ಆದ ಸಾಧನವಾಗಿರುವುದು. ಬುದ್ಧಿಯು ಆತ್ಮನನ್ನು ತಿಳಿಯುವುದು ಎಂಬಲ್ಲಿ ಆ ಅರಿವಿನ ಅಂಶವೇ ಆತ್ಮ. ಬುದ್ಧಿಯು ಕನ್ನಡಿಯಂಥ ಸಾಧನ. ಸಾಕ್ಷಾತ್ತಾಗಿ ಬುದ್ಧಿಯೇ ತಿಳಿಯುತ್ತದೆ ಎಂಬುದು ತಿಳಿವಳಿಕೆಯಿಲ್ಲದೆ ಮಾತೇ ಸರಿ.

**ಶಬ್ದಾರ್ಥ:** * ಮರುಳುಮಾತು=ಭ್ರಾಂತಿ ನುಡಿ, ತಿಳಿವಳಿಕೆಯಿಲ್ಲದ ಮಾತು; * ಅರಿವು=ತಿಳಿವಳಿಕೆ;

**ಟಿಪ್ಪಣಿ:** ಬುದ್ಧಿಯಾತ್ಮನ=ಬುದ್ಧಿಯು ಆತ್ಮನನ್ನು ಅರಿಯುವುದೆಂಬಲ್ಲಿ ಅರಿವಿನ ಅಂಶವೇ ಆತ್ಮ; ಬುದ್ಧಿಯು ಕನ್ನಡಿಯಂಥ ಸಾಧನ, ಸಾಕ್ಷಾತ್ತಾಗಿ ಬುದ್ಧಿಯೇ ತಿಳಿಯುವುದು ಎಂಬುದು ತಿಳಿವಳಿಕೆಯಿಲ್ಲದ ಮಾತೇ ಸರಿ.

---

**ಕಣ್ಣುಕಾಂಬುದೊ ಕನ್ನಡಿಯ ತಾ?**
**ಕನ್ನಡಿಯೆ ತಾ ಕಣ್ಣ ಕಾಂಬುದೊ?**
**ಕಣ್ಣು ಕನ್ನಡಿಯಿಂದ ತನ್ನನು ಕಾಂಬನೋ ತಾನು? ।**
**ನಿರ್ಣಯಿಸೆ ನಿಜದರಿವು ಬುದ್ಧಿಯ**
**ಲುನ್ನಯಿಸಿ ತಾ ತನ್ನನರಿವುದು;**
**ಸನ್ನುತನೆ, ನಿಜದರಿವನರಿಯದು ಬುದ್ಧಿ ಜಡವಾಗಿ ॥ ॥೧೨೮॥**

**ತಾತ್ಪರ್ಯ:** ಕಣ್ಣು ಕನ್ನಡಿಯನ್ನು ತಾನೇ ಕಾಣುತ್ತದೆಯೋ? ಅಥವಾ ಕನ್ನಡಿಯು ಕಣ್ಣನ್ನು ತಾನು ನೋಡುತ್ತದೆಯೋ? ವಿಚಾರ ಮಾಡಿ ನೋಡಿದರೆ ಆತ್ಮ ಜ್ಞಾನವು ಬುದ್ಧಿಯಲ್ಲಿ ಪ್ರತಿಫಲಿಸಿ ತನ್ನನ್ನು ತಾನೇ ತಿಳಿದುಕೊಳ್ಳುತ್ತದೆ. ಆದ್ದರಿಂದ ಜಡವಾದ ಬುದ್ಧಿಯು ಆತ್ಮಜ್ಞಾನವನ್ನು ತನಗೆ ತಾನೇ ಮಾಡಿಕೊಳ್ಳಲಾರದು.

**ಶಬ್ದಾರ್ಥ:** ಉನ್ನಯಿಸಿ=ಊಹಿಸಿ? ಪ್ರತಿಫಲಿಸಿ; ನಿಜದರಿವನರಿಯದು ಬುದ್ಧಿ ಜಡವಾಗಿ= ಬುದ್ಧಿಯು ಜಡವಾದ್ದರಿಂದ ಆತ್ಮನ ಜ್ಞಾನವನ್ನು ಮಾಡಿಕೊಳ್ಳಲಾರದು; ಕಾಂಬನೋ?= ನೋಡುವನೋ? (ನೋಡುವುದಿಲ್ಲ); ನಿಜದ ಅರಿವು=ಆತ್ಮಜ್ಞಾನ; ಸನ್ನುತನೆ=ಶ್ರೇಷ್ಠನೆ;

ಪಾಠಾಂತರ: ಕನ್ನಡಿಯನಾ ಎಂಬುದಕ್ಕೆ ಬದಲಾಗಿ ಕೆಲವು ಪ್ರತಿಗಳಲ್ಲಿ 'ಕನ್ನಡಿಯ ತಾ' ಎಂದಿದೆ (ಕು)(ಸ)(ಅ)

---

**ತನ್ನ ತನ್ನಿಂದರಿವುತಿಹನೆಂ**
**ದುನ್ನತದ ಶ್ರುತಿ ಸಾರುತಿಹುದೆಲೆ;**
**ತನ್ನ ತನ್ನಿಂದರಿವ ಪರಿಯೆಂತೆನಲು ಕೇಳದನು; ।**

**ಕಣ್ಣು ಕನ್ನಡಿಯಿಂದ ತನ್ನನು**
**ನಿರ್ಣಯಿಸಿ ಕಾಣ್ಬಂದದಂತದು**
**ತನ್ನದಪರೋಕ್ಷಾನುಭವ ಬುದ್ಧಿಪ್ರಕಾಶದಲಿ ॥ ॥೧೨೯॥**

**ತಾತ್ಪರ್ಯ:** ಆತ್ಮನು ತನ್ನನ್ನು ತಾನೇ ತಿಳಿಯುತ್ತಾನೆ ಎಂದು ಶ್ರೇಷ್ಠವಾದ ವೇದವಾಕ್ಯಗಳು ಸಾರುತ್ತಿದೆ, ಹೌದು ತಾನೆ? ತನ್ನಿಂದ ತಾನು ತಿಳಿಯುವ ಪರಿ ಎಂದು ಕೇಳುವೆಯಾ, ಹೇಳುತ್ತೇನೆ ಕೇಳು. ಕಣ್ಣು ಕನ್ನಡಿಯಿಂದ ತನ್ನನು ತಾನು ಏನೆಂಬುದನ್ನು ನಿರ್ಧರಿಸಿ ತಿಳಿಯುವಂತೆ ಬುದ್ಧಿಯು ಆತ್ಮನಂತೆ ಚೈತನ್ಯರೂಪವಾಗಿ ಹೊಳೆಯುವುದರ ಸಹಾಯದ್ದಿಂದ ಆತ್ಮ ಸಾಕ್ಷಾತ್ಕಾರ ಹೊಂದುತ್ತದೆ.

**ಶಬ್ದಾರ್ಥ:** **ತನ್ನ ತನ್ನಿಂದರಿವುತಿಹನೆಂದು**(ಸಂವಿಶತ್ಯಾತ್ಮನಾತ್ಮಾನಂ)=ತಾನು ತನ್ನಲ್ಲಿ ಪ್ರವೇಶಿಸುತ್ತದೆ. ಆದ್ದರಿಂದ ತನ್ನದು ಅಪರೋಕ್ಷಾನುಭವವು; **ಉನ್ನತದ ಶ್ರುತಿ**=ಶ್ರೇಷ್ಠವಾದ ವೇದವಾಕ್ಯಗಳು; **ಅಪರೋಕ್ಷಾನುಭವ**= ಸಾಕ್ಷಾತ್ಕಾರ, ಪ್ರತ್ಯಕ್ಷಾನುಭವ; **ಬುದ್ಧಿಪ್ರಕಾಶದಲಿ**=ಬುದ್ಧಿಯು ಆತ್ಮನಂತೆ ಚೈತನ್ಯರೂಪಾಗಿ ಹೊಳೆಯುವುದರ ಸಹಾಯದಿಂದ.

---

**ಜ್ಞಾನ ತನ್ನಿಂ ತಾನೆ ಅರಿವುದೋ?**
**ಏನೆನಲು, ತಾ ತನಗೆ ದೃಶ್ಯವೆ?**
**ಜ್ಞಾನವದು ಜ್ಞಾನಾಂತರದಿ ತಾ ತೋರಿತೆಂತೆನಲು ।**
**ತಾನದೇ ಅನವಸ್ಥೆಯಪ್ಪುದ**
**ದೇನು ದೀವಿಗೆಯಿಂದ ದೀವಿಗೆ**
**ಕಾಣುವದೆ? ಅದು ತಾ ಸ್ವಯಂಪ್ರಭೆಯೆಂದು ತಿಳಿಯೆಂದ ॥ ॥೧೩೦॥**

**ತಾತ್ಪರ್ಯ:** ಆತ್ಮನು ತನ್ನನ್ನು ತಾನೇ ತಿಳಿಯುವನು. ಏಕೆಂದರೆ ಆತನು ಸ್ವಯಂ ಪ್ರಕಾಶನು. ಆದರೆ ಅವನು ತನಗೆ ತಾನು ದೃಶ್ಯವಾಗುವುದಿಲ್ಲ ಏಕೆಂದರೆ ತನ್ನನ್ನು ತಾನು ಅರಿವುದೆಂದರೆ ಆತ್ಮಾಶ್ರಯವೆಂಬ ದೋಷವಾಗುತ್ತದೆ ಎನ್ನುತ್ತಾರೆ ಶಾಸ್ತ್ರಕಾರರು. ಜ್ಞಾನಕ್ಕೆ ಜ್ಞಾನವು ದೃಶ್ಯವಾಗಿದೆ ಎಂದರೆ ಜ್ಞಾನಾಂತರದಲ್ಲಿ ತನ್ನನ್ನು ತಾನೇ ತೋರಿಕೊಡುವುದು. ಅನವಸ್ಥೆ ಎನ್ನಿಸಿಕೊಳ್ಳುವುದಿಲ್ಲವೇ! ಎಂದರೆ ಇಲ್ಲ. ಏಕೆಂದರೆ ದೀಪದಿಂದ ದೀಪ ಹೇಗೆ ಕಾಣಿಸುತ್ತದೋ ಹಾಗೇ ಜ್ಞಾನವು ತನ್ನಿಂದ ತಾನೇ ಬೆಳಗುವ ಸ್ವಯಂಜ್ಯೋತಿ ಸ್ವರೂಪದ್ದಾಗಿದೆ ಎಂಬುದಾಗಿ ತಿಳಿ.

**ಟಿಪ್ಪಣಿ–೧: ಜ್ಞಾನ ತನ್ನಿಂ ತಾನೆ ಅರಿವುದೊ**=ಈ ಪ್ರಶ್ನೆಗೆ ಉತ್ತರವು ೧೨೬ನೇ ಪದ್ಯದಲ್ಲಿಯೇ ನಿರ್ಣಯವಾಗಿದ್ದರೂ ಅಲ್ಲಿ ವ್ಯವಹಾರ ದೃಷ್ಟಿಯಿಂದ ಬುದ್ಧಿಯನ್ನು ಸಾಧನವಾಗಿಟ್ಟುಕೊಂಡು ಉತ್ತರವನ್ನು ಹೇಳಿದೆ. ಇಲ್ಲಿ ಪರಮಾರ್ಥದಿಂದ ಆತ್ಮನು ತನ್ನನ್ನು ತಾನೇ ಅರಿವನು ಎಂದರೆ ಸ್ವಯಂಪ್ರಕಾಶನು ಎಂದು ಉತ್ತರವನ್ನು ಹೇಳುವುದಕ್ಕೆ ಮತ್ತೆ ಬಂದಿದೆ.

**ಟಿಪ್ಪಣಿ–೨: ತಾ ತನಗೆ ದೃಶ್ಯವೇ**=ತಾನು ತನಗೆ ದೃಶ್ಯವಾಗುವುದಿಲ್ಲೆಂಬ ಈ ಉತ್ತರವು ೧೨೬ನೇ ಪದ್ಯದಲ್ಲಿರುವ "ಸಾಕ್ಷಾತ್ತವಗೆ ತಾನೇ ಲಕ್ಷ್ಯನಲ್ಲಾಗಿ" ಎಂಬುದರ ಅನುವಾದವಾಗಿದೆ. ತನ್ನನ್ನು ತಾನೇ ಅರಿಯಿತೆಂದರೆ ಆತ್ಮಾಶ್ರಯವೆಂಬ ದೋಷವೆನಿಸುವುದೆಂದು ಶಾಸ್ತ್ರಕಾರರು ಹೇಳುತ್ತಾರೆ.

**ಟಿಪ್ಪಣಿ-೩:** ಅನವಸ್ಥೆ=ಒಂದು ಜ್ಞಾನವು ಮತ್ತೊಂದು ಜ್ಞಾನದಿಂದ ಅರಿಯಲ್ಪಟ್ಟಿತು ಎಂದರೆ ಅದಕ್ಕೆ ಮತ್ತೊಂದು ಜ್ಞಾನದ ಅಪೇಕ್ಷೆಯಾಗಬಹುದು. ಹೀಗೆ ಕೊನೆಯಾಗದೆ ಇರುವಂಥ ದೋಷಕ್ಕೆ ಅನವಸ್ಥೆ ಎಂದು ಹೆಸರು.

---

**ಬುದ್ಧಿಯಲಿ ಹೊಳೆದರಿವು ನಿಜವಾ**
**ಗಿದ್ದರಿವ ತಾ ಬೆಳಗಲರಿವುದೆ?**
**ಅದ್ವಯವತೀಂದ್ರಿಯವಮೂರ್ತಸ್ವಪ್ರಕಾಶವದು; ।**
**ಬುದ್ಧಿವಂತನೆ, ಜಲದೊಳಗೆ ಹೊಳೆ**
**ದಿದ್ದ ರವಿಮಂಡಲವು ನಿಜವಾ**
**ಗಿದ್ದ ಸೂರ್ಯನ ಬೆಳಗಲರಿವುದೆ? ತಿಳಿದು ನೋಡೆಂದ ॥ ॥೧೩೧॥**

**ತಾತ್ಪರ್ಯ:** ಬುದ್ಧಿಯಲ್ಲಿ ತೋರಿದ ಜ್ಞಾನರೂಪವು ಮೂಲವಾದ ಜ್ಞಾನರೂಪವನ್ನು ಬೆಳಗಲು ಬುದ್ಧಿಗೆ ಸಾಧ್ಯವೇ? ಇಲ್ಲ, ಏಕೆಂದರೆ ಆ ಮೂಲಜ್ಞಾನರೂಪವು (ಆತ್ಮವು) ಐಕ್ಯೈಕವಾದುದು; ಇಂದ್ರಿಯಗಳಿಗೆ ಅಗೋಚರವಾದುದು, ನಿರಾಕಾರವಾದುದು, ಸ್ವಯಂ ಪ್ರಕಾಶವುಳ್ಳದ್ದು. ನೀರಿನಲ್ಲಿ ಹೊಳೆಯುವ ಸೂರ್ಯ ಸಮೂಹವು ಪ್ರತಿಬಿಂಬವು ನಿಜವಾದ ಸೂರ್ಯನನ್ನು ಪ್ರಕಾಶಗೊಳಿಸಲು ಶಕ್ಯವೆ? ಜಾಣನೇ ವಿಚಾರಮಾಡಿ ನೋಡು.

**ಶಬ್ದಾರ್ಥ:** * **ಅದ್ವಯವು**=ಏಕೈಕ; * **ಅತೀಂದ್ರಿಯವು**=ಇಂದ್ರಿಯಗಳಿಗೆ ಗೋಚರವಾಗದದು; * **ಅಮೂರ್ತ**=ನಿರ್ಗುಣರೂಪಿ; * **ಸ್ವಪ್ರಕಾಶ**=ಸ್ವಯಂಪ್ರಕಾಶವುಳ್ಳದ್ದು; **ಜಲದೊಳಗೆ ಹೊಳೆದದ್ದು**=ನೀರಿನಲ್ಲಿ ಪ್ರತಿಫಲಿಸಿದ್ದು; **ತಿಳಿದು ನೋಡೆಂದ**=ವಿಚಾರಮಾಡಿ ನೋಡು ಎಂದು ವ್ಯಾಸ ಶುಕನಿಗೆ ಹೇಳಿದ; **ಮಂಡಲ**=ಸಮೂಹ.

**ಶಬ್ದಾರ್ಥ: ಬುದ್ಧಿಯಲಿ ಹೊಳೆದ ಅರಿವು ನಿಜವಾಗಿ ಇದ್ದ ಅರಿವ ತಾ ಬೆಳಗಲು ಅರಿವುದೆ?**= ಬುದ್ಧಿಯಲ್ಲಿ ತೋರಿದ ಜ್ಞಾನರೂಪವು ಮೂಲವಾದ ಜ್ಞಾನರೂಪವನ್ನು ಬೆಳಗಲಾರದು.

---

**ಬುದ್ಧಿಯನು ಪ್ರತಿಬಿಂಬದರಿವನು**
**ಶುದ್ಧಸಂವಿತ್ತರಿವುದೆಂತೆನೆ**
**ವೇದ್ಯವಹ ಕನ್ನಡಿಯ ಮುಖವನು ಕಣ್ಣುಕಾಂಬಂತೆ; ।**
**ಬುದ್ಧಿ ತೋರುತ್ತಡಗುವದರಿಂ**
**ಬುದ್ಧಿಯರಿವದು ತೋರುತಡಗು**
**ತ್ತಿರ್ದಪುದು ತಾಂ ಬುದ್ಧಿಸಹಿತದು ದೃಶ್ಯ; ನಿಜವಲ್ಲ ॥ ॥೧೩೨॥**

**ತಾತ್ಪರ್ಯ:** ಶುದ್ಧವಾದ ಆತ್ಮಜ್ಞಾನವು (ಶುದ್ಧ ಸಂಪತ್ತು) ಬುದ್ಧಿಯನ್ನು ಆ ಬುದ್ಧಿಯಲ್ಲಿ ಪ್ರತಿಬಿಂಬಿಸುವ ತಿಳಿವಳಿಕೆಯನ್ನು ತಿಳಿದುಕೊಳ್ಳುವ ರೀತಿ ಹೇಗೆಂದರೆ, ಕಣ್ಣು ತನ್ನದೇ ಆದ ಕಾಣುವ ಶಕ್ತಿಯಿಂದ ಕನ್ನಡಿಯನ್ನೂ ಅದರಲ್ಲಿ ಕಾಣುವ ಮುಖವನ್ನೂ

ನೋಡುತ್ತದೆ. ಹಾಗೆಯೇ ಆತ್ಮನು ಬುದ್ಧಿಯನ್ನೂ, ಬುದ್ಧಿಗಾದ ಜ್ಞಾನವನ್ನು ಅರಿಯುವನು. ಹಾಗೆ ಬುದ್ಧಿಯು ತೋರಿ ಅಡಗುತ್ತಿದ್ದರೆ, ಆ ಬುದ್ಧಿಯಲ್ಲಿದ್ದ ಜ್ಞಾನವೂ ತೋರಿ ಮರೆಯಾಗುವುದರಿಂದ ಆ ಬುದ್ಧಿಯೂ ಕೂಡ ದೃಶ್ಯವೆನಿಸಿ ಕೊಳ್ಳುತ್ತದೆ. ಅದು ನಿಜಜ್ಞಾನವಾಗಿರುವುದಿಲ್ಲ.

**ಟಿಪ್ಪಣಿ: ಕನ್ನಡಿಯ ಮುಖವನು ಕಣ್ಣು ಕಾಂಬಂತೆ=ಕಣ್ಣು ಕನ್ನಡಿಯನ್ನೂ ಮುಖವನ್ನೂ ಕಾಣುವಂತೆ (ಆತ್ಮನು ಬುದ್ಧಿಯನ್ನೂ ಬುದ್ಧಿಗಾದ ಜ್ಞಾನವನ್ನೂ ಅರಿಯುವನು). * ಶುದ್ಧ ಸಂಪತ್ತು =ಶುದ್ಧರೂಪದ ಆತ್ಮಜ್ಞಾನ; * ವೇದ್ಯವಹ=ತಿಳಿಯಲು ಶಕ್ಯವಾದ; * ದೃಶ್ಯ ನಿಜವಲ್ಲ=ಪ್ರತಿಬಿಂಬವೇ ಹೊರತು ನಿಜಸ್ವರೂಪವಲ್ಲ;**

---

**ಬುದ್ಧಿಯಲಿ ಹೊಳೆದರಿವ ತಿಳಿಯಲು**
**ವೇದ್ಯವಾಗಿಹುದೆಲ್ಲರಿಂಗದು;**
**ಬುದ್ಧಿಯಿಂದಾಚೆಯಲಿ ತೋರುವ ಶುದ್ಧವಾದರಿವು ।**
**ವೇದ್ಯವಾಗದತೀಂದ್ರಿಯವು; ನೆರೆ**
**ಸಾಧ್ಯವಪರೋಕ್ಷಾನುಭವ ಸಂ**
**ಸಿದ್ಧಿಯಲಿ; ನೀನದನು ಸಾಕ್ಷಾತ್ಕರಿಸಿ ತಿಳಿಯೆಂದ ॥ ॥೧೩೩॥**

**ತಾತ್ಪರ್ಯ:** ಅರಿವು ಬುದ್ಧಿಯ ಉಪಾಧಿಯುಳ್ಳದ್ದಾಗಿ ಕಂಡದ್ದನ್ನು ಅಥವಾ ಬುದ್ಧಿಯೇ ಅರಿವು ಎಂಬಂತೆ ಕಂಡದ್ದನ್ನು ತಿಳಿಯಲು ಎಲ್ಲರಿಗೂ ಸಾಧ್ಯವಿದೆ. ಬುದ್ಧಿಯನ್ನು ಅತಿಕ್ರಮಿಸಿ ಕಾಣುವ ವ್ಯವಹಾರಜ್ಞಾನವನ್ನು ಮೀರಿದ ಪಾರಮಾರ್ಥಿಕಜ್ಞಾನವನ್ನು ತಿಳಿಯಲು ಎಲ್ಲರಿಗೂ ಶಕ್ಯವಿಲ್ಲ. ಅದು ಇಂದ್ರಿಯಾನುಭವವನ್ನು ಮೀರಿದುದು; ಆ ಚಿದ್ರೂಪವನ್ನು ಅಪರೋಕ್ಷಾನುಭವವು ಸಿದ್ಧಿಯಾದಲ್ಲಿ ಮಾತ್ರ ತಿಳಿಯಲು ಶಕ್ಯ. ಆದಕಾರಣ ಆ ಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡು ಅದರಿಂದ ಚಿದ್‌ರೂಪವನ್ನು ತಿಳಿಯಬೇಕು.

**ಶಬ್ದಾರ್ಥ: ಬುದ್ಧಿಯಲಿಹೊಳೆದ ಅರಿವ=ಅರಿವು ಬುದ್ಧಿಯ ಉಪಾಧಿಯುಳ್ಳದ್ದಾಗಿ ಕಂಡದ್ದನ್ನು ಅಥವಾ ಬುದ್ಧಿಯೇ ಅರಿವು ಎಂಬಂತೆ ಕಂಡದ್ದನ್ನು; * ವೇದ್ಯವಾಗದ=ತಿಳಿಯಲಾಗದ; * ಅಪರೋಕ್ಷಾನುಭವ=ಪ್ರತ್ಯಕ್ಷಾನುಭವ; * ಸಂಸಿದ್ಧಿ=ಸಾಧಿಸಿಕೊಳ್ಳುವುದು;**

---

**ತೋರದರಿವುದು ನಿಜದರಿವು; ತಾ**
**ತೋರುತರಿವುದು ಬುದ್ಧಿಯರಿವಿನ**
**ತಾರತಮ್ಯದಲಾತ್ಮಬುದ್ಧಿಗಳಲ್ಲಿ ಭೇದವನು ।**
**ನೀರನೇ ತಿಳಿ ನೀನು; ಕೇತಕಿ**
**ನಾರೆ ಸರ್ಪವನರಿವ ತೆರದಿಂ**
**ತೋರುವದು ನಿಜವಿದಿರೊಳಿಹುದೆಂದರಿಯುವದು ಬುದ್ಧಿ ॥ ॥೧೩೪॥**

**ತಾತ್ಪರ್ಯ:** ಆತ್ಮನ ಅರಿವು ಇದಿರಾಗಿ ಕಾಣಿಸಿಕೊಳ್ಳದೆ ತನ್ನಿಂದತಾನೇ ತಿಳಿಯಲ್ಪಡುವುದು. ಬುದ್ಧಿಯ ಅರಿವು ತಾನು ಆತ್ಮಬಿಂಬವಶದಿಂದ ಕಾಣುತ್ತದೆ. ಈ ರೀತಿ ಆತ್ಮ ಬುದ್ಧಿಗಳ ವ್ಯತ್ಯಾಸವನ್ನು ಸುಂದರನಾದ ಶುಕನೇ ನೀನು ತಿಳಿ. ಇದಕ್ಕೊಂದು ದೃಷ್ಟಾಂತ ನೀಡುವೆನು ಕೇಳು. ಕೇದಗೆ ವಾಸನೆಯನ್ನು ಕಂಡರೆ ಸರ್ಪವನ್ನು ಊಹಿಸುತ್ತಾರಷ್ಟೆ. ಆಗ ತೋರುವುದು ವಾಸನೆ, ತಿಳಿಯುವುದು ಹಾವು. ಹಾಗೆಯೇ ಬುದ್ಧಿಯು ಚೈತನ್ಯದಂತೆ ತೋರುತ್ತದೆ. ಅದರಿಂದ ಆತ್ಮ ಜ್ಞಾನವು ಊಹಿತವಾಗುತ್ತದೆ.

**ಶಬ್ದಾರ್ಥ:** ನೀರನೇ=ಸುಂದರನೆ (ಎಂದು ಮಗನನ್ನು ಕುರಿತ ವ್ಯಾಸನ ಸಂಬೋಧನೆ) * **ನಾರೆ**=ವಾಸನೆ ಸೂಸಲು; * **ಕೇತಕಿ**=ತಾಳೆ ಹೂ; **ತೋರದರಿವುದು** (**ತೋರದ+ಅರಿವು+ಅದು**) ನಿಜದರಿವು=ಆತ್ಮನ ಅರಿವು ಇದಿರಾಗಿ ಕಾಣಿಸಿಕೊಳ್ಳದೆ ತಿಳಿಯುವುದು; **ತೋರುತಅರಿವುದುಬುದ್ಧಿ**=ಬುದ್ಧಿಯ ಅರಿವು ತಾನು ಕಾಣುತ್ತ ತಿಳಿಯುವುದು.

**ಟಿಪ್ಪಣಿ:** ನಿಜಇದಿರೊಳುಇಹುದು=ಕಣ್ಣೆದುರಿಗೇ ಸತ್ಯವಿದೆ ತಿಳಿ. ನಿಜ=ಸರ್ಪ ಕೇದಗೆಯಲ್ಲಿ ವಾಸವಾಗಿರುತ್ತದೆ. ಅದರಿಂದ ಅದಕ್ಕೆ ಕೇದಗೆಯ ವಾಸನೆ ಎನ್ನುವುದುಂಟು. ಹೀಗೆ, ಸರ್ಪಕ್ಕೂ ಕೇದಗೆಗೂ ಸಂಬಂಧ ಕಲ್ಪಿಸುತ್ತಾರೆ. ಹಾಗಾಗಿ ಕೇದಗೆಯ ವಾಸನೆಯನ್ನು ಕಂಡರೆ ಸರ್ಪವನ್ನು ಊಹಿಸುತ್ತಾರಷ್ಟೇ. ಆಗ ತೋರುವುದು ವಾಸನೆ; ತಿಳಿಯುವುದು ಹಾವು; ಹಾಗೆಯೇ ಬುದ್ಧಿಯು ಚೈತನ್ಯದಂತೆ ತೋರುತ್ತದೆ. ಅದರಿಂದ ಆತ್ಮಜ್ಞಾನವು ಊಹಿತವಾಗುತ್ತದೆ. ಈ ದೃಷ್ಟಾಂತಾಲಂಕಾರ ಪದ್ಯ ಇದು.

---

**ಶುದ್ಧವಾಗಿದ್ದರಿವ ಹೊದ್ದಿದ**
**ಬುದ್ಧಿ ತಾನರಿವಾಗಿ ತನ್ನ ನಿ**
**ಬದ್ಧಿಸುವ ಪರಿಯಂತ ತಾನೇ ಆತ್ಮನಾಗಿಹುದು; ।**
**ಶುದ್ಧರತ್ನವ ಗಾಜುಮಣಿಯ ನಿ**
**ಬದ್ಧಿಸುವ ನೋಟಕನ ತೆರದಲಿ**
**ಬುದ್ಧಿಯರಿವನು ನಿಜದರಿವನಾಪರಿಯಲರಿಯೆಂದ ॥ ॥೧೩೫॥**

**ತಾತ್ಪರ್ಯ:** ಶುದ್ಧಜ್ಞಾನವನ್ನು ಹೊಂದಿರುವ ಬುದ್ಧಿಯು ತಾನೇ ಅರಿವಾಗಿ ತನ್ನನ್ನು ಚೆನ್ನಾಗಿ ಒರೆ ಹಚ್ಚಿ ಹೋಲಿಸಿ ನೋಡುವವರೆಗೆ ತಾನೇ ಆತ್ಮನಾಗಿರುವುದು. ಶುದ್ಧವಾದ ರತ್ನವನ್ನೂ ಕೃತಕವಾದ ಗಾಜಿನ ಮಣಿಯನ್ನೂ ವಿಮರ್ಶೆಮಾಡಿ ಪರಿಶೀಲಿಸಿ ಅವೆರಡೂ ಬೇರೆ ಬೇರೆ ಎಂದು ತಿಳಿದುಕೊಳ್ಳುವ ರತ್ನಪರೀಕ್ಷಕನ ಹಾಗೆ ನೀನೇ ನಿಶ್ಚಯಿಸಿ ನೋಡಬೇಕು.

**ಶಬ್ದಾರ್ಥ:** ನಿಬದ್ಧಿಸುವ=ಚೆನ್ನಾಗಿ ಒರೆಹಚ್ಚಿ ಹೋಲಿಸಿ ನೋಡುವ; * **ಪರಿಯಂತ**=ವರೆಗೆ; * **ನೋಟಕ**=ರತ್ನಪರೀಕ್ಷಕ; **ಆ ಪರಿಯಲಿ**=ಆ ರೀತಿಯಲ್ಲಿ; * **ತೆರದಲಿ**=ವಿಧಾನದಲಿ; * **ಶುದ್ಧರತ್ನ**=ಸಹಜವಾಗಿ ನಿಸರ್ಗದಲ್ಲಿ ಲಭ್ಯವಿರುವ ರತ್ನ (ನಿಜದರಿವು) * **ಗಾಜುಮಣಿ** =ಕೃತಕವಾಗಿ ತಯಾರಿಸಿದ ಗಾಜಿನ ಮಣಿ (ಬುದ್ಧಿ ಅರಿವು)

---

ಬುದ್ಧಿಯಿಂದಾಚೆಯಲಿ ತೋರು
ತ್ತಿದ್ದರಿವನರಿವಂದವೆಂತನೆ
ಬುದ್ಧಿ ಮೂರುಮವಸ್ಥೆಯೊಳು ತೋರ್ದಡಗುತಿಹುದಾಗಿ ।
ಬುದ್ಧಿಯ ವಿಕಾರಗಳನರಿವುದು
ಶುದ್ಧಸಂವಿತ್ತದನು ಚಂದ್ರನ
ಬದ್ಧಿಸುವ ರಾಹುವ ನಿರೀಕ್ಷಿಸುವಂತೆ ತಿಳಿಯೆಂದ ॥ ॥೧೩೬॥

ತಾತ್ಪರ್ಯ: ಬುದ್ಧಿಯನ್ನು ಮೀರಿ ತೋರುತ್ತಿರುವ ಜ್ಞಾನವನ್ನು ತಿಳಿಯುವ ರೀತಿ ಹೇಗೆ ಎಂದರೆ ಬುದ್ಧಿಯು ಜಾಗ್ರತ, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ಅಡಗಿ ತೋರುವ ಬುದ್ಧಿಯ ವಿಕಾರಗಳನ್ನು ಶುದ್ಧ ಜ್ಞಾನವು ನಿಜಸಾಕ್ಷಿಯಾಗಿರಲು ತಿಳಿದುಕೊಳ್ಳುತ್ತದೆ. ರಾಹು ಚಂದ್ರನನ್ನು ಆವರಿಸಿದಾಗ ಹೇಗೋ ಹಾಗೆ ತಿಳಿಯುತ್ತದೆ. ರಾಹುವೇ ಸ್ವತಃ ಪ್ರತ್ಯೇಕ ಕಾಣಿಸುವುದಿಲ್ಲ ಹಾಗೆ ಶುದ್ಧಜ್ಞಾನ ಅದೇ ಪ್ರತ್ಯೇಕವಾಗಿ ಕಾಣಿಸುವುದಿಲ್ಲ ಚಿದಾಭಾಸದಿಂದ ಕಾಣುತ್ತದೆ.

ಟಿಪ್ಪಣಿ-೧: ಚಂದ್ರನನ್ನು ಬುದ್ಧಿಸುವ ರಾಹುವ ನಿರೀಕ್ಷಿಸುವಂತೆ: ಛಾಯಾಗ್ರಹವಾದ ರಾಹು ಚಂದ್ರನನ್ನು ಹಿಡಿಯುತ್ತದೆ. ಅದಕ್ಕೇ ಗ್ರಹಣವೆನ್ನುತ್ತಾರೆ. ರಾಹು ಸ್ವತಃ ಕಾಣಿಸಿಕೊಳ್ಳುವುದಿಲ್ಲ, ಚಂದ್ರನ ಸಂಬಂಧದಿಂದ ಗೊತ್ತಾಗುತ್ತದೆ. ಅದರಂತೆ ಶುದ್ಧ ಸಂವಿತ್ತು ತೋರದಿದ್ದರೂ ಅದರ ಇರುವಿಕೆಯು ಚಿದಾಭಾಸದಿಂದ ಎಂದರೆ ಇದೇ ಜ್ಞಾನವೆಂದು ಭ್ರಮಿಸುವಂತೆ ಬುದ್ಧಿಯಲ್ಲಿ ತೋರುವ ಧರ್ಮದಿಂದ ಗೊತ್ತಾಗುವುದು.

ಶಬ್ದಾರ್ಥ: ಮೂರುಂಅವಸ್ಥೆಗಳು=ಜಾಗ್ರತ, ಸ್ವಪ್ನ, ಸುಷುಪ್ತಿ; ಶುದ್ಧ ಸಂವಿತ್=ಶುದ್ಧ ಜ್ಞಾನವು; ಬದ್ಧಿಸುವ=ಬಿಂಬಿಸುವ, ಆವರಿಸುವ;

ಪಾಠಾಂತರ: ಬುದ್ಧಿಮೂರುಮವಸ್ಥೆಯೊಳು ತೋರ್ದಡಗುತಿಹುದಾಗಿ ಬುದ್ಧಿಜಾಗ್ರಾದಿ ಗಳಲಡಗುತತೋರುತಿಹುದಾಗಿ [(ಕು)(ಪೇ) ಪ್ರತಿಗಳ ಪಾಠ]

---

## ಬುದ್ಧಿಸಾಕ್ಷಿತ್ವವನ್ನು ಸಾಧಿಸುವ ರೀತಿ (೧೩೭-೧೪೮)

ಸಾಧಕರಿಗೀ ಬುದ್ಧಿಸಾಕ್ಷಿಯ
ಸಾಧಿಸುವ ಪರಿಯೆಂತೆನಲು ನಿಜ
ಬೋಧವದು ನಿತ್ಯಪ್ರಕಾಶವು; ತೋರಲದು ಮುನ್ನ
ಬೋಧದಂದದಿ, ಬುದ್ಧಿಬಳಿವಿಡಿ ।
ದಾದಿವಸ್ತುವಿನಿಂದ ತೋರ್ಪುದು;
ವೇದಶಿರವು "ತಮೇವ ಭಾಂತ"ಮೆನುತ್ತಲೋದುವದು ॥ ॥೧೩೭॥

ತಾತ್ಪರ್ಯ: ಸಾಧಕರು ಈ ಬುದ್ಧಿಸಾಕ್ಷಿಯನ್ನು ಸಾಧಿಸುವುದು ಹೇಗೆಂದರೆ, ನಿಶ್ಚಯ ಜ್ಞಾನಾತ್ಮಕವಾದ ಆತ್ಮನ ಅರಿವು ನಿತ್ಯಪ್ರಕಾಶವಾಗಿರುತ್ತದೆ. ಅದು ಮೊದಲು ಜ್ಞಾನ

ರೂಪವಾಗಿ ತೋರಿದ ಮೇಲೆ ಬುದ್ಧಿಯು ಆ ಜ್ಞಾನವನ್ನು ಹಿಂಬಾಲಿಸಿ ಆ ಮೂಲ ವಸ್ತುವಿನಿಂದಲೇ ಬೆಳಗುವುದು ಎಂದರೆ ಆ ಮೂಲ ವಸ್ತುವೇ ಆತ್ಮನ ಬೆಳಕಿನಿಂದಲೇ ಎಲ್ಲವೂ ಬೆಳಗುತ್ತದೆ ಎಂಬ ಮುಂಡಕೋಪನಿಷತ್ತಿನ (೨-೨-೧೧) ಮಂತ್ರದ **"ತಮೇವ ಭಾಂತಮನುಭಾತಿಸರ್ವಂ"** (ಪ್ರಕಾಶಿಸುವ ಅವನನ್ನೇ ಎಲ್ಲವೂ ಆಶ್ರಯಿಸಿ ಪ್ರಕಾಶಿಸುತ್ತದೆ ಎಂಬ ಮಾತೇ ಇದಕ್ಕೆ ಪ್ರಮಾಣವೆಂದು ತಿಳಿಯತಕ್ಕದ್ದು.

**ಶಬ್ದಾರ್ಥ:** ನಿಜಬೋಧವು+ಅದು=ತನ್ನ ಆತ್ಮನ ಅರಿವು; **ತೋರಲದು ಮುನ್ನಬೋಧದಂದದಿ**= ಅದು ಮೊದಲು ಜ್ಞಾನರೂಪವಾಗಿ ತೋರಿದ ಮೇಲೆ; **ಬುದ್ಧಿಬಳಿವಿಡಿದಾದಿವಸ್ತುವಿನಿಂದ ತೋರ್ಪುದು**=ಬುದ್ಧಿಯು ಆ ಜ್ಞಾನವನ್ನು ಹಿಂಬಾಲಿಸಿ ಆ ಮೂಲ ವಸ್ತುವಿನಿಂದಲೇ ಬೆಳಗುವುದು;

**ಟಿಪ್ಪಣಿ: ತಮೇವಭಾಂತ='ತಮೇವಭಾಂತಮನುಭಾತಿಸರ್ವಂ'** ಎಂಬ ಮುಂಡಕೋಪನಿಷತ್ತಿನ ೨ನೇ ಮಂತ್ರದ ೨ನೇ ಖಂಡದ ೧೧ನೇ ಮಂತ್ರದ ಮಾತಿದು. ಎಲ್ಲವೂ ಆತ್ಮನ ಬೆಳಕಿನಿಂದಲೇ ಬೆಳಗುತ್ತದೆ ಎಂದು ಇದರರ್ಥ.

---

**ಬೆಲ್ಲದಿಂ ಮಧುರತೆಯು ಭಕ್ಷ್ಯಗ**
**ಳಲ್ಲಿ ತೋರುವವೋಲು ಚಿತ್ಪ್ರಭೆ**
**ಯಲ್ಲಿ ಕೂಡಿದ ಬುದ್ಧಿ ಚಿತ್ತೆಸೆವಂತೆ ತೋರುವುದು; ।**
**ಸಲ್ಲಲಿತಸಹಜಪ್ರಕಾಶವ**
**ಸೊಲ್ಲು ಪೇಳಲ್ಕರಿಯದನುಭವ**
**ದಲ್ಲಿ ಕಂಡ ಮಹಾನುಭಾವನೆ ಬಲ್ಲ ಕೇಳೆಂದ ॥ ॥೧೩೮॥**

**ತಾತ್ಪರ್ಯ:** ಭಕ್ಷ್ಯಗಳಲ್ಲಿ ಸೇರಿರುವ ಸಿಹಿಯು ಬೆಲ್ಲ ಸೇರಿರುವುದರಿಂದ ತಿಳಿಯುತ್ತದೆ. ಹಾಗೆಯೇ ಬುದ್ಧಿಯಲ್ಲಿ ಚಿತ್‌ಪ್ರಭೆ ಕೂಡಿದ್ದಾಗ ಬುದ್ಧಿಯು ಚಿತ್‌ಪ್ರಭೆಯಿಂದ ಪ್ರಕಾಶಿಸುತ್ತದೆ. ಬುದ್ಧಿಯಲ್ಲಿ ಸೇರಿಕೊಂಡ ಚಿತ್ಪ್ರಭೆಯ ಸಹಜಪ್ರಕಾಶವನ್ನು ಅನುಭವದಲ್ಲಿ ಕಂಡ ಮಹಾನುಭಾವದ ಮಾತಿನಲ್ಲಿ ಹೇಳಲಾಗದ್ದನ್ನು ಅನುಭವದಲ್ಲಿ ಕಂಡಿರುತ್ತಾನೆ. ಆದ್ದರಿಂದ ಸುಭಗವಾದ ಸಹಜ ಪ್ರಕಾಶವು ಎಲ್ಲಿರುವುದು ಎಂಬುದನ್ನು ಮಾತಿನಲ್ಲಿ ಹೇಳಲು ಅಶಕ್ಯವಾದುದು.

**ಶಬ್ದಾರ್ಥ: ಚಿತ್ತೆಸೆದಂತೆ**=ಚಿದ್ರೂಪವು ಹೇಗೆ ಕಾಣುವುದೋ ಹಾಗೆ; **ಚಿತ್ಪ್ರಭೆ**=ಚಿತ್ಪ್ರಕಾಶ

**ಪಾಠಾಂತರ: "ಬೆಲ್ಲದಿಂ ಮಧುರತೆಯು ಭಕ್ಷ್ಯಗಳಲ್ಲಿ ತೋರುವವೋಲು"** ಎಂಬುದಕ್ಕೆ ಕೆಲವು ಪ್ರತಿಗಳಲ್ಲಿ **"ಬೆಲ್ಲ ಬೆರಸಲು ಮಧುರ ಭಕ್ಷತೆಯಲ್ಲಿ ತೋರುವವೋಲು"** ಎಂದಿದೆ (ಕು)(ಪೇ)

**ಟಿಪ್ಪಣಿ:** ಅನುಭವದಲ್ಲಿ ಕಂಡ=ಭಕ್ಷ್ಯಗಳಲ್ಲಿ ಸೇರಿರುವ ಬೆಲ್ಲವನ್ನು ಅರಿಯುವಂತೆ ಬುದ್ಧಿಯಲ್ಲಿ ತೋರುವ ಚಿತ್ಪ್ರಭೆಯಿಂದ ಚಿತ್ತನ್ನು ಕಂಡಂಥ ಮಹಾನುಭಾವನು ಮಾತಿನಲ್ಲಿ ಆ ಅನುಭವವನ್ನು ಹೇಳಲಾರನು. ಆದ್ದರಿಂದಲೇ ಈ ಮಾತು "ಬಲ್ಲವನೇ ಬಲ್ಲ ಬೆಲ್ಲದ ಸವಿಯ" ಎಂಬ ಗಾದೆಯನ್ನು ನೆನಪಿಸುತ್ತದೆ.

---

ತಿಳಿಯ ನಿರ್ಮಲಜಲದೊಳಗೆ ಪ್ರತಿ
ಫಲಿಸಿ ದಿನಕರಬಿಂಬ ಮಿಗೆ ಥಳ
ಥಳಿಸಲಾ ಜಲವೇನು ತೋರದೆ ಬಿಂಬಮಯವಾಗಿ ।
ಹೊಳೆವವೊಲು ಚಿತ್ಪ್ರಭೆಯ ಥಾಳವ
ತಳೆದು ತನ್ನೊಳು ಬುದ್ಧಿ ತಾ ಥಳ
ಥಳಿಸಿ ಚಿತ್ಪ್ರಭೆಯಂತೆ ತೋರ್ಪುದು ಸಹಜವಲ್ಲೆಂದ ॥ ॥೧೩೯॥

ತಾತ್ಪರ್ಯ: ಶುದ್ಧವಾದ ತಿಳಿ ನೀರಿನಲ್ಲಿ ಸೂರ್ಯನ ಬಿಂಬ ಪ್ರತಿಬಿಂಬಿಸಿ ಥಳಥಳ ಎಂದು ಹೊಳೆಯುತ್ತಿದ್ದರೆ ಆಗ ನೀರು ಕಾಣದೆ ಸೂರ್ಯನೇ ನೀರಿನ ತುಂಬ ಹೊಳೆಯುತ್ತಿರುತ್ತಾನೆ. ಅದರಂತೆಯೇ ಚಿತ್ಪ್ರಭೆಯು ಪ್ರಜ್ವಲಕಾಂತಿಯಿಂದ ಬುದ್ಧಿಯಲ್ಲಿ ಕಾಣಿಸಿಕೊಂಡಾಗ ಬುದ್ಧಿಯು ಚಿತ್ಪ್ರಭೆಯ ಹಾಗೆಯೇ ಕಾಣಿಸುತ್ತದೆ. ಆದರೆ ಬುದ್ಧಿಯೇ ನಿಜವಾದ ಚಿತ್ಪ್ರಭೆ ಅಲ್ಲ. ಬುದ್ಧಿಯೇ ಬೇರೆ ಚಿತ್ಪ್ರಭೆಯೇ ಬೇರೆ. ಸೂರ್ಯನ ಪ್ರತಿಬಿಂಬದ ಹಾಗೆ ಚಿತ್ಪ್ರಭೆ ಬುದ್ಧಿಯಲ್ಲಿ ಕಾಣಿಸಿಕೊಂಡಿರುತ್ತದೆ. ಬುದ್ಧಿಯಲ್ಲಿ ತೋರುವ ಚಿತ್ಪ್ರಭೆ ಬುದ್ಧಿಯದಲ್ಲ.

ಶಬ್ದಾರ್ಥ: ಸಹಜವಲ್ಲ=ಬುದ್ಧಿಯಲ್ಲಿ ತೋರುವ ಬೆಳಕು ಬುದ್ಧಿಯದಲ್ಲ; * ದಿನಕರಬಿಂಬ=ಸೂರ್ಯನ ಆಕಾರ; ತಿಳಿಯ ನಿರ್ಮಲಜಲ=ತಿಳಿಯಾದ ಶುದ್ಧ ನೀರು; ಥಾಳವತಳೆದು=ಪ್ರಜ್ವಲ ಕಾಂತಿಯಿಂದ;

---

ಬುದ್ಧಿಗಾತ್ಮಜ್ಞಾನವಾಗಲು
ಬುದ್ಧಿಸುಖಮಯವಪ್ಪುದಾತ್ಮನು
ಶುದ್ಧಸಂವಿತ್ತಾಗಿ ಸಹಜಾನಂದವಾಗಿಹನು; ।
ಹೊದ್ದಿ ರವಿಕಾಂತಿಯನು ಬೆಳಗು
ತ್ತಿದ್ದ ರವಿಕಾಂತದವೊಲಾ ಮನ;
ಸಿದ್ಧವಾಗಿಯೆ ಸ್ವಪ್ರಕಾಶನು ರವಿಯವೋಲಾತ್ಮ ॥ ॥೧೪೦॥

ತಾತ್ಪರ್ಯ: ಆತ್ಮ ಜ್ಞಾನದ ಸಂಪರ್ಕವಾದರೆ ಬುದ್ಧಿಯು ಸುಖಮಯವಾಗುತ್ತದೆ. ಎಂದರೆ ಚಿದ್ರೂಪದಿಂದಲೂ, ಸುಖರೂಪದಿಂದಲೂ ತುಂಬಿರುವಂತೆ ಕಾಣುತ್ತದೆ. ಆತ್ಮನಲ್ಲಿ ಚಿತ್‌ಸುಖ ರೂಪಗಳು ಸ್ವಭಾವದಿಂದಲೇ ಇರುತ್ತವೆ. ಸೂರ್ಯಕಾಂತಿ ಆತ್ಮವಾಗಿದ್ದು ಅದನ್ನು ಪ್ರತಿಬಿಂಬಿಸುವ ಸೂರ್ಯಕಾಂತ ಶಿಲೆ ಬುದ್ಧಿ ಆಗಿರುತ್ತದೆ. ಆತ್ಮನು ಸೂರ್ಯನ ಹಾಗೆ ಸ್ವಯಂಪ್ರಕಾಶವುಳ್ಳವನಾಗಿ ಬುದ್ಧಿಯೆಂಬ ಸೂರ್ಯಕಾಂತ ಶಿಲೆಯಿಂದ ಬೇರೆ ಆಗಿರುತ್ತಾನೆ.

ಶಬ್ದಾರ್ಥ: ರವಿಕಾಂತ=ಸೂರ್ಯಕಾಂತ ಶಿಲೆ; ಶುದ್ಧ ಸಂವಿತ್=ಶುದ್ಧ ಆತ್ಮ ಜ್ಞಾನ; ಹೊದ್ದಿ=ಆವರಿಸಿ

ಟಿಪ್ಪಣಿ: ಆತ್ಮನು ಶುದ್ಧಸಂವಿತ್ತಾಗಿ ಸಹಜಾನಂದವಾಗಿಹನು– ಆತ್ಮಜ್ಞಾನದ ಸಂಪರ್ಕವಾದರೆ ಬುದ್ಧಿಯು ಸುಖಮಯವಾಗಿರುತ್ತದೆ ಎಂದರೆ ಚಿದ್ರೂಪದಿಂದಲೂ, ಸುಖರೂಪದಿಂದಲೂ ತುಂಬಿರುವಂತೆ ಕಾಣುತ್ತದೆ. ಆತ್ಮನಲ್ಲಿ ಚಿತ್‌ಸುಖರೂಪಗಳು ಸ್ವಭಾವದಿಂದಲೇ ಇರುತ್ತದೆ.

ಬುದ್ಧಿಪ್ರತ್ಯಕ್ಪ್ರವಣವಾಗಲು
ಸಿದ್ಧಿಸುವದಾತ್ಮಾಪರೋಕ್ಷವು;
ಬುದ್ಧಿಯೇ ಬಾಹ್ಯಪ್ರವಣದಿಂದಹುದು ಸಂಸಾರಿ; ।
ಬದ್ಧವೆಂಬುದು ಮುಕ್ತವೆಂಬುದು
ಬುದ್ಧಿಗೇ ಸರಿಯಾತ್ಮಕಿಲ್ಲೆಲೆ
ಅದ್ವಯಾನಂದೈಕರಸವದಕೆಂತೊ? ಆ ನುಡಿಯು ॥ ॥೧೪೧॥

**ತಾತ್ಪರ್ಯ:** ಬುದ್ಧಿಯು ಅಂತರ್ಮುಖಿಯಾಗಿ ಪ್ರತ್ಯಕ್ ಆದ ಆತ್ಮನನ್ನು ಒಳಗಾಗಿಸಿ ಕೊಂಡಾಗ ಆತ್ಮನ ಪ್ರತ್ಯಕ್ಷಜ್ಞಾನವು ಆ ಬುದ್ಧಿಗೆ ಸಿದ್ಧಿಸುವುದು; ಬುದ್ಧಿಯು ಬಹಿರ್ಮುಖವಾಗಿ ಬಾಹ್ಯವಿಷಯಗಳಾದ ಕರಣಗಳಲ್ಲಿ ತಲ್ಲೀನವಾದರೆ ಸುಖ ದುಃಖಗಳಿಂದ ಕೂಡಿದ ಸಂಸಾರಿ ಆಗುವುದು. ಸಂಸಾರಕ್ಕೆ ಒಳಗಾದಾಗ ಬುದ್ಧಿ ಬದ್ಧನು ಎನಿಸಿಕೊಳ್ಳುತ್ತದೆ. ಸಂಸಾರದಿಂದ ದೂರವಾದಾಗ ಮುಕ್ತನು ಎನಿಸಿಕೊಳ್ಳುತ್ತದೆ. ಅದರಿಂದಲೇ ಬುದ್ಧ-ಮುಕ್ತ ಎಂಬ ಮಾತುಗಳು ಬುದ್ಧಿಗೆ ಅನ್ವಯಿಸುತ್ತದೆ. ಆತ್ಮಕ್ಕೆ ಅಲ್ಲ ಏಕೆಂದರೆ ಆತ್ಮನು ಅದ್ವಯನು ಆನಂದೈಕರಸಮಯನು.

**ಶಬ್ದಾರ್ಥ:** **ಪ್ರತ್ಯಕ್‌ಪ್ರವಣವಾಗಲು**=ಒಳಗಡೆಗೆ ಹರಿದಾಗ; **ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೆ ಸರಿ**="ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬ ಶಂಕರರ ವಿವೇಕ ಚೂಡಾಮಣಿಯ ಉಕ್ತಿಯಂತೆ ಬದ್ಧ, ಮುಕ್ತ ಎನ್ನುವುದು ಬುದ್ಧಿಗೇ ಸರಿ. **ಅಪರೋಕ್ಷವು**=ಪ್ರತ್ಯಕ್ಷವಾದುದು; **ಬಾಹ್ಯಪ್ರವಣ**=ಬಾಹ್ಯ ವಿಷಯಗಳಾದ ಕರಣಗಳಲ್ಲಿ ಆಸಕ್ತವಾಗುವುದು; **ಅದ್ವಯ**=ಅಖಂಡ; **ಆನಂದೈಕರಸವಿಯು**=ಆನಂದರೂಪ ಪರಬ್ರಹ್ಮನು;

* **ಪಾಠಾಂತರ:** ೧) ಬುದ್ಧಿ ಪ್ರತ್ಯಕ್‌ಪ್ರವಣವಾಗಲು (ಚಿ) ಬುದ್ಧಿಪ್ರತ್ಯಕ್ ಸ್ಫುರಣವಾಗಲು (ಕು)
* **ಪಾಠಾಂತರ:** ೨) ಬುದ್ಧಿಯೇ ಬಾಹ್ಯಪ್ರವಣದಿಂದಹುದು ಸಂಸಾರಿ (ಚಿ) ಬುದ್ಧಿಬಾಹ್ಯಪ್ರವಣದಿಂ ಸಂಸಾರಿಯಾಗಿಹುದು (ಕು)
**ಪಾಠಾಂತರ:** ೩) ಬದ್ಧವೆಂಬುದು ಮುಕ್ತವೆಂಬುದು (ಚಿ) ಬದ್ಧಮುಕ್ತನು ಎಂಬ ನುಡಿಯದು (ಕು)
**ಪಾಠಾಂತರ:** ೪) ಬುದ್ಧಿಗೇ ಸರಿಯಾತ್ಮಕಿಲ್ಲೆಲೆ (ಚಿ) ಬುದ್ಧಿಗಲ್ಲದೆ ಆತ್ಮಗಿಲ್ಲಲೆ (ಕು)
**ಪಾಠಾಂತರ:** ೫) ಅನ್ವಯಾನಂದೈಕರಸವನಕೆಂತೊ? ಆ ನುಡಿಯು (ಚಿ) ಅದ್ವಯಾನಂದೈಕರ ಸಮಯಗೆತ್ತಣದು ಹೇಳು (ಕು)
ಪೇಟೆಪ್ರತಿಯ ಪಾಠ (ಕು) ಪಾಠಗಳು ಒಂದೇ ಆಗಿವೆ.

---

ಮುದ್ದೆಗಬ್ಬಿಣ ನೀರೊಳಿರಿಸಿದೊ
ಡದ್ದುವದು; ಬಳಿಕದನೆ ಪಾತ್ರೆಯ
ತಿದ್ದಿದರೆ ತೇಲುವುದು; ತಿಳಿಯಾಪರಿಯಲೀ ಬುದ್ಧಿ ।
ಹೊದ್ದಿ ಸಂಸೃತಿಧರ್ಮವನು ತಾ
ಬದ್ಧವಾಗಿಹುದಮಲಬೋಧ ಸ
ದದ್ವಯಾತ್ಮನ ತಿಳಿದು ಜೀವನ್ಮುಕ್ತವಾಗಿಹುದು ॥ ॥೧೪೨॥

**ತಾತ್ಪರ್ಯ:** ಕಬ್ಬಿಣದ ಗುಂಡನ್ನು ನೀರಿಗೆ ಹಾಕಿದರೆ ಅದು ಮುಳುಗುತ್ತದೆ, ಆದರೆ ಅದೇ ಕಬ್ಬಿಣದ ಗುಂಡನ್ನು ಕಾಯಿಸಿ ಬಡಿದು ಪಾತ್ರೆಯನ್ನಾಗಿ ಮಾಡಿದರೆ ನೀರಿನಲ್ಲಿ ತೇಲುತ್ತದೆ. ಬುದ್ಧಿಯ ಸ್ವಭಾವವು ಈ ರೀತಿಯದು ಎಂದು ತಿಳಿ. ಬುದ್ಧಿಯು ಸಂಸಾರಧರ್ಮವನ್ನು ಹೊಂದಿದರೆ ಅದು ಬಂಧನಕ್ಕೆ ಒಳಗಾಗುತ್ತದೆ. ಆದರೆ ಅದೇಬುದ್ಧಿ ಪವಿತ್ರವಾದ ಸತ್ಸ್ವರೂಪದ ಅದ್ವೈತರೂಪಿ ಆತ್ಮಜ್ಞಾನವನ್ನು ಅರಿತರೆ ಜೀವನ್ಮುಕ್ತವಾಗಿರುತ್ತದೆ.

**ಶಬ್ದಾರ್ಥ:** * ಮುದ್ದೆ ಕಬ್ಬಿಣ=ಕಬ್ಬಿಣದ ಗುಂಡು (ಗಟ್ಟಿ); * ನೀರೊಳು ಇರಿಸಿದರೆ=ನೀರಿಗೆ ಹಾಕಿದರೆ; ಅದ್ದುವುದು=ಮುಳುಗುತ್ತದೆ; ಪಾತ್ರೆಯ ತಿದ್ದಿದರೆ=ಪಾತ್ರೆಯನ್ನಾಗಿ ಮಾಡಿದರೆ; * ಸಂಸೃತಿಧರ್ಮ=ಸಂಸಾರ ಧರ್ಮ; * ಹೊದ್ದಿ=ಒಳಗಾಗಿ; * ಸತ್+ಅದ್ವಯ+ಆತ್ಮನ=ಸತ್ ಸ್ವರೂಪದ ಅಖಂಡ ಆತ್ಮ; * ಜೀವನ್ಮುಕ್ತ=ಬದುಕಿರುವಾಗಲೇ ಬಂಧನದಿಂದ ಬಿಡುಗಡೆಯನ್ನು ಹೊಂದಿರುವನು, ಬ್ರಹ್ಮಸ್ವರೂಪವನ್ನು ಹೊಂದಿರುವವನು.

---

**ಆವವಿಷಯವ ಹೊದ್ದಲದರೊಳು**
**ತೀವಿಕೊಂಡಿಹ ಬುದ್ಧಿ ಕೇಳಂ**
**ತಾ ವಿಷಯದೊಳಗೆರಕವಾಗಿಯೆ ಬದ್ಧವಾಗಿಹುದು ।**
**ಕೇವಲಾನಂದಾನುಭವದೊಳು**
**ಭಾವವನು ನೆಲೆಗೊಳಿಸೆ ಬುದ್ಧಿಗೆ**
**ಜೀವತನವಳಿದೈಕ್ಯವಪ್ಪುದು ಬ್ರಹ್ಮದೊಳಗೆಂದ ॥ ॥೧೪೩॥**

**ತಾತ್ಪರ್ಯ:** ಶುಕನೆ ಕೇಳು, ಬುದ್ಧಿಯು ಯಾವ ವಿಷಯವನ್ನು ಹೊಂದುತ್ತದೆಯೋ ಅದೇ ವಿಷಯ ಬುದ್ಧಿಯನ್ನು ಪೂರ್ಣವಾಗಿ ಆವರಿಸಿಕೊಂಡಿರುತ್ತದೆ. ಬುದ್ಧಿಯೂ ಆ ವಿಷಯದೊಂದಿಗೆ ಬೆಸುಗೆ ಆಗಿರುತ್ತದೆ. ಅದೇ ಬುದ್ಧಿಯು ಕೇವಲವಾದ ಆನಂದಾನುಭವದಲ್ಲಿ ಸ್ಥಿರಗೊಂಡರೆ ಸಂಸಾರ ಬಂಧನ ಕಳಚಿ ಜೀವತ್ವಭಾವ ನಶಿಸಿ ಬ್ರಹ್ಮನಲ್ಲಿ ಲೀನವಾಗಿರುವುದು.

**ಶಬ್ದಾರ್ಥ:** * ಹೊದ್ದಲು=ಒಳಗೊಂಡಿರುತ್ತದೆ; * ತೀವಿಕೊಂಡಿಹ=ತುಂಬಿರುತ್ತದೆ, ಆವರಿಸಿರುತ್ತದೆ; * ಎರಕವಾಗಿಯೆ=ಬೆಸುಗೆ ಹೊಂದಿ; * ಜೀವತನವು=ಜೀವ ಭಾವವು;

**ಪಾಠಾಂತರ:** ಹೊದ್ದಲದರೊಳು=ಹೊದ್ದಿಯದರೊಳು (ಕು) ಬದ್ಧನಾಗಿಹುದು=ಬದ್ಧನಾಗಿಹುದು (ಕು); ನೆಲೆಗೊಳಿಸೆ=ನೆಲೆಗೊಳಲು (ಕು);

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಪಾಠಾಂತರ ಅನುವಾದಕನದು.

---

**ತನ್ನನರಿಯದುದೇ ಅವಿದ್ಯೆಯ**
**ದಿನ್ನು ಶಾಸ್ತ್ರಶ್ರವಣದಿಂದಲಿ**
**ನಿರ್ಣಯಿಸಿ ತಾ ತನ್ನ ತಿಳಿಯಲವಿದ್ಯೆಯಡಗುವದು; ।**

**ತನ್ನನರಿವೊಡೆ ಸಾಧನವು ತನ**
**ಗನ್ಯವೆನಿಸಿಹ ಬುದ್ಧಿ; ನೋಡಲ**
**ನನ್ಯನಾತ್ಮನು ತನ್ನ ತಿಳಿದೊಡೆ ತಾನೆ ಲಯವಹುದು ॥ ॥೧೪೪॥**

**ತಾತ್ಪರ್ಯ:** ತನ್ನನ್ನು ತಾನು ತಿಳಿಯದಿರುವುದೇ ಅವಿದ್ಯೆ ಎನ್ನಿಸುತ್ತದೆ. ಆ ಅವಿದ್ಯೆಯನ್ನು ಶಾಸ್ತ್ರಾಭ್ಯಾಸದಿಂದ ನಿರ್ಧರಿಸಿಕೊಂಡು ತನ್ನನ್ನು ತಾನು ತಿಳಿದುಕೊಂಡರೆ ಆ ಅವಿದ್ಯೆ ನಾಶವಾಗುವುದು. ತನ್ನನ್ನು ತಾನು ತಿಳಿದುಕೊಳ್ಳಲು ಆತ್ಮನಿಂದ ಬೇರೆಯಾದ ಬುದ್ಧಿಯು ಒಂದು ಸಾಧನವಾಗಿದೆ. ಅದ್ವಯ ಸ್ವರೂಪನಾದ ಆತ್ಮನು ತನ್ನನ್ನು ತಾನು ತಿಳಿದರೆ ಬುದ್ಧಿಯು ತನಗೆ ತಾನೇ ಇಲ್ಲವಾಗುವುದು.

**ಶಬ್ದಾರ್ಥ:** * **ಶಾಸ್ತ್ರಶ್ರವಣ**=ಶಾಸ್ತ್ರಾಭ್ಯಾಸ; **ನಿರ್ಣಯಿಸಿ**=ನಿರ್ಧರಿಸಿ; * **ಅವಿದ್ಯೆ**=ಆತ್ಮ ಅನಾತ್ಮಗಳನ್ನು ತಪ್ಪಾಗಿ ತಿಳಿಯುವುದು; (ಪಪ ಪುಟ–೫೨)

**ಟಿಪ್ಪಣಿ: ಅನನ್ಯನಾತ್ಮನು ತನ್ನ ತಿಳಿದೊಡೆ ತಾನೆ ಲಯವಹುದು**=ಅದ್ವಯ ಸ್ವರೂಪನಾದ ಆತ್ಮನು ತನ್ನನ್ನು ತಾನು ತಿಳಿದರೆ ಬುದ್ಧಿಯು ತನಗೆ ತಾನೇ ಇಲ್ಲವಾಗುವುದು.

---

**ಅದು ನಿಮಿತ್ತದಿ ಬುದ್ಧಿ ಚಿತ್ತಿನ**
**ಹದನ ವಿವರಿಸಿ ತಿಳಿದು, ನಿಜವಾ**
**ದುದನೆ ನಿಶ್ಚಯವಾಗಿ ತಾನೆಂದರಿದನಾತ್ಮಗಳ ।**
**ವಿದಿತ ವಿದ್ಯಾದಿಗಳಿನುತ್ತಮ**
**ಸದಮಲಾನಂದೈಕಘನ ಚಿ**
**ತ್ಪದದೊಳೊಂದಿಸೆ ನಿನಗೆ ಜೀವನ್ಮುಕ್ತಿಯಹುದೆಂದ ॥ ॥೧೪೫॥**

**ತಾತ್ಪರ್ಯ:** ಬುದ್ಧಿ ಮತ್ತು ಚಿತ್ತಿನ ಸ್ವಭಾವವನ್ನು ವಿಚಾರಮಾಡಿ ತಿಳಿದುಕೊಂಡು ಬುದ್ಧಿ ಶರೀರ ಮೊದಲಾದುವು ಬರೀ ತೋರಿಕೆಯವಾದ್ದರಿಂದ ಅವುಗಳ ತೋರಿಕೆಗೆ ಆಧಾರವಾಗಿ ಅನಾತ್ಮಗಳನ್ನು ತಿಳಿಯದೆ ನಿಜವಾಗಿರುವ ಆತ್ಮ ತಾನೆಂದು ತಿಳಿದುಕೊಂಡು ಶ್ರೇಷ್ಠವಾದ ವಿದ್ಯಾದಿಗಳಿಂದ ಎಂದರೆ ಜ್ಞಾನ, ಉಪಾಸನೆ, ಭಕ್ತಿ ಮೊದಲಾದವುಗಳಿಂದ ಸದಮಲಾನಂದೈಕಘನವಾದ ಚಿದಾಕಾಶದಲ್ಲಿ ಸೇರಿದರೆ ಆಗಲೆ ನಿನಗೆ ಜೀವನ್ಮುಕ್ತಿ ಆಗುತ್ತದೆ ಎಂದು ತಿಳಿ.

**ಶಬ್ದಾರ್ಥ: ಬುದ್ಧಿಚಿತ್ತಿನ**=ಬುದ್ಧಿಯ ಮತ್ತು ಚಿತ್ತಿನ; **ನಿಜವಾದುದನೆ**=ಬುದ್ಧಿ, ಶರೀರ ಮೊದಲಾದವು ಗಳೆಲ್ಲ ಬರೀ ತೋರಿಕೆಯವಾದ್ದರಿಂದ ಅವುಗಳ ತೋರಿಕೆಗೆ ಆಧಾರವಾಗಿ ನಿಜವಾಗಿರುವ ಆತ್ಮನನ್ನೇ ತಾನೆಂದು ತಿಳಿಯಬೇಕು; **ವಿದಿತ ವಿದ್ಯಾದಿಗಳಿಂ**=ತಿಳಿಯಲ್ಪಟ್ಟಂಥ ಜ್ಞಾನ ಉಪಾಸನೆ ಭಕ್ತಿ ಮೊದಲಾದವುಗಳಿಂದ;

---

**ಸತ್ಯದುಳುಮೆಯೆ ದೇಹದೊಳು ಬೆಳ**
**ಗುತ್ತಲಿಹ ಚಿತ್ತೆನಿಪ ಚೆಲುವಿಕೆ**
**ಯತ್ಯಧಿಕದಾನಂದವೆನಿಸುವ ಸೊಬಗು; ರಂಜಿಸುವ ।**
**ಪ್ರತ್ಯಗಾತ್ಮನೆನಿಪ್ಪ ಮೋಹನ**
**ಮೂರ್ತಿಯದ ನೆನೆನೆನೆದು ನೀನೇ**
**ಕತ್ವವೆನಿಸುವ ಮುಕ್ತಿಪದದಲಿ ನಿಂದು ಸುಖಿಯಾಗು ॥ ॥೧೪೬॥**

**ತಾತ್ಪರ್ಯ:** 'ಇದಲ್ಲ, ಇದಲ್ಲ' ಎಂದು ನೇತಿ ಮಾರ್ಗದಲ್ಲಿ ಬುದ್ಧಿ, ದೇಹ ಮೊದಲಾದ ವಿಷಯಗಳನ್ನೆಲ್ಲ ಹೊರಗೆಳೆದಮೇಲೆ ಅವುಗಳಿಗೆ ಆಧಾರವಾಗಿ ಉಳಿದ ನಿಜಸ್ವರೂಪವೆ, ದೇಹದೊಳಗೆ ವಿರಾಜಿಸುತ್ತಿರುವ ಚಿತ್ ಎನಿಸಿಕೊಳ್ಳುವುದು. ಚೆಲುವಿಕೆಯಿಂದ ಕೂಡಿದ್ದು ಪರಮಾನಂದಭರಿತವಾದ ಸೊಬಗು ಅದಾಗಿ ಪ್ರತ್ಯಗಾತ್ಮನು ಎನಿಸುವ ಮೋಹನಮೂರ್ತಿಯಾಗಿ ರಂಜಿಸುತ್ತಿರುವುದು. ಅದನ್ನು ನೀನು ಮತ್ತೆಮತ್ತೆ ಧ್ಯಾನಿಸುತ್ತ ಆ ಪರಬ್ರಹ್ಮರೂಪಿಯೇ ನೀನಾಗುತ್ತ ಮೋಕ್ಷಪದದಲ್ಲಿ ನಿಂತು ಸುಖಿಯಾಗು.

**ಟಿಪ್ಪಣಿ-೧: ಸತ್ಯದುಳುಮೆಯೆ-** ಇದಲ್ಲ ಇದಲ್ಲ ಎಂದು ಬುದ್ಧಿ, ದೇಹ ಮೊದಲಾದ ವಿಷಯಗಳನ್ನೆಲ್ಲ ಹೊರಗೆಳೆದ ಮೇಲೆ ಅವುಗಳಿಗೆ ಆಧಾರವಾಗಿ ಉಳಿದ ನಿಜ ಸ್ವರೂಪವೆ ದೇಹದೊಳಗೆ ವಿರಾಜಿಸುತ್ತಿರುವ ಚಿತ್ ಎನಿಸಿಕೊಳ್ಳುವುದು.

**ಟಿಪ್ಪಣಿ-೨: ಪ್ರತ್ಯಗಾತ್ಮ-** ಆತ್ಮಾನಾತ್ಮ ವಿವೇಕದಿಂದ ಪಂಚಕೋಶಗಳನ್ನು ಅಲ್ಲಗಳೆದ ಮೇಲೆ ಒಳಗಿರುವ ಆತ್ಮನೇ ಪ್ರತ್ಯಗಾತ್ಮ (ಪಪ ಪುಟ-೨೩೮)

---

**ದೇವನಾರೆಂದೆನಲು ಬುದ್ಧಿಯ**
**ಭಾವದಲಿ ಭಾವವನರಿವ ಸ**
**ದ್ಭಾವರೂಪನು; ಸಾಕ್ಷಿಯಾತನೆ ದೇವನೆನಿಸುವನು; ।**
**ಆವಗಲು ಶ್ರುತಿಶಿರಗ "ಏಕೋ**
**ದೇವ"ನೆಂದೇ ಸಾರುತಿರಲದ**
**ಗಾವಿಲರು ಶ್ರುತಿವಿಮುಖರರಿಯರು ಭೇದವಾದಿಗಳು ॥ ॥೧೪೭॥**

**ತಾತ್ಪರ್ಯ:** ದೇವರು ಯಾರು ಎಂದು ಕೇಳುವೆಯಾ? ಅವನು ಬುದ್ಧಿಯ ಮೂಲಕವಾಗಿ ವಿಷಯಗಳ ಇರುವಿಕೆಯನ್ನು ಅರಿಯುವಂಥ ಸತ್ಯ ಸ್ವರೂಪನು; ಇವನೊಬ್ಬನೇ ದೇವರು ಎಂದು ಉಪನಿಷತ್ತುಗಳು ಸಾರಿ ಸಾರಿ ಹೇಳುತ್ತಿರುವಾಗ ಅದನ್ನು ಮೂಢರು, ವೇದಬಾಹಿರರು, ಭೇದವಾದಿಗಳು (ಚಿದ್ರೂಪವಾದ ಆತ್ಮನೂ ಜಡರೂಪವಾದ ವಿಷಯಗಳೂ ಎರಡೂ ಸತ್ಯವೆಂದು ಭೇದದಿಂದ ವಾದಿಸುವವರು) ಅವನನ್ನು ತಿಳಿಯಲಾರರು.

**ಶಬ್ದಾರ್ಥ: ಬುದ್ಧಿಯ ಭಾವದಲಿ ಭಾವವನರಿವ**=ಬುದ್ಧಿಯ ಮೂಲಕವಾಗಿ ವಿಷಯಗಳ ಇರುವಿಕೆಯನ್ನು ಅರಿಯುವಂಥ; * **ಸದ್ಭಾವರೂಪನು**=ಸತ್ಯಸ್ವರೂಪನು; * **ಗಾವಿಲರು**=ಮೂಢರು; * **ಶ್ರುತಿಶಿರಗಳು**=ಉಪನಿಷತ್ತುಗಳು; * **ಶ್ರುತಿವಿಮುಖರು**=ವೇದವಿಮುಖರು;

**ಟಿಪ್ಪಣಿ-೧: ಭೇದವಾದಿಗಳು**- ಚಿದ್ರೂಪನಾದ ಆತ್ಮನೂ, ಜಡ ರೂಪವಾದ ವಿಷಯಗಳೂ ಎರಡೂ ಸತ್ಯವೆಂದು ಭೇದವನ್ನು ವಾದಿಸುವವರು.

**ಟಿಪ್ಪಣಿ-೨:** ಏಕೋದೇವ- ದೇವರೊಬ್ಬನೆ (**ಏಕೋದೇವೋ ಬಹುಧಾವಿನಿಷ್ಟಃ**) (ಚಿತ್ತಿ ೪೧)

**ಟಿಪ್ಪಣಿ-೩: ಆವಗಲು**- 'ಆವಾಗಲು' ಎಂಬ ಪದವನ್ನು ಛಂದೋನಿಯಮಪಾಲನೆಗಾಗಿ ಆವಗಲು ಎಂದು ಕವಿ ಬಳಸಿದ್ದಾನೆ. ಕುಮಾರವ್ಯಾಸನು ವೀರನಾರಾಯಣ ಎಂಬ ಪದವನ್ನು ವೀರನಾರಯಣ ಎಂದು ಬಳಸಿದ್ದಾರೆ. ಪದಗಳನ್ನು ಮೊಟಕು ಮಾಡುವುದನ್ನು ಮಹಾ ಕವಿಗಳ ಕಾವ್ಯದಲ್ಲಿ ಕಾಣುತ್ತೇವೆ.

* **ಪಾಠಾಂತರ:** 'ಆವಾಗಲು' ಎಂಬ 'ಆವಗಂ' ಪಾಠಾಂತರವಿದೆ (ಅರಾಸೇ ಪುಟ ೧೦೫)

---

**ಮಾಸಿ ದರ್ಪಣ ಮಲಿನವಾಗಿರೆ**
**ದೋಷವೇ? ಬೆಳಗಿದರೆ ತೇಜೋ**
**ರಾಶಿಯಹ ರವಿಯಂತಿಹುದಲೇ; ಪ್ರತ್ಯಗಾತುಮನು ।**
**ಕ್ಲೇಶಪಂಚಕಯುಕ್ತ ಸಂಸೃತಿ**
**ಪಾಶಬದ್ಧಮನಸ್ಸಿನಲಿ ಮಿಗೆ**
**ಸೂಸದಿರೆ ಚಿಜ್ಯೋತಿರೂಪಿಗೆ ಹಾನಿಯೇನೆಂದ ॥** **॥೧೪೪॥**

**ತಾತ್ಪರ್ಯ:** ಕನ್ನಡಿ ಕೊಳೆಯಿಂದ ಮಸುಕಾದರೆ ಅದು ಕನ್ನಡಿಯ ತಪ್ಪಲ್ಲ. ಅದರ ಹೊಳೆಯುವ ಗುಣಕ್ಕೆ ಧಕ್ಕೆ ಇಲ್ಲ. ಆ ಕೊಳೆಯನ್ನು ಹೋಗಲಾಡಿಸಿ ಪರಿಶುಭ್ರಗೊಳಿಸಿದರೆ ಅದರಲ್ಲಿ ತೇಜಃಪುಂಜ ಸೂರ್ಯನು ಪ್ರಕಾಶಿಸುತ್ತಾನೆ ಅಲ್ಲವೇ? ಹಾಗೆಯೇ ಚಿಜ್ಯೋತಿಸ್ವರೂಪಿಯಾದ ಪ್ರತ್ಯಗಾತ್ಮನೆಂಬ ಸೂರ್ಯನು ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚಕ್ಲೇಶಗಳಿಂದ ಕೂಡಿ ಸಂಸಾರಪಾಶವೆಂಬ ಬದ್ಧ ಮನಸ್ಸಿನಿಂದ ಕೂಡಿದಾಗ ಆ ಮಾಲಿನ್ಯದಲ್ಲಿ ಚಿಜ್ಯೋತಿರೂಪಿಯೆಂಬ ಸೂರ್ಯನು ಎದ್ದು ಹೊಳೆಯದೆ ಇದ್ದರೆ ಅದರಿಂದ ಪ್ರತ್ಯಗಾತ್ಮನಿಗೇನು ಹಾನಿಯಿಲ್ಲ ಎಂದು ತಿಳಿಯತಕ್ಕದ್ದು.

**ಶಬ್ದಾರ್ಥ: ದರ್ಪಣ**=ಕನ್ನಡಿ; * **ಮಲಿನ**=ಕೊಳೆ; **ಮಾಸಿ**=ಮಸುಕಾಗಿ; * **ಸಂಸೃತಿ**= ಸಂಸಾರ; * **ಸೂಸದಿರೆ**=ಎದ್ದು ಹೊಳೆಯದೆ ಇದ್ದರೆ; * **ಪ್ರತ್ಯಗಾತುಮನು**=ಚಿಜ್ಯೋತಿರೂಪಿ;

**ಟಿಪ್ಪಣಿ: ಕ್ಲೇಶಪಂಚಕ**=ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಐದು ಕ್ಲೇಶಗಳು. (ವಿವರಗಳಿಗೆ ಅಧ್ಯಾಯ-೧ ಪದ್ಯ ೨೨ರ ಟಿಪ್ಪಣಿ ನೋಡಿ)

**ಪಾಠಾಂತರ: ರಾಶಿಯಹರವಿಯಂತಿಹುದಲೇಪ್ರತ್ಯಗಾತುಮನು**=ರಾಶಿಯಾಗಿಹ ರವಿಯವೋಲ್ಪ್ರತ್ಯ-ಗಾತುಮನು (ಕೊ) **ಕ್ಲೇಶಪಂಚಕಯುಕ್ತ**=ಕ್ಲೇಶಪಂಚಕದಿಂದ (ಕೊ)

---

## ಉಪಸಂಹಾರ (೧೪೯)

ಇಂತು ತ್ವಂಪದಲಕ್ಷ್ಯವನು ದೃ
ಷ್ಟಾಂತಪೂರ್ವಕವಾಗಿ ನೆರೆ ತಿಳಿ
ವಂತೆ ಚಿದಚಿದ್ಭೇದಲಕ್ಷಣದಿಂದ ಬೋಧಿಸಲು ।
ಭ್ರಾಂತಿಯಳಿದು, ನಿಜಾನುಭವ ವಿ
ಶ್ರಾಂತಿಸುಖಮಯನಾಗಿ, ಶುಕನೇ
ಕಾಂತದಲಿ ಚಿಂತಿಸಿದ ಸಹಜಾನಂದಗುರುಪದವ ॥ ॥೧೪೯॥

ತಾತ್ಪರ್ಯ: ಈ ರೀತಿಯಲ್ಲಿ ತ್ವಂ ಪದದ ಲಕ್ಷಣಗಳನ್ನು ಉದಾಹರಣೆಗಳ ಮೂಲಕವಾಗಿ ಮನಸ್ಸಿಗೆ ಚೆನ್ನಾಗಿ ಹಿಡಿಯುವ ಹಾಗೆ ಚೇತನವನ್ನು ಜಡವನ್ನು ಬಿಡಿಸಿ ಹೇಳಿದ್ದರಿಂದ ವಿಷಯಾಕಾರವಾದ ಜಗತ್ತು ಕೂಡ ಸತ್ಯವಾದುದು ಎಂಬ ತಿಳಿವಳಿಕೆಯ ಭ್ರಾಂತಿಯು ಲಯವಾಗಿ ನಿಜಾನುಭವದಿಂದ ಬಂಧನಮುಕ್ತ ಸುಖಾನುಭವವನ್ನು ಹೊಂದಿ ಅಂತರಂಗದಲ್ಲಿ ಸಹಜಾನಂದನೆಂಬ ಗುರುವಿನ ಪಾದಗಳನ್ನು (ಪರಬ್ರಹ್ಮಸ್ವರೂಪವನ್ನು) ಧ್ಯಾನ ಮಾಡುತ್ತಿದ್ದಾನೆ ಎಂದು ಈ ಕವಿ ಹೇಳಿಕೊಂಡಿದ್ದಾನೆ.

ಶಬ್ದಾರ್ಥ: ಚಿದಚಿದ್ಭೇದ=ಚೇತನವನ್ನು ಜಡವನ್ನು ಬಿಡಿಸಿ ಬಿಡಿಸಿ ತಿಳಿಯುವುದು; ಭ್ರಾಂತಿಯಳಿದು=ವಿಷಯಾಕಾರವಾದ ಜಗತ್ತು ಕೂಡ ಸತ್ಯವಾದುದೆಂಬ ತಪ್ಪು ತಿಳಿವಳಿಕೆಯು ಹೋಗಿ; ಸಹಜಾನಂದ ಗುರುಪದದ=ಕವಿಯ ಗುರುವಾದ ಸಹಜಾನಂದನೆಂಬುವನ ಪಾದಗಳನ್ನು; ಚಿಂತಿಸುತ=ಧ್ಯಾನಮಾಡುತ್ತಿದ್ದಾನೆ;

---

## ಮಂಗಲ (೧೫೦)

ಪಂಚವಿಂಶತಿತತ್ತ್ವದೂರ, ವಿ
ರಿಂಚಿಮುಖ್ಯಸುರಾಳಿವಂದಿತ,
ಪಂಚಶರಹರ, ಪಾಶಭಂಜನ, ಪರಮಕಾರುಣಿಕ, ।
ಪಂಚವದನ, ಪರಾ, ಪರಾತ್ಪರ,
ಪಂಚಕೃತ್ಯಪ್ರವರ್ತಿತಾರ್ಥಪ್ರ
ಪಂಚಮಯ ಮಲ್ಲಿಕಾರ್ಜುನ ಸಲಹು ಮೂಜಗವ ॥ ॥೧೫೦॥

ತಾತ್ಪರ್ಯ: ಪಂಚವಿಂಶತಿ (೨೫) ತತ್ವಗಳಿಂದ ದೂರನಾದವನು, ಬ್ರಹ್ಮನೇ ಮೊದಲಾದ ದೇವತಾ ಸಮೂಹಗಳಿಂದ ನಮಿತನಾದವನು, ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲಗಳೆಂಬ ಐದು ಹೂ ಬಾಣಗಳನ್ನು ಹೊಂದಿದ ಮನ್ಮಥನನ್ನು ಸಂಹಾರ ಮಾಡಿದವನು, ಮಲ, ಮಾಯಾ, ಕರ್ಮ, ತಿರೋದಾಯಕ ಬಿಂದುಗಳೆಂಬ ಐದು ಪಾಶಗಳನ್ನು ನಾಶ ಮಾಡಿದವನು, ಪರಮ ಕಾರುಣಿಕನಾದವನು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬ ಐದು ಮುಖಗಳುಳ್ಳವನು, ಸೃಷ್ಟಿ, ಸ್ಥಿತಿ, ಲಯ,

ನಿಯಮ, ಅನುಪ್ರವೇಶವೆಂಬ ಪಂಚಕೃತ್ಯ ಗಳಿಂದ ಪ್ರವೃತ್ತಿ ಮಾಡಿದಂಥ ಪದಾರ್ಥಗಳ ಪ್ರಪಂಚಮಯನಾದವನು, ಸಗುಣರೂಪಿ ಯಾದವನು, (ಪರಾ) ನಿರ್ಗುಣಸ್ವರೂಪಿಯೂ (ಪರಾತ್ಪರ) ಆದ ಮಲ್ಲಿಕಾರ್ಜುನ ದೇವನು ಮೂರು ಲೋಕಗಳನ್ನು ಕಾಪಾಡಲಿ.

**ಶಬ್ದಾರ್ಥ:** **ಪರಮ ಕಾರುಣಿಕ**=ಕಾರಣ ಪುರುಷ; **ಪರಾ**=ಸಗುಣರೂಪಿ ಆತ್ಮ; **ಪರಾತ್ಪರ**= ನಿರ್ಗುಣರೂಪಿ ಆತ್ಮ;

**ಟಿಪ್ಪಣಿ–೧: ಪಂಚವಿಂಶತಿತತ್ತ್ವಗಳು** (೨೫ ತತ್ತ್ವಗಳು) ೧ ಪ್ರಧಾನ ಮಹತತ್ತ್ವ, ಅಹಂಕಾರ ತತ್ತ್ವ, ೫ ಭೂತತನ್ಮಾತ್ರೆಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ ಈ ೨೫ ಸಾಂಖ್ಯರ ಎಣಿಕೆ;

**ಟಿಪ್ಪಣಿ–೨: ಪಂಚಶರಹರ** (೫ ಬಾಣಗಳುಳ್ಳವನನ್ನು ಕೊಂದವನು) ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಎಂಬ ಈ ಐದು ಪುಷ್ಪಗಳನ್ನು ಬಾಣಗಳಾಗಿ ಉಳ್ಳ ಮನ್ಮಥನನ್ನು ಸಂಹಾರ ಮಾಡಿದವನು (ಈಶ್ವರ).

**ಟಿಪ್ಪಣಿ–೩: ಪಾಶಭಂಜನ–** (ಯಮನಹಗ್ಗವನ್ನು ಹರಿದವನು) ಅಥವಾ ಮಲ (ಜ್ಞಾನಕ್ರಿಯೆಗಳನ್ನು ಮುಚ್ಚಿಹಾಕುವುದು); **ಮಾಯಾ** (ಪ್ರಪಂಚದ ತತ್ತ್ವಗಳಿಗೆಲ್ಲ ಉದಾನಕಾರಕವಾಗಿ ಸತ್ಯವಾಗಿರುವುದು, **ಕರ್ಮ** (ಧರ್ಮಾಧರ್ಮಾತ್ಮಕವಾಗಿರುವುದು), **ತಿರೋಧಾಯಕ** (ಭೋಗವನ್ನುಂಟು ಮಾಡುವುದು), **ಬಿಂದು** (ಮೋಕ್ಷವನ್ನು ಕೊಡುವ **ಈಶ್ವರತತ್ವ**=ಮೋಕ್ಷವನ್ನು ಕೊಡುವುದು ಈಶ್ವರಾಧೀನವೆಂಬುದೂ ಒಂದು ಪಾಶವೆ ಆಗಿದೆ) ಇವು ಪಂಚಪಾಶಗಳೆಂದು ಭೋಜರಾಜನ ತತ್ವಪ್ರಕಾಶಿಕೆಯಲ್ಲಿ ಹೇಳಿದೆ, ಇದು ಇಲ್ಲಿ ಗ್ರಾಹ್ಯವಾಗಿದೆ. ಈ ಪಂಚಪಾಶಗಳನ್ನು ನಾಶಮಾಡುವನು ಈಶ್ವರನು.

**ಟಿಪ್ಪಣಿ–೪: ಪಂಚವದನ–** ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖಗಳುಳ್ಳವನು ಶಿವ.

**ಟಿಪ್ಪಣಿ–೫: ಪಂಚಕೃತ್ಯ ಪ್ರವರ್ತಿತಾರ್ಥ ಪ್ರಪಂಚಮಯ–** ಸೃಷ್ಟಿ, ಸ್ಥಿತಿ, ಸಂಹಾರ, ನಿಯಮ, ಅನುಪ್ರವೇಶವೆಂಬ ಪಂಚಕೃತ್ಯಗಳಿಂದ ಪ್ರವೃತ್ತಿ ಮಾಡಿದಂಥ ಪದಾರ್ಥಗಳ ಪ್ರಪಂಚಮಯ ನಾದವನು (ಈಶ್ವರ).

## ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ತ್ವಂ ಪದಾರ್ಥ ಶೋಧನೆ ಎಂಬ ಮೂರನೆಯ ಅಧ್ಯಾಯವು ಮುಗಿದುದು.**

# ಸಾರಸಂಗ್ರಹ

## ಮೂರನೆಯ ಅಧ್ಯಾಯ – ತ್ವಂ ಪದಾರ್ಥ ಶೋಧನೆ

ಇಹಪರಗಳನ್ನು ತುಚ್ಛವಾಗಿ ಎಣಿಸಿ ಮೋಕ್ಷಸಾಧನವಾದ ಜ್ಞಾನವನ್ನು ಬಯಸುವವನಿಗೆ ವೇದವು 'ತತ್ತ್ವಮಸಿ' ಎಂದುಪದೇಶ ಮಾಡುವುದು. 'ತತ್ತ್ವಮಸಿ' ಎಂದರೆ 'ಅದು ನೀನು ಆಗಿದ್ದಿ' ಎಂದರ್ಥ. ಎಂದರೆ 'ನೀನೆ ಬ್ರಹ್ಮ'ವೆಂದು ತಾತ್ಪರ್ಯ. 'ನೀನು' ಎಂಬ ಮಾತಿನ ಅರ್ಥವು ಯಾವದೆಂಬುದನ್ನು ಗೊತ್ತುಮಾಡಬೇಕು. ಈ ಅರ್ಥವು ಸ್ವಾನುಭವ, ಗುರುವಾಕ್ಯ, ಶಾಸ್ತ್ರಜ್ಞಾನ–ಇವಕ್ಕೆಲ್ಲ ಹೊಂದಿಕೆಯಾಗಿರಬೇಕು. 'ನೀನು' ಎಂಬ ಮಾತಿಗೆ ಜೀವನೆಂದರ್ಥ ವಾಗುವದು. ಜೀವನೆಂದರೆ ಅಹಂಕಾರ ಸ್ವರೂಪನು. ಇದಕ್ಕೆ ವಾಚ್ಯಾರ್ಥವೆಂದು ಹೆಸರು. ಈ ಜೀವವೇ ಬ್ರಹ್ಮವೆಂಬುವದು ಅನುಭವಕ್ಕೆ ಒಪ್ಪುವ ಮಾತಲ್ಲ. ವಾಚ್ಯಾರ್ಥವು ಹೊಂದದ ಕಡೆಯಲ್ಲಿ ಲಕ್ಷ್ಯಾರ್ಥವನ್ನು ಮಾಡಬೇಕೆಂದು ನಿಯಮವುಂಟು. 'ನೀನು' ಎಂಬ ಮಾತಿನ ಲಕ್ಷ್ಯಾರ್ಥವು ಅಹಂಕಾರ ವಿರಹಿತವಾದ ಚೈತನ್ಯ. ಈ ಸ್ವರೂಪವೂ ಬ್ರಹ್ಮಸ್ವರೂಪವೂ ಒಂದೇ ಎಂಬುದು 'ತತ್ತ್ವಮಸಿ' ಎಂಬ ಶ್ರುತಿಯ ತಾತ್ಪರ್ಯ. 'ನೀನು' ಎಂಬ ಮಾತಿನ ಲಕ್ಷ್ಯಾರ್ಥವಾದ–ಅಹಂಕಾರ ವಿರಹಿತವಾದ–ಚೈತನ್ಯವನ್ನು ಗ್ರಹಿಸುವದಕ್ಕೆ ಕೆಲವು ಉಪಾಯಗಳಿರುವವು. ಅವು ಯಾವವೆಂದರೆ:–

೧) ದೃಗ್ದೃಶ್ಯವಿವೇಕ–ದೃಕ್ಕೆಂದರೆ ನೋಡುವವನು. ದೃಶ್ಯವೆಂದರೆ ಕಾಣುವವು. ಉದಾಹರಣೆ: ಕಣ್ಣೆಂಬ ದೃಕ್ಕಿಗೆ ರೂಪಗಳೆಲ್ಲ ದೃಶ್ಯ; ಮನವೆಂಬ ದೃಕ್ಕಿಗೆ ಕಣ್ಣು ದೃಶ್ಯ; ಮನಸ್ಸಿಗೂ ಸಾಕ್ಷಿಯಾದ ಚೈತನ್ಯಕ್ಕೆ ಮನಸ್ಸು ದೃಶ್ಯ. ಆ ಸಾಕ್ಷಿಗಿಂತ ಒಳಗೆ ಇನ್ನಿಲ್ಲ. ಆ ಸಾಕ್ಷಿಯೇ ಅಹಂಕಾರರಹಿತವಾದ ಚೈತನ್ಯವೂ ಈ ವಿವೇಕಕ್ಕೆ ಕ್ಷೇತ್ರಕ್ಷೇತ್ರಜ್ಞವಿಭಾಗವೆಂದು ಹೆಸರು. ದೃಗ್ರೂಪನಾದ ಕ್ಷೇತ್ರಜ್ಞನೇ ಆತ್ಮನು. ಉಳಿದವುಗಳೆಲ್ಲ ಕ್ಷೇತ್ರಗಳು.

**೨) ಪಂಚಕೋಶವಿವೇಕ**–ಒಂದರೊಳಗೊಂದಿರುವ ಐದು ಒರೆಗಳ ಒಳಗಡೆಯಲ್ಲಿರುವ ಕತ್ತಿಯಂತೆ ಆತ್ಮನು ಒಂದರೊಳಗೊಂದಿರುವ ಐದು ಕೋಶಗಳ ಒಳಗಡೆಯಲ್ಲಿರುವನು. ಆ ಒಂದೊಂದು ಕೋಶವನ್ನು ಒಬ್ಬೊಬ್ಬರು ಆತ್ಮವೆಂದು ಭ್ರಮಿಸುವರು. ಮೇಲಿನದು ಸ್ಥೂಲ ಶರೀರವೆಂಬ ಅನ್ನಮಯ ಕೋಶ. ಇದು ಅನೇಕ ವಿಕಾರಗಳನ್ನು ಪಡೆಯುವಂಥಾದ್ದಾಗಿಯೂ ಜಡವಾಗಿಯೂ ಅಶುಚಿಯಾಗಿಯೂ ಇರುವದರಿಂದ ಆತ್ಮವಲ್ಲ. ಇದರೊಳಗಿನದು ಪ್ರಾಣಮಯ ಕೋಶ. ಇದು ಜಡವಾಗಿಯೂ ಹಸಿವು ಬಾಯಾರಿಕೆಗಳ ಬಾಧೆಗೊಳಗಾಗಿಯೂ ಮನಸ್ಸಿನೊಡನೆ ಈ ಲೋಕಕ್ಕೂ ಪರಲೋಕಕ್ಕೂ ಸುತ್ತುವದಾಗಿಯೂ ಇರುವದರಿಂದ ಆತ್ಮವಲ್ಲ. ಈ ಪ್ರಾಣಬಲದಿಂದ ವರ್ತಿಸುವ ಇಂದ್ರಿಯಗಳೂ ಆತ್ಮವಲ್ಲವೆಂದು ಇದರಿಂದಲೇ ಸಿದ್ಧವಾಯಿತು. ಇದರೊಳಗಿನದು ಮನೋಮಯಕೋಶ. ಇದು ಶರೀರಪ್ರಾಣಗಳ ಬೆನ್ನು ಹತ್ತಿ ವರ್ತಿಸುವದಾದ್ದರಿಂದ ಆತ್ಮವಲ್ಲ. ಇದರೊಳಗಿನದು ವಿಜ್ಞಾನಮಯ ಕೋಶ ಎಂದರೆ ಬುದ್ಧಿ. ಇದು ಸುಖದುಃಖ ಮೊದಲಾದ ಗುಣಗಳಿಂದ ಕೂಡಿ ಕರ್ತೃತ್ವಾಭಿಮಾನದಿಂದಿರುತ್ತ ಇಹಕ್ಕೂ ಪರಕ್ಕೂ ತೊಳಲುವಂಥ ಜೀವಸ್ವರೂಪವಾದ್ದರಿಂದ ಆತ್ಮವಲ್ಲ. ಇದರೊಳಗಿನದು ಆನಂದಮಯಕೋಶ. ಎಂದರೆ ಗಾಢ ನಿದ್ರೆಯಲ್ಲಿ ನಮಗರಿವಿಲ್ಲದೆ ಉಂಟಾಗುವ ಸಹಜಾನಂದ. ಅದು ಎಚ್ಚರವಾದ ಮೇಲೆ ಹೋಗಿ ಬಿಡುವದರಿಂದ ಆತ್ಮವಲ್ಲ. ಇವೆಲ್ಲಕ್ಕೂ ಆಧಾರವಾಗಿ ಒಳಗಿರುವ ಚೈತನ್ಯವೇ ಆತ್ಮ. ಈ ಶರೀರಾದಿಗಳೇ ಆತ್ಮವೆಂದ ಮೇಲೆ ಹೊರಗಣವರಾದ ಹೆಂಡತಿ ಮಕ್ಕಳು ಆತ್ಮವಲ್ಲವೆಂಬುದನ್ನಂತು ಹೇಳಬೇಕಾದದ್ದೇ ಇಲ್ಲ. ಹೀಗೆ ಒಳಗೊಳಗೆ ನೋಡುತ್ತಹೋದರೆ ಶೂನ್ಯವೇ ಮೂಲ ವಾಗುವದೆಂದು ಕೆಲವರ ಅಭಿಪ್ರಾಯ. ಆ ತಿಳಿವಳಿಕೆಗಾದರೂ ಸಾಕ್ಷಿಯು ಬೇಕಷ್ಟೆ. ಈ ಪಂಚಕೋಶಗಳ ಒಳಗೆ ಇವಕ್ಕೆಲ್ಲ ಆಧಾರವಾಗಿರುವ ಆ ಸಾಕ್ಷಿಚೈತನ್ಯವೇ 'ನೀನು' ಎಂಬ ಮಾತಿನ ಲಕ್ಷ್ಯಾರ್ಥವಾದ ಚೈತನ್ಯ.

**೩) ಶರೀರತ್ರಯವಿಭಾಗ**-ನಮ್ಮ ಸ್ಥೂಲ ದೇಹವು ಜಡವಾಗಿ ಅನೇಕ ವಿಕಾರಗಳನ್ನು ಪಡೆಯುತ್ತ ಹುಟ್ಟು ಸಾವುಗಳ ಸುಳಿಗೆ ಸಿಕ್ಕಿರುವದರಿಂದ ಆತ್ಮವಲ್ಲ. ಇದರೊಳಗಿರುವ ಮನಸ್ಸೆಂಬ ಸೂಕ್ಷ್ಮ ಶರೀರವು ಎಷ್ಟು ಕಲ್ಪಗಳಾದರೂ ನಾಶವಾಗದೆ ಕರ್ಮದಧೀನವಾಗಿ ಸ್ವರ್ಗನರಕಗಳಲ್ಲಿ ಸುತ್ತುತ್ತ ಸುಖದುಃಖಗಳನ್ನನುಭವಿಸುವಂಥದ್ದು. ಇದು ಆತ್ಮವಲ್ಲ. ಈ ಎರಡು ಶರೀರಕ್ಕೂ ಸ್ವಾಮಿಯಾಗಿ ಒಳಗಿರುವವನೇ ಆತ್ಮನು. ವೈರಾಗ್ಯದಿಂದ ಈ ಎರಡು ಶರೀರಗಳ ಮೇಲೆಯೂ ಅಭಿಮಾನವನ್ನು ಬಿಟ್ಟು ತನ್ನನ್ನು ತಾನು ಅರಿಯದಿರುವದೆಂಬ ಅವಿದ್ಯೆಯನ್ನು ಕಳೆದುಕೊಂಡವನು ಶರೀರದ ಸಂಬಂಧದಿಂದ ಬಿಡುಗಡೆಯಾಗಿ ಅಶರೀರಿಯಾದ ಬ್ರಹ್ಮನಾಗುವನು.

**೪) ಅವಸ್ಥಾತ್ರಯಸಾಕ್ಷಿತ್ವ**-ಮನಸ್ಸು ಎರಡು ಕಡೆಯಲ್ಲಿಯೂ ಕಾಣುವ ಕನ್ನಡಿಯಂತೆ ಒಮ್ಮೆ ಎಚ್ಚರವನ್ನೂ ಒಮ್ಮೆ ಕನಸನ್ನೂ ತೋರಿಸುವದು. ಎಚ್ಚರದಲ್ಲಿ ಕನಸಿರುವದಿಲ್ಲ. ಕನಸಿನಲ್ಲಿ ಎಚ್ಚರವಿರುವದಿಲ್ಲ. ಆತ್ಮನು ಇವೆರಡಕ್ಕೂ ಸಾಕ್ಷಿಯಾಗಿರುವದು ನಮ್ಮ ಅನುಭವದಲ್ಲಿದೆ. ಇಷ್ಟೇ ಅಲ್ಲ. ಗಾಢನಿದ್ರೆಯು ಎಚ್ಚರಕನಸುಗಳಲ್ಲಿರುವದಿಲ್ಲವಷ್ಟೆ. ಎಚ್ಚರಕನಸುಗಳೆರಡೂ ಗಾಢನಿದ್ರೆಯಲ್ಲಿರುವದೂ ಇಲ್ಲ. ಹೀಗಿದ್ದರೂ ಎಚ್ಚರ ಕನಸುಗಳನ್ನನುಭವಿಸಿದವನೇ ಗಾಢನಿದ್ರೆಯ ಸುಖವನ್ನು ಅನುಭವಿಸುವನೆಂಬುದೂ ನಮ್ಮ ಅನುಭವದಲ್ಲಿ ಸಿದ್ಧವಾಗಿದೆ. ಇದರಿಂದ ಎಚ್ಚರ ಕನಸು ನಿದ್ದೆಗಳು ಒಂದಿರುವಾಗ ಇನ್ನೊಂದಿರದೆ ಒಂದೊಂದು ಒಂದೊಂದು ಕಾಲದಲ್ಲಿ ತೋರಿ ಹೋಗತಕ್ಕವುಗಳು. ಆದ್ದರಿಂದ ಇವುಗಳಿಗೆ ಸಂಬಂಧಪಟ್ಟ ಯಾವದೂ ಆತ್ಮವಲ್ಲ. ಇವೆಲ್ಲಕ್ಕೂ ಸಾಕ್ಷಿಯೇ ಆತ್ಮನು.

**೫) ಮನಃಸಾಕ್ಷಿತ್ವ**-ಮನಸ್ಸು ಹೊರಮುಖವಾಗಿ ಬಗೆಬಗೆಯಲ್ಲಿ ವ್ಯವಹರಿಸುತ್ತ ವಿಶೇಷರೂಪಗಳನ್ನರಿಯುತ್ತ ಹೋಗುವದು. ಯಾವ ವಿಶೇಷರೂಪವೂ ಇಲ್ಲದೆ ಮನಸ್ಸಿಗೆ ಬೆಂಬಲವಾಗಿ ಮನಸ್ಸಿನ ಅರಿವಿಗೆ ಸಾಕ್ಷಿಯಾಗಿ ಆಕಾಶದಂತೆ ಅಸಂಗವಾಗಿರುವ ನಿರಾಕಾರವಾದ ಅರಿವೇ ಆತ್ಮವು.

ಈ ಆತ್ಮಸ್ವರೂಪವು ಇನ್ನೊಂದರಿಂದ ಬೆಳಗತಕ್ಕದ್ದಲ್ಲ. ಆದರೂ ತನ್ನ ಮುಖವನ್ನು ನೋಡಿಕೊಳ್ಳುವದಕ್ಕೆ ತನಗೆ ಕನ್ನಡಿಯು ಹೇಗೋ ಹಾಗೆ ಸಾತ್ತ್ವಿಕ ಬುದ್ಧಿಯು ಆತ್ಮನ ದರ್ಶನಕ್ಕೆ ಸಾಧನವಾಗುವದು. ಕೇದಗೆಯ ವಾಸನೆಯಿಂದ ಸರ್ಪವನ್ನೂಹಿಸುವಂತೆ ಬುದ್ಧಿಯ ಪ್ರತಿಭೆಯನ್ನು ನೋಡಿ ಅದಕ್ಕಾಧಾರವಾಗಿರುವ ಆತ್ಮರೂಪವಾದ ಅರಿವನ್ನು ಅರಿಯಬೇಕು. ಅದೇ 'ತ್ವಂ' ಪದದ ಲಕ್ಷ್ಯಾರ್ಥ.

*****

# ನಾಲ್ಕನೆಯ ಅಧ್ಯಾಯ

## ತತ್ವದಾರ್ಥ ಶೋಧನೆ

**ಸೂಚನೆ॥**

**ಬಾದರಾಯಣ ಶುಕಮುನೀಶ್ವರ**
**ಗಾದರದಿ ತತ್ವದವ ಶೋಧಿಸಿ**
**ಬೋಧಿಸಿದ ಸತ್ವಾದ್ವಯಾನಂದವನು ತಿಳಿವಂತೆ ॥**

**ತಾತ್ಪರ್ಯ :** ವೇದವ್ಯಾಸರು ಪುತ್ರನಾದ ಶುಕಮುನಿಗೆ ಒಲವಿನಿಂದ ತತ್‌ಪದದ ಅರ್ಥವನ್ನು ವ್ಯಾಖ್ಯಾನಿಸಿ ಮೂರು ಕಾಲಗಳಲ್ಲೂ ನಿಜವಾಗಿ ಇರುವಂಥ ಎರಡನೆಯದಿಲ್ಲದಂಥ ಆನಂದ ಸ್ವರೂಪವಾದಂಥ ಬ್ರಹ್ಮದ ವಿಚಾರವನ್ನು ಸರಳವಾಗಿ ಉಪದೇಶ ಮಾಡಿದರು.

**ಶಬ್ದಾರ್ಥ:** * ಬಾದರಾಯಣ=ವೇದವ್ಯಾಸ; * ಆದರದಿ=ಒಲವಿನಿಂದ; * ಶೋಧಿಸಿ=ವ್ಯಾಖ್ಯಾನಿಸಿ * ಬೋಧಿಸಿದ=ಉಪದೇಶಿಸಿದ, ತಿಳಿವಂತೆ=ಸರಳವಾಗಿ, ಹೃದ್ಯವಾಗಿ

**ಟಿಪ್ಪಣಿ–೧:** ಸತ್ವಾದ್ವಯಾನಂದವನು=ಮೂರು ಕಾಲದಲ್ಲಿಯೂ ನಿಜವಾಗಿಯೂ ಇರುವಂಥ ಎರಡನೆಯದಿಲ್ಲದಂಥ ಆನಂದ ಸ್ವರೂಪವಾದಂಥ ಬ್ರಹ್ಮದ ವಿಚಾರವನ್ನು.

---

### ಇಷ್ಟದೇವತಾ ಸ್ತುತಿ ಮೊದಲಾದದ್ದು (೧–೩)

**ವಾರಿನಿಧಿಯೇ ಪಾತ್ರೆ, ಕಜ್ಜಲ**
**ಸಾರವಂಜನಗಿರಿಯ ಕೆಸರೀ,**
**ಧಾರಣೀತಲ ಹಲಗೆ, ಸುರತರು ಬರೆವ ಲೆಕ್ಕಣಿಕೆ, ।**
**ಶಾರದಾಂಬಿಕೆ ಶ್ರೀಗಿರೀಶನ**
**ಪಾರಗುಣಸಾಗರವನೆಣಿಸ**
**ಲ್ಕಾರದಾದಳು; ಮನುಜಕೀಟಕರರಿಯಲಳವಹುದೆ? ॥ ॥೧॥**

**ತಾತ್ಪರ್ಯ:** ಶಾರದೆಯು ಶ್ರೀ ಶೈಲ ಮಲ್ಲಿಕಾರ್ಜುನ ಸ್ವಾಮಿಯ ಗುಣಮಹಿಮೆಯನ್ನು ವರ್ಣಿಸುವುದಕ್ಕಾಗಿ ಸಮುದ್ರವನ್ನೇ ಮಸಿಕುಡಿಕೆಯನ್ನಾಗಿ ಮಾಡಿಕೊಂಡು ಅಂಜನಾದ್ರಿಗಿರಿಯ ಕೆಸರನ್ನೇ ಮಸಿಯನ್ನಾಗಿ ಮಾಡಿಕೊಂಡು, ಈ ಭೂಮಂಡಲವನ್ನೇ ಬರೆಯುವ ಕರಿ ಹಲಗೆಯನ್ನಾಗಿಸಿಕೊಂಡು, ಕಲ್ಪವೃಕ್ಷವನ್ನೇ ಬರೆಯುವ ಲೇಖನಿಯನ್ನಾಗಿ ಮಾಡಿಕೊಂಡು, ಶ್ರೀಶೈಲ ಮಲ್ಲಿಕಾರ್ಜುನನ ಅಪಾರ ಗುಣಾತಿಶಯ ಗಳನ್ನು ಪರಿಗಣಿಸಿ ಬರೆಯಲು ಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ. ಹೀಗಿರುವಾಗ ನರ ಹುಳುವಿನಂಥ ಸಾಮಾನ್ಯ ಮಾನವವರ್ಗಕ್ಕೆ ಸೇರಿದ ನನಗೆ ಆ ಪರಶಿವನ ಗುಣಾವಳಿಗಳನ್ನು ಬಣ್ಣಿಸಲು ಶಕ್ಯವೇ? ಎಂದಿಗೂ ಇಲ್ಲ.

**ಶಬ್ದಾರ್ಥ:** * ವಾರಿನಿಧಿ=ಸಮುದ್ರ; * ಪಾತ್ರೆ=ಮಸಿಕುಡಿಕೆ; * ಕಜ್ಜಲಸಾರ=ಮಸಿ; * ಕೆಸರು=ಅಂಜನಗಿರಿಯ ಕೆಸರು; * ಧಾರಿಣೀತಲ=ಭೂಮಂಡಲ; * ಸುರತರು=ಕಲ್ಪವೃಕ್ಷ; ಲೆಕ್ಕಣಿಕೆ=ಬರೆಯುವ ಕಡ್ಡಿ; ಶ್ರೀಗಿರೀಶ=ಶ್ರೀಶೈಲಮಲ್ಲಿಕಾರ್ಜುನ; * ಎಣಿಸಲ್ಕೆ=ವರ್ಣಿಸಲು, ಪರಿಗಣಿಸಿ ಬರೆಯಲು; ಮನುಜ ಕೀಟಕರು=ಕ್ಷುದ್ರ ಮಾನವರು, ಸಣ್ಣ ಹುಳದಂಥ ಮನುಷ್ಯರು

* ಟಿಪ್ಪಣಿ–೧: ಅಂಜನ ಗಿರಿ– ಅಂಜನಪರ್ವತ, ಕಪ್ಪು ಕೆಸರಿನಿಂದ ಕೂಡಿರುವುದು.

* ಟಿಪ್ಪಣಿ–೨: **ಅಸಿತಗಿರಿಸಮಂ ಸ್ಯಾತ್ಕಜ್ಜಲಂ ಸಿಂಧುಪಾತ್ರೇ ।**
**ಸುರತರುವರಶಾಖಾ ಲೇಖನೀ ಪತ್ರಮುರ್ವೀ ॥**
**ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ ।**
**ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ॥**

ಈ ಪದ್ಯವು ಪುಷ್ಪದಂತ ಕವಿಯ ಶಿವಮಹಿಮ್ನಾಸ್ತೋತ್ರದ (ಪದ್ಯ–೩೧)ಅನುವಾದವಾಗಿದೆ. ಪರಶಿವನ (ಶ್ರೀಶೈಲಮಲ್ಲಿಕಾರ್ಜುನ) ಮಹಾತ್ಮೆಯನ್ನು ಕವಿ ಈ ಪದ್ಯದಲ್ಲಿ ರೂಪಕಾಲಂಕಾರದಲ್ಲಿ ಹೀಗೆ ಚಿತ್ರಿಸಿದ್ದಾನೆ. ಬರೆಯಲು ನಮಗೆ ಶಾಯಿ, ಕಾಗದ, ಲೇಖನಿ ಇವು ಬೇಕು. ವಿದ್ಯಾದೇವತೆಯಾದ ಶಾರದೆಯೇ ಶಿವಮಹಿಮೆಯನ್ನು ವರ್ಣಿಸಿ ಬರೆಯುವಾಗ ಮೇಲಿನ ಸಾಮಾನ್ಯ ಉಪಕರಣಗಳಿಂದ ಸಾಧ್ಯವೇ? ಅದಕ್ಕೆ ತಕ್ಕ ವಸ್ತುಗಳನ್ನು ಕವಿ ಹೀಗೆ ಗುರುತಿಸುತ್ತಾನೆ.

---

**ಉದಯದಲಿ ಮಲಮೂತ್ರಗಳ ಬಿಡು**
**ವದೆ ಕೆಲಸ; ಮಧ್ಯಾಹ್ನಕಾಲದಿ**
**ಕ್ಷುಧೆತೃಷೆಗಳಲಿ ಕುದಿದು ಕೋಟಲೆಗೊಂಬುದೇ ಕೆಲಸ; ।**
**ಉದರ ತುಂಬಿದ ಬಳಿಕ ಕಾಮನ**
**ಕದನದಲಿ ರಾತ್ರಿಯನು ಕಳೆವಾ**
**ಅಧಮರಿಗೆ ಪೇಳದಿರು ಮರೆದೀ ಅನುಭವಾಮೃತವ ॥ ॥೨॥**

**ತಾತ್ಪರ್ಯ:** ಧರ್ಮಗ್ರಂಥ ಶ್ರವಣಕ್ಕೆ, ಅಧಿಕಾರಿಗಳು ಯಾರಲ್ಲ ಎಂಬುದನ್ನು ಈ ಪದ್ಯದಲ್ಲಿ ಕವಿ ಹೇಳಿದ್ದಾನೆ. ಜನರು ಬೆಳಗಾದರೆ ಜಲ, ಮಲ ವಿಸರ್ಜನೆ ಇತ್ಯಾದಿ ದೈಹಿಕ ನಿತ್ಯಕರ್ಮಗಳಲ್ಲಿ ನಿರತರಾಗಿ ಕಾಲಕಳೆಯುತ್ತಾರೆ, ಮಧ್ಯಾಹ್ನವಾದರೆ ಹಸಿವು ಬಾಯಾರಿಕೆಗಳ ನಿವಾರಣೆಗಾಗಿ ಒದ್ದಾಡುತ್ತಾ ಕಾಲಕಳೆಯುತ್ತಾರೆ, ರಾತ್ರಿಯಾದರೆ ಹೊಟ್ಟೆ ತುಂಬಿದಮೇಲೆ ಸ್ತ್ರೀಸುಖದಲ್ಲಿ ಕಾಲಕಳೆಯುತ್ತಾರೆ. ಹೀಗೆ ವ್ಯರ್ಥವಾಗಿ ಕಾಲಕಳೆಯುವ ಅಧಮರಿಗೆ (ನೀಚರಿಗೆ) ಧರ್ಮಶ್ರದ್ಧೆ ಇಲ್ಲದವರಿಗೆ ಅಪ್ಪಿತಪ್ಪಿಯೂ ಅನುಭವಾಮೃತದಂಥ ಧರ್ಮ ಗ್ರಂಥವನ್ನು ಶ್ರವಣ ಮಾಡಿಸಬಾರದು (ಕೇಳಿಸಬಾರದು).

**ಶಬ್ದಾರ್ಥ:** * ಉದಯದಲಿ=ಬೆಳಿಗ್ಗೆ, * ಮಲಮೂತ್ರಗಳ ಬಿಡುವುದು=ಜಲಮಲವಿಸರ್ಜನೆ ಇತ್ಯಾದಿ ದೈಹಿಕ ಕಾರ್ಯಗಳು; * ಕ್ಷುಧೆತೃಷೆ=ಹಸಿವು ಬಾಯಾರಿಕೆ; * ಕುದಿದು ಕೋಟಲೆಗೊಂಡು =ಶ್ರಮಿಸಿ ಒದ್ದಾಡುವುದು; * ಕಾಮನ ಕದನದಲಿ=ಸ್ತ್ರೀಸುಖದಲ್ಲಿ; * ಪೇಳದಿರು=ಕೇಳಿಸಬಾರದು; ಶ್ರವಣಮಾಡಿಸಬಾರದು.

[ಶಿವಮಹಿಮ್ನಸ್ತವ ಕನ್ನಡ ಪದ್ಯಾನುವಾದ ಮತ್ತು ಟಿಪ್ಪಣಿ (ಪುಟ-೪೬, ಬಿ. ಪುಟ್ಟಸ್ವಾಮಯ್ಯ)]

ಟಿಪ್ಪಣಿ: ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಶಿಷ್ಟರಿಗೆ, ಶಿವಭಕ್ತಿಯಲಿ ಪರಿ
ತುಷ್ಟರಿಗೆ, ಪರಮಾರ್ಥಗತಿಯನು
ನಿಷ್ಠೆಯಿಂದಲಿ ಸಾಧಿಸುವ ಸಾಧುಗಳಿಗನವರತ ।
ಶ್ರೇಷ್ಠವಹ ಶಾಸ್ತ್ರಗಳ ಶ್ರವಣದ
ಗೋಷ್ಠಿಯುಳ್ಳವರಿಂಗೆ, ಸಮತೆಯ
ದೃಷ್ಟಿವಂತರಿಗೊಲಿದು ಪೇಳೀ ಅನುಭವಾಮೃತವ ॥ ॥೩॥

ತಾತ್ಪರ್ಯ: ಈ ಧರ್ಮ ಗ್ರಂಥ ಶ್ರವಣಕ್ಕೆ ಅಧಿಕಾರಿಗಳು ಯಾರು ಎಂಬುದನ್ನು ಈ ಪದ್ಯದಲ್ಲಿ ಹೇಳಿದೆ. ಸಜ್ಜನರಿಗೆ, ಸದಾ ಕಾಲ ಶಿವಾರಾಧನೆಯಲ್ಲಿ ನಿರತರಾಗಿ ಸಂತೋಷಚಿತ್ತರಾದವರಿಗೆ, ಮೋಕ್ಷಸಾಧನೆಯ ಮಾರ್ಗವನ್ನು ಶ್ರದ್ಧೆಯಿಂದ ಸಾಧಿಸಲು ಯತ್ನಿಸುವ ಸಾಧುಗಳಿಗೆ, ಸದಾಕಾಲ ಉತ್ತಮೋತ್ತಮ ಕಾವ್ಯ-ಧರ್ಮ ಶಾಸ್ತ್ರಗಳನ್ನು ಬೋಧಿಸುವ ಸಭೆಗಳಲ್ಲಿ ನಿರತರಾದವರಿಗೆ ಸರ್ವಜೀವಗಳಿಗೂ ಲೇಸನೇ ಬಯಸುವ ಸಮಚಿತ್ತರಿಗೆ ಈ ಅನುಭವಾಮೃತ ಗ್ರಂಥವನ್ನು ಪ್ರೀತಿಯಿಂದ ಬೋಧಿಸಬೇಕು.

**ಶಬ್ದಾರ್ಥ:** ಪರಮಾರ್ಥಗತಿಯನು=ಮೋಕ್ಷಸಾಧನೆಯ ಮಾರ್ಗವನ್ನು; ಗೋಷ್ಠಿ=ಸಭೆ; * ಶಿಷ್ಟರು=ಸಜ್ಜನರು; * ಪರಿತುಷ್ಟರು=ಸಂತೋಷಚಿತ್ತರು; * ಶ್ರೇಷ್ಠವಹ=ಉತ್ತಮೋತ್ತಮವಾದ; * ಸಮತೆಯ ದೃಷ್ಟಿವಂತರು=ಸರ್ವಜೀವಗಳಿಗೂ ಲೇಸನ್ನೇ ಬಯಸುವ ಸಮಚಿತ್ತರು.

**ಪಾಠಾಂತರ :** ಶಾಸ್ತ್ರಗಳ ಶ್ರವಣದ=ಶಾಸ್ತ್ರಗಳ ಕೂಡಣ=ಶಾಸ್ತ್ರಗಳ ಸಂಬಂಧವಾದ (ಕು)

---

## ತತ್ಪದದ ಲಕ್ಷ್ಯವು ಬ್ರಹ್ಮ (೪-೮)

ಹೇಳಿದೆನು ತ್ವಂಪದದ ಲಕ್ಷ್ಯವ;
ಕೇಳು ಶುಕಯೋಗೀಂದ್ರ, ನಿತ್ಯ ನಿ
ರಾಳ ನಿರ್ಗುಣ ನಿಖಿಲಸಾಕ್ಷಿ ನಿರೀಹ ನಿಸ್ಸೀಮ ।
ಮೂಲಭೂತಪ್ರಕೃತಿಪರತರ
ಕಾಲಕರ್ಮಾತೀತ ಬ್ರಹ್ಮವ
ಹೇಳುವರು ತತ್ಪದದ ಲಕ್ಷ್ಯವದೆಂದು ಬಲ್ಲವರು ॥ ॥೪॥

ತಾತ್ಪರ್ಯ: ಶುಕಯೋಗಿಯೇ ಕೇಳು, ತ್ವಂಪದದ ಲಕ್ಷ್ಯಾರ್ಥವನ್ನು ಹೇಳುತ್ತೇನೆ. ಅದು (ತತ್) ನಿತ್ಯವಾದುದು, ನಿರಾಳವಾದುದು, ನಿರ್ಗುಣವಾದುದು, ಸರ್ವಸಾಕ್ಷೀಭೂತವಾದುದು, ಕ್ರಿಯಾರಹಿತವಾದುದು, ಸೀಮಾತೀತವಾದುದು, ಎಲ್ಲದಕ್ಕೂ ಕಾರಣವಾಗಿರುವ ಪ್ರಕೃತಿಗಿಂತಲೂ ಮೂಲಕಾರಣವಾದುದು. ಸಾವಿಗೂ

ಮಾಡಿದ ಕರ್ಮದ ಫಲಕ್ಕೂ ಕಟ್ಟು ಬೀಳದೆ ಇರುವಂಥದ್ದು; ಇಂತಹ ಶುದ್ಧ ಬ್ರಹ್ಮ ವಸ್ತುವನ್ನೇ ತತ್‌ಪದದ ಲಕ್ಷ್ಯಾರ್ಥವೆಂದು ಬಲ್ಲವರು ಹೇಳುತ್ತಾರೆ.

ಶಬ್ದಾರ್ಥ: * ಲಕ್ಷ್ಯವ=ಲಕ್ಷ್ಯಾರ್ಥವನ್ನು; * ನಿತ್ಯ=ಶಾಶ್ವತರೂಪವನ್ನು; * ನಿರಾಳ=ಪ್ರಶಾಂತ; * ನಿರ್ಗುಣ=ನಿರಾಕಾರ; * ನಿಖಿಲಸಾಕ್ಷಿ=ಸರ್ವಸಾಕ್ಷಿ; ನಿರೀಹ=ಕ್ರಿಯಾರಹಿತವಾದುದ್ದು; * ನಿಸ್ಸೀಮ=ಎಲ್ಲೆಕಟ್ಟಿಲ್ಲದ್ದು; ಮೂಲಭೂತಪ್ರಕೃತಿಪರತರ=ಎಲ್ಲಕ್ಕೂ ಕಾರಣವಾಗಿರುವ ಪ್ರಕೃತಿಗಿಂತಲೂ ಮೂಲಕಾರಣವಾದುದು; ಕಾಲಕರ್ಮಾತೀತ=ಸಾವಿಗೂ ಮಾಡಿದ ಕರ್ಮದ ಫಲಕ್ಕೂ ಕಟ್ಟುಬೀಳದೆ ಇರುವಂಥದು; * ಬ್ರಹ್ಮವ=ಬ್ರಹ್ಮವೆಂಬ ವಸ್ತು (ಪರಬ್ರಹ್ಮ)

---

ಮಾಯೆ ತ್ರಿಪುಟಿಯ ರೂಪು; ತ್ರಿಪುಟಿನಿ
ಕಾಯವೇ ಜಗಜೀವಕರಣನಿ
ಕಾಯವವು ತಿಳಿ ಭೋಗ, ಭೋಗ್ಯವು, ಭೋಕ್ತೃವೆನಿಸುವವು; ।
ಈಯಶೇಷವ ನೇತಿಗಳೆದುಳಿ
ದಾ ಯಥಾರ್ಥಸ್ವಪ್ರಕಾಶಾ
ಪಾಯರಹಿತಸುಖೈಕವಿಗ್ರಹವೇ ಪರಬ್ರಹ್ಮ ॥ ॥೫॥

ತಾತ್ಪರ್ಯ: ಜಗತ್ತಿನ ನಾಮ, ರೂಪಗಳ ಬೀಜರೂಪವಾದ ಶಕ್ತಿ ವಿಶೇಷವು ಮಾಯೆ, ಸತ್ವ, ರಜ, ತಮಗಳೆಂಬ ಮೂರು ಅವಯವಗಳುಳ್ಳದ್ದು. ಅವು ಜಗತ್ತು, ಜೀವ, ಅಂತಃಕರಣಗಳೆಂಬ, ತ್ರಿಪುಟಿಯಾಗಿದೆ. ಈ ಮೂರನ್ನು ಕ್ರಮವಾಗಿ ಭೋಗ ಭೋಗ್ಯ, ಭೋಕ್ತೃ ಎಂದು ಹೆಸರಿಸಿದ್ದಾನೆ. ಲೋಕದಲ್ಲಿ ಸಮಸ್ತ ವಸ್ತುಗಳನ್ನು ಬ್ರಹ್ಮವಲ್ಲವೆಂದು ಕೈಬಿಟ್ಟು, (ಅಲ್ಲಗಳೆದು) ಉಳಿಯುವಂಥ ಪರಮಾರ್ಥ ಸ್ವರೂಪವಾಗಿರುವಂಥ ಸ್ವಯಂಜ್ಯೋತಿಯಾದಂಥ ಅಪಾಯರಹಿತ ಸುಖೈಕ ಮೂರ್ತಿಯೇ ಪರಬ್ರಹ್ಮವೆಂದು ತಿಳಿ.

ಶಬ್ದಾರ್ಥ: ಮಾಯೆ=ಜಗತ್ತಿನ ನಾಮರೂಪಗಳ ಬೀಜರೂಪವಾದ ಶಕ್ತಿ ವಿಶೇಷವು; ತ್ರಿಪುಟಿಯ=ಸತ್ತ್ವ, ರಜ, ತಮ ಎಂಬ ಮೂರು ಅವಯವವುಳ್ಳ; * ಜಗಜೀವಕರಣನಿಕಾಯವು =ಜಗತ್ತು ಜೀವ, ಅಂತಃಕರಣ ಮೊದಲಾದವುಗಳ ಸಮೂಹವು; ಭೋಗ=ಸುಖ ಅಥವಾ ದುಃಖದ ಅನುಭವ; ಭೋಗ್ಯ=ಅನುಭವಿಸಲ್ಪಡುವ ವಸ್ತು; ಭೋಕ್ತೃ=ಅನುಭವಿಸುವವನು; ನೇತಿಗಳೆದು=ಇವೆಲ್ಲ ಬ್ರಹ್ಮವಲ್ಲವೆಂದು ಕೈಬಿಟ್ಟು; * ಸುಖೈಕವಿಗ್ರಹ=ಆನಂದಸ್ವರೂಪ

---

ಎಂದಡೆಂದನು ಗುರುವೆ ಮಾಯೆಯ
ಚಂದವಾವುದು? ಜೀವಜಗವಾ
ರಿಂದ ತೋರಿತದಾದಬಗೆಯೆಂತೆನಲು ಕರುಣದಲಿ ।
ಕಂದ ಕೇಳೈ ಮಾಯೆಯೆನೆ ಪುಸಿ
ಯಿಂದ್ರಜಾಲ, ಮರೀಚಿಕಾಜಲ
ದಂದ, ರಜ್ಜು ಭುಜಂಗದಂದದಿ ತೋರುತಿಹುದೆಂದ ॥ ॥೬॥

**ತಾತ್ಪರ್ಯ:** ಮಾಯೆಯನ್ನು ತ್ರಿಪುಟಿಯ ರೂಪು ಎಂದು ವ್ಯಾಸನು ನಿರೂಪಿಸಿದಾಗ ಶುಕನು ಕೇಳಿದನು: ಮಾಯೆಯ ರೀತಿ ಯಾವುದು? ಈ ಜೀವವೂ, ಜಗತ್ತೂ ಯಾರಿಂದ ಉಂಟಾಯಿತು? ಅದು ರೂಪುಗೊಂಡ ರೀತಿ ಹೇಗೆ? ಎಂದು ಕೇಳಿದಾಗ ವ್ಯಾಸನು ಶುಕನಮೇಲೆ ಕೃಪಾದೃಷ್ಟಿ ಉಳ್ಳವನಾಗಿ "ಮಗುವೇ ಕೇಳು" ಎಂದು ವಿವರಿಸತೊಡಗಿದನು. ಮಾಯೆ ಎಂದರೆ ಇಲ್ಲದ್ದು, ಕಣ್ಕಟ್ಟು (ಹುಸಿ ತೋರಿಕೆಯ ದೃಷ್ಟಾಂತ), ಬಿಸಿಲುಕುದುರೆಯಲ್ಲಿ ತೋರಿದ ಮಿಥ್ಯಾರೂಪದ ನೀರಿನಂತೆ, ಹಗ್ಗದಲ್ಲಿ ಹಾವೆಂಬ ಭ್ರಾಂತಿ ಆಗಿ ತೋರುವ ರೀತಿ ಎಂದನು.

**ಶಬ್ದಾರ್ಥ:** * **ರಜ್ಜು**=ಹಗ್ಗ; * **ಭುಜಂಗ**=ಹಾವು; **ಇಂದ್ರಜಾಲ**=ಕಣ್ಕಟ್ಟು; * **ಮರೀಚಿಕ ಜಲ**= ಬೇಸಿಗೆಯಲ್ಲಿ ನೀರು ಹರಿದು ತೊರೆಯಾದಂತೆ ಕಾಣುವ ಭ್ರಮೆ, ಮಿಥ್ಯಾರೂಪವಾದ ಬಿಸಿಲುಗುದುರೆ, ಮೃಗಜಲ.

**ಪಾಠಾಂತರ–೧: ತೋರಿತದಾದಬಗೆಯೆಂತೆನಲು** ಎಂಬ ಕಡೆ ಮೂಲದಲ್ಲಿ **'ಆದುದು ಕಾರಣವ ಹೇಳೆನಲು'** ಎಂದಿದೆ. ಮುಂದೆ ಜಗತ್ತಾದ ಕಾರಣದ ವಿಚಾರವಿಲ್ಲದೆ ಆದ ಪರಿಯೇ ಇರುವುದರಿಂದ ಹೀಗೆ ತಿದ್ದಿದ್ದಾಗಿದೆ. ಮುಂದೆ ೨ನೇ ಪದ್ಯದಲ್ಲಿ ಕವಿಯು ತಾನೇ **'ಆಗಿ ತೋರಿದ ಬಗೆಯ'** ಎಂದು ಉಪಯೋಗಿಸುವುದರಿಂದ ಈ ತಿದ್ದಿದ ರೂಪವು ಯೋಗ್ಯವಾಗಿದೆ.

**ಪಾಠಾಂತರ–೨: * ಮಾಯೆಯ ಚಂದವಾವುದು?** (ಕೊ) ಪ್ರತಿಯಲ್ಲಿ **ಮಾಯದ ಛಂದವಾವುದು?** ಎಂದಿದೆ

**ಪಾಠಾಂತರ–೩:** * ತೋರಿತದಾದಬಗೆಯೆಂತೆನಲು ಎಂಬುದಕ್ಕೆ (ಕೊ) ಪ್ರತಿಯಲ್ಲಿ ತೋರಿತು ಕಾರಣವ ಹೇಳೆನಲು ಎಂದಿದೆ.

**ಟಿಪ್ಪಣಿ: ಮಾಯೆಯೆನೆ ಪುಸಿ**=ಮಾಯೆ ಎಂದರೆ ಯಾ ಮಾ ಸಾ ಮಾಯಾ ಯಾ ವ್ಯುತ್ಪತ್ತಿಯಿಂದ ಇಲ್ಲದ್ದು ಎಂದರ್ಥ.

---

**ಆದಿಮಧ್ಯಾಂತಂಗಳಿಲ್ಲದ**
**ನಾದಿಯಹ ಮಾಯೆಯನು ತಿಳಿದದ**
**ಭೇದಿಸಲು ಶತಕಲ್ಪವಾದರು ಬ್ರಹ್ಮಗಳವಲ್ಲ; ।**
**ವಾದಿಗಳು ಹೊಡೆದಾಡಿ ಬರಿದೇ**
**ಕಾದಿ ಕಲ್ಲನು ಹಾಯ್ವರಲ್ಲದೆ**
**ಶೋಧಿಸುತ ಸುಳ್ಳೆಂದು ತಿಳಿದವರಿಲ್ಲ ಕೇಳೆಂದ ॥ ॥೭॥**

**ತಾತ್ಪರ್ಯ:** ಚತುರ್ಮುಖ ಬ್ರಹ್ಮನಿಗೂ ಮಾಯೆಗೂ ತುದಿಮೊದಲು ಮಧ್ಯಗಳು ಇಲ್ಲದಿರುವುದನ್ನೂ ಅನಾದಿಯಾಗಿರುವುದನ್ನೂ ಅರ್ಥಮಾಡಿಕೊಂಡು ಅದರ ರಹಸ್ಯವನ್ನು ಹೊರಗೆಡವಲು ನೂರು ಕಲ್ಪಾವಧಿ ಆದರೂ ಸಾಧ್ಯವಿಲ್ಲ. ಹೀಗಿರುವಾಗ ಪಂಥ ಹೂಡಿ ವಾದಿಸುವ ಜನರು ಈ ಬಗ್ಗೆ ಬಂಡೆಗೆ ತಲೆಚಚ್ಚಿಕೊಂಡ ಹಾಗೆ ವ್ಯರ್ಥವಾಗಿ ಚರ್ಚಿಸಿ ಹೊಡೆದಾಡುತ್ತಾರೆ ಮತ್ತು ಈ ಮಾಯೆಯ ನಿಜಸ್ವರೂಪವನ್ನು

ಅನ್ವೇಷಿಸಿ ಅದು ಮಿಥ್ಯಾರೂಪವೆಂದು ತಿಳಿದುಕೊಳ್ಳುವವರು ಯಾರೂ ಇಲ್ಲವೆಂದು ವ್ಯಾಸನು ಹೇಳಿದನು.

**ಶಬ್ದಾರ್ಥ:** ಬ್ರಹ್ಮಗೆ=ಚತುರ್ಮುಖ ಬ್ರಹ್ಮನಿಗೆ; * **ಶತಕಲ್ಪ**=ನೂರು ಬ್ರಹ್ಮನ ದಿವಸಗಳು ಅಥವಾ ಸಾವಿರ ಯುಗದ ಅವಧಿ; * **ವಾದಿಗಳು**=ಪಂಥ ಹೂಡಿ ಚರ್ಚಿಸುವವರು; * **ಬರಿದೇ**= ವ್ಯರ್ಥವಾಗಿ; **ಕಲ್ಲನು ಹಾಯ್ವರು**=ಬಂಡೆಗೆ ತಲೆ ಚಚ್ಚಿಕೊಳ್ಳುವರು; * **ಕಾದಿ**=ವಾದ ಮಾಡಿ; * **ಶೋಧಿಸುತ**=ಅನ್ವೇಷಿಸುತ್ತ

---

**ಈ ವಿಧದ ಪುಸಿಮಾಯೆ ತಾನೇ**
**ಆವರಣ ವಿಕ್ಷೇಪಶಕ್ತಿಯ**
**ಭಾವದಿಂದೆರಡಾಗಿ ತೋರ್ವುದಖಂಡವಸ್ತುವನು ।**
**ಆವರಿಸಿಕೊಂಡಿರ್ಪುದದು ಕೇ**
**ಳಾವರಣಶಕ್ತಿಯು; ಜಗತ್ತನು**
**ಜೀವರನು ವಿಕ್ಷೇಪಶಕ್ತಿಯೆ ಮಾಡುತಿಹುದೆಂದ ॥ ॥೮॥**

**ತಾತ್ಪರ್ಯ:** ಈ ರೀತಿಯಲ್ಲಿ ಮಿಥ್ಯೆಯಿಂದ ಮಾಯೆಯು ಹಗ್ಗವನ್ನು ಹಗ್ಗವೆಂದು ಸತ್ಯ ತಿಳಿಯದ ಆವರಣವೆಂಬ ಶಕ್ತಿಯ ಅಜ್ಞಾನಕ್ಕೆ ಒಳಗಾಗಿ, ಹಗ್ಗವನ್ನು ಹಾವೆಂದು ತಿಳಿಯುವ ಭ್ರಾಂತಿಯ ವಿಕ್ಷೇಪ ಶಕ್ತಿಯ ಭಾವದಿಂದ ಎರಡಾಗಿ ಕಾಣುತ್ತದೆ. ಈ ಮಾಯೆಯ ಅಖಂಡವಸ್ತುವನ್ನು ಆವರಣ ಶಕ್ತಿಯು ಆವರಿಸಿಕೊಂಡಿದೆ. ಈ ಮಾಯೆಯ ವಿಕ್ಷೇಪಶಕ್ತಿಯು ಜಗತ್ತಿನಲ್ಲಿರುವ ಜೀವರನ್ನು ಸೃಷ್ಟಿಸುತ್ತಿದೆ ಎಂದು ತಿಳಿಯಬೇಕಾಗಿದೆ.

**ಶಬ್ದಾರ್ಥ:** **ಆವರಣ**=ಮುಸುಕು; ಹಗ್ಗವನ್ನು ಹಗ್ಗವೆಂದು ತಿಳಿಯದಿರುವುದು; **ಆವರಣ ವಿಕ್ಷೇಪ**=ಬುದ್ಧಿಯ ಹೊರಚೆಲ್ಲುವಿಕೆ; ಹಗ್ಗವನ್ನು ಹಾವೆಂದು ತಿಳಿಯುವುದು ವಿಕ್ಷೇಪ.

---

### ವಿಷಯಸೂಚಿಕೆ (೯)

**ಮಗನೆ, ಮಾಯೆಯ ಪರಿಯನೆಲ್ಲವ**
**ಮಿಗಿಲೆನಲು ಪೇಳುವೆನು; ಮತ್ತೀ**
**ಜಗದುದಯವದರಿಂದಲಾದುದನೆಲ್ಲ ಪೇಳುವೆನು; ।**
**ಬಗೆಯಲೀ ಮಿಥ್ಯಾಪ್ರಪಂಚವು**
**ಸಗುಣಬ್ರಹ್ಮದಲಾಗಿ ತೋರಿದ**
**ಬಗೆಯ ಪಂಚೀಕರಣತತ್ತ್ವಗಳಿಂದ ಪೇಳುವೆನು ॥ ॥೯॥**

**ತಾತ್ಪರ್ಯ:** ಶುಕನೆ ಕೇಳು, ಮಾಯೆಯ ಸ್ವರೂಪವನ್ನು ಅಧಿಕವಾಗಿ ವಿವರಿಸುವೆನು; ಈ ಊರ್ಧ್ವ ಲೋಕಗಳೆಲ್ಲವು ಈ ಮಾಯೆಯಿಂದಲೇ ನಿರ್ಮಿತವಾಗಿದೆ. ಹಾಗೆಯೇ

ಈ ಮಿಥ್ಯಾ ಪ್ರಪಂಚವೆಲ್ಲ ಸಗುಣ ಬ್ರಹ್ಮನಿಂದ ಉಂಟಾಗಿದೆ. ಐದೈದು ಭಾಗಗಳಿಂದ ಕೂಡಿರುವ ಪಂಚೀಕರಣತತ್ತ್ವಗಳಿಂದ ಇದರ ವಿವರಗಳನ್ನು ತಿಳಿಸುತ್ತೇನೆ.

**ಶಬ್ದಾರ್ಥ:** ಬಗೆಯಲು=ವಿಚಾರ ಮಾಡಿದರೆ; **ಪಂಚೀಕರಣ ತತ್ತ್ವಗಳು**=ಐದೈದು ಭಾಗಗಳು ಕೂಡಿ ಆಗಿರುವ ಇಪ್ಪತ್ತೈದು ವಿಚಾರಗಳು. * **ಜಗದುದಯ**=ಊರ್ಧ್ವಲೋಕಗಳ ಉದಯ.

---

## ಸೃಷ್ಟಿಕ್ರಮ (೧೦-೧೬)

**ಆದಿಮಧ್ಯಾಂತಂಗಳಿಲ್ಲದ**
**ನಾದಿಯಹ ನಿರ್ಗುಣ ನಿರಂಜನ**
**ವಾದ ಶುದ್ಧಾವ್ಯಕ್ತ ಸಹಜಾನಂದ ಸನ್ಮಾತ್ರ ।**
**ಬೋಧರೂಪನೊಳಾದುದೊಂದು ವಿ**
**ನಾದಮಯವಹ ಶಬ್ದವದರಿಂ**
**ದಾದುದೀ ತೋರ್ಪ ಪ್ರಪಂಚವು ಮಗನೆ, ಕೇಳೆಂದ ॥ ॥೧೦॥**

**ತಾತ್ಪರ್ಯ:** ಮೊದಲು, ನಡುವೆ ಕೊನೆ, ಎಂಬ ಮೂರು ಇಲ್ಲದೆ ಅನಾದಿ ಆಗಿರುವ ಸತ್ವ, ರಜ, ತಮಗಳೆಂಬ ಮೂರು ಗುಣಗಳನ್ನು ಮೀರಿದಂಥ (ನಿರ್ಗುಣ), ವೃದ್ಧಿಕ್ಷಯ ಗಳಿಲ್ಲದಿರುವ ಶುದ್ಧವಾದ (ನಿರಂಜನ) ಮತ್ತು ಅವ್ಯಕ್ತವಾದ ಸಹಜಾನಂದದಿಂದ ಕೂಡಿದ ಸತ್ಯಸ್ವರೂಪ ಹೊಂದಿರುವ ಚಿದ್ರೂಪವಾದ ಪರಮವಸ್ತುವಿನಲ್ಲಿ ವಿಶೇಷವಾದ ನಾದದಿಂದ ತುಂಬಿದ ಶಬ್ದವು (ಓಂಕಾರವು) ಉಂಟಾಯಿತು. ಈ ಶಬ್ದದಿಂದ ಕಾಣುವ ಜಗತ್ತೆಲ್ಲ (ದೃಶ್ಯ ಪ್ರಪಂಚ) ಉಂಟಾಯಿತು.

**ಶಬ್ದಾರ್ಥ: ಇಲ್ಲದ ಅನಾದಿ ಅಹ**= ಆದಿ ಮಧ್ಯ ಅಂತ್ಯಗಳಿಲ್ಲದೆ ಅನಾದಿ ಎನಿಸಿಕೊಂಡಿರುವ; * **ಶುದ್ಧಾವ್ಯಕ್ತ**=ಶುದ್ಧವಾದ+ಅವ್ಯಕ್ತವಾದ (ನಿರ್ಮಲವೂ, ನಿರಾಕಾರವೂ ಆದ), **ವಿನಾದಮಯವಹ ಶಬ್ದ**=ವಿಶೇಷವಾದ ನಾದದಿಂದ ತುಂಬಿದ ಶಬ್ದ ಅದರಿಂದ **ಆದುದೀ ತೋರ್ಪ ಪ್ರಪಂಚವು**= ಈ ಕಾಣುವ ಜಗತ್ತೆಲ್ಲ ಈ ಶಬ್ದದಿಂದಾಯಿತು.

**ಟಿಪ್ಪಣಿ-೧:** ವಿನಾದಮಹವವಹಶಬ್ದ=ವಿಶೇಷವಾದ ನಾದದಿಂದ ತುಂಬಿದ ಶಬ್ದ ಸೃಷ್ಟಿಗೆ ಮೊದಲು ಉತ್ಪತ್ತಿ ಆಯಿತು ಎಂದು ತಾಂತ್ರಿಕರು ಹೇಳುತ್ತಾರೆ. ಈ ಶಬ್ದವನ್ನೇ ಓಂಕಾರವೆಂದು ಹೇಳಬಹುದು. ಅದರಿಂದ ಈ ಕಾಣುವ ಜಗತ್ತು ಹುಟ್ಟಿತು.

**ಟಿಪ್ಪಣಿ-೨:** ಅದರಿಂದಾದುದೀ ತೋರ್ಪ ಪ್ರಪಂಚವು=ಈ ಕಾಣುವ ಜಗತ್ತೆಲ್ಲ ಈ ಶಬ್ದದಿಂದ ಆಯಿತು. ವಾಚಾರಂಭಣಂ ವಿಕಾರೋ ನಾಮಧೇಯಂ ಎಂಬ ಛಾಂದೋಗ್ಯ ಶ್ರುತಿ ಹೇಳುತ್ತದೆ.

**ಟಿಪ್ಪಣಿ-೩:** ಹೆಸರನ್ನು ಬಿಟ್ಟು ಬೇರೆ ವಸ್ತುವಿಲ್ಲದ್ದರಿಂದ ಓಂಕಾರದಿಂದಲೇ ಎಲ್ಲ ಜಗತ್ತಾಯಿತು. (ಓಂ ಮಿತ್ಯೇತಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಂ-ಮಾಂಡೂಕ್ಯ)

**ಟಿಪ್ಪಣಿ-೪:** ಈ ನಾದವು ವಿಷಯದಲ್ಲಿ ಸೂತಸಂಹಿತೆಯ ಟೀಕಾಕಾರರಾದ ಶ್ರೀ ಮಾಧವಾಚಾರ್ಯರು ಹೇಳಿರುವುದೇನೆಂದರೆ-ಪ್ರಾಣಿಗಳಿಗೆ ಕರ್ಮಫಲವನ್ನು ಕೊಡುವುದಕ್ಕಾಗಿ ಸೃಷ್ಟಿಯನ್ನು ಮಾಡಬೇಕೆಂದು ಈಶ್ವರನಿಗೆ ಇಚ್ಛೆಯಾಗುವುದು. ಮಾಯೆಯು ಪ್ರಾಣಿಗಳ ಕರ್ಮದ

ಪರಿಪಕ್ವಾವಸ್ಥೆಯಾಗಿ ಪರಿಣಮಿಸಿದಾಗ ಈಶ್ವರನು ಅದರೊಡನೆ ಕೂಡಿಕೊಳ್ಳುವನು. ಈ ಸ್ಥಿತಿಗೆ ಬಿಂದು ಎಂದು ಹೆಸರು. ಈ ಬಿಂದುವು ಕಾಲ, ಕರ್ಮದಿಂದ ಸ್ಥೂಲವಾದ ಬೀಜವೆಂಬ ಅಚಿದಂಶವೆಂದೂ ಸೂಕ್ಷ್ಮವಾದ ನಾದವೆಂಬ ಚಿದಚಿನ್ಮಿಶ್ರಾಂಶವೆಂದೂ, ಜೀವನ ಮತ್ತು ಈಶ್ವರನ ಸ್ವರೂಪವಾದ ಪರವೆಂಬ ಚಿದಂಶವೆಂದೂ ಮೂರು ಭಾಗವಾಗಿ ಒಡೆದುಕೊಳ್ಳುವುದು. ಈ ಶಬ್ದ ಬ್ರಹ್ಮವೆಂಬ ಶಬ್ದವೇ ಜಗತ್ತಿಗೆ ಉಪಾದಾನಕಾರಣವು.

---

**ತತ್ತೆನಿಪ ವಾಚ್ಯದಲಿ ಶಬಲತೆ**
**ವೆತ್ತ ಬ್ರಹ್ಮದಲಾಯ್ತು ಸದಸ**
**ದ್ವ್ಯಕ್ತಿಯಾದವ್ಯಕ್ತವದರಿಂದೀ ಮಹತ್ತತ್ತ್ವ ।**
**ಮುತ್ತೆರದಹಂಕಾರವದರಿಂ,**
**ಸತ್ತ್ವದಿಂ ವೈಕಾರಿಕವು ತಿಳಿ,**
**ಮತ್ತೆ ತೈಜಸ ರಜದಿ, ತಾಮಸದಿಂದ ಭೂತಾದಿ ॥ ॥೧೧॥**

**ತಾತ್ಪರ್ಯ:** ತತ್ ಎಂಬ ಪದದ ವಾಚ್ಯಾರ್ಥದಲ್ಲಿ ಪ್ರತಿಪಾದಿತವಾಗಿದ್ದ ಪ್ರಕಾರ ಸಗುಣಬ್ರಹ್ಮರೂಪದಲ್ಲಿ ತ್ರಿಗುಣಗಳು ಬೇರೆಬೇರೆಯಾಗಿ ಅದು ಮುಂದೆ ಸತ್ತಾದ ಮತ್ತು ಅಸತ್ತಾದ ರೂಪುಳ್ಳ ಮಾಯೆ ಆಯಿತು. ಅದರಿಂದ ಮಹತತ್ತ್ವ ಉಂಟಾಯಿತು. ಇದರಿಂದ ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳಿಂದ ಕೂಡಿದ ಅಹಂಕಾರ ತತ್ತ್ವ ಉಂಟಾಯಿತು. ಇದರಲ್ಲಿ ಸತ್ತ್ವದಿಂದ ವಿಕಾರವೂ ರಜೋಗುಣದಿಂದ ತೇಜಸ್ಸೂ ತಮೋಗುಣದಿಂದ ಪಂಚಭೂತಾದಿ ರೂಪಗಳೂ ಉಂಟಾದವು.

**ಶಬ್ದಾರ್ಥ: ತತ್ತೆನಿಪ**=ತತ್ ಎಂಬ ಶಬ್ದದ; **ವಾಚ್ಯದಲಿ**=ವಾಚ್ಯಾರ್ಥವಾದ ಸಗುಣ ಬ್ರಹ್ಮ ರೂಪದಲ್ಲಿ; **ಶಬಲತೆವೆತ್ತ**=ಸತ್ತ್ವ ರಜ ತಮೋಗುಣಗಳಿಂದ ಕೂಡಿದ; **ಸದಸದ್ವ್ಯಕ್ತಿಯಾದ**=(ಮುಂದೆ) ಸತ್ತಾದ ಮತ್ತು ಅಸತ್ತಾದ ರೂಪುಳ್ಳ; **ಅವ್ಯಕ್ತ**=ಪ್ರಾಧಾನ್ಯ, ಪ್ರಕೃತಿ, ಮಾಯೆ; **ಭೂತಾದಿ**=ಪಂಚಭೂತಗಳು; * **ವೈಕಾರಿಕವು**=ಮನಸ್ಸು; * **ಮುತ್ತೆರ**=ಮೂರು ವಿಧವಾಗಿ; **ತೈಜಸ**=ಬುದ್ಧಿ; * **ಭೂತಾದಿ**=ಪಂಚಭೂತಗಳು.

**ಟಿಪ್ಪಣಿ-೧:** **ಅವ್ಯಕ್ತ**=ಎಂದರೆ ಮಾಯೆ ಎಂದು ಮುಂದಿನ ಪದ್ಯದಲ್ಲಿ (೪-೧೨) ಕವಿಯೇ ಹೇಳಿರುವನು. ಈ ಅವ್ಯಕ್ತವನ್ನು ಮೊದಲು ಮಾಡಿಕೊಂಡು ಹೇಳುವುದು ಸಾಂಖ್ಯಶಾಸ್ತ್ರಕಾರರ ಪದ್ಧತಿ.

**ಟಿಪ್ಪಣಿ-೨:** ಸಾಂಖ್ಯಶಾಸ್ತ್ರಕಾರರ ಈ ವಿಷಯದಲ್ಲಿ ವೇದಾಂತದ ಅಭಿಪ್ರಾಯವೇನೆಂದರೆ:

ಈಶ್ವರನ ಇಚ್ಛೆಯಿಂದ ಜೀವರ ಭೋಗಕ್ಕೆ ಸಾಧನವಾಗಿ ಶುದ್ಧಸತ್ತ್ವಪ್ರಧಾನವೂ ತ್ರಿಗುಣಾತ್ಮಕವೂ ಆದ ಮಾಯೆಯಲ್ಲಿರುವ ತಮೋಗುಣಗಳನ್ನು ಹೆಚ್ಚಾಗಿ ಬಳಸಿಕೊಂಡು ತ್ರಿಗುಣಾತ್ಮಕವಾದ ಆಕಾಶ ಮೊದಲಾದ ಪಂಚಸೂಕ್ಷ್ಮಭೂತಗಳು ಹುಟ್ಟಿದವು. ಈ ಒಂದೊಂದು ಭೂತದಲ್ಲಿಯೂ ಇರುವ ಸತ್ತ್ವಾಂಶದಿಂದ ಒಂದೊಂದು ಜ್ಞಾನೇಂದ್ರಿಯವು ಹೊರಬಿದ್ದಿತು. ಆಕಾಶದಿಂದ ಶ್ರೋತ್ರ, ವಾಯುವಿನಿಂದ ಚರ್ಮ, ತೇಜಸ್ಸಿನಿಂದ ಚಕ್ಷು, ನೀರಿನಿಂದ ನಾಲಿಗೆ, ಪೃಥ್ವಿಯಿಂದ ಪ್ರಾಣ, ಹೀಗೆ ಐದು ಜ್ಞಾನೇಂದ್ರಿಯಗಳಾದವು. ಈ ಐದೂ ಭೂತಗಳ ಸತ್ತ್ವಾಂಶದ ಬೆರಕೆಯಿಂದ ಅಂತಃಕರಣವೇರ್ಪಟ್ಟಿತು. ಅದರಲ್ಲಿ ಸಂಶಯಾತ್ಮಕವಾದ ವೃತ್ತಿಯು ಮನವೆನಿಸಿತು. ನಿಶ್ಚಯಾತ್ಮಕವಾದ ವೃತ್ತಿಯು ಬುದ್ಧಿ ಎನಿಸಿತು. ಇನ್ನು ಆ ಒಂದೊಂದು ಭೂತದಲ್ಲಿಯೂ ಇರುವ ರಜೋಂಶದಿಂದ

ಒಂದೊಂದು ಕರ್ಮೇಂದ್ರಿಯ ಹೊರಬಿದ್ದು ಆಕಾಶದಿಂದ ವಾಕ್ಕು ವಾಯುವಿನಿಂದ ಪಾಣಿ, ತೇಜಸ್ಸಿನಿಂದ ಪಾದ, ನೀರಿನಿಂದ (ಉಪಸ್ಥ) ಪೃಥ್ವಿಯಿಂದ ಪಾಯು (ಗುದ) ಹೀಗೆ ಐದು ಕರ್ಮೇಂದ್ರಿಯಗಳಾದವು. ಈ ಐದೂ ಕರ್ಮೇಂದ್ರಿಯಗಳ ಭೂತ ರಜೋಂಶ ಬೆರಕೆಯಿಂದ ಪ್ರಾಣವೇರ್ಪಟ್ಟಿತು. ಇದು ವೃತ್ತಿಭೇದದಿಂದ ಪ್ರಾಣ, ಅಪಾನ, ಸಮಾನ, ವ್ಯಾನ, ಉದಾನ ಎಂದು ಐದು ಬಗೆಗಳಾಗಿರುವುವು. ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ಪ್ರಾಣಗಳೈದು, ಮನಸ್ಸು, ಬುದ್ಧಿ=ಈ ಹದಿನೇಳು ಸೇರಿ ಸೂಕ್ಷ್ಮ ಶರೀರ ಎನಿಸುತ್ತದೆ. ಈ ಸೂಕ್ಷ್ಮಶರೀರವಾದಮೇಲೆ ಸ್ಥೂಲಶರೀರ ಮೊದಲಾದವುಗಳೇರ್ಪಡುವುದಕ್ಕಾಗಿ ಆಕಾಶ ಮೊದಲಾದ ಪ್ರತಿಯೊಂದು ಸೂಕ್ಷ್ಮಭೂತದ ತಮಸ್ಸಿನ ಅಂಶವನ್ನ ಐದೈದರ ಬೆರಕೆಯಾಗಿ ಪಂಚೀಕರಣವನ್ನು ಮಾಡಲಾಯಿತು.

**ಟಿಪ್ಪಣಿ-೩:** ಪಂಚೀಕರಣವೆಂದರೆ ಪ್ರತಿಯೊಂದು ಸೂಕ್ಷ್ಮಭೂತವನ್ನೂ ಐದೈದರ ಬೆರಕೆಯ ಸ್ಥೂಲವಾಗಿ ಮಾಡುವುದೆಂದರ್ಥ. ಈ ಅಭಿಪ್ರಾಯವನ್ನು ಶ್ರೀ ಸುರೇಶ್ವರಾಚಾರ್ಯರು ತಮ್ಮ ಪಂಚೀಕರಣವಾರ್ತಿಕದಲ್ಲಿ ಎತ್ತಿಹಿಡಿದಿದ್ದಾರೆ. ಉದಾಹರಣೆಗೆ, ಆಕಾಶವೆಂಬ ಸೂಕ್ಷ್ಮಭೂತದ ಅರ್ಧಭಾಗಕ್ಕೆ ಉಳಿದ ನಾಲ್ಕು ಸೂಕ್ಷ್ಮಭೂತಗಳ ಪ್ರತಿಯೊಂದರ ಬೇಳೆಪಾಲನ್ನು ಬೆರಸಿದರೆ ಸ್ಥೂಲವಾದ ಆಕಾಶವಾಯಿತು. ಈ ಕ್ರಮದಲ್ಲಿ ಐದು ಸ್ಥೂಲಭೂತಗಳಾದವು. (ಪಂಚದಶೀ, ೧-೧೮, ೧-೨೫, ೧-೨೬, ೧-೨೭) ಹೀಗಿದ್ದರೂ ಜಗತ್ತಿನ ಸೃಷ್ಟಿಯೇ ಆಗಿಲ್ಲವೆಂದು ಹೇಳುವ ವೇದಾಂತಿಗಳಿಗೆ ಸೃಷ್ಟಿಕ್ರಮದಲ್ಲಿ ತಾತ್ಪರ್ಯವೇ ಇಲ್ಲದ್ದರಿಂದ ಮಂದಾಧಿಕಾರಿಗಳಿಗೆ ಲಯಚಿಂತನೆಗೆ ಉಪಯೋಗವಾಗಲೆಂದು ಯಾವ ಸೃಷ್ಟಿಕ್ರಮವನ್ನು ಹಿಡಿದರೂ ಬಾಧಕವಿಲ್ಲ.

---

**ತನಯ ಕೇಳವ್ಯಕ್ತಮಾವುದ**
**ದೆನಲನಿರ್ವಚನೀಯ ಮಾಯೆಯೆ;**
**ಘನತೆವೊಂದಿದ ಗರ್ಭಿಣಿಯ ಪರಿಯೇ ಮಹತ್ತತ್ತ್ವ ।**
**ಜನಿತವೈಕಾರಿಕವೆ ಮನವೆಂ**
**ದೆನಿಪ ಕರಣವು; ತೈಜಸವೆ ಕೇ**
**ಳನಘ, ತನ್ಮಾತ್ರೆಗಳು; ಭೂತಾದಿಗಳು ಪೃಥ್ವ್ಯಾದಿ ॥ ॥೧೨॥**

**ತಾತ್ಪರ್ಯ:** ಎಲೈ ಸುತನೇ ಕೇಳು, ಅವ್ಯಕ್ತ ಎನ್ನುವುದು, ಯಾವುದು ಎಂದು ಕೇಳುವೆಯಾ? ಮಾತಿನಿಂದ ಹೇಳಲು ಶಕ್ಯವಿಲ್ಲದ ಮಾಯೆ; ಶ್ರೇಷ್ಠವಾದ ಮಹತ್ತತ್ತ್ವವೆಂಬ ಬುದ್ಧಿಯಿಂದ, ಗರ್ಭಿಣಿ ಸ್ತ್ರೀಯಿಂದ ಮಗು ಜನಿಸುವಂತೆ ಉತ್ಪನ್ನವಾದುದೇ ವೈಕಾರಿಕವೇ ಮನವೆಂಬ ಕರಣವು; ಇನ್ನು ಪವಿತ್ರವಾದ ತನ್ಮಾತ್ರೆಗಳೇ ತೈಜಸವು; ಭೂಮಿ ಮೊದಲಾದವು ಪಂಚಭೂತಗಳು.

**ಶಬ್ದಾರ್ಥ:** * ಅನಿರ್ವಚನೀಯ=ಮಾತಿನಿಂದ ಹೇಳಲು ಶಕ್ಯವಿಲ್ಲದ್ದು; * ಘನತೆವೊಂದಿದ =ಶ್ರೇಷ್ಠವೆನಿಸಿದ;

**ಟಿಪ್ಪಣಿ-೧:** * ತನ್ಮಾತ್ರೆಗಳು=ಶಬ್ದ ಸ್ಪರ್ಶ ರೂಪ ರಸ ಗಂಧ ಎಂಬ ಸೂಕ್ಷ್ಮ ಭೂತಗಳು. ಇವುಗಳನ್ನು ಸ್ಥೂಲಭೂತಗಳು ಹೊಂದಿವೆ. ಉದಾಹರಣೆಗೆ ಗಂಧ ತನ್ಮಾತ್ರೆ, ಭೂತ ಸೂಕ್ಷ್ಮ ಪೃಥ್ವಿಯು ಸ್ಥೂಲ ಭೂತ. (ಪ ಪ ಪುಟ ೧೭೬)

**ಟಿಪ್ಪಣಿ-೨:** (ಮಹತ್ತತ್ತ್ವವು) ಗರ್ಭಿಣಿಯ ಪರಿ=ಸ ಈಕ್ಷಿತ ಲೋಕಾನ್ನು ಸೃಜ ಎಂಬ ಐತರೇಯ ಶ್ರುತಿಯಂತೆ ಭಗವಂತನು ಲೋಕಗಳನ್ನು ಸೃಷ್ಟಿ ಮಾಡಬೇಕೆಂದು ಬುದ್ಧಿಯಲ್ಲಿ ವಿಚಾರವನ್ನು ತಂದುಕೊಂಡನು. ಆಗಲೇ ಜಗತ್ತಿನ ಗರ್ಭಧಾರಣೆ ಆದಂತಾಯಿತು. ಆದ್ದರಿಂದ ಮಹತ್ತತ್ತ್ವವೆಂಬ ಬುದ್ಧಿಗೆ ಗರ್ಭಿಣಿಯ ಪರಿ ಎಂಬ ಹೋಲಿಕೆ ಬಂತು.

**ಟಿಪ್ಪಣಿ-೩:** * "ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದದಾಮ್ಯಹಂ" (ಗೀತೆ-೧೪-೩) ಎಂಬ ಗೀತಾ ವಾಕ್ಯವು ಈ ಅರ್ಥವನ್ನೇ ಹೇಳುತ್ತದೆ. (ಅರ್ಜುನ ನಾನು ಜಗತ್ತಿನ ಬೀಜವನ್ನಿಡುವ ಸ್ಥಾನವು ಎಲ್ಲಕ್ಕಿಂತ ದೊಡ್ಡದಾದ ಮಾಯಾ ಶಕ್ತಿ. ಅದರಲ್ಲಿ ನಾನು ಗರ್ಭವನ್ನು ಇಡುತ್ತೇನೆ. ಅದರಿಂದ ಎಲ್ಲ ವಸ್ತುಗಳೂ ಹುಟ್ಟುತ್ತವೆ. (ಹೊಚಿ ಅವರ ಗೀತೆಯ ಕೈಗನ್ನಡಿ ೧೪-೩ ಗೀತೆ.)

---

**ಮಗನೆ ರಾಜಸವಾದ ಹಮ್ಮಿನ**
**ಲೊಗೆದವೀ ತನ್ಮಾತ್ರೆಗಳು; ಕೇ**
**ಳ್ನೆಗಳಿದೀ ತನ್ಮಾತ್ರೆಗಳಿನೀ ಭೂತಪಂಚಕವು; ।**
**ಬಗೆಯಲದರಿಂದಾದವೀ ತೋ**
**ರ್ಪಗಣಿತಚರಾಚರಗಳೆಲ್ಲವು;**
**ನಿಗಮವಿದ, ಪೃಥ್ವ್ಯಾದಿಭೂತಾತ್ಮಕವು ಜಗವೆಂದ ॥ ॥೧೩॥**

**ತಾತ್ಪರ್ಯ:** ಮಗನೆ ಕೇಳುವಂಥವನಾಗು; ಮಾಯೆಯ ರಾಜಸ ಕಾರ್ಯವಾದ ಅಹಂಕಾರದಿಂದ ಪಂಚತನ್ಮಾತ್ರೆಗಳು ಉಂಟಾದವು. ಅದರಿಂದ ಭೂಮಿ, ನೀರು, ಬೆಂಕಿ, ವಾಯು, ಆಕಾಶಗಳೆಂಬ ಪಂಚಭೂತಗಳಾದವು. ವಿಚಾರಮಾಡಲಾಗಿ ಈ ಪಂಚಭೂತಗಳಿಂದಲೇ ದೃಶ್ಯ ರೂಪವಾದ ಜಂಗಮಜಗತ್ತು ಉಂಟಾಯಿತು ಇದು ಶಾಸ್ತ್ರಸಿದ್ಧವು.

**ಶಬ್ದಾರ್ಥ:** * ಇದು ನಿಗಮವು=ಶಾಸ್ತ್ರಸಿದ್ಧವು; * ಹಮ್ಮು=ಅಹಂಕಾರ; * ತನ್ಮಾತ್ರೆಗಳು=ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಸೂಕ್ಷ್ಮ ಭೂತ ಪಂಚಕ; * ಬಗೆಯಲು=ವಿಚಾರಮಾಡಲು; * ಅಗಣಿತ=ಅಸಂಖ್ಯಾತ; * ತೋರ್ಪ=ದೃಶ್ಯರೂಪದ

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

**ಪಾಠಾಂತರ:** ರಾಜಸವಾದ=ಮಾಯಾ ಕಾರ್ಯ (ಕು)

---

**ಬೆರೆಯೆ ಭೂತಾಂಶಗಳು ಪಂಚೀ**
**ಕರಣದಿಂದಲಿ ಸ್ವೇದಜೋದ್ಭಿಜ**
**ನೆರೆ ಜರಾಯುಜವಂಡಜವೆನಿಪ ನಾಲ್ಕು ಪ್ರಾಣಿಗಳು; ।**
**ಪುರಗಗನಜಲವನಚರಂಗಳು**
**ಚರಗಳಿವು; ಪಂಚೀಕೃತಂಗಳು**
**ತರುಲತಾಗುಲ್ಮಾದಿಗಳು ಕೇಳಚರವೆನಿಸುವವು ॥ ॥೧೪॥**

**ತಾತ್ಪರ್ಯ:** ಪಂಚಭೂತಗಳ ಅಂಶಗಳು ಸೇರಿ ಪಂಚೀಕರಣವಾಗಿ ಸೇರಿಕೊಂಡು ಸ್ವೇದಜ, ಅಂಡಜ, ಉದ್ಭಿಜ, ಜರಾಯುಜಗಳೆಂಬ ನಾಲ್ಕು ಬಗೆಯ ಭೂತಗಳು (ಪ್ರಾಣಿಗಳು) ಹುಟ್ಟಿದವು. ಇವುಗಳಲ್ಲಿ ಕೆಲವು ಭೂಚರಗಳು; (ಪುರ) ಕೆಲವು ಗಗನಚರಗಳು, ಕೆಲವು ಜಲಚರಗಳು ಕೆಲವು ವನಚರಗಳು. ಪಂಚೀಕರಣವಾದ ಇವುಗಳಲ್ಲಿ ಗಿಡಗಳು, ಬಳ್ಳಿಗಳು, ಪೊದೆಗಳು, ಅದಿರುಗಳು ಎನಿಸಿಕೊಂಡಿವೆ.

**ಶಬ್ದಾರ್ಥ:** **ಭೂತಾಂಶಗಳು**=ಪಂಚಭೂತಾಂಶಗಳು (ಭೂಮಿ, ನೆಲ, ನೀರು, ಆಕಾಶ, ಗಾಳಿ); **ಬೆರೆಯೆ**=ಪಂಚೀಕೃತವಾಗಲು; **ಸ್ವೇದಜ**=ಬೆವರಿನಿಂದ ಹುಟ್ಟುವ ಹೇನು, ಕೂರೆ ಮೊದಲಾದವು; **ಉದ್ಭಿಜ**=ಭೂಮಿಯನ್ನು ಸೀಳಿಕೊಂಡು ಮೇಲಕ್ಕೆ ಬರುವ ಸಸ್ಯಾದಿಗಳು; **ಜರಾಯುಜ**= ಗರ್ಭಾಶಯದಿಂದ ಹುಟ್ಟುವ ಮನುಷ್ಯರು, ಗೋವು ಮೊದಲಾದ ಪ್ರಾಣಿಗಳು; **ಅಂಡಜ**= ಮೊಟ್ಟೆಯಿಂದ ಹುಟ್ಟುವ ಪಕ್ಷಿ ಮೊದಲಾದವು. * **ಚರಗಳು**=ಚಲಿಸುವ ಜೀವಿಗಳು (ಮನುಷ್ಯ, ಪ್ರಾಣಿ, ಕ್ರಿಮಿಗಳು ಇತ್ಯಾದಿ), * **ಅಚರಗಳು** =ಚಲಿಸದ ಜೀವಿಗಳು (ಗಿಡ, ಮರ, ಬಳ್ಳಿ ಇತ್ಯಾದಿ), * **ಪಂಚೀಕೃತ**=ಪಂಚೀಕರಣ ಪದ್ಧತಿಯಿಂದ; **ಪಂಚೀಕರಣ**=ಐದೈದು ಭಾಗಗಳು ಕೂಡಿ ಆಗಿರುವುದು.

**ಟಿಪ್ಪಣಿ-೧: ಪಂಚೀಕರಣ ತತ್ತ್ವ**-ಐದೈದು ಭಾಗಗಳು ಕೂಡಿ ಆಗಿರುವ ಈ ಪಂಚೀಕರಣ ಪದ್ಧತಿಯು ಉಪನಿಷತ್ತಿನಲ್ಲಿಲ್ಲ. ಛಾಂದೋಗ್ಯ ಉಪನಿಷತ್ತಿನಲ್ಲಿ ಅಗ್ನಿ, ಜಲ, ಭೂಮಿ ಈ ಮೂರೇ ಭೂತಗಳ ಸೃಷ್ಟಿಯನ್ನು ಹೇಳಿ, ಈ ಮೂರೂ ಕೂಡಿ ಜಗತ್ತು ಆಗಿರುವುದಕ್ಕೆ ತ್ರಿವೃತ್ಕರಣವನ್ನು ಉಪದೇಶಿಸಿರುತ್ತದೆ. ಇನ್ನು ಕೆಲವು ಉಪನಿಷತ್ತುಗಳಲ್ಲಿ ಆಕಾಶ, ವಾಯು ಎಂಬ ಇನ್ನೆರಡು ಭೂತಗಳೂ ಸೇರಿ ಐದು ಭೂತಗಳ ಸೃಷ್ಟಿಯಾಗಿದೆ ಎಂದು ಉಕ್ತವಾಗಿದೆ. ಇದರಿಂದ ಈ ಐದೂ ಕೂಡಿ ಜಗತ್ತಾಗಿದೆ ಎಂಬ ಪಂಚೀಕರಣದ ವಿಚಾರವು ಬಳಕೆಗೆ ಬಂದಿರುವುದು. ಸೃಷ್ಟಿ ಆಯಿತೆಂದು ಹೇಳುವುದೇ ಶ್ರುತಿಗೆ (ವೇದ) ಸಮ್ಮತವಿಲ್ಲದ್ದರಿಂದ ಸೃಷ್ಟಿಯ ಕ್ರಮದ ವಿಷಯದಲ್ಲಿ ಒಂದೊಂದು ಶ್ರುತಿಯು (ಉಪನಿಷತ್ತು) ಒಂದೊಂದು ಬಗೆಯಾಗಿ ಹೇಳಿರುವುದು ಎಂಬುದನ್ನು ಈ ಸಂದರ್ಭದಲ್ಲಿ ಮರೆಯಬಾರದು.

**ಪಾಠಾಂತರಗಳು-೧: ಭೂತಾಂಶಗಳು**=ಭೂತಾಂಶಗಳು (ಕು)

**ಪಾಠಾಂತರಗಳು-೨: ಪಂಚೀಕರಣದಿಂದಲಿ**=ಪಂಚೀಕರಣವದರಿಂ (ಕು)

**ಪಾಠಾಂತರಗಳು-೩: ಸ್ವೇದಜೋದ್ಭಿಜನೆರೆಜರಾಯುಜವಂಡಜವೆನಿಪ ನಾಲ್ಕು ಪ್ರಾಣಿಗಳು** =ಸ್ವೇದಜೋದ್ಭಿಜಜಾಂಡಜ ಜರಾಯುಜವಿಂತು ನಾಲ್ಕು ತೆರದ ಭೂತಗಳು (ಕು)

**ಪಾಠಾಂತರ-೪: ಪುರಗಗನಜಲ**=ಧರೆ ಗಗನ ಜಲ (ಕು)

**ಪಾಠಾಂತರ-೫: ತರುಲತಾಗುಲ್ಮಾದಿಗಳು ಕೇಳಚರವೆನಿಸುವುವು**=ತರುಲತಾಗುಲ್ಮಗಳು ಕೇಳಚಲವೆನಿಸುವುವು (ಕು)

**ಪಾಠಾಂತರ-೬: ನೆರೆಜರಾಯುಜವಂಡಜವೆನಿಪ ನಾಲ್ಕು ಪ್ರಾಣಿಗಳು**=ನೆರೆ ಜರಾಯುಜ ವಂಡಜವೆನಿಪ್ಪೆಲ್ಲ ಪ್ರಾಣಿಗಳು (ಅರಾಚೇ)

---

**ದಶಗುಣಾಧಿಕ ವಸುಧೆಯಿಂ ಜಲ;**
**ದಶಗುಣಾಧಿಕ ಜಲದಿ ಪಾವಕ;**
**ದಶಗುಣಾಧಿಕ ವಹ್ನಿಯಿಂ ಪವಮಾನವದರಿಂದ ।**

**ದಶಗುಣಾಧಿಕ ಗಗನವಗಣಿತ**
**ವೆಸೆವ ಹಮ್ಮಿಂದಂ ಮಹತ್ತಿಂ**
**ಪಸರಿಸಿದ ಸಪ್ತಾವರಣದಿಂದಾಯ್ತು ಮೂಲೋಕ ॥ ॥೧೫॥**

**ತಾತ್ಪರ್ಯ:** ಭೂಮಿಗಿಂತ ಹತ್ತುಪಟ್ಟು ಅಧಿಕಪ್ರಮಾಣದ್ದು ನೀರು; ನೀರಿಗಿಂತ ಅಗ್ನಿ ಹತ್ತುಪಾಲು ಅಧಿಕವಾಗಿದೆ; ವಾಯು ಅಗ್ನಿಗಿಂತ ಹತ್ತುಪಾಲು ಹೆಚ್ಚು; ವಾಯುಗಿಂತ ಹತ್ತುಪಾಲು ಆಕಾಶ ಹೆಚ್ಚು, ಇವೆಲ್ಲಕ್ಕಿಂತ ಬಹುಪಾಲು ಹೆಚ್ಚಾದುದು ಹಮ್ಮು ಮತ್ತು ಮಹತ್ತು (ಭೂಮಿ, ಆಕಾಶ, ಅಗ್ನಿ, ವಾಯು, ನೀರು, ಅಹಂ, ಮಹತ್) ಸಪ್ತಾವರಣಗಳಿಂದಲೇ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಲೋಕಗಳು ಸೃಷ್ಟಿಯಾಗಿವೆ.

**ಶಬ್ದಾರ್ಥ:** * **ದಶಗುಣಾಧಿಕ**=ಹತ್ತುಪಟ್ಟು ಹೆಚ್ಚು; * **ವಸುಧೆ**=ಭೂಮಿ; * **ಪಾವಕ**=ಅಗ್ನಿ, **ವಹ್ನಿ**=ಅಗ್ನಿ; * **ಪವಮಾನ**=ವಾಯು, ಗಾಳಿ; * **ಹಮ್ಮು**=ಅಹಂಕಾರತತ್ತ್ವ; * **ಮಹತ್ತು** (ಮಹತ್ತತ್ತ್ವ); **ಸಪ್ತಾವರಣ**=ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಅಹಂ, ಮಹತ್, ಇವು ಏಳು ಬಗೆಯ ಮುಸುಕೇ ಸಪ್ತಾವರಣ. **ಅಗಣಿತವೆಸೆವ**=ಇವೆಲ್ಲವುಗಳಿಗಿಂತ ಬಹುಪಾಲು ಹೆಚ್ಚಾದ.

---

**ಭೂತಪಂಚಕದಂಶಗಳ ಸಂ**
**ಘಾತ ಕೇಳನ್ಯೋನ್ಯವಿನಿಮಯ**
**ರೀತಿಯಿಂ ಸಂಜಾತವಾದವು ತತ್ತ್ವನಿಕರಗಳು; ।**
**ಈ ತೆರದೊಳದರಿಂದ ಬಹುವಿಧ**
**ಜಾತಿಭೇದಗಳಾಗಿ ತೋರ್ಪುವು;**
**ಭೌತಿಕವು ಪಂಚೀಕೃತಂಗಳು ಪ್ರಾಣಿಜಾತಗಳು ॥ ॥೧೬॥**

**ತಾತ್ಪರ್ಯ:** ಪೃಥ್ವೀ, ಜಲ, ವಾಯು, ಅಗ್ನಿ, ಆಕಾಶಗಳೆಂಬ ಪಂಚಮಹಾ ಭೂತಗಳ ಸಮೂಹದಲ್ಲಿ ಪ್ರತಿಯೊಂದು ಭೂತವೂ ಉಳಿದ ಪ್ರತಿಯೊಂದು ಭೂತದಲ್ಲಿಯೇ ಸೇರುವ ರೀತಿಯ ಫಲವಾಗಿ, ಬೇರೆಬೇರೆ ಬಗೆಬಗೆಯ ತತ್ತ್ವ ಸಮೂಹಗಳಾದವು. ಈ ರೀತಿಯಾಗಿ ಭೂತದಂಶಗಳು ಕೂಡಿ ಭೌತಿಕವಾಗಿ ನಾನಾರೀತಿಯ ಜಾತಿಭೇದಗಳ ಪಂಚೀಕರಣದಿಂದ ಸಮಸ್ತ ಪ್ರಾಣಿವರ್ಗ ಜನಿಸಿತು.

**ಶಬ್ದಾರ್ಥ:** * **ಭೂತ ಪಂಚಕ**=ಪೃಥ್ವೀ, ಜಲ, ವಾಯು, ಅಗ್ನಿ, ಆಕಾಶಗಳೆಂಬ ಪಂಚ ಮಹಾಭೂತಗಳು; * **ಅಂಶಗಳು**=ಭಾಗಗಳು; * **ಸಂಘಾತ**=ಸಮೂಹ; **ಅನ್ಯೋನ್ಯವಿನಿಮಯ ರೀತಿಯಿಂ**=ಪ್ರತಿಯೊಂದು ಉಳಿದ ಪ್ರತಿಯೊಂದರಲ್ಲಿಯೂ ಸೇರುವ ರೀತಿಯಿಂದ, **ಜಾತಿ ಭೇದಗಳಾಗಿ**=ಬೇರೆ ಬೇರೆ ಬಗೆಬಗೆಯ ವಸ್ತುಗಳಾಗಿ **ಭೌತಿಕ**=ಭೂತ ರೂಪಗಳಿಂದ ಕೂಡಿ, * **ಪಂಚೀಕೃತಂಗಳು**=ಪಂಚಭೂತಗಳಲ್ಲಿ ಒಂದೊಂದನ್ನು ಸಮವಾಗಿ ಎರಡೆರಡು ಭಾಗ ಮಾಡಿದ ೧೦ ಭಾಗಗಳಲ್ಲಿ ಮೊದಲ ೫ ಭಾಗಗಳನ್ನು ಪ್ರತ್ಯೇಕ ೪ ಭಾಗ ಮಾಡಿ ಆ ನಾಲ್ಕು ಭಾಗಗಳಲ್ಲಿ ಎರಡನೆಯ ಅರ್ಧಭಾಗ ಬಿಟ್ಟು ಉಳಿದ ಭಾಗಗಳನ್ನು ಸೇರಿಸಿದುದು (೪-೯ ನೋಡಿ) **ಪ್ರಾಣಿಜಾತಗಳು**=ಪ್ರಾಣಿಗಳ ಸಮೂಹವು

---

## ಪಂಚೀಕರಣಕ್ರಮ (೧೭-೨೭)

ಗರುವ, ಪಂಚೀಕರಣವೆಂಬುದ
ನರುಹುವೆನು ನೀನರಿವವೋಲ್ಮಿಗೆ;
ಧರಣಿ ಮೊದಲಾದೈದುಭೂತವಿಭಾಗದಿಂದಾದ ।
ಪರಿಪರಿಯ ತತ್ತ್ವಗಳ ಮೊತ್ತದ
ಪರಿಯಲಾದ ಪ್ರಯೋಜನಂಗಳ,
ಮೆರೆವ ತತ್ತನ್ನಾಮಗಳನಧಿದೇವತಾದಿಗಳ ॥ ॥೧೭॥

**ತಾತ್ಪರ್ಯ:** ಭೂಮಿ, ನೀರು, ಬೆಂಕಿ, ಆಕಾಶ, ಗಾಳಿ ಮೊದಲಾದ ಐದು ಮಹಾಭೂತಗಳೆಂಬ ವಿಭಾಗದಿಂದ ಆದ ನಾನಾ ಬಗೆಯ ತತ್ತ್ವಸಮೂಹದಿಂದ ಉಂಟಾದ ಪ್ರಯೋಜನಗಳನ್ನು ಅವುಗಳ ಸ್ಥಿತಿಯನ್ನು, ಅವುಗಳ ಹೆಸರುಗಳನ್ನು ಆಯಾ ತತ್ತ್ವಗಳ ಅಧಿದೇವತೆಗಳನ್ನು ನೀನು ಚೆನ್ನಾಗಿ ತಿಳಿಯುವಂತೆ ಶ್ರೇಷ್ಠನೆ, ನಿನಗೆ ಹೇಳುವೆನು ಕೇಳು.

**ಶಬ್ದಾರ್ಥ:** * ಮಿಗೆನೀನ್‌ಅರಿವವೋಲ್=ಚೆನ್ನಾಗಿ ನೀನು ತಿಳಿಯುವಂತೆ, * ತತ್ತಾನ್ನಾಮಗಳನು =ತತ್+ತಾನ್+ನಾಮಗಳನು

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಧರಣಿ ಮೊದಲಾದೈದು ಭೂತವ
ನೆರಡು ಭಾಗವ ಮಾಡುತದರೊಳು
ಭರದೊಳೈದರ್ಧಗಳಲೊಂದೊಂದರಲಿ ನಾಲ್ಕಾಗಿ ।
ಮರಳಿ ಭಾಗವ ಮಾಡುತವುಗಳ
ಬೆರಸೆ ವಿಂಶತಿಯಾಯ್ತು; ಕೂಡಲ್
ಪಿರಿಯ ಭಾಗಗಳೈದನಿಪ್ಪತ್ತೈದು ತತ್ತ್ವಗಳು ॥ ॥೧೮॥

**ತಾತ್ಪರ್ಯ:** ಪೃಥ್ವಿ, ಜಲ, ವಾಯು, ಅಗ್ನಿ, ಆಕಾಶವೆಂಬ ೫ ಭೂತಗಳನ್ನು ಮೊದಲು ಸರಿಯಾಗಿ ಎರಡೆರಡು ಪಾಲು ಮಾಡುವುದು, ಆಮೇಲೆ ಒಂದರ್ಧವನ್ನು ಬೇರೆ ಇಟ್ಟುಕೊಂಡು ಇನ್ನೊಂದರ್ಧವನ್ನು (ಉಳಿದ ೫ ಅರ್ಧ ಭಾಗಗಳನ್ನು) ಸರಿಯಾಗಿ ನಾಲ್ಕು ಪಾಲು ಮಾಡುವುದು, ಇದರಿಂದ ಅರ್ಧ ಪಾಲುಗಳು (೫ ಬೇಳೆ ಪಾಲುಗಳು) ೫x೪ ಇಪ್ಪತ್ತು ಆಗುವುದು. ಇದಕ್ಕೆ ಮೊದಲು ಭಾಗ ಮಾಡಿದ್ದ ೫ ಅರ್ಧ ಪಾಲುಗಳು ಸೇರಿ ಒಟ್ಟು ೨೫ ಪಾಲುಗಳು ಆದವು. ಇವುಗಳೇ ೨೫ ತತ್ತ್ವಗಳು (ಪಂಚವಿಂಶತಿ ತತ್ತ್ವಗಳು) ಆದವು. ಇದೊಂದು ಬಗೆಯ ಪಂಚೀಕರಣ.

**ಶಬ್ದಾರ್ಥ:** * ಧರಣಿ=ಭೂಮಿ; * ವಿಂಶತಿ=ಇಪ್ಪತ್ತು; ಕೂಡಲ್=ಸಂಕಲನಮಾಡಿದರೆ.

**ಟಿಪ್ಪಣಿ-೧:** ಇಲ್ಲಿ ಪಂಚೀಕರಣವೆಂದರೆ ಐದ್ಯೆದು ವೃತ್ತಿಗಳುಳ್ಳ ಐದ್ಯೆದು ಜಾತಿಯವುಗಳನ್ನು ಮಾಡುವುದು ಎಂದಿಟ್ಟುಕೊಳ್ಳಬೇಕು. ಈ ಕ್ರಮವನ್ನು ಶ್ರೀತೋಟಕಾಚಾರ್ಯರೆಂಬ ಹೆಸರಿನವರು ಪಂಚೀಕರಣ ಪದ್ಧತಿಯೆಂಬ ನಾಲ್ಕೇ ಪುಟದ ಚಿಕ್ಕ ಗ್ರಂಥದಲ್ಲಿ ಎತ್ತಿ ಹಿಡಿದು ಇದನ್ನು ಲಯ ಚಿಂತನೆಗೆ ವಿನಿಯೋಗಮಾಡಿ ತೋರಿಸಿದ್ದಾರೆ.

---

**ಬರಿಯ ನಭವೇ ಜ್ಞಾತೃ; ಭೂಕಳೆ**
**ವೆರೆಯೆ ಹಮ್ಮು; ಜಲಾಂಶ ಕೂಡ**
**ಲ್ಕರಿವ ಚಿತ್ತ; ಕೃಶಾನುಭಾಗದಿ ಬುದ್ಧಿ; ಮಾರುತನ ।**
**ಹೊರೆಗಲಸಿ ಮನವಾಯಿತಂತಃ**
**ಕರಣವೈದೀ ವ್ಯೋಮತತ್ತ್ವದ**
**ಪರಮಸಾರದಲುದಿಸಿದವು ಶುಕಯೋಗಿ ಕೇಳೆಂದ ॥ ॥೧೯॥**

**ತಾತ್ಪರ್ಯ:** ಶೂನ್ಯವಾದ ಆಕಾಶವೇ ಜ್ಞಾತೃ. ಇದಕ್ಕೆ ಭೂಮಿತತ್ತ್ವದ ಕಳೆಯು ಬೆರೆತರೆ ಹಮ್ಮು ಉಂಟಾಗುತ್ತದೆ. ಜಲಾಂಶ ಕೂಡಿದರೆ ಚಿತ್ತವಾಗುತ್ತದೆ. ತೇಜಸ್ಸಿನ ಆಕಾಶ ಸೇರಿದರೆ ಬುದ್ಧಿಯುಂಟಾಗುತ್ತದೆ. ವಾಯುವಿನ ಅಂಶದ ಭಾಗವನ್ನು ಕೂಡಿಕೊಂಡರೆ ಮನಸ್ಸಾಗುತ್ತದೆ. ಹೀಗೆ ಜ್ಞಾತೃ, ಹಮ್ಮು, ಚಿತ್ತ, ಮನಸ್ಸು, ಬುದ್ಧಿ ಈ ಐದೂ ಸೇರಿ ಆಕಾಶವೆಂಬ ಪರಮಸಾರದಲ್ಲಿ ಅಂತಃಕರಣ ಪಂಚಕ ಉದಿಸಿತು ಎಂದು ತಿಳಿಯಬೇಕು ಎಂಬುದಾಗಿ ಶುಕ ಯೋಗಿಗೆ ವ್ಯಾಸನು ಹೇಳಿದನು.

**ಶಬ್ದಾರ್ಥ:** * ಬರಿಯ ನಭ=ಶೂನ್ಯವಾದ ಆಕಾಶ; ಜ್ಞಾತೃ=ಜೀವನು; * ಭೂಕಳೆ=ಭೂತತ್ತ್ವ; * ಹಮ್ಮು=ಅಹಂಕಾರ; * ಕೃಶಾನುಭೋಗ=ತೇಜಸ್ಸಿನ ಆಕಾಶ; ಹೊರೆಗಲಸಿ (ವಾಯುವಿನ ಅಂಶದ)=ಭಾರವನ್ನು ಕೂಡಿಕೊಂಡು

**ಟಿಪ್ಪಣಿ:** ಜ್ಞಾತೃ=ಜೀವನು. ಇವನನ್ನು ಇಲ್ಲಿ ಕರಣಗಳ ಸಾಲಿನಲ್ಲಿ ಸೇರಿಸಲಾಗಿದೆ. ಇವನು ಮನಸ್ಸಿನಂತೆ ಕರಣನಲ್ಲದಿದ್ದರೂ ಕ್ರಿಯೆಗೆ ಕಾರಕನಾದ್ದರಿಂದ ಕರಣವೆಂದಿರಬಹುದೆಂದು ತೋರುತ್ತದೆ. ಅಥವಾ ಇದು ಉಪಾಧಿಯ ಕಡೆಗೆ ಲಕ್ಷ್ಯವನ್ನು ಕೊಟ್ಟು ಆಡಿರುವ ಮಾತೆಂದು ತಿಳಿಯಬಹುದು.

**ಪಾಠಾಂತರ:** ಭೂಕಳೆವೆರೆಯೆ=ಭೂಕಳೆವೆರಸೆ (ಕು)

---

**ವ್ಯಾನ ಕೇವಲ ಮಾರುತನಲೀ**
**ಪ್ರಾಣ ಭೂಭಾಗದಲಿ; ಜಲದಲ**
**ಪಾನ; ವಹ್ನಿಯ ಕಳೆಯಲಾದುದುದಾನವದರಿಂದ ।**
**ಈ ನಭದಲಿ ಸಮಾನವಾದುದು;**
**ನೂನವಿದು ಪ್ರಾಣಾದಿ ಪಂಚಕ;**
**ಮಾನನಿಧಿ, ಪವಮಾನತತ್ತ್ವದ ಸಾರದಿಂದಾಯ್ತು ॥ ॥೨೦॥**

**ತಾತ್ಪರ್ಯ:** ಮಾನನಿಧಿಯೇ ಕೇಳು, ಪ್ರಾಣಪಂಚಕದ ವಿವರವನ್ನು ಹೇಳುತ್ತೇನೆ. ಮಾರುತನಿಂದ ವ್ಯಾನವೆಂಬುದು ಹುಟ್ಟಿತು; ಮಾರುತನಿಗೆ ಭೂತತ್ತ್ವ ಸೇರಿ ಪ್ರಾಣವೆಂಬುದು ಉಂಟಾಯಿತು. ಜಲತತ್ತ್ವ ಸೇರಿ ಅಪಾನವಾಯಿತು. ಅಗ್ನಿಯ ತೇಜಸ್ಸಿನ ತತ್ತ್ವ ಸೇರಿ ಉದಾನವಾಯಿತು. ಅದಕ್ಕೆ ಆಕಾಶ ತತ್ತ್ವದ ಸಂಯೋಗದಿಂದ ಸಮಾನವೆಂಬುದು ಆಯಿತು. (ಈ ರೀತಿ ವಾಯುತತ್ತ್ವಸಾರದಿಂದ ಪ್ರಾಣಪಂಚಕ (ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನಗಳೆಂಬ ಐದು) ಉಂಟಾಯಿತು.

**ಶಬ್ದಾರ್ಥ:** ಮಾರುತ=ವಾಯು ತತ್ತ್ವ; ಭೂ ಭಾಗದಲಿ=ಭೂತತ್ತ್ವ ಸೇರಿ; ವಹ್ನಿ ಕಳೆಯಲಿ=ಅಗ್ನಿಯ ತೇಜಸ್ಸಿನ ತತ್ತ್ವದಲ್ಲಿ; ನಭ=ಆಕಾಶ ತತ್ತ್ವ; ನೂನ=ನಿಜ

**ಟಿಪ್ಪಣಿ:** ನೂನ=ಪ್ರಾಣ ಪಂಚಕವು ವಾಯು ತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲವೆಂದು ತಾತ್ಪರ್ಯ.

---

**ನೇತ್ರ ಬರಿಯನಲನಲಿ; ವಸುಧಾ**
**ಮಾತ್ರ ಬೆರೆಯಲು ಘ್ರಾಣ; ಬುಧಜನ**
**ಪಾತ್ರ ಕೇಳ್ಬೈ, ಜಿಹ್ವೆ ಜಲಭಾಗದಲಿ; ಪವನಾಂಶ ।**
**ಗಾತ್ರದಲಿ ವರ್ತಿಸುವ ತ್ವಕ್ಕದು;**
**ಶ್ರೋತ್ರ ಗಗನದ ಕಳೆಯಲಾದುದು;**
**ನೇತ್ರ ಮೊದಲಾದಿಂದ್ರಿಯಂಗಳು ವೀತಿಹೋತ್ರನಲಿ ॥ ॥೨೧॥**

**ತಾತ್ಪರ್ಯ:** ಅಗ್ನಿತತ್ತ್ವದಿಂದ ಜ್ಞಾನೇಂದ್ರಿಯ ಪಂಚಕವು ಸೃಷ್ಟಿಯಾದ ಬಗೆಯನ್ನು ಈ ಪದ್ಯದಲ್ಲಿ ಹೇಳಿದೆ. ಬರಿಯ ಅಗ್ನಿಯಿಂದ ಕಣ್ಣು ಉಂಟಾಯಿತು. ಅಗ್ನಿಗೆ ಪೃಥ್ವೀ ತತ್ವವು ಬೆರೆಯಲು ಮೂಗು ಉಂಟಾಯಿತು. ಅದೇ ಅಗ್ನಿಗೆ ಜಲಭಾಗವು ಕೂಡಲು ನಾಲಗೆಉಂಟಾಯಿತು. ಆ ಅಗ್ನಿಗೆ ವಾಯುವಿನ ಅಂಶ ಬೆರೆತಾಗ ಚರ್ಮ ಉಂಟಾಯಿತು. ಆಕಾಶದ ಕಳೆ ಅಗ್ನಿಯೊಂದಿಗೆ ಬೆರೆತಾಗ ಕಿವಿ ಉಂಟಾಯಿತು. ಎಲೈ ಜ್ಞಾನಿಗಳ ಮೆಚ್ಚುಗೆ ಪಡೆದ ಶುಕನೇ ಕೇಳುವಂಥವನಾಗು, ಈ ರೀತಿ ಅಗ್ನಿತತ್ತ್ವದ ಸಾರದಿಂದ ಜ್ಞಾನೇಂದ್ರಿಯ ಪಂಚಕವು ಭೌತಿಕವಾಗಿ ಉಂಟಾದ ಕಾರಣ ಅವು ಆತ್ಮನಲ್ಲ.

**ಶಬ್ದಾರ್ಥ:** * ನೇತ್ರ=ಕಣ್ಣು; * ಅನಲ=ಅಗ್ನಿ; * ವಸುಧಾ=ಭೂಮಿ; ಬೆರೆಯಲು=ಸೇರಲು; * ಘ್ರಾಣ=ಮೂಗು; ಬುಧಜನ=ಜ್ಞಾನಿಗಳು; ಜಿಹ್ವೆ=ನಾಲಗೆ; * ಪವನಾಂಶ=ವಾಯು; ಗಾತ್ರ=ಶರೀರ; * ತ್ವಕ್ಕು=ಚರ್ಮ; * ಶ್ರೋತ್ರ=ಕಿವಿ; * ವೀತ್ರಿಹೋತ್ರ=ಅಗ್ನಿತತ್ತ್ವ

**ಟಿಪ್ಪಣಿ–೧:** ಗಾತ್ರ–ಶರೀರ. ಜ್ಞಾನೇಂದ್ರಿಯಪಂಚಕವೂ ಅಗ್ನಿತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲವೆಂದು ತಾತ್ಪರ್ಯ.

**ಟಿಪ್ಪಣಿ–೨:** ವೀತಿಹೋತ್ರನಲಿ–ಈ ಪದದ ಮುಂದೆ 'ಆದವು' ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

---

ಬರಿಯ ಜಲದಿಂ ರಸ; ವಸುಧೆಗಳೆ
ವೆರೆಯೆ ಗಂಧ; ಧನಂಜಯಾಂಶದ
ಉರುವ ರೂಪು; ಸ್ಪರ್ಶವಾದುದು ಪವನಭಾಗದಲಿ; ।
ಮೆರೆವ ಶಬ್ದ ತ್ರಿದಶಮಾರ್ಗದ
ನೆರವಿನಿಂತೀ ಐದುವಿಷಯಗ
ಳರಿಯೆ ಜಲತತ್ತ್ವದೊಳಗುದಿಸಿದವೆಂದನಾಮುನಿಪ ॥ ॥೨೨॥

**ತಾತ್ಪರ್ಯ:** ಇನ್ನು ಜಲತತ್ತ್ವದ ಸಾರದಿಂದ ಪಂಚ ವಿಷಯಗಳು ಹುಟ್ಟಿದ್ದರಿಂದ ಅವು ಭೌತಿಕವೇ ಹೊರತು ಆತ್ಮನಲ್ಲ ಎಂದು ವ್ಯಾಸನು ಈ ಪದ್ಯದಲ್ಲಿ ಹೇಳುತ್ತಾನೆ. ಬರಿಯ ಉದಕದಿಂದ ರಸ ಉಂಟಾಯಿತು. ಜಲಕ್ಕೆ ಭೂ ತತ್ತ್ವದ ಕಳೆ ಬೆರೆತಾಗ ಗಂಧ ಉಂಟಾಯಿತು. ಜಲಕ್ಕೆ ಶ್ರೇಷ್ಠ ಅಗ್ನಿಅಂಶ ಸೇರಿದ್ದರಿಂದ ರೂಪ ಉಂಟಾಯಿತು. ವಾಯುವಿನೊಂದಿಗೆ ಜಲತತ್ವ ಸೇರಿ ಸ್ಪರ್ಶ ಉಂಟಾಯಿತು. ಆಕಾಶದೊಂದಿಗೆ ಜಲತತ್ವ ಸೇರಿದ್ದರಿಂದ ಶಬ್ದ ಉಂಟಾಯಿತು. ಹೀಗೆ ಜಲತತ್ವದಿಂದ ಐದು ವಿಷಯಗಳು ಉಂಟಾದ್ದರಿಂದ ಅವು ಭೌತಿಕವೇ ಹೊರತು ಆತ್ಮನಲ್ಲ ಎಂದು ವ್ಯಾಸನು ಹೇಳಿದನು.

**ಶಬ್ದಾರ್ಥ:** * ವಸುಧೆ ಕಳೆ ಬೆರೆಯೆ=ಭೂ ಅಂಶದ ಕಳೆ ಬೆರೆತಾಗ; ಧನಂಜಯಾಂಶದಲಿ=ಅಗ್ನಿ ಅಂಶದಿಂದ, ಉರುವ=ಶ್ರೇಷ್ಠ; ಪವನಭಾಗದಲಿ=ವಾಯುವಿನಿಂದ ಉಂಟಾದ; ತ್ರಿದಶಮಾರ್ಗದ ನೆರವಿಂ=ಆಕಾಶದ ಸಹಾಯದಿಂದ

**ಪಾಠಾಂತರ:** ಕಳೆವೆರೆಯೆ=ಕಳೆಬೆರೆಸೆ (ಕು); ನೆರವಿನಿಂತೀ=ಹೊರೆಯಲಿಂತೀ (ಕು); ಮೆರೆವ=ಉರುವ (ಕು); ಜಲತತ್ತ್ವದೊಳಗುದಿಸಿದ=ಜಲತತ್ವದಲಿ ವುದಿಸಿದ (ಕು)

---

ಬರಿಯ ಧರೆಯಿಂ ಪಾಯು; ಜಲಕಳೆ
ಬೆರೆಯಲಾಯಿತು ಗುಹ್ಯ; ಪಾವಕ
ನಿರಲದಾದುದು ಪಾದ; ಪಾಣಿಯು ಪವನಭಾಗದಲಿ; ।
ನಿರುತ ಗಗನಾಂಶದಲಿ ವಾಕ್ಕೀ
ತೆರದಿ ಕರ್ಮೇಂದ್ರಿಯಗಳಿವು ವಿ
ಸ್ಫುರಿಸಿದವು ಭೂತತ್ತ್ವದಿಂದಲಿ ಮಗನೆ ಕೇಳೆಂದ ॥ ॥೨೩॥

**ತಾತ್ಪರ್ಯ:** ಕರ್ಮೇಂದ್ರಿಯ ಪಂಚಕವೂ ಭೂತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲ ಎಂಬ ತಾತ್ಪರ್ಯವನ್ನು ಈ ಪದ್ಯದಲ್ಲಿ ವ್ಯಾಸರು ಶುಕನಿಗೆ ಹೇಳುತ್ತಾರೆ. ಬರಿಯ ಭೂತತ್ತ್ವದಿಂದ ಪಾಯು (ಗುದ ಸ್ಥಾನ, ಪುರೀಷ ಸ್ಥಾನ) ಹುಟ್ಟಿತು; ಭೂಮಿಗೆ ಜಲದ ತೇಜಸ್ಸು ಸಂಯೋಗವಾದುದರಿಂದ ಗುಹ್ಯೇಂದ್ರಿಯ (ಭಗ, ಶಿಶ್ನ, ಮೂತ್ರ ಸ್ಥಾನ) ಉಂಟಾಯಿತು. ಅಗ್ನಿ ತತ್ವ ಸೇರಿದ್ದರಿಂದ ಪಾದ

ಉಂಟಾಯಿತು. ವಾಯು ತತ್ತ್ವದ ಭಾಗ ಸೇರಿದ್ದರಿಂದ ಕೈಗಳು ಉಂಟಾದವು. ಆಕಾಶ ತತ್ತ್ವವು ಈ ಭೂತತತ್ತ್ವಕ್ಕೆ ಸೇರಿದ್ದರಿಂದ ವಾಕ್ಕು ಉಂಟಾಯಿತು. ಈ ರೀತಿ ಭೂತತತ್ತ್ವದಿಂದ ಕರ್ಮೇಂದ್ರಿಯ ಪಂಚಕ ಉಂಟಾದವು ಎಂದು ಮಗನೆ ತಿಳಿ.

**ಶಬ್ದಾರ್ಥ:** **ಪಾಯು**=ಗುದಸ್ಥಾನ (ಪುರೀಷ ಸ್ಥಾನ); **ಜಲಕಳೆ**=ಜಲ(ದ) ಕಳೆ; **ಗುಹ್ಯ**=ಭಗ, ಶಿಶ್ನ (ಮೂತ್ರ ಸ್ಥಾನ); ಇರಲದು=ಇರುವಿಕೆಯಿಂದ; * **ಪಾವಕ**=ಅಗ್ನಿ; * **ಪಾಣಿ**=ಕೈ; * **ಪವನ**=ವಾಯು; * **ವಿಸ್ಫುರಿಸಿದವು**=ಉಂಟಾದವು.

**ಪಾಠಾಂತರ-೧:** * ಚಿದಂಬರಯ್ಯನವರು ಇರದಲಿ ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ಆದರೆ ಇಲ್ಲಿ ಎಲ್ಲ ಪ್ರತಿಗಳಲ್ಲಿಯಂತೆ 'ಇರಲದು' ಎಂಬ ಪಾಠ ಸ್ವೀಕರಿಸಿದೆ (ಅನುವಾದಕ). ಬಹುಶಃ ಹೊ.ಚಿ. ಪಾಠ ಅಚ್ಚಿನದೋಷವಾಗಿದೆ.

**ಪಾಠಾಂತರ-೨:** **ಜಲಕಳೆಬೆರೆಯಲಾಯಿತು**=ಜಲಕಳೆವೆರಸಲಾಯಿತು (ಕು); **ನಿರಲದಾದುದು** =ಹೊರೆಯಲಾದುದು (ಕು); **ಪಾಣಿಯು ಪವನಭಾಗದಲಿ**=ಪಾಣಿಯೇ ಪವಮಾನಭಾಗದಲಿ (ಕು)

---

**ಧರೆಜಲಾನಲವಾಯುಗಗನದ**
**ಬರಿಯ ಭಾಗದಲಾದುವಿಂತೀ**
**ಪರಿಯ ಪಾಯುರಸಾಕ್ಷಿವ್ಯಾನಜ್ಞಾತೃವಿಂತೈದು; ।**
**ಬೆರೆಯೆ ನಭದಂಶದೊಳಗಾದವು**
**ನಿರುತವೀ ವಾಕ್ಛಬ್ದಶ್ರೋತ್ರಗ**
**ಳುರೆ ಸಮಾನಮುಮಿಂತು ತತ್ತ್ವಚತುಷ್ಟಯಗಳಿಂದ ॥ ॥೨೪॥**

**ತಾತ್ಪರ್ಯ:** ಭೂಮಿ, ನೀರು, ಬೆಂಕಿ, ಗಾಳಿ, ಆಕಾಶಗಳೆಂಬ ಪಂಚಭೂತಗಳ ಶುದ್ಧ ಭಾಗಾಂಶದಿಂದ ಪಾಯು, ರಸ, ಅಕ್ಷಿ, ವ್ಯಾನ, ಜ್ಞಾತೃ ಎಂಬ ಐದು ತತ್ತ್ವಗಳು ಉಂಟಾದವು. ಈ ತತ್ತ್ವಗಳು ಆಕಾಶದ ಅಂಶದಲಿ ಬೆರೆತು ವಾಕ್ಕು, ಶಬ್ದ, ಶ್ರೋತ್ರ, ಸಮಾನಗಳೆಂಬ ತತ್ತ್ವಚತುಷ್ಟಯಗಳನ್ನು ಹುಟ್ಟಿಸಿದವು.

**ಶಬ್ದಾರ್ಥ:** * **ಪಾಯು** (ಗುದ ಸ್ಥಾನ); * **ರಸ**=ಜಲ; * **ಅಕ್ಷಿ**=ನಯನ; * **ವ್ಯಾನ**=ಪ್ರಾಣ ಅಪಾನಗಳ ನಡುವೆ ಇರುವ ಪ್ರಾಣದ ವಿಶೇಷ ಮರ್ಮ, ಸಂಧಿ, ಕತ್ತುಗಳಲ್ಲಿರುವ ಪ್ರಾಣವೃತ್ತಿ (ಸಾಂಖ್ಯ) ವೃತ್ತಿ. * **ಜ್ಞಾತೃ**=ದೇಹದಲ್ಲಿರುವಂತೆ ತೋರಿ, ಇಂದ್ರಿಯಗಳ ಮೂಲಕ ಹೊರವಸ್ತುಗಳನ್ನು ಅರಿಯುವವನು. (ಪ.ಪ. ಪುಟ ೧೬೧); **ಬೆರೆಯೆ**=(ಧರೆ, ಜಲ, ಅನಲ, ವಾಯು, ಗಗನ ಇವುಗಳಿಗೆ)**ಕೂಡಿದರೆ**

**ಟಿಪ್ಪಣಿ:** ಈ ಪದ್ಯ ಮತ್ತು ಮುಂದಿನ ಪದ್ಯದ ತಾತ್ಪರ್ಯವು ಹಿಂದಿನ ೧೯ರಿಂದ ೨೩ರ ವರೆಗಿನ ಪದ್ಯಗಳ ಸಾರವಾಗಿದೆ.

---

**ಬೆರೆಯೆ ಮರುದಂಶಗಳು ಮಿಗೆ ತ್ವಕ್**
**ಸ್ಪರುಶ ಪಾಣಿ ಮನಸ್ಸು; ವಹ್ನಿಯ**
**ನೆರೆಯಲಾದುದು ರೂಪುಪಾದವುದಾನಬುದ್ಧಿಗಳು ।**

**ಉರುವ ಜಲದಂಶದಲಿ ಗುಹ್ಯವು**
**ನಿರುತ ಜಿಹ್ವಾಪಾನ ಚಿತ್ತವು;**
**ಧರೆಯ ಭಾಗದಿ ಗಂಧನಾಸಾಪ್ರಾಣಹಮ್ಮುಗಳು ॥ ॥೨೫॥**

**ತಾತ್ಪರ್ಯ:** ವಾಯು ಉಳಿದ ನಾಲ್ಕು ಭೂತಗಳೊಡನೆ ಸೇರಲಾಗಿ ತ್ವಕ್ಕು, ಸ್ಪರ್ಶ, ಪಾಣಿ, ಮನಸ್ಸು ಉಂಟಾದವು. ಉಳಿದ ನಾಲ್ಕು ಭೂತಗಳೊಡನೆ ಅಗ್ನಿಯ ಅಂಶ ಸೇರಲಾಗಿ ರೂಪು ಪಾದ, ಉದಾನ, ಬುದ್ಧಿಗಳು ಉಂಟಾದವು. ಜಲದಂಶ ಉಳಿದ ನಾಲ್ಕು ಭೂತಗಳೊಡನೆ ಸೇರಿ ಗುಹ್ಯ, ಜಿಹ್ವೆ, ಅಪಾನ, ಚಿತ್ತಗಳು ಉಂಟಾದವು. ಭೂಮಿಯ ಅಂಶ ಇತರ ನಾಲ್ಕು ಭೂತಗಳೊಡನೆ ಸೇರಿ ಗಂಧ, ಮೂಗು, ಪ್ರಾಣ, ಅಹಂಕಾರಗಳು ಉಂಟಾದವು.

**ಶಬ್ದಾರ್ಥ:** ಬೆರೆಯೆ=ಉಳಿದ ನಾಲ್ಕು ಭೂತಗಳೊಡನೆ ಸೇರಲಾಗಿ **ವಹ್ನಿಯ ನೆರೆಯಲಿ**=(ಉಳಿದ ನಾಲ್ಕು ಭೂತಗಳೊಡನೆ ಸೇರಿದ) ಅಗ್ನಿಯ ಅಂಶದಿಂದ.

**ಟಿಪ್ಪಣಿ:** ವಾಯು ಮೊದಲಾದ ಭೂತಗಳ ಅಂಶಗಳು ಯಾವ ಯಾವ ಇತರ ಭೂತಗಳೊಡನೆ ಸೇರಿ ಯಾವ ಯಾವ ವಸ್ತುಗಳು ಆದುವೆಂದು ಪದ್ಯ ೧೯ರಿಂದ ೨೫ರವರೆಗೆ ವರ್ಣಿಸಿದೆ.

---

**ಕರಣವೈದು, ಪ್ರಾಣಪಂಚಕ,**
**ನಿರುತವಿಂದ್ರಿಯವೈದು, ವಿಷಯೋ**
**ತ್ಕರುಷವೈದೆಲೆ ಮಗನೆ, ಕರ್ಮೇಂದ್ರಿಯಗಳಿಂತೈದು ।**
**ಧರೆಜಲಾನಲವಾಯುಗಗನದ**
**ಬೆರಕೆಯಾಗಲು ಕೇಳು ಪಂಚೀ**
**ಕರಣವಾದವು; ತಿಳಿಯಲಿಪ್ಪತ್ತೈದು ತತ್ತ್ವಗಳು ॥ ॥೨೬॥**

**ತಾತ್ಪರ್ಯ:** ೫ ಕರಣ ಪಂಚಕಗಳು (ಜ್ಞಾತೃ, ಅಹಂಕಾರ, ಚಿತ್ತ, ಬುದ್ಧಿ, ಮನಸ್ಸು) ೫ ಪ್ರಾಣ ಪಂಚಕಗಳು (ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ) ೫ ಕರ್ಮೇಂದ್ರಿಯಗಳು (ವಾಕ್, ಪಾದ, ಪಾಣಿ, ವಾಯು, ಉಪಸ್ಥ) ೫ ವಿಷಯಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ೫ ಪಂಚಭೂತಗಳೊಡನೆ (ಧರೆ, ಜಲ, ವಾಯು, ಅನಲ, ಗಂಧ) ಸೇರಲು ೨೫ ತತ್ವಗಳಾಗಿ ಪಂಚೀಕರಣವಾದವು.

**ಟಿಪ್ಪಣಿ-೧: * ಪಂಚೀಕರಣ ತತ್ವ** = ಬ್ರಹ್ಮ (ಆತ್ಮ)ನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಅಪ್ಪು (ನೀರು), ಅಪ್ಪಿನಿಂದ ಪೃಥ್ವಿ ಆದುವು. ಭೂಮಿಯೇ ಮೊದಲಾದ ಪಂಚ ಮಹಾಭೂತಗಳನ್ನು ಎರಡು ಭಾಗ ಮಾಡಿ ಉಳಿದ ಅರ್ಧವನ್ನು ೪ ಭಾಗ ಮಾಡಬೇಕು. ೫ ಅರ್ಧಗಳು ೨೦ ಭಾಗಗಳು- ಹೀಗೆ ೨೫ ತತ್ತ್ವಗಳಾಗುತ್ತವೆ. ಬರಿಯ ಆಕಾಶವು ಜ್ಞಾತೃ, ಭೂಮಿಯ ಅಂಶ ಸೇರಿದರೆ ಅಹಂಕಾರ, ನೀರಿನ ಅಂಶ ಸೇರಿದರೆ ಚಿತ್ತ, ಅಗ್ನಿಯ ಅಂಶ ಸೇರಿದರೆ ಬುದ್ಧಿ, ವಾಯುವಿನ ಅಂಶ ಸೇರಿದರೆ ಮನಸ್ಸು ಹೀಗೆ ಆಕಾಶ ತತ್ವದಿಂದ ಅಂತಃಕರಣವಾಯಿತು.

ವ್ಯಾನವು ಕೇವಲ ವಾಯು. ಭೂಮಿಯ ಅಂಶ ಸೇರಿ ಪ್ರಾಣವಾಯಿತು. ನೀರಿನ ಅಂಶ ಸೇರಿ ಅಪಾನವಾಯಿತು. ಅಗ್ನಿಯ ಅಂಶ ಸೇರಿ ಉದಾನ. ಆಕಾಶಾಂಶ ಸೇರಿ ಸಮಾನ. ಹೀಗೆ ವಾಯು ತತ್ತ್ವದಿಂದ ೫ ಪ್ರಾಣಗಳಾದವು.

ಬರಿಯ ಅಗ್ನಿಯು ಕಣ್ಣು. ಭೂಮಿಯ ಅಂಶ ಸೇರಿ ಮೂಗು, ಜಲಾಂಶ ಸೇರಿ ನಾಲಗೆ, ವಾಯುವಿನ ಅಂಶ ಸೇರಿ ಚರ್ಮ, ಆಕಾಶದ ಅಂಶದಿಂದ ಕಿವಿ, ಹೀಗೆ ಜ್ಞಾನೇಂದ್ರಿಯಗಳು ಅಗ್ನಿ ತತ್ತ್ವದಿಂದ ಉಂಟಾದವು.

ಬರಿಯ ಜಲವು ರಸ, ಭೂಮಿಯ ಅಂಶ ಸೇರಿ ಗಂಧ, ಅಗ್ನಿಯ ಅಂಶ ಸೇರಿ ರೂಪ, ವಾಯುವಿನ ಅಂಶ ಸೇರಿ ಸ್ಪರ್ಶ, ಆಕಾಶಾಂಶವು ಸೇರಿ ಶಬ್ದ ಹೀಗೆ ಜಲತತ್ತ್ವದಿಂದ ಐದು ವಿಷಯಗಳು ಆದವು.

ಬರಿಯ ಭೂಮಿಯಿಂದ ವಾಯು, ನೀರಿನ ಅಂಶವು ಸೇರಿದಾಗ ಗುಹ್ಯ ಅಗ್ನಿಯ ಅಂಶ ಸೇರಿ ಪಾದ, ವಾಯುವಿನ ಅಂಶ ಸೇರಿ ಕೈ, ಆಕಾಶಾಂಶವು ಸೇರಿ ವಾಕ್ಕು ಹೀಗೆ ಪೃಥ್ವೀ ತತ್ತ್ವದಿಂದ ೫ ಕರ್ಮೇಂದ್ರಿಯಗಳಾದವು. **(ಪುಟ ೨೬೯–೨೭೦ ಪರಮಾರ್ಥ ಪದಕೋಶ)**

**ಟಿಪ್ಪಣಿ–೨:** ಕರಣವೈದು=ಜ್ಞಾತೃ ಅಹಂಕಾರ, ಚಿತ್ತ, ಬುದ್ಧಿ, ಮನಸ್ಸು ಇವುಗಳ ಉತ್ಪತ್ತಿ ವಿಚಾರ ೧೯ನೇ ಪದ್ಯದಲ್ಲಿದೆ. ಇವುಗಳಲ್ಲಿ ಜ್ಞಾತೃವನ್ನು ಕುರಿತು ಒಂದು ಮಾತನ್ನು ಹೇಳಿದೆ. (ಟಿಪ್ಪಣಿ ೩ ನೋಡಿ)

**ಟಿಪ್ಪಣಿ–೩:** ಜ್ಞಾತೃ=ತಿಳಿಯುವವನು; ನಿಜವಾಗಿ ತಿಳಿಯುವವನು; ಕರಣವಲ್ಲದಿದ್ದರೂ ವಿಷಯ ಜ್ಞಾನಕ್ಕೆ ತಿಳಿಯುವವನೊಬ್ಬನು ಬೇಕಾಗುವುದು. ಆದ್ದರಿಂದ ಅದನ್ನು ಕರಣವೆಂದದ್ದಾಗಿದೆ. ಆ ಜ್ಞಾತೃ ಸ್ವರೂಪವು ಭೌತಿಕವಾದುದರಿಂದ ಆತ್ಮನಲ್ಲವೆಂದು ನೆನಪಿಡಬೇಕು. ಈ ಗ್ರಂಥದ ಕವಿಯ ಶಿಷ್ಯರಾದ ಕೈವಲ್ಯ ನವನೀತ ಬರೆದವರು ಜ್ಞಾತೃವನ್ನು ಕರಣಗಳ ಲೆಕ್ಕದಲ್ಲಿ ಹಿಡಿದಿದ್ದಾನೆ. ಸಾಮಾನ್ಯವಾಗಿ ಒಳಗಿನ ಕರಣಗಳೆಂದರೆ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಈ ನಾಲ್ಕು ಮಾತ್ರ. ಜ್ಞಾತೃವನ್ನು ಕರಣವೆನ್ನುವ ಒಂದು ಪಂಥವೇ ಇದೆ.

---

**ಮಗನೆ ಗಗನಕ್ಕೆ ಶಬ್ದವೊಂದೇ,**
**ಬಗೆಯೆ ಶಬ್ದಸ್ಪರ್ಶ ವಾಯುವಿ**
**ಗೊಗೆದ ವಹ್ನಿಗೆ ತಿಳಿಯೆ ಶಬ್ದಸ್ಪರ್ಶರೂಪುಗಳು, ।**
**ನೆಗಳಿ ಶಬ್ದಸ್ಪರ್ಶರೂಪುಗ**
**ಳೊಗೆವ ರಸವುಂ ಜಲಕೆ, ಪೃಥ್ವಿಗೆ**
**ಮಿಗಿಲು ಶಬ್ದಸ್ಪರ್ಶ ಮೊದಲಾದೈದು ವಿಷಯಗಳು ॥ ॥೨೭॥**

**ತಾತ್ಪರ್ಯ:** ಎಲೈ ಶುಕನೆ ಕೇಳು, ಆಕಾಶಾದಿಯಾಗಿ ಪಂಚಭೂತಗಳಿಗೆ ಒಂದೊಂದು ಗುಣ ಹೆಚ್ಚಾಗಿರುವುದನ್ನು ಹೇಳುತ್ತೇನೆ. ಪಂಚಭೂತಗಳಲ್ಲಿ ಐದನೆಯದಾದ ಆಕಾಶಕ್ಕೆ ಶಬ್ದವೊಂದೇ ವಿಷಯವಾಗಿರುವುದು. ವಿಚಾರಮಾಡಲಾಗಿ ನಾಲ್ಕನೆಯದಾದ ವಾಯುವಿಗೆ ಶಬ್ದಸ್ಪರ್ಶಗಳೆರಡೂ ವಿಷಯಗಳಾಗಿವೆ. ಮೂರನೆಯದಾದ ತೇಜಸ್ಸಿಗೆ ಶಬ್ದ ಸ್ಪರ್ಶ ರೂಪುಗಳೆಂಬ ಮೂರು ಗುಣಗಳು ವಿಷಯಗಳಾಗಿವೆ. ಎರಡನೆಯದಾದ

ಜಲಕ್ಕೆ ಶಬ್ದ ಸ್ಪರ್ಶ ರೂಪ ರಸಗಳೆಂಬ ನಾಲ್ಕು ವಿಷಯಗಳಾಗಿವೆ. ಮೊದಲನೆಯದಾದ ಭೂಮಿಗೆ ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಐದೂ ವಿಷಯಗಳಾಗಿರುವುವು.

**ಶಬ್ದಾರ್ಥ:** * **ಒಗೆದ**=ಉಂಟಾದ; * **ಮಿಗಿಲು**=ಹೆಚ್ಚಾಗಿ; * **ನೆಗಳೆ**=ಪ್ರಸಿದ್ಧವಾಗಿ

**ಟಿಪ್ಪಣಿ:** ಅಕಾರಾದಿಯಾಗಿ ಭೂತಗಳಿಗೆ ಒಂದೊಂದು ಗುಣವು ಹೆಚ್ಚಾಗಿರುವುದೆಂದು ತಾತ್ಪರ್ಯಂ

---

## ಅಧಿದೇವತೆಗಳು (೨೮-೨೯)

**ಕರಣಗಳಿಗಧಿದೇವತೆಗಳಾ**
**ಹರಿಹರಬ್ರಹ್ಮೇಂದುಗಳು; ದಿ**
**ಙ್ಮರುತ ದಿನಪತಿ ವರುಣರಶ್ವಿನಿಯರ್ಕಳಿಂದ್ರಿಯಕೆ; ।**
**ಗರುವ, ಕೇಳಗ್ನೀಂದ್ರವಿಷ್ಣುಗ**
**ಳುರುವ ರುದ್ರನು ಮೃತ್ಯುವಿವು ದೇ**
**ವರುಗಳಾ ಕರ್ಮೇಂದ್ರಿಯಂಗಳಿಗೆಂದು ಪೇಳುವರು ॥ ॥೨೮॥**

**ತಾತ್ಪರ್ಯ:** ಕರ್ಮೇಂದ್ರಿಯಗಳಿಗೆ ಮತ್ತು ಜ್ಞಾನೇಂದ್ರಿಯಗಳಿಗೆ ಪ್ರತ್ಯೇಕವಾದ ಅಧಿದೇವತೆಗಳಿದ್ದಾರೆಂದು ಈ ಪದ್ಯದಲ್ಲಿ ಹೇಳಲಾಗಿದೆ. ವಿಷ್ಣು ಚಿತ್ತಕ್ಕೆ, ಹರ ಅಹಂಕಾರಕ್ಕೆ, ಬ್ರಹ್ಮ ಬುದ್ಧಿಗೆ, ಚಂದ್ರ ಮನಸ್ಸಿಗೆ ಅಧಿದೈವವಾಗಿವೆ. ದಿಕ್ಕು ಶ್ರೋತ್ರಕ್ಕೆ ಮರುತು ತ್ವಕ್ಕಿಗೆ, ದಿನಪತಿ ಕಣ್ಣಿಗೆ, ವರುಣ ಜಿಹ್ವೆಗೆ, ಅಶ್ವಿನೀದೇವತೆಗಳು ಘ್ರಾಣಕ್ಕೆ ಅಧಿದೈವಗಳಾಗಿದ್ದಾರೆ. ಅಗ್ನಿ ವಾಕ್ಕಿಗೆ, ಇಂದ್ರ ಪಾಣಿಗೆ, ವಿಷ್ಣು ಪಾದಕ್ಕೆ, ಮೃತ್ಯು ಪಾಯುವಿಗೆ, ಗುಹ್ಯಕ್ಕೆ ರುದ್ರನೂ ಅಧಿದೇವತೆಗಳಾಗಿದ್ದಾರೆ.

**ಶಬ್ದಾರ್ಥ:** * **ಕರಣಗಳು**=ಇಂದ್ರಿಯಗಳು, * **ಇಂದು**=ಚಂದ್ರ, * **ಉರುವ**=ಶ್ರೇಷ್ಠ

**ಟಿಪ್ಪಣಿ-೧: ಹರಿಹರಬ್ರಹ್ಮೇಂದುಗಳು**-ಹರಿ ಚಿತ್ತಕ್ಕೆ, ಹರ ಅಹಂಕಾರಕ್ಕೆ, ಬ್ರಹ್ಮ ಬುದ್ಧಿಗೆ, ಇಂದು (ಚಂದ್ರ) ಮನಸ್ಸಿಗೆ, (ಚಿತ್ತಕ್ಕೆ ಅಧಿದೈವವು ಜೀವವೆಂದು ಕೈವಲ್ಯ ನವನೀತಕಾರನ ಮತವು. ಶ್ರೀ ಸುರೇಶ್ವರಾಚಾರ್ಯರು ಪಂಚೀಕರಣವಾರ್ತಿಕದಲ್ಲಿ ಆಜೀವವನ್ನೇ ಕ್ಷೇತ್ರಜ್ಞವೆಂದು ಕರೆದಿದ್ದಾರೆ.

**ಟಿಪ್ಪಣಿ-೨: ಬುದ್ಧಿಗೆ ಬ್ರಹ್ಮ**-ಬುದ್ಧಿಗೆ ಅಧಿದೈವ ಬೃಹಸ್ಪತಿ ಎಂದು ಕೈವಲ್ಯ ನವನೀತಕಾರರ ಮತ. ಶ್ರೀ ಸುರೇಶ್ವರಾಚಾರ್ಯ ಅಭಿಮತವೂ ಹೀಗೆ ಇದೆ. ಪಂಡಿತ ಪೀತಾಂಬರ ಪುರುಷೋತ್ತಮಜೀ ಅವರು ತಮ್ಮ ವಿಚಾರ ಚಂದ್ರೋದಯ ಗ್ರಂಥದಲ್ಲಿ ಬುದ್ಧಿಯ ಅಧಿದೈವವನ್ನು ಬ್ರಹ್ಮವೆಂದೇ ಹಿಡಿದಿರುವರು.

**ಟಿಪ್ಪಣಿ-೩: ಅಶ್ವಿನಿಯರು ಘ್ರಾಣಕ್ಕೆ**-ಕೈವಲ್ಯ ನವನೀತಕಾರರ ಅಭಿಪ್ರಾಯ ಅಧಿದೈವವೆಂದು. ಆದರೆ ಘ್ರಾಣದ ಅಧಿದೈವವು ಪೃಥ್ವಿ ಎಂದು ಪಂಚೀಕರಣ ವಾರ್ತಿಕಕಾರರಾದ ಶ್ರೀ ಸುರೇಶ್ವರಾಚಾರ್ಯರ ಮತವು.

**ಟಿಪ್ಪಣಿ-೪:** ಅಗ್ನೀಂದ್ರ ವಿಷ್ಣುಗಳುರುವ ರುದ್ರನ ಮೃತ್ಯುವಿವು ದೇವರುಗಳ ಕರ್ಮೇಂದ್ರಿಯಗಳು- ಅಗ್ನಿ ವಾಕ್ಕಿಗೆ, ಇಂದ್ರ ಪಾಣಿಗೆ=ವಿಷ್ಣು ಪಾದಕ್ಕೆ ರುದ್ರ ಗುಹ್ಯಕ್ಕೆ ಮೃತ್ಯುಪಾಯುವಿಗೆ ಅಧಿದೇವತೆಗಳು.

**ಟಿಪ್ಪಣಿ-೫:** ರುದ್ರ ಗುಹ್ಯಕೆ- ಗುಹ್ಯಕ್ಕೆ ಅಧಿದೇವತೆ ಬ್ರಹ್ಮವೆಂದು ಕೈವಲ್ಯನವನೀತಕಾರರ ಮತ್ತು ಶ್ರೀಸುರೇಶ್ವರಾಚಾರ್ಯರ ಮತವು.

---

**ಭೂತಪಂಚಕದೇವತೆಗಳು ವಿ**
**ಧಾತೃ ಹರಿರುದ್ರೇಶ ಮತ್ತು ಮ**
**ಹಾತಿಶಯದ ಸದಾಶಿವಾಖ್ಯರು; ಕಠಿಣ, ದ್ರವವುಷ್ಣ ।**
**ಧೌತವಿವರಗಳವರ ಧರ್ಮ; ಮ**
**ಹೀತಲಾಂಶದೊಳಸ್ಥಿ ಚರ್ಮವು**
**ಮಾ ತೆರದೊಳಿಹ ರೋಮ ನಾಡಿಯು ಮಾಂಸವಾಗಿಹವು ॥೨೯॥**

**ತಾತ್ಪರ್ಯ:** ಪಂಚಭೂತಗಳಿಗೆ ಅಧಿದೇವತೆಗಳು ಯಾರೆಂದರೆ ಬ್ರಹ್ಮ ಪೃಥ್ವಿಗೆ, ಹರಿ ನೀರಿಗೆ, ರುದ್ರ ತೇಜಕ್ಕೆ, ಈಶ್ವರ ವಾಯುವಿಗೆ ವಿಶೇಷಗುಣವುಳ್ಳ ಸದಾಶಿವನು ಆಕಾಶಕ್ಕೆ ಮುಖ್ಯರಾಗಿದ್ದಾರೆ. ಭೂಮಿಗೆ ಕಠಿಣ ಧರ್ಮ, ನೀರಿಗೆ ದ್ರವ ಧರ್ಮ, ಅಗ್ನಿಗೆ ಉಷ್ಣ ಧರ್ಮ, ವಾಯುವಿಗೆ ಶುಚಿ ಧರ್ಮ, ಆಕಾಶಕ್ಕೆ ಅವಕಾಶ ಧರ್ಮ, ಇವು ಬಹು ಸೂಕ್ತವಾದ ಪಂಚಭೂತಗಳ ಧರ್ಮಗಳಾಗಿವೆ. ಇನ್ನು ಅಸ್ಥಿ, ಚರ್ಮ, ರೋಮ, ನಾಡಿ, ಮಾಂಸಗಳು ಪೃಥ್ವಿಯ ಅಂಶಗಳಾಗಿವೆ.

**ಶಬ್ದಾರ್ಥ:** ವಿಧಾತೃ=ಬ್ರಹ್ಮ; ರುದ್ರೇಶ(ರುದ್ರ+ಈಶ)=ರುದ್ರ ಮತ್ತು ಈಶ್ವರ; **ಧೌತ**=ಚೊಕ್ಕಟ ಮಾಡುವುದು (ಶುಚಿ ಧರ್ಮ), ಇದು ವಾಯುವಿನ ಧರ್ಮ; ವಿವರ=ಶಬ್ದವು ಹುಟ್ಟುವುದಕ್ಕೆ ಆಧಾರವಾದ ಪೊಳ್ಳು (ಅವಕಾಶ) ಇದು ಆಕಾಶದ ಧರ್ಮ; **ಆ ತೆರದ**=ಬಹು ಸೂಕ್ಷ್ಮವಾದ; **ಅವರ**=ಆ ಪಂಚ ಭೂತಗಳ; **ಭೂತಪಂಚಕ ದೇವತೆಗಳು**=ವಿಧಾತೃ (ಬ್ರಹ್ಮ) ಪೃಥ್ವಿಗೆ, ಹರಿ ನೀರಿಗೆ, ರುದ್ರ ತೇಜಕ್ಕೆ, ಈಶ್ವರ ವಾಯುವಿಕೆ, ಸದಾಶಿವನು ಆಕಾಶಕ್ಕೆ.

**ಟಿಪ್ಪಣಿ:** ಕಠಿಣ ದ್ರವಉಷ್ಣ ಎಂಬುದಕ್ಕೆ ಕಠಿಣ ದೌಷ್ಟ್ರಪರು (ಕು) ಎಂಬ ಪಾಠ ಅನೇಕ ಪ್ರತಿಗಳಲ್ಲಿದೆ. ಈ ಮಾತುಗಳಿಗೆ ಅರ್ಥವು ಅನ್ವಯವೂ ಆಗುವುದಿಲ್ಲ. ಕೆಲವು ಹಳೇ ಪ್ರತಿಗಳಲ್ಲಿ ಕಠಿಣ ದ್ರವ ಉಷ್ಣ ಎಂಬ ಪಾಠಾಂತರ ಕಣ್ಣಿಗೆ ಬಿತ್ತು. ಅದನ್ನು ಇಲ್ಲಿ ಸ್ವೀಕರಿಸಿದೆ. ಇದು ಅನ್ವಯವಾಗುತ್ತದೆ.

**ಪಾಠಾಂತರ-೧:** ಕಠಿಣ ದ್ರವವೂ=ಕಠಿಣ ದ್ರವಸೇಕ (ಅರಾಸೆ) ಕಠಿಣ ದೌಷ್ಟ್ರಪರು (ಕು)

**ಪಾಠಾಂತರ-೨:** ಧೌತ ವಿವರ=ಭೂತ ವಿವರ (ಕು) ಧೌತ ಪಾಠವನ್ನು ಈ ಗ್ರಂಥದ ಸಂಸ್ಕೃತ ಭಾಷಾಂತರದಿಂದ ತೆಗೆದುಕೊಂಡಿದ್ದಾರೆ. (ಹಸ್ತ ಪ್ರತಿ)

**ಪಾಠಾಂತರ-೩:** ವಾಹೀತಲಾಂಶದೊಳಸ್ಥಿ=ಗಳೀತೆರದಲೇ ಅಸ್ಥಿ (ಕು)

**ಪಾಠಾಂತರ-೪:** ಚರ್ಮವು ಮಾತೆರದೊಳಿಹ=ಚರ್ಮಮಹೀತಳಾಂಶವು (ಕು)

---

## ಶರೀರದಲ್ಲಿರುವ ಭೂತಾಂಶಗಳು (೩೦)

ರಕ್ತಮೂತ್ರಶ್ಲೇಷ್ಮಮೇಧ
ಶ್ಶುಕ್ಲ ಜಲದಂಶಗಳು; ಕ್ಷುಧೆ, ತೃಷೆ
ಮತ್ತು ನಿದ್ರಾಲಸ್ಯ, ಸ್ತ್ರೀ ಸಂಗತಿಗಳಿಂತೈದು ।
ವ್ಯಕ್ತವಗ್ನ್ಯಂಶಗಳು; ಪಾರುವ,
ಸುತ್ತಿ ಸುಳಿವ, ನಿರೋಧಬಡಿಪ, ಸ
ಮಸ್ತಕ್ರಿಯೆ ಮರುದಂಶ; ಕಾಮಾದಿಗಳು ಗಗನಾಂಶ ॥ ॥೩೦॥

ತಾತ್ಪರ್ಯ: ರಕ್ತ, ಮೂತ್ರ, ಶ್ಲೇಷ್ಮ, ಕೊಬ್ಬು, ವೀರ್ಯ ಇವು ಐದು ಜಲಾಂಶಗಳು; ಹಸಿವು ಬಾಯಾರಿಕೆ ನಿದ್ರೆ ಜಡತ್ವ ಸ್ತ್ರೀ ಸಂಭೋಗ ಇವೈದು ಅಗ್ನಿ ಅಂಶಗಳು; ಹಾರುವುದು, ಸುತ್ತಿ ತಿರುಗುವುದು, ನಿಲ್ಲುವುದು, ಓಡುವುದು.........ಇವೇ ಮೊದಲಾದವು ವಾಯುವಿನ ಅಂಶಗಳು; ಕಾಮ, ಶೋಕ, ಕ್ರೋಧ, ಮೋಹ, ಭಯ ಮೊದಲಾದವು ಆಕಾಶ ತತ್ವದ ಅಂಶಗಳೆಂದು ತಿಳಿ.

ಶಬ್ದಾರ್ಥ: * ಮೇಧಸ್=ಕೊಬ್ಬು, * ಶುಕ್ಲ=ವೀರ್ಯ; * ಕ್ಷುಧೆ=ಹಸಿವು; * ತೃಷೆ=ಬಾಯಾರಿಕೆ; ಆಲಸ್ಯ =ಜಡತ್ವ; ಸ್ತ್ರೀಸಂಗತಿ=ಸ್ತ್ರೀ ಸಂಭೋಗ; * ಪಾರುವ=ಹಾರುವ; * ನಿರೋಧಪಡಿಪ =ತಡೆಯುವ.

---

## ಅಧಿದೇವತಾಸ್ವರೂಪ (೩೧)

ತತ್ತ್ವನಿಕರಗಳೆಲ್ಲ ಚೇತನ
ವೆತ್ತು ಚೈತನ್ಯಾತ್ಮನಿಂದಲಿ
ತತ್ತದುಚಿತಗಳಾದ ಚೇಷ್ಟೆಗಳಿಂದ ಚರಿಸುವುವು; ।
ಪ್ರತ್ಯಗಾತ್ಮಜ್ಯೋತಿ ತತ್ತ್ವದ
ಮೊತ್ತದೊಳು ಪ್ರತಿಫಲಿಸಲವೆ ಕೇ
ಳುತ್ತಮನೆ ಅಧಿದೇವತೆಗಳೆಂದಾದುದಭಿಧಾನ ॥ ॥೩೧॥

ತಾತ್ಪರ್ಯ: ಈ ಇಪ್ಪತ್ತೈದು ತತ್ತ್ವಗಳು ಅಚೇತನವಾದವು. ಇವು ಚೈತನ್ಯ ರೂಪಿ ಆತ್ಮನಿಂದ ಚೈತನ್ಯ ಹೊಂದಿ ತಮತಮಗೆ ಉಚಿತವಾದ ಚಟುವಟಿಕೆಗಳಲ್ಲಿ ತೊಡಗುತ್ತವೆ. ಒಳಗಿನ ಆತ್ಮದ ಪ್ರಭೆ (ಪ್ರತ್ಯಗಾತ್ಮ ಜ್ಯೋತಿ) ಭೂಮಿ ಮೊದಲಾದ ಭೂ ತತ್ತ್ವಗಳಲ್ಲಿ ತತ್ತ್ವಗಳೇ ಆತ್ಮನೆಂಬಂತೆ ಕಾಣಿಸಿಕೊಳ್ಳಲು ಅವೇ ಅಧಿದೇವತೆಗಳೆಂದು ಹೆಸರನ್ನು ಪಡೆದಿವೆ ಹೊರತು ಈ ಪಂಚವಿಂಶತಿ ತತ್ತ್ವಗಳಿಗೆ ಬೇರೆ ಬೇರೆಯಾಗಿ ಒಂದೊಂದು ವ್ಯಕ್ತಿಯಿರುವುದಿಲ್ಲ ಎಂದು ತಿಳಿಯಬೇಕು. ಒಂದು ಪಕ್ಷ ಎಲ್ಲಿಯಾದರೂ ಒಂದೊಂದು ರೂಪವನ್ನು ಹೇಳಿದ್ದರೆ ಅದು ಉಪಾಸನಾರ್ಥವಾಗಿ ಹೇಳಿದ್ದು ಎಂಬುದನ್ನೂ ನೆನಪಿಡಬೇಕು.

**ಶಬ್ದಾರ್ಥ:** ಪ್ರತ್ಯಗಾತ್ಮಜ್ಯೋತಿ=ಒಳಗಿನ ಆತ್ಮನ ಪ್ರಭೆ; ತತ್ತ್ವನಿಕರಗಳೆಲ್ಲ=ಭೂಮಿ ಮೊದಲಾದ ಭೂತತತ್ತ್ವಗಳೆಲ್ಲ; * ನಿಕರ=ಸಮೂಹ; ಪ್ರತಿಫಲಿಸಲು=ಆತ್ಮನು ತತ್ತ್ವಗಳ ಉಪಾಧಿಯುಳ್ಳವನಾಗಿ ಕಾಣಲು ಅಥವಾ ತತ್ತ್ವಗಳೇ ಆತ್ಮವೆಂಬಂತೆ ಕಾಣಿಸಿಕೊಳ್ಳಲು

**ಟಿಪ್ಪಣಿ–೧:** ಅವೆ=ಆ ತತ್ತ್ವಗಳೇ ಉಪಾಧಿಯುಳ್ಳ ಚೈತನ್ಯಗಳಾಗಿವೆ.

---

## ಪ್ರವೃತ್ತಿಯೇ ತ್ರಿಗುಣಾತ್ಮಕವು (೩೨)

ಪುತ್ರ ಕೇಳೈ ಕೋಶಪಂಚಕ
ತತ್ತ್ವಮಯವಾಗಿಪ್ಪುದದು ತಾ
ನಿತ್ತೆರದ ತನುಗಳಲಿ ಸೂಕ್ಷ್ಮಸ್ಥೂಲವೆಂದೆನಿಸಿ; ।
ತತ್ತ್ವರಜತಮವಾದಹಂಕೃತಿ
ವೃತ್ತಿಯೆಲ್ಲವ ತಿಳಿದು ನೋಡಲು
ಕರ್ತೃಕರ್ಮಕ್ರಿಯೆಗಳಾಗಿ ಪ್ರವರ್ತಿಸುತ್ತಿಹವು ॥ ॥೩೨॥

**ತಾತ್ಪರ್ಯ:** ಮಗನೆ ಕೇಳು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳು ಭೂಮಿ ಮೊದಲಾದ ಪಂಚಭೂತಗಳ ತತ್ತ್ವಗಳಿಂದ ಆಗಿವೆ. ಇದು ಎರಡು ತೆರನಾಗಿವೆ. ಸ್ಥೂಲ, ಸೂಕ್ಷ್ಮವೆಂಬ ಹೆಸರಿನ ಶರೀರಗಳಾಗಿರುವುದು ಒಂದು ತೆರ. ಸತ್ತ್ವ ರಜ ತಮವೆಂಬ ಮೂರು ಬಗೆ ಗುಣಗಳ ಅಹಂಕಾರದ ವೃತ್ತಿಗಳಾಗಿರುವುದು ಇನ್ನೊಂದು ತೆರ. ಇವೆಲ್ಲವನ್ನೂ ವಿಚಾರ ಮಾಡಲಾಗಿ ಈ ಮೂರು ಗುಣಗಳೇ ಕರ್ತೃ, ಕರ್ಮ, ಕ್ರಿಯೆಗಳಾಗಿ ಪ್ರವರ್ತಿಸುತ್ತವೆ.

**ಶಬ್ದಾರ್ಥ:** ತತ್ತ್ವಮಯವಾಗಿದ್ದುದು=ಭೂಮಿ ಮೊದಲಾದ ಭೂತತತ್ತ್ವಗಳಿಂದ ಆದದ್ದಾಗಿರುವುದು. ಇತ್ತೆರದ=ಎರಡು ಬಗೆಗಳಿಂದ; ಅಹಂಕೃತಿವೃತ್ತಿ=ಅಹಂಕಾರದ ವೃತ್ತಿಗಳು; * ಪ್ರವರ್ತಿಸುತ್ತಿಹವು =ತೊಡಗಿಕೊಳ್ಳುತ್ತವೆ.

---

## ಮಾಯಾವಿಲಾಸ (೩೩–೪೧)

ಸದಮಲಾನಂದೈಕರಸವನು
ಪೊದೆದು, ತಾನೇ ನಾಮರೂಪಂ
ಬುದ ತಳೆದು, ಬ್ರಹ್ಮಾಂಡತಂಡದಿ ಹಬ್ಬಿ ಪಸರಿಸುತ, ।
ಬುದುಬುದಾಕಾರದಲಿ ತೋರುವ
ದದು ಕಣಾ ಮಾಯಾವಿಲಾಸವು;
ವಿಧಿಹರಿಹರಾದಿಗಳಿದನು ಬಗೆಯದೆಯೆ ಮೋಹಿಪರು ॥ ॥೩೩॥

ತಾತ್ಪರ್ಯ: ಮಾಯಾವಿಲಾಸವು ನಿರ್ಮಲವೂ ಆನಂದಸ್ವರೂಪಿಯೂ ಆದ ರಸರೂಪಿ ನಿರ್ಗುಣಬ್ರಹ್ಮವನ್ನು ಆವರಿಸಿಕೊಂಡು ತನ್ನನ್ನೇ ತಾನೇ ಹಲವು ಬಗೆಯ ನಾಮರೂಪ ಗಳಿಂದ ಕರೆಸಿಕೊಳ್ಳುತ್ತದೆ. ಬ್ರಹ್ಮಾಂಡಗಳೆಲ್ಲವನ್ನು ಆವರಿಸಿ ಹರಡಿಕೊಂಡು ನೊರೆಯುಳ್ಳ ತೆರೆಯ ಹಾಗೆ ಕಾಣಿಸಿಕೊಳ್ಳುತ್ತದೆ. ಈ ಮಾಯಾವಿಲಾಸವನ್ನು ಚತುರ್ಮುಖಬ್ರಹ್ಮ, ವಿಷ್ಣು, ಮಹೇಶ್ವರರು ಅರ್ಥಮಾಡಿಕೊಳ್ಳದೆ ಅದಕ್ಕೆ ಅಧೀನರಾಗಿದ್ದಾರೆ. ಆದ್ದರಿಂದ ಈ ತ್ರಿಮೂರ್ತಿಗಳು ಸಗುಣಾತ್ಮರೇ ಹೊರತು ನಿರ್ಗುಣಾತ್ಮರಲ್ಲ.

**ಶಬ್ದಾರ್ಥ:** * **ಸದಮಲಾನಂದೈಕರಸ**=ನಿರ್ಗುಣ ಪರಬ್ರಹ್ಮ; **ಪೊದೆದು**=ಹೊದ್ದುಕೊಂಡು, ಆವರಿಸಿ ಹರಡಿಕೊಂಡು; **ತಾನೆ**=ಆ ಮಾಯೆಯೆ; **ಬುದುಬುದಾಕಾರದಲಿ**=ನೊರೆಯುಳ್ಳ ತೆರೆಯ ಹಾಗೆ; **ಬಗೆಯದೆಯೆ**=ತಿಳಿಯದೆಯೆ ಅರ್ಥಮಾಡಿಕೊಳ್ಳದೆ; **ಮೋಹಿಪರು**=ಅದಕ್ಕೆ ಮೋಹಗೊಳ್ಳುವರು, ಆಕರ್ಷಣೆಗೆ ಅಧೀನರಾಗಿದ್ದಾರೆ.

---

**ಗುರುವೆ ಚಿತ್ತಯಿಸಯ್ಯ, ಮಾಯೆಯ**
**ಹರಿಹರಬ್ರಹ್ಮಾದಿಗಳು ಗೆಲ**
**ಲರಿದೆನಲು ನಿಸ್ಸೀಮ ನಿರವಧಿಯಾದ ಸಂಸೃತಿಯ ।**
**ಶರಧಿಯನು ನಾವೆಂತು ದಾಂಟುವೆ**
**ವರೆಮರುಳುಗಳು, ತಾಮಸರು, ಕಾ**
**ಪುರುಷರಾಶಾಪಾಶಬದ್ಧರು, ವಿಷಯವಿಹ್ವಲರು ॥ ॥೩೪॥**

ತಾತ್ಪರ್ಯ: ಹರಿಹರಬ್ರಹ್ಮರೇ ಮೊದಲಾದವರು ಮಾಯೆಯನ್ನು ಗೆಲ್ಲಲು ಅಸಾಧ್ಯ ವೆಂದರೆ ಇನ್ನು ಚಂಚಲಚಿತ್ತರು, ಅಜ್ಞಾನಿಗಳು, ಕೆಟ್ಟ ಜನರು, ಪ್ರಾಪಂಚಿಕ ಆಸೆಗಳಿಗೆ ಒಳಗಾದವರು, ಹೊರಗಣ ಭೋಗಸಾಧನೆಗಳಲ್ಲಿ ತೊಳಲಾಡುವವರು, ಕಾಲದಲ್ಲಿ ಕೊನೆಯಿಲ್ಲದೆ ದೇಶದ ಕೊನೆಯಿಲ್ಲದೆ ಇರುವ ಸಂಸಾರ ಸಾಗರವನ್ನು ಹೇಗೆ ದಾಟುವರು? ಎಂದು ಗುರುವನ್ನು ಶುಕನು ಪ್ರಶ್ನಿಸಿದನು.

**ಶಬ್ದಾರ್ಥ: ಗೆಲಲು ಅರಿದು**=ಗೆಲ್ಲಲು ಅಸಾಧ್ಯ; **ನಿಸ್ಸೀಮ ನಿರವಧಿ**=ಈ ಎರಡು ಶಬ್ದಗಳಿಗೂ ಕೊನೆ ಇಲ್ಲದ್ದು ಎಂದು ಒಂದೇ ಅರ್ಥ; * **ಸಂಸೃತಿ**=ಸಂಸಾರ; * **ಶರಧಿ**=ಸಾಗರ; * **ಅರೆಮರುಳು**=ಚಂಚಲ ಚಿತ್ತರು; * **ತಾಮಸರು**=ಅಜ್ಞಾನಿಗಳು; **ಕಾಪುರುಷರು**=ಕೆಟ್ಟ ಜನರು; **ವಿಷಯ ವಿಹ್ವಲರು**=ಹೊರಗಣ ಭೋಗಸಾಧನಗಳಲ್ಲಿ ತೊಳಲುವರು

**ಟಿಪ್ಪಣಿ-೧: ನಿಸ್ಸೀಮ ನಿರವಧಿ**- ಈ ಎರಡು ಶಬ್ದಗಳಿಗೂ ಕೊನೆಯಿಲ್ಲದ್ದು ಎಂದು ಒಂದೇ ಅರ್ಥ. ಆದರೆ ನಿಸ್ಸೀಮ ಎಂಬುದನ್ನು ದೇಶದಲ್ಲಿ ಕೊನೆಯಿಲ್ಲದ್ದು ಎಂಬರ್ಥಕ್ಕೂ ಉಪಯೋಗ ಮಾಡಿಕೊಳ್ಳಬಹುದು. ಮಾಯೆಗೆ ದೇಶದ ಕೊನೆಯಿಲ್ಲವೆಂದರೆ ಬ್ರಹ್ಮಲೋಕವನ್ನೂ ಬಿಟ್ಟಿಲ್ಲ ಎಂದರ್ಥ. ಅದಕ್ಕೆ ಕಾಲದ ಕೊನೆಯಿಲ್ಲವೆಂದರೆ ಕಾಲ ಮೊದಲಾದವುಗಳ ಸತ್ಯತ್ವ ಕಲ್ಪನೆಯು ಇರುವವರೆಗೆ ಅದು ಬಿಟ್ಟು ಹೋಗುವುದಿಲ್ಲ ಎಂದರ್ಥ.

---

**ಕೇಳು ಶುಕಯೋಗೀಂದ್ರ, ಮಾಯೆಯ**
**ಮೂಲಮುಟ್ಟಿ ವಿಚಾರಿಸಲು ಪುಸಿ**
**ಕಾಳಲಾ ಅವಿಚಾರಸಿದ್ಧ; ವಿಚಾರಿಸಿದೊಡಿಲ್ಲ ; ।**
**ಹೇಳಹೇಳಲು ದೊಡ್ಡಿತಾಗಿ ವಿ**
**ಶಾಲವೆನಲುಚ್ಚಂಗಿಕೋಟೆಯ**
**ವೋಲು ಹೆಚ್ಚುವದಾಲಿಸಿದರೊಮ್ಮೊಳನು ಕೇಳೆಂದ ॥ ॥೩೫॥**

**ತಾತ್ಪರ್ಯ:** ಎಲೈ ಶುಕ ಯೋಗೀಂದ್ರನೆ ಕೇಳು, ಮಾಯೆಯ ಒಳಹೊಕ್ಕು ಆಮೂಲಾಗ್ರವಾಗಿ ವಿಚಾರಮಾಡಿದರೆ ಅದು ಅವಿಚಾರದಂದ (ಅಸತ್ಯದಿಂದ) ಕೂಡಿದೆ. ಜೊಳ್ಳಾದ ಕಾಳು ಹೊರಗೆ ಉಬ್ಬಿದ ಕಾಳಿನಂತೆ ಕಂಡರೂ ಒಳಗೇನಿರುವುದಿಲ್ಲ. ಹಾಗೇ ಸುಳ್ಳಾದುದು. ಆದ್ದರಿಂದ ಸದಸದ್ವಿವೇಕದಿಂದ ನಿಧಾನವಾಗಿ ವಿಮರ್ಶೆ ಮಾಡಿದರೆ ಮಾಯೆ ಶೂನ್ಯವಾದುದು. ಇಂಥ ಮಾಯೆಯನ್ನು ಕುರಿತು ಹೇಳುತ್ತಾ ಹೋದರೆ ಹೇಗಿರುತ್ತದೆ ಎಂದರೆ, ಚಿತ್ರದುರ್ಗದ ಬಳಿ ೩೬ ಮೈಲಿ ದೂರದಲ್ಲಿರುವ ಉಚ್ಚಂಗಿ ಕೋಟೆಯು ದೂರಕ್ಕೆ ಹಿರಿದಾಗಿಯೂ, ಒಳ ಹೊಕ್ಕರೆ ಕಿರಿದಾಗಿಯೂ ಕಾಣುತ್ತದೆ ಎಂದು ನೋಡಿದವರು ಹೇಳುತ್ತಾರೆ. ಅದೇ ರೀತಿಯಾಗಿ ಮಾಯೆಯ ಒಳಗನ್ನು ವಿಚಾರಮಾಡಿದರೆ ಅದು ಹೊರಗೆ ಅಧಿಕವಾಗಿ ಕಾಣುತ್ತದೆ. ಆದರೆ ನಿಜಕ್ಕೂ ಮಾಯೆ ಮಿಥ್ಯೆ ಆಗಿರುತ್ತದೆ, ಅತ್ಯಲ್ಪವಾಗಿರುತ್ತದೆ.

**ಶಬ್ದಾರ್ಥ:** * **ಮೂಲ ಮುಟ್ಟಿ ವಿಚಾರಿಸಲು**=ಒಳಹೊಕ್ಕು ಆಮೂಲಾಗ್ರವಾಗಿ ವಿಚಾರಮಾಡಿದರೆ **ಪುಸಿಕಾಳಲಾ!**=ಜಳ್ಳಾದ ಕಾಳಿನಂತೆ ಅಥವಾ ಸುಳ್ಳಾದುದು (ಪುಸಿ) ಮತ್ತು ತುಚ್ಛವಾದುದು. (ಕಾಳ=ಕಾಡು ಎಂಬ ಭೇದದಲ್ಲಿ); * **ಒಮ್ಮೊಳನು**=(ಒಮ್ಮೆ+ಒಳನು)=ಒಂದು ಬಾರಿ ಒಳಗೆ ಸತ್ಯ ಅಡಗಿದೆಯೇ ಎಂಬುದನ್ನು; * **ಆಲಿಸಿದರೆ**=ವಿಚಾರ ಮಾಡಿದರೆ, ಕೇಳಿ

**ಟಿಪ್ಪಣಿ–೧:** ಅಂತಹ ಮಾಯೆಯನ್ನು ಹೇಳ ಹೇಳುತ್ತಾ ಹೋದರೆ ಅದೇ ದೊಡ್ಡದಾಗಿ ಮಕ್ಕಳು ಆಡುವುದಕ್ಕೆ ಕಟ್ಟಿಕೊಳ್ಳುವ ಉಚ್ಚಂಗಿ ದುರ್ಗದ ಹಾಗೆ ಬರು ಬರುತ್ತಾ ದೊಡ್ಡದಾಗುವುದು ಈ ಮಾಯಾ ಸ್ವರೂಪವನ್ನು ವಿವರಿಸುವೆನು ಕೇಳು (ಕು)

**ಟಿಪ್ಪಣಿ–೨:** ವಿವರಿಸಿದಷ್ಟೂ ಈ ಮಾಯೆಯಾದರೋ ಹುಡುಗರು ಆಡುವುದಕ್ಕಾಗಿ ಕಟ್ಟಿಕೊಳ್ಳತಕ್ಕ ಕೋಟೆಯಂತೆ ಇರುತ್ತದೆ (ಬೆಂ)

**ಟಿಪ್ಪಣಿ–೩:** ಈ ವಿಷಯವನ್ನು ಮಾತಾಡುತ್ತಾ ಹೋದರೆ ಅದೇನು ಉಚ್ಚಂಗಿ ಕೋಟೆಯಷ್ಟು ದೊಡ್ಡದೇನೋ ಎನ್ನಿಸುತ್ತದೆ. ವಿಚಾರಿಸಿ ಒಳಹೊಕ್ಕರೆ ಬಲು ಚಿಕ್ಕದು ಎಂದು ತಿಳಿಯುತ್ತದೆ.

**ಟಿಪ್ಪಣಿ–೪:** ಹಿರಿದಾದ ವಿಚಾರವೆಂದು ಹೇಳೋಣವೆಂದರೆ ಅದು ಉಚ್ಚಂಗಿಯ ಕೋಟೆಯಂತೆ ದೊಡ್ಡದಾಗಿ ಕಾಣುತ್ತದೆ. ಒಳಹೊಕ್ಕು ನೋಡಿದರೆ ಒಮ್ಮೊಳದಷ್ಟು ಕುಬ್ಜವಾಗುತ್ತದೆ. (ಒಮ್ಮೆ ಬಳಸು ಎಂಬುದಕ್ಕೆ ಬದಲಾಗಿ ಇಲ್ಲಿ ಸಂಪಾದಕರು ಒರ್+ಮೊಳ ಒಮ್ಮೊಳ=ಒಂದು ಮೊಳದಷ್ಟು ಎಂದು ಅರ್ಥೈಸಿದ್ದಾರೆ).

**ಟಿಪ್ಪಣಿ-೫:** * ಹೊಸಕೆರೆ ಚಿದಂಬರಯ್ಯನವರು ಈ ಕೋಟೆಯ ಇತಿಹಾಸವನ್ನು ಕುರಿತು ಹೇಳುತ್ತಾ, ೧೧-೧೨ ಶತಮಾನಗಳಲ್ಲಿ ಪಾಂಡ್ಯರಾಜರ ಆಳ್ವಿಕೆಗೆ ಒಳಪಟ್ಟಿತ್ತೆಂದೂ, ದಾವಣಗೆರೆಗೆ ೧೦ ಮೈಲಿ ದೂರದಲ್ಲಿ (ಚಿತ್ರದುರ್ಗಕ್ಕೆ ೩೬ ಮೈಲಿ ದೂರ), ಇರುವ ಈ ಉಚ್ಚಂಗಿ ದುರ್ಗ ಪಾಂಡ್ಯ ರಾಜ್ಯದ ರಾಜಧಾನಿ ಆಗಿತ್ತೆಂದೂ ಉಚ್ಚಶೃಂಗವೆಂದೂ ಪುರಾಣದಲ್ಲಿ ಪ್ರಸಿದ್ಧವಾಗಿತ್ತೆಂದೂ ರೈಸ್ ಅವರು ಸಂಪಾದಿಸಿದ ಚಿತ್ರದುರ್ಗ ಜಿಲ್ಲೆಯ ಗೆಜೆಟಿಯರ್ ಇಂದ ಕೋಟೆಯ ವಿವರಗಳನ್ನು ಉದ್ಧರಿಸಿದ್ದಾರೆ.

**ಟಿಪ್ಪಣಿ-೬:** ಕೋಟೆಯು ಸುಮಾರು ನಾಲ್ಕು ಮೈಲು ಸುತ್ತಳತೆ ಇರಬಹುದು. ಈ ಕೋಟೆಯಲ್ಲಿ ಹಿಂದಿನ ಅಶ್ವಶಾಲೆ, ಗಜಶಾಲೆ, ಗರಡಿಯಮನೆ, ಉಯ್ಯಾಲೆಕಂಬ ಮೊದಲಾದವುಗಳ ಗುರ್ತುಗಳಿನ್ನೂ ಕಾಣುತ್ತಿವೆ. ಈ ಕೋಟೆಯನ್ನು ಬಿಟ್ಟರೆ ೩೬ ಮೈಲು ದೂರದಲ್ಲಿರುವ ಚಿತ್ರದುರ್ಗದವರೆಗೂ ಇಂಥ ಕೋಟೆ ಇಲ್ಲ.

---

**ನೀಲರುಚಿಯಭ್ರದಲಿ, ದೀಪ**
**ಜ್ವಾಲೆಯೊಳು ಕಾಳಿಕೆಯು, ಮತ್ತೆ ಚ**
**ಧಾಳಿಸುವ ಚಂದ್ರಮನ ನಡುವೆ ಕಳಂಕು ತೋರ್ಪಂತೆ ।**
**ಕಾಳೆನಿಪ ಪುಸಿಮಾಯೆ ಬ್ರಹ್ಮನೊ**
**ಳಾಳಿ ಹೊಕ್ಕಾಶ್ರಯಿಸಿ ಮೆರೆವುದು;**
**ಹೇಳಲೇನದು ಮಿಥ್ಯ; ತಥ್ಯದವೋಲು ತೋರುವುದು ॥ ॥೩೬॥**

**ತಾತ್ಪರ್ಯ:** ಆಕಾಶದಲ್ಲಿ ನೀಲ ವರ್ಣ ಕಪ್ಪುಬಣ್ಣವು ದೀಪದ ಉರಿಯಲ್ಲಿ, ಕಪ್ಪು ಬಣ್ಣವು ಮತ್ತೆ ಪ್ರಕಾಶಮಾನನಾದ ಚಂದ್ರನಲ್ಲಿ ಕಳಂಕ ತೋರಿ ಬರುವಂತೆ ಕೀಳಾದ ಸುಳ್ಳು ಮಾಯೆ ಬ್ರಹ್ಮನನ್ನು ಆವರಿಸಿಕೊಂಡು ಮೆರೆದಿದ್ದರೂ ಅದನ್ನು ವಿಚಾರದೃಷ್ಟಿಯಿಂದ ಕಂಡಾಗ ಆ ಮಾಯೆ ಕಾಣದೆ ಹೋಗುತ್ತದೆ. ಆದ್ದರಿಂದ ಅದನ್ನು ಸುಳ್ಳೆಂದು ಹೇಳಬೇಕು. ಸ್ಥೂಲದೃಷ್ಟಿಗೆ ಕಾಣುವುದರಿಂದ ಅದನ್ನು ನಿಜವೆಂದು ಹೇಳಬೇಕಷ್ಟೆ.

**ಶಬ್ದಾರ್ಥ:** ನೀಲರುಚಿಯು=ಕಪ್ಪು ಬಣ್ಣವು; ಅಭ್ರದಲಿ=ಆಕಾಶದಲ್ಲಿ; ಕಾಳು=ಕಾಡು, ಕೀಳು, ಮಿಥ್ಯ; ತಥ್ಯದವೋಲು=ವಿಚಾರ ದೃಷ್ಟಿಯಲ್ಲಿ ನೋಡಿದರೆ ಹೊರ ನೋಟಕ್ಕೆ ನಿಜವಿದ್ದಂತೆ ಕಾಣುತ್ತದೆ ಅಷ್ಟೆ ಹುಸಿಮಾಯೆ=ಸುಳ್ಳು ಮಾಯೆ; ಕಳಂಕು=ದೋಷ (ಕಲೆ) ಕಪ್ಪು)

**ಟಿಪ್ಪಣಿ-೧:** ತಥ್ಯದವೋಲು=ವಿಚಾರ ದೃಷ್ಟಿಯಿಂದ ನೋಡಿದರೆ ಅದು ಕಾಣದೆ ಹೋಗು ವುದರಿಂದ ಅದನ್ನು ಸುಳ್ಳೆಂದು ಹೇಳಬೇಕು. ಈ ಅಭಿಪ್ರಾಯವು ಮುಂದಿನ ಪದ್ಯದಲ್ಲಿರುವುದು. ಸ್ಥೂಲ ದೃಷ್ಟಿಗೆ ಕಾಣುವುದರಿಂದ ಅದನ್ನು ನಿಜವೆಂದು ಹೇಳಬೇಕು.

---

**ಇದಮೆನುತ್ತಿದಿರಿಟ್ಟ ಕತದಿಂ**
**ದದು ದಿಟದವೋಲಿರ್ಪುದಂತದ**
**ವಿಧಿಪ ಗುರುಮುಖದಿಂದ ತಿಳಿಯಲದಿಲ್ಲವೆನಿಸುವುದು; ।**

**ಸದಸದಾತ್ಮಿಕೆಯೆನಿಪ ಮಾಯೆಯ**
**ಹದವನಿರ್ವಚನೀಯವದರಿಂ**
**ದದರ ಪರಿಯನು ಪೇಳೆ ದುರ್ಘಟವೆನಿಸಿ ತೋರುವದು॥ ॥೩೭॥**

**ತಾತ್ಪರ್ಯ:** ಇದು ಮಾಯೆ ಎಂದು ಸ್ಪಷ್ಟವಾಗಿ ಕಣ್ಣೆದುರಿಗೆ ಕಂಡು ಬರುವ ಕಾರಣದಿಂದ ಅದು ನಿಜದ ಹಾಗೆ ಭಾಸವಾಗುತ್ತದೆ. ಆ ರೀತಿ ಇರುವ ಮಾಯೆಯ ಮೇಲೆ ಅಧಿಕಾರ ನಡೆಸಬಲ್ಲ (ಆ ಮಾಯೆಯಿಂದ ಮುಕ್ತಗೊಳಿಸಬಲ್ಲ) ಗುರುಮುಖೋಪದೇಶದಿಂದ ತಿಳಿವನ್ನು ಪಡೆದಾಗ ಮಾಯೆ ಇಲ್ಲವಾಗುತ್ತದೆ. ಎಂದರೆ ಮಾಯೆಯ ಮಿಥ್ಯಾ ಸ್ವರೂಪ ಮನಕ್ಕೆ ಅರಿವಾಗುತ್ತದೆ. ಹೀಗೆ ಹೊರ ನೋಟಕ್ಕೆ ನಿಜವಾದುದು ಆದರೆ ಒಳನೋಟಕ್ಕೆ ಸುಳ್ಳಾದುದು ಎಂದು ಕಾಣುವ ಮಾಯೆಯನ್ನು ಹೀಗೆ ಎಂದು ಹೇಳಲಿಕ್ಕೆ ಬರುವುದಿಲ್ಲ ಮತ್ತು ಅದರ ರೀತಿ ನೀತಿ ನೋಡಿದಾಗ ಅದು ಕೆಟ್ಟ ಸಂಗತಿ ಎನಿಸುತ್ತದೆ.

**ಶಬ್ದಾರ್ಥ:** **ದಿಟ**=ನಿಜ; **ಇದಂ**=ಇದು; **ಅದ+ವಿಧಿಪ**=ಆ ಮಾಯೆಯ ಮೇಲೆ ಆಜ್ಞೆ ನಡೆಯುವಂಥ (ಮಾಯೆಯನ್ನು ದಾಟಿದಂಥ ಎಂದು ತಾತ್ಪರ್ಯ) ಅಂಥ ಗುರು ಮುಖದಿಂದ ಕೇಳಿದರೆ ಮಾತ್ರ ಮಾಯೆಯ ಮಿಥ್ಯಾತ್ವ ಮನಕ್ಕೆ ಅಳಪಡುವುದು. **ಸತ್+ಅಸತ್ ಆತ್ಮಿಕೆ**=ನಿಜವಾದುದು ಮತ್ತು ಸುಳ್ಳಾದುದು, **ಅನಿರ್ವಚನೀಯ**=ಹೀಗೇ ಎಂದು ಹೇಳಲಿಕ್ಕೆ ಬರುವುದಿಲ್ಲ.

---

**ಹರಿಹರಬ್ರಹ್ಮರುಗಳಿಂತೀ**
**ಪರಿಯೊಳಿಹ ಮಾಯೆಯನು ಗೆಲುವಡೆ**
**ಹಿರಿದು ಯತ್ನವ ಮಾಡುತಜಪಾಯೋಗ ಮೊದಲಾದ ।**
**ಪರಿಪರಿಯ ಸಾಧನೆಗಳಿಂದದ**
**ಪರಿಹರಿಸಲರಿಯದೆ ನಿರಂತರ**
**ಶರಣುಹೊಕ್ಕೇ ಬದುಕಿದರು ತತ್ಪಾದಪಂಕಜವ ॥ ॥೩೮॥**

**ತಾತ್ಪರ್ಯ :** ಈ ರೀತಿಯೊಳಿರುವ ಮಾಯೆಯನ್ನು ಗೆಲ್ಲಲು ಹರಿಹರಬ್ರಹ್ಮರು ಎಷ್ಟೆಷ್ಟೋ ಮಹಾಪ್ರಯತ್ನಗಳನ್ನು ಮಾಡಿದರೂ ಗೆಲ್ಲಲಾಗಲಿಲ್ಲ. ಎಡಬಿಡದೆ ೨೧೬೦೦ ಸಲ ಶ್ವಾಸ ಉಚ್ಛ್ವಾಸಗಳಿಂದ ಸದಾ ಹಂಸಮಂತ್ರವನ್ನು ಉಚ್ಚರಿಸುತ್ತ ಅನುಸಂಧಾನ ಮಾಡುವ ಅಜಪಾಯೋಗವನ್ನು ಇತರ ನಾನಾ ಬಗೆಯ ಯೋಗಸಾಧನೆಗಳನ್ನು ಮಾಡಿದರೂ ಆ ಮಾಯೆಯನ್ನು ಅರ್ಥಮಾಡಿಕೊಳ್ಳಲಾಗದೆ ಮಾಯಾ ಸ್ವರೂಪಳಾದ ಆದಿಶಕ್ತಿಯ ಪಾದಕಮಲಗಳಿಗೆ ಶರಣುಹೋಗಿ ಬದುಕುವವರಾದರು.

**ಶಬ್ದಾರ್ಥ:** **ತತ್ಪಾದಪಂಕಜವ**=ಆ ಮಾಯಾ ಸ್ವರೂಪಳಾದ ಆದಿಶಕ್ತಿಯ ಪಾದಕಮಲಗಳನ್ನು

**ಟಿಪ್ಪಣಿ-೧: ಅಜಪಾಯೋಗ-** ೨೧೬೦೦ ಸಂಖ್ಯೆಯ ಶ್ವಾಸ ಉಚ್ಛ್ವಾಸಗಳು ಯಾವಾಗಲೂ ಹಂಸ ಮಂತ್ರವನ್ನು ಉಚ್ಚರಿಸುತ್ತಿರುವಂತೆ ಅನುಸಂಧಾನ ಮಾಡುತ್ತಿರುವುದು.

**ಟಿಪ್ಪಣಿ–೨:** * ಉಚ್ಛ್ವಾಸ ನಿಶ್ವಾಸ ರೂಪದಲ್ಲಿ ಜೀವನು ಜಪಿಸುವ ಮಂತ್ರ, ಉಳಿದ ಮಂತ್ರಗಳಂತೆ ಇದು ಜಪಿಸುವುದಲ್ಲ. ಆದ್ದರಿಂದ ಇದಕ್ಕೆ ಅಜಪಾ ಎಂದು ಹೆಸರು. ಒಂದು ದಿನದಲ್ಲಿ ೨೧೬೦೦ ಉಚ್ಛ್ವಾಸ ನಿಶ್ವಾಸಗಳು ಆಗುತ್ತವೆ. ಇದನ್ನು ಯೋಗಿಗಳು ಹಂಸವೆಂದು ಕರೆಯುತ್ತಾರೆ. ಸೋಽಹಂ ಹಂಸಃ ಎಂಬುದೇ ಹಂಸ ಗಾಯತ್ರಿ ಮಂತ್ರ, ಸಾಧಕ ಯೋಗಿಯು ಪ್ರಾಣಾಪಾನಗಳ ಅನುಸಂಧಾನ ಮಾಡುವಾಗ ಇದನ್ನು ನುಡಿಯದಿದ್ದಾಗಲೂ ಜಪಿಸಿದಂತೆಯೇ ಆಗುತ್ತದೆ. ಇದನ್ನು ಅಜಪಾ ಗಾಯತ್ರಿ, ಹಂಸ ಗಾಯತ್ರಿ ಎಂದೂ ಕರೆಯುತ್ತಾರೆ (ಪ ಪ ಪುಟ ೧೨)

---

**ಅದು ನಿಮಿತ್ತೆಲೆ ಮಗನೆ ಅಣಿಮಾ**
**ದ್ಯಧಿಕ ಸಿದ್ಧಿಯಿನಾವಳೊಬ್ಬಳ**
**ಪದಪಯೋಜರಜಃಪ್ರಭಾವಮಹಾಪ್ರಸಾದವನು ।**
**ಮುದದಿ ಪಡೆದದರಿಂದ ಲೋಕ**
**ಕ್ಕಧಿಕರೆನಿಸಿಯೆ ಮೆರೆದರಾ ವಿಧಿ**
**ಮಧುರಿಪುಪ್ರಮುಖರು ಕಣಾ ಸತ್ತ್ವಾದಿಗುಣಯುತರು ॥ ॥೩೯॥**

**ತಾತ್ಪರ್ಯ:** ಆ ಕಾರಣದಿಂದಲೇ ತ್ರಿಮೂರ್ತಿಗಳು ಮಾಯೆಯ ಪಾದಕಮಲಗಳ ಧೂಳಿನ ಪ್ರಭಾವವನ್ನು ಮಹಾಪ್ರಸಾದವೆಂದು ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಹಿರಿಯ ಅಷ್ಟಸಿದ್ಧಿಗಳನ್ನೂ ಹೊಂದಿ ಆ ಸಿದ್ಧಿಯಿಂದ ಲೋಕದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಪ್ರಮುಖರಾಗಿ ಮೆರೆದಿದ್ದಾರೆ. ಸತ್ತ್ವದ ಮೇಲಿನ ಅಧಿಕಾರಿಯಾಗಿ ವಿಷ್ಣು, ರಜೋಗುಣದ ಅಧಿಕಾರಿಯಾಗಿ, ಬ್ರಹ್ಮ ತಮೋಗುಣದ ಅಧಿಕಾರಿಯಾಗಿ, ಈಶ್ವರನು ಲೋಕದಲ್ಲಿ ಮೆರೆದಿದ್ದಾರೆ ಎಂದರೆ ಮಾಯೆಯ ಪ್ರಭಾವಕ್ಕೆ ಈ ಮೂರು ದೇವತೆಗಳೂ ಒಳಗಾಗಿದ್ದಾರೆ.

**ಶಬ್ದಾರ್ಥ:** ಪಡೆದದರಿಂದ (ಪಡೆದು+ಅದರಿಂದ)=ಪಡೆದು ಆ ಸಿದ್ಧಿಯಿಂದ; **ಸತ್ತ್ವಾದಿ ಗುಣಯುತರು**=ಸತ್ತ್ವದ ಮೇಲಿನ ಅಧಿಕಾರಿ ವಿಷ್ಣು, ರಜೋಗುಣದ ಅಧಿಕಾರಿ ಬ್ರಹ್ಮ, ತಮೋಗುಣದ ಅಧಿಕಾರಿ ಈಶ್ವರ.

**ಟಿಪ್ಪಣಿ: ಅಣಿಮಾದಿ ಅಧಿಕ ಸಿದ್ಧಿಯಿಂ**=ಅಣಿಮಾ (ಸಣ್ಣದು), ಮಹಿಮಾ (ದೊಡ್ಡದು), ಗರಿಮಾ (ಭಾರ), ಲಘಿಮಾ (ಹಗುರ), ಪ್ರಾಪ್ತಿ (ಬೆರಳ ತುದಿಗೆ ಚಂದ್ರನಾದರೂ ಇಳಿದು ಬರುವುದು), ಪ್ರಾಕಾಮ್ಯ (ತನ್ನ ಮನಸ್ಸಿಗೆ ಬಂದದ್ದೆಲ್ಲ ಆಗುವುದು), ಈಶತ್ವ (ಪ್ರಭುತ್ವ), ವಶಿತ್ವ (ಸ್ಥಾವರಗಳು ಕೂಡ ಆಜ್ಞೆಯನ್ನು ನಡೆಸುವುದು).

---

**ಬ್ರಹ್ಮಸನ್ನಿಧಿಯಲ್ಲಿ ಮಾಯಾ**
**ಧರ್ಮವಹ ಸರ್ಗಸ್ಥಿತಿಯು ಲಯ**
**ಕರ್ಮಗಳು ತೋರುವವು ಮಿಥ್ಯಾಜಾತಭೂತಗಳು; ।**

ಹಮ್ಮು ಹೃತ್ಕರ್ಮೇಂದ್ರಿಯಂಗಳ
ನೆಮ್ಮಿ ಜಾಗ್ರತ್ಸ್ವಪ್ನಗಳ ತಾ
ಬ್ರಹ್ಮದಾಧಾರದಲಿ ತೋರ್ದಡಗುವುದು ಕೇಳೆಂದ ॥ ॥೪೦॥

**ತಾತ್ಪರ್ಯ:** ಬ್ರಹ್ಮನ ಸನ್ನಿಧಾನದಲ್ಲಿ ಮಾಯಾಧರ್ಮವಾಗಿಹ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳು ಹುಟ್ಟಿರುವಂತೆ ಸುಳ್ಳುಸುಳ್ಳಾಗಿ ಕಾಣುವುವು. ಅಹಂಕಾರವು ಹೃದಯವನ್ನು ಆಶ್ರಯಿಸಿ ಸ್ವಪ್ನವನ್ನು ಕಂಡರೆ, ಕರ್ಮೇಂದ್ರಿಯಗಳನ್ನು ಆಶ್ರಯಿಸಿ ಎಚ್ಚರವನ್ನು ಹೊಂದುತ್ತವೆ. ಇವೆಲ್ಲವೂ ಬ್ರಹ್ಮದ ಆಧಾರದಿಂದ ತೋರುವಂಥದ್ದಾಗಿರುವುದರಿಂದ ಬ್ರಹ್ಮನ ಅರಿವು ಉಂಟಾದ ಕೂಡಲೇ ಈ ಮಾಯೆ ಕಾಣದೆ ಅಡಗಿ ಹೋಗುತ್ತದೆ.

**ಶಬ್ದಾರ್ಥ:** * **ಸರ್ಗಸ್ಥಿತಿಯು ಲಯಕರ್ಮಗಳು**=ಸೃಷ್ಟಿ ಸ್ಥಿತಿ ಲಯ ಕಾರ್ಯಗಳು; ಮಿಥ್ಯಾಜಾತ ಭೂತಗಳು ಹೃದಯವನ್ನಾಶ್ರಯಿಸಿ ಸ್ವಪ್ನವನ್ನೂ, ಕರ್ಮೇಂದ್ರಿಯಗಳನ್ನೂ, ಹುಟ್ಟಿರುವಂತೆ ಸುಳ್ಳು ಸುಳ್ಳಾಗಿ ಕಾಣುವುವು; * **ಬ್ರಹ್ಮದ ಆಧಾರದಲ್ಲಿ ತೋರ್ದು ಅಡಗುವುದು**= ಹೃತ್‌ಕರ್ಮೇಂದ್ರಿಯಗಳನ್ನು ಆಶ್ರಯಿಸಿ ಎಚ್ಚರವನ್ನು; **ನೆಮ್ಮಿ**=ಆಶ್ರಯಿಸಿ; **ಹಮ್ಮು**=ಅಹಂಕಾರ; **ಬ್ರಹ್ಮದ ಅರಿವು ಉಂಟಾದ ಕೂಡಲೆ**=ಮಾಯೆ ಕಾಣಿಸಿಕೊಂಡು ಅಲ್ಲಿಯೇ ಮಾಯವಾಗುತ್ತದೆ.

**ಪಾಠಾಂತರ:** ಸರ್ಗ ಸ್ಥಿತಿಯು ಲಯ=ಸ್ವರ್ಗಾಂತರ ಸ್ಥಿತಿ (ಕು) ಜಾಗ್ರತ್ಸ್ವಪ್ನಗಳ =ಜಾಗ್ರಾದಿಗಳ ಮಾಳ್ಪದು (ಕು); ತೋರ್ದಡಗುವುದು=ತೋರಡಗುವುದು (ಕು)

---

ತನ್ನನರಿಯದವಿದ್ಯೆಯಿಂದು
ತ್ಪನ್ನವಾದುದು ಜಗವದೆಂತೆನೆ
ತನ್ನ ನಿದ್ರೆಯ ವಶದಿ ಮಲಗಿರೆ ಕನಸು ತೋರ್ಪಂತೆ; ।
ತನ್ನ ನಿಜವರಿದಾಗ ತಾನೇ
ಕಾರ್ಣವದವೋಲ್ಸಕಲವೆಲ್ಲವು
ತನ್ನೊಳಡಗಲು ಪೂರ್ಣನದ್ವಯಬ್ರಹ್ಮವಾಗಿಹನು ॥ ॥೪೧॥

**ತಾತ್ಪರ್ಯ:** ತನಗಿಂತ ಬೇರೆಯಾದ ಜಗತ್ತನ್ನು ನೋಡುತ್ತ ತನ್ನನ್ನು ತಾನು ತಿಳಿಯದಿದ್ದಾಗ ಅವಿದ್ಯೆಯ ಫಲವಾಗಿ ನಿದ್ರಾವಶನಾಗಿ ಜಡವಾಗಿ ಬಿದ್ದಾಗ ಆ ನಿದ್ರಾಭರದಲ್ಲಿ ಕನಸು ತೋರುವ ಹಾಗೆ ಕರ್ಮೇಂದ್ರಿಯಾತ್ಮಕವಾದ ಈ ಜಡ ದೃಕ್ಕಿನಿಂದ ಜಗತ್ತು ಉತ್ಪನ್ನವಾಗಿರುತ್ತದೆ. ತನ್ನ ನಿಜಸ್ವರೂಪವನ್ನು ತಿಳಿದಾಗ ತಾನೇ ಅಖಂಡವಾದ ಸಮುದ್ರದ ಹಾಗೆ ವಿಸ್ತಾರವಾಗಿ ಹರಡಿಕೊಂಡು ಸಮಸ್ತವೂ ತನ್ನಲ್ಲೇ ಅಡಗಿ ತಾನೇ ಪೂರ್ಣನೂ ಅದ್ವಯನೂ ಆದ ಬ್ರಹ್ಮವಾಗಿರುವನು ಎಂದು ತಿಳಿ.

**ಶಬ್ದಾರ್ಥ:** ತಾನು=ತನಗಿಂತ ಬೇರೆಯಾದ ಜಗತ್ತನ್ನು ನೋಡುತ್ತಿದ್ದ ತಾನು ಏಕಾರ್ಣವದವೋಲ್ =ಅಖಂಡವಾದ ಸಮುದ್ರದ ಹಾಗೆ

**ಪದವಿಭಾಗ:** * ತನ್ನನರಿಯದವಿದ್ಯೆಯಿಂದ=ತನ್ನನು+ಅರಿಯುದ+ಅವಿದ್ಯೆಯಿಂದ; * ಪೂರ್ಣನದ್ವಯ=ಪೂರ್ಣನು+ಅದ್ವಯ

## ಮಾಯಾ ನಿರಸನದ ಉಪಾಯ (೪೨-೪೩)

**ಈ ವಿಧದ ಮಾಯೆಯನು ಗೆಲುವಡೆ**
**ಭಾವಶುದ್ಧಿಯನೊಂದಿ, ಗುರುವಿನ**
**ಪಾವನಾಂಘ್ರಿಯ ಪಿಡಿದು, ತತ್ಕಾರುಣ್ಯವನು ಪಡೆದು, ।**
**ಜೀವಪರಮಾತ್ಮೈಕ್ಯವೆನಿಪ ಮ**
**ಹಾ ವಿಶೇಷಾನುಭವವಲ್ಲದೇ**
**ಭಾವಿಸಲು ಬೇರೊಂದುಪಾಯವದಿಲ್ಲ ನೋಡೆಂದ ॥ ॥೪೨॥**

**ತಾತ್ಪರ್ಯ:** ಈ ರೀತಿಯಿಂದ ಮಾಯೆಯನ್ನು ಗೆಲ್ಲಬೇಕಾದರೆ ಪರಿಶುದ್ಧವಾದ ಮನಸ್ಸನ್ನು ಹೊಂದಿರಬೇಕು, ಗುರುವಿನ ಶ್ರೇಷ್ಠಪಾದಗಳನ್ನು ಆಶ್ರಯಿಸಿರಬೇಕು. ಆತನ ಕೃಪಾಕಟಾಕ್ಷವನ್ನು ಗಳಿಸಿ ಜೀವಾತ್ಮನೂ, ಪರಮಾತ್ಮನೂ ಒಂದೇ ಎಂಬ ಅಭೇದಜ್ಞಾನವನ್ನು ಅನುಭವಪೂರ್ವಕ ವಿಶೇಷವಾಗಿ ಹೊಂದಬೇಕು. ಹಾಗಲ್ಲದೆ ವಿಚಾರಮಾಡಿ ನೋಡಲು ಬೇರಾವಮಾರ್ಗವೂ ಇಲ್ಲವೆಂದು ತಿಳಿ.

**ಶಬ್ದಾರ್ಥ:** * ಭಾವಶುದ್ಧಿ=ಪರಿಶುದ್ಧವಾದ ಮನಸ್ಸು; * ಪಾವನಾಂಘ್ರಿ=ಶ್ರೇಷ್ಠ ಪಾದಗಳು; * ತತ್ಕಾರುಣ್ಯ=ಗುರುವಿನ ಅನುಗ್ರಹ; ಜೀವಪರಮಾತ್ಮೈಕ್ಯ=ಜೀವಾತ್ಮನೂ ಪರಮಾತ್ಮನೂ ಒಂದೇ ಎಂಬ ಅಭೇದ ಜ್ಞಾನ; * ಭಾವಿಸಲು=ವಿಚಾರಮಾಡಲು

**ಟಿಪ್ಪಣಿ:** ಈ ಪದ್ಯಕ್ಕೆ ಚಿದಂಬರಯ್ಯನವರು ಟೀಕೆ ಬರೆದಿಲ್ಲ. ಟಿಪ್ಪಣಿ, ಶಬ್ದಾರ್ಥ ಅನುವಾದಕನದು.

**ಪಾಠಾಂತರ:** ಮಹಾವಿಶೇಷಾನುಭವವಲ್ಲದೇ=ಮಹಾನುಭವವನು ಪಡೆವುದಲ್ಲದೆ (ಪಾ-ಅರಾಸೇ) ಮಹಾನುಬೋಧೆಗಳನುಭವಲ್ಲದೆ (ಪೇ) ಬೋಧಾನುಭವಲ್ಲದೆ (ಅರಾಸೇ-ಅ)

---

**ಗುರುವಿನುಪದೇಶದಲಿ ಮಾಯಾ**
**ವರಣವಳಿದು, ಮತಾಂತರದಿ ಸಂ**
**ಚರಿಪ ಸಂಶಯ ಹೋಗಿ, ಕರ್ಮಗಳೆಲ್ಲ ಲಯವಾಗಿ, ।**
**ಪರಿಹರಿಸಿ ಜನ್ಮಗಳ, ಜರೆಮರೆ**
**ಮರಣ ಕನಸಿನ ಬಂಧ ಕೆಟ್ಟೆ**
**ಚ್ಚರದ ಸಹಜಾನಂದ ಪದದೊಳಗೊಂದಿ ಸುಖಿಯಹನು ॥ ॥೪೩॥**

**ತಾತ್ಪರ್ಯ:** ಗುರುವಿನ ಹಿತಬೋಧೆಯಿಂದ ಮಿಥ್ಯಾ ಸಂಬಂಧವಾದ ಮಾಯೆಯೆಂಬ ಮುಸುಕನ್ನು ಕಳೆದು, ಆ ಮತವು ನಿರ್ದುಷ್ಟವಾದುದು, ಈ ಮತವು ನಿರ್ದುಷ್ಟವಾದುದು ಎಂದು ಬೇರೆ ಬೇರೆ ಮತಗಳಲ್ಲಿ ಗುಣ ಭ್ರಾಂತಿಯಿಂದ ಉಂಟಾಗುವ ಸಂದೇಹಗಳೆಲ್ಲ ನಾಶವಾಗಿ, ಪಾಪಕರ್ಮಗಳೂ, ಪುಣ್ಯ ಕರ್ಮಗಳೂ ಲಯವಾಗಿ, ಹುಟ್ಟು ಸಾವುಗಳ ಬಂಧವನ್ನು ಕಳಚಿಕೊಂಡಾಗ, ಎಚ್ಚರವಾಗುತ್ತಲೇ ಕನಸಿನ ದುಃಖ ಸಂಬಂಧ

ತನಗೆ ಮರೆಯುವಂತೆ ಮುಪ್ಪು, ಅಜ್ಞಾನ, ಮರಣಗಳೆಲ್ಲಾ ತಪ್ಪುವುದು. ಆಗ ಜಾಗ್ರದವಸ್ಥೆಯ ಸಹಜಾನಂದ (ಬ್ರಹ್ಮಾನಂದ) ಸ್ಥಿತಿಯನ್ನು ಹೊಂದಿ ಸುಖಿಯಾಗುವನು.

**ಶಬ್ದಾರ್ಥ:** ಮತಾಂತರದಿ=ಆ ಮತವು ನಿರ್ದಿಷ್ಟವಾದುದು, ಈ ಮತವು ನಿರ್ದುಷ್ಟವಾದುದು ಎಂದು ಬೇರೆ ಬೇರೆ ಮತಗಳಲ್ಲಿ ಗುಣ ಭ್ರಾಂತಿಯಿಂದ; ಪರಿಹರಿಸಿ ಜನ್ಮಗಳ=ಹುಟ್ಟು ಸಾವುಗಳ ಬಂಧನವನ್ನು ಕಳಚಿಕೊಂಡು.

**ಟಿಪ್ಪಣಿ–೧:** ಕರ್ಮಗಳೆಲ್ಲ=ಪಾಪ ಕರ್ಮಗಳೂ ಪುಣ್ಯ ಕರ್ಮಗಳೂ (ಪಾಪ ಕರ್ಮಗಳು ದುಃಖಾಧಿಕವಾದ ಜನ್ಮವನ್ನು ಕೊಟ್ಟರೆ ಪುಣ್ಯ ಕರ್ಮಗಳು ಸುಖಾಧಿಕವಾದ ಜನ್ಮವನ್ನು ಕೊಡುವುವು). ಎಷ್ಟೇ ಸುಖಾಧಿಕವಾದರೂ ದುಃಖದ ಮಿಶ್ರಣವಿಲ್ಲದೆ ಇರುವುದಿಲ್ಲ. ಈ ಅಭಿಪ್ರಾಯವನ್ನು ಕವಿಯೇ ಅಧ್ಯಾಯ ೨ ಪದ್ಯ ೩೨ರಲ್ಲಿ ಹೇಳಿದ್ದಾನೆ. ಆದ್ದರಿಂದ "ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ" ಎಂಬ ಗೀತೋಕ್ತಿಯಂತೆ ಪಾಪಕರ್ಮಗಳೂ ಪುಣ್ಯಕರ್ಮಗಳೂ ಎರಡೂ ಲಯವಾಗುವುವು.

**ಟಿಪ್ಪಣಿ–೨:** ಕನಸಿನ ಬಂಧ=ಜರೆ, ಮರೆ, ಮರಣ ಈ ಬಂಧಗಳೆಲ್ಲಾ ಕನಸಿನ ಬಂಧದಂತೆ ಇರುವುವು. ಎಚ್ಚರವಾಗುತ್ತಲೇ ಕನಸಿನ ದುಃಖದ ಸಂಬಂಧವು ತನಗೆ ತಪ್ಪುವಂತೆ ಜ್ಞಾನವಾಗುತ್ತಲೆ ಜರೆ ಮೊದಲಾದವುಗಳ ಸಂಬಂಧವು ತನಗೆ ತಪ್ಪುವುದು.

---

## ಬ್ರಹ್ಮವನ್ನು ಗುರುತಿಸುವ ರೀತಿ (೪೪-೭೦)

**ಮಗನೆ ಮೂಲಪ್ರಕೃತಿಯೆನಿಸುವ**
**ವಿಗಡವಹ ಮಾಯಾಗುಣಂಗಳೊ**
**ಳೊಗೆದವಿದ್ಯಾವಿದ್ಯೆಯೆನಿಸುವುಪಾಧಿಯಿಂದಾದ ।**
**ಸಗುಣವಹ ಜೀವೇಶ್ವರತ್ವವ**
**ನಿಗಮವೇ ಹೇಳುವದುಪಾಧಿಯ**
**ಬಗೆಯಳಿಯಲದ್ವೈತಶುದ್ಧಬ್ರಹ್ಮವಾಗಿಹುದು ॥ ॥೪೪॥**

**ತಾತ್ಪರ್ಯ:** ಮೂಲಪ್ರಕೃತಿಯೆನಿಸಿದ ದುಸ್ತರವಾದ ಮಾಯಾಗುಣಗಳಿಂದ ಉಂಟಾದುದು ಅವಿದ್ಯೆ–ವಿದ್ಯೆಗಳು. ಅವುಗಳ ಸಗುಣರೂಪೀ ಸಂಬಂಧದಿಂದ ಎಂದರೆ ಅವಿದ್ಯೆಯ ಸಂಬಂಧದಿಂದ ಆದ ಜೀವತ್ವವು ವಿದ್ಯೆಯ ಕಾರಣದಿಂದ ಉಂಟಾದ ಈಶ್ವರತ್ವವೂ ಉಂಟಾಗಿವೆ ಎಂದು ಶ್ರುತಿಗಳು ಹೇಳುತ್ತವೆ. ಈ ಉಪಾಧಿಗಳನ್ನು ಕಳೆದುಕೊಂಡಾಗ ಅದ್ವೈತರೂಪವಾದ ಶುದ್ಧಬ್ರಹ್ಮತ್ವ ಉಂಟಾಗುತ್ತದೆ.

**ಶಬ್ದಾರ್ಥ:** * ಮೂಲ ಪ್ರಕೃತಿ=ಮೂಲ ಸ್ವರೂಪ; * ವಿಗಡವಹ=ದುಸ್ತರವಾದ; * ಒಗೆದ =ಉಂಟಾದ; * ನಿಗಮ=ಶ್ರುತಿ; * ಜೀವೇಶ್ವರತ್ವ=ಅವಿದ್ಯೆಯ ಉಪಾಧಿಯಿಂದ ಜೀವತ್ವ ವಿದ್ಯೆಯ ಉಪಾಧಿಯಿಂದ ಈಶ್ವರತ್ವ ಉಂಟಾಗುತ್ತದೆ.

**ಟಿಪ್ಪಣಿ–೧:** ನಿಗಮವೇ ಹೇಳುವುದು=ಜೀವೇಶಾವಾಭಾಸೇನ ಕರೋತಿ; ಮಾಯಾ (ವಿದ್ಯಾ) ಚಾ ವಿದ್ಯಾ ಚ ಸ್ವಯಮೇವ ಭವತಿ (ಶ್ರುತಿ)

---

ಗ್ರಾಮದೇಶದ್ವೀಪದಲ್ಲಿಹ
ವ್ಯೋಮವೊಂದೇ ಪರಿಯಲಿರ್ಪಂ
ತೀ ಮನುಜ ಪಶುಪಕ್ಷಿ ತರುಲತೆ ದೇವದೈತ್ಯರಲಿ ।
ಭೂಮಿ ಮೊದಲಾಗಿರ್ದ ಭೂತ
ಸ್ತೋಮದಲಿ ಮಣಿಗಣದ ಸೂತ್ರದ
ನೇಮದಲಿ ಸಮನಾಗಿ ತೋರುವುದೇ ಪರಬ್ರಹ್ಮ ॥ ॥೪೫॥

ತಾತ್ಪರ್ಯ: ಹಳ್ಳಿ, ದೇಶ, ದ್ವೀಪ ಮೊದಲಾದ ಕಡೆಗಳಲ್ಲಿ ಇರುವ ಆಕಾಶ ಒಂದೇ ರೀತಿಯಲ್ಲಿದೆ. ಹಾಗೆಯೇ ಮನುಷ್ಯ, ಪ್ರಾಣಿ, ಹಕ್ಕಿ, ಮರ, ಬಳ್ಳಿ, ದೇವತೆ, ರಾಕ್ಷಸರು ಮೊದಲಾದ ಜೀವ ರಾಶಿಗಳಲ್ಲಿ ಮತ್ತು ಭೂಮಿ, ನೀರು, ಗಾಳಿ, ಬೆಂಕಿ, ಆಕಾಶಗಳೆಂಬ ಭೂತ ಪಂಚಕಗಳಲ್ಲಿ ಮಣಿಗಳನ್ನು ಪೋಣಿಸಿದ ಸರದಲ್ಲಿ ಇರುವ ದಾರದಂತೆ ಪರಬ್ರಹ್ಮನು ಎಲ್ಲರಲ್ಲೂ ಎಲ್ಲ ಕಡೆ ಸಮನಾಗಿ ವ್ಯಾಪಿಸಿಕೊಂಡಿದ್ದಾನೆ.

ಶಬ್ದಾರ್ಥ: * ಗ್ರಾಮ=ಹಳ್ಳಿ; * ದೇಶ=ನಾಡು; * ದ್ವೀಪ=ಸುತ್ತಲೂ ನೀರಿರುವ ಪ್ರದೇಶ; * ವ್ಯೋಮ=ಆಕಾಶ; * ದೇವ=ದೇವತೆಗಳು; ದೈತ್ಯ=ರಾಕ್ಷಸ; * ತರು=ಮರ; * ಲತೆ=ಬಳ್ಳಿ, * ಭೂತ ಸ್ತೋಮ=ಭೂಮಿ, ನೀರು, ಗಾಳಿ, ಬೆಂಕಿ, ಆಕಾಶಗಳೆಂಬ ಭೂತಪಂಚಕ, ಸೂತ್ರ=ದಾರ; ನೇಮದಲಿ=ಕ್ರಮವಾಗಿ

ಟಿಪ್ಪಣಿ-೧: ಮಣಿಗಣಸೂತ್ರದ=ಮಯಿ ಸರ್ವಮಿದಂ ಪ್ರೋಕ್ತಂ ಸೂತ್ರೇ ಮಣಿಗಣಾ ಇವ ಎಂದು ಗೀತೋಕ್ತಿ ಇದೆ (೭-೭ ಗೀತೆ) ಎಲ್ಲ ಮಣಿಗಳೊಳಗೂ ವ್ಯಾಪಿಸಿರುವ ಸೂತ್ರದ ಹಾಗೆ ಬ್ರಹ್ಮವು ಎಲ್ಲೆಡೆಯೂ ವ್ಯಾಪಿಸಿರುವುದು ಎಂದರ್ಥ.

---

ತರುಲತಾದಿಗಳಲ್ಲಿ ರಸ, ಜೀ
ವರುಗಳಲಿ ಚೇತನ, ಸಮೀರನ
ಲುರುವ ಬಲ, ಜಲದಲ್ಲಿ ಸ್ವಾದ, ಸುಗಂಧ ಪೃಥ್ವಿಯಲಿ ।
ತರಣಿ ಪಾವಕ ಚಂದ್ರಮರೊಳತಿ
ಭರಿತ ತೇಜಃಪುಂಜವಾ ಅಂ
ಬರದಿ ಶಬ್ದವದೆನಿಸಿ ತೋರುವದೇ ಪರಬ್ರಹ್ಮ ॥ ॥೪೬॥

ತಾತ್ಪರ್ಯ: ಗಿಡ, ಮರ, ಬಳ್ಳಿಗಳಲ್ಲಿ ರಸವಾಗಿದ್ದಾನೆ; ಜೀವರುಗಳಲ್ಲಿ ಚೈತನ್ಯವಾಗಿದ್ದಾನೆ; ವಾಯುವಿನಲ್ಲಿ ಬಲವಾಗಿದ್ದಾನೆ; ನೀರಿನಲ್ಲಿ ರುಚಿಯಾಗಿದ್ದಾನೆ; ಪೃಥ್ವೀ ತತ್ತ್ವದಲಿ ಗಂಧವಾಗಿದ್ದಾನೆ; ಸೂರ್ಯ, ಅಗ್ನಿ, ಚಂದ್ರರಲ್ಲಿ ತೇಜಸ್ಸಾಗಿದ್ದಾನೆ, ಆಕಾಶದಲ್ಲಿ ಶಬ್ದವಾಗಿದ್ದಾನೆ, ಹೀಗೆ ಎಲ್ಲ ಕಡೆ ಕಂಡುಬರುವುದೇ ಪರಬ್ರಹ್ಮವೆನಿಸಿದೆ.

ಶಬ್ದಾರ್ಥ: * ತರುಲತಾದಿಗಳು=ಗಿಡಮರಬಳ್ಳಿಗಳು; * ಸಮೀರ=ವಾಯು; * ಉರುವ ಬಲ=ಶ್ರೇಷ್ಠ ಶಕ್ತಿ; * ಸ್ವಾದ=ರುಚಿ; * ಪೃಥ್ವಿ=ಭೂಮಿ; ತರಣಿ=ಸೂರ್ಯ; * ಪಾವಕ=ಅಗ್ನಿ; * ಅಂಬರ=ಆಕಾಶ

**ಟಿಪ್ಪಣಿ–೧:** ಮಹಲಿಂಗರಂಗ ಈ ಪದ್ಯದಲ್ಲಿ ಗೀತೆಯ ಶ್ಲೋಕದ ಮಾತುಗಳನ್ನೇ ಯಥಾವತ್ತಾಗಿ ಅನುವಾದಿಸಿದ್ದಾನೆ. ಜೀವರುಗಳಲಿ ಚೇತನ=ಜೀವನಂ ಸರ್ವಭೂತೇಷು=ಗೀತೆ (೭–೯) ಜಲದಲ್ಲಿ ಸ್ವಾದ=ರಸೋಹಂ ಅಪ್ಸು (ಗೀತೆ ೭–೮)ಜೀವರುಗಳಲ್ಲಿ ಚೇತನ=ಜೀವನಂ ಸರ್ವಭೂತೇಷು (ಗೀತೆ ೭–೯) ಸುಗಂಧ ಪೃಥ್ವಿಯಲಿ=ಪುಣ್ಯೋ ಗಂಧಃ ಪೃಥಿವ್ಯಾಂ ಚ (ಗೀತೆ ೭–೯) ತರಣಿ, ಪಾವಕ, ಚಂದ್ರಮರೊಳ=ಪ್ರಭಾಸ್ಮಿ ಶಶಿ ಸೂರ್ಯಯೋಃ (ಗೀತೆ ೭–೮) ಅತಿಭರಿತತೇಜಃ ಪುಂಜವಾ=ತೇಜಶ್ಚಾಸ್ಮಿ ವಿಭಾವಸೌ (ಗೀತೆ ೭–೯)

---

**ಬಿಂಬಪ್ರತಿಬಿಂಬಗಳು ಕಲ್ಪಿತ**
**ವಂಬರದ ದಿನಮಣಿಯೊಳಾ ಪರಿ**
**ಬೆಂಬಳಿಯಲೇ ಕಲ್ಪಿತರು ಜೀವೇಶರೆಂಬುವರು; ।**
**ತುಂಬಿ ತುಳುಕದ ನಿಸ್ತರಂಗಚಿ**
**ದಂಬುಧಿಯೊಳೀಪರಿಯೊಳೆಸೆದು ವಿ**
**ಜೃಂಭಿಸುತ್ತಿಹುದಾವುದದು ತಾನೇ ಪರಬ್ರಹ್ಮ ॥ ॥೪೭॥**

**ತಾತ್ಪರ್ಯ:** ಆಕಾಶದಲ್ಲಿರುವ ಸೂರ್ಯನಲ್ಲಿ ಬಿಂಬ ಪ್ರತಿಬಿಂಬಗಳೆರಡೂ ಕಲ್ಪಿತವು. ಅದೇರೀತಿಯಾಗಿ ಅದರೊಂದಿಗಿನ ಜೀವವು ಪ್ರತಿಬಿಂಬವು ಈಶ್ವರನು ಬಿಂಬವು (ಶುದ್ಧವಸ್ತು ಬ್ರಹ್ಮ) ಹೀಗೆ ತುಂಬಿತುಳುಕಿದಂತಹ ಅಲೆಗಳಿಲ್ಲದ ಜ್ಞಾನಸಮುದ್ರದಲ್ಲಿ (ಚಿದಾಂಬುಧಿ) ಕಂಗೊಳಿಸಿ ಮೆರೆಯುತ್ತಿರುವುದೇ ಪರಬ್ರಹ್ಮವಾಗಿದೆ.

**ಶಬ್ದಾರ್ಥ:** ಕಲ್ಪಿತವು=ಹುಟ್ಟು ಕಟ್ಟಿದ್ದು, ಮರುಸೃಷ್ಟಿ; * ಅಂಬರ=ಆಕಾಶ; ದಿನಮಣಿ=ಸೂರ್ಯ; ಬೆಂಬಳಿಯಲೇ=ಬೆನ್ನಹಿಂದೆಯೇ; ನಿಸ್ತರಂಗ=ಅಲೆಯಿಲ್ಲದ; ಚಿದಾಂಬುಧಿ=ಜ್ಞಾನಸಾಗರ; * ಜೀವೇಶ=ಜೀವ (ಪ್ರತಿಬಿಂಬ) ಈಶ (ಬಿಂಬ) (ಶುದ್ಧವಸ್ತುಬ್ರಹ್ಮ); ನಿಸ್ತರಂಗ ಚಿದಂಬುಧಿಯೊಳ್ =ಅಲೆಯಿಲ್ಲದ ಜ್ಞಾನಸಮುದ್ರದಲ್ಲಿ.

**ಟಿಪ್ಪಣಿ–೧:** ಬಿಂಬ ಪ್ರತಿಬಿಂಬಗಳು=ಬಿಂಬ, ಪ್ರತಿಬಿಂಬ ಎಂಬ ಎರಡೂ ಆಕಾಶದಲ್ಲಿರುವ ಸೂರ್ಯನಲ್ಲಿ ಕಲ್ಪಿತವೆಂದರ್ಥ. ಪ್ರತಿಬಿಂಬ ಕಲ್ಪಿತವೆಂಬುದನ್ನು ಎಲ್ಲರೂ ಮನಗಂಡಿದ್ದಾರೆ. ಬಿಂಬವೂ ಕೂಡ ಕಲ್ಪಿತವೇ. ಹೇಗೆಂದರೆ ಪ್ರತಿಬಿಂಬ ಹೊಂದಿರುವುದರಿಂದ ಅದರಿಂದ ಬಿಡಿಸಿ ತಿಳಿಯುವುದಕ್ಕೂ ಸೂರ್ಯನನ್ನು ಬಿಂಬ ಎನ್ನಬೇಕೆ ಹೊರತು ಮತ್ತೇನೂ ಇಲ್ಲ.

---

**ಘಟಮಠಗಳೊಳಗಿಪ್ಪ ಬಯಲನು**
**ಘಟಮಠದ ಬಯಲೆಂದು ಪೇಳ್ವರು;**
**ಘಟಮಠಗಳಳಿದಾಗ ಬಯಲಿಗೆ ಹೇಳೆ ಹೆಸರಿಲ್ಲ; ।**
**ಅಟಮಟದ ಬ್ರಹ್ಮಾಂಡತತಿಗಳು**
**ಸಟೆಯ ಪಿಂಡಾಂಡಗಳಡಗಲಾ**
**ದಿಟವನಂತಿಂತೆನಲಶಕ್ಯವದೇ ಪರಬ್ರಹ್ಮ ॥ ॥೪೮॥**

**ತಾತ್ಪರ್ಯ:** ಘಟದಲ್ಲಿಯೂ ಮಠದಲ್ಲಿಯೂ ಇರುವ ಬಯಲನ್ನು ಘಟಾಕಾಶ ಮಠಾಕಾಶವೆಂದು ಹೇಳುವರು. ಈ ಘಟ ಮತ್ತು ಮಠಗಳು ನಾಶವಾದಾಗ ಅದರಲ್ಲಿದ್ದ ಬಯಲಿಗೆ ಯಾವ ಹೆಸರೂ ಇರುವುದಿಲ್ಲ. ಮಿಥ್ಯಾರೂಪವಾದ ಬ್ರಹ್ಮಾಂಡ ಸಮೂಹವನ್ನು (ಬ್ರಹ್ಮಾಂಡದ ಉಪಾಧಿಯುಳ್ಳ ಈಶ್ವರನು) ಸುಳ್ಳಾದ ಪಿಂಡಾಂಡಗಳು (ಶರೀರದ ಉಪಾಧಿಯುಳ್ಳ ಜೀವನು) ಲಯವಾಗಲು, ನಿಜಸ್ವರೂಪವನ್ನು ಜೀವನೆಂದಾಗಲಿ, ಈಶ್ವರನೆಂದಾಗಲಿ ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಲಾಗದ್ದು ಯಾವುದೋ ಅದೇ ಪರಬ್ರಹ್ಮ.

**ಶಬ್ದಾರ್ಥ: ಅಟಮಟದ**=ಸುಳ್ಳಾದ; **ಅಂತಿಂತೆನಲು**=ಜೀವನೆಂದಾಗಲಿ ಈಶ್ವರನೆಂದಾಗಲಿ ಹೇಳಲು (ಬ್ರಹ್ಮಾಂಡದ ಉಪಾಧಿಯುಳ್ಳವನು ಈಶ್ವರ. ಪಿಂಡಾಂಡವಾದ ಶರೀರದ ಉಪಾಧಿಯುಳ್ಳವನು ಜೀವ ಬ್ರಹ್ಮಾಂಡವೂ, ಪಿಂಡಾಂಡವೂ ಲಯವಾದ ಮೇಲೆ ಯಾವ ಹೆಸರೂ ಇಲ್ಲ); * **ಸಟೆ** =ಸುಳ್ಳು; * **ದಿಟ**=ನಿಜ; * **ಬಯಲು**=ಆಕಾಶ; **ಹೇಳಹೆಸರಿಲ್ಲ** =ಹೆಸರಿಟ್ಟು ಕರೆಯಲು ಸಾಧ್ಯವಿಲ್ಲ, ನಾಮಾತೀತ; **ಘಟದ ಬಯಲು (ಘಟಾಕಾಶ)**=ಗಡಿಗೆಯೇ ಮುಂತಾದವುಗಳ ಅಳತೆಗೆ ಸಿಕ್ಕಿದಂತೆ ತೋರುವ ಆಕಾಶ (ಭಗವದ್ಗೀತೆ ಪುಟ-೧೨೬, ಪಾರಿಭಾಷಿಕ ಶಬ್ದಕೋಶ) **ಮಠದ ಬಯಲು**=(ಮಠಾಕಾಶ) ನಿವಾಸದಲ್ಲಿರುವ ಬಯಲು

---

**ಆವಿಗೆಯ ಬಲುಗಿಚ್ಚಿನುರಿಯೊಳು**
**ಬೇವ ಮಡಕೆಗಳಂತೆ ಬ್ರಹ್ಮಾಂ**
**ಡಾವಳಿಗಳನು ತಿಳಿ ದುರೀಕ್ಷ್ಯಮಹಾಪ್ರಕಾಶದಲಿ ।**
**ತೀವಿ ತೋರುತ್ತಿರ್ಪುವಾವಗ**
**ತೀವ್ರತೇಜೋರಾಶಿಯಾದ ಮ**
**ಹಾವಿಭವವಿಸ್ಫೂರ್ತಿಯದು ಕೇಳೈ ಪರಬ್ರಹ್ಮ ॥** **॥೪೯॥**

**ತಾತ್ಪರ್ಯ:** ಕುಂಬಾರನ ಒಲೆಯ (ಕುಲುಮೆಯ) ದೊಡ್ಡ ಕಿಚ್ಚಿನ ಉರಿಯಲ್ಲಿ ಬೇಯುವ ಮಡಕೆಗಳಂತೆ, ನೋಡುವುದಕ್ಕೆ ಅಶಕ್ಯವಾದಷ್ಟು ಪ್ರಜ್ವಲವಾದ ಪ್ರಕಾಶದಲ್ಲಿ ಬ್ರಹ್ಮಾಂಡಗಳು ಬೆಳಗುತ್ತಿವೆ. ಸದಾ ಅತಿಶಯವಾದ ಕಾಂತಿಯಿಂದ ದಟ್ಟವಾದ ಉರಿಯಿಂದ ಉಜ್ವಲವಾಗಿ ಪರಮ ವೈಭವದಿಂದ ಬೆಳಗುತ್ತಿರುವ ಆ ಮಹಾ ಪ್ರೇರಕಶಕ್ತಿಯೇ ಪರಬ್ರಹ್ಮವಾಗಿದೆ.

**ಶಬ್ದಾರ್ಥ:** * **ಆವಿಗೆ**=(ಕುಲುಮೆ) ಕುಂಬಾರನು ಮಡಕೆ ಇತ್ಯಾದಿ ಬೇಯಿಸುವ ಒಲೆ; * **ಬಲು ಕಿಚ್ಚಿನ ಉರಿ**=ಬೆಂಕಿಯ ಹೆಚ್ಚಿನ ಕಾವು; * **ಬ್ರಹ್ಮಾಂಡಾವಳಿ**=ಬ್ರಹ್ಮಾಂಡಗಳ ಸಮೂಹ; **ದುರೀಕ್ಷ್ಯಮಹಾಪ್ರಕಾಶದಲಿ**=ನೋಡುವುದಕ್ಕೆ ಅಶಕ್ಯವಾದಷ್ಟು ಉಜ್ವಲವಾದ ಪ್ರಕಾಶದಲ್ಲಿ; * **ತೀವಿ**=ತುಂಬಿ ಆವರಿಸಿ; **ತೀವ್ರ**=ತೀಕ್ಷ್ಣ (ದಟ್ಟವಾದ); * **ವಿಸ್ಫೂರ್ತಿ**=ವಿಶೇಷವಾಗಿ ಸ್ಫುರಿಸಿದ ಶಕ್ತಿ (ಪ್ರೇರಕ ಶಕ್ತಿ); * **ಮಡಿಕೆ**=ಮಡಕೆ

**ಪಾಠಾಂತರ:** ಮಡಿಕೆ ಎಂಬ ಪದಕ್ಕೆ ಬೇರೆ ಅರ್ಥಗಳಿವೆ. ಆದಕಾರಣ ಮಡಕೆ ಎಂಬುದು ಸೂಕ್ತ. ಆದರೆ ಎಲ್ಲ ಪ್ರತಿಗಳಲ್ಲಿ ಮಡಿಕೆ ಎಂದಿದೆ. ಇಲ್ಲಿ ಮಡಕೆ ಪಾಠಾಂತರ ಸ್ವೀಕರಿಸಿದೆ.

---

ಬಿಸಿಲು ನಭದಲಿ ತೋರದೆಯೆ ಪಸ
ರಿಸಿ ಪುರಗ್ರಾಮಂಗಳಲಿ ತೋ
ರ್ದೆಸೆವವೋಲ್ ಪರಿಪೂರ್ಣನಾಗಿಯುಮೀ ಚರಾಚರದಿ ।
ಮಸಗಿ ಕೆಲವೆಡೆಯಲ್ಲಿ ತೋರದೆ
ಮಿಸುಪ ಕರಣಾದಿಯಲಿ ತೋರು
ತ್ತೆಸೆವ ತೇಜೋರಾಶಿಯದು ಕೇಳೈ ಪರಬ್ರಹ್ಮ ॥ ॥೫೦॥

ತಾತ್ಪರ್ಯ: ಸೂರ್ಯನ ಪ್ರಕಾಶವು ಎಲ್ಲೆಡೆ ಇರುತ್ತದೆ. ಆಕಾಶದಲ್ಲೂ ಬಿಸಿಲಿರುತ್ತದೆ. ಆದರೆ ಅಲ್ಲಿ ಯಾರೂ ಇಲ್ಲವಾದ್ದರಿಂದ ಯಾರಿಗೂ ತೋರುವುದಿಲ್ಲ. ಆದರೆ ಭೂಮಿಯ ಮೇಲೆ ಪಟ್ಟಣ, ಹಳ್ಳಿ, ಮೊದಲಾದ ಸಾಕಾರ ರೂಪಗಳು ಇರುವುದರಿಂದ ಎಲ್ಲ ಕಡೆ ಬಿಸಿಲು ಹರಡಿ ಕಾಣಿಸಿಕೊಳ್ಳುತ್ತದೆ. ಹಾಗೆಯೇ ಪರಬ್ರಹ್ಮ ಸರ್ವವ್ಯಾಪಕ ಆಗಿದ್ದರೂ ಕೆಲವು ಕಡೆ ಕಾಣಿಸಿಕೊಳ್ಳದೆ ಮತ್ತೆ ಕೆಲವು ಕಡೆಗಳಲ್ಲಿ ಎಂದರೆ ಚೇತನ ರೂಪವಾದ ಅಂತಃಕರಣಾದಿಗಳಲ್ಲಿ ಸೂರ್ಯನ ಹಾಗೆ ಪ್ರಕಾಶಿಸುವ ತೇಜೋರಾಶಿಯೇ ಪರಬ್ರಹ್ಮವಾಗಿದೆ.

ಶಬ್ದಾರ್ಥ: * ನಭ=ಆಕಾಶ; * ಪುರ=ಪಟ್ಟಣ; * ಗ್ರಾಮ=ಹಳ್ಳಿ; * ಎಸೆವವೋಲ್= ಕಂಗೊಳಿಸುವಂತೆ; * ಪರಿಪೂರ್ಣ=ಸರ್ವವ್ಯಾಪಕ; * ಚರ+ಅದರದಿ=ಚೇತನ ಜಡ ವಸ್ತುಗಳಲ್ಲಿ; * ಮಸಗಿ=ಬೆಳಗಿ ಕರಣಾದಿಗಳಲಿ=ಅಂತಃಕರಣಾದಿಗಳಲ್ಲಿ; ಬಿಸಿಲುನಭದಲಿ ತೋರದೆಯೆ=ಆಕಾಶದಲ್ಲಿ ಯಾರೂ ಇಲ್ಲವಾದ್ದರಿಂದ ಅಲ್ಲಿ ಬಿಸಿಲಿರುವುದು ಯಾರಿಗೂ ಕಾಣಿಸುವುದಿಲ್ಲ.

---

ಅಣುವಿನೊಳಗಣುವೆನಿಸಿತೋರ್ಪುದು;
ಗುಣನಿಧಿಯೆ ತನುವಿನೊಳು ತನುವವೊ
ಲೆಣಿಕೆಯಲಿ ಕಾಣಿಸುತಲಿಹುದು ಮಹಾಪ್ರಮಾಣದಲಿ; ।
ಗಣಿಸಪೋಗೆ ಮಹತ್ತೆನಿಸಿ, ಸ
ನ್ಮಣಿಗಳೊಳು ನಭದಂತೆ ಪೊಳೆವು
ತ್ತೆಣಿಕೆ ಮೀರಿದನಂತವೇ ಕೇಳೈ ಪರಬ್ರಹ್ಮ ॥ ॥೫೧॥

ತಾತ್ಪರ್ಯ: ಗುಣವಂತ ಶುಕನೆ ಕೇಳು, ಸಣ್ಣದರೊಳಗೆ ಸಣ್ಣದಾಗಿ ಅಣುರೂಪಿನಲ್ಲಿ ಆತ್ಮನು ಕಾಣಿಸಿಕೊಳ್ಳುತ್ತಾನೆ. ಅಂತೆಯೇ ಶರೀರದೊಳಗೆ ಶರೀರಗಾತ್ರಕ್ಕೆ ತಕ್ಕಂತೆ ತೋರುತ್ತಾನೆ. ಇನ್ನು ಮಹಾಪ್ರಮಾಣವಾಗಿ ಪರಿಗಣಿಸಿದರೆ ಅದರಲ್ಲಿ ಮಹತ್ತಾಗಿ ಕಾಣಿಸುತ್ತಾನೆ. ನವರತ್ನಗಳಲ್ಲಿ ಪ್ರಕಾಶಿಸುವ ಆಕಾಶದಂತೆ ಕಾಣಿಸಿಕೊಂಡರೂ ಅದನ್ನು ಮೀರಿದ ಎಂದರೆ ಮಹತ್ವವನ್ನು ಅಣುತ್ವವನ್ನು ಮೀರಿದ ಆತ್ಮಸ್ವರೂಪವೇ ಪರಬ್ರಹ್ಮವೆಂದು ತಿಳಿ.

**ಶಬ್ದಾರ್ಥ:** * **ಅಣು**=ಸಣ್ಣದು, ಸೂಕ್ಷ್ಮವಾದುದು; **ಗುಣನಿಧಿಯೆ**=ಗುಣವಂತ ಶುಕನೆ; * **ತನು**=ಶರೀರ; * **ಎಣಿಕೆಯಲಿ**=ಪರಿಗಣನೆಯಲ್ಲಿ; * **ಮಹಾಪ್ರಮಾಣದಲಿ**=ಬೃಹತ್ತಾಗಿ; **ಸನ್ಮಣಿಗಳೊಳು**=ನವರತ್ನಗಳಲ್ಲಿ

**ಟಿಪ್ಪಣಿ-೧: ಅಣುವಿನೊಳಗಣುವೆನಿಸಿ**-'ಅಣೋರಣೀಯಾನ್' ಎಂಬ ಶ್ರುತಿಯಂತೆ ಬಹಳ ಸಣ್ಣದಾಗಿಯೂ; ಮಹತ್ತೆನಿಸಿ=ಮಹತೋ ಮಹೀಯಾನ್ ಎಂಬ ಶ್ರುತಿಯಂತೆ ಬಹಳ ದೊಡ್ಡದಾಗಿಯೂ ಲೋಕದಲ್ಲಿರುವ ಎಲ್ಲ ಅಣುವಾದ ಮತ್ತು ಮಹತ್ತಾದ ವಸ್ತುಗಳ ಇರುವಿಕೆಯೂ ಆತ್ಮನಿಂದಲೇ. ಆದ್ದರಿಂದ ಆತ್ಮನು ಬಹಳ ಅಣುವಾದವನು ಮತ್ತು ಮಹತ್ತಾದವನು. ಇಷ್ಟೇ ಹೊರತು ಅವನು ಅಣುವೂ ಅಲ್ಲ ಮಹತ್ತೂ ಅಲ್ಲ.

**ಟಿಪ್ಪಣಿ-೨: ಅನಂತ**-ಮಹತ್ವಕ್ಕೂ ಅಣುತ್ವಕ್ಕೂ ಎರಡಕ್ಕೂ ಕೊನೆಯಿಲ್ಲದ್ದು. (ವಸ್ತುವಿನ ಪರಿಮಾಣವೇ ಬ್ರಹ್ಮಕ್ಕೆ ತೋರುವುದೇ ಹೊರತು ಬ್ರಹ್ಮಕ್ಕೆ ಪರಿಮಾಣವಿಲ್ಲೆಂದು ತಾತ್ಪರ್ಯ).

---

**ಕ್ಷೀರಸಾಗರದೊಳಗೆ ಬಹು ಸಂ**
**ಛಾರವಡೆದಿಹ ಜಲಚರಂಗಳು**
**ಕ್ಷೀರದಾಧಾರದಲಿ ಜೀವಿಸಿ ವಿಹರಿಸುವ ತೆರದಿ ।**
**ಭೂರಿಸುರನರತಿರ್ಯಗಾದಿ ಶ**
**ರೀರಗಳು ಜೀವಿಸುವರಾವನ**
**ಪಾರಸುಖಸಾಗರದೊಳದು ಕೇಳೈ ಪರಬ್ರಹ್ಮ ॥ ॥೫೨॥**

**ತಾತ್ಪರ್ಯ:** ಕ್ಷೀರ ಸಮುದ್ರದಲ್ಲಿ ಸಂಚರಿಸುತ್ತ ಅಲ್ಲಿಯೇ ವಾಸ ಮಾಡಿಕೊಂಡಿರುವ ಜಲಜೀವಿಗಳು ಆ ಹಾಲಿನ ಆಧಾರದಿಂದಲೇ ಬದುಕಿರುವ ಹಾಗೆ, ಅನೇಕ ದೇವ, ಮಾನವ, ಪ್ರಾಣಿ ವರ್ಗವೇ ಮೊದಲಾದ ಜೀವಕೋಟಿಗಳು ಯಾವ ಮಹಾ ಪುರುಷನ ಅನಂತಸುಖವೆಂಬ ಸಾಗರದಲ್ಲಿ ಜೀವಿಸುವುದೋ ಆ ಸುಖಸಾಗರವೇ ಪರಬ್ರಹ್ಮ ಎಂದು ತಿಳಿ.

**ಶಬ್ದಾರ್ಥ:** ಕ್ಷೀರ ಸಾಗರ=ಹಾಲಿನ ಸಮುದ್ರ; ವಿಹರಿಸುವ=ಸಂಚರಿಸುವ; ಭೂರಿ=ಭಾರಿ, ಅನೇಕ ಭೂರಿ ಸಂಖ್ಯೆಯ; ಸುರ=ದೇವತೆ, ನರ=ಮಾನವ; ತಿರ್ಯಕ್=ಪ್ರಾಣಿವರ್ಗ

**ಟಿಪ್ಪಣಿ-೧:** ಜೀವಿಸುವರು+ಆವನ+ಅಪಾರ ಸುಖಸಾಗರದೊಳು='ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಮುಪಜೀವಂತಿ' ಎಂಬ ಶ್ರುತಿಯಂತೆ.

---

**ಪ್ರಾಣಿಗಳೊಳೊಳಹೊರಗೆ ಮಿಗೆ ಸ**
**ತ್ರಾಣವಾಗಿಯೆ ಚರಿಸುವ ಜಗ**
**ತ್ರಾಣನಂದದಿ ಸಕಲದೊಳು ಚೈತನ್ಯರೂಪದಲಿ ।**
**ಪ್ರಾಣವೆನಿಸುತ್ತವನು ಹೊದ್ದದೆ,**
**ಕೇಣವಿಲ್ಲದೆ ತೋರುತಿಹ ನಿ**
**ರ್ವಾಣ ಸರ್ವವ್ಯಾಪಿಯೇ ಕೇಳೈ ಪರಬ್ರಹ್ಮ ॥ ॥೫೩॥**

**ತಾತ್ಪರ್ಯ:** ಪ್ರಾಣಿಗಳ ಒಳಗೂ ಹೊರಗೂ ಉತ್ತಮವಾದ ಪ್ರಾಣಸ್ವರೂಪನಾಗಿ ಸಂಚರಿಸುವ ವಾಯುವಿನ ಹಾಗೆ ಚರಾಚರಾತ್ಮಕವಾದ ಪ್ರಪಂಚದಲ್ಲೆಲ್ಲಾ ಚೈತನ್ಯ ಸ್ವರೂಪದಿಂದ ಪ್ರಾಣನೆನಿಸಿಕೊಂಡಿದ್ದು ಆ ಯಾವ ವಸ್ತುಗಳಿಗೂ ಸೋಂಕದೆ ಲೋಪರಹಿತನಾಗಿ ಕಾಣಿಸಿಕೊಳ್ಳುವ ಮೋಕ್ಷಸ್ವರೂಪನಾದ ಸರ್ವಾಂತರ್ಯಾಮಿಯೇ ಪರಬ್ರಹ್ಮನೆಂದು ತಿಳಿ.

**ಶಬ್ದಾರ್ಥ:** **ಸತ್ಪ್ರಾಣನಾಗಿಯೆ**=(ಬಲವಾದ) ಉತ್ತಮವಾದ ಪ್ರಾಣಸ್ವರೂಪನಾಗಿ; **ಜಗತ್ಪ್ರಾಣನಂದದಿ**=ವಾಯುವಿನ ಹಾಗೆ (ಎಲ್ಲೆಲ್ಲಿಯೂ ವಾಯು ವ್ಯಾಪಿಸಿರುವ ಹಾಗೆ) **ನಿರ್ವಾಣ**=ಮೋಕ್ಷ ಸ್ವರೂಪನಾದ; **ಆವನು ಹೊದ್ದದೆ**=ಆ ಯಾವ ವಸ್ತುಗಳ ಸೋಂಕೂ ಇಲ್ಲದೆ; **ಸರ್ವವ್ಯಾಪಿ**=ಸರ್ವಾಂತರ್ಯಾಮಿ

---

**ಸೂಜಿಗಲ್ಲಿನ ಸನ್ನಿಧಿಯಲಾ**
**ಸೂಜಿಗಳು ಚಲಿಸುತ್ತಲಿರ್ದೊಡೆ**
**ಸೂಜಿಗಲ್ಲಿಗೆ ಚಲನವೆಂಬ ವಿಕಾರವಿಲ್ಲವಲಾ ।**
**ಈ ಜಗಜ್ಜೀವರುಗಳಾವನ**
**ತೇಜದಲಿ ವ್ಯವಹರಿಪರಾ ನಿ**
**ರ್ವ್ಯಾಜ ನಿರುಪಾಧಿಕ ನಿರಂಜನವೇ ಪರಬ್ರಹ್ಮ ॥ ॥೫೪॥**

**ತಾತ್ಪರ್ಯ:** ಸೂಜಿಗಲ್ಲಿನ ಬಳಿ ಸೂಜಿಗಳು ಸೆಳೆತಕ್ಕೆ ಒಳಗಾದರೂ ಸೂಜಿಗಲ್ಲಿಗೆ ಯಾವ ಸೆಳೆತವೂ ಇರುವುದಿಲ್ಲ ಅಲ್ಲವೇ? ಹಾಗೆಯೇ ಈ ಜಗತ್ತೂ ಜೀವರುಗಳೂ ಯಾರ ತೇಜಸ್ಸಿನಿಂದ ಜೀವಿಸುವರೋ ಆತನೇ ಸರ್ವತಂತ್ರ ಸ್ವತಂತ್ರನಾದ ಯಾವ ಸಂಬಂಧವೂ ಇಲ್ಲದ, ಯಾವುದರ ಲೇಪವೂ ಇಲ್ಲದಿರುವ ಪರಬ್ರಹ್ಮನಾಗಿರುವನು.

**ಶಬ್ದಾರ್ಥ:** **ಈ ಜಗಜ್ಜೀವರುಗಳು**=ಈ ಜಗತ್ತೂ ಮತ್ತು ಜೀವರುಗಳೂ; **ನಿರ್ವ್ಯಾಜ**=ತನ್ನ ಇರುವಿಕೆಯು ಮತ್ತೊಂದು ನಿಮಿತ್ತವನು ಅವಲಂಬಿಸದೆ ಇರುವುದು (ಸರ್ವತಂತ್ರ ಸ್ವತಂತ್ರ); **ನಿರಾಪಾಧಿಕ**=ಯಾವುದರ ಸಂಬಂಧವೂ ಇಲ್ಲದ; **ನಿರಂಜನ**=ಯಾವುದರ ಲೇಪವೂ ಇಲ್ಲದಿರುವ;
* **ವಿಕಾರವಿಲ್ಲವಲಾ**=ವ್ಯವಹರಣೆ (ಸೆಳೆತ) ಇರುವುದಿಲ್ಲವಲ್ಲಾ.

---

**ಒಂದರಿವೆ ಪುಸಿನಾಮರೂಪುಗ**
**ಳಿಂದ ನಾನಾಭೇದವಾಗಿಯೆ**
**ನಿಂದು ಜೀವೇಶ್ವರ, ಸಮಷ್ಟಿವ್ಯಷ್ಟಿ ಮೊದಲಾದ ।**
**ಚಂದದಲಿ ತೋರುತ್ತಲಿಹುದದ**
**ರಿಂದಲೊಬ್ಬನೆ ಮಾವ, ಮೈದುನ,**
**ತಂದೆಯೆನಿಪಂತದ್ವಯವು ಕೇಳೈ ಪರಬ್ರಹ್ಮ ॥ ॥೫೫॥**

**ತಾತ್ಪರ್ಯ:** ಒಬ್ಬನೇ ವ್ಯಕ್ತಿ ಮಾವ, ಭಾವ, ಮೈದುನ, ತಂದೆ ಎಂದು ಕಾಣಿಸಿಕೊಂಡ ಹಾಗೆ ಒಂದೇ ಅಖಂಡತತ್ತ್ವವು ಮಿಥ್ಯಾರೂಪವಾದ ನಾಮರೂಪಗಳಿಂದ ಜೀವ ಈಶ್ವರರು ಒಟ್ಟಾಗಿಯೂ ಬಿಡಿ ಬಿಡಿಯಾಗಿ ಕಾಣಿಸಿಕೊಳ್ಳುವ ಚಿದ್ಘನವೇ (ಅದ್ವಯವೇ) ಪರಬ್ರಹ್ಮವೆಂದು ತಿಳಿ.

**ಶಬ್ದಾರ್ಥ:** ಸಮಷ್ಟಿ=ಒಟ್ಟು; ವ್ಯಷ್ಟಿ=ಬಿಡಿಬಿಡಿ; ಜೀವೇಶ್ವರ=ಜೀವ ಮತ್ತು ಈಶ್ವರ; * ಪುಸಿನಾಮರೂಪು =ಮಾಯಾರೂಪವಾದ ನಾಮರೂಪಗಳು; * ಒಂದರಿವೆ=ಅಖಂಡ ಜ್ಞಾನ=ಅದ್ವೈತ; * ತಂದೆ=ಜನ್ಮ ಕೊಟ್ಟವನು; * ಮಾವ=ಹೆಣ್ಣು ಕೊಟ್ಟವನು; * ಮೈದುನ=ತಂಗಿಯ ಗಂಡ, ಗಂಡನ ತಮ್ಮ, ಹೆಂಡತಿಯ ತಮ್ಮ; * ಅದ್ವಯ=ಒಬ್ಬನೇ; ಎರಡಲ್ಲದ್ದು=ಪರಬ್ರಹ್ಮ

---

ಪರಕೆ ಪರವೆನಿಪಾ ಕ್ಷರಾಕ್ಷರ
ಪುರುಷರೀ ಪ್ರಕೃತಿಯಲಿ ತೋರಲು;
ನಿರುತವುಂ ಕ್ಷೇತ್ರಜ್ಞ ಕ್ಷೇತ್ರಗಳಾಗಿ ದೃಗ್ದೃಶ್ಯ ।
ಸ್ಫುರಿಸುತಿಹ ಜಡಜೀವರೂಪಿನ
ಲಿರುತ ಭೋಗ್ಯವು ಭೋಕ್ತೃವೆಂಬೀ
ಪರಿಯಲಿಹರವರಿಂದಲುತ್ತಮನೇ ಪರಬ್ರಹ್ಮ ॥ ॥೫೬॥

**ತಾತ್ಪರ್ಯ:** ಕ್ಷರವೆಂದರೆ ಪಂಚಭೂತಗಳು, ಅಕ್ಷರವೆಂದರೆ ಅಂತರ್ಯಾಮಿಯಾದ ಚೈತನ್ಯ. ಇವುಗಳಲ್ಲಿ ಕ್ಷರವೆಂದರೆ ಪರ ನಮಗೆ ಬಾಯಿ ನೀರು ತರಿಸುವುದರಿಂದ ಪಂಚ ಭೂತಗಳು ಪರ. ಅಕ್ಷರವೆಂದರೆ ಆ ಪಂಚಭೂತಗಳಲ್ಲಿ ಅಂತರ್ಯಾಮಿಯಾದ, ಮೂಲವಾದ ಭೂತಗಳಾಗಿರುವುದರಿಂದ ಪರಕ್ಕೆ ಪರ. ಇವು ಪ್ರಕೃತಿಯಲ್ಲಿ ಕಾಣಿಸಿಕೊಂಡಾಗ ಕ್ಷೇತ್ರ ಕ್ಷೇತ್ರಜ್ಞ (ಅಂತರ್ಯಾಮಿ) ಎನಿಸಿರುವ ಜೀವೇಶ್ವರರು ಆಗಿರುತ್ತಾರೆ. ಈ ಜೀವೇಶ್ವರ ದೃಕ್ ಆಗಿ ದೃಶ್ಯವಾಗಿ ಜಡ-ಜೀವ ರೂಪಿನಲ್ಲಿ ಕಾಣಿಸಿಕೊಳ್ಳುತ್ತ ಭೋಗ್ಯ ಭೋಕ್ತೃ (ಅಂತರ್ಯಾಮಿ) ಆಗಿ ಇದ್ದಾರೆ. ಈ ಜೀವೇಶ್ವರರಿಗೆ ಉತ್ತಮನು ಪರಬ್ರಹ್ಮ.

**ಶಬ್ದಾರ್ಥ:** ಕ್ಷರ=ಪಂಚಭೂತಗಳು; ಅಕ್ಷರ=ಅಂತರ್ಯಾಮಿ ಚೈತನ್ಯ; ಕ್ಷೇತ್ರ=ಪಂಚಭೂತಗಳುಳ್ಳ; ಕ್ಷೇತ್ರಜ್ಞ=ಪಂಚಭೂತಗಳ; ದೃಕ್=ಅಂತರ್ಯಾಮಿ; ದೃಶ್ಯ=ಪಂಚಭೂತಗಳು; ಭೋಗ್ಯ=ಪಂಚಭೂತ; ಭೋಕ್ತೃ=ಅಂತರ್ಯಾಮಿ

**ಟಿಪ್ಪಣಿ-೧:** ಪರಕೆಪರವೆನಿಪ=ಭೂತವಿಕಾರಗಳಾದ ವಸ್ತುಗಳು ನಮಗೆ ಬಾಯಿ ನೀರು ಕರೆಸುವುದರಿಂದ ನಮ್ಮ ಭಾಗಕ್ಕೆ ಅವು ಪರಗಳು (ಕ್ಷೇತ್ರ) ಈ ಭೂತವಿಕಾರಗಳಿಗಿಂತ ಮೂಲವಾದ ಭೂತಗಳು ಪರಗಳು ಇವೇ ಕ್ಷರಗಳು. ಆ ಮೂಲಭೂತಗಳಿಗಿಂತ ಅವುಗಳನ್ನು ತಿಳಿಯುವನು ಕ್ಷೇತ್ರಜ್ಞ. ಅವನರಿತು ಇನ್ನು ಪರನು. ಹೀಗೆ ಕ್ಷೇತ್ರ-ಕ್ಷೇತ್ರಜ್ಞರು (ಅಂದರೆ ಕ್ಷರ+ಅಕ್ಷರ) ಪರಕೆ ಪರನೆನಿಸಿದ್ದಾರೆ.

**ಟಿಪ್ಪಣಿ-೨:** (ಕ್ಷರ ಎಂದರೆ ಪಂಚಭೂತಗಳು, ಅಕ್ಷರವೆಂದರೆ ಅಂತರ್ಯಾಮಿಯಾದ ಚೈತನ್ಯ) ಎಂದು ಕ್ಷರಾಕ್ಷರರನ್ನು ಕುರಿತು ಗೀತೋಕ್ತಿ (೧೫-೧೬) ಹೇಳುತ್ತದೆ.

**ದ್ವಾವಿಮೌ ಪುರುಷೌ ಲೋಕೇ ಕ್ಷರಾಕ್ಷರ ಏವ ಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥** (ಲೋಕೇ) ಜಗದ್ರೂಪವಾದ ಸಂಸಾರದಲ್ಲಿ (ಕ್ಷರಶ್ಚ) ನಾಶವಾಗುವಂಥ ಒಂದು ಗುಂಪು (ಅಕ್ಷರ ಏವ ಚ) ನಾಶವಾಗುವ ಉತ್ಪತ್ತಿಗೆ ಕಾರಣವಾಗಿ ನಾಶವಾದಂಥ ಮಾಯಾ ಶಕ್ತಿ ಎಂಬ ಗುಂಪು. (ಇವೇ ದೌ ಪುರುಷಾ) ಈ ಇಬ್ಬರು ಪುರುಷರು, ಈ ಇಬ್ಬರು ಪುರುಷರು ಯಾರೆಂದರೆ ಕ್ಷರಾಕ್ಷರರು. (ಸರ್ವಾಣಿ ಭೂತಾನಿ ಕ್ಷರಃ) ಎಲ್ಲ ಸ್ಥಾವರ ಜಂಗಮಗಳು ನಶ್ವರವಾದ ಗುಂಪು ಕ್ಷರವೆಂದೂ (ಕೂಟಸ್ಥಃ) ಎಷ್ಟು ದಿನವಾದರೂ ಮುಗಿಯದ ಸಂಸಾರಕ್ಕೆ (ಬಂಧನಕ್ಕೆ) ಕಾರಣವಾಗಿರುವ ಸದಾ ವಂಚನಾರೂಪದಿಂದ ಮಾಯಾಶಕ್ತಿಯನ್ನು ಅಕ್ಷರವೆಂದು (ಉಚ್ಯತೇ) ಹೇಳಲ್ಪಡುತ್ತದೆ.

**ಉತ್ತಮ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ** (ಗೀತೆ ೧೫-೧೭) (ಅನ್ಯಃ) ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಪುರುಷನು ಉತ್ತಮ ಪುರುಷ, ಉತ್ಕೃಷ್ಟ ಪುರುಷನಾಗಿ (ಪರಮಾತ್ಮ ಇತಿ ಉದಾಹೃತಃ) ಪರಮಾತ್ಮನೆಂದು ಹೆಸರಾಗಿದ್ದಾನೆ.

---

**ದ್ರವ ಮಧುರ ಶುಭ್ರತ್ವದೊಡಲೆನಿ**
**ಸುವದು ತಾ ಗೋಕ್ಷೀರವೊಂದೇ;**
**ವಿವರಿಸಲ್ಕಾ ತೆರದಿ ಸಚ್ಚಿತ್ಸುಖಮಯಾತ್ಮಕವು ।**
**ಹವಣಿಸಲು ಬಾರದ ಮಹಾಕಾ**
**ಶವ ತಳೆದು ನೋಡುತ್ತನಂತಾ**
**ಖ್ಯವ ತಳೆದುಕೊಂಡಿಪ್ಪುದದು ಕೇಳೈ ಪರಬ್ರಹ್ಮ ॥ ॥೫೭॥**

**ತಾತ್ಪರ್ಯ:** ಹಸುವಿನ ಹಾಲು ನೀರಾಗಿಯೂ ಸಿಹಿಯಾಗಿಯೂ ಬೆಳ್ಳಗೂ ಇರುತ್ತದೆ. ಹಾಗೆಯೇ ಸತ್ ಸ್ವರೂಪವು (ಇರವು) ಚಿತ್ ಸುಖವು (ಅರಿವು) ಆನಂದಮಯವೂ ಆದದ್ದು ಆತ್ಮವು ಆಗಿದೆ. ಮತ್ತು ಇಷ್ಟೆಂದು ಪರಿಮಿತಿಯನ್ನು ಕಲ್ಪಿಸಿ ಹೇಳಲು ಸಾಧ್ಯವಿಲ್ಲದ ಮಹಾಕಾಶವನ್ನು ಧರಿಸಿ ಅದಕ್ಕೂ ಆಧಾರವಾಗಿ ಅನಂತವೆನಿಸಿ ಕೊಂಡಿರುವುದೇ ಪರಬ್ರಹ್ಮವೆನಿಸಿಕೊಂಡಿದೆ.

**ಶಬ್ದಾರ್ಥ:** **ಹವಣಿಸಲು ಬಾರದ**=ಇಷ್ಟೆಂದು ಪರಿಮಿತಿಯನ್ನು ಕಲ್ಪಿಸಿ ಹೇಳಲು ಆಗದ; **ಅನಂತ**=ಅಂತವಿಲ್ಲದ; * **ದ್ರವ**=ನೀರಾಗಿಯೂ; * **ಮಧುರ**=ಸಿಹಿಯಾಗಿಯೂ, **ಶುಭ್ರತ್ವದ ಒಡಲು**=ಬೆಳ್ಳಗೂ ಇರುವ; * **ಗೋಕ್ಷೀರ**=ಹಸುವಿನ ಹಾಲು; **ತಳೆದು**=ಧರಿಸಿ (ಭೂತಾಕಾಶಕ್ಕೆ ಆಧಾರವಾಗಿ) **ಅನಂತಾಖ್ಯವ**=ಬ್ರಹ್ಮವು ಅನಂತ ಎಂಬ ಹೆಸರನ್ನು ಪಡೆದಿರುವುದು.

**ಟಿಪ್ಪಣಿ-೧:** **ಅನಂತಾಖ್ಯವ**='ಸತ್ಯಮನಂತಂ ಬ್ರಹ್ಮ' ಎಂದು ಶ್ರುತಿಯಲ್ಲಿ ಹೇಳಿರುವಂತೆ ಬ್ರಹ್ಮವು ಅನಂತ ಎಂಬ ಹೆಸರನ್ನು ಪಡೆದಿರುವುದು. ಅನಂತವೆಂದರೆ ಅಂತವಿಲ್ಲದ್ದು ಎಂದರ್ಥ. (ಈ ಪದ್ಯದಲ್ಲಿ ಪೂರ್ವಾರ್ಧದ ಸಂಗತಿಯೇ ಬೇರೆ; ಉತ್ತರಾರ್ಧದ ಸಂಗತಿಯೇ ಬೇರೆ. ಒಂದೇ ಅನೇಕ ಹೆಸರುಗಳಿಂದ ಇರುವುದೆಂಬುದು ಪೂರ್ವಾರ್ಧದ ಸಂಗತಿ. ಆಧಾರವಾದ ಆಕಾಶಕ್ಕೆ ಆಧಾರವಾಗಿ ಅನಂತವೆನಿಸಿಕೊಂಡಿರುವುದೇ ಉತ್ತರಾರ್ಧದ ಸಂಗತಿ ಆಗಿದೆ.)

---

ಆವರಿಸಿ ಬ್ರಹ್ಮಾಂಡತಂಡವ,
ತೀವಿಕೊಂಡೊಳಹೊರಗನೆಲ್ಲವ
ನೀ ವಿಧದಲೆಸೆದಿರ್ಪುದಾವುದು ಸಗುಣವೆಂದೆನಿಸಿ ।
ಆ ವಿಯಲ್ಲತೆಗಪ್ಪುದಾವಿ
ರ್ಭಾವವಾವುದರಿಂದಲಾ ಸ
ಸದ್ಭಾವವಹ ಚಿದ್ವ್ಯೋಮವೇ ಕೇಳ್ಳೈ ಪರಬ್ರಹ್ಮ ॥ ॥೫೮॥

ತಾತ್ಪರ್ಯ: ಬ್ರಹ್ಮಾಂಡದ ಒಳ ಹೊರಗೆಲ್ಲಾ ತುಂಬಿಕೊಂಡು ಎಲ್ಲ ಕಡೆ ವ್ಯಾಪಿಸಿದ ಸಗುಣಸ್ವರೂಪವಾಗಿ ವಿರಾಜಿಸುತ್ತ ಬಳ್ಳಿಯಂತೆ ಹರಡಿಕೊಂಡ (ಭೂತಾಕಾಶಕ್ಕೆ) ಸತ್ಸ್ವರೂಪವೂ ಮೂಲಕಾರಣವೂ ಆಗಿರುವ ವ್ಯಾಪಕವಾದ ಚಿದಾಕಾಶವೇ ಪರಬ್ರಹ್ಮವೆನಿಸಿದೆ.

ಶಬ್ದಾರ್ಥ: ಆ ವಿಯಲ್ಲತೆಗೆ=ಬ್ರಹ್ಮಾಂಡದ ಒಳಹೊರಗೆಲ್ಲಾ ವ್ಯಾಪಿಸಿ ಸಗುಣಸ್ವರೂಪವಾಗಿ ಬಳ್ಳಿಯಂತೆ ಹರಡಿಕೊಂಡಿರುವ ಆಕಾಶಕ್ಕೆ; ಸದ್ಭಾವ=ಸತ್ (ಇರುವಿಕೆ) ಎಂಬ ಸ್ವರೂಪ. ಚಿದ್ವ್ಯೋಮ=ಆಕಾಶದಂತೆ ವ್ಯಾಪಕವಾದ ಜ್ಞಾನ

ಟಿಪ್ಪಣಿ-೧: ಸದ್ಭಾವವು+ಅಹ=ಸದೇವ ಸೋಮ್ಯೇದಮಗ್ರ ಆಸೀತ್ ಎಂಬ(ಛಾಂದೋಗ್ಯ) ಶ್ರುತಿಯಂತೆ ಜಗತ್ತಿಗೆ ಮೂಲಕಾರಣವಾದದ್ದು.

---

ಖರಕಿರಣ ಮೊದಲಾದ ತೇಜೋ
ಭರಿತರಹ ಪಾವಕಶಶಾಂಕರು
ಹರಿಹರಾದಿಗಳಾರ ದೀಪ್ತಿಯ ಧರಿಸಿ ಬೆಳಗುವರು ।
ಕರಣಗಿರಣಗಳೆಂಬ ತುಚ್ಛಗ
ಳರಿಯದಪ್ರತಿಮಪ್ರಕಾಶ
ಸ್ಫುರಿತತೇಜೋರಾಶಿಯೇ ಕೇಳ್ಳೈ ಪರಬ್ರಹ್ಮ ॥ ॥೫೯॥

ತಾತ್ಪರ್ಯ: ಸೂರ್ಯನೇ ಮೊದಲಾದವರಂತೆ ತೇಜಸ್ಸಿನಿಂದ ಕೂಡಿರುವ ಅಗ್ನಿ, ಚಂದ್ರ, ಹರಿ, ಹರರು ಯಾವ ಪರಬ್ರಹ್ಮನ ಪ್ರಕಾಶವನ್ನು ಹೊಂದಿ ಬೆಳಗುತ್ತಿರುವವರೋ ಆ ಪರಬ್ರಹ್ಮವು ಕಣ್ಣು ಕೈ ಕಾಲು ಮೊದಲಾದ ತುಚ್ಛವಾದ ಇಂದ್ರಿಯಗಳನ್ನು ಹೊಂದದೆ ಅಸಮಾನವಾಗಿಯೂ, ಸ್ವಯಂಪ್ರಕಾಶವಾಗಿಯೂ ವಿರಾಜಿಸುತ್ತಿರುವ ತೇಜೋರಾಶಿಯಾಗಿದೆ. ಅದೇ ಪರಬ್ರಹ್ಮವೆಂದು ತಿಳಿ.

ಶಬ್ದಾರ್ಥ: * ಖರಕಿರಣ=ಸೂರ್ಯ; * ತೇಜೋಭರಿತರು+ಅಹ=ಕಾಂತಿಯಿಂದ ಕೂಡಿರುವ; * ಪಾವಕ=ಅಗ್ನಿ; * ಶಶಾಂಕ=ಚಂದ್ರ; * ದೀಪ್ತಿ=ಬೆಳಕು

ಟಿಪ್ಪಣಿ: ಕರಣಗಿರಣಗಳೆಂಬ ತುಚ್ಛಗಳರಿಯದ=ಬ್ರಹ್ಮಕ್ಕೆ ಕಣ್ಣು ಕೈ ಮೊದಲಾದ ತುಚ್ಛವಾದ ಕರಣಗಳಿಲ್ಲ ಎಂದು ಒಂದರ್ಥ. ಬ್ರಹ್ಮನ ಅರಿವು ಯಾವ ಕರಣಗಳಿಗೂ ದಕ್ಕ ತಕ್ಕದ್ದಲ್ಲವೆಂದು ಇನ್ನೊಂದರ್ಥ.

**ಪಾಠಾಂತರ:** * ಖರಕಿರಣ=ಕರಚರಣ (ಕು); ಅಪ್ರತಿಮ ಪ್ರಕಾಶ=ಅಪ್ರತಿ ಸ್ವಪ್ರಕಾಶ (ಕು) ಆರದೀಪ್ತಿಯ ಧರಿಸಿ ಬೆಳಗುವರು=ಆವನ ದೀಪ್ತಿ ಲೇಶವ ಧರಿಸಿ (ಕು)

---

**ನೀರ ತಿಳಿ ನೀನೀ ಪ್ರಪಂಚವು**
**ತೋರದದರಿಂ ಮುನ್ನ; ತೋರದು**
**ತೋರುತಡಗಿದ ಬಳಿಕ; ತೋರ್ಪುದು ವರ್ತಮಾನದಲಿ ।**
**ತೋರದಡಗದೆ ಸಹಜವಾಗಿಯೆ**
**ತೋರಿ ತೋರುವ, ಮೂರುಕಾಲವ**
**ಮೀರಿ ಮಿಕ್ಕಾವಾಗ ತೋರುವುದೇ ಪರಬ್ರಹ್ಮ ॥ ॥೬೦॥**

**ತಾತ್ಪರ್ಯ:** ಸುಂದರನೆ, ತಿಳಿ, ಹೇಳುವೆ. ಈ ಜಗತ್ತು ಸೃಷ್ಟಿಯಾಗುವುದಕ್ಕೆ ಮೊದಲು ಕಾಣುತ್ತಿರಲಿಲ್ಲ. ಕಾಣುತ್ತಿದ್ದು ಇಲ್ಲದಂತಾದ ಮೇಲೆ ಕಾಣುವುದಿಲ್ಲ. ಪ್ರಸಕ್ತ ಕಾಲದಲ್ಲಿ ಮಾತ್ರ ಕಾಣುತ್ತದೆ. ಮೊದಲಲ್ಲಿ ಇದ್ದು ತೋರಿದಂತೆ ತೋರದೆ ಮತ್ತು ಇದ್ದುದ್ದು ನಾಶವಾದಂತೆ ನಾಶವಾಗದೆ, ಸ್ವಾಭಾವಿಕವಾಗಿ ಹಿಂದಿನಿಂದಲೂ ಕಾಣುತ್ತಿದ್ದು ಮುಂದೆಯೂ ಕಾಣುತ್ತಲೇ ಇರುವಂಥ, ಭೂತ, ಭವಿಷ್ಯತ್ ವರ್ತಮಾನ ಗಳೆಂಬ ತ್ರಿಕಾಲಗಳನ್ನು ಮೀರಿ ಸದಾ ಸಹಜವಾಗಿ ಕಾಣಿಸಿಕೊಳ್ಳುವ ಸತ್ಯಸ್ವರೂಪವೇ ಪರಬ್ರಹ್ಮವಾಗಿದೆ.

**ಶಬ್ದಾರ್ಥ:** **ನೀರ**=ಸುಂದರವಾದ ಮಗನೆ; **ತೋರದದರಿಂ ಮುನ್ನ**=ಅದು ಸೃಷ್ಟಿಯಾಗುವುದಕ್ಕೆ ಮೊದಲು ಕಾಣುತ್ತಿರಲಿಲ್ಲ; **ತೋರುತಡಗಿದಬಳಿಕ**=ಕಾಣುತ್ತಿದ್ದು ಇಲ್ಲದಂತಾದ ಮೇಲೆ ಕಾಣುವುದಿಲ್ಲ; **ತೋರದಡಗದೆ**=ಮೊದಲಿಲ್ಲದ್ದು ತೋರಿದಂತೆ ತೋರದೆ ಮತ್ತು ಇದ್ದುದ್ದು ನಾಶವಾದಂತೆ ನಾಶವಾಗದೆ; **ತೋರಿ ತೋರುವ**=(ಸ್ವಭಾವವಾಗಿ) ಹಿಂದಿನಿಂದಲೂ ಕಾಣುತ್ತಿದ್ದು ಮುಂದೆಯೂ ಕಾಣುತ್ತಲೇ ಇರುವಂಥ; **ಆವಾಗ**=ಯಾವಾಗಲೂ

---

**ಬಿಸಿಲ ತೊರೆಯಲಿ ಭಾವಿಸುತ್ತಿರೆ**
**ಪುಸಿಯೆನಿಪ ಜಲದಂಶಮುಂ ಶೋ**
**ಷಿಸಿ ನಿಜತ್ವ ಮರೀಚಿಕಾಂಶದೊಳುಳಿದ ತೆರನಂತೆ ।**
**ಪಸರಿಸಿರುತಿಹ ನಾಮರೂಪಿನ**
**ವಿಷಮವಹ ಮಾಯಾಂಶವಳಿಯ**
**ಲ್ಕೆಸೆವ ಸಚ್ಚಿತ್ಸುಖವದೇ ಕೇಳೈ ಪರಬ್ರಹ್ಮ ॥ ॥೬೧॥**

**ತಾತ್ಪರ್ಯ:** ಮೃಗಜಲವು ನೀರಿನ ಪ್ರವಾಹದಂತೆ ಕಂಡುಬಂದಾಗ ಅದನ್ನು ಪರಿಶೀಲಿಸಿದಾಗ ಅದರಲ್ಲಿ ನೀರಿನಂಶವಿರುವುದು ಸುಳ್ಳೆಂದು ತಿಳಿದು ಬರುತ್ತದೆ. ಆ ಬಿಸಿಲು ಮರೀಚಿಕೆಯಲ್ಲಿ ನೀರಿಲ್ಲದಿರುವ ಸತ್ಯಾಂಶವನ್ನು ವಿಚಾರಮಾಡಿ ತಿಳಿದ ಹಾಗೆಯೇ ಎಲ್ಲಕಡೆ ಅನೇಕ ನಾಮರೂಪಾದಿಗಳಿಂದ ಕೂಡಿ ವಿಕಾರ ಸ್ವರೂಪವಾದ ಮಾಯೆಯ ಸ್ವರೂಪನಾಶವಾದ ಮೇಲೆ ಕಾಣಿಸಿಕೊಳ್ಳುವ ಸಚ್ಚಿದಾನಂದವೇ ಪರಬ್ರಹ್ಮವೆಂದು ತಿಳಿ.

**ಶಬ್ದಾರ್ಥ:** ವಿಷಮವಹ=ಅನೇಕ ವಿಕಾರಸ್ವರೂಪವಾದಂಥ; * **ಬಿಸಿಲು ತೊರೆ**=ಮರೀಚಿಕೆ, ಮೃಗಜಲ, ಬಿಸಿಲುಗುದುರೆ; * **ಪುಸಿ**=ಸುಳ್ಳು; * **ಪಸರಿಸುವಂತಿಹ**=ಎಲ್ಲ ಕಡೆ ವ್ಯಾಪಕವಾದ; * **ಸಚ್ಚಿತ್ಸುಖ**=ಸಚ್ಚಿದಾನಂದ, ಸಹಜಾನಂದ.

**ಪಾಠಾಂತರ:** ಬಿಸಲ=ಬಿಸಿಲ ಶಬ್ದರೂಪ ಬಿಸಲ ಪದರೂಪ ಸ್ವೀಕರಿಸಿದೆ. (ಹೊಚಿ) (ಕು) ಪ್ರತಿಗಳಲ್ಲಿ ಬಿಸಲ ರೂಪವಿದೆ.

---

**ನೇಣು ಸರ್ಪಾಕಾರದಂದದಿ**
**ಕಾಣಿಸುತ್ತಿರೆ ನೋಡಿ ತಿಳಿಯಲು**
**ನೇಣು ನೇಣಾದಂತೆ ನಿಜವಹ ವಸ್ತುವೇ ಭ್ರಮೆಗೆ ।**
**ಕೇಣವಿಲ್ಲದೆ ಸಕಲಭುವನ**
**ಶ್ರೇಣಿಯಂತಿರೆ ತೋರ್ಪ ಭ್ರಮೆ ಕಿಡೆ-**
**ತಾನೆ ತಾನಾಗಿರ್ಪ ಸಹಜವದೇ ಪರಬ್ರಹ್ಮ ॥ ॥೬೨॥**

**ತಾತ್ಪರ್ಯ:** ಹಗ್ಗವು ಹಾವಿನಾಕಾರವಾಗಿ ಕಂಡಾಗ ಅದನ್ನು ಪರೀಕ್ಷಿಸಿದಾಗ ಅದು ಹಗ್ಗವೇ ಹೊರತು ಬೇರೆಯಲ್ಲ ಎಂದು ನಿಜ ತಿಳಿದುಬರುವಂತೆ, ಪರಬ್ರಹ್ಮನೇ ಬಗೆ ಬಗೆಯ ಭ್ರಮೆಗೆ ವಾಸಸ್ಥಾನವಾದ ಸಮಸ್ತಜಗತ್ತಿನ ಸಮೂಹವೇ ಹೊರ ನೋಟಕ್ಕೆ ನ್ಯೂನತಾರಹಿತವಾಗಿ ವ್ಯಾಪಿಸಿರುವ ಹಾಗೆ ಕಾಣುವ ಮಾಯೆ ಆಗಿದೆ. ಆ ಮಾಯೆ ತೊಲಗಿದಮೇಲೆ ಕಂಡುಬರುವ ಸರ್ವತಂತ್ರ ಸ್ವತಂತ್ರ ಸಹಜಸ್ವರೂಪವೇ ಪರಬ್ರಹ್ಮವಾಗಿದೆ.

**ಶಬ್ದಾರ್ಥ:** **ನೇಣು**=ಹಗ್ಗ; * **ಸರ್ಪಾಕಾರ**=ಹಾವಿನ ಆಕಾರ; * **ಭ್ರಮೆ**=ಮಾಯೆ, ಭ್ರಾಂತಿ; **ಕೇಣವಿಲ್ಲದೆ**=ನ್ಯೂನತೆಯಿಲ್ಲದೆ; **ಕಿಡೆ**=ನಾಶವಾಗಲು; **ಶ್ರೇಣಿ**=ಸಾಲು, ಸಮೂಹ; **ನಿಜವಹವಸ್ತುವೇ ಭ್ರಮೆಗೆ ಕೇಣವಿಲ್ಲದೆ ಸಕಲಭುವನ ಶ್ರೇಣಿಯಂತಿರೆ**=(ಹಗ್ಗವು ಹಾವು ಮೊದಲಾದ ಅನೇಕ ಕಲ್ಪನೆಗಳಿಗೆ ಆಧಾರವಾದಂತೆ) ಬ್ರಹ್ಮವೇ ಬಗೆ ಬಗೆಯ ಭ್ರಮೆಗೆ ವಾಸಸ್ಥಾನವಾದ ಸಮಸ್ತ ಜಗತ್ತಿನ ಸಮೂಹವಾಗಿರಲು.

---

**ಇಂದ್ರಜಾಲವನೊಡ್ಡಿ ತೋರಲು**
**ನಿಂದು ನೋಡುವ ನೋಟಕರು ದಿಟ**
**ವೆಂದು ಮೋಹಿಸಿ ಬಗೆವರದನಾ ಐಂದ್ರಜಾಲಿಕನು ।**
**ಹೊಂದದವ ಪುಸಿಯೆಂದರಿವನಾ**
**ಚಂದದಲಿ ಸಕಲವನು ಮೋಹಿಪ**
**ದಂದುಗದ ಮಾಯೆಯನು ಕಳೆದುಳಿದಿರ್ಪುದೇ ಬ್ರಹ್ಮ ॥ ॥೬೩॥**

**ತಾತ್ಪರ್ಯ:** ಯಕ್ಷಿಣಿಗಾರನು ಕಣ್ಕಟ್ಟು, ಮೋಡಿ ಮುಂತಾದ ಮಾಯಾ ಕೃತ್ಯಗಳನ್ನು ಮಾಡಿ ತೋರಿಸಿದಾಗ ನಿಂತುನೋಡುವ ಪ್ರೇಕ್ಷಕರು ಆಸಕ್ತಿಯಿಂದ ಅವೆಲ್ಲಾ ನಿಜವೆಂದು

ನಂಬಿ ನೋಡುವರು. ಆದರೆ ಯಕ್ಷಿಣಿಗಾರನು ಮಾತ್ರ ಅವುಗಳೆಲ್ಲ ನಿಜವಲ್ಲವೆಂದು ತಿಳಿದಿರುತ್ತಾನೆ. ಅದೇ ರೀತಿಯಲ್ಲಿ ಸಮಸ್ತವಸ್ತುಗಳಲ್ಲಿ ಆವರಿಸಿರುವ ದುಃಖಕಾರಕವಾದ ಮಾಯೆಯನ್ನು ಹೊರತುಪಡಿಸಿದಾಗ ಉಳಿಯುವುದು ಯಾವುದೋ ಅದೇ ಪರಬ್ರಹ್ಮವಾಗಿರುತ್ತದೆ.

**ಶಬ್ದಾರ್ಥ:** * ಇಂದ್ರಜಾಲ=ಯಕ್ಷಿಣಿ, ಮೋಡಿ, ಗಾರುಡಿ; * ನೋಟಕ=ಪ್ರೇಕ್ಷಕ; * ದಿಟ=ಸತ್ಯ; ಮೋಹಿಸಿ=ಆಸಕ್ತರಾಗಿ; * ಬಗೆವರು=ನಂಬುವರು; * ಪುಸಿ=ಸುಳ್ಳು; * ಆ ಚಂದದಲಿ=ಆ ರೀತಿಯಲ್ಲಿ; ಹೊಂದದೆ ಅವ=ಆ ಮಾಯೆಯ ಪದಾರ್ಥಗಳನ್ನು ನಿಜವೆಂದು ನಂಬಿ ತನ್ನ ಸುಖಕ್ಕೆಂದು ಅವುಗಳನ್ನು ಪಡೆಯುವುದಕ್ಕೆ ಹೋಗದೆ; ಮೋಹಿಪ=ಮೋಹವನ್ನುಂಟುಮಾಡುವ; ದಂದುಗದ=ದುಃಖಕಾರವಾದ; * ಕಳೆದುಳಿದಿರ್ಪುದು=ಕಳೆದು ಉಳಿಯುವುದು.

---

ಒಳಗೆ ಪಿಂಡಾಂಡಗಳನಾ ಹೊರ
ವಳಯದಲಿ ಬ್ರಹ್ಮಾಂಡತಂಡವ
ಬಳಸುತೊಳಹೊರಗಾವರಿಸಿಕೊಂಡಿರ್ಪ ಮಾಯೆಯಲಿ ।
ಹೊಳೆವ ನಾನಾವಿಧದ ಭೇದವ
ತಳೆದು, ಸಗುಣಬ್ರಹ್ಮರೂಪಿನ
ಲಳವಿಗೊಂಡಿಹುದಾವುದದು ತಾನೇ ಪರಬ್ರಹ್ಮ ॥ ॥೬೪॥

**ತಾತ್ಪರ್ಯ:** ಒಳಗಡೆಯಲ್ಲಿರುವ ಪಿಂಡಾಂಡಗಳನ್ನು ಅದರ ಹೊರ ಪ್ರದೇಶದಲ್ಲಿರುವ ಬ್ರಹ್ಮಾಂಡ ಸಮೂಹಗಳನ್ನು ಒಳಗೊಂಡು, ಎಲ್ಲ ಕಡೆ ಆವರಿಸಿಕೊಂಡಿರುವ ಮಾಯೆಯಿಂದ ಕಂಗೊಳಿಸುತ್ತ ನಾನಾ ರೀತಿಯ ವಿಕಾರಗಳನ್ನು ಹೊಂದಿ ಸಗುಣ ಬ್ರಹ್ಮಸ್ವರೂಪದಿಂದ ಯಾವುದು ಪ್ರಕಾಶಿಸುತ್ತಿರುವುದೋ ಎಂದರೆ ತಾನು ಸ್ವಭಾವವಾಗಿ ಅಪರಿಚ್ಛಿನ್ನವಾಗಿದ್ದರೂ ಸಗುಣರೂಪವಾಗಿ ಪರಿಚ್ಛೇದವನ್ನು ಹೊಂದಿರುವುದೇ ಪರಬ್ರಹ್ಮವು.

**ಶಬ್ದಾರ್ಥ:** ತಳೆದು=ಹೊಂದಿ; ಸಗುಣಬ್ರಹ್ಮರೂಪದೊಲಳವಿಗೊಂಡಿಹುದು=ತಾನು ಸ್ವಭಾವವಾಗಿ ಅಪರಿಚ್ಛಿನ್ನವಾಗಿದ್ದರೂ ಸಗುಣರೂಪವಾಗಿ ಪರಿಚ್ಛೇದವನ್ನು ಹೊಂದಿರುವುದು.

---

ಪ್ರಕೃತಿಯೊಳು ಬೆರೆದಿರ್ದು ಬ್ರಹ್ಮವು
ಪ್ರಕೃತಿಧರ್ಮಗಳಾದ ದುಃಖವ
ನಖಿಳಸುಖವನು ಹೊದ್ದದೆಂತಿಹುದೆಂದೊಡದ ಕೇಳು ।
ಸುಖಮಯಾತ್ಮಾಶ್ರಯದ ಬುದ್ಧಿಗೆ
ಸುಖವಿಮುಖತೆಯ ನೋಡೆ ನಿಜವಿದು–
ವಿಕೃತಿಯಿಲ್ಲದ ಸಂಗವಿರಹಿತವದು ಪರಬ್ರಹ್ಮ ॥ ॥೬೫॥

**ತಾತ್ಪರ್ಯ:** ಬ್ರಹ್ಮವು ಪ್ರಕೃತಿಯೊಳು ಬೆರೆತಿದ್ದರೂ ಪ್ರಕೃತಿಯ ಧರ್ಮಗಳಾದ ನಾನಾ ಬಗೆಯ ದುಃಖರಾಶಿಗಳನ್ನೂ ಬಗೆ ಬಗೆಯ ಸುಖಾನುಭವಗಳನ್ನು ಅನುಭವಿಸದೆ ಇರಲು ಹೇಗೆ ಸಾಧ್ಯ? ಎಂದು ಶುಕನು ಕೇಳಿದಾಗ ವ್ಯಾಸನು ಹೇಳಿದನು; ಬುದ್ಧಿಯು ಎಂದರೆ ಸೂಕ್ಷ್ಮರೂಪವಾದ ಮಹತ್ತತ್ವವಾದ ಪ್ರಕೃತಿಯು ಸುಖಸ್ವರೂಪಿಯಾದಂಥ ಆತ್ಮನನ್ನೇ ಆಶ್ರಯಿಸಿಕೊಂಡಿರುತ್ತದೆ ಎನ್ನುವ ಪಕ್ಷಕ್ಕೆ ಪ್ರಕೃತಿಯಲ್ಲಿ ಸದಾ ಸುಖವೇ ತೋರಬೇಕು. ಆದರೆ ಅನುಭವದಲ್ಲಿ ಹಾಗಿಲ್ಲ. ಪ್ರಕೃತಿಯಿಂದ ಸುಖ ವಿಮುಖತೆ ಆಗುತ್ತದೆ. ಸತ್ಯ ಸಂಗತಿ ಏನೆಂದರೆ ಸುಖ ದುಃಖಗಳಿಂದ ಕೂಡಿರುವ ಪ್ರಕೃತಿಯ ಸಂಗವಿಲ್ಲದವನು ಪರಬ್ರಹ್ಮನಾಗಿದ್ದಾನೆ.

**ಶಬ್ದಾರ್ಥ:** ಪ್ರಕೃತಿ=ಸೂಕ್ಷ್ಮರೂಪನಾದ ಮಹತ್ತತ್ವ; ಬುದ್ಧಿ=ಪ್ರಕೃತಿ ಸುಖದುಃಖಗಳನ್ನು ನೀಡುವಂಥದ್ದು; **ಸುಖಮಯಾತ್ಮ**=ಸದಾ ಆನಂದಸ್ವರೂಪಿ ಆದದ್ದು ಆತ್ಮ; **ಸುಖವಿಮುಖತೆ**=ದುಃಖ; **ನಿಜವಿದು**=ಸತ್ಯಸಂಗತಿ ಇದು; **ವಿಕೃತಿಯಿಲ್ಲದ**=ಸುಖದುಃಖಗಳ ಅನುಭವವಿಲ್ಲದ; **ಸಂಗವಿರಹಿತವು**=ಪ್ರಕೃತಿಯನ್ನು ಹೊದ್ದದ ಅಸಂಗವಾದ ಪರಬ್ರಹ್ಮವು.

**ಟಿಪ್ಪಣಿ–೧: ಸುಖಮಯಾತ್ಮಾಶ್ರಯದ ಬುದ್ಧಿಗೆ**=ಇಲ್ಲಿ ಬುದ್ಧಿಯೆಂದರೆ ಅದರ ಸೂಕ್ಷ್ಮರೂಪವಾದ ಮಹತ್ತತ್ವವನ್ನು ಎಂದರೆ ಪ್ರಕೃತಿಯನ್ನು ತೆಗೆದುಕೊಳ್ಳಬೇಕು. ಆ ಪ್ರಕೃತಿಯಲ್ಲಿ ಯಾವಾಗಲೂ ಸುಖವಿಲ್ಲದಿರುವುದು ಅನುಭವ. ಪ್ರಕೃತಿಯಿಂದ ದುಃಖವೂ ಆಗುತ್ತದೆ. ಇದಕ್ಕೆ ಕಾರಣವೇನೆಂದರೆ ಬ್ರಹ್ಮವು ಅಸಂಗವಾದದ್ದರಿಂದ ಅದಕ್ಕೆ ಪ್ರಕೃತಿಯೊಡನೆ ಸಂಗವಿಲ್ಲ.

---

**ಒಂದುದುಂಬರತರುವು ತುದಿಮೊದ**
**ಲಿಂದ ಕಾತಿಹ ಫಲಗಳಂದದ**
**ಲೊಂದು ಮೂಲಪ್ರಕೃತಿಯಲಿ ಬ್ರಹ್ಮಾಂಡತಂಡಗಳು ।**
**ಸಂದುಬಿಡದೇ ತುಂಬಿಕೊಂಡಿಹ**
**ವೆಂದು ಶ್ರುತಿಗಳು ಪೇಳುತಿಹವಾ**
**ಚಂದದಲಿ ಪ್ರಕೃತಿಯ ನಿಜಾಶ್ರಯವೇ ಪರಬ್ರಹ್ಮ ॥ ॥೬೬॥**

**ತಾತ್ಪರ್ಯ:** ಅತ್ತಿಯ ಮರದಲ್ಲಿ ಮೇಲಿನಿಂದ ಕೆಳಗಿನವರೆಗೆ ಕಾಯಿಬಿಟ್ಟ ಫಲಗಳಂತೆ ಮೂಲಪ್ರಕೃತಿಗೆ ಅಂಟಿಕೊಂಡು ಸಂದುಬಿಡದೆ ದಟ್ಟವಾಗಿ ತುಂಬಿಕೊಂಡ ಹತ್ತಾರು ಬ್ರಹ್ಮಾಂಡತಂಡಗಳಿವೆ ಎಂಬುದಾಗಿ ಶ್ರುತಿಗಳು ಹೇಳುತ್ತವೆ. ಅದೇ ರೀತಿಯಾಗಿ ಸಕಲ ಪ್ರಕೃತಿಗಳಿಗೂ ಮೂಲಪ್ರಕೃತಿ ಆಗಿರುವುದೇ ಪರಬ್ರಹ್ಮವಾಗಿದೆ.

**ಶಬ್ದಾರ್ಥ:** ಉದುಂಬರತರುವು=ಅತ್ತಿಯ ಮರ; * **ತುದಿಮೊದಲಿಂದ**=ಮೇಲಿನಿಂದ ಕೆಳಗಿನವರೆಗೆ; **ಕಾತಿಹಫಲಗಳ ಅಂದದಲಿ**=ಕಾಯಿಬಿಟ್ಟು ಹಣ್ಣುಗಳಾಗಿರುವಂತೆ; * **ಶ್ರುತಿಗಳು**=ಉಪನಿಷತ್ತುಗಳು; **ಪ್ರಕೃತಿಯ ನಿಜಾಶ್ರಯವೇ ಪರಬ್ರಹ್ಮ**=ಸಕಲ ಪ್ರಕೃತಿಗಳಿಗೂ ಮೂಲಾಧಾರವಾಗಿರುವುದೇ ಪರಬ್ರಹ್ಮ;

**ಟಿಪ್ಪಣಿ–೧: ಕಾತಿಹಫಲಗಳಂದದಲಿ**=ಏಷೋಽಣಿಮಾ ಐತದಾತ್ಮ್ಯಮಿದಂ ಸರ್ವಂ=ಶ್ರುತಿ

**ಟಿಪ್ಪಣಿ–೨:** ಸ ಏಕೋ ಬ್ರಹ್ಮ ಉಚ್ಯತೇ (ಉಪನಿಷತ್ತು, (ಕು) ಪ್ರತಿ)

**ಟಿಪ್ಪಣಿ–೩:** ಪ್ರಕೃತಿಃ ಸಪರಃ ಪುಮಾನ್ (ಗೀತೆ)

**ಪಾಠಾಂತರ–೧:** * ಬೆರೆದಿರ್ದು=ಬೆರಸಿರ್ದ (ಕು)

**ಪಾಠಾಂತರ–೨:** * ಒಂದುದುಂಬರ ತರುವು=ಒಂದು ಅತ್ತಿಯ ಮರದ (ಕು) ತುಂಬಿಕೊಂಡಿಹ

---

**ಇರುವೆ ಕಡೆಯಾ ಬ್ರಹ್ಮಮೊದಲಾ**
**ಗಿರುತಿಹ ಪ್ರಾಣಿಗಳ ಬುದ್ಧಿಗೆ**
**ಬೆರೆಯದೆಯೆ ತತ್ಸಾಕ್ಷಿಯಾಗಿಯೆ ಬೆಳಗುತಿಹನಾವ ।**
**ಕರಣವಾವನ ಸನ್ನಿಧಾನದಿ**
**ಪರಿಪರಿಯ ಚೇಷ್ಟೆಗಳ ಪಡೆದಿಹ**
**ವರಿಯಲವಕೆ ನಿಮಿತ್ತಕಾರಣವೇ ಪರಬ್ರಹ್ಮ ॥ ॥೬೭॥**

**ತಾತ್ಪರ್ಯ:** ಬ್ರಹ್ಮನಿಂದ ಮೊದಲ್ಗೊಂಡು ಇರುವೆಯವರೆಗೆ ಲೋಕದಲ್ಲಿ ಇರುವ ಪ್ರಾಣಿಗಳ ಬುದ್ಧಿಯಲ್ಲಿ ಬೆರೆಯದೆ ಆ ಪ್ರಾಣಿಗಳ ಬುದ್ಧಿಗೆ ಸಾಕ್ಷೀಭೂತನಾಗಿ ಬೆಳಗುತ್ತಿರುವನೋ ಪರಮಾತ್ಮನ ಸನ್ನಿಧಿಯಲ್ಲಿ ಯಾವ ಕರಣಗಳು ನಾನಾ ಚೇಷ್ಟೆಗಳನ್ನು ಮಾಡುತಿಹವೋ ಆ ಕರಣಗಳಿಗೆ ತನ್ನ ಇರುವಿಕೆಯ ಪ್ರಭಾವದಿಂದಲೇ ಅವುಗಳ ಶಕ್ತಿಗೆ ಕಾರಣನಾಗಿರುವಂಥವನೇ ಪರಬ್ರಹ್ಮನಾಗಿದ್ದಾನೆ.

**ಶಬ್ದಾರ್ಥ:** * ಇರುವೆ ಕಡೆಯೂ ಬ್ರಹ್ಮ ಮೊದಲಾಗಿ=ಪಿಪೀಲಿಕಾದಿ ಬ್ರಹ್ಮ ಪರ್ಯಂತ ಎಂಬುದು ನಾಣ್ನುಡಿ. * ಬೆರೆಯದೆಯೇ=ಲೀನವಾಗದೆ; ತತ್ಸಾಕ್ಷಿಯಾಗಿಯೆ=ಆ ಪ್ರಾಣಿಗಳ ಬುದ್ಧಿಗೆ ಸಾಕ್ಷಿಯಾಗಿಯೆ; * ಸನ್ನಿಧಾನದಿ=ಕೃಪೆಯಲ್ಲಿ, ಆಶ್ರಯದಲ್ಲಿ; ನಿಮಿತ್ತಕಾರಣವೇ=ತನ್ನ ಇರುವಿಕೆಯ ಪ್ರಭಾವದಿಂದಲೇ ಕರಣಗಳ ಶಕ್ತಿಗೆ ಕಾರಣನಾಗಿರುವಂಥ;

**ಪಾಠಾಂತರ–೧:** ಬ್ರಹ್ಮಮೊದಲಾಗಿ=ಇಂದ್ರ ಮೊದಲಾಗಿ (ಕು)

**ಪಾಠಾಂತರ–೨:** ಬುದ್ಧಿಗೆ ಬೆರೆಯದೆಯೇ=ಬುದ್ಧಿಯ ಬೆರಸದೇ (ಕು)

**ಪಾಠಾಂತರ–೩:** ಪಡೆದಿಹವರಿಯಲವಕೆ=ಪಡದಿಹ ಪರಿಯಲವಕೆ (ಕು)

---

**ಹೋಲಿಕೆಗೆ ಹೊಗಳುವುದು ಶ್ರುತಿಶಿರ**
**ಕೇಳನಾದಿಯದಾಗಿ ನಿತ್ಯ ನಿ**
**ರಾಳ ನಿಜಪದವಾವುದದು ತಾವೆಂದು ಯೋಗಿಗಳು ।**
**ತಾಳಿ ಹೃದಯಾಂಬುಜದಿ, ವಚನದಿ**
**ಹೇಳಲಾರದೆ ಸುಮ್ಮನಿಹುದನು;**
**ಕೇಳತೀಂದ್ರಿಯವಾದ ಚಿದ್ಘನವೇ ಪರಬ್ರಹ್ಮ ॥ ॥೬೮॥**

**ತಾತ್ಪರ್ಯ:** ಬ್ರಹ್ಮಸ್ವರೂಪವು ಇಂದ್ರಿಯಗಳಿಗೆ ಗೋಚರವಿಲ್ಲವೆಂದು ಹೋಲಿಕೆಯನ್ನು ಕೊಡುವುದಕ್ಕಾಗಿ ಉಪನಿಷತ್ತುಗಳು ಆ ಬ್ರಹ್ಮಸ್ವರೂಪವನ್ನು ಹೇಳುವುದಕ್ಕೆ ಹೊರಟರೆ,

ಸಾಗದೆ ಮಾತು ಹಿಂದಿರುಗುತ್ತದೆ, ಮನಸ್ಸು ಅದನ್ನು ಮುಟ್ಟಲರಿಯದೆ ಹಿಮ್ಮೆಟ್ಟುತ್ತದೆ ಎಂದು ಹೊಗಳುತ್ತಿವೆ. ಏಕೆಂದರೆ ಆ ಪರಬ್ರಹ್ಮವೆಂಬ ವಸ್ತುವು ಅನಾದಿಯೂ ಶಾಶ್ವತವೂ ನಿರಾಳವೂ ನಿಜಪದವೂ ಆಗಿದೆ ಎಂದು ತಿಳಿದು ಅದನ್ನು ಯೋಗಿಗಳು ತಮ್ಮ ಹೃದಯಕಮಲದಲ್ಲಿ ಧರಿಸಿಕೊಂಡು ಬಾಯಿಯಿಂದ ಹೇಳಲಿಕ್ಕೆ ಸಾಧ್ಯವಿಲ್ಲದೆ ಬ್ರಹ್ಮಾನಂದದಲ್ಲಿ ಮಗ್ನರಾಗಿರುತ್ತಾರೆ. ಹಾಗೆ ಇಂದ್ರಿಯಗಳನ್ನು ಮೀರಿದ ಆ ಚಿದ್ಘನವನ್ನೇ ಪರಬ್ರಹ್ಮವೆಂದು ತಿಳಿ.

**ಶಬ್ದಾರ್ಥ: ಹೋಲಿಕೆಗೆ**=ಬ್ರಹ್ಮಸ್ವರೂಪವು ಇಂದ್ರಿಯಗಳಿಗೆ ಗೋಚರವಲ್ಲ ಅದನ್ನು ಹೇಳುವುದಕ್ಕೆ ಹೊರಟರೆ ಮಾತು ಸಾಗದು, ಮನಸ್ಸು ಕೂಡ ಅದನ್ನು ಮುಟ್ಟಲರಿಯದು: **ಶ್ರುತಿಶಿರ**= **'ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ'**; **ನಿಜಪದ**=ಮತ್ತೊಂದರ ಆಧಾರವಿಲ್ಲದೆ ತನ್ನ ಮಹಿಮೆಯ ಆಧಾರದ ಮೇಲೆಯೇ ಇರುವುದು; * **ಅತೀಂದ್ರಿಯ**=ಇಂದ್ರಿಯಗಳನ್ನು ಮೀರಿದ; * **ಚಿದ್ಘನ**=ಚಿತ್ ಸ್ವರೂಪನು

---

**ದೇಶಕಾಲವ ಮೀರಿ, ಜನನ**
**ಕ್ಲೇಶಪಾಶವನುಳಿದು, ಹೊಳೆವಾ**
**ಕಾಶದಂದದಿ ಪೂರ್ಣವಾಗಿ, ನಿರಾವರಣವೆನಿಸಿ, ।**
**ಮೀಸಲಳಿಯದ ದಿವ್ಯತೇಜೋ**
**ರಾಶಿಯಾಗಿಹುದಾವುದದು ನಿ**
**ರ್ವಾಸನೆಯ ನಿಜ ನಿತ್ಯ ನಿರವಧಿಯೇ ಪರಬ್ರಹ್ಮ ॥ ॥೬॥**

**ತಾತ್ಪರ್ಯ:** ಬ್ರಹ್ಮವು ಎಲ್ಲ ದೇಶವನ್ನೂ ಎಲ್ಲ ಕಾಲವನ್ನೂ ತುಂಬಿಕೊಂಡು ಇನ್ನೂ ಮೇಲೆ ಇರುವುದರಿಂದ ಅದು ಅವೆರಡನ್ನೂ ಮೀರಿದಂತೆ ಆಯಿತು. ಬ್ರಹ್ಮ ಜ್ಞಾನವಾದರೆ ಹುಟ್ಟು ಸಾವುಗಳು ತಪ್ಪುವುದರಿಂದ ಹುಟ್ಟುವಿಕೆಯೆಂಬ ದುಃಖದ ಕಟ್ಟು ಕಳಚಿಕೊಂಡು ಹೋಗುವುದು. ಹೊಳೆಯುವ ಆಕಾಶದಂತೆ ಪೂರ್ಣವಾಗಿರುವ ಯಾವುದೇ ಮುಸುಕಿಲ್ಲದೆ ಮುಕ್ತವಾದ ಯಾವ ವಿಕಾರವನ್ನೂ ಪಡೆಯದ ದಿವ್ಯ ತೇಜಸ್ಸಿನರಾಶಿಯಾಗಿ ಇರುವುದು ಯಾವುದೋ ಅಂಥ ಯಾವ ವಾಸನೆಯೂ ಇಲ್ಲದಂಥ ಸತ್ಯಸ್ವರೂಪಿಯಾದ ಸ್ಥಿರವಾದ ಅನಂತವಾದ ಪರಬ್ರಹ್ಮವಾಗಿದೆ.

**ಶಬ್ದಾರ್ಥ: ದೇಶಕಾಲವ ಮೀರಿ**=ಬ್ರಹ್ಮವು ಎಲ್ಲ ದೇಶಗಳನ್ನೂ ಎಲ್ಲ ಕಾಲವನ್ನೂ ತುಂಬಿಕೊಂಡು ಇನ್ನೂ ಮೇಲೆ ಇರುವುದರಿಂದ ಅದು ಅವೆರಡನ್ನೂ ಮೀರಿದಂತಾಯಿತು. **ಜನನಕ್ಲೇಶ ಪಾಶವನುಳಿದು** =ಬ್ರಹ್ಮ ಜ್ಞಾನವಾದರೆ ಹುಟ್ಟು ಸಾವುಗಳು ತಪ್ಪುವುದರಿಂದ ಹುಟ್ಟುವಿಕೆಯೆಂಬ ದುಃಖದ ಕಟ್ಟು ಕಳಚಿಕೊಂಡು ಹೋಗುವುದು. ನಿರಾವರಣವೆನಿಸಿ=ಯಾವ ಮುಸುಕೂ ಇಲ್ಲದೆ; **ಮೀಸಲಳಿಯದ**=ಯಾವ ವಿಕಾರವನೂ ಪಡೆಯದ; **ನಿರ್ವಾಸನೆಯ**= ಯಾವ ವಾಸನೆಯೂ ಇಲ್ಲದಂಥ; ನಿರವಧಿ=ಅಪಾರವಾದದ್ದು.

---

ನಿರುಪಮ, ನಿರಾಲಂಬ, ನಿಗು
ನಿರವಧಿ, ನಿರಾತಂಕ, ನಿರ್ಮಲ,
ನಿರತಿಶಯ, ನಿಶ್ಚಲ, ನಿರಂಜನ, ನಿರ್ವಿಕಾರ, ನಿಜ, ।
ಪರತರ, ಪರಾನಂದ, ಪಾವನ,
ಪರಮಪದ, ಪರಿಪೂರ್ಣ, ಪರ, ಚಿ
ತ್ಪರ, ಸದದ್ವಯವಾದ ಪರಮಾರ್ಥವೆ ಪರಬ್ರಹ್ಮ ॥ ॥೭೦॥

ತಾತ್ಪರ್ಯ: ಪರಬ್ರಹ್ಮನ ಲಕ್ಷಣಗಳು ಇವು: ಹೋಲಿಕೆಯಿಲ್ಲದ್ದು (ನಿರುಪಮ), ಬೇರೆ ಆಶ್ರಯವಿಲ್ಲದ್ದು (ನಿರಾಲಂಬ), ಗುಣರಹಿತವಾದದ್ದು (ನಿರ್ಗುಣ), ಅವಧಿ ಯಿಲ್ಲದ್ದು (ನಿರವಧಿ), ಆತಂಕವಿಲ್ಲದ್ದು (ನಿರಾತಂಕ), ಮಲರಹಿತವಾದುದು (ನಿರ್ಮಲ), ಬಹು ಶ್ರೇಷ್ಠವಾದುದು (ನಿರತಿಶಯ), ಚಲಿಸದೆ ಇರುವುದು (ನಿಶ್ಚಲ), ಯಾವುದರ ಅಂಟೂ ಇಲ್ಲದ್ದು (ನಿರಂಜನ), ವಿಕಾರವಿಲ್ಲದ್ದು (ನಿರ್ವಿಕಾರ), ಸತ್ಯ ವಾದುದು (ನಿಜ), ಶ್ರೇಷ್ಠತರವಾದುದು (ಪರತರ), ಮಹದಾನಂದ ಸ್ವರೂಪವಾದುದು (ಪರಾನಂದ); ಪವಿತ್ರವಾದುದು (ಪಾವನ), ಸರ್ವ ಶ್ರೇಷ್ಠಸ್ಥಾನವುಳ್ಳದ್ದು (ಪರಮಪದ), ಸಮಸ್ತ ದೋಷರಹಿತವಾದುದು (ಪರಿಪೂರ್ಣ) ಅತ್ಯುತ್ತಮವಾದುದು (ಪರ), ಚಿತ್ಪರವಾದುದು (ಚಿತ್ಪರ), ಸದ್ರೂಪವೂ (ಅದ್ವಯರೂಪವೂ ಆದುದು) (ಸದದ್ವಯವು), ಆದ ಸತ್ಯ ಸ್ವರೂಪವೇ (ಪರಮಾರ್ಥ) ಅಂತಹ ಪರತತ್ವವೇ ಪರಬ್ರಹ್ಮವಾಗಿದೆ.

ಶಬ್ದಾರ್ಥ: ಸದದ್ವಯವಾದ=ಸದ್ರೂಪವೂ (ಇರುವಿಕೆಯ ಸ್ವಭಾವದ್ದು); ಅದ್ವಯರೂಪವೂ=(ತನಗೆ ಭಿನ್ನವಾದ ಎರಡನೆಯದಿಲ್ಲದ್ದು); ಪರಮಾರ್ಥ=ನಿಜವಾಗಿರುವುದು (ಸತ್ಯ ಸ್ವರೂಪ), ಪರತತ್ತ್ವ;
* ನಿರಂಜನ=ಸಮಸ್ತ ದೋಷರಹಿತವಾದುದು.

---

## ಉಪಸಂಹಾರ (೭೧)

ಇಂತು ತತ್ಪದಲಕ್ಷ್ಯವನು ದೃ
ಷ್ಟಾಂತಪೂರ್ವಕವಾಗಿ ನೆರೆ ತಿಳಿ
ವಂತೆ ಬೋಧಿಸಿ, ಸಕಲಮಾಯಾಭ್ರಾಂತಿಯನು ಬಿಡಿಸಿ, ।
ಅಂತವಿಲ್ಲದಪಾರವಸ್ತುವ
ಚಿಂತ್ಯವೇ ಪರಬೊಮ್ಮವೆಂದದ
ಸ್ವಾಂತದೊಳು ನಿಲಿಸಿದನು ಸಹಜಾನಂದಗುರುಪದವ ॥ ॥೭೧॥

ತಾತ್ಪರ್ಯ: ಈ ರೀತಿಯಲ್ಲಿ ವ್ಯಾಸ ಮುನಿಯು ತತ್ ಪದದ ಲಕ್ಷ್ಯವನ್ನು ತಕ್ಕ ನಿದರ್ಶನಗಳೊಂದಿಗೆ ಮನಸ್ಸಿಗೆ ಚೆನ್ನಾಗಿ ತಿಳಿಯುವಂತೆ ಬೋಧಿಸಿ ಶುಕಮುನಿಯ ಸಮಸ್ತ ಮಾಯಾ ಭ್ರಮೆಯನ್ನು ಹೋಗಲಾಡಿಸಿ ಅನಂತವಾದದನ್ನು ಅಪಾರವಸ್ತುವನ್ನು ಚಿಂತಿಸಲಿಕ್ಕೆ ಸಾಧ್ಯವಿಲ್ಲದ ತತ್ತ್ವವೇ ಪರಬ್ರಹ್ಮವೆಂದು ಶುಕನ ಮನಸ್ಸಿನಲ್ಲಿ ನಾಟುವಂತೆ

ಸಹಜಾನಂದವುಂಟು ಮಾಡುವ ಗುರುಪದವನ್ನು ನಿಲ್ಲಿಸಿದನು. (ಸಚ್ಚಿದಾನಂದಾನುಭವವನ್ನು ಉಂಟುಮಾಡಿದನು).

**ಶಬ್ದಾರ್ಥ:** ಸ್ವಾಂತದೊಳು=ಮನಸ್ಸಿನಲ್ಲಿ

**ಪದವಿಭಾಗ:** ಅಂತವಿಲ್ಲದಪಾರವಸ್ತುವಚಿಂತ್ಯವೇ=ಅಂತವಿಲ್ಲದ+ಅಪಾರವಸ್ತು+ಅಚಿಂತ್ಯವೇ

---

## ಮಂಗಲ (೭೨)

**ಪ್ರಣವಮಯ, ಪರತತ್ತ್ವ ಪರಶಿವ,**
**ತ್ರಿಣಯನ, ತ್ರಿಶೂಲಿ, ತ್ರಿವಿಷ್ಟಪ,**
**ಗಣವಿನುತ, ತ್ರಿದಶಾರಿಮರ್ದನ, ತ್ರಿವಿಧ, ಸರ್ವೇಶ, ।**
**ಗುಣರಹಿತ, ತ್ರಿಗುಣಪ್ರವರ್ತಕ,**
**ಗಣಪದಪ್ರದ, ಪ್ರಣತರಕ್ಷಕ,**
**ರಣವಿಜಯ, ಶ್ರೀ ಮಲ್ಲಿಕಾರ್ಜುನ ಸಲಹು ಮೂಜಗವ ॥ ॥೭೨॥**

**ತಾತ್ಪರ್ಯ:** ಓಂಕಾರರೂಪನಾದವನು (ಪ್ರಣವಮಯ), ಭೂತತತ್ತ್ವ ಮೊದಲಾದವುಗಳಿಗೆ ಆಧಾರವಾದ ತತ್ವಸ್ವರೂಪನು (ಪರತತ್ವ), ಪರಶಿವನು, ಮುಕ್ಕಣ್ಣನು, ತ್ರಿಶೂಲಧಾರಿ, ದೇವತಾಸಮೂಹದಿಂದ ಪ್ರಶಂಸಿತನಾದವನು, (ತ್ರಿವಿಷ್ಟಪಗಣ ವಿನುತ), ರಾಕ್ಷಸರನ್ನು ಸಂಹರಿಸಿದವನು (ತ್ರಿದಶಾರಿಮರ್ದನ), ಭೋಕ್ತೃ, ಭೋಗ್ಯ, ಭೋಗ ಎಂಬ ಮೂರುಬಗೆಗಳನ್ನು ತಾಳಿರುವನು (ತ್ರಿವಿಧ), ಸರ್ವೇಶ್ವರನಾದವನು, ನಿರ್ಗುಣ ರೂಪನು ಸತ್ತ್ವ ರಜ ತಮಗಳೆಂಬ ಗುಣಗಳನ್ನು ಪ್ರವರ್ತಿಸುವನು (ತ್ರಿಗುಣ ಪ್ರವರ್ತಕ) ಪ್ರಮಥಗಣಸ್ಥಾನವನ್ನು ಕೊಡತಕ್ಕವನು (ಗಣಪದಪ್ರದ), ಭಕ್ತ ರಕ್ಷಕ, (ಪ್ರಣತ ರಕ್ಷಕ), ತ್ರಿಪುರಸಂಹಾರ ಸಮರದಲ್ಲಿ ಜಯಶಾಲಿ ಆದವನು (ರಣ ವಿಜಯ) ಆದ ಶ್ರೀ ಮಲ್ಲಿಕಾರ್ಜುನ ದೇವನೇ ಮೂರು ಲೋಕಗಳನ್ನು ಕಾಪಾಡು.

**ಶಬ್ದಾರ್ಥ:** ಪ್ರಣವ=ಓಂಕಾರ; ಪರತತ್ತ್ವ=ಭೂತತತ್ತ್ವ ಮೊದಲಾದವುಗಳಿಗೆಲ್ಲ ಆಧಾರವಾಗಿರತಕ್ಕ ತತ್ತ್ವಸ್ವರೂಪನು; ತ್ರಿವಿಧಾ=ಭೋಕ್ತೃ, ಭೋಗ್ಯ, ಭೋಗ ಎಂದು ಮೂರು ಬಗೆಗಳನ್ನು ತಾಳಿರುವವನು; ತ್ರಿಗುಣ ಪ್ರವರ್ತಕ=ಸತ್ತ್ವ, ರಜ, ತಮ ಎಂಬ ಗುಣಗಳನ್ನು ಪ್ರವರ್ತಿಸುವವನು.

## ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ**
**ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ**
**ಅನುಭವಾಮೃತವೆಂಬ ಗ್ರಂಥದಲ್ಲಿ ತತ್ ಪದಾರ್ಥವೆಂಬ**
**ನಾಲ್ಕನೆಯ ಅಧ್ಯಾಯವು ಮುಗಿದುದು.**

# ಸಾರಸಂಗ್ರಹ

## ನಾಲ್ಕನೆಯ ಅಧ್ಯಾಯ – ತತ್ ಪದಾರ್ಥ ಶೋಧನೆ

ಹಿಂದೆ ತತ್ತ್ವಮಸಿ ಎಂಬ ವಾಕ್ಯದ ತ್ವಂಪದದ ಅರ್ಥವು ನಿರ್ಣಯವಾಯಿತಷ್ಟೆ. ಈಗ ತತ್ಪದದ ಅರ್ಥವನ್ನು ಗೊತ್ತು ಮಾಡಬೇಕು. ತತ್ ಎಂದರೆ ಜಗತ್ಸೃಷ್ಟಿ (ಏಕೆಂದರೆ ಉಪನಿಷತ್ತಿನಲ್ಲಿ ಬ್ರಹ್ಮನಿಂದ ಜಗತ್ತಿನ ಸೃಷ್ಟಿಯನ್ನೂ, ಆ ಸೃಷ್ಟಿಯಲ್ಲಿ ಜೀವರೂಪದಿಂದ ಬ್ರಹ್ಮನ ಪ್ರವೇಶವನ್ನೂ ಹೇಳಿ, ಆ ಬ್ರಹ್ಮವು ನೀನೆಂದು ಮುಗಿಸಿರುವುದು. ಜಗತ್ಸೃಷ್ಟಿಯನ್ನು ಮಾಡಿದ ಬ್ರಹ್ಮಸ್ವರೂಪಕ್ಕೆ ಈಶ್ವರನೆಂದೂ, ಆ ಸೃಷ್ಟಿ ಸ್ಥಿತಿ ಸಂಹಾರಕರ್ತನಾದ ಈಶ್ವರನೆಂದರ್ಥ ವಾಗುವದು. ಈ ಈಶ್ವರನೆಂಬುದು ತತ್ ಎಂಬ ಮಾತಿನ ವಾಚ್ಯಾರ್ಥ. ತತ್ತ್ವಂಪದಗಳ ವಾಚ್ಯಾರ್ಥಗಳಿಂದ ಜೀವೇಶ್ವರರು ಒಂದೆಂಬುವದು ಅನುಭವಕ್ಕೆ ಒಪ್ಪುವ ಮಾತಲ್ಲ. ಆದ್ದರಿಂದ ತ್ವಂಪದಕ್ಕೆ ಲಕ್ಷ್ಯಾರ್ಥವನ್ನು ಗ್ರಹಿಸಿದಂತೆ ತತ್ಪದಕ್ಕೂ ಲಕ್ಷ್ಯಾರ್ಥವನ್ನು ಗ್ರಹಿಸಬೇಕು. ತತ್ಪದದ ಲಕ್ಷ್ಯಾರ್ಥವು ಜಗತ್ಸೃಷ್ಟಿ ಸ್ಥಿತಿ ಸಂಹಾರ ಸಾಮರ್ಥ್ಯದ ಬೀಜವಾದ ಮಾಯಾಶಕ್ತಿಯಿಂದ ವಿರಹಿತವಾದ ಶುದ್ಧ ಬ್ರಹ್ಮ. ಈ ಅರ್ಥವನ್ನು ತೆಗೆದುಕೊಂಡರೆ ತ್ವಂಪದದ ಲಕ್ಷ್ಯಾರ್ಥವಾದ ಅಹಂಕಾರವಿರಹಿತ ಚೈತನ್ಯವೂ ತತ್ಪದದ ಲಕ್ಷ್ಯಾರ್ಥವಾದ ಮಾಯಾಶಕ್ತಿವಿರಹಿತಚೈತನ್ಯವೂ ಒಂದೆಂಬುದು ಸಮಂಜಸವಾಗುವದು. ತತ್ಪದದ ಈ ಲಕ್ಷ್ಯಾರ್ಥವನ್ನು ಸಾಧಿಸುವದಕ್ಕಾಗಿ ಈಶ್ವರನ ಮಾಯಾಶಕ್ತಿಯ ಸ್ವರೂಪವನ್ನು ಅದರಿಂದಾದ ಸೃಷ್ಟಿಯ ವಿಚಾರವನ್ನೂ ತಿಳಿದುಕೊಳ್ಳಬೇಕು.

ಮಾಯೆಯೆಂದರೆ ಇಲ್ಲದ್ದೆಂದರ್ಥ. ಇಂದ್ರಜಾಲದಂಥ ಈ ಶಕ್ತಿಯು ಆವರಣ, ವಿಕ್ಷೇಪ– ಎಂದೆರಡು ಬಗೆಯಾಗಿರುವದು. ಆವರಣ ಶಕ್ತಿಯು ವಸ್ತುವಿನ ನಿಜಸ್ವರೂಪವನ್ನು ತಿಳಿಯದಂತೆ ಮಾಡುವಂಥದ್ದು. ವಿಕ್ಷೇಪಶಕ್ತಿಯು ಬಗೆಬಗೆಯ ವಸ್ತುಗಳನ್ನು ಸೃಷ್ಟಿಸುವಂಥದ್ದು. ಇನ್ನು ಜಗತ್ತು ಸೃಷ್ಟಿಯಾದ ಕ್ರಮವೆಂದರೆ: ಮೊದಲು ಸಹಜಾನಂದಸ್ವರೂಪವಾದ ಬ್ರಹ್ಮವೊಂದೇ ಇತ್ತು. ಇದರಲ್ಲಿ ಮೊದಲೊಂದು (ಈ ವಿಷಯದಲ್ಲಿ ೪ ಅ–೫ನೇ ಪದ್ಯದ ಟಿಪ್ಪಣಿಯನ್ನು ನೋಡಿ) ಶಬ್ದವಾಯಿತು. ಆ ಶಬ್ದದಿಂದ ಇರುವಂತೆಯೂ ಇಲ್ಲದಂತೆಯೂ ಕಾಣುವಂಥ ಮಾಯಾ ಶಕ್ತಿಯುಂಟಾಯಿತು. ಅದರಿಂದ ಸಮಷ್ಟಿ ಬುದ್ಧಿ ಸ್ವರೂಪವಾದ ಮಹತ್ತತ್ತ್ವವೂ ಅದರಿಂದ ಸಾತ್ತ್ವಿಕ, ರಾಜಸ, ತಾಮಸವೆಂಬ ಮೂರು ಗುಣ ಭೇದಗಳಿಂದ ಮೂರು ಬಗೆಯ ಅಹಂಕಾರಗಳೂ ಉಂಟಾದವು. ಆಮೇಲೆ ಸಾತ್ತ್ವಿಕಾಹಂಕಾರದಿಂದ ಮನಸ್ಸೂ ರಾಜಸಾಹಂಕಾರದಿಂದ ಸೂಕ್ಷ್ಮಭೂತಗಳೂ ತಾಮಸಾಹಂಕಾರದಿಂದ ಪೃಥಿವ್ಯಾದಿಸ್ಥೂಲಭೂತಗಳೂ ಆದವು. ಈ ಪೃಥಿವ್ಯಾದಿಭೂತಗಳ (ಪಂಚೀಕರಣದ ವಿಷಯದಲ್ಲಿ ಅ–೪, ಪ–೮ರ ಟಿಪ್ಪಣಿ ನೋಡಿ) ಪಂಚೀಕರಣದಿಂದ ಚರಾಚರ ಜಗತ್ತೆಲ್ಲ ಆಯಿತು. ಈ ಭೂತಭಾಗಗಳೆಲ್ಲ ಮೂಲ ಚೈತನ್ಯದಿಂದ ಚೇತನವನ್ನು ಪಡೆಯಲಾಗಿ ಅಧಿದೇವತೆಗಳಾದವು. ಈ ಸೃಷ್ಟಿಯೂ ಸ್ಥಿತಿಲಯಗಳೂ ಬ್ರಹ್ಮನ ಸನ್ನಿಧಿಯ ಬಲದಿಂದ ಮಾಯೆಯಲ್ಲಿ ಸಂಭವಿಸಿರುವವು. ಈ ಮಾಯಾ ವಿಲಾಸವು ಕಣ್ಣಿಗೆ ಕಟ್ಟಿದಹಾಗೆ ಕಾಣುವದರಿಂದ ನಿಜವೆನಿಸುತ್ತದೆ. ಆದರೆ ಗುರುಮುಖದಿಂದ ತಿಳಿದಾಗ ಇಲ್ಲವೆನಿಸುತ್ತದೆ.

ಹೀಗೆ ಬ್ರಹ್ಮದಲ್ಲಿ ಮಾಯೆಯಿಂದ ಹೊರಬಿದ್ದಿರುವ ಈ ಜಗತ್ತಿನಲ್ಲಿ ಮಣಿಗಳಿಗೆಲ್ಲ ಆಧಾರವಾಗಿ ವ್ಯಾಪಿಸಿರುವ ಸೂತ್ರದಂತೆ ಬ್ರಹ್ಮವು ಸಮಸ್ತ ವಸ್ತುಗಳಿಗೂ ಆಧಾರವಾಗಿ ಸರ್ವವ್ಯಾಪಿಯಾಗಿರುವದು. ಆದರೆ ಬಿಸಿಲು ಆಕಾಶದಲ್ಲೆಲ್ಲ ಇದ್ದರೂ ಊರುಗಳಲ್ಲಿಯೇ ವಿಶೇಷ ರೂಪದಲ್ಲಿ ಕಾಣಿಸಿಕೊಳ್ಳುವಂತೆ ಚೈತನ್ಯವು ಎಲ್ಲ ಕಡೆಯಲ್ಲಿಯೂ ಇದ್ದರೂ ವಿಶೇಷವಾಗಿ ಇಂದ್ರಿಯಗಳಲ್ಲಿ ಕಾಣಿಸಿಕೊಳ್ಳುವದು. ಹಾಲಿನ ಸಮುದ್ರದಲ್ಲಿರುವ ಪ್ರಾಣಿಗಳು ಹಾಲಿನಿಂದ ಜೀವಿಸುವಂತೆ ಬ್ರಹ್ಮನಲ್ಲಿ ಮಾಯೆಯಿಂದ ಕಾಣುವ ಜೀವರು ಆ ಬ್ರಹ್ಮನ ಸುಖದ ಲೇಶವಾದ ವಿಷಯ ಸುಖದಿಂದ ಜೀವಿಸುತ್ತಿರುವರು.

ಸೂಜಿಗಳ ಚಲನೆಗೆ ಸೂಜಿಗಲ್ಲು ಹೇಗೋ ಹಾಗೆ ಜೀವರ ಪ್ರವೃತ್ತಿ ಸಾಮರ್ಥ್ಯಕ್ಕೆಲ್ಲ ಬ್ರಹ್ಮವೇ ಕಾರಣವಾಗಿರುವದು. ಸೂರ್ಯನ ತೇಜಸ್ಸು ಮೊದಲಾದ ವಿಭೂತಿವಿಶೇಷಗಳೂ ಆ ಬ್ರಹ್ಮದ ಪ್ರಭಾವವೇ ಆಗಿರುವದು. ಬಿಸಿಲಗುದುರೆಯನ್ನು ಚೆನ್ನಾಗಿ ನೋಡಿದರೆ ಕಾಣುತ್ತಿದ್ದ ನೀರು ಕಾಣದೇ ಹೋಗಿ ಬಿಸಿಲೊಂದೇ ಉಳಿಯುವಂತೆ ಮಾಯೆಯು ಹರಡಿರುವ ನಾಮರೂಪಗಳನ್ನೆಲ್ಲ ಕಳೆದು ನೋಡಿದರೆ ಆ ಬ್ರಹ್ಮಸ್ವರೂಪವು ಉಳಿದು ತೋರುವದು. ಇಂದ್ರಜಾಲ ವಿದ್ಯೆಗಿಂತ ಭಿನ್ನವಾಗಿ ಆ ವಿದ್ಯಾವಿಲಾಸಕ್ಕೆ ಸಾಕ್ಷಿಯಾಗಿರುವ ಐಂದ್ರಜಾಲಿಕನಂತೆ ಮಾಯೆಗಿಂತ ಭಿನ್ನವಾಗಿ ಮಾಯಾವಿಲಾಸಕ್ಕೆ ಸಾಕ್ಷಿಯಾಗಿರುವ ಆ ಬ್ರಹ್ಮವೇ ತತ್ವದದ ಅರ್ಥವು.

*****

# ಐದನೆಯ ಅಧ್ಯಾಯ

## ಅಸಿಪದಾರ್ಥ ನಿರ್ಣಯ

ಸೂಚನೆ॥

ಅಸಿಪದದಖಂಡಾದ್ವಯಾಮೃತ
ರಸವ ಸಾತ್ಯವತೇಯ ಶುಕಮುನಿ
ಗುಸುರಿದನು ವೇದಾಂತವಿವರಣೆಯಿಂದ ವಿಸ್ತರಿಸಿ ॥

ತಾತ್ಪರ್ಯ: ಅಸಿ (ಆಗಿದ್ದೀಯೆ) ಎಂಬ ಸಂಸ್ಕೃತ ಶಬ್ದದ ಅಭಿನ್ನವೂ, ಅದ್ವೈತವೂ, ಅಮೃತವೂ ಆದ ರಸವನ್ನು ವೇದಾಂತ ವಿಚಾರಗಳ ವಿವರಣೆಗಳಿಂದ ವಿಸ್ತಾರವಾಗಿ ಸತ್ಯವತೀದೇವಿಯ ಪುತ್ರನಾದ ವೇದವ್ಯಾಸನು ತನ್ನ ಮಗನಾದ ಶುಕಮುನಿಗೆ ಹೇಳಿದನು.

ಶಬ್ದಾರ್ಥ: ಅಸಿ=ಆಗಿದ್ದೀಯೆ, ಅಖಂಡ=ಅಭಿನ್ನ; *ಅದ್ವಯ=ಎರಡಿಲ್ಲದ್ದು (ಅದ್ವೈತ) ಸಾತ್ಯವತೇಯ=ಸತ್ಯವತೀ ದೇವಿಯ ಮಗ; * ಉಸುರಿದನು=ಹೇಳಿದನು; * ವಿಸ್ತರಿಸಿ=ವಿವರವಾಗಿ

---

### ಇಷ್ಟದೇವತಾ ಸ್ತುತಿ ಮೊದಲಾದದ್ದು (೧–೩)

ಮೇರುವೇ ಧನುವಹಿಪತಿಯೆ ಹೆದೆ,
ವಾರಿಜಾಕ್ಷನೆ ಬಾಣ, ಪುರಗಳು
ಮೂರು ಗುರಿ, ತ್ರಿಪುರಾರಿಯೇ ಬಲುವೀರ ಬಿಲುಗಾರ, ।
ಧಾರಿಣಿಯೆ ರಥ, ಸಾರಥಿಯೆ ವಿಧಿ,
ವಾರುವಂಗಳೆ ವೇದ, ಗಾಲಿಗ
ಳಾ ರವೀಂದುಗಳಾಗೆ ಶ್ರೀಗಿರಿನಾಥಗಿದಿರಾರು? ॥ ॥೧॥

ತಾತ್ಪರ್ಯ: ಈಶ್ವರನು ತ್ರಿಪುರಸಂಹಾರಕಾಲಕ್ಕೆ ಹೇಗೆ ಸಿದ್ಧನಾದನು ಆತನ ಹಿರಿಮೆಯೇನು ಎಂಬುದನ್ನು ಕವಿ ಇಲ್ಲಿ ವರ್ಣಿಸಿದ್ದಾನೆ. ಅವನಿಗೆ, ಮೇರುಪರ್ವತವೇ ಬಿಲ್ಲಾಯಿತು; ಆದಿಶೇಷನೇ ಬಿಲ್ಲಿನ ಹಗ್ಗವಾದನು; ವಿಷ್ಣುವೇ ಬಾಣವಾದನು; ಕಬ್ಬಿಣದ ಪುರ, ಬೆಳ್ಳಿಯ ಪುರ, ಬಂಗಾರದ ಪುರಗಳೆಂಬ ತ್ರಿಪುರಗಳೇ ಗುರಿಯಾದವು; ಭೂಮಿಯೇ ರಥವಾಯಿತು. ಬ್ರಹ್ಮವೇ ಸಾರಥಿಯಾದನು; ಋಕ್, ಯಜುಸ್, ಸಾಮ, ಅಥರ್ವ ಎಂಬ ನಾಲ್ಕು ವೇದಗಳೇ ಕುದುರೆಗಳಾದವು. ಸೂರ್ಯ ಚಂದ್ರರೇ ರಥದ ಚಕ್ರಗಳಾದರು. ಇಂಥ ಅತಿ ಸಾಹಸಿ ಬಿಲ್ಲುಗಾರನಾದ ತ್ರಿಪುರಾರಿಯಾದ ಶ್ರೀಶೈಲ ಮಲ್ಲಿಕಾರ್ಜುನ ದೇವನಿಗೆ ಎದುರಾಳಿಯಾರಿದ್ದಾರೆ?

ಶಬ್ದಾರ್ಥ: * ಮೇರುವೇ=ಮೇರುಪರ್ವತವೇ; * ಧನುವು=ಬಿಲ್ಲು; * ಅಹಿಪತಿಯೆ=ಆದಿಶೇಷನೇ; * ಹೆದೆ=ಬಿಲ್ಲಿನ ಹಗ್ಗ; ವಾರಿಜಾಕ್ಷನೆ=ವಿಷ್ಣುವೆ; * ವಿಧಿ=ಬ್ರಹ್ಮ * ಧಾರಿಣಿಯೆ=ಭೂಮಿಯೆ;

**ಪುರಗಳು ಮೂರು**=ಆಯಸ (ಕಬ್ಬಿಣದ) ಪುರ, ರಜತ (ಬೆಳ್ಳಿಯ) ಪುರ, ಸ್ವರ್ಣ (ಬಂಗಾರದ) ಪುರ; **ವಾರುವಂಗಳೆ**=ಕುದುರೆಗಳು; **ವೇದ**=ನಾಲ್ಕು ವೇದಗಳು (ಋಕ್, ಯಜುಸ್, ಸಾಮ, ಅಥರ್ವ), **ಶ್ರೀಗಿರಿನಾಥ**=ಶ್ರೀಶೈಲಮಲ್ಲಿಕಾರ್ಜುನ; * **ರವೀಂದು**=ಸೂರ್ಯ ಚಂದ್ರ

**ಟಿಪ್ಪಣಿ-೧:** "ಮೇರುವೇ ಧನು........." ಈ ಪದ್ಯ ಪುಷ್ಪದಂತನ ಶಿವಮಹಿಮ್ನಾ ಸ್ತೋತ್ರದಲ್ಲಿರುವ ಪದ್ಯದ ಅನುವಾದವಾಗಿದೆ.

**ಟಿಪ್ಪಣಿ-೨:** * ಇದು ರೂಪಕಾಲಂಕಾರದ ಪದ್ಯ.

**ಶಿವಮಹಿಮ್ನಾಸ್ತೋತ್ರ :**

**ರಥಃಕ್ಷೋಣೀ, ಯಂತಾ ಶತ ಧೃತಿಗೇಂದ್ರೋಧನುರಥೋ ।**
**ರಥಾಂಗೌ ಚಂದ್ರಾರ್ಕೌ, ರಥಚರಣಪಾಣಿಃ ಶರ ಇತಿ ॥**
**ದಿಧಕ್ಷೋಸ್ತೇಕೋಽಯಂ ತ್ರಿಪುರ ತೃಣಮಾಡಂಬರವಿಧಿ ।**
**ರ್ವಿಧೇಯೈಃ ಕ್ರೀಡಂತ್ಯೋ ನ ಖಲು ಪರತಂತ್ರಾಃ ಪ್ರಭುಧಿಯಃ ॥**

---

**ಪರರ ನಿಂದಿಸಿ ಜರಿದು, ತನ್ನನು**
**ಹಿರಿದು ಹೊಗಳಲು ಹಿಗ್ಗಿ, ಗುರುಹಿರಿ**
**ಯರನು ದೂಷಿಸಿ, ಕುಲಚಲಂಗಳ ಗಾಢಗರ್ವದಲಿ ।**
**ಅರಿಗಳಾರರ ಬಲೆಗೆ ಬಿದ್ದಿಹ**
**ಪರಮಪಾತಕಿಯಾದ ಶಿಶ್ನೋ**
**ದರಪರಾಯಣಗರುಹಬೇಡೀ ಅನುಭವಾಮೃತವ ॥** ॥೨॥

**ತಾತ್ಪರ್ಯ:** ಅನ್ಯರನ್ನು ದೂಷಿಸಿ ತಿರಸ್ಕರಿಸುತ್ತಾ, ತನ್ನನ್ನು ಅಧಿಕವಾಗಿ ಹೊಗಳಿದಾಗ ಹಿಗ್ಗುತ್ತಾ, ಗುರುಹಿರಿಯರನ್ನು ನಿಂದಿಸುತ್ತಾ, ತಾನು ಕುಲೀನನೆಂದೂ ಕುಲ ಮದದಿಂದ ಛಲಗಾರನೆಂದೂ, ಅಹಂಮದದಿಂದ ಹೆಚ್ಚಾದ ಅಹಂಕಾರದಲ್ಲಿರು ವವನಿಗೆ, ಕಾಮಕ್ರೋಧಲೋಭಮೋಹಮದಮತ್ಸರಗಳೆಂಬ ಅರಿಷಡ್ವರ್ಗಗಳಿಗೆ ಸಿಲುಕಿ ಮಹಾಪಾಪಗಳನ್ನು ಮಾಡಿದವನಿಗೆ, ಹೊಟ್ಟೆಪಾಡು ಮತ್ತು ರತಿಸುಖಗಳಲ್ಲಿ ಸದಾ ನಿರತರಾದವನಿಗೆ (ಶಿಶ್ನೋದರ ಪರಾಯಣನಿಗೆ) ಈ ಅನುಭವಾಮೃತವನ್ನು ಹೇಳಬೇಡ.

**ಶಬ್ದಾರ್ಥ:** * **ನಿಂದಿಸಿ**=ದೂಷಿಸಿ; **ಜರಿದು**=ಅವಹೇಳನ ಮಾಡಿ; * **ಕುಲಚಲಂಗಳ**=ಕುಲಮದ ಛಲಮದಗಳಲ್ಲಿ; * **ಅರಿಗಳ ಆರರಬಲೆಗೆ ಸಿಲುಕಿ**=ಕಾಮಕ್ರೋಧಲೋಭಮೋಹಮದಮತ್ಸರಗಳೆಂಬ ಆರುಜನ ಶತ್ರುಗಳೆಂಬ ಬಲೆಗೆ ಸಿಕ್ಕಿದವರಿಗೆ; (ಅ-೧, ಪದ್ಯ-೨೨ ನೋಡಿ) **ಶಿಶ್ನೋದರ ಪರಾಯಣಗೆ** =ರತಿಸುಖ ಮತ್ತು ಹೊಟ್ಟೆಪಾಡು ಇವುಗಳಲ್ಲಿ ಸದಾ ನಿರತರಾದವನಿಗೆ; **ಗಾಢಗರ್ವದಲಿ**=ಹೆಚ್ಚಾದ ಅಹಂಕಾರದಲ್ಲಿ

---

**ಇತರ ಮತಗಳನುಳಿದು, ತತ್ತ್ವದೊ**
**ಳತಿಶಯಾಭ್ಯಾಸವನು ಮಾಡುವ**
**ಮತಿಯುತರಿಗತಿಶಾಂತರಿಂಗಾಚಾರನಿರತರಿಗೆ ।**
**ಶ್ರುತಿಗುರುಗಳಲಿ ಭಕ್ತಿಯುಕ್ತರಿ**
**ಗತುಲಗತಿಕಾಂಕ್ಷಕರಿಗಾವಗ**
**ಮಥಿಸಿ ತಿಳಿವರಿಗೊಲಿದು ಪೇಳೀ ಅನುಭವಾಮೃತವ ॥ ॥೩॥**

**ತಾತ್ಪರ್ಯ:** ಬೇರೆಬೇರೆ ಮತಗಳೆಲ್ಲ ಚೆನ್ನಾಗಿ ಕಾಣುವವೆಂಬ ಚಪಲಗಳನ್ನು ಬಿಟ್ಟು, ತನ್ನ ಧರ್ಮದ ರಹಸ್ಯವನ್ನು ತಿಳಿಯುವುದರಲ್ಲಿ ಹೆಚ್ಚಾದ ಪ್ರಯತ್ನವನ್ನು ಮಾಡುವಂಥ ಪ್ರಾಜ್ಞರಾದ ಶಾಂತಚಿತ್ತರಿಗೆ ತನ್ನ ವರ್ಣಾಶ್ರಮದ ನಡೆವಳಿಕೆಗಳಲ್ಲಿ ಆಸಕ್ತರಾದವರಿಗೆ ವೇದಗಳಲ್ಲಿಯೂ, ಗುರುಗಳಲ್ಲಿಯೂ, ಶ್ರದ್ಧಾಭಕ್ತಿಯುಳ್ಳವರಿಗೆ ಎಲ್ಲಕ್ಕಿಂತಲೂ ಹೆಚ್ಚಿನ ಸದ್ಗತಿಯಾದ ಮೋಕ್ಷವನ್ನು ಬಯಸುವವರಿಗೆ, ಸದಾ ಚೆನ್ನಾಗಿ ವಿಚಾರಮಾಡಿ ನಿಶ್ಚಯವನ್ನು (ಸತ್ಯವನ್ನು) ಗೊತ್ತು ಮಾಡಿಕೊಳ್ಳುವವರಿಗೆ ಈ ಅನುಭವಾಮೃತವನ್ನು ಪ್ರೀತಿಯಿಂದ ಹೇಳು.

**ಶಬ್ದಾರ್ಥ:** **ಇತರಮತಗಳನುಳಿದು**=ಬೇರೆ ಬೇರೆ ಮತಗಳೆಲ್ಲ ಚೆನ್ನಾಗಿ ಕಾಣುವವೆಂಬ ಚಪಲವನ್ನು ಬಿಟ್ಟು; **ತತ್ತ್ವದೊಳತಿಶಯಾಭ್ಯಾಸವನು ಮಾಡುವ**=ತನ್ನ ಧರ್ಮದ ರಹಸ್ಯವನ್ನು ತಿಳಿಯುವುದರಲ್ಲಿ ಹೆಚ್ಚಾದ ಪ್ರಯತ್ನವನ್ನು ಮಾಡುವಂಥ; **ಆಚಾರನಿರತರಿಗೆ**=ತನ್ನ ವರ್ಣಾಶ್ರಮದ ನಡೆವಳಿಕೆಗಳಲ್ಲಿ ಆಸಕ್ತರಾದವರಿಗೆ (ಸದಾಚಾರಿಗಳ ಮನಸ್ಸು ಶುದ್ಧವಾಗಿರುವುದರಿಂದ ಅವರಿಗೆ ಮಾಡಿದ ಉಪದೇಶವು ಮಾತ್ರ ಸಾರ್ಥಕವಾಗುವುದು) **ಅತುಲಗತಿಕಾಂಕ್ಷರಿಗೆ**=ಎಲ್ಲಕ್ಕಿಂತಲೂ ಹೆಚ್ಚಿನ ಸದ್ಗತಿಯಾದ ಮೋಕ್ಷವನ್ನು ಬಯಸುವವರಿಗೆ (ಪ್ರಾಪಂಚಿಕ ಸುಖವನ್ನಾಗಲಿ, ದೇವಲೋಕದ ಸುಖವನ್ನಾಗಲಿ ಬಯಸುವವರಿಗೆ ವೇದಾಂತ ವಿಚಾರಗಳು ಹಿಡಿಯುವುದಿಲ್ಲವೆಂದು ತಿಳಿಯಬೇಕು). **ಮಥಿಸಿ ತಿಳಿವರಿಗೆ**=ಚೆನ್ನಾಗಿ ವಿಚಾರಮಾಡಿ ನಿಶ್ಚಯವನ್ನು ಗೊತ್ತು ಮಾಡಿಕೊಳ್ಳುವವರಿಗೆ ತಾವು ವಿಚಾರ ಮಾಡದೆ ಮತ್ತೊಬ್ಬರು ಹೇಳಿದ್ದನ್ನು ಸುಮ್ಮನೆ ಒಪ್ಪಿಕೊಂಡಿದ್ದು ಜ್ಞಾನವೆನಿಸುವುದಿಲ್ಲವಾದ್ದರಿಂದ ವೇದಾಂತ ಜ್ಞಾನದ ಉಪದೇಶವು ವಿಚಾರ ಸ್ವಭಾವದವರಿಗೆ ಚೆನ್ನಾಗಿ ಶೋಭಿಸುವುದು.

**ಟಿಪ್ಪಣಿ–೧:** **ಅಭ್ಯಾಸವನು ಮಾಡುವ**– ಎಂಬುದರಿಂದ ವಿವೇಕ, ಇತರಮತಗಳನುಳಿದು ಎಂಬುದರಿಂದ ವೈರಾಗ್ಯ, ಅತಿಶಾಂತರಿಗೆ ಎಂಬುದರಿಂದ ಶಮದಮಾದಿಗಳು, ಗತಿಕಾಂಕ್ಷರಿಗೆ ಎಂಬುದರಿಂದ ಮುಮುಕ್ಷುತ್ವ ಹೀಗೆ ಸಾಧನ ಚತುಷ್ಟಯಗಳು ಸೂಚಿತವಾಗಿದೆ.

**ಟಿಪ್ಪಣಿ–೨:** **ಸಾಧನ ಚತುಷ್ಟಯ**–ಬ್ರಹ್ಮ ಜಿಜ್ಞಾಸೆಗೆ ಬೇಕಾದ ಅರ್ಹತೆಯೇ ಸಾಧನ. ಇವು ನಾಲ್ಕು ೧) ನಿತ್ಯಾನಿತ್ಯ ವಿವೇಕ; ೨) ಇಹಮುತ್ರಾರ್ಥಫಲಭೋಗವಿರಾಗ; ೩) ಶಮಾದಿಷಟ್ಕ (ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಾನ); ೪) ಮುಮುಕ್ಷುತ್ವ (ಪರ–ಪ; ಪುಟ ೪೧೦) ದರ್ಶನ, ಶ್ರವಣ, ಮನನ, ನಿದಿಧ್ಯಾಸನ ಈ ನಾಲ್ಕನ್ನು ಸಾಧನ ಚತುಷ್ಟಯ ಎನ್ನುತ್ತಾರೆ. (ಶ್ರೀವತ್ಸ ನಿಘಂಟು, ಪುಟ ೩೩೨)

## ಜೀವತ್ವವು ಈಶ್ವರನ ಲೀಲೆ (೪)

**ಹೇಳಿದೆನು ತತ್ತ್ವಂಗಳಿಗೆ ಸಲೆ**
**ಮೇಳವಹ ಲಕ್ಷ್ಯಾರ್ಥವನು; ತಿಳಿ**
**ಮೇಲೆ ವಾಚ್ಯಾರ್ಥವನವಿದ್ಯಾವಿದ್ಯೆಯಿಂದಾದ ।**
**ಕಾಳೆನಿಪ ಜೀವೇಶ್ವರತ್ವವ;**
**ತಾಳಿ ಕಿಂಚಿಜ್ಞತ್ವದಲಿ ಮೇಣ್**
**ಲೀಲೆಯಿಂ ಸರ್ವಜ್ಞತಾದಿಯಲೆಸೆವ ಪರಮಾತ್ಮ ॥ ॥೪॥**

**ತಾತ್ಪರ್ಯ:** ತತ್ ಮತ್ತು ತ್ವಂ ಪದಗಳಿಗೆ (ತತ್ತ್ವಗಳಿಗೆ) ಒಪ್ಪುವ ಹಾಗೆ ಕೂಡುವಂಥ ಲಕ್ಷ್ಯಾರ್ಥವನ್ನು ಹೇಳಿದೆನು. ಅನಂತರ ಈಗ ಅಸಿಪದದ ತಾತ್ಪರ್ಯವನ್ನು ಹೇಳುವೆನು ತಿಳಿ. ಜೀವರನ್ನು ಮುಸುಕಿದ ಅವಿದ್ಯಾಶಕ್ತಿ ಮತ್ತು ಸತ್ತ್ವಗುಣ ಪ್ರಧಾನವಾದ ಈಶ್ವರಶಕ್ತಿ ಇವೆರಡರಿಂದಾದ ಬೀಜಭೂತವಾದ ಜೀವೇಶ್ವರತ್ವ ವಾಚ್ಯಾರ್ಥವನ್ನು ಹೇಳುವೆನು ತಿಳಿ. ಅಲ್ಪಜ್ಞಾನ, ಅಲ್ಪಶಕ್ತಿ, ಮೊದಲಾದವುಗಳನ್ನು (ಕಿಂಚಿಜ್ಞತ್ವದಲಿ) ಹೊಂದಿ, ಸರ್ವಜ್ಞತೆಯಿಂದ ಪ್ರಕಾಶಿಸುವ ಪರಮಾತ್ಮನಾಗಿದ್ದಾನೆ.

**ಶಬ್ದಾರ್ಥ: ತತ್ತ್ವಂಗಳಿಗೆ**=ತತ್ ಮತ್ತು ತ್ವಂ ಎಂಬ ಶಬ್ದಗಳಿಗೆ; * **ಮೇಳವಹ**=ಒಪ್ಪುವ ಹಾಗೆ ಕೂಡುವಂಥ; * **ವಾಚ್ಯಾರ್ಥವನು**=ಶಬ್ದವನು ಕೇಳಿದೊಡನೆ ತೋರುವ ಅರ್ಥವನ್ನು; * **ಲಕ್ಷ್ಯಾರ್ಥವನು**=ಬೇರೆ ಅರ್ಥಗಳು ವಾಚ್ಯಾರ್ಥದಿಂದ ಸೂಚ್ಯವಾಗಿ ಲಕ್ಷ್ಯಾರ್ಥವೆನಿಸುವುವು (ಕನ್ನಡ ಕೈಪಿಡಿ ಪುಟ-೧೩೩) **ಜೀವೇಶ್ವರತ್ವ**=ಜೀವ+ಈಶ್ವರತ್ವ ವಿಚಾರವನ್ನು; **ಕಿಂಚಿಜ್ಞತ್ವದಲಿ**=ಸ್ವಲ್ಪವನ್ನು ತಿಳಿದಿರುವಿಕೆ; **ಸರ್ವಜ್ಞತಾದಿಯಲಿ**=ಎಲ್ಲವನ್ನು ತಿಳಿದಿರುವಿಕೆ, ಎಲ್ಲ ಶಕ್ತಿಗಳೂ ಇರುವಿಕೆ ಮೊದಲಾದ ಗುಣಗಳಿಂದ ಕೂಡಿ; **ಕಾಳೆನಿಪ**=ಕಾಡು (ಕೀಳು)+ಎನಿಪ

**ಟಿಪ್ಪಣಿ: ಅವಿದ್ಯಾವಿದ್ಯೆಯಿಂದ**=ತಮ್ಮ ಮೂಲಸ್ವರೂಪದ ನಿಜಸ್ಥಿತಿಯ ಅರಿವು ಆಗದಂತೆ ರಜಸ್ತಮೋಗುಣ ಪ್ರಧಾನವಾಗಿ ಜೀವರನ್ನು ಮುಸುಕಿರುವ ಶಕ್ತಿಗೆ ಅವಿದ್ಯೆಯೆಂದು ಹೆಸರು. ಜಗತ್ತಿನ ಸೃಷ್ಟಿ, ಸ್ಥಿತಿ ಸಂಹಾರ ಮೊದಲಾದವುಗಳಿಗೆ ಸಾಧನವಾಗಿ ಸತ್ತ್ವಗುಣ ಪ್ರಧಾನವಾಗಿರುವ ಈಶ್ವರನ ಶಕ್ತಿಗೆ ವಿದ್ಯೆಯೆಂದು ಹೆಸರು. ಇವೆರಡೂ ತನ್ನನ್ನು ತಾನು ಅರಿಯದಿರುವದೆಂಬ ಅವಿದ್ಯೆಯಿಂದ ಕಲ್ಪಿತವಾದವುಗಳು.

---

## ಭೇದವು ಉಪಾಧಿಕೃತವು (೫-೮)

**ಸತ್ವರಜತಮವೆಂಬ ಮಾಯಾ**
**ಶಕ್ತಿಯಗುಣಂಗಳಲಿ ಭೇದಾ**
**ಪತ್ತಿ ವಿದ್ಯಾವಿದ್ಯೆಯೆಂದೆರಡಾಗಿ ತೋರಿಹುದು ।**
**ಕರ್ತೃರೂಪವವಿದ್ಯೆ; ವಿದ್ಯೆಯು**
**ಸತ್ತ್ವಗುಣಸಂಪತ್ತಿನಲಿ ಮೆರೆ**
**ಯುತ್ತಿಹುದು ಸರ್ವಜ್ಞತಾದಿಷಡಂಗರೂಪದಲಿ ॥ ॥೫॥**

**ತಾತ್ಪರ್ಯ:** ಸತ್ತ್ವ, ರಜ, ತಮಗಳೆಂಬ ಮೂರುಗುಣಗಳಿಂದ ಕೂಡಿರುವ ಮಾಯಾ ಶಕ್ತಿಯು ಭೇದಜ್ಞಾನದಿಂದ ವಿದ್ಯೆ ಮತ್ತು ಅವಿದ್ಯೆ ಎಂಬುದಾಗಿ ಎರಡು ವಿಧವಾಗಿ ಕಾಣಿಸಿಕೊಂಡಿದೆ. ಇವುಗಳಲ್ಲಿ ಅವಿದ್ಯೆ ಕರ್ತೃರೂಪವಾಗಿದೆ. ವಿದ್ಯೆಯು ಸತ್ತ್ವ ಗುಣ ಸಂಪತ್ತಿನಿಂದ ಕೂಡಿ ಸರ್ವಜ್ಞತ್ವ, ಸರ್ವೇಶ್ವತ್ವ, ಸರ್ವಾಂತರ್ಯಾಮಿತ್ವ, ಸರ್ವಸ್ರಷ್ಟುತ್ವ, ಸರ್ವರಕ್ಷಕತ್ವ, ಸರ್ವಸಂಹಾರತ್ವ – ಈ ಆರು ರೂಪದಿಂದ ವಿರಾಜಿಸುತ್ತಿದೆ.

**ಶಬ್ದಾರ್ಥ:** ಮಾಯಾ ಶಕ್ತಿ=ಪರಮಾತ್ಮನ ಅಧೀನದಲ್ಲಿರುವ ತ್ರಿಗುಣಾತ್ಮಕವಾದ ಶಕ್ತಿ; ಭೇದಾಪತ್ತಿ=ಭೇದವಾಗಿರುವಿಕೆ, ಎರಡು ವಿಧವಾಗಿರುವುದು; ಸರ್ವಜ್ಞತ್ವಾದಿಷಡಂಗರೂಪದಲಿ= ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ, ಸರ್ವಸ್ರಷ್ಟೃತ್ವ, ಸರ್ವರಕ್ಷಕತ್ವ, ಸರ್ವಸಂಹಾರಕತ್ವ, ಈ ಆರು ರೂಪಗಳಲ್ಲಿ; * ಷಡಂಗರೂಪ=ಆರು ರೂಪಗಳಲ್ಲಿ;

**ಪಾಠಾಂತರ:** * ಕರ್ತೃರೂಪವವಿದ್ಯೆ; ವಿದ್ಯೆಯು=ಕರ್ತೃರೂಪದವಿದ್ಯೆಯೇತಾ (ಕು) ಪ್ರತಿಯ ಪಾಠದಿಂದ ಕರ್ತೃರೂಪವೇ ಅವಿದ್ಯೆ ಎಂಬರ್ಥವಾಗುವ ಬದಲು, ವಿದ್ಯೆಯೇ ಸತ್ತ್ವ ಗುಣ ಸಂಪತ್ತಾಗಿ ಕರ್ತೃರೂಪವಾಗಿ ಸರ್ವಜ್ಞತ್ವಾದಿ ಸುಗುಣಗಳಿಂದ ಒಪ್ಪುತ್ತಿರುವುದು ಎಂದು ತಪ್ಪಾಗಿ ಅರ್ಥೈಸಲಾಗಿದೆ.

---

**ಶೈವ ವೈಷ್ಣವವೆಂಬ ಮತಗಳ**
**ವಾವೆನಲ್ಕೆ ಷಡಂಗಷಡ್ಗುಣ**
**ಭಾವಭೇದಗಳಾದವಲ್ಲದೆ ವಸ್ತುಭೇದವನು ।**
**ಆವ ಶ್ರುತಿಗಳು ಪೇಳ್ದವೇಕೋ**
**ದೇವನೆಂದೊರಲುತ್ತಲಿರೆ ಮಾ**
**ಯಾವಿಲಾಸದಿ ಭೇದವಲ್ಲದೆ ವಸ್ತು ಬೇರಿಲ್ಲ ॥** ॥೬॥

**ತಾತ್ಪರ್ಯ:** ಶೈವ ಮತ್ತು ವೈಷ್ಣವಗಳೆಂಬ ಮತ ಭೇದಗಳು ಏಕಿವೆ? ಎಂದರೆ ಮೂಲ ವಸ್ತು (ಪರಬ್ರಹ್ಮ) ಷಡಂಗರೂಪಿಯೆಂದು ಭಾವಿಸುವುದರಿಂದ ಶೈವವೂ, ಷಡ್ಗುಣರೂಪಿಯೆಂದು ಭಾವಿಸುವುದರಿಂದ ವೈಷ್ಣವವೆಂದೂ ಭಾವಭೇದಗಳಾಗಿವೆ. ವಾಸ್ತವವಾಗಿ ಈ ರೀತಿ ವಸ್ತುಭೇದವನ್ನು ಪರಮಾತ್ಮನ ಸ್ವರೂಪವನ್ನು ಯಾವ ಉಪನಿಷತ್ತುಗಳೂ ಹೇಳುವುದಿಲ್ಲ. ಎಲ್ಲ ಶ್ರುತಿಗಳೂ ದೇವರೊಬ್ಬನೇ (ಏಕೋ ದೇವನು) ಎಂದು ಸಾರುತ್ತಿವೆ. ಮತ್ತೇಕೆ ಈ ಭೇದವೆಂದರೆ ಮಾಯೆಯ ಪ್ರಭಾವದಿಂದ ಈ ಭೇದ ಕಾಣುತ್ತದೆ. ಆದರೆ ಮೂಲತಃ ದೇವನೊಬ್ಬನೇ ಆಗಿದ್ದಾನೆ. ಶಿವ–ವಿಷ್ಣು ಬೇರೆ ಬೇರೆ ಅಲ್ಲ.

**ಶಬ್ದಾರ್ಥ:** * ಶೈವ=ಶಿವನೇ ಪರಮಾತ್ಮ ವಿಷ್ಣುವಲ್ಲವೆಂದು ಭಾವಿಸುವವರು. * ವೈಷ್ಣವ=ವಿಷ್ಣುವೇ ಪರಮಾತ್ಮ ಶಿವನಲ್ಲ ಎಂದು ಭಾವಿಸುವವರು; ಷಡಂಗಷಡ್ಗುಣಭಾವಭೇದಗಳಾದವಲ್ಲದೆ=ಶೈವ, ವೈಷ್ಣವ ಭೇದವೇ ಹೊರತು ಆ ಮತಗಳಿಂದ ಪ್ರತಿಪಾದ್ಯವಾದ ವಸ್ತುವಿನಲ್ಲೇನೂ ಭೇದವಿಲ್ಲವೆಂದು ತಾತ್ಪರ್ಯ.

**ಟಿಪ್ಪಣಿ-೧: ಷಡಂಗಭಾವ=ಶೈವ=**ಪರಮಾತ್ಮ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ, ಸರ್ವಸ್ರಷ್ಟುತ್ವ, ಸರ್ವ ರಕ್ಷಕತ್ವ, ಸರ್ವ ಸಂಹಾರಕತ್ವ, ಈ ಷಡಂಗ ರೂಪದಲ್ಲಿರುವನೇ ಪರಮಾತ್ಮನೆಂದು ತಿಳಿಯುವವನು ಶೈವ. **ಷಡ್ಗುಣಭಾವ=ವೈಷ್ಣವ**=ಜ್ಞಾನ, ಬಲ, ವೀರ್ಯ, ತೇಜ, ಐಶ್ವರ್ಯ, ಶಕ್ತಿ ಎಂಬ ಆರು ಗುಣಗಳ ರೂಪದಲ್ಲಿ ಪರಮಾತ್ಮನಿದ್ದಾನೆ ಎಂದು ತಿಳಿಯುವುದು ವೈಷ್ಣವ. **ಏಕೋದೇವ**=ಈ ಎರಡೂ ಮತಗಳಿಂದ ಪ್ರೇರಿತವಾದ ವಸ್ತುವಿನಲ್ಲಿ ಭೇದವಿಲ್ಲ ಪರಮಾತ್ಮನೊಬ್ಬನೇ.

**ಟಿಪ್ಪಣಿ-೨:** ಏಕೋದೇವಃ ಬಹುಧಾನಿವಿಷ್ಟಃ (ಚಿತ್ತಿ ೪೧)
ಏಕೋ ದೇವಃ ಕೇಶವೋ ವಾ ಶಿವೋವಾ (ಶೃತಿ)
ಸದ್ವಿತೀಯೋಸ್ತಿಕಶ್ಚನ (ಶ್ರುತಿ)

---

**ಹೊಳೆವ ಶುದ್ಧಸ್ಫಟಿಕಸನ್ನಿಧಿ**
**ಯಲಿ ಜಪಾಕುಸುಮಾದಿಪುಷ್ಪಾ**
**ವಳಿಗಳಿರಲಾ ಸ್ಫಟಿಕ ತತ್ತತ್ಪುಷ್ಪ ವರ್ಣದಲಿ ।**
**ಹೊಳೆವವೋಲ್ನಿಜವಸ್ತು ಗುಣಸಂ**
**ಕುಲದ ಬುದ್ಧಿಯ ವೃತ್ತಿ ತನ್ನೊಳು**
**ಹೊಳೆಯೆ ಬಹುವಿಧಭೇದವಾಗಿಯೆ ತೋರುತಿಹುದೆಂದ ॥ ॥೭॥**

**ತಾತ್ಪರ್ಯ:** ದಾಸವಾಳದ ಹೂವು ಮೊದಲಾದ ಬಗೆ ಬಗೆಯ ಹೂವುಗಳನ್ನು ಥಳಥಳನೆ ಹೊಳೆಯುವ ಶುದ್ಧವಾದ ಸ್ಫಟಿಕ ಶಿಲೆಯ ಸಾನ್ನಿಧ್ಯದಲ್ಲಿ ಇಟ್ಟರೆ, ಆ ಸ್ಫಟಿಕವು ಆಯಾಯಾ ಹೂಗಳ ಬಣ್ಣಗಳಿಂದ ಶೋಭಿಸುತ್ತದೆ. ಅಂತೆಯೇ ಪರಬ್ರಹ್ಮ ವಸ್ತು ಬೇರೆಬೇರೆ ವಿಷಯಗಳ ಆಕಾರವನ್ನು ಪಡೆದ ತ್ರಿಗುಣಾತ್ಮಕವಾದ ಬುದ್ಧಿಯ ವೃತ್ತಿಗಳಿಂದ ಬೇರೆಬೇರೆ ವಸ್ತುಭೇದಗಳಾಗಿ ಕಾಣುವುದೇ ಹೊರತು ನಿಜವಾಗಿ ಸ್ಫಟಿಕ ವಸ್ತುಭೇದದಿಂದ ಕೂಡಿರುವುದಿಲ್ಲ (ಪರಬ್ರಹ್ಮ ವಸ್ತು ಒಂದೇ ಆಗಿರುತ್ತದೆ).

**ಶಬ್ದಾರ್ಥ: * ಶುದ್ಧ ಸ್ಫಟಿಕ**=ನಿರ್ಮಲವೂ ಪಾರದರ್ಶಕವೂ ಆದ ಒಂದು ಬಗೆಯ ಬಿಳಿಯ ಹೊಳಪಿನ ಕಲ್ಲು; **ಜಪಾಕುಸುಮ**=ದಾಸವಾಳದ ಹೂವು; **ಪುಷ್ಪಾವಳಿ**=ನಾನಾ ಬಗೆಯ ಹೂವುಗಳು; **ನಿಜ ವಸ್ತು**=ಪರಬ್ರಹ್ಮ

**ಟಿಪ್ಪಣಿ: ಗುಣ ಸಂಕುಲದ ಬುದ್ಧಿಯ ವೃತ್ತಿ ತನ್ನೊಳು ಹೊಳೆಯೆ**=ಬೇರೆ ಬೇರೆ ವಿಷಯಗಳ ಆಕಾರವನ್ನು ಪಡೆದ ತ್ರಿಗುಣಾತ್ಮಕವಾದ ಬುದ್ಧಿಯ ವೃತ್ತಿಗಳಿಂದ ಬೇರೆ ಬೇರೆ ವಸ್ತು ಭೇದಗಳು ಕಾಣುವವೇ ಹೊರತು ನಿಜವಾಗಿ ವಸ್ತು ಭೇದವಿಲ್ಲವೆಂದು ತಾತ್ಪರ್ಯ.

---

**ಅಂಬರದಲಿಹ ಚಂದ್ರನೊಬ್ಬನೆ;**
**ಕುಂಭಗಳ ಜಲಮಧ್ಯದಲಿ ಪ್ರತಿ**
**ಬಿಂಬಚಂದ್ರರು ಹಲಬರಾಗಿಯೆ ತೋರ್ಪ ತೆರನಂತೆ ।**
**ಅಂಬುಜಾಸನ ಮೊದಲು ಕಡೆಗಾ**
**ಸ್ತಂಬಬುದ್ಧಿಗಳಲ್ಲಿ ಜೀವಕ**
**ದಂಬವಾಗಿಯೆ ಪೊಳೆವನೊಬ್ಬನೆ ಚೇತನಾತ್ಮಕನು ॥ ॥೮॥**

**ತಾತ್ಪರ್ಯ:** ಆಕಾಶದಲ್ಲಿರುವ ಒಬ್ಬನೇ ಚಂದ್ರನು ಅನೇಕ ಗಡಿಗೆಗಳಲ್ಲಿ ಇರುವ ನೀರಿನನಡುವೆ ಪ್ರತಿಫಲಿಸಿ ಹತ್ತಾರುಚಂದ್ರರಾಗಿ ಕಾಣುವ ರೀತಿಯಲ್ಲಿ ಒಬ್ಬನೇ ಅಂತರ್ಯಾಮಿಯಾದ ಚೇತನಾತ್ಮಕನು, ಚತುರ್ಮುಖಬ್ರಹ್ಮವನ್ನು ಮೊದಲು ಮಾಡಿಕೊಂಡು, ಹುಲ್ಲುಕಡ್ಡಿಯವರೆಗೂ ಇರುವುದರಲ್ಲಿ ಜ್ಞಾನಾದಿಗಳ ತಾರತಮ್ಯವೆಷ್ಟಿದ್ದರೂ ಅಂತರ್ಯಾಮಿ ಒಬ್ಬನೇ ಆಗಿರುತ್ತಾನೆ. ಆದಕಾರಣ ಜೀವರ ಸಮೂಹವು ಒಬ್ಬನ ರೂಪಾಂತರವೇ ಆಗಿರುತ್ತದೆ.

**ಶಬ್ದಾರ್ಥ:** * ಅಂಬರದಲಿಹ=ಆಕಾಶದಲ್ಲಿರುವ; * ಕುಂಭಗಳ=ಗಡಿಗೆಗಳ; * ಪ್ರತಿಬಿಂಬ ಚಂದ್ರರು=ಪ್ರತಿಫಲಿಸಿದ ಚಂದ್ರರು; * ತೋರ್ಪತೆರನಂತೆ=ಕಾಣುವ ರೀತಿಯಲ್ಲಿ; ಅಂಬುಜಾಸನ =ಚತುರ್ಮುಖ ಬ್ರಹ್ಮ; ಮೊದಲು=ಮೊದಲ್ಗೊಂಡು; ಕಡೆಗೆ=ಕೊನೆಗೆ; ಜೀವಕದಂಬವು=ಜೀವರ ಸಮೂಹವು; ಒಬ್ಬನೆ ಚೇತನಾತ್ಮಕನು=ಒಬ್ಬನ ರೂಪಾಂತರವೆಂದು ತಾತ್ಪರ್ಯವು.

**ಟಿಪ್ಪಣಿ:** ಸ್ತಂಬ=ಮೋಟುಮರ ಅಥವಾ ಸಣ್ಣ ಕ್ರಿಮಿ ಅಥವಾ ಹುಲ್ಲು. ಇಲ್ಲಿ ಸ್ತಂಬವೆಂಬ ಮಾತಿಗೆ ಹುಲ್ಲು ಕಡ್ಡಿಯೆಂದರ್ಥವನ್ನು ಇಟ್ಟುಕೊಳ್ಳಬಹುದು. (೬ನೇ ಅಧ್ಯಾಯ ಪದ್ಯ ೬೦ ನೋಡಿ) ಚತುರ್ಮುಖಬ್ರಹ್ಮನನ್ನು ಮೊದಲುಮಾಡಿಕೊಂಡು ಹುಲ್ಲುಕಡ್ಡಿಯವರೆಗೂ ಇರುವದರಲ್ಲಿ ಜ್ಞಾನಾದಿಗಳ ತಾರತಮ್ಯ ಎಷ್ಟಿದ್ದರೂ ಅಂತರ್ಯಾಮಿಯೊಬ್ಬನೇ.

---

## ಅವಿದ್ಯೋಪಾಧಿಯಿಂದ ಜೀವತ್ವ (೯-೧೩)

**ಕೇಳವಿದ್ಯೋಪಾಧಿಯಿಂದಲಿ**
**ಹೇಳಲೇನದ, ಕರ್ತೃಭಾವವ**
**ತಾಳಿ ತನುಕರಣಾದಿಗುಣಗಣಗಳಲಹಂಕರಿಸಿ ।**
**ಸ್ಥೂಲ, ದೀರ್ಘನು, ಹ್ರಸ್ವ, ಕೃಶ, ನಾ**
**ಬಾಲ, ವೃದ್ಧನು, ಮರೆದೆನರಿದೆನು,**
**ಕೇಳೆ, ಕಾಣೆನು, ದುಃಖಿ, ಸುಖಿ, ತಾನೆಂದು ಬಗೆದಿಹನು ॥ ॥೯॥**

**ತಾತ್ಪರ್ಯ:** ಎಲೈ ಶುಕನೆ ಕೇಳು, ಅವಿದ್ಯೆಯ ಉಪಾಧಿಯಿಂದ ಆದ ಪರಿಣಾಮವನ್ನು ಏನೆಂದು ಹೇಳಲಿ? ಜೀವನು ನಾನು ಮಾಡುವವನೆಂಬ ಮುಂತಾದ ಅಹಂಕಾರದಿಂದ ಶರೀರ, ಇಂದ್ರಿಯಗಳು ಮೊದಲಾದವು ತಾನೇ ಎಂದು ಅಭಿಮಾನವಹಿಸಿ, ನಾನು ದಪ್ಪಗಿರುವೆನು, ಎತ್ತರಕ್ಕಿರುವೆನು, ಕುಳ್ಳಾಗಿರುವೆನು, ಸಣ್ಣಗಿರುವೆನು, ಹುಡುಗನು, ಮುದುಕನು ಆಗಿದ್ದೇನೆ, ಮರೆತೆನು, ತಿಳಿದೆನು, ಕೇಳಲಾರೆನು, ನೋಡಲಾರೆನು-ಎಂದೂ, ಸುಖಿಯೂ ನಾನೇ, ದುಃಖಿಯೂ ನಾನೇ ಎಂದೂ ತಿಳಿದುಕೊಂಡಿರುವನು.

**ಪದವಿಭಾಗ:** ಕೇಳವಿದ್ಯೋಪಾಧಿಯಿಂದಲಿ=ಕೇಳು+ಅವಿದ್ಯೋ+ಉಪಾಧಿಯಲಿ; *ತನುಕರಣಾದಿ ಗುಣಗಣಗಳಲಹಂಕರಿಸಿ=ತನು+ಕರಣಾದಿ+ಗುಣಗಣಗಳಲಿ+ಅಹಂಕರಿಸಿ.

**ಶಬ್ದಾರ್ಥ: ಕರ್ತೃಭಾವನ**=ನಾನು ಮಾಡುವೆನೆಂಬ ಮುಂತಾದ ಅಹಂಕಾರವನ್ನು; **ತನುಕರಣಾದಿಗುಣಗಣಗಳಲಹಂಕರಿಸಿ**=ಶರೀರ, ಇಂದ್ರಿಯ ಮೊದಲಾದವುಗಳೇ ತಾನೆಂದು ಅಭಿಮಾನವನ್ನು ವಹಿಸಿ, **ನಾ**=ನಾನು; * **ಸ್ಥೂಲನು**=ದಪ್ಪಗಿರುವೆನು; * **ದೀರ್ಘನು**=ಎತ್ತರ ವಾಗಿರುವೆನು; * **ಹ್ರಸ್ವ**=ಕುಳ್ಳಾಗಿರುವೆನು; * **ಕೃಶ**=ಸಣ್ಣಗಿರುವೆನು; * **ಬಾಲ**=ಹುಡುಗನು; * **ವೃದ್ಧನು**=ಮುದುಕನು.

---

**ಹೇಸಿಕೆಯ ಹೆಬ್ಬಡಿಕೆ, ಘನಸಂ**
**ಕ್ಲೇಶಕಾರಣವಾದ ತನುವಿನೊ**
**ಳಾಸೆಬಟ್ಟದರಲ್ಲಿ ಮಮತೆಯ ಮಾಡಿ ಮೋಹಿಸುತ, ।**
**ಗಾಸಿಬಡುವೀ ದೇಹಧರ್ಮವ**
**ನೈಸುವನು ತನ್ನಲ್ಲಿ ಕಲ್ಪಿಸಿ,**
**ದಾಸಣದ ಸನ್ನಿಧಿಯ ಮಣಿಯೊಲು ಜೀವನೆನಿಸುವನು ॥ ॥೧೦॥**

**ತಾತ್ಪರ್ಯ:** ಈ ಶರೀರವು ಹೊಲಸಿನ ಕೆಟ್ಟನಾತದಿಂದ ಕೂಡಿದೆ (ಹೇಸಿಗೆಯ ಹೆಬ್ಬಡಿಕೆ) ಬಹು ಹೆಚ್ಚಿನ ದುಃಖಕ್ಕೆ ಕಾರಣವಾದ ಈ ದೇಹಕ್ಕೆ ಆಸೆಪಟ್ಟು ಅದನ್ನು ತನ್ನದೆಂದು ಮೋಹಿಸುತ್ತ, ಚಿತ್ತಚಂಚಲನನ್ನಾಗಿ ಮಾಡುವ ದೇಹಧರ್ಮಗಳಾದ ಸ್ಥೂಲ, ಸೂಕ್ಷ್ಮ, ಕೃಶ, ಹ್ರಸ್ವ ಮೊದಲಾದ ಎಲ್ಲವನ್ನೂ ಆತ್ಮನಲ್ಲಿ ಕಲ್ಪಿಸಿಕೊಂಡು ಭ್ರಾಂತಿಯಿಂದ ಸ್ಫಟಿಕವು ಸ್ವಭಾವತಃ ಬೆಳ್ಳಗಿದ್ದರೂ ಕೆಂಪು ದಾಸವಾಳದ ಹೂವು ಹತ್ತಿರವಿರುವಾಗ ತಾನೂ ಕೆಂಪಾಗಿ ಕಾಣುವಂತೆ ಬ್ರಹ್ಮನು ತಾನು ಸ್ವಭಾವವಾಗಿ (ಸ್ಫಟಿಕದಂತೆ) ಶುದ್ಧರೂಪದಲ್ಲಿದ್ದರೂ ಬಗೆಬಗೆಯ ಬುದ್ಧಿವೃತ್ತಿಗಳ ಕಲ್ಪಿತ ಸಂಬಂಧದಿಂದ ಜೀವನು ಎನಿಸುತ್ತಾನೆ.

**ಶಬ್ದಾರ್ಥ: ಹೇಸಿಗೆಯ**=ಹೊಲಸಿನ; **ಹೆಬ್ಬಡಿಕೆ**=ಕೆಟ್ಟ ನಾತ; **ಘನಸಂಕ್ಲೇಶಕಾರಣವು**=ಬಹು ಹೆಚ್ಚಿನ ದುಃಖಕ್ಕೆ ಕಾರಣವು; * **ದಾಸಣ**=ಕೆಂಪು ದಾಸವಾಳದ ಹೂವು.

**ಟಿಪ್ಪಣಿ–೧: ಈ ದೇಹಧರ್ಮವನು+ಐಸುವನು**=ದೇಹಧರ್ಮಗಳಾದ ಸ್ಥೂಲ, ದೀರ್ಘ, ಹ್ರಸ್ವ ಮೊದಲಾದ ಎಲ್ಲವನ್ನು (ನಾನು ಸ್ಥೂಲನು ಎಂಬ ಮಾತಿನಲ್ಲಿ ನಾನು ಎಂಬುದು ನಿಜವಾಗಿ ಅಂತರ್ಯಾಮಿ ಚೈತನ್ಯವನ್ನು ಸೂಚಿಸುತ್ತದೆ. ಸ್ಥೂಲತ್ವವು ಹೊರಗಣ ದೇಹಕ್ಕೆ ಸಂಬಂಧಿಸಿದ್ದು. ಇವೆರಡನ್ನೂ ಗಂಟುಹಾಕಿ ಮಾತಾಡುವುದರಿಂದ ಆತ್ಮನಲ್ಲಿ ದೇಹದ ಧರ್ಮಗಳನ್ನು ಆರೋಪಿಸಿದಂತಾಯ್ತು.)

**ಟಿಪ್ಪಣಿ–೨: ದಾಸಣದ ಸನ್ನಿಧಿಯ ಮಣಿಯೊಲು**=ಸ್ಫಟಿಕವು ತಾನು ಸ್ವಭಾವವಾಗಿ ಬೆಳ್ಳಗಿದ್ದು ಕೆಂಪು ದಾಸವಾಳದ ಹೂ ಹತ್ತಿರದಲ್ಲಿರುವುದರಿಂದ ತಾನೂ ಕೆಂಪಾಗಿ ಕಾಣುವಂತೆ ಬ್ರಹ್ಮನು ತಾನು ಸ್ವಭಾವವಾಗಿ ಶುದ್ಧ ರೂಪದಲ್ಲಿದ್ದರೂ ಬಗೆ ಬಗೆಯ ಬುದ್ಧಿ ವೃತ್ತಿಗಳ ಕಲ್ಪಿತ ಸಂಬಂಧದಿಂದ ಜೀವನೆನಿಸುವನು ಎಂದು ತಾತ್ಪರ್ಯ.

---

**ತನ್ನ ಸಹಜಾನಂದವಹ ಚೈ**
**ತನ್ಯವನು ತನುವಿನಲಿ ಬಗೆದ**
**ನ್ಯೋನ್ಯವಿನಿಮಯವಾಗಿ ಮಾಡುತ, ಕಾದ ಕಬ್ಬಿಣದ ।**

**ನಿರ್ಣಯದಿ ಜರೆ, ಮರಣ, ಪುನರಪಿ**
**ಜನ್ಮಕರ್ಮಂಗಳಲಿ ಬಳಲುತ**
**ಬನ್ನ ಬಡುವವೊಲೆಸೆವುತಿಹಪರಗಳಲಿ ತೊಳಲುವನು ॥ ॥೧೧॥**

**ತಾತ್ಪರ್ಯ:** ತನ್ನ ಸಹಜಾನಂದ ಸ್ವರೂಪಕ್ಕೆ ಒಪ್ಪುವ ನಾನು ಎಂಬುದನ್ನು ಶರೀರಕ್ಕೆ ಅನ್ವಯಿಸಿ ಆತ್ಮನ ಧರ್ಮವನ್ನು ದೇಹಕ್ಕೂ ದೇಹಧರ್ಮವನ್ನು ಆತ್ಮಕ್ಕೂ ತಳುಕು ಹಾಕುತ್ತಾನೆ. ಕಾದ ಕಬ್ಬಿಣವು ನಿಗಿನಿಗಿ ಹೊಳೆಯುವುದು ಎನ್ನುವಾಗ ಅಗ್ನಿಯ ಧರ್ಮವನ್ನು ಕಬ್ಬಿಣದಲ್ಲಿ ಆರೋಪಿಸುವಂತೆ ತಾನು ಮೂಲಚೈತನ್ಯವೆಂದು ತಿಳಿಯದೆ ದೇಹವೇ ತಾನೆಂದು ತಿಳಿಯುತ್ತಾನೆ. ಇದರಿಂದ ಹುಟ್ಟು-ಸಾವು-ಹುಟ್ಟು ಗಳೆಂಬ ಪುನರ್ಜನ್ಮಗಳನ್ನು ಹೊಂದಿ ದುಃಖಪರಂಪರೆಗಳಿಂದ ತೊಳಲಾಡುವವನ ಹಾಗೆ ತೋರಿಕೆಯಂತೆ ಕಾಣಿಸಿಕೊಳ್ಳುತ್ತಾನೆ. (ಎಂದರೆ ಒಬ್ಬನಿಗೆ ಕನಸಿನಲ್ಲಿ ಕಷ್ಟವು ತೋರಿದರೂ ಅದು ನಿಜವಾಗಿ ಹೇಗಿಲ್ಲವೋ ಹಾಗೆ ಜನ್ಮಾಂತರಗಳಲ್ಲಿ ತೊಳಲಾಡುತ್ತಾನೆ.)

**ಶಬ್ದಾರ್ಥ:** * **ಸಹಜಾನಂದವಹ**=ಆನಂದ ರೂಪನಾದ ಮೂಲ ಚೈತನ್ಯ; **ತನ್ನ ಸಹಜಾನಂದವಹ ಚೈತನ್ಯವನು ತನುವಿನಲಿ ಬಗೆದು**=ತನ್ನ ಸಹಜಾನಂದ ಸ್ವರೂಪಕ್ಕೆ ಒಡ್ಡುವ ನಾನು ಎಂಬುದನ್ನು ಶರೀರಕ್ಕೆ ಅನ್ವಯಿಸುತ್ತಾ; ನಾನು ಸ್ಥೂಲನು ಎಂದರೆ ನಾನು ಎಂಬುದು ನಿಜವಾಗಿ ಆತ್ಮನಿಗೆ ಅನ್ವಯಿಸುವುದರಿಂದ ಇಲ್ಲಿ ದೇಹದ ಧರ್ಮವಾದ ಸ್ಥೂಲತ್ವವನ್ನು ಆತ್ಮನಲ್ಲಿ ಆರೋಪಿಸಿದಂತಾಯಿತು. **ಕಾದ ಕಬ್ಬಿಣದ ನಿರ್ಣಯದಿ**=ಕಾದ ಕಬ್ಬಿಣವು ನಿಗಿ ನಿಗಿ ಹೊಳೆಯುವುದು ಎನ್ನುವಾಗ ಅಗ್ನಿಯ ಧರ್ಮವನ್ನು ಕಬ್ಬಿಣದಲ್ಲಿ ಆರೋಪಿಸುವಂತೆ; **ಪುನರಪಿ ಜನ್ಮ ಕರ್ಮಗಳಲಿ**=ಮತ್ತೆ ಮತ್ತೆ ಹುಟ್ಟಿ ಸಾಯುವುದರಲ್ಲಿ ಮತ್ತು ಕರ್ಮಗಳನ್ನು ಮಾಡುವುದರಲ್ಲಿ; **ಬನ್ನ ಬಡುವವೋಲ್**=ಕಷ್ಟ ಪಡುವವನ ಹಾಗೆ ಎಂದಿರುವುದರಿಂದ ಕಷ್ಟವು ಬರೀ ತೋರಿಕೆಯೇ ಹೊರತು ನಿಜವಾಗಿಲ್ಲವೆಂದರ್ಥ. (ಒಬ್ಬನಿಗೆ ಕನಸಿನಲಿ ಕಷ್ಟವು ತೋರಿದರೂ ಅದು ಅವನಿಗೆ ನಿಜವಾಗಿ ಹೇಗಿಲ್ಲವೋ ಹಾಗೆ). * **ತೊಳಲುವನು**=ಒದ್ದಾಡುವವನು.

**ಟಿಪ್ಪಣಿ:** **ಅನ್ಯೋನ್ಯ ವಿನಿಮಯವಾಗಿ ಮಾಡುತ**=ಒಂದರ ಧರ್ಮವನ್ನು ಇನ್ನೊಂದರಲ್ಲಿ ಹಾಕುತ್ತ (ಆತ್ಮನ ಧರ್ಮವನ್ನು ದೇಹಕ್ಕೂ, ದೇಹದ ಧರ್ಮವನ್ನು ಆತ್ಮಕ್ಕೂ ಹಾಕುವುದು. ನೀನು ಎಂದು ಶರೀರವನ್ನು ಕುರಿತು ಹೇಳಿದರೆ ಆತ್ಮನನ್ನು ದೇಹದಲ್ಲಿ ಆರೋಪಿಸಿದಂತೆ ಆಯಿತು).

---

**ಈ ಪರಿಯ ಬಹುಜನ್ಮವಾಸನೆ**
**ಲೇಪವಡೆದಿರೆ, ಮರಳಿ ಸಂಸೃತಿ**
**ಕೂಪದೊಳು ಬಿದ್ದಾವಗಾಳುತ್ತೇಳುತಿಹನಾಗಿ, ।**
**ಕಾಪಥದಲೇ ನಡೆದು ಕೆಡುವನು;**
**ದೀಪಿಸುವ ತತ್ವದವ ಕಾಣದೆ,**
**ಭಾಪವಿದ್ಯೆಯ ಮಹಿಮೆಯೆಂತುಟೊ! ಮಗನೆ, ಕೇಳೆಂದ ॥ ॥೧೨॥**

**ತಾತ್ಪರ್ಯ:** ಈ ರೀತಿಯಲ್ಲಿ ಬಹು ಜನ್ಮಗಳ ವಾಸನಾ ಬಲವು ಅಂಟಿಕೊಂಡಿರಲಾಗಿ ಮತ್ತೆ ಮತ್ತೆ ಸಂಸಾರವೆಂಬ ಬಾವಿಯಲ್ಲಿ ಬಿದ್ದು ಯಾವಾಗಲೂ ಮುಳುಗುತ್ತಾ ಏಳುತ್ತಾ

ಜೀವನು ಇರುವವನಾಗಿ ಸದಾ ಕಾಲವೂ ದುರ್ಮಾರ್ಗದಲ್ಲೇ ಸಾಗುತ್ತ ಉದ್ಧಾರಗೊಳಿಸುವ ಪರಮಾತ್ಮಸ್ಥಿತಿಯನ್ನು ಕಾಣಲಾಗದೆ ಅಧಃಪತನ ಹೊಂದುತ್ತಿರುತ್ತಾನೆ. ಅವಿದ್ಯೆಯ ಮಹಿಮೆಯನ್ನು ಎಷ್ಟೆಂದು ಹೇಳೋಣ! ಮಗನೇ ಕೇಳು ಎಂದು ವ್ಯಾಸ ಹೇಳಿದನು.

**ಶಬ್ದಾರ್ಥ:** ಲೇಪವಡೆದಿರೆ=ಅಂಟಿಕೊಂಡಿರಲಾಗಿ; ಸಂಸೃತಿ ಕೂಪದೊಳು=ಸಂಸಾರವೆಂಬ ಬಾವಿಯಲ್ಲಿ; ಆಳುತ್ತ=(ಮುಳುಗುತ್ತ) ಆವಗ=ಸದಾ; ತತ್ವದವ=ಪರಮಾತ್ಮ ಸ್ಥಿತಿಯನ್ನು, ಭಾಪು=ಭಲರೆ, ಅರೆ! ಆಶ್ಚರ್ಯ ಸೂಚಕ ಅವ್ಯಯ.

**ಪದ ವಿಭಾಗ:** ಬಿದ್ದಾವಗಾಳುತ್ತೇಳುತಿಹನಾಗಿ=ಬಿದ್ದು+ಆವಗ+ಆಳುತ್ತ+ಏಳುತಿಹನು+ಆಗಿ; ಭಾಪವಿದ್ಯೆಯ=ಭಾಪು+ಅವಿದ್ಯೆಯ

**ಪಾಠಾಂತರ:** ತತ್ವದವ=ಈ ಶಬ್ದದ ಸ್ಥಳದಲ್ಲಿ ಕೆಲವು ಕಡೆ (ಕು ಪ್ರತಿ) ತತ್ಪಥವ ಎಂದು ಇದೆ. ತತ್ಪಥ=ಎಂದರೆ ಆ ದಾರಿ.

---

**ಪುಸಿಕಣಾ ಜೀವತ್ವ; ದುಃಖದ**
**ಘಸಣಿಯಾತ್ಮಂಗಿಲ್ಲ; ಜಲದಲಿ**
**ಮಿಸುಪ ದಿನಕರಬಿಂಬ ಜಲಗುಣಕಂಪಕಲುಷಗಳ ।**
**ಪಸರದಿಂದನುಭವಿಸುವಂದದ**
**ಲಸಮಚಿನುಮಯರೂಪನಿದರೊಳು**
**ಮಸಗುವನೆ? ನಿಸ್ಸಂಗ, ನಿರ್ಮಲ, ನಿತ್ಯಸುಖಿ ತಾನು ॥ ॥೧೩॥**

**ತಾತ್ಪರ್ಯ:** ಜೀವತ್ವ ಎಂಬುದು ಸುಳ್ಳು ಕಣಯ್ಯ; ಆತ್ಮನಿಗೆ ಸಂಸಾರದ ಸುಖ ದುಃಖಗಳ ತಿಕ್ಕಾಟವಿಲ್ಲ; ಕೊಳದ ನೀರಿನಲ್ಲಿ ಹೊಳೆಯುವ ಸೂರ್ಯನ ಬಿಂಬ ನೀರಿನ ತುಂಬ ವ್ಯಾಪಿಸಿದ್ದರೂ ನೀರಿನ ಕೊಳೆ ಉಬ್ಬರವಿಳಿತಗಳು ನೀರಿನ ಗುಣಕ್ಕೆ ಅಂಟಿರುವುದೇ ಹೊರತು ಸೂರ್ಯ ಬಿಂಬಕ್ಕೆ ಅಲ್ಲ. ಅದೇ ರೀತಿಯಲ್ಲಿ ಅಸಮಾನನೂ ಚಿನ್ಮಯ ರೂಪನೂ ಆದ ಆತ್ಮನು ಈ ಜೀವತ್ವದಲ್ಲಿ ಸೇರಿಕೊಂಡು ಒದ್ದಾಡುವುದಿಲ್ಲ ಏಕೆಂದರೆ ಆತನು ಸಂಗರಹಿತನು, ದೋಷದೂರನು, ಸದಾನಂದನು ಆಗಿದ್ದು ಇವನಿಗೆ ಸಂಸಾರದ ತಾಪತ್ರಯವಿಲ್ಲ.

**ಶಬ್ದಾರ್ಥ:** * ಜೀವತ್ವ=ಜೀವಧಾರಣೆ; ಘಸಣೆ=ತಿಕ್ಕಾಟ; ಜಲಗುಣ ಕಂಪಕಲುಷಗಳ=ನೀರಿನ ಗುಣವಾದ ನಡುಗುವಿಕೆಯನ್ನು, ಹೊಲಸನ್ನೂ; ಪಸರದಿಂದ=ಬಹಳವಾಗಿ, ತುಂಬ; ಮಸಗುವನೆ?=ಸೇರಿಕೊಂಡು, ಒದ್ದಾಡುವನೆ? (ನಿಸ್ಸಂಗತ್ವ ಮೊದಲಾದ ಗುಣಗಳುಳ್ಳ ಆತ್ಮನಿಗೆ ಸಂಸಾರದ ತಾಪತ್ರಯವಿಲ್ಲ ಎಂದರ್ಥ); * ನಿಸ್ಸಂಗ=ಸಂಗರಹಿತನು; * ನಿರ್ಮಲ=ಶುದ್ಧ ರೂಪನು, ದೋಷರಹಿತನು; * ನಿತ್ಯ ಸುಖಿ=ಸದಾನಂದರು.

---

## ಲಿಂಗದೇಹೋಪಾಧಿಯಿಂದ ಜನ್ಮಾಂತರಗಳು (೧೪-೧೫)

**ಲಿಂಗದೇಹವ ಹೊದ್ದಿದಂತಿಹ;**
**ಸಂಗವದರೊಳಗಿಲ್ಲ; ಘಟದೊಳು**
**ಸಂಗಿಸಿದ ನಭ ಘಟದ ಕೂಡೆಡೆಯಾಡುವಂದದಲಿ ।**
**ಲಿಂಗದೊಡನೆಡೆಯಾಡಿ, ಬಹುಜ**
**ನ್ಮಂಗಳಲಿ ತೊಳಲುವನು; ಲಿಂಗಕೆ**
**ಭಂಗವಾಗಲಖಂಡಚಿನುಮಯನೆನಿಸಿಕೊಂಡಿಹನು ॥ ॥೧೪॥**

**ತಾತ್ಪರ್ಯ:** ಲಿಂಗದೇಹವನ್ನು ಎಂದರೆ ಮನಸ್ಸು ಮತ್ತು ಇಂದ್ರಿಯಗಳಿಂದ ಕೂಡಿದ ಸೂಕ್ಷ್ಮಶರೀರವನ್ನು ಹೊಂದಿದ್ದರೂ ಅದರ ಸಂಬಂಧ ಆತ್ಮನಿಗಿರುವುದಿಲ್ಲ. ಹೇಗೆಂದರೆ ಮಡಕೆಯ ಸಂಬಂಧವನ್ನು ಪಡೆದ ಆಕಾಶವು ಮಡಕೆ ಚಲಿಸಿದಾಗ ಅದರೊಳಗಿನ ಆಕಾಶವು ಚಲಿಸಿದರೂ ಆಕಾಶಕ್ಕೆ ಚಲನೆ ಇಲ್ಲ. ಅದೇ ರೀತಿ ಈ ಸೂಕ್ಷ್ಮ ಶರೀರದ ಲಿಂಗದೇಹಿ ಈ ಲೋಕಕ್ಕೂ ಪರಲೋಕಕ್ಕೂ ಸುತ್ತಾಡಿ ನಾನಾ ಜನ್ಮಗಳಲ್ಲಿ ಸುತ್ತಾಡಿದರೂ ಸೂಕ್ಷ್ಮಶರೀರವು ಜ್ಞಾನಾಗ್ನಿಯಿಂದ ಸುಟ್ಟು ಹೋದರೂ ಜೀವನು ಅಖಂಡಚಿನ್ಮಯನೂ ಆದ ಬ್ರಹ್ಮವಾಗಿಯೇ ಇರುವನು.

**ಶಬ್ದಾರ್ಥ:** ಲಿಂಗದೇಹವ=ಮನಸ್ಸು ಮತ್ತು ಇಂದ್ರಿಯಗಳಿಂದ ಕೂಡಿದಂಥ ಸೂಕ್ಷ್ಮ ಶರೀರವನ್ನು; ಸಂಗಿಸಿದ=ಸಂಬಂಧವನ್ನು ಪಡೆದ; ನಭ=ಆಕಾಶವು; ಎಡೆಯಾಡಿ=ಈ ಲೋಕಕ್ಕೂ ಪರಲೋಕಕ್ಕೂ ಸುತ್ತಾಡಿ;

**ಟಿಪ್ಪಣಿ:** ಲಿಂಗಕೆ ಭಂಗವಾಗಲು+ಅಖಂಡಚಿನುಮಯನು+ಎನಿಸಿಕೊಂಡಿಹನು=ಸೂಕ್ಷ್ಮ ಶರೀರವು ಬಿದ್ದು ಹೋದರೂ ಅವನು ಬ್ರಹ್ಮವೆನಿಸುವನು (ಸ್ಥೂಲ ಶರೀರವು ಬಿದ್ದು ಹೋದರೂ ಜೀವನು ಸೂಕ್ಷ್ಮ ಶರೀರದಲ್ಲಿದ್ದೇ ಇರುವನು. ಆ ಸೂಕ್ಷ್ಮಶರೀರವು ಜ್ಞಾನಾಗ್ನಿಯಿಂದ ಸುಟ್ಟು ಹೋದರೆ ಅಧ್ಯಾಯ-೩ ಪದ್ಯ ೬೮ರಲ್ಲಿ ಹೇಳಿರುವಂತೆ ಅದಕ್ಕಿಂತ ಒಳಗಣ ಶರೀರವೆಂದು ಹೇಳಬೇಕಾದರೆ ಬ್ರಹ್ಮಕ್ಕೇ ಹೇಳಬೇಕಾಗಿರುವುದರಿಂದ ಅವನು ಬ್ರಹ್ಮವೇ ಆಗಿರುವನು).

---

**ಜೋಹದಂದದ ಜನ್ಮಜನ್ಮದ**
**ದೇಹಗಳು ಸುಖದುಃಖಕರಗಳು**
**ದೇಹಿಗಳಿಗಾವಾಗ ಲಿಂಗಶರೀರಸಂಗದಲಿ; ।**
**ಮೋಹಿಸುತೆ ಮಾಯಾಪ್ರಪಂಚಕೆ,**
**ದೇಹಿಯೆನಿಸುತ ಮರೆದು ತನ್ನನು,**
**ರಾಹು ತುಡುಕಿದ ಚಂದ್ರಮಂಡಲದಂತೆ ತೋರುವನು ॥ ॥೧೫॥**

**ತಾತ್ಪರ್ಯ:** ವೇಷಧಾರಿಗಳು ನಾನಾ ವೇಷಗಳನ್ನು ಧರಿಸುವ ರೀತಿಯಲ್ಲಿ ಜೀವನು ಜನ್ಮ ಜನ್ಮಾಂತರಗಳಲ್ಲಿ ಬೇರೆ ಬೇರೆ ದೇಹಗಳನ್ನು ಧರಿಸುತ್ತಾನೆ. ಈ ಲಿಂಗ ಶರೀರದ ಪರಿಣಾಮವಾಗಿ ಸದಾ ಕಾಲ ಸುಖದುಃಖಗಳನ್ನು ಅನುಭವಿಸುತ್ತಾನೆ.

ಆ ಜೀವನು ಮಾಯಾ ಪ್ರಪಂಚದಲ್ಲಿ ಮೋಹಿತನಾಗಿ ತಾನೇ ದೇಹಿಯೆಂದು ತಿಳಿದು ಕೊಳ್ಳುತ್ತಾನೆ. ಹೀಗೆ ತನ್ನನ್ನು ತಾನೇ ಮರೆತಾಗ ಅವನು ರಾಹುಗ್ರಸ್ತ ಚಂದ್ರನಂತೆ ತೋರುವನು. (ರಾಹು ನಿಜವಾಗಿ ಚಂದ್ರನನ್ನು ತುಡುಕಿರದೆ ನಮಗೂ ಚಂದ್ರ ಮಂಡಲಕ್ಕೂ ಹೇಗೆ ಅಡ್ಡಲಾಗಿರುವುದು ಮಾತ್ರವೋ ಹಾಗೆ ದೇಹಗಳು ಆತ್ಮನಿಗೆ ಹತ್ತಿಕೊಂಡಿರದೆ ನಮಗೂ ಆತ್ಮನಿಗೂ ನಡುವೆ ಅಡ್ಡಲಾಗಿ ಮಾತ್ರ ಇರುವುದು).

**ಶಬ್ದಾರ್ಥ: ಜೋಹದಂದದ**=ವೇಷಧಾರಿಗಳ ರೀತಿಯಲ್ಲಿ; **ದೇಹಿಗಳಿಗೆ**=ಜೀವರಿಗೆ; **ಆವಾಗ**=ಸದಾ; **ಮಾಯಾ ಪ್ರಪಂಚಕೆ ದೇಹಿಯೆನಿಸುತ**=ಪ್ರಪಂಚವು ನಿಜವಾಗಿ ಇಲ್ಲವೇ ಇಲ್ಲ, ಆದರೂ ಇರುವಂತೆ ಕಾಣುವುದು. ಆದ್ದರಿಂದ ಇಂಥ ಮಾಯಾ ಪ್ರಪಂಚಕೆ. **ದೇಹಿಯೆನಿಪನು**=ದೇಹವುಳ್ಳ ಜೀವನೆನಿಸುವನು **ತನ್ನನು**=ತನ್ನ ಅಖಂಡಾನಂದಸ್ವರೂಪವನ್ನು;

**ಟಿಪ್ಪಣಿ: ರಾಹುತುಡುಕಿದ ಚಂದ್ರಮಂಡಲದಂತೆ**=ಈ ಹೋಲಿಕೆಯಿಂದ ರಾಹು ನಿಜವಾಗಿ ಚಂದ್ರನನ್ನು ತುಡುಕಿರದೆ ನಮಗೂ ಚಂದ್ರಮಂಡಲಕ್ಕೂ ಹೇಗೆ ಅಡ್ಡವಾಗಿರುವುದು ಮಾತ್ರವೋ ಹಾಗೆ ದೇಹಗಳು ಆತ್ಮನಿಗೆ ಹತ್ತಿಕೊಂಡಿರದೆ ನಮಗೂ ಆತ್ಮನಿಗೂ ನಡುವೆ ಅಡ್ಡಲಾಗಿ ಮಾತ್ರ ಇರುವನೆಂದು ತಿಳಿಯಬೇಕು.

**ಪಾಠಾಂತರ: * ಸುಖದುಃಖಕರಗಳು ದೇಹಿಗಳಿಗಾಗುವಾಗ**=ಜೀವಂಗೆ ಸುಖದುಃಖಾಹವ ಗಳಾಗಿಹವು (ಕು); *** ಮೋಹಿಸುತೆ**=ಮೋಹಿಸಿಹ (ಕು); *** ಮಾಯಾ ಪ್ರಪಂಚಕೆ**=ಮಾಯಾ ಪ್ರಬಂಧಕೆ (ಕು)

---

## ಬ್ರಹ್ಮವೇ ಮಾಯೆಯಿಂದ ಜೀವನು (೧೬)

**ಅಂಕೆಯಿಲ್ಲದ ರಾಜ್ಯವನು ನಿ**
**ಶ್ಯಂಕೆಯಿಂದಾಳುವ ನೃಪಾಲಗೆ**
**ಮಂಕುಹಿಡಿಯಲು ತನ್ನನೇ ತಾ ರಂಕನೆಂಬಂತೆ ।**
**ಕೊಂಕು ಕೊರತೆಗಳಿಲ್ಲದಿರ್ಪ ನಿ**
**ರಂಕುಶದ ಪರಬೊಮ್ಮ ತನ್ನನು**
**ಸಂಕಲೆಯ ನರನಂತೆ ಕಿಂಕರನೆಂಬನೆಲ್ಲರಿಗೆ ॥ ॥೧೬॥**

**ತಾತ್ಪರ್ಯ:** ಅಪರಿಮಿತವಾದ ರಾಜ್ಯವನ್ನು, ತನ್ನನು, ಯಾರು ಗೆಲ್ಲುವರೋ ಎಂಬ ಅಳುಕು ಇಲ್ಲದೆ ನಿರಂಕುಶವಾಗಿ ರಾಜ್ಯವಾಳುತ್ತಿರುವ ರಾಜನಿಗೆ ಭ್ರಾಂತಿಉಂಟಾದಾಗ (ಹುಚ್ಚು ಹಿಡಿದಾಗ) ತಾನು ರಾಜನೆಂಬುವುದನ್ನು ಮರೆತು ತನ್ನನ್ನು ತಾನು ತಿರುಕನೆಂದು ತಿಳಿದುಕೊಂಡ ಹಾಗೆ ಸ್ವಲ್ಪವೂ ದುರ್ಗುಣವಿಲ್ಲದೆ ಅಪರಿಪೂರ್ಣತೆ ಯಿಲ್ಲದೆ ಸರ್ವತಂತ್ರ ಸ್ವತಂತ್ರ (ನಿರಂಕುಶ) ಪ್ರಭುವಾದ ಪರಬ್ರಹ್ಮನು ಸಂಕೋಲೆ ತೊಟ್ಟು ಸೆರೆಯ ಬಂಧನದಲ್ಲಿ ಸಿಲುಕಿದ ನರನ ಹಾಗೆ ತನ್ನನ್ನು ತಾನೇ ಎಲ್ಲರಿಗೂ ಸೇವಕನು ಎಂಬಂತೆ ಕಾಣುತ್ತಾನೆ.

**ಶಬ್ದಾರ್ಥ:** ಅಂಕೆಯಿಲ್ಲದ=ಇಷ್ಟೆಂದು ನೆಲೆಯಿಲ್ಲದ (ಅಪರಿಮಿತವಾದ); ನಿಶ್ಶಂಕೆಯಿಂದ=ತನ್ನನ್ನು ಯಾರು ಗೆಲ್ಲುವರೋ ಎಂಬ ಅಳುಕು ಇಲ್ಲದೆ; ರಂಕ=ತಿರುಕ; ಕೊಂಕು=ಕೆಟ್ಟ ಗುಣವಿರುವುದು; ಕೊರತೆ=ಗುಣದಲ್ಲಿ ಕಡಿಮೆಯಾಗಿರುವುದು;

**ಟಿಪ್ಪಣಿ:** ರಂಕ=(ತಿರುಕ) ನೃಪಾಲನು ಭಾಗ್ಯದಲ್ಲಿ ಹೆಚ್ಚಿನವನು ಮತ್ತು ಇತರರ ಮೇಲೆ ಆಜ್ಞೆಯನ್ನು ನಡೆಸುವವನು. ತಿರುಕನು ಬಡವರಲ್ಲಿ ಕೆಳಗಿನವನು. ಇತರರ ಆಳಾಗಿರುವವನು ಒಂದಕ್ಕೊಂದು ವಿರುದ್ಧವಾದ ಈ ಎರಡು ಭಾವನೆಗಳು ಒಬ್ಬನಲ್ಲಿಯೇ ಬಂದುದನ್ನು ತೋರಿಸುವುದಕ್ಕೆ ಈ ಹೇಳಿಕೆಯು ಉಪಯೋಗವಾಗಿದೆ.

**ಪಾಠಾಂತರ:** * ರಂಕ=ಲೆಂಕ (ಕು)

---

## ಸುಖದುಃಖಗಳು ಉಪಾಧಿಕರ್ಮಗಳು (೧೭-೧೮)

**ಲಿಂಗತನು ಚಿಚ್ಛಾಯೆಯೊಳು ತಾ**
**ಸಂಗಿಸಿ ಸಚೇತನವೆನಿಸಿ ಬಹು**
**ಭಂಗಬಡುವುದು ದುಃಖಸುಖದಲಿ ಕರ್ಮಫಲದಿಂದ; ।**
**ಅಂಗರಹಿತನಖಂಡಚಿನುಮಯ,**
**ಸಂಗವಿಲ್ಲದ ನಿಜ, ನಿರಂಜನ,**
**ಮಂಗಳಾತ್ಮಗೆ ದುಃಖಸುಖಸಂಬಂಧವಿಲ್ಲೆಂದ ॥ ॥೧೭॥**

**ತಾತ್ಪರ್ಯ:** ಇಂದ್ರಿಯಗಳಿಂದ ಕೂಡಿದ ಶರೀರವು ಜ್ಞಾನದ ಪ್ರಭಾವದೊಡನೆ ಸಂಬಂಧ ಹೊಂದಿ ಚೈತನ್ಯವುಳ್ಳದ್ದಾಗಿ ಜನ್ಮಾಂತರ ಸಂಬಂಧವಾದ ಪರಿಪಾಕದಿಂದ ಸುಖದುಃಖಗಳನ್ನು ಹೊಂದುತ್ತಾ ಕೋಟಲೆಗೊಳ್ಳುತ್ತಿರುವುದು. ಆದರೆ ಪರಮಾತ್ಮ ಸ್ವರೂಪನಾದ ಆತ್ಮನು ದೇಹರಹಿತನು; ಪರಿಪೂರ್ಣನಾದ ಚಿನ್ಮಯನು ನಿಸ್ಸಂಗನು; ಸತ್ಯಸ್ವರೂಪನು; ಪರಮಮಂಗಳಸ್ವರೂಪನು ಆಗಿದ್ದು ಇವನಿಗೆ ಲಿಂಗಶರೀರದ ಸುಖದುಃಖಗಳ ಸಂಬಂಧವೇ ಇರುವುದಿಲ್ಲ.

**ಶಬ್ದಾರ್ಥ:** ಚಿಚ್ಛಾಯೆಯೊಳು=ಜ್ಞಾನದ ಪ್ರಭಾವದೊಡನೆ; ಸಂಗಿಸಿ=ಸಂಬಂಧವನ್ನು ಪಡೆದು; * ಲಿಂಗತನು=ಇಂದ್ರಿಯಗಳಿಂದ ಕೂಡಿದ ದೇಹ; * ಸಚೇತನವೆನಿಸಿ=ಜೀವನೆನಿಸಿ; ಭಂಗಪಡುವುದು =ಕೋಟಲೆಗೊಳ್ಳುವುದು; ಕರ್ಮಫಲದಿಂದ=ಜನ್ಮಾಂತರದ ಕರ್ಮ ಪರಿಪಾಕದಿಂದ

**ಪದ ವಿಭಾಗ:** ಅಂಗರಹಿತನಖಂಡಚಿನುಮಯ=ಅಂಗರಹಿತನು+ಅಖಂಡಚಿನುಮಯ

---

**ಸಂಗದೋಷದಲುತ್ತಮಗೆ ದು**
**ಸ್ಸಂಗಿ, ಯೆಂಬಭಿಧಾನ ಬಂದಂ**
**ತಂಗರಹಿತನು ಸಂಗದೂರನು ಜೀವನೆನಿಸುವನು; ।**

**ಲಿಂಗಸಂಗವ ಪಡೆದು ದುಃಖ ತ**
**ರಂಗದೊಳಗಾಳುವನು; ಲಿಂಗಕೆ**
**ಭಂಗವಾಗಲಖಂಡನಾಗಿ ನಿಶ್ಚಲಾತ್ಮಕನು ॥ ॥೧೮॥**

**ತಾತ್ಪರ್ಯ:** ಕೆಟ್ಟದ್ದರ ಸಹವಾಸದಿಂದ ಉತ್ತಮನಾದವನು ದುಸ್ಸಂಗಿ (ದುಷ್ಟರ ಸಹವಾಸ) ಎಂಬ ಹೆಸರನ್ನು ಪಡೆದಂತೆ ಅಂಗರಹಿತನೂ ಸಂಗವಿಲ್ಲದವನೂ ಆದ ಜೀವನು ಲಿಂಗಶರೀರವನ್ನು ಪಡೆದಾಗ ದುಸ್ಸಂಗಿ ಎನ್ನಿಸುತ್ತಾನೆ. ಸಂಸಾರ ಸಾಗರದ ದುಃಖದ ಅಲೆಗಳಲ್ಲಿ ತೇಲಿ ಮುಳುಗುವನು; ಲಿಂಗಶರೀರ ನಾಶವಾದ ಕೂಡಲೇ ನಿಶ್ಚಲರೂಪಿಯಾದ ಜೀವನು ಅಖಂಡರೂಪಿ ಆಗಿರುವನು (ಪರಿಪೂರ್ಣರೂಪಿ ಆಗಿರುತ್ತಾನೆ)

**ಶಬ್ದಾರ್ಥ:** ಸಂಗದೋಷದಲಿ=ಕೆಟ್ಟದ್ದರ ಸಂಬಂಧದಿಂದ; * ಅಭಿಧಾನ=ಹೆಸರು; * ದುಸ್ಸಂಗಿ =ದುಷ್ಟರ ಸಹವಾಸಿ; * ಅಖಂಡನಾಗಿಹ=ಪರಿಪೂರ್ಣರೂಪಿ ಆಗಿರುತ್ತಾನೆ; * ಲಿಂಗಕೆ ಭಂಗವಾಗಲು =ಇಂದ್ರಿಯಾತ್ಮಕ ದೇಹ ನಾಶವಾಗಲು; * ಲಿಂಗಸಂಗವ ಪಡೆದು=ಲಿಂಗಶರೀರ ಪಡೆದು.

---

## ಅರಿವೆ ಮರವೆಗಳು ಕರಣಧರ್ಮಗಳು (೧೯-೨೨)

**ಮರೆದು ತನ್ನ ನಿಜಸ್ವರೂಪವ**
**ಗುರುಮುಖದಲದನರಿದೆನೆಂದೆನ**
**ಲರಿವುಮರವೆಗಳುಂಟೆ? ಆತ್ಮಗೆ; ಮನದ ಮರವೆಯದು; ।**
**ಅರಿವುಮಲ್ಲದು ಮರವೆಯಲ್ಲದು;**
**ಬರಿಯ ಬೆಳಕಿನ ಬೆಳಕೆ ಪೊಳೆವುದು;**
**ಕರಣದೊಳಗರಿವೆನಿಸಿ ಮರವೆಯದೆನಿಸಿಕೊಳುತಿಹುದು ॥ ॥೧೯॥**

**ತಾತ್ಪರ್ಯ:** ಆತ್ಮನು ತನ್ನ ನಿಜಸ್ವರೂಪವನ್ನು ಮರೆತು ಅದನ್ನು ಗುರುವಿನ ಮೂಲಕ ತಿಳಿದುಕೊಂಡೆ ಎಂದರೆ ನಂಬುವುದು ಹೇಗೆ? ಏಕೆಂದರೆ ಆತ್ಮನಿಗೆ ಜ್ಞಾನೋದಯ, ವಿಸ್ಮರಣೆಗಳಿರುವವೇ? ಇಲ್ಲ. ಅದೇನಿದ್ದರೂ ಮನಸ್ಸಿನ ಮರವೇ ಹೊರತು ಆತ್ಮನದಲ್ಲ. ಆದಕಾರಣ, ಅರಿಯುವುದೂ, ಮರೆಯುವುದೂ ಆತ್ಮನ ಲಕ್ಷಣವಲ್ಲ. ಆತ್ಮನು ಜ್ಞಾನರೂಪದ ಬೆಳಕಾಗಿ ಪ್ರಕಾಶಿಸುತ್ತಾನೆ. ನಿಜವಾದ ಜ್ಞಾನವೇ ಉಪಾಧಿಯಾದ ಮನಸ್ಸಿನಿಂದ ಅರಿವು ಮರೆವು ಎನಿಸಿಕೊಳ್ಳುವುದು.

**ಶಬ್ದಾರ್ಥ:** ಕರಣ=ಮನಸ್ಸು (ವಿಷಯಗಳನ್ನು ಅರಿಯುವ ಸಾಧನ); ಕರಣದೊಳಗೆ+ಅರಿವೆನಿಸಿ ಮರವೆ ಅದು ಎನಿಸಿಕೊಳ್ಳುತಿಹುದು=ನಿಜವಾದ ಜ್ಞಾನವೆ ಉಪಾಧಿಯಾದ ಮನಸ್ಸಿನಿಂದ ಅರಿವು ಮರವು ಎನಿಸಿಕೊಳ್ಳುವುದು.

**ಟಿಪ್ಪಣಿ–೧:** ಅರಿವುಮಲ್ಲದು ಮರೆವೆಯಲ್ಲದು=ಅರಿಯುವುದೆಂದರೆ ಏನನ್ನಾದರೂ ತಿಳಿಯುವುದು. ಮರೆಯುವುದೆಂದರೆ ಏನನ್ನಾದರೂ ಮರೆಯುವುದು. ಹೀಗೆ ಅರಿವು ಮರೆವು ವಿಷಯಗಳ ಸಂಬಂಧವುಳ್ಳವಾಗಿ ಮನಸ್ಸಿನ ಕೆಲಸವಾಗಿರುವುದು ಆತ್ಮ ಸ್ವರೂಪವು ಅರಿವೂ ಅಲ್ಲ ಮರೆವೂ ಅಲ್ಲ.

ಟಿಪ್ಪಣಿ–೨: ಬರಿಯ ಬೆಳಕಿನಬೆಳಕು=ಆತ್ಮಸ್ವರೂಪವನ್ನು ಬೆಳಕೆಂದು ಬಹಳ ಕಡೆ ಹೇಳುವುದುಂಟು. ಇಂಥ ಸಂದರ್ಭದಲ್ಲಿ ಬೆಳಕೆಂದರೆ ಸೂರ್ಯಚಂದ್ರರ ಬೆಳಕಿನಂತೆ ಇಂದ್ರಿಯ ವಿಷಯಗಳು ಅರ್ಥವಾಗುವಂತಹ ಬೆಳಕೆಂದು ತಿಳಿಯಬಾರದು. 'ನನ್ನ ಮನಸ್ಸಿಗೆ ಅದು ಹೊಳೆಯಿತೆಂದು' ನಾವು ಹೇಳುವವಷ್ಟೆ! ಅಲ್ಲಿ ಹೊಳೆಯಿತು ಎಂದರೇನು? ತಿಳಿಯಿತು ಎಂದರ್ಥ. ಅದರಂತೆ ಬೆಳಕೆಂದರೆ ಜ್ಞಾನ.

---

**ಅರಿದು ನೀ ಪರವಸ್ತುವಾದೊಡೆ**
**ಮರೆದು ನೀನೇನಾದೆ? ಅಹಹಾ!**
**ಅರಿವಿನಲಿ ಬೇರೊಬ್ಬ ಮರವೆಯಲೊಬ್ಬರೆರಡುಂಟೆ? ।**
**ಅರಿವು ಮರವೆಗಳಲ್ಲಿ ನೀನೆಡೆ**
**ವರಿಯದರಿವಾಗಿಪ್ಪೆ; ಕೇಳಾ**
**ಅರಿವುಮರವೆಗಳೆಂಬುವೆಲ್ಲವು ಕರಣಧರ್ಮಗಳು ॥ ॥೨೦॥**

ತಾತ್ಪರ್ಯ: ಅಹಹಾ! ಏನೆಂದು ಹೇಳಲಿ ನಿನ್ನ ಅಜ್ಞಾನಕ್ಕೆ! ನೀನು ಪರಬ್ರಹ್ಮಸ್ವರೂಪಿ ಆಗಿರುವಾಗ ನಿನ್ನನ್ನು ನೀ ಮರೆತಾಗ ನೀನು ಏನಾಗುತ್ತೀಯೆ? ನೀನು ಅರಿವಿನಲಿ ಒಬ್ಬನು ಮರವೆಯಲಿ ಇನ್ನೊಬ್ಬನು ಹೀಗೆ ಇಬ್ಬರಾಗುವುದು ಉಂಟೇ? ನೀನು ಜ್ಞಾನರೂಪಿ ಆದ್ದರಿಂದ ಅರಿವು ಮರವು ಎರಡು ಸ್ಥಿತಿಯಲ್ಲೂ ಎಡಬಿಡದೆ ಜ್ಞಾನರೂಪಿ ಆಗಿಯೇ ಇರುವೆ? ಅರಿವು ಮರವುಗಳು ಎಂಬುವುವೆಲ್ಲ ಮನಸ್ಸಿನ ಧರ್ಮಗಳಾಗಿವೆ.

ಶಬ್ದಾರ್ಥ: ಎಡೆವರಿಯದ=ಎಡೆಬಿಡದ; * ಎಡಬಿಡದೆ ಅರಿವಾಗಿಪ್ಪೆ=ಸದಾಕಾಲವು ಜ್ಞಾನ ರೂಪಿ ಆಗಿರುವೆ; ಕರಣಧರ್ಮಗಳು=ಮನಸ್ಸಿನ ಧರ್ಮಗಳು; * ಪರ ವಸ್ತು=ಪರಬ್ರಹ್ಮಸ್ವರೂಪ.

---

**ಮರುಳರಕಟಾ! ಮೇಘಮಂಡಲ**
**ತರಣಿಮಂಡಲಕಡ್ಡವಾಗಲು**
**ತರಣಿ ನಿಷ್ಪ್ರಭನೆಂಬ ತೆರದಲಿ ಕರಣಧರ್ಮಗಳು ।**
**ಭರಿತನಪ್ಪಾತುಮಗೆ ಮರೆಯಾ**
**ಗಿರುತಿರಲ್ಕದನರಿಯದಜ್ಞರು**
**ಬರಿದೆ ಸಂಸೃತಿಬದ್ಧನೆಂಬರು ನಿತ್ಯಮುಕ್ತನನು ॥ ॥೨೧॥**

ತಾತ್ಪರ್ಯ: ಮೋಡಗಳ ಸಮೂಹವು ಸೂರ್ಯ ಮಂಡಲವನ್ನು ಆವರಿಸಿದಾಗ ಮೋಡದ ಮರೆಯಿಂದ ಸೂರ್ಯನೇ ಮಂಕಾಗಿರುವಂತೆ, ಕಾಂತಿಹೀನನಾಗಿರುವಂತೆ ಕಾಣುವನು. ಅದೇ ರೀತಿಯಾಗಿ ಮನಸ್ಸು ಮೊದಲಾದ ಕರಣಗಳು (ಎಂಬ ಮೋಡಗಳು) ಪೂರ್ಣನಾದ ಆತ್ಮನನ್ನು (ಸೂರ್ಯನನ್ನು) ಮರೆ ಮಾಡುತ್ತವೆ ಎಂದು ತಿಳಿಯದ ಅಜ್ಞಾನಿಗಳು ನಿರ್ಲಿಪ್ತನೂ ನಿಸ್ಸಂಗಿಯೂ ಆದ ಪರಮಾತ್ಮನನ್ನು ಸಂಸಾರ ಕಟ್ಟಿಗೆ ಸಿಲುಕಿದವನು ಎನ್ನುತ್ತಾರೆ.

**ಶಬ್ದಾರ್ಥ:** ನಿಷ್ಪ್ರಭನು=ತೇಜಸಿಲ್ಲದವನು; **ಕರಣಧರ್ಮಗಳು**=ಮನಸ್ಸು; **ಭರಿತನಪ್ಪಾತುಮಗೆ** =ಪೂರ್ಣನಾದ ಆತ್ಮನಿಗೆ; **ಅದನರಿಯದ**=ಮನಸ್ಸು ಮೊದಲಾದ ಕರಣಗಳು ಆತ್ಮನನ್ನು ಮರೆ ಮಾಡಿರುವವೆಂದು ತಿಳಿಯದ; **ಸಂಸೃತಿಬದ್ಧನು**=ಸಂಸಾರದ ಕಟ್ಟಿಗೆ ಸಿಲುಕಿದವನು;

**ಟಿಪ್ಪಣಿ:** ಈ ಶ್ಲೋಕದ ತಾತ್ಪರ್ಯವು ಹಸ್ತಾಮಲಕರು ಹೇಳಿರುವ ಈ ಕೆಳಗಿನ ಶ್ಲೋಕದ ಭಾವವನ್ನು ನೆನಪು ಕೊಡುತ್ತದೆ:

**ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ ।**

**ಯಥಾನಿಷ್ಪ್ರಭಂ ಮನ್ಯತೇ ಜಾತಿಮೂಢಃ ॥**

**ತಥಾಬದ್ಧವದ್ಭಾತಿ ಯೋ ಮೂಢದೃಷ್ಟೇಃ ।**

**ಸನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥**

---

**ಕರವ ಕಣ್ಣಿಗೆ ಮರೆಯಮಾಡಲು**
**ತರಣಿಮಂಡಲವಡಗಿತೆಂಬಂ**
**ತರರೆ! ಕರಣಂಗಳಿಗೆ ಮರೆಯಾಗಿದ್ದೊಡಾ ಜ್ಞಾನ ।**
**ಭರಿತನಪ್ಪಾತುಮನನಿಲ್ಲೆಂ**
**ಬರೆ? ಮರುಳರವರೆಲೆಲೆ, ತುಚ್ಛದ**
**ಕರಣವೆತ್ತಲು! ಸಚ್ಚಿದಾನಂದೈಕರಸವೆತ್ತ ॥** ॥೨೨॥

**ತಾತ್ಪರ್ಯ:** ಕಣ್ಣುಗಳನ್ನು ಕೈಯಿಂದ ಅಡ್ಡ ಮಾಡಿದರೆ ಸೂರ್ಯ ಮಂಡಲ ಕಾಣಿಸುವುದಿಲ್ಲ ಆಗ ಸೂರ್ಯಮಂಡಲವೇ ಮರೆಯಾಯಿತು ಎಂದು ಹೇಳುವಂತೆ ಕರಣಗಳಿಗೆ ಆತ್ಮನು ಕಾಣಿಸದೆ ಇದ್ದಮಾತ್ರಕ್ಕೆ ಜ್ಞಾನಪೂರ್ಣನಾದ ಆತ್ಮನನ್ನೇ ಇಲ್ಲೆಂದು ಹೇಳಬಹುದೇ? ಹೀಗೆ ಹೇಳುವರು ಅಜ್ಞಾನಿಗಳೇ ಹೌದಲ್ಲವೇ? ಅಲ್ಲಾ! ಹೀನನಾದ ಕರಣಗಳೆಲ್ಲಿ? ಸಚ್ಚಿದಾನಂದರೂಪಿಯಾದ ಆ ಪರಮಾತ್ಮನೆಲ್ಲಿ? ಇವೆರಡಕ್ಕೂ ಅಜಗಜಾಂತರವಲ್ಲವೇ? ಅಖಂಡವಾದ ಆತ್ಮನನ್ನು ಮನಸ್ಸು ಮೊದಲಾದ ಪರಿಚ್ಛಿನ್ನ (ಖಂಡ) ವಾದ ಕರಣಗಳು ನಿಜವಾಗಿ ಮರೆಮಾಡಲಾರವೆಂದು ತಾತ್ಪರ್ಯ.

**ಶಬ್ದಾರ್ಥ:** * **ತರಣಿಮಂಡಲ**=ಸೂರ್ಯ ಮಂಡಲ; **ಕರಣಂಗಳು**=ಮನಸ್ಸು ಮತ್ತು ದಶೇಂದ್ರಿಯಗಳು (ಪಾಠ ಪುಟ-೧೦೩); **ಜ್ಞಾನಭರಿತ**=ಜ್ಞಾನಪೂರ್ಣ; **ತುಚ್ಛ**=ಹೀನ

**ಟಿಪ್ಪಣಿ:** **ಕರಣವೆತ್ತಲು**=ಮನಸ್ಸು ಮೊದಲಾದ ಕರಣಗಳಿಂದ ಏನಾದೀತು? (ಅಖಂಡವಾದ ಆತ್ಮನನ್ನು ಮನಸ್ಸು ಮೊದಲಾದ ಪರಿಚ್ಛಿನ್ನವಾದ ಕರಣಗಳು ನಿಜವಾಗಿ ಮರೆಮಾಡಲಾರವೆಂದು ತಾತ್ಪರ್ಯ.)

---

## ವಿದ್ಯೋ(ಮಾಯೋ)ಪಾದಿಯ ಪ್ರಭಾವ (೨೩)

ವಿದ್ಯೆಯಾತ್ಮಗುಪಾಧಿಯಾಗಲು
ಸಿದ್ಧಿಸುವವಣಿಮಾದಿಗಳು, ಸಂ
ಬದ್ಧವಹ ಸರ್ವಜ್ಞತಾದಿಷಡಂಗಚಿತ್ರಗಳು, ।
ನಿರ್ಧರಿಸಿ ಸೃಷ್ಟ್ಯಾದಿಗಳನ
ತ್ಯುದ್ಭುತದ ಸಾಹಸದಿ ಶಿಷ್ಟರ
ನುದ್ಧರಿಸಿ ದುಷ್ಟರನು ಶಿಕ್ಷಿಸುತಿರ್ಪ ಕರ್ಮಗಳು ॥ ॥೨೩॥

**ತಾತ್ಪರ್ಯ:** ವಿದ್ಯೆ ಅವಿದ್ಯೆ ಎರಡೂ ಉಪಾಧಿಗಳೇ. ಇವುಗಳಲ್ಲಿ ವಿದ್ಯೆ ಆತ್ಮನಿಗೆ ಸುತ್ತುಗಟ್ಟು; ಆದರೆ ಅಣಿಮಾ ಗರಿಮಾ ಮೊದಲಾದ ಅಷ್ಟ ಸಿದ್ಧಿಗಳೂ, ಸಂಬಂಧಿಸಿದ ಸರ್ವಜ್ಞತ್ವ, ಸರ್ವರಕ್ಷಕತ್ವ, ಸರ್ವಸಂಹಾರಕತ್ವ, ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ, ಸರ್ವಸ್ರಷ್ಟೃತ್ವ ಎಂಬ ಆರು ಗುಣಗಳೂ ಸೃಷ್ಟಿ ಮೊದಲಾದವನ್ನು ನಿರ್ಧರಿಸಿ ವಿಶೇಷ ಸಾಹಸದಿಂದ ಸಜ್ಜನರನ್ನು ರಕ್ಷಿಸುವ ದುರ್ಜನರನ್ನು ಶಿಕ್ಷಿಸುವ ಕಾರ್ಯಶಕ್ತಿ ಉಂಟಾಗುತ್ತದೆ.

**ಶಬ್ದಾರ್ಥ:** ಅತ್ಯದ್ಭುತದ=ಬಹಳ ಹೆಚ್ಚಿನ.

**ಟಿಪ್ಪಣಿ–೧:** ಉಪಾಧಿ=ಜೀವನಿಗೆ ವಿದ್ಯೆ ಅವಿದ್ಯೆಗಳೆಂಬ ಎರಡು ಉಪಾಧಿಗಳಿರುತ್ತವೆ. ವಸ್ತುವಿನ ಬಳಿಯಲ್ಲಿಯೇ ಇದ್ದು ಅದರ ಸ್ವರೂಪಕ್ಕೆ ಸೇರಿಕೊಳ್ಳದೆ ಅದರಲ್ಲಿ ಹೆಚ್ಚು ಕಮ್ಮಿ ತೋರಿಸುವ ಸುತ್ತುಗಟ್ಟೇ ಉಪಾಧಿ. ಜೀವಾತ್ಮನಿಗೆ ದೇಹ ಇಂದ್ರಿಯಗಳು ಪ್ರಾಣ ಮನಸ್ಸು ಉಪಾಧಿಗಳು. ಈ ಉಪಾಧಿಗಳು ಅವಿದ್ಯೆಯಿಂದ ಕಲ್ಪಿತವಾಗಿರುತ್ತದೆ. ವಿದ್ಯೆ ಅವಿದ್ಯೆಯೆಂಬ (ಜೀವ, ಈಶ್ವರ ಭಾವಗಳು) ತೊಲಗಿದರೆ ತನ್ನ ಸ್ವರೂಪವಾದ ಆತ್ಮನಲ್ಲಿ ಲಯವಾಗುತ್ತದೆ. ಈ ಮಾರ್ಗ ತೋರುವುದು ವಿದ್ಯೆ. (ವಿವರಗಳಿಗೆ ನೋಡಿ ಪಾರಿಭಾಷಿಕ ಕೋಶ ಪುಟ–೮೬)

**ಟಿಪ್ಪಣಿ–೨:** ಅಣಿಮಾ, ಗರಿಮಾ ಮೊದಲಾದ ಅಷ್ಟ ಸಿದ್ಧಿಗಳ ವಿವರಣೆಗೆ ಅಧ್ಯಾಯ ೪, ಪದ್ಯ ೩೮ರ ಟಿಪ್ಪಣಿ ನೋಡಿ.

**ಟಿಪ್ಪಣಿ–೩:** ಸರ್ವಜ್ಞತ್ವಾದಿ=ಸರ್ವಜ್ಞತ್ವಾದಿ ಆರು ಗುಣಗಳ ವಿವರಕ್ಕೆ ಅಧ್ಯಾಯ ೫ ಪದ್ಯ ೬ರ ಟಿಪ್ಪಣಿ ನೋಡಿ.

---

## ಪರಮಾತ್ಮನ ವರ್ಣನೆ (೨೪–೨೭)

ವಿಶ್ವರೂಪ, ಹಿರಣ್ಯಗರ್ಭನು,
ವಿಶ್ವಮುಖನೀಶ್ವರನು, ನಿಜ, ವಿ
ಶ್ವಾಶ್ರಯವನು, ವಿಶ್ವಾಧಿವಾಸನು, ವಿಶ್ವಸಂಹರ್ತ, ।
ವಿಶ್ವನಾಟಕಸೂತ್ರಧಾರನು,
ವಿಶ್ವಗ, ವಿರಾಟನಿಸಿ ಮೆರೆವನು,
ವಿಶ್ವದಂತರ್ಯಾಮಿ, ವಿಶ್ವನಿಯಂತೃ, ವಿಶ್ವಾತ್ಮ ॥ ॥೨೪॥

**ತಾತ್ಪರ್ಯ:** ಜಗತ್ತಿನ ರೂಪವನ್ನು ಪಡೆದಿರುವನು, ಹಿರಣ್ಯಗರ್ಭನೆಂಬ ಹೆಸರಿನ ಸೂಕ್ಷ್ಮಶರೀರಗಳ ಸಮಷ್ಟಿಯ ಅಭಿಮಾನಿ, ಸರ್ವ ದಿಕ್ಕುಗಳ ಕಡೆಗೂ ಮುಖವುಳ್ಳವನು, ಲೋಕಕ್ಕೆ ನಿಯಮ ಉಂಟುಮಾಡುವವನು, ಸತ್ಯವಾಗಿ ಇರುವವನು, ಜಗತ್ತಿಗೆ ಆಧಾರವಾದವನು, ಜಗತ್ತಿಗೆ ಆವಾಸಸ್ಥಾನವಾದವನು, ಜಗತ್ತನ್ನು ಲಯಮಾಡುವವನು, ಜಗತ್ತೆಂಬ ನಾಟಕದ ನಿರ್ದೇಶಕನು, ಜಗತ್ತಿನಲ್ಲೆಲ್ಲ ವ್ಯಾಪಿಸಿದವನು, ಸಮಷ್ಟಿ ಸ್ಥೂಲಶರೀರಾದಿಯಾಗಿ ಮೆರೆಯುವವನು,ಜಗತ್ತಿ ನೊಳಗೆಲ್ಲ ವ್ಯಾಪಿಸಿಕೊಂಡಿರುವನು, ಜಗತ್ತಿನ ಮೇಲೆಲ್ಲ ಅಧಿಕಾರ ಪಡೆದಿರುವವನು, ಜಗತ್ತಿನ ಜೀವ ಸ್ವರೂಪನಾಗಿರುವವನು ಬ್ರಹ್ಮವು ಆಗಿರುವುದು.

**ಶಬ್ದಾರ್ಥ:** **ವಿಶ್ವರೂಪ**=ಜಗತ್ತಿನರೂಪವನ್ನು ಪಡೆದಿರುವುದು; **ಹಿರಣ್ಯಗರ್ಭನು**=ಹಿರಣ್ಯಗರ್ಭನೆಂಬ ಹೆಸರಿನ ಸೂಕ್ಷ್ಮಶರೀರಗಳ ಸಮಷ್ಟಿಯ ಅಭಿಮಾನಿ; **ವಿಶ್ವಮುಖನು**=ಸರ್ವದಿಕ್ಕುಗಳ ಕಡೆಗೂ ಮುಖವುಳ್ಳವನು ಅಥವಾ ಜಗತ್ತನ್ನೇ ಮುಖವಾಗಿ ಉಳ್ಳವನು ಅಥವಾ ಬಹುಮುಖನು; **ಆಶ್ರಯನು**=ಆಧಾರವಾದವನು; **ಅಧಿವಾಸನು** =ಆವಾಸ ಸ್ಥಾನ ಆದವನು; **ಸಂಹರ್ತ**=ಲಯ ಮಾಡುವವನು; **ಸೂತ್ರಧಾರನು** =ನಿರ್ದೇಶಕನು; **ವಿಶ್ವಗ**=ಜಗತ್ತಿನಲ್ಲೆಲ್ಲ ವ್ಯಾಪಿಸಿರುವನು; **ವಿರಾಟ್**=ಸಮಷ್ಟಿ ಸ್ಥೂಲಶರೀರಾಭಿಮಾನಿ; **ವಿಶ್ವದಂತರ್ಯಾಮಿ**=ಜಗತ್ತಿನೊಳಗೆ ವ್ಯಾಪಿಸಿಕೊಂಡಿರುವವನು; **ವಿಶ್ವನಿಯಂತೃ** =ಜಗತ್ತಿನ ಮೇಲೆಲ್ಲ ಅಧಿಕಾರ ನಡೆಸುವನು; **ವಿಶ್ವಾತ್ಮ**=ಜಗತ್ತಿನ ಜೀವ ಸ್ವರೂಪನಾದವನು.

---

**ಆತನಾ ಶ್ವಾಸಗಳೆ ವೇದಗ**
**ಳಾತನಕ್ಷಿಯೆ ಸೂರ್ಯಚಂದ್ರಮ**
**ರಾತನವಯವವೆಲ್ಲವೀ ಸತ್ಯಾದಿಲೋಕಗಳು; ।**
**ಆತನಿಂದ್ರಾದ್ಯಖಿಲದೇವ**
**ವ್ರಾತಮಯನೀ ವಿಶ್ವದೊಳಹೊರ**
**ಗಾತನೇ ಪರಿಪೂರ್ಣ ವಿಶ್ವಾತೀತನೆನಿಸುವನು ॥ ॥೨೫॥**

**ತಾತ್ಪರ್ಯ:** ವೇದಗಳೆಲ್ಲ ಬ್ರಹ್ಮನ ನಿಃಶ್ವಾಸ, ಆತನ ಕಣ್ಣುಗಳೇ ಸೂರ್ಯ ಚಂದ್ರರು, ಮೇಲಿನಲೋಕದಿಂದ ಮೊದಲುಗೊಂಡು ಕೆಳಗಿನ ಪಾತಾಳಲೋಕದವರೆಗೆ ಹದಿನಾಲ್ಕು ಲೋಕಗಳು ಆತನ ಅಂಗಾಂಗಗಳು. ಆತನು ಇಂದ್ರನೇ ಮೊದಲಾದ ಸಮಸ್ತದೇವತಾಸಮೂಹದಲ್ಲೂ ತುಂಬಿಕೊಂಡಿರುವನು; ಈ ವಿಶ್ವದ ಒಳಗೂ ಹೊರಗೂ ಆತನೇ ಇದ್ದುಕೊಂಡು ಪರಿಪೂರ್ಣನೆನಿಸಿರುವನು. ಆ ಬ್ರಹ್ಮನೇ ಜಗತ್ತನ್ನೆಲ್ಲ ವ್ಯಾಪಿಸಿ ಮೇಲೆಯೂ ಇದ್ದು ವಿಶ್ವಾತೀತನೆನಿಸಿರುವನು.

**ಶಬ್ದಾರ್ಥ:** **ಆತನಾ ಶ್ವಾಸಗಳೆ ವೇದಗಳು**=ಬ್ರಹ್ಮನ ನಿಃಶ್ವಾಸವೇ ವೇದಗಳು; * **ನಿಃಶ್ವಾಸ**=ಹೊರಗೆ ಬಿಡುವ ಉಸಿರು; * **ಅವಯವ**=ಅಂಗಾಂಗ; * **ದೇವವ್ರಾತ**=ದೇವತಾ ಸಮೂಹ; * **ವಿಶ್ವಾತೀತ**=ಬ್ರಹ್ಮವು ಜಗತ್ತನ್ನೆಲ್ಲ ವ್ಯಾಪಿಸಿ ಮೇಲೆಯೂ ಇರುವುದು.

**ಟಿಪ್ಪಣಿ-೧:** **ಆತನಾಶ್ವಾಸಗಳೆ ವೇದಗಳು**=ಅಸ್ಯಮಹತೋಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದ ... ಎಂಬ ಶ್ರುತಿಯಂತೆ ವೇದಗಳೆಲ್ಲ ಬ್ರಹ್ಮನ ನಿಃಶ್ವಾಸ.

**ಟಿಪ್ಪಣಿ–೨: ಆತನ ಅವಯವವೆಲ್ಲವು**=ಜಗತ್ತೆಲ್ಲ ಬ್ರಹ್ಮದ ಅವಯವ; ವಿಷ್ಟಭ್ಯಾಹಮಿದಂ ಕೃತ್ಸ್ನವೇಕಾಂಶೇನ ಸ್ಥಿತೋ ಜಗತ್ (ಗೀತೆ–೧೦–೪೨) ನಾನು ಈ ಸಮಸ್ತವಾದ ಜಗತ್ತನ್ನು ಒಂದೇ ಪಾದದಿಂದ ವ್ಯಾಪಿಸಿಕೊಂಡಿರುವೆನು (ಇದನ್ನು ಮೀರಿ ಇನ್ನೂ ೩ ಪಾದಗಳಿವೆ).

**ಟಿಪ್ಪಣಿ–೩: ಸತ್ಯಾದಿಲೋಕಗಳು**=ಇದು ಮೇಲಿನ ಲೋಕದಿಂದ ಮೊದಲು ಮಾಡಿಕೊಂಡು ಹೇಳಿದ ಮಾತು. ಲೋಕಗಳು ೧೪ ಇವೆ. ಅತಲ–ವಿತಲ–ಸುತಲ–ತಲಾತಲ–ಮಹಾತಲ–ರಸಾತಲ–ಪಾತಾಲ ಈ ಏಳು ಕೆಳಗಿನ ಲೋಕಗಳು. ಭೂಲೋಕ–ಭುವರ್ಲೋಕ–ಸುವರ್‌ಲೋಕ –ಮಹಲ್ಲೋಕ–ಜನೋಲೋಕ–ತಪೋಲೋಕ–ಸತ್ಯಲೋಕ ಈ ಏಳು ಮೇಲಿನ ಲೋಕಗಳು.

**ಟಿಪ್ಪಣಿ–೪: ವಿಶ್ವಾತೀತನು**=ಸ ಭೂಮಿಂ ವಿಶ್ವತೋವೃತ್ವಾ ಅತ್ಯತಿಷ್ಠದ್ದಶಾಂಗುಲಂ (ಎಂಬ ಪುರುಷಸೂಕ್ತದಂತೆ ಬ್ರಹ್ಮವು ಜಗತ್ತನ್ನೆಲ್ಲ ವ್ಯಾಪಿಸಿ ಮೇಲೆಯೂ ಇರುವುದು.

---

**ಈ ಪರಿಯ ಬಹುಗುಣಗಳಲಿ ಬಹು**
**ರೂಪವೆನಿಸಲನಂತನಾಮಗ**
**ಳಾ ಪರಮಪುರುಷಂಗೆ ಶ್ರುತಿಸಮ್ಮತಗಳಾಗಿಹವು; ।**
**ತಾಪಕಾರಣವಾದ ಸಂಸೃತಿ**
**ಲೇಪವಾತಂಗಿಲ್ಲವೊಬ್ಬನೆ**
**ಭಾಪು! ವಿದ್ಯಾಭಾಸದಿಂ ಬಹುರೂಪನಾಗಿಹನು ॥ ॥೨೬॥**

**ತಾತ್ಪರ್ಯ:** ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಆ ಪರಮಾತ್ಮನಿಗೆ ಈ ರೀತಿಯಾಗಿ ಬಹುಗುಣಗಳುಳ್ಳವನಾದ್ದರಿಂದ ಬಹುರೂಪಗಳನ್ನು ಹೊಂದಿದವನು ಎನಿಸಿ ಅನಂತ ನಾಮಗಳನ್ನು (ಸಹಸ್ರನಾಮ) ಹೊಂದಿರುವುದು ವೇದಸಮ್ಮತವಾಗಿರುವುದು. ತಾಪತ್ರಯಗಳಿಂದ ಕೂಡಿದ ಸಂಸಾರಸಂಬಂಧವು (ಬಂಧನವು) ಆತನಿಗಿಲ್ಲ. ಭಲೆ! ಈಶ್ವರನಾದ ಆತನು ಒಬ್ಬನೇ ಆಗಿದ್ದರೂ ತನ್ನ ಅಧೀನದಲ್ಲಿ ಇರುವ ಮಾಯಾ ಶಕ್ತಿಯ ತೋರಿಕೆಯಿಂದ ಬಹುರೂಪಿ ಆಗಿದ್ದಾನೆ.

**ಶಬ್ದಾರ್ಥ: ವಿದ್ಯಾಭಾಸದಿಂ**=(ಈಶ್ವರನು) ತನ್ನ ಅಧೀನದಲ್ಲಿರುವ ಮಾಯಾ ಶಕ್ತಿಯ ತೋರಿಕೆಯಿಂದ; * **ಪರಮಪುರುಷಂಗೆ**=ಪರಮಾತ್ಮನಿಗೆ; **ತಾಪಕಾರಣವಾದ ಸಂಸೃತಿಲೇಪನವು**=ತಾಪತ್ರಯಗಳಿಗೆ ಕಾರಣವಾದ ಸಂಸಾರ ಸಂಬಂಧ;

**ಪಾಠಾಂತರ: ವಿದ್ಯಾಭಾಸದಿಂ**=(ವಿದ್ಯಾ+ಅಭಾಸದಿಂ) ಕೆಲವು ಬೇರೆ ಪ್ರತಿಗಳಲ್ಲಿ ವಿದ್ಯೋಪಾಧಿಯಂ ಎಂಬ ಪಾಠಾಂತರವಿದೆ (ಅರಾಸೇ ಪುಟ ೧೪೨)

**ಟಿಪಿಣಿ–೧: ಒಬ್ಬನೆ ಭಾಪು! ವಿದ್ಯಾಭಾಸದಿ ಬಹುರೂಪನಾಗಿಹನು**=ಆತನು ಒಬ್ಬನೇ ಆಗಿದ್ದರೂ ಏಕಃ ಪರಾತ್ಮಾ ಬಹುವಿಶ್ವರೂಪೇ ಎಂಬಂತೆ ಅವಿದ್ಯೆಯ ಅಭ್ಯಾಸ ಬಲದಿಂದ ಬಹುರೂಪನಾಗಿ ತೋರುತ್ತಿಹನು (ಕು ಪುಟ–೧೬೨)

---

ಎಲೆ, ಅವಿದ್ಯಾವಿದ್ಯೆಯೆಂಬೀ
ಬಲುಹುರಿಯ ಹಗ್ಗದಲಿ ಬಿಗಿವಡೆ
ದಳಲುತಿಹ ಜೀವೇಶರೆಂಬಿವು ವಾಚ್ಯವೆನಿಸುವವು; ।
ಕಳೆದುಪಾಧಿದ್ವಯವ, ನಿಜವಾ
ಗುಳಿದಖಂಡಾದ್ವೈತಚಿದ್ಘನ
ದುಳಿಮೆಯಸಿಪದದೈಕ್ಯದರ್ಥವು ಮಗನೆ ಕೇಳೆಂದ ॥ ॥೨೭॥

ತಾತ್ಪರ್ಯ: ಎಲೈ ಶುಕನೇ ಕೇಳು, ಅವಿದ್ಯೆ ಮತ್ತು ವಿದ್ಯೆ ಎಂಬ ಹುರಿಯಾಗಿ ಹೊಸೆದಿರುವ ಹಗ್ಗದಿಂದ ಕಟ್ಟಲ್ಪಟ್ಟು, ದುಃಖಕ್ಕೆ ಒಳಗಾಗಿರುವ ಜೀವೇಶ್ವರ ಎರಡು ಉಪಾಧಿಗಳಿಂದ ಕೂಡಿ ವಾಚ್ಯಾರ್ಥವೆನಿಸಿ ಖಂಡವೆನಿಸಿಕೊಳ್ಳುವುದು. ಈ ಎರಡು ಉಪಾಧಿಗಳನ್ನು ಕಳೆದ ಮೇಲೆ ನಿಜವಾಗಿಯೂ ಉಳಿವ ಅರ್ಥವು ಲಕ್ಷಾರ್ಥವೆನಿಸಿ ಅಖಂಡವೂ ಅದ್ವೈತವೂ ಚಿದಾಕಾಶದ ಶೇಷವೂ ಆಗಿರುವುದೇ ಅಸಿ ಎಂಬ ಪದದ ಮುಖ್ಯಾರ್ಥವೆಂದು ತಿಳಿಯತಕ್ಕದ್ದು.

ಶಬ್ದಾರ್ಥ: ಅವಿದ್ಯಾವಿದ್ಯೆ=ಇವು ಎರಡೂ ಉಪಾಧಿಗಳು * ಜೀವೇಶರೆಂಬಿವು=ಜೀವ+ಈಶ್ವರ ಎಂಬಿವು ಉಪಾಧಿಗಳು; ಉಪಾಧಿದ್ವಯವ=ಅವಿದ್ಯೆ ಮತ್ತು ವಿದ್ಯೆ ಎಂಬ ಎರಡು ಉಪಾಧಿಗಳನ್ನು; * ಚಿದ್ಘನದುಳಿಮೆಯೆ=ಚಿದಾಕಾಶದ ಶೇಷವು; ಐಕ್ಯದರ್ಥವು=ಮುಖ್ಯಾರ್ಥವು, ಲಕ್ಷಾರ್ಥವು;

ಟಿಪ್ಪಣಿ: ಉಳಿದಖಂಡಾದ್ವೈತಚಿದ್ಘನದುಳಿಮೆ=ಉಳಿದ+ಅಖಂಡ+ ಅದ್ವೈತ+ಚಿದ್ಘನದ+ ಉಳಿಮೆ. ಉಪಾಧಿಗಳನ್ನು ಕಳೆದ ಅರ್ಥವು ಲಕ್ಷ್ಯಾರ್ಥವೆನಿಸಿ ಅಖಂಡವೆನಿಸಿಕೊಳ್ಳುವುದು. ಉಪಾಧಿಯಿಂದ ಕೂಡಿದ ಅರ್ಥವು ಮಾತ್ರ ವಾಚ್ಯಾರ್ಥವೆನಿಸಿ ಖಂಡವೆನಿಸಿಕೊಳ್ಳುವುದು.

---

ಪ್ರಶ್ನೆ (೨೮)

ಎಂದೊಡೆಂದನು ಗುರುವೆ, ಅಸಿಪದ
ದಂದವಾವುದಖಂಡವಸ್ತುವ
ದೆಂದೊಡೆಂತಿಹುದೈಕ್ಯವೆಂತಹುದುಭಯಪದಗಳಿಗೆ? ।
ಸಂದ ಲಕ್ಷಣೆಯಾವುದದ ತಿಳಿ
ವಂದದಿಂ ಕೃಪೆ ಮಾಡಬೇಕೆನ
ಗೆಂದು ಬಿನ್ನಹಮಾಡಿದನು ಶುಕ ತಂದೆಯಡಿಗೆರಗಿ ॥ ॥೨೮॥

ತಾತ್ಪರ್ಯ: ಈ ರೀತಿಯಲ್ಲಿ ವ್ಯಾಸಮುನಿಯ ವಾಕ್ಯವನ್ನು ಕೇಳಿದ ಶುಕನು ಆತನಿಗೆ ನಮಿಸಿ ಕೇಳುತ್ತಾನೆ. ಗುರುವೆ, ಅಸಿ ಎಂಬ ಪದದ ರೀತಿಯು ಎಂಥದು? ಅದು ಅಖಂಡವಸ್ತು ಎಂದು ಹೇಳಿದಿರಿ, ಅದು ಇರತಕ್ಕ ತೆರನಾವುದು? ತ್ವಂ ಮತ್ತು ಅಸಿ ಈ ಎರಡು ಪದಗಳಿಗೆ ಐಕ್ಯವು ಹೇಗೆ? ಇದಕ್ಕೆ ಸಂಬಂಧವಾದ ಲಕ್ಷಣವು ಯಾವುದು? ಇದೆಲ್ಲವನ್ನೂ ಸರಿಯಾಗಿ ತಿಳಿಯುವ ಹಾಗೆ ಅನುಗ್ರಹಮಾಡಬೇಕೆಂದು ವಿನಂತಿಸಿಕೊಂಡನು.

**ಶಬ್ದಾರ್ಥ:** * ಅಖಂಡ ವಸ್ತು=ಅಭಿನ್ನವಸ್ತು; * ಉಭಯಪದಗಳಿಗೆ=ತ್ವಂ ಮತ್ತು ಅಸಿ ಪದಗಳಿಗೆ; * ಬಿನ್ನಹಮಾಡಿದನು=ವಿನಂತಿಸಿಕೊಂಡನು;

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

## ಭೇದಭಾವನೆಯ ಬಂಧಕವು (೨೯)

ದೇವಜೀವರಭೇದವೆಂಬುದ
ಭಾವಿಸುತ್ತಿರೆ ಚಿನ್ನಕಬ್ಬಿಣ
ವಾವುದಾದೊಡದೇನು! ಸಂಕಲೆ ತಪ್ಪದೆಲೆ ಮಗನೆ ।
ಈ ವಿಧದ ಪ್ರತಿಬಂಧವಳಿಯದೆ
ದೇವನಾಗಲಿ ಜೀವನಾಗಲಿ
ಕೇವಲಾನಂದ್ವೈಕರಸಮಯವಸ್ತುವೆಂತಹನು? ॥ ॥೨೯॥

**ತಾತ್ಪರ್ಯ:** ಈಶ್ವರನಿಗೂ ಜೀವನಿಗೂ ವ್ಯತ್ಯಾಸವೇನೆಂದು ಚಿಂತಿಸಿದರೆ, ಈಶ್ವರನಿಗೆ ತಾನು ಜೀವರಿಗೆಲ್ಲ ಈಶ್ವರನೆಂಬ ಭೇದಭಾವವು ಚಿನ್ನದ ಬೇಡಿಯಂತೆ ಬಂಧಕ; ಜೀವನಿಗೆ ತಾನು ಈಶ್ವರಾಧೀನನಾದ ಜೀವನೆಂಬ ಭಾವನೆ ಕಬ್ಬಿಣದ ಬೇಡಿಯಂತೆ ಬಂಧಕ. ಹೀಗೆ ಕಬ್ಬಿಣದ ಬೇಡಿ ಆಗಲಿ ಚಿನ್ನದ ಬೇಡಿ ಆಗಲಿ ಎರಡೂ ಬಂಧಕವೇ ಆಗಿರುತ್ತದೆ. ಈ ರೀತಿಯ ಪ್ರತಿಬಂಧಕವಾದ ಭೇದಭಾವವೆಂಬ ಸಂಕಲೆ ಕಳಚಿದ ಹೊರತು ದೇವನಾಗಲಿ ಜೀವನಾಗಲಿ ನಿಜಾದ್ವೈತ ಬ್ರಹ್ಮಾನಂದ ಎಂಬ ಪರಾತ್ಪರವಸ್ತು ಆಗುವುದಿಲ್ಲ.

**ಶಬ್ದಾರ್ಥ:** ದೇವಜೀವರ=ಈಶ್ವರ ಮತ್ತು ಜೀವನ; ಚಿನ್ನ ಕಬ್ಬಿಣವಾವುದಾದೊಡದೇನು! ಸಂಕಲೆ ತಪ್ಪದು=ಈಶ್ವರನೆಂಬ ಭೇದಭಾವನೆಯು ಚಿನ್ನದ ಬೇಡಿಯಂತೆ; ಜೀವನೆಂಬ ಭೇದಭಾವನೆಯು ಕಬ್ಬಿಣದ ಬೇಡಿಯಂತೆ; ಎರಡೂ ಬಂಧಕವೇ ಆಗಿದೆ. ಸಂಕಲೆ=ಬಂಧಕ

**ಟಿಪ್ಪಣಿ-೧:** ದೇವಜೀವರಭೇದ=ಈಶ್ವರನಿಗೆ ತಾನು ಜೀವರಿಗೆಲ್ಲ ಈಶ್ವರನೆಂಬ ಭೇದಭಾವವು ಬಂಧಕವು. ಜೀವನಿಗೆ ತಾನು ಈಶ್ವರಾಧೀನನಾದ ಜೀವನೆಂಬ ಭೇದಭಾವವು ಬಂಧಕವು.

---

## ಭಾವಲಕ್ಷಣ (೩೦-೩೫)

ತನಯ ತ್ವಂಪದದರ್ಥವಹ ಜೀ
ವನ ಪರಿಚ್ಛಿನ್ನತ್ವವಜ್ಞತೆ
ಯೆಣಿಸೆ ದುಃಖಿತ್ವವುಮನೀಶ್ವರಪ್ರತ್ಯಗಾದಿಗಳು ।
ಅನಘ, ತತ್ಪದದರ್ಥವಾದೀ
ಶನ ಪರೋಕ್ಷಾನಂತಸುಖವೊ
ಬ್ಬನಲಿ ದೊರೆಕೊಳದಾಗಿ ಮಾಳ್ಪುದು ಭಾಗಲಕ್ಷಣೆಯ ॥ ॥೩೦॥

**ತಾತ್ಪರ್ಯ:** ಶುಕಮುನಿಯೆ ಕೇಳು, ತ್ವಂ ಪದದ ಲಕ್ಷಣಗಳು ಹೀಗಿವೆ. ಜೀವಾತ್ಮನು (ಪರಿಮಿತಿಯನ್ನು ಹೊಂದಿರುವುದು) ತಿಳಿಯದಿರುವುದು, (ಘನವಾದ ದುಃಖ) ಪ್ರಭು ಶಕ್ತಿಯಿಲ್ಲದಿರುವುದು, ಒಳಗಡೆ ಕಾಣುತ್ತಿರುವುದು ಇವೇ ಮೊದಲಾದವು ತ್ವಂ ಪದದ ಲಕ್ಷಣಗಳಾಗಿವೆ. ಇನ್ನು ತತ್ ಪದದ ಅರ್ಥವೆಂದರೆ ಪರಮಾತ್ಮನ ಲಕ್ಷಣವಾದ ಕಾಣದೆ ಹೊರಗಿರುವುದು, ಬಹಳ ಸುಖವಿರುವುದು, ಇವೆರಡು ಎಂದರೆ ತ್ವಂ ಪದದ ಲಕ್ಷಣಗಳು ತತ್ ಪದದ ಲಕ್ಷಣಗಳು ಎರಡೂ ಪರಸ್ಪರ ವಿರುದ್ಧ ಗುಣಗಳಾದ್ದರಿಂದ ಒಬ್ಬನಲ್ಲಿಯೇ ಕಾಣ ಸಿಗುವುದಿಲ್ಲ. ಆದಕಾರಣ ವಿರೋಧವಾದ ಭಾಗಗಳನ್ನು ಬಿಟ್ಟು ಉಳಿದ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳಬೇಕು.

**ಶಬ್ದಾರ್ಥ:** * **ಜೀವನ**=ಜೀವಾತ್ಮನ; **ಪರಿಚ್ಛಿನ್ನತ್ವ**=ಪರಿಮಿತಿಯನ್ನು ಹೊಂದಿರುವುದು; **ಅಜ್ಞತೆ**=ತಿಳಿಯದಿರುವುದು; **ದುಃಖಿತ್ವವು**=ಘನವಾದ ದುಃಖವು; **ಅನೀಶ್ವರ**=ಪ್ರಭು ಶಕ್ತಿಯಿಲ್ಲದಿರುವುದು; **ಪ್ರತ್ಯಕ್**=ಒಳಗಡೆ ಕಾಣುತ್ತಿರುವುದು; **ಅನಘ**=ಶುಕನೇ ಕೇಳು; **ಈಶನ**=ಈಶ್ವರನ; **ಪರೋಕ್ಷ**=ಕಾಣದೆ ಹೊರಗಿರುವುದು; **ಅನಂತಸುಖ**=ಬಹಳ ಸುಖವಿರುವುದು; **ಭಾಗಲಕ್ಷಣೆಯ ಮಾಳ್ಪುದು**=ವಿರೋಧವಾದ ಭಾಗಗಳನು ಬಿಟ್ಟು ಉಳಿದ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳುವುದು.

**ಟಿಪ್ಪಣಿ: ಒಬ್ಬನಲಿ ದೊರೆಕೊಳದು**=ಪರಿಮಿತಿಯನು ಹೊಂದಿರುವುದು ಮತ್ತು ಅನಂತವಾಗಿರುವುದು ನಿಜವಾಗಿ ಏನೂ ತಿಳಿಯದಿರುವುದು ಮತ್ತು ಎಲ್ಲವನ್ನೂ ತಿಳಿದಿರುವುದು; ದುಃಖರೂಪ ವಾಗಿರುವುದು ಮತ್ತು ಸುಖ ರೂಪವಾಗಿರುವುದು, ದಾಸನಾಗಿರುವುದು ಮತ್ತು ಪ್ರಭುವಾಗಿರುವುದು, ಒಳಗಿರುವುದು ಮತ್ತು ಹೊರಗಿರುವುದು, ಈ ಬಗೆಯ ವಿರುದ್ಧ ಗುಣಗಳು ಒಬ್ಬನಲ್ಲಿಯೇ ಸಂಭವಿಸುವುದಿಲ್ಲ.

**ಪದವಿಭಾಗ:** **ಪರಿಚ್ಛಿನ್ನಾತ್ವವಜ್ಞತೆಯೆಣಿಸೆ**=ಪರಿಚ್ಛಿನ್ನಾತ್ವ+ಅಜ್ಞತೆ+ಎಣಿಸೆ; ದುಃಖಿತ್ವ+ಅನೀಶ್ವರ * ತತ್ಪದದರ್ಥವಾದೀತನ=ತತ್+ಪದದ+ಅರ್ಥವಾದ+ಈಶನ.

---

**ವಿಹಿತವಹ ಲಕ್ಷಣೆಯ ತಿಳಿ ನೀ**
**ಜಹದಜಹದೆನಿಸಿರ್ಪುದದ ನಿ**
**ರ್ವಹಿಸಿ "ಸೋಽಯಂ ದೇವದತ್ತ" ಯೆನಿಪ್ಪವಾಕ್ಯದಲಿ ।**
**ಬಹುವಿರೋಧದ ಸೋಽಯಮಂಶವ**
**ಸಹಜದಿಂದಲಿ ಕಳೆದುಳಿದು ಸ**
**ನ್ನಿಹಿತನಾಗಿಹ ದೇವದತ್ತನದೊಬ್ಬನಾಗಿಹನು ॥ ॥೩೧॥**

**ತಾತ್ಪರ್ಯ:** ಜಹತ್+ಅಜಹತ್ ಲಕ್ಷಣೆಯನ್ನು (ಬಿಟ್ಟೂ ಬಿಡದ ಲಕ್ಷಣವನ್ನು) ಅರ್ಥಮಾಡಿಕೋ. ಅದನ್ನು ಅನ್ವಯಿಸಿಕೊಂಡು ಸೋಽಯಂ ದೇವದತ್ತ ಎಂಬ ವಾಕ್ಯದಲ್ಲಿ (ಅವನೇ ಇವನು ದೇವದತ್ತ) (ಆಗಿನ ಕಾಲ, ಆಗಿನ ದೇಶ, ಈಗಿನ ಕಾಲ, ಈಗಿನ ದೇಶ ಎಂಬರ್ಥದಲ್ಲಿ ಇರುವ ಅವನೇ ಇವನು) ಎಂಬ ಮಾತುಗಳನ್ನು ಬಿಟ್ಟು ಎಂದರೆ ಬಹು ವಿರುದ್ಧವಾಗಿರುವ ಸೋಽಯಂ ಎಂಬ ಅಂಶವನ್ನು ಕಳೆದು ಉಳಿದು ಸಮೀಪಸ್ಥಾನವಾಗಿರುವ ದೇವದತ್ತನು ಎಂಬುವನು ಒಬ್ಬನೇ ಆಗಿರುವನು

ಎಂಬುದನ್ನು ತಿಳಿಯುವ ಹಾಗೆ ಜೀವೇಶ್ವರತ್ವ ವಿಷಯದಲ್ಲಿ ಜಹದಜಹಲ್ಲಕ್ಷಣೆಯ ಮೂಲವಾಗಿ ತತ್, ತ್ವಂ, ಅಸಿ ಎಂಬ ಪದಗಳನ್ನು ಪರಿಶೋಧಿಸಿ ಅನಾವಶ್ಯಕ ವಾದುದನ್ನು ಕಳೆದು ಉಳಿದ ನಿಜವಸ್ತುವನ್ನು ನಿರ್ಧರಿಸಿ ತಿಳಿ.

**ಶಬ್ದಾರ್ಥ:** ಜಹದಜಹತ್ (ಜಹತ್+ಅಜಹತ್)=ಬಿಟ್ಟೂ ಬಿಡದ ಲಕ್ಷಣೆ; **ಸೋಽಯಂ ದೇವದತ್ತ**=ಆ ದೇವದತ್ತನೇ ಇವನು; **ಸೋಯಮಂಶವ**=ಅವನು ಇವನು ಎಂಬಂಶಗಳನ್ನು; **ಸನ್ನಿಹಿತನಾಗಿಹ**=ಹತ್ತಿರ ಇರುವ; **ವಿಹಿತವಾದ**=ಯೋಗ್ಯವಾದ

**ಪದವಿಭಾಗ:** **ಸೋಽಯಂ ದೇವದತ್ತ**=ಸಃ ಅಯಂ ದೇವದತ್ತ, **ಜಹದಜಹದೆನಿಸಿರ್ಪುದದ**= ಜಹತ್+ಅಜಹತ್+ಎನಿಸಿ+ಇರ್ಪುದು+ಅದ;

**ಟಿಪ್ಪಣಿ: ಜಹತ್+ಅಜಹತ್ ಲಕ್ಷಣೆ:** ಎಂದರೆ ಬಿಟ್ಟೂ ಬಿಡದ ಲಕ್ಷಣೆ. ಇದರರ್ಥವನ್ನು ಉದಾಹರಣೆಯೊಂದಿಗೆ ಸ್ಪಷ್ಟಪಡಿಸಬಹುದಾಗಿದೆ. ಗಂಗೆಯಲ್ಲಿ ಹಳ್ಳಿ ಎಂದರೆ ತೀರದಲ್ಲಿ ಎಂದು ಅರ್ಥವಾಗುವುದರಿಂದ ಗಂಗೆ ಎಂಬ ಪದಕ್ಕೆ ಜಹಲ್ಲಕ್ಷಣೆ ಎನ್ನುವರು. ಏಕೆಂದರೆ ಇಲ್ಲಿ ಗಂಗೆ ಎಂಬುದರ ಅರ್ಥವು ಬಿಟ್ಟು ಹೋಗಿದೆ. ಕಟ್ಟಿಗೆಗಳು ಒಳಕ್ಕೆ ಬರಲಿ ಎಂದಾಗ ಕಟ್ಟಿಗೆ ಉಳ್ಳವನು ಒಳಗೆ ಬರಲಿ ಎಂದರ್ಥವಾಗುವುದರಿಂದ ಅದು ಅಜಹತ್ ಲಕ್ಷಣೆ ಆಗಿದೆ. ಎಂದರೆ ಕಟ್ಟಿಗೆಯ ಅರ್ಥವು ಇಲ್ಲಿ ಬಿಟ್ಟು ಹೋಗಿಲ್ಲ. **ಸೋಽಹಂ ದೇವದತ್ತ**=ಇವನು ದೇವದತ್ತ ಎಂಬಲ್ಲಿ ಆಗಿನ ಕಾಲ ಈಗಿನ ಕಾಲ, ಆಗಿನ ದೇಶ, ಈಗಿನ ದೇಶ ಇವುಗಳನ್ನು ಬಿಟ್ಟು ಮನುಷ್ಯನೊಬ್ಬನನ್ನು ಆ (ದೇವದತ್ತನನ್ನು) ಇಟ್ಟುಕೊಂಡಿದ್ದರಿಂದ ಜಹದಜಹಲ್ಲಕ್ಷಣೆ ಆಗಿದೆ. ಇದೇ ತತ್ತ್ವಮಸಿ ಎಂಬ ದಾರ್ಷ್ಟ್ಯಾಂತಿಕಕ್ಕೆ ಬೇಕಾದದ್ದು.

---

**ತತ್ತೆನಿಪ ಶಬ್ದಕೆ ಪರೋಕ್ಷವ**
**ದರ್ಥ; 'ತ್ವಂ' ಎನಲಭಿಮುಖಾರ್ಥವ**
**ದಿತ್ತೆರದ ಪದಗಳ ವಿರೋಧಾಂಶಗಳ ಕಳೆದುಳಿದ ।**
**ತಥ್ಯವೈಕ್ಯವಖಂಡವದ್ವಯ**
**ಸತ್ಯ ಸಹಜಾನಂದ ನಿಜಸಂ**
**ವಿತ್ತದೇ ಕೇಳಸಿಪದಾರ್ಥದ ಸಾಮರಸ್ಯರಸ ॥** ॥೩೨॥

**ತಾತ್ಪರ್ಯ:** 'ತತ್' ಎನ್ನುವ ಶಬ್ದಕ್ಕೆ (ಅದು ಎಂಬ ಮಾತಿಗೆ) ದೂರದಲ್ಲಿರುವ ಈಶ್ವರನು ಎಂದರ್ಥ. ನೀನು ಎಂಬ ಮಾತಿಗೆ ಸಮೀಪದಲ್ಲಿರುವನು ಎಂದರ್ಥ. ಈ ತತ್‌ತ್ವಂ ಎಂಬ ಪದಗಳಲ್ಲಿರುವ ದೂರ ಮತ್ತು ಎದುರಿಗೆ ಎಂಬ ವಿರೋಧವಾದ ಅಂಶಗಳನ್ನು ಬಿಟ್ಟರೆ ಉಳಿದಿದ್ದೇ ಸತ್ಯವಾದುದು; ಒಂದೇ ಆಗಿ ಕೂಡಿ ಹೋಗಿರು ವುದು; ವ್ಯಾಪಕವಾದುದು, ತನಗೆ ಎರಡನೆಯದು ಇಲ್ಲದ್ದು; ತನ್ನ ಜ್ಞಾನ ಸಚ್ಚಿದಾನಂದ ಸ್ವರೂಪವಾದದ್ದು. ಈ ಲಕ್ಷಣಗಳುಳ್ಳದ್ದು ಯಾವುದು ಆಗಿದೆಯೊ ಅದೇ 'ಅಸಿ' ಪದಾರ್ಥದ ಸಾಮರಸ್ಯರಸವಾಗಿದೆ. (ಎರಡೂ ಕೂಡಿ ಒಂದೇ ಆಗಿರುವಂಥದ್ದಾಗಿದೆ).

**ಶಬ್ದಾರ್ಥ: ತತ್ತೆನಿಪಶಬ್ದಕೆಪರೋಕ್ಷವದರ್ಥ**= ಅದು ಎಂಬ ಮಾತಿಗೆ ದೂರದಲ್ಲಿರುವ ಈಶ್ವರನೆಂದರ್ಥ. **ತ್ವಂಎನಲಭಿಮುಖಾರ್ಥ**=ನೀನು ಎಂಬ ಮಾತಿಗೆ (ಎದುರಿಗೆ) ಸಮೀಪದಲ್ಲಿ

ಇರುವನೆಂದರ್ಥ; ಇತ್ತೆರದಪದಗಳ=ಎರಡು ಬಗೆಯ ಪದಗಳ; ವಿರೋಧಾಂಶಗಳ=ದೂರ ಮತ್ತು ಎದುರಿಗೆ ಎಂಬ ವಿರೋಧವಾದ ಅಂಶಗಳನ್ನು; ಕಳೆದುಳಿದ=ತೆಗೆದು ಹಾಕಿದರೆ ಉಳಿಯುವ; ತಥ್ಯವು=ಸತ್ಯವಾದುದು; ಐಕ್ಯವು=ಒಂದೇ ಆಗಿ ಕೂಡಿ ಹೋಗಿರುವುದು; ಅಖಂಡವು=ವ್ಯಾಪಕವು; ಅದ್ವಯ=ತನಗೆರಡನೆಯದಿಲ್ಲದ್ದು; ನಿಜಸಂಪತ್ತು=ತನ್ನ ಜ್ಞಾನ. ಸಾಮರಸ್ಯರಸ=ಎರಡೂ ಕೂಡಿ ಒಂದೇ ಆಗಿರುವಂಥದ್ದು.

---

ಅಂದು ಕಾವ್ಯವನೋದಿದಾವಟು
ಎಂದು ಕವಿತಾಪ್ರೌಢನಾಗಿಹ
ನೆಂದದೊಬ್ಬನಲಹ ಪರೋಕ್ಷವನಭಿಮುಖತ್ವವನು
ಹಿಂದುಗಳೆದಂದಿಂದೆನಿಸುವೀ
ಸಂದಳಿದ ವಟುದೇಹದಂದದಿ
ಚಂದದಸಿಪದದದ್ವಯಾನಂದಾರ್ಥ ಕೇಳೆಂದ ‖ ‖೩೩‖

ತಾತ್ಪರ್ಯ: ಪೂರ್ವದಲ್ಲಿ ಎಂದೋ ಒಂದು ದಿನ ಕಾವ್ಯವನ್ನು ಓದುತ್ತಿರುವ ಬ್ರಹ್ಮಚಾರಿಯು ಈ ದಿನ ಕಾವ್ಯ ರಚನೆಯಲ್ಲಿ ಬಲ್ಲಿದನಾಗಿದ್ದಾನೆ ಎಂದರೆ ಅಂದು ಎಂಬ ಶಬ್ದವು ಪರೋಕ್ಷವನ್ನು ಇಂದು ಎಂಬ ಶಬ್ದವು ಅಭಿಮುಖತ್ವವನು (ಸಮೀಪವನ್ನು) ಬೋಧಿಸುತ್ತದೆ ಅಲ್ಲವೇ? ಅದೇ ರೀತಿಯಾಗಿಯೇ, ಅಂದು ಇಂದು ಎಂಬುದರ ನಡುವಣ ಕಾಲವನ್ನು ಕಳೆದಂಥ ಅಂದಿನ ವಟು ದೇಹ ಇಂದಿನ ಬಲ್ಲಿದ ಕವಿ ದೇಹ ಒಂದೇ ಆಗಿರುವ ರೀತಿಯಲ್ಲಿ ಅಸಿ ಎಂಬ ಪದದ ಅದ್ವಯಾನಂದದ ಅರ್ಥವೇ ಮುಖ್ಯ ಸಾರವಾಗಿದೆ ಎಂದು ಶುಕನಿಗೆ ವ್ಯಾಸರು ಹೇಳಿದರು.

ಶಬ್ದಾರ್ಥ: ಪರೋಕ್ಷವನಭಿಮುಖತ್ವವನು=ಆ ಕಾಲದಲ್ಲಿ ಆ ದೇಶದಲ್ಲಿ ಇದ್ದವನು ಎಂಬ ದೂರದರ್ಥವನ್ನು ಈ ಕಾಲದಲ್ಲಿ ಈ ದೇಶದಲ್ಲಿ ಇರುವನೆಂಬ ಸಮೀಪದ ಅರ್ಥವನ್ನು; ಸಂದಳಿದ=ನಡುವಣ ಕಾಲವನ್ನು ಕಳೆದಂಥ; * ವಟು=ಬ್ರಹ್ಮಚಾರಿ; * ಕವಿತಾಪ್ರೌಢ=ಕಾವ್ಯ ರಚನೆಯಲ್ಲಿ ಬಲ್ಲಿದ

---

ಈಸುದಿನವಾ ದೇಶದಲಿ ಮನು
ಜೇಶನೆನಿಸಿರ್ದಾತ ಘನಸಂ
ಕ್ಲೇಶದಿಂ ಬಡತನದೊಳಿಹನೀ ದೇಶದೊಳಗೆಂದು ।
ಘೋಷಿಸುವರೀ ಭಾಗ್ಯ, ಬಡತನ,
ದೇಶಭೇದಗಳೆಲ್ಲವೊಬ್ಬನೊ
ಳಾ ಸಮಾನದಲಸಿಪದಾರ್ಥವದದ್ವಯಾನಂದ ‖ ‖೩೪‖

ತಾತ್ಪರ್ಯ: ಇಷ್ಟು ದಿನಗಳತನಕ ಆ ದೇಶದಲ್ಲಿ ರಾಜನು ಎನ್ನಿಸಿಕೊಂಡಿದ್ದವನು ಈಗ ಈ ದೇಶದಲಿ ಭಾರಿ ದುಃಖಕೋಟಲೆಗಳಲ್ಲಿ, ಬಡತನದಿಂದ ನರಳುತ್ತಿದ್ದಾನೆ ಎಂದು ಹೇಳಿದರೆ ಸಿರಿತನ ಮತ್ತು ಬಡತನವು ದೇಶ, ಕಾಲ ಭೇದಗಳಿಂದ ಆದವು,

ಆದರೆ ಅದನ್ನು ಅನುಭವಿಸುವ ವ್ಯಕ್ತಿ ಒಬ್ಬನೇ ಆಗಿದ್ದಾನೆ ಎಂದರ್ಥ. ಹಾಗೆಯೇ ಅಸಿ ಎಂಬ ಪದದ ಮುಖ್ಯಾರ್ಥವು ಕರಣಗಳ ವಿಷಯಗಳಿಂದ ಮಿಥ್ಯಾರೋಪದ ಕಾರಣ, ಭಿನ್ನವಾಗಿ ಕಂಡುಬಂದರೂ ನಿಶ್ಚಿತಜ್ಞಾನದ ದೃಷ್ಟಿಯಿಂದ ಅದು ಅಭಿನ್ನವೂ ಅದ್ವಯವೂ ಆಗಿರುತ್ತದೆ.

**ಶಬ್ದಾರ್ಥ:** ಈಸುದಿನ=ಇಷ್ಟು ದಿನಗಳ ತನಕ; ಮನುಜೇಶ=ರಾಜನು; ಘನಸಂಕ್ಲೇಶ=ಭಾರಿ ದುಃಖ ಕೋಟಲೆಗಳು; ಘೋಷಿಸುವರು=ಹೇಳುವರು; ಆ ಸಮಾನದಲಿ=ಅದರಂತೆ;

**ಪಾಠಾಂತರ:** ಪದ್ಯದಲ್ಲಿರುವ 'ಘೋಷಿಸುವರು' ಎಂಬ ಪದಕ್ಕೆ ಟಿಪ್ಪಣಿಯಲ್ಲಿ ಚಿದಂಬರಯ್ಯ ನವರು ಭಾಷಿಸುವರು ಎಂಬ ಪಾಠಾಂತರ ಕೊಟ್ಟಿದ್ದಾರೆ. ಅರಾಸೆ ಅವರ 'ಇ' ಪ್ರತಿ ಮತ್ತು ಕೊಮಂಡೂರು ಅವರ ಪ್ರತಿಗಳಲ್ಲಿ 'ಭೂಷಿಸುವರು' ಎಂದಿದೆ.

---

**ಕುರುಹಿನಾಕಳ ಹಾಲ ಕರತಂ**
**ದಿರಿಸೆ ಭೇದವ ಕಾಣಲರಿಯದು;**
**ನಿರುತವಾಯೀ ಎಂಬ ಶಬ್ದದ ಭೇದವಿಂತೈಸೆ! ।**
**ತರಳ ತಿಳಿಯಾ ಕ್ಷೀರವೊಂದೇ**
**ಪರಿಯೊಳಗೆ ತೋರ್ಪಂತೆ ನಿಜಸುಖ**
**ದೆರಕವಹ ನಿರ್ದ್ವಂದ್ವವಸಿಪದದರ್ಥ ಕೇಳೆಂದ ॥ ॥೩೫॥**

**ತಾತ್ಪರ್ಯ:** ಯಾವುದಾದರೊಂದು ಹೆಗ್ಗುರುತುಳ್ಳ ಒಂದು ಹಸುವಿನ ಹಾಲನ್ನು ಬೇರೆ ಹಸುಗಳ ಹಾಲಿನ ಸಾಲಿನಲ್ಲಿ ಇರಿಸಿದರೆ ಅದರಲ್ಲಿ ಯಾವ ಹಾಲು ಯಾವ ಹಸುವಿನದು ಎಂದು ಕಂಡುಹಿಡಿಯಲು ಸಾಧ್ಯವಿಲ್ಲ. ಆ ಹಾಲು ಈ ಹಾಲು ಎಂಬ ಶಬ್ದಗಳನ್ನು ಬಿಟ್ಟರೆ ಹಾಲಿನಲ್ಲಿ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಹೀಗೆ ಆ ಈ ಹಾಲು ಒಂದೇ ವಿಧದ್ದು ಆಗಿರುತ್ತದೋ ಹಾಗೆಯೇ ನಿಜವಾದ ಸುಖದ ಸಾರವೆನಿಸಿದ ದ್ವಂದ್ವಾತೀತಸ್ವರೂಪನೇ ಅಸಿಪದದ ಅರ್ಥವೆಂದು ತಿಳಿ.

**ಶಬ್ದಾರ್ಥ:** ಕುರುಹಿನ=ಯಾವುದಾದರೊಂದು ಹೆಗ್ಗುರುತುಳ್ಳ; ಇರಿಸೆ=ಉಳಿದ ಆಕಳುಗಳ ಹಾಲಿನ ಸಾಲಿನಲ್ಲಿ ಇರಿಸಿದರೆ; ಆ, ಈ ಎಂಬ ಶಬ್ದವೆ=ಆ ಹಾಲು, ಈ ಹಾಲು ಎಂಬ ಮಾತು ಮಾತ್ರವೇ ಭೇದವು; * ನಿರ್ದ್ವಂದ್ವವು=ದ್ವಂದ್ವಾತೀತ ಸ್ವರೂಪ; ಅಖಂಡವೂ, ಅಭಿನ್ನವೂ ಆದುದು.

**ಪಾಠಾಂತರ:** ನಿಜಸುಖದೆರಕವಹ=ನಿಜಸುಖದುರುಳಿಯಹ (ಆ) (ಅರಾಸೇ ಪುಟ–೧೪೫) (ಕು–ಪುಟ–೧೬೫)

---

## ಅಸಿಪದದ ಅರ್ಥ (೩೬–೩೯)

**ಕುಂಭದೊಳಗವಕಾಶವಾಗಿ**
**ದ್ದಂಬರವೆ ಒಳಹೊರಗನೆಲ್ಲವ**
**ತುಂಬಿಕೊಂಡಿಹುದೆಂದು ಬಯಲನು ಬಗೆದು ತಿಳಿವಂತೆ ।**

ಅಂಬುಜಾಸನ, ವಿಷ್ಣು, ಶತಮಖ,
ಶಂಭು ಮೊದಲಾದಖಿಳಸುರನರ
ರೆಂಬ ಸರ್ವರೊಳೊಬ್ಬನಸಿಪದದರ್ಥ ಕೇಳೆಂದ ॥ ॥೩೬॥

**ತಾತ್ಪರ್ಯ:** ಮಡಕೆಯೊಳಗೆ ಅವಕಾಶವನ್ನು ಪಡೆದಿರುವ ಆಕಾಶವೇ ಒಳಗೆ ಹೊರಗೆ ಎಲ್ಲ ಕಡೆಗಳಲ್ಲೂ ಆವರಿಸಿಕೊಂಡಿರುವ ಬಯಲು ಎಂಬ ವಸ್ತುವಾಗಿದೆ ಎಂದು ತಿಳಿದಿರುತ್ತೇವೆ. ಹಾಗೆಯೇ ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರಾದಿಗಳು ಮೊದಲ್ಗೊಂಡು ಸುರರು, ಅಸುರರು, ನರರು ಎಂಬ ಸಮಸ್ತವರ್ಗದವರಲ್ಲೂ ನೆಲೆಸಿರುವ ಪರಬ್ರಹ್ಮನೊಬ್ಬನೇ ಆಗಿದ್ದಾನೆ ಎಂಬುದೇ ಅಸಿಪದದ ಅರ್ಥವಾಗಿದೆ. ಶುಕನೇ ಕೇಳು ಎಂದು ವ್ಯಾಸರು ಹೇಳಿದರು.

**ಶಬ್ದಾರ್ಥ:** ಶತಮಖ=ನೂರು ಯಜ್ಞಗಳನ್ನು ಮಾಡಿದವನು, ಇಂದ್ರ; * ಕುಂಭ=ಮಡಕೆ; * ಅಂಬರ=ಆಕಾಶ; * ಅಂಬುಜಾಸನ=ಬ್ರಹ್ಮ; ಶಂಭು=ಮಹೇಶ್ವರ; * ಒಳಹೊರಗು=ಸರ್ವವ್ಯಾಪಿಯಾಗಿ

---

ಸತ್ತು ಚಿತ್ತಾನಂದರೂಪಿನ
ಪ್ರತ್ಯಗಾತ್ಮನ ತಿಳಿದುನೋಡಲು
ನಿತ್ಯನಿಜಸುಖ ಸಂವಿದದ್ವಯನೆನಿಪ ಪರಮಾತ್ಮ; ।
ಪ್ರತ್ಯಗಾತ್ಮಪರಾತ್ಮಭೇದಗ
ಳೆತ್ತಣದು? ವಾಚಾವಿಡಂಬನ!
ಮೃತ್ತಿಕೆಯ ಮಣ್ಣೆಂಬೊಲಸಿಪದದರ್ಥ ಕೇಳೆಂದ ॥ ॥೩೭॥

**ತಾತ್ಪರ್ಯ:** ಸಚ್ಚಿದಾನಂದರೂಪಿ (ಸತ್, ಚಿತ್, ಆನಂದರೂಪನಾದ) ಆಗಿರುವ ಒಳಗಿರುವ ಆತ್ಮನನ್ನು ವಿಚಾರ ಮಾಡಿ ನೋಡಿದರೆ ಅವನು ನಿತ್ಯನಾಗಿಯೂ, ಸ್ಥಿರಸುಖಿಯಾಗಿಯೂ, ಜ್ಞಾನರೂಪಿಯೂ, ಅಭಿನ್ನನೂ ಆಗಿರುವ ಪರಮಾತ್ಮನಾಗಿದ್ದಾನೆ. ಹೀಗಿರುವಾಗ ಒಳಗಿರುವ ಆತ್ಮನಿಗೂ ಸರ್ವವ್ಯಾಪಿಯಾದ ಪರಮಾತ್ಮನಿಗೂ ಭೇದವಿಲ್ಲವೆಂದರ್ಥ. ಭೇದವಿದೆ ಎಂದು ಹೇಳುವುದು ಬರಿಯ ಬೂಟಾಟಿಕೆಯ ಮಾತಾಗಿದೆ. (ವಾಚಾ ವಿಡಂಬನ) ಮೃತ್ತಿಕೆಯೇ (ಸಂಸ್ಕೃತದಿಂದ) ಮಣ್ಣು (ಕನ್ನಡ ಪದ) ಎಂದು ಹೇಳಿದ ಮಾತ್ರಕ್ಕೆ ಮಾತಿನಲ್ಲಿ (ಭಾಷೆಯಲ್ಲಿ) ಭೇದ ಉಂಟಾಯಿತೇ ಹೊರತು, ವಸ್ತುವಿನಲ್ಲಿ ಯಾವ ಭೇದವೂ ಉಂಟಾಗಿಲ್ಲ. ಅದೇ ರೀತಿಯಾಗಿ ಅಸಿ ಪದದ ಅರ್ಥವನ್ನು ತಿಳಿಯಬೇಕು. ಒಟ್ಟಿನಲ್ಲಿ ಜೀವನೆಂಬುದೂ ಈಶ್ವರನೆಂಬುದೂ ಮಾತಿನ ಭೇದವೇ ಹೊರತು ಲಕ್ಷ್ಯವಸ್ತುಸ್ವರೂಪದಲ್ಲಿ ಭೇದವಿಲ್ಲ.

**ಶಬ್ದಾರ್ಥ:** ಪ್ರತ್ಯಗಾತ್ಮಪರಾತ್ಮಭೇದಗಳೆತ್ತಣದು=ಒಳಗಿರುವ ಆತ್ಮನಿಗೂ; ಸರ್ವವ್ಯಾಪಿಯಾದ ಆತ್ಮನಿಗೂ ಭೇದವಿಲ್ಲವೆಂದರ್ಥ; ವಾಚಾವಿಡಂಬನ=ಬಾಯಬೂಟಾಟಿಕೆ; ಮೃತ್ತಿಕೆಯೇ ಮಣ್ಣು=ಮೃತ್ತಿಕೆಯೆಂಬುದು (ಸಂಸ್ಕೃತ ಪದ) ಮಣ್ಣೆಂಬುದು (ಕನ್ನಡ ಪದ) ಮಾತಿನ ಭೇದವೇ ಹೊರತು ವಸ್ತುವಿನಲ್ಲೇನೂ ಭೇದವಿಲ್ಲದೆ ಇರುವ ಹಾಗೆ (ಜೀವನವೆಂಬುದೂ ಈಶ್ವರನೆಂಬುದೂ ಮಾತಿನ ಭೇದವೇ ಹೊರತು ಲಕ್ಷ್ಯ ವಸ್ತು ಸ್ವರೂಪದಲ್ಲಿ ಭೇದವಿಲ್ಲ).

---

**ಮಾಯೆಯೆಂಬುದೆ ಮಿಥ್ಯ; ಜೀವನಿ**
**ಕಾಯವದರಿಂ ಮುನ್ನಲಿಲ್ಲವು;**
**ಬಾಯ ಬನ್ನಣೆಯಿಂದ ಬೋಧಿಸೆ ಭೇದವೆಂದಾಯ್ತು; ।**
**ರಾಯ, ರಂಕನು; ರಂಕನೇ ತಿಳಿ**
**ರಾಯನೆಂಬಂದದಲಿ ಬ್ರಹ್ಮದ**
**ಮಾಯೆಯಿಂದಲಿ ಜೀವ; ಜೀವನೆ ತಿಳಿದೊಡಾ ಬ್ರಹ್ಮ ॥ ॥೩೮॥**

**ತಾತ್ಪರ್ಯ:** ಮಾಯೆಯೆಂಬುದೇ ಇಲ್ಲವೆಂದಾದ ಮೇಲೆ ಸೃಷ್ಟಿಯಾಗಿರುವ ಪ್ರಾಣಿಗಳ ಸಮೂಹದ ಇರುವಿಕೆಯಂತು ಇಲ್ಲವೇ ಇಲ್ಲ. ಭೇದವನ್ನು ಬಾಯಲ್ಲಿ ಆಡುತ್ತಾ ಆಡುತ್ತಾ ಬಂದಿರುವುದರಿಂದ ಆ ಸಂಸ್ಕಾರವೇ ಮನಸ್ಸಿನಲ್ಲಿ ಬೇರುಬಿಟ್ಟು ಕೊಂಡಿದೆ. ರಾಜನನ್ನು (ರಂಕ) ಭಿಕ್ಷುಕನೆಂದು, ಭಿಕ್ಷುಕನನ್ನು ರಾಜನೆಂದು ತಿಳಿಯುವ ಹಾಗೆ ಪರಬ್ರಹ್ಮನ ಮಾಯೆಯಿಂದ ಜೀವಭೇದವುಂಟಾಗುತ್ತದೆ. ಜೀವನೇ ಜೀವಭೇದವನ್ನು ತಿಳಿದುಕೊಂಡರೆ ಅದೇ ಅಸಿಪದದ ವಾಚ್ಯವಾದ ಬ್ರಹ್ಮನೆಂದು ಭಾವಿಸತಕ್ಕದ್ದು.

**ಶಬ್ದಾರ್ಥ: ಜೀವನಿಕಾಯವದರಿಂ ಮುನ್ನಲಿಲ್ಲವು**=ಮಾಯೆಯೆಂಬುದೇ ಇಲ್ಲದ್ದೆಂದಾದ ಮೇಲೆ ಅದರಿಂದ ಸೃಷ್ಟಿಯಾಗಿರುವ ಪ್ರಾಣಿಗಳ ಸಮೂಹದ ಇರುವಿಕೆಯಂತು ಇಲ್ಲವೇ ಇಲ್ಲ.

**ಟಿಪ್ಪಣಿ: ಬಾಯಬನ್ನಣೆಯಿಂದ ಬೋಧಿಸೆ ಭೇದವೆಂದಾಯ್ತು**=ಭೇದವನ್ನು ಬಾಯಲ್ಲಿ ಆಡುತ್ತಾ ಆಡುತ್ತಾ ಬಂದದ್ದರಿಂದ ಆ ಸಂಸ್ಕಾರವೇ ಮನಸ್ಸಿನಲ್ಲಿ ಬೇರೂರಿಕೊಂಡಿದೆ. ತಾಯಿ ಮಕ್ಕಳ ಮುಂದೆ ದೇಹಾತ್ಮ ಬುದ್ಧಿಯ ಮಾತನ್ನೇ ಆಡುತ್ತಾ ಮರುಳು ಮಾಡುವಳೆಂದೂ ನಾವು ಆ ಮಂಕನ್ನು ಕಳೆದುಕೊಳ್ಳಬೇಕೆಂದೂ ಸ್ವಾಮಿ ರಾಮತೀರ್ಥರು ಹೇಳಿರುವುದೂ ಇದೇ ಅಭಿಪ್ರಾಯವಾಗಿದೆ.

---

**ತತ್ತ್ವಮಸಿಯೆಂದೊಲಿದು ಶ್ರುತಿ ಪೇ**
**ಳುತ್ತಲಿಹುದೆಂತೆನಲವಿದ್ಯಾ**
**ಪತ್ತಿಯಾತ್ಮಂಗಿಲ್ಲವೆಂದದ ಪರಿಹರಿಸಿತೈಸೆ; ।**
**ವಸ್ತುವೆರಡಾಗಿಹುದರೊಳಗೇ**
**ಕತ್ವದೋರುತ ಲಕ್ಷಣಾಖ್ಯೆಯ**
**ವೃತ್ತಿಯಿಂ ಲಕ್ಷಿತವೆ ಬ್ರಹ್ಮವದೆಂದು ಸಾರಿಹುದು ॥ ॥೩೯॥**

**ತಾತ್ಪರ್ಯ:** ನಾನು ಜೀವ ಎಂದು ತಿಳಿದುಕೊಂಡಿರುವವನೇ, ನೀನು ನಿಜಕ್ಕೂ ಬ್ರಹ್ಮನಾಗಿದ್ದೀಯೆ ಎಂದು ಶ್ರುತಿಪ್ರಮಾಣವು ಹೇಳುತ್ತಲಿದೆ ಏಕೆಂದರೆ ಆತ್ಮನಿಗೆ ಅವಿದ್ಯಾಪತ್ತಿ ಎಂದರೆ ಮಾಯಾವರಣವು ಇಲ್ಲವೆಂದು ನಿರ್ಧರಿಸಲ್ಪಟ್ಟಿದೆ. ಆದ ಕಾರಣ ಅವಿದ್ಯಾದೋಷದಿಂದ ಆಗಿರುವ ಭೇದಬುದ್ಧಿಯನ್ನು (ಪ್ರಪಂಚದ ಸತ್ಯತ್ವವನ್ನು) ಹೋಗಲಾಡಿಸಲ್ಪಟ್ಟಿದೆ. ತತ್, ತ್ವಂ ಎಂಬ ಎರಡು ಪದಗಳು ಬೇರೆ ಬೇರೆಯಾಗಿದ್ದರೂ ಅವುಗಳಲ್ಲಿ ಜೀವಬ್ರಹ್ಮರ ಭೇದವಿಲ್ಲದೆ ಏಕತ್ವವನ್ನು ಹೇಳಿದೆ. ಇದನ್ನು

ಜಹದಜಹಲ್ಲಕ್ಷಣೆಯಿಂದ ಜೀವಬ್ರಹ್ಮರುಗಳಲ್ಲಿ ಭೇದವಿಲ್ಲದೆ ಏಕತ್ವವಿದೆ ಎಂಬುದನ್ನು ತಿಳಿಯಬೇಕು. (ಜೀವಬ್ರಹ್ಮರ ಲಕ್ಷಣದ ಬಗ್ಗೆ ೫-೩೧ರ ಟಿಪ್ಪಣಿ ನೋಡಿ)

**ಶಬ್ದಾರ್ಥ:** ತತ್ತ್ವಮಸಿ (ನಾನು ಜೀವ ಎಂದು ತಿಳಿದುಕೊಂಡಿರುವವನೇ) ನೀನು ಬ್ರಹ್ಮನಾಗಿದ್ದೀಯೆ. (ಶ್ರುತಿವಾಕ್ಯಕ್ಕೆ ಪರಿಶಿಷ್ಟ ನೋಡಿ) ಆದ=ಅವಿದ್ಯಾ ದೋಷದಿಂದ ಆಗಿರುವ ಭೇದಬುದ್ಧಿಯನ್ನು (ಪ್ರಪಂಚ ಸತ್ಯತ್ವವನ್ನು)

**ಟಿಪ್ಪಣಿ-೧:** "ತತ್ ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" ಛಾಂದೋಗ್ಯ ೬-೯-೪; ೬-೧೦-೩; ೬-೧೧-೨; ೬-೧೨-೩; ೬-೧೩-೨; ೬-೧೪-೨; ೬-೧೫-೨;ರ ೧೬-೩ ನೋಡಿ;

**ಟಿಪ್ಪಣಿ-೨:** * ಲಕ್ಷಣಾಖ್ಯೆಯವೃತ್ತಿಯಿಂ: ಜೀವ ಬ್ರಹ್ಮರ ಲಕ್ಷಣವನ್ನು ಜಹದಜಹಲ್ಲಕ್ಷಣೆಯಿಂದ ಹೇಳಲ್ಪಟ್ಟಿದೆ. ಈ ಲಕ್ಷಣಗಳು ೩ ಬಗೆಯಾಗಿವೆ. ಜಹಲ್ಲಕ್ಷಣ (ಜಹತ್+ಲಕ್ಷಣ) ಅಜಹಲ್ಲಕ್ಷಣ (ಅಜಹತ್ ಲಕ್ಷಣ) ಜಹದಜಹಲ್ಲಕ್ಷಣ (ಜಹತ್+ಅಜಹತ್‌ಲಕ್ಷಣ) ಎಂದು ೩ ಬಗೆ. ಪದ್ಯ ೫-೩೧ರ ಟಿಪ್ಪಣಿಯಲ್ಲಿ ಈ ಲಕ್ಷಣಗಳನ್ನು ವಿವರಿಸಲಾಗಿದೆ.

---

## ಜೀವೇಶ್ವರತ್ವವು ಉಪಾಧಿಕೃತವು (೪೦-೪೬)

**ಅನಲನೆಂತುಷ್ಣಸ್ವರೂಪನೊ**
**ಚಿನಮಯಾತ್ಮಕನಾಪರಿಯಲೇ**
**ತನಯ, ನಿತ್ಯಜ್ಞಾನರೂಪನು; ತತ್ಪ್ರಕಾಶದಲಿ ।**
**ಘನತಮಸ್ಸತ್ತ್ವಪ್ರಧಾನಗ**
**ಳೆನಿಸಿ ಧೂಮಜ್ವಾಲೆಗಳವೊಲ್**
**ಜನಿಸಿ ಮಾಯಾಶಕ್ತಿಚಿಚ್ಛಕ್ತಿಗಳಿವೆನಿಸಿಹವು ॥** ॥೪೦॥

**ತಾತ್ಪರ್ಯ:** ಮಗನೆ ಕೇಳು, ಅಗ್ನಿಯು ಹೇಗೆ ಉಷ್ಣಸ್ವರೂಪಿಯೋ ಹಾಗೆ ಚಿನ್ಮಯರೂಪನಾದ ಆ ಬ್ರಹ್ಮನು ಸತ್ಯಜ್ಞಾನಸ್ವರೂಪಿ ಆಗಿದ್ದಾನೆ. ಅಗ್ನಿಯಿಂದ ಹೊಗೆ ಮತ್ತು ಉರಿ ಹೇಗೆ ಹೊರಬೀಳುವುದೋ ಹಾಗೆಯೇ ಆ ಜ್ಞಾನ ಸ್ವರೂಪದ ಪ್ರಭಾವದಿಂದ ಹೊಗೆಯ ಹಾಗೆ ತಮಃಪ್ರಧಾನವಾದ ಮಾಯಾಶಕ್ತಿಯೂ, ಜ್ವಾಲೆಯ ಹಾಗೆ ಸತ್ತ್ವಪ್ರಧಾನವಾಗಿ ಚಿಚ್ಛಕ್ತಿಯೂ ಹೊರಬಿದ್ದವು.

**ಶಬ್ದಾರ್ಥ:** ಅನಲನು=ಅಗ್ನಿಯು; ತನಯ=ಮಗನೆ; ತತ್ಪ್ರಕಾಶದಲಿ=ಆ ಜ್ಞಾನಸ್ವರೂಪದ ಪ್ರಭಾವದಿಂದ; ಧೂಮಜ್ವಾಲೆಗಳವೊಲ್=ಹೊಗೆಯ ಹಾಗೆ (ತಮಃ ಪ್ರಭಾವವಾಗಿ ಮಾಯಾಶಕ್ತಿ; ಜ್ವಾಲೆಯ ಹಾಗೆ ಸತ್ತ್ವಪ್ರಧಾನವಾಗಿ ಚಿಚ್ಛಕ್ತಿ ಜನಿಸಿಹವು); * ಚಿನುಮಯಾತ್ಮಕನು= ಸತ್ಯಜ್ಞಾನಸ್ವರೂಪನಾದ ಚಿದಾನಂದ ಬ್ರಹ್ಮನು;

**ಪಾಠಾಂತರ:** ಜನಿಸಿ ಮಾಯಾಶಕ್ತಿ ಚಿಚ್ಛಕ್ತಿ ಎನಿಸಿ ಧೂಮಜ್ವಾಲೆಗಳವೋಲ್ ಘನ ತಮಸ್ಸತ್ತ್ವ ಪ್ರಧಾನಗಳಾಗಿ ತೋರುವುವು ॥ (ಕು ಪಾಅ)

ಇಲ್ಲಿ ಛಂದಸ್ ದೋಷವಿದ್ದು ಪ್ರಾಸ ತಪ್ಪಿ ಅಶುದ್ಧ ಪಾಠವಾಗಿದೆ. ಅರಾಸೇ ಅವರ ಪ್ರತಿಯಲ್ಲೂ ಇ ಆ ಪ್ರತಿಗಳ ಪಾಠ ಇದೇ ಆಗಿದೆ. ಚಿದಂಬರಯ್ಯನವರು ಈ ಪಾಠವನ್ನು ಪರಿಷ್ಕರಿಸಿದಂತೆ ಕಾಣುತ್ತದೆ.

**ಕಾರ್ಯಕಾರಣವೆಂಬುಪಾಧಿಗ**
**ಳಾರ್ಯ ವಿದ್ಯಾವಿದ್ಯೆಯವರೊಳು**
**ಕಾರ್ಯವೇ ಮಲಿನಪ್ರಧಾನವು, ಕಾರಣವು ತಿಳಿಯೆ ।**
**ಸಾರವಹ ಸತ್ತ್ವಪ್ರಧಾನವು;**
**ತಾರತಮ್ಯದೊಳಿರ್ಪ ಗುಣದಿಂ**
**ತೋರುವದು ಜೀವೇಶ್ವರತ್ವವು ನಿತ್ಯಮುಕ್ತಂಗೆ ॥ ॥೪೧॥**

**ತಾತ್ಪರ್ಯ:** ಪೂಜ್ಯನೆ, ವಿದ್ಯೆ (ಈಶ್ವರನಿಗೆ) ಮತ್ತು ಅವಿದ್ಯೆ (ಜೀವನಿಗೆ) ಕಾರ್ಯಕಾರಣಗಳೆಂಬ ಉಪಾಧಿಗಳಾಗಿವೆ. ಅದರಲ್ಲಿ ಅವಿದ್ಯೆಯ ಕಾರ್ಯವು ಮಲಿನ ಪ್ರಧಾನವಾದದ್ದು; ವಿದ್ಯೆಯ ಕಾರಣವು ಸಾರಭೂತವಾದ ಸತ್ಯಪ್ರಧಾನವಾದದ್ದು ಸತ್ತ್ವಗುಣವು ಶ್ರೇಷ್ಠವಾದುದರಿಂದ ಆ ಗುಣದ ಉಪಾಧಿಯಿಂದ ಈಶ್ವರತ್ವ ಉಂಟಾಯಿತು. ರಜಸ್ತಮೋಗುಣಗಳು ಕನಿಷ್ಠವಾದುದರಿಂದ ಅವುಗಳ ಉಪಾಧಿಯಿಂದ ಜೀವತ್ವ ಉಂಟಾಯಿತು. ಹೀಗಾಗಿ ನಿತ್ಯಮುಕ್ತನಿಗೆ ಸಲ್ಲುವ ಜೀವತ್ವ ಈಶ್ವರತ್ವಗಳೆಂಬ ಭೇದ ನಿತ್ಯವಾದ ಪರಬ್ರಹ್ಮನಿಗೆ ಇಲ್ಲ.

**ಶಬ್ದಾರ್ಥ:** ಆರ್ಯ=ಪೂಜ್ಯನೆ, ಕಾರ್ಯಕಾರಣಕೆ=ಕಾರ್ಯೋಪಾಧಿಯ ಜೀವನಿಗೆ ಮತ್ತು ಕಾರಣೋಪಾಧಿಯ ಈಶ್ವರನಿಗೆ; ವಿದ್ಯಾವಿದ್ಯೆಯದರೊಳು=ವಿದ್ಯೆ (ಈಶ್ವರನಿಗೆ) ಮತ್ತು ಅವಿದ್ಯೆ (ಜೀವನಿಗೆ) ತಾರತಮ್ಯದೊಳಿರ್ಪ ಗುಣದಿಂ ತೋರುವುದು=ಸತ್ತ್ವಗುಣವು ಶ್ರೇಷ್ಠವಾದ್ದರಿಂದ ಆ ಗುಣದ ಉಪಾಧಿಯಿಂದ ಈಶ್ವರತ್ವ ಉಂಟಾಯಿತು. ರಜಸ್ತಮೋಗುಣಗಳು ಕನಿಷ್ಠವಾದುದರಿಂದ ಅವುಗಳ ಉಪಾಧಿಯಿಂದ ಜೀವತ್ವ ಉಂಟಾಯಿತು. * ಜೀವೇಶ್ವರತ್ವವು=ಜೀವತ್ವ+ಈಶ್ವರತ್ವವು; * ತಾರತಮ್ಯದೊಳು=ಒಂದಕ್ಕಿಂತ ಇನ್ನೊಂದು ಮೇಲು ಅಥವಾ ಕೀಳು ಎಂಬ ಗುಣ ಹೊಂದಿರುವ.

---

**ನೀರಧಿಕವಾಗಿರಲು ನಿರ್ಮಲ**
**ತೋರುವದು; ನೀರಲ್ಪವಾದೊಡೆ**
**ನೀರು ಕಲಕಾಗಿರ್ಪುದಾ ಪರಿ ಕಾರ್ಯಕಾರಣವು; ।**
**ನೀರಗುಣದೋಷಗಳು ತಿಳಿಯಲು**
**ಸೂರ್ಯನ ಪ್ರತಿಬಿಂಬಕೆಂತು? ವಿ**
**ಚಾರಿಸಲು ಜೀವೇಶ್ವರತ್ವವುಪಾಧಿಕೃತವೆಂದ ॥ ॥೪೨॥**

**ತಾತ್ಪರ್ಯ:** ಜಲಾಶಯದಲ್ಲಿ ನೀರು ಹೆಚ್ಚಾಗಿದ್ದಲ್ಲಿ ತಿಳಿನೀರಾಗಿ ಕಾಣುತ್ತದೆ. ನೀರು ಕಡಿಮೆ ಇದ್ದಲ್ಲಿ ಕಲಕುನೀರಾಗಿ (ಕಲ್ಮಷದ ನೀರಾಗಿ) ಕಾಣುತ್ತದೆ. ಅದೇ ರೀತಿಯಾಗಿ ಜೀವನೂ ಈಶ್ವರನೂ ಕಾರ್ಯಕಾರಣಭಾವ ಹೊಂದಿದ್ದಾರೆ. ಜೀವನು ವ್ಯಷ್ಟಿ (ಬಿಡಿ) ಬುದ್ಧಿಯವನಾದ್ದರಿಂದ ಸ್ವಲ್ಪ ನೀರು ಇರುವ ಕಡೆ ಕಲಕಾಗಿ ಇರುವಂತೆ ಮಲಿನನಾಗಿರುವನು. ಈಶ್ವರನು ಸಮಷ್ಟಿ ಬುದ್ಧಿಯವನಾಗಿರುವುದರಿಂದ ಬಹಳ ನೀರು ಇರುವ ಕಡೆ ನೀರು

ನಿರ್ಮಲವಾಗಿರುವಂತೆ ಶುದ್ಧನಾಗಿರುವನು. ನೀರಿನಲ್ಲಿ ಸೂರ್ಯನ ಬಿಂಬ ಪ್ರತಿಫಲಿಸಿದಾಗ ಆ ಪ್ರತಿಬಿಂಬಕ್ಕೆ ನೀರಿನ ಗುಣದೋಷಗಳು ಹೇಗೆ ಅಂಟುವುದಿಲ್ಲವೋ ಹಾಗೆಯೇ ಬುದ್ಧಿಯ ದೋಷವು ಜೀವೇಶ್ವರರಿಗೆ ಅಂಟುವುದಿಲ್ಲ. ಎಂದರೆ ಜೀವೇಶ್ವರತ್ವ ಭೇದವಿಚಾರಕ್ಕೆ ವಿದ್ಯಾವಿದ್ಯೆಗಳ ಉಪಾಧಿ ರೂಪವೇ ಕಾರಣವೆಂದು ತಿಳಿಯಬೇಕು.

**ಶಬ್ದಾರ್ಥ:** **ನೀರು+ಅಧಿಕವಾಗಿರಲು**=ನೀರು ಜಲಾಶಯದಲ್ಲಿ ಹೆಚ್ಚಾಗಿರಲು; **ನೀರ**=ನೀರಿನ; **ಸೂರ್ಯ ಪ್ರತಿಬಿಂಬ**=ಪ್ರತಿಭಲಿಸಿದ ಸೂರ್ಯನ ಬಿಂಬ; *** ಕಲಕಾಗಿ ನೀರು ಇರ್ಪುದು**=ಕಲ್ಮಷನೀರಾಗಿ ಕಾಣುತ್ತದೆ.

**ಟಿಪ್ಪಣಿ-೧:** **ಈ ಪರಿ ಕಾರ್ಯಕಾರಣವು-ಜೀವನೂ ಈಶ್ವರನೂ ಅದರಂತೆಯೆ.** ಜೀವನು ವ್ಯಷ್ಟಿ (ಬಿಡಿ) ಬುದ್ಧಿಯವನಾದ್ದರಿಂದ ಸ್ವಲ್ಪ ನೀರಿರುವ ಕಡೆ ನೀರು ಕಲಕಾಗಿ ಕಲ್ಮಷವಾಗಿ ಎಂಬಂತೆ ಮಲಿನವಾಗಿರುತ್ತಾನೆ. ಈಶ್ವರನು ಸಮಷ್ಟಿ (ಒಟ್ಟು) ಬುದ್ಧಿಯವನಾದ್ದರಿಂದ ಬಹಳ ನೀರಿರುವ ಕಡೆ ನೀರು ನಿರ್ಮಲವಾಗಿರುವಂತೆ ಶುದ್ಧನಾಗಿರುವನು.

**ಟಿಪ್ಪಣಿ-೨:** **ಸೂರ್ಯನಪ್ರತಿಬಿಂಬಕೆಂತು?**-ನೀರಿನ ಗುಣದೋಷವು (ನಿರ್ಮಲತ್ವ ಮಲಿನತ್ವ) ಸೂರ್ಯನ ಪ್ರತಿಬಿಂಬಕ್ಕೆ ಹೇಗೆ ಅಂಟುವುದಿಲ್ಲವೊ ಹಾಗೆ (ಬುದ್ಧಿಯ ದೋಷವು ಜೀವೇಶ್ವರರಿಗೆ ಅಂಟುವುದಿಲ್ಲ ಎಂದರ್ಥ).

---

**ಮಣ್ಣಮಡಕೆಗೆ ಸ್ವರ್ಣಕಲಶಕೆ**
**ಭಿನ್ನವಲ್ಲದೆ ಬಯಲು ಭಿನ್ನವೆ?**
**ಸ್ವರ್ಣದಿಗೆ ಚಂಡಾಲಕೂಪಕೆ ಭೇದವುಂಟೈಸೆ ।**
**ಭಿನ್ನವೇ ರವಿ ಹೊಲೆಯಲಾ ಪರಿ**
**ನಿರ್ಣಯಿಸೆ ಜೀವೇಶ್ವರತ್ವಕೆ**
**ಭಿನ್ನವೆಂಬುದುಪಾಧಿಕೃತವಾ ಪೂರ್ಣಬ್ರಹ್ಮದಲಿ ॥ ॥೪೩॥**

**ತಾತ್ಪರ್ಯ:** ಮಣ್ಣಿನ ಮಡಕೆಗೂ ಚಿನ್ನದ ಕೊಡಕ್ಕೂ ಇದು ಮಣ್ಣಿನದು, ಇದು ಚಿನ್ನದ್ದು ಎಂಬ ಭೇದವಿರುವುದೇ ಹೊರತು ಅದರೊಳಗಿನ ಆಕಾಶಕ್ಕೆ (ಬಯಲಿಗೆ) ಭೇದವಿಲ್ಲ ಎಂದರೆ ಮಣ್ಣಿನ ಗಡಿಗೆಯಲ್ಲಿ ಮಣ್ಣಿನ ಆಕಾಶವಿದೆ, ಚಿನ್ನದ ಗಡಿಗೆಯಲ್ಲಿ ಚಿನ್ನದ ಆಕಾಶವಿದೆ ಎಂದು ಭೇದ ಮಾಡುವುದಿಲ್ಲ. ಎರಡರಲ್ಲೂ ಇರುವ ಆಕಾಶ ಒಂದೇ ಆಗಿರುತ್ತದೆ. ಅದರಂತೆಯೇ ಇದು ದೇವಗಂಗಾನದಿ, ಹೊಲೆಯರ ಬೀದಿಯಲ್ಲಿರುವ ಬಾವಿ ಎಂಬ ಭೇದವಿರದು. ಏಕೆಂದರೆ ಅವೆರಡರ ನೀರಿನಲ್ಲಿ ಹೊಳೆಯುವ ಸೂರ್ಯನ ಬಿಂಬಕ್ಕೆ ಭೇದ ಕಂಡು ಬರುವುದಿಲ್ಲ ಅಲ್ಲವೇ! ಮೇಲಿನ ದೃಷ್ಟಾಂತಗಳಿಂದ ಜೀವೇಶ್ವರತ್ವ ಭೇದವು ಉಪಾಧಿಕೃತವೇ ಹೊರತು, ಪೂರ್ಣಬ್ರಹ್ಮವು ಅಭಿನ್ನವೂ ಅಖಂಡವೂ ಆಗಿದೆ.

**ಶಬ್ದಾರ್ಥ:** **ಬಯಲು ಭಿನ್ನವೆ?**=ಮಣ್ಣಿನ ಮಡಕೆಯೂ ಬಂಗಾರದ ಕೊಡವೂ ಒಂದಕ್ಕೊಂದು ಬೇರೆ ಆದರೂ, ಅದರೊಳಗಣ ಬಯಲು ಒಂದಕ್ಕೊಂದು ಬೇರೆ ಆದೀತೇ? **ಸ್ವರ್ಣದಿಗೆ**=ದೇವಗಂಗಾನದಿಗೆ; **ಚಂಡಾಲ ಕೂಪಕೆ**=ಹೊಲೆಯರ ಬೀದಿಯಲ್ಲಿರುವ ಬಾವಿಗೆ;

ಟಿಪ್ಪಣಿ: ಕಿಂ ಗಂಗಾಬುನಿ ಬಿಂಬಿತೇಽಂಬರಮಣೌ ಚಂಡಾಲವಾಪೀ ಪಯಃ ।

ಪೂರೇ ಚಾಂತರಮಸ್ತಿ ಕಾಂಚನಘಟೇ ಮೃತ್ಕುಂಭಯೋರ್ವಾಂಬರೇ ॥

ಪ್ರತ್ಯಗ್ವಸ್ತುನಿ ನಿಸ್ತರಂಗ ಸಹಜಾನಂದಾವಬೋಧಾಂಬುಧೌ ।

ವಿಪ್ರೋಽಯಂ ಶ್ವಪಚೋಽಯಮಿತ್ಸಪಿ ಮಹಾನ್ಕೋಽಯಂ ವಿಭೇದಭ್ರಮಃ ॥

–ಶಂಕರಾಚಾರ್ಯರ ಮನೀಷಾಪಂಚಕದ ಶ್ಲೋಕ

ಈ ಶ್ಲೋಕದಲ್ಲಿರುವ ಶಂಕರರ ಅಭಿಪ್ರಾಯವೇ ಮಹಲಿಂಗರಂಗನಲ್ಲೂ ಕಂಡುಬರುತ್ತದೆ.

---

ಉದಕಕೊಂದೇ ಸ್ವಾದ; ಭೂಭೇ
ದದಲಿ ನಾನಾಸ್ವಾದವೆನಿಸಿಹು
ದದು ಮಳೆಯಲುದಯಿಸುವ ಕಾಲದೊಳಾಯ್ತೆ ರಸಭೇದ? ।
ಸದಮಲಾನಂದೈಕರಸವೇ
ಪುದಿದು ಕಾರಣಕಾರ್ಯಭೇದದ
ಲೊದವಿ ಜೀವೇಶ್ವರತೆಯಲ್ಲದೆ ಭೇದವೆಲ್ಲಿಯದು? ॥ ॥೪೪॥

ತಾತ್ಪರ್ಯ: ನೀರಿಗೆ ಒಂದೇ ರುಚಿ; ಅದು ಮಳೆಯಾಗಿ ಬಿದ್ದು ಭೂಮಿಯಲ್ಲಿ ಹರಿಯುವಾಗ ಮಣ್ಣಿನ ನಾನಾಗುಣಗಳಿಂದ ಉಪ್ಪುನೀರು, ಸಿಹಿನೀರು, ಕಪ್ಪು ನೀರು, ಕೆಂಪು ನೀರು, ಮುಂತಾದ ರುಚಿಬಣ್ಣಭೇದಗಳನ್ನು ಹೊಂದುವುದು ಅಷ್ಟೇ ಹೊರತು ಅದು ಮಳೆಯಾಗಿ ಬೀಳುವಾಗ ಅದರ ರುಚಿ, ಬಣ್ಣಗಳಲ್ಲಿ ಯಾವ ಭೇದವೂ ಇರುವುದಿಲ್ಲ. ಹಾಗೆಯೇ ನಿರ್ಮಲವೂ, ಆನಂದಸ್ವರೂಪನೂ ಆದ ಪರಬ್ರಹ್ಮನೇ ಎಲ್ಲಕಡೆ ತುಂಬಿಕೊಂಡು ಆವರಿಸಿದ್ದರೂ ಕಾರಣಕಾರ್ಯಭೇದದಿಂದ ಎರಡಾಗಿ ತೋರುತ್ತವೆಯೇ ಹೊರತು ಜೀವೇಶ್ವರತ್ವದಲ್ಲಿ ನಿಜವಾದ ಭೇದ ಎಲ್ಲಿಂದ ಬರಬೇಕು?

ಶಬ್ದಾರ್ಥ: * ಉದಕ=ನೀರು; * ಸ್ವಾದ=ರುಚಿ; * ಭೂಭೇದ=ನೆಲದ ಮಣ್ಣಿನ ನಾನಾ ಬಗೆಯ ಗುಣಗಳಿಂದ; ಪುದಿದು=ತುಂಬಿಕೊಂಡು; ಒದವಿ (ಒದಗಿ)=ಎರಡಾಗಿ; * ಕಾರಣಕಾರ್ಯಭೇದದಲಿ =ಕಾರಣೋಪಾಧಿಯಲ್ಲಿ ಈಶ್ವರ, ಕಾರ್ಯೋಪಾಧಿಯಿಂದ ಜೀವರು ಎಂದು ಎರಡಾಗಿ ವ್ಯತ್ಯಾಸ ಹೊಂದಿ; * ಸದಮಲಾನಂದೈಕರಸ=ಪರಬ್ರಹ್ಮ

ಪಾಠಾಂತರ: ಸ್ವಾದ=ಸ್ವಾದು (ಕು)

---

ಶಬ್ದಸೂತಕದಿಂದ ಮನುಜನು
ಶುದ್ಧಸೂತಕಿಯೆನಿಸಿಕೊಂಬನು;
ಶಬ್ದದಿಂದದ ಕಳೆಯೆ ಶುದ್ಧನೆನಿಪ್ಪ ತೆರನಂತೆ ।

**ಶಬ್ದಮಾತ್ರದಿ ಜೀವಪರಮನು;**
**ಶಬ್ದವಡಗಲು ನಿತ್ಯಶುದ್ಧ ವಿ**
**ಬುದ್ಧಸಚ್ಚಿನ್ಮಾತ್ರನಾಗಿಹ ಮಗನೆ ಕೇಳೆಂದ ॥** ॥೪೫॥

**ತಾತ್ಪರ್ಯ:** ಹುಟ್ಟಿದ್ದನ್ನು, ಸತ್ತಿದ್ದನ್ನು ತಾನು ಕಾಣದಿದ್ದರೂ ಇಂಥವರು ಹುಟ್ಟಿದರು ಅಥವಾ ಸತ್ತರು ಅದರಿಂದ ನಿನಗೆ ಮೈಲಿಗೆ ಬಂದಿರುವುದು ಎಂಬ ಮಾತಿನಿಂದ ಮನುಷ್ಯ ಸೂತಕಿ ಆಗಿರುತ್ತಾನೆ; ನಿನಗೆ ಬಂದಿದ್ದ ಮೈಲಿಗೆ ಇಂದು ಹೋಯಿತು ಎಂದು ಹೇಳುವ ಮಾತಿನಿಂದ ಸೂತಕ ಕಳೆದು ಶುದ್ಧನೆನಿಸಿಕೊಳ್ಳುತ್ತಾನೆ. ಅದೇ ರೀತಿಯಾಗಿ ಜೀವಾತ್ಮ ಪರಮಾತ್ಮ ಎಂಬುದು (ಜೀವೇಶ್ವರತ್ವ) ಶಬ್ದಮಾತ್ರದಿಂದ ಭೇದವೇ ಹೊರತು ಆ ಶಬ್ದವಿಲ್ಲದಿದ್ದಲ್ಲಿ ನಿತ್ಯಶುದ್ಧನೂ ವಿಬುದ್ಧನೂ ಸಚ್ಚಿದಾನಂದನೂ ಆದ ಬ್ರಹ್ಮನೇ ಆಗಿರುತ್ತಾನೆ ಎಂದು ತಿಳಿ.

**ಶಬ್ದಾರ್ಥ: ಶಬ್ದಸೂತಕದಿಂದ**=ಇಂಥವರು ಹುಟ್ಟಿದ್ದರಿಂದ ಅಥವಾ ಸತ್ತಿದ್ದರಿಂದ ನಿನಗೆ ಸೂತಕವು ಬಂದಿರುವುದೆಂಬ ಮಾತಿನ ಮಾತ್ರದಿಂದ (ಹುಟ್ಟಿದ್ದನ್ನೂ ಸತ್ತಿದ್ದನ್ನೂ ತಾನು ಕಾಣದಿದ್ದರೂ); **ಶುದ್ಧ ಸೂತಕಿ**=ನಿಜವಾದ ಮೈಲಿಗೆಯುಳ್ಳವನು; **ಶಬ್ದದಿಂದದಕಳೆಯೆ**=ನಿನಗೆ ಬಂದಿದ್ದ ಮೈಲಿಗೆಯು ಇಂದಿಗೆ ಹೋಯಿತೆಂದು ಹೇಳುವ ಮಾತಿನಿಂದ; **ಅದು ಕಳೆದು ಶಬ್ದಮಾತ್ರದಿಜೀವ ಪರಮನು**=ಜೀವಾತ್ಮ ಪರಮಾತ್ಮ (ಜೀವೇಶ್ವರತ್ವ) ಎಂಬುದು ಶಬ್ದ ಮಾತ್ರದಿಂದ ಭೇದವೇ ಹೊರತು ನಿಜವಾಗಿರುವ ವಸ್ತು ಒಂದೇ.

---

**ಈ ವಿಧದಲಸಿಪದದಖಂಡದ**
**ವ್ಯಾವಹಾರವ ತಿಳುಹಿ, ತನಯಗೆ**
**ಜೀವಭೇದವ ಬಿಡಿಸಿ, ನಿಜಪರಮಾತ್ಮಪದವಾದ ।**
**ಕೇವಲಜ್ಞಾನಸ್ವರೂಪವೆ**
**ಭಾವಿಸಲು ತಾನೆನಿಸುವನುಭವ**
**ಸಾವಧಾನದಿ ನಿಲುವವೋಲ್ನಿರ್ಣಯಿಸಿದನು ಮುನಿಪ ॥** ॥೪೬॥

**ತಾತ್ಪರ್ಯ:** ಈ ರೀತಿಯಲ್ಲಿ ವ್ಯಾಸ ಮುನೀಂದ್ರನು ತನ್ನ ಮಗನಾದ ಶುಕನಿಗೆ ಅಸಿ ಪದದ ಅಖಂಡಸ್ವರೂಪದ ವ್ಯಾವಹಾರಿಕ ಅರ್ಥವನ್ನು ತಿಳಿಸಿ ನಾನು ಜೀವನೆಂಬ ಭೇದಬುದ್ಧಿಯನ್ನು ಹೋಗಲಾಡಿಸಿದನು. ನಿಜಪರಮಾತ್ಮಪದವಾದ ಕೇವಲ ಆನಂದಾನುಭವವೇ ತಾನಾಗಿರುವ ಅಪರೋಕ್ಷಾನುಭವವೇ ವಿಚಾರಪೂರ್ವಕ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆ ನಿಲ್ಲುವಂತೆ ಮಾಡಿದನು.

**ಶಬ್ದಾರ್ಥ: ಅಖಂಡದ**=ಐಕ್ಯದ; **ಜೀವಭೇದವ ಬಿಡಿಸಿ**=ನಾನು, ಜೀವನು ಎಂಬ ಭೇದ ಬುದ್ಧಿಯನ್ನು ಬಿಡಿಸಿ; **ಸಾವಧಾನದಿ**=ವಿಚಾರಪೂರ್ವಕವಾಗಿ ಅಥವಾ ಗಟ್ಟಿಯಾಗಿ; **ನಿರ್ಣಯಿಸಿದನು**=ಸ್ಥಿರಗೊಳಿಸಿದನು, ನೆಲೆನಿಲ್ಲುವಂತೆ ಮಾಡಿದನು; * **ಮುನಿಪ**=ವ್ಯಾಸ ಮುನಿ; * **ತನಯಗೆ**=ಶುಕಮುನಿಗೆ;

---

ಪ್ರಶ್ನೆ (೪೭)

ಅಮಮ! ಸಹಜಾನಂದವೆಂತೈ
ಭ್ರಮಿಸಿತೀ ಮಾಯಾಪ್ರಬಂಧಕೆ?
ಮಮತೆಯಿಂ ಜೀವತ್ವದಾರೋಪಣವದೆಂತಾಯ್ತು? ।
ಸಮನಿಸಿದ ಸಂಸಾರದಳಿವಿದು
ವಿಮಲಮತಿ ಯಾರಿಂದಲಾದುದು?
ಸಮತೆಯಹ ಚಿನ್ಮಾತ್ರ ಮರಳಿದು ಸಿದ್ಧಿಸುವದೆಂತು? ॥ ॥೪೭॥

ತಾತ್ಪರ್ಯ: ಅಮಮ! ಇದೇನಚ್ಚರಿ! ಈ ಮಾಯೆಯೆಂಬ ಕಟ್ಟುವಿಕೆಯಲ್ಲಿ ಸಹಜಾನಂದ ವಸ್ತುವು ಭ್ರಾಂತಿಗೆ ಒಳಗಾದುದು ಹೇಗೆ? ನನ್ನದು ಮತ್ತು ನಾನು ಎಂಬ ಬುದ್ಧಿಗಳಿಂದ ಜೀವತ್ವವು ಹೇಗೆ ಆರೋಪಿತವಾಯಿತು? ಪ್ರಾರಬ್ಧಕರ್ಮದಿಂದ ಉಂಟಾದ ಈ ಸಂಸಾರವೆಂಬ ದುಃಖಸಾಗರದ ನಾಶವು ಯಾವ ಶುದ್ಧಜ್ಞಾನದಿಂದ ಆಯಿತು! ಸಮತ್ವಗುಣದಿಂದ ಕೂಡಿರುವ ಚಿತ್‌ಸ್ವರೂಪವಾಗಿರುವ ಆನಂದವು ಪುನಃ ಸಿದ್ಧಿಸುವ ಬಗೆ ಹೇಗೆ? ಎಂಬ ಪ್ರಶ್ನೆಗಳನ್ನು ಶುಕನು ವ್ಯಾಸರನ್ನು ಕೇಳಿದನು.

ಶಬ್ದಾರ್ಥ: ಮಾಯಾಪ್ರಬಂಧಕೆ=ಮಾಯೆಯೆಂಬ ಕಟ್ಟುವಿಕೆಗೆ (ಜಾಲಕ್ಕೆ); ಮಮತೆಯಿಂ=ನನ್ನದು ಮತ್ತು ನಾನು ಎಂಬ ಬುದ್ಧಿಗಳಿಂದ; ಸಂಸಾರದ+ಅಳಿವು (ನಾಶವು) ಇದು ಯಾರಿಂದಲಾದುದು? =ಯಾರು ಸಂಸಾರವೆಂಬ ಕಟ್ಟನ್ನು ಕಳಚಿಕೊಂಡಿದ್ದಾರೆ? * ಸಮತೆ=ಸಮತ್ವಗುಣ; * ಚಿನ್ಮಾತ್ರ= ಸಚ್ಚಿದಾನಂದರೂಪ; * ಮರಳಿದು=ಮತ್ತೆ, ಪುನಃ.

---

## ಸೃಷ್ಟಿಯ ಆರೋಪತ್ವ (೪೮–೫೯)

ಹೇಳು, ಮುನಿಪತಿ, ಮನದ ಸಂಶಯ
ಜಾಲ ಕಳೆವಂತೆನಲು, ಶುಕಮುನಿ
ಕೇಳು ಕೆಲರೀಶ್ವರನ ಲೀಲೆಯಿದೆಂದು ಹೇಳುವರು; ।
ಮೂಲಭೂತವೆನಿಪ್ಪವಿದ್ಯೆಯ
ಕಾಲಕಣ್ಣಿಯದೆಂದು ಕೆಲಬರು
ಹೇಳುವರು; ಕೆಲರಿದನು ದೃಷ್ಟಿಸೆ ಸೃಷ್ಟಿಯೆಂದೆನುತ ॥ ॥೪೮॥

ತಾತ್ಪರ್ಯ: ಈ ನನ್ನಮನಸ್ಸಿನ ಸಂಶಯಜಾಲ ಪರಿಹಾರವಾಗುವಂತೆ ನನ್ನ ಪ್ರಶ್ನೆಗಳಿಗೆ ಉತ್ತರಿಸು ತಂದೆಯೇ ಎಂದು ಶುಕನು ಕೇಳಿದಾಗ ವ್ಯಾಸರು ಹೇಳಿದರು. ಕೆಲವರು ಪರಮಾತ್ಮನ ವಿನೋದಲೀಲೆ ಎಂದು ಹೇಳುವರು, ಕೆಲವರು ಮೂಲ ಪ್ರಕೃತಿಯೆನಿಸಿ ಕೊಂಡಿರುವ ಅವಿದ್ಯೆಯ ಮಾಯಾಪಾಶ ಎಂದು ಹೇಳುವರು ಮತ್ತೆ ಕೆಲವರು ನಾವು ನೋಡಿದರೆಮಾತ್ರ ಆಗಲೇ ಜಗತ್ತಿನ ಸೃಷ್ಟಿಯಾಗುವುದೆಂದೂ, ನೋಡದೆಇದ್ದರೆ ಜಗತ್ತೇ ಇಲ್ಲವೆನ್ನುವ ದೃಷ್ಟಿಯ ಸೃಷ್ಟಿವಾದದ ಫಲ ಎನ್ನುವರು.

**ಶಬ್ದಾರ್ಥ:** ಜಾಲ=ಗುಂಪು; ಕಾಲಕಣ್ಣಿ=ಮಾಯಾಪಾಶ, ಕಣ್ಣಿ=ಹಗ್ಗ, ಪಾಶ;

**ಪದವಿಭಾಗ:** ಮೂಲಭೂತವೆನಿಪ್ಪವಿದ್ಯೆಯ=ಮೂಲಭೂತವೆನಿಪ್ಪ+ಅವಿದ್ಯೆಯ.

**ಟಿಪ್ಪಣಿ–೧:** ಈಶ್ವರನ ಲೀಲೆ ಮೂಲಭೂತವೆನಿಪ್ಪ ಅವಿದ್ಯೆಯ ಕಾಲಕಣ್ಣಿ. ಹೀಗೆಂದು ಮೊದಲಾಗಿ ಅನೇಕ ಬಗೆಯಾಗಿ ಅನೇಕರು ಹೇಳುತ್ತಾರೆ. ಈ ಬೇರೆಬೇರೆ ಬಗೆಗಳನ್ನು 'ವಿಭೂತಿಂ ಪ್ರಸವಂತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ' ಎಂಬ ಮೊದಲಾದ ಮಾಂಡೂಕ್ಯಕಾರಿಕಾ ವಾಕ್ಯಗಳಿಂದ ತಿಳಿಯಬಹುದು.

**ಟಿಪ್ಪಣಿ–೨:** 'ಕಾಲಃ ಸ್ವಭಾವೋನಿಯತಿರ್ಯದೃಚ್ಛಾ ಭೂತಾನಿಯೋನಿಃ ಪುರುಷ ಇತಿ ಚಿಂತ್ಯಾ' ಎಂಬ ಶ್ವೇತಾಶ್ವತರ ಶ್ರುತಿಯೂ ಈ ಅಭಿಪ್ರಾಯವನ್ನು ಹೇಳುವುದು.

**ಟಿಪ್ಪಣಿ–೩:** ದೃಷ್ಟಿಸೆ ಸೃಷ್ಟಿ=ನಾವು ನೋಡಿದರೆ ಮಾತ್ರ ಆಗಲೇ ಜಗತ್ತಿನ ಸೃಷ್ಟಿಯಾಗುವುದೆಂದೂ ನೋಡದೆ ಇದ್ದರೆ ಜಗತ್ತೇ ಇಲ್ಲವೆಂದೂ ಕೆಲವರು ಹೇಳುವರು. ಇದಕ್ಕೆ ದೃಷ್ಟಿ ಸೃಷ್ಟಿವಾದವೆಂದು ಹೆಸರು. ಜಗತ್ತು ಇರುವುದು ಇಲ್ಲದಿರುವುದು ದೃಷ್ಟಿಯ ಫಲ.

---

**ಮತವಿಭೇದಗಳಾದ ಬಹುವಿಧ**
**ಗತಿಗಳನು ಪೇಳುವರು ಕೆಲಕೆಲ**
**ರತಿಶಯೋಕ್ತಿಗಳಿಂದ ತಿಳಿ ದೃಷ್ಟಾಂತಪೂರ್ವಕದಿ ।**
**ಶ್ರುತಿವಿದಿತ ಸತ್ಯಾತ್ಮಗೀ ಸಂ**
**ಸೃತಿಯ ಸಂಕಲೆಯಿಲ್ಲವೆಲ್ಲವು**
**ಮತಿಗೆ ಹೊರತೆಲೆ ಮಗನೆ ಮಿಥ್ಯಾರೋಪ ಕೇಳೆಂದ ॥ ॥೪೯॥**

**ತಾತ್ಪರ್ಯ:** ಹಲವಾರುಮಂದಿ ತಮ್ಮತಮ್ಮ ಮತದ ಪ್ರಕ್ರಿಯೆಯ ವಿಶೇಷಗಳನ್ನು ಅತಿಶಯೋಕ್ತಿಗಳಿಂದ ದೃಷ್ಟಾಂತಪೂರ್ವಕವಾಗಿ ಬಣ್ಣಿಸುವರು. ಈ ಸಂಸಾರ ಸಂಬಂಧವಾದ ಬಂಧವೆಲ್ಲ ಬುದ್ಧಿಗೇ ಹೊರತು ಆತ್ಮನಿಗಿಲ್ಲ. ಬುದ್ಧಿಗಿರುವ ಬಂಧಗಳನ್ನು ತಿಳಿಯದೆ ಆತ್ಮನಮೇಲೆ ಇಲ್ಲದ್ದನ್ನು ಆರೋಪಿಸುವದು. ಏಕೆಂದರೆ ಆತ್ಮನು 'ಸತ್ಯಂಜ್ಞಾನಮನಂತಂ ಬ್ರಹ್ಮ'ವೆಂದು ವೇದಗಳಿಂದ ಪ್ರತಿವಾದಿತನಾದ ಸತ್ಯಾತ್ಮನು.

**ಶಬ್ದಾರ್ಥ:** ಮತಭೇದಗಳಾದ ಬಹುವಿಧಗತಿಗಳನು=ತಮ್ಮತಮ್ಮ ಮತದ ಪ್ರಕ್ರಿಯೆಯ ವಿಶೇಷಗಳನ್ನು; ಸಂಸೃತಿಯ ಸಂಕಲೆಯು ಮತಿಗೆ ಹೊರತು=ಸಂಸಾರ ಸಂಬಂಧವಾದ ಬಂಧವೆಲ್ಲ ಬುದ್ಧಿಗೇ ಹೊರತು ಆತ್ಮನಿಗಿಲ್ಲ ಎಂದರ್ಥ.

* **ಶ್ರುತಿವಿದಿತ ಸತ್ಯಾತ್ಮಗೆ**=ಸತ್ಯಂ ಜ್ಞಾನಂ ಅನಂತಂ ಬ್ರಹ್ಮವೆಂದು ವೇದಗಳು ಪ್ರತಿಪಾದಿಸುವ ಸತ್ಯಸ್ವರೂಪನಾದ ಆತ್ಮನಿಗೆ (ಸತ್ಯಾತ್ಮನಿಗೆ); **ಮಿಥ್ಯಾರೋಪ**=ಬುದ್ಧಿಗಿರುವ ಬಂಧಗಳನ್ನು ತಿಳಿಯದೆ ಆತ್ಮನ ಮೇಲೆ ಇಲ್ಲದ್ದನ್ನು ಆರೋಪಿಸುವರು. * **ದೃಷ್ಟಾಂತ ಪೂರ್ವಕದಿ**=ಉದಾಹರಣೆಗಳ ಮೂಲಕವಾಗಿ * **ಅತಿಶಯೋಕ್ತಿಗಳಿಂದ**=ಸ್ವಲ್ಪವನ್ನು ಮಹತ್ತರವಾಗಿ ಮಾಡಿ ಹೇಳುವುದು ಒಂದು ಕಾವ್ಯಾಲಂಕಾರ. (ಕನ್ನಡ ರತ್ನಕೋಶ ಪುಟ–೯);

**ಪಾಠಾಂತರ:** ಮತಿಗೆ ಹೊರತೆಲೆ=ಮತಿಗೆ ಅಲ್ಲದೆ (ಕೊ)

---

## ಬ್ರಹ್ಮನೇ ತಾನೆಂಬ ವಿಷಯ (೫೦-೫೯)

ನರನು ತಾನೆಂದೀಶ್ವರತ್ವವ
ಮರೆದು ರಘುಪತಿ ಬ್ರಹ್ಮನಾರದ
ರರುಹಿಸಲ್ಕರಿದಂತೆ ತನ್ನನೆ ವಿಷ್ಣುವೆಂದಾಗ ।
ಗುರುವಿನುಪದೇಶದಲಿ ಮಾಯಾ
ವರಣವಳಿದೇಕತ್ವದಿಂದೀ
ಶ್ವರನೆನಿಪ ಪರವಸ್ತುವೇ ನೀನೆಂದು ತಿಳಿಯೆಂದ ॥ ॥೫೦॥

**ತಾತ್ಪರ್ಯ:** ವಿಷ್ಣುವು ರಾಮಾವತಾರವನ್ನು ತಾಳಿದ ಮೇಲೆ ತಾನು ವಿಷ್ಣುವೆಂಬುದನ್ನೇ ಮರೆತು ಕೇವಲ ರಾಮನೆಂದು ಭಾವಿಸಿದ್ದಾಗ, ಸೀತಾ ಪರೀಕ್ಷಣ ಕಾಲದಲ್ಲಿ ಬ್ರಹ್ಮನಾರದರು ನೀನು ವಿಷ್ಣುವಿನ ಅವತಾರವೆಂದು ಎಚ್ಚರಿಸಿದರು. ಆಗ ಅವನಿಗೆ ಸ್ವಸ್ವರೂಪದ ಅರಿವಾಯಿತು. ಹಾಗೆಯೇ ಜೀವಿಯು ಸದ್ಗುರುವಿನ ಉಪದೇಶದಿಂದ ಮಿಥ್ಯಾರೋಪವಾದ ಅಜ್ಞಾನವನ್ನು ಕಳೆದುಕೊಂಡು ಬ್ರಹ್ಮಾಸ್ಮೀ ಭಾವದಿಂದ ತಾನು ಈಶ್ವರನಾದ ಪರವಸ್ತುವೆಂದು ತಿಳಿಯಬೇಕು.

**ಶಬ್ದಾರ್ಥ:** ಬ್ರಹ್ಮನಾರದರು=ಬ್ರಹ್ಮನೂ, ನಾರದರೂ

**ಟಿಪ್ಪಣಿ-೧:** ತನ್ನನೇ ವಿಷ್ಣುವೆಂದಾಗ=ಈ ಮಾತಿಗೆ ಪೂರ್ವ ಕಥೆ ಮುಂದೆ ಕೊಟ್ಟಿದೆ. * ಮಾಯಾವರಣ= ಮಿಥ್ಯಾಸಂಬಂಧವಾದ ಅರಿವು (ಅಜ್ಞಾನ); * ಏಕತ್ವದಿಂ=ಅಹಂಬ್ರಹ್ಮಾಸ್ಮಿ ಭಾವದಿಂದ; ಪರವಸ್ತು= ಪರಬ್ರಹ್ಮಸ್ವರೂಪ

### ಪೂರ್ವಕಥೆ: ರಾಮನು ತನ್ನ ನಿಜಸ್ಥಿತಿಯನ್ನರಿತದ್ದು

ಶ್ರೀಮಹಾವಿಷ್ಣುವೇ ರಾಮನೆಂಬ ಹೆಸರಿನಿಂದ ಅಯೋಧ್ಯಾಪತಿಯಾದ ದಶರಥನಿಗೆ ಮಗನಾದನು. ರಾಮಾವತಾರವಾದಂದಿನಿಂದ ಅವನು ತನ್ನ ಮೂಲಸ್ವರೂಪವನ್ನು ಮರೆತು ಇತರರಂತೆ ತಾನೊಬ್ಬನೆಂದು ತಿಳಿದುಕೊಂಡಿರುವಂತೆಯೇ ವರ್ತಿಸುತ್ತಿದ್ದನು. ರಾವಣನ ವಧೆಯಾದ ಮೇಲೆ ಸೀತಾದೇವಿಯನ್ನು ಪರಿಗ್ರಹಿಸುವ ಸಮಯವೊದಗಿದಾಗ ರಾಮನು ಸಾಮಾನ್ಯ ಮನುಷ್ಯರಂತೆ ಆಕೆಯ ಪಾತಿವ್ರತ್ಯದ ವಿಷಯದಲ್ಲಿ ಸಂದೇಹವನ್ನು ಹೊಂದಿ ಆಕೆ ಅಗ್ನಿಯಲ್ಲಿ ಹಾದು ಬಂದು ತನ್ನ ಪರಿಶುದ್ಧತೆಯನ್ನು ತೋರಿಸಬೇಕೆಂದು ಕಟ್ಟು ಮಾಡಿದನು. ಆಕೆಯು ಅದರಂತೆ ಮಾಡಿದಳು. ಆ ಸಮಯದಲ್ಲಿ ಬ್ರಹ್ಮಾದಿ ದೇವತೆಗಳೆಲ್ಲರೂ ಬಂದು ರಾಮನನ್ನು ಸಂಬೋಧಿಸಿ ಅವನಿಗೆ ಅವನ ಮೂಲ ಸ್ವರೂಪವಾದ ವಿಷ್ಣುತ್ವವನ್ನು ನೆನಪುಗೊಟ್ಟರು. ಆಗ ಎಚ್ಚರಗೊಂಡಂಥವನಾದ ರಾಮನು ಮನಸ್ಸಿನ ಸಮಾಧಾನವನ್ನು ಹೊಂದಿ ಸೀತೆಯನ್ನು ಪರಿಗ್ರಹಿಸಿದನು.

---

ತನ್ನ ಜನನದ ಪರಿಯನರಿಯದೆ
ಕರ್ಣ ರಾಧೆಯಮಗನೆನುತ್ತಿರೆ,
ನಿನ್ನ ತಾಯಿಯು ಕುಂತಿಯನೆ ಹರಿಯಾಗ ತಿಳಿದಂತೆ ।

**ನಿನ್ನನರಿಯದೆ ಜೀವನೆಂದೇ**
**ಬನ್ನಬಡಲೇಂ? ಗುರುಕರುಣದಿಂ**
**ನಿನ್ನ ನಿಜವನು ತಿಳಿದು ನೀ ಚಿತ್ತೆಂದು ನಿಶ್ಚಯಿಸು ॥ ॥೫೧॥**

**ತಾತ್ಪರ್ಯ:** ಕರ್ಣನು ತಾನು ನಿಜವಾಗಿ ಯಾರಿಗೆ ಮಗನಾಗಿ ಹುಟ್ಟಿದೆ ಎಂದು ತಿಳಿಯದೆ ತನ್ನ ತಾಯಿ ಸೂತಪತ್ನಿಯಾದ ರಾಧೆ ಎಂದು ತಿಳಿದುಕೊಂಡಿದ್ದನು. ಬಳಿಕ ಶ್ರೀಕೃಷ್ಣನು ಕರ್ಣನಿಗೆ "ನೀನು ರಾಧಾಪುತ್ರ ಅಲ್ಲ, ಕುಂತಿ ನಿನ್ನ ತಾಯಿ ಎಂದು ಹೇಳಿದಾಗ ನಿಜಸ್ಥಿತಿಯ ಅರಿವು ಕರ್ಣನಿಗಾಯಿತು. ಅಂತೆಯೇ ನೀನು ನಿಜವಾಗಿ ಯಾರು ಎಂದು ತಿಳಿಯದೆ ನಾನು ಜೀವಾತ್ಮನೆಂದು ತಪ್ಪಾಗಿ ತಿಳಿದು ಕೋಟಲೆಗೊಳ್ಳುತ್ತಿರುವೆ ಏಕೆ? ಗುರುಕಟಾಕ್ಷದಿಂದ ನಿನ್ನ ನಿಜಸ್ವರೂಪವನ್ನು ತಿಳಿದು ನೀನು ಚಿತ್ ಸ್ವರೂಪನೆಂದು ದೃಢಪಡಿಸಿಕೊ.

**ಶಬ್ದಾರ್ಥ:** * **ತನ್ನ ಜನನದಪರಿಯನು ಅರಿಯದೆ**=ತಾನು ಯಾರಿಗೆ ಮಗನಾಗಿ ಹುಟ್ಟಿದೆ ಎಂಬುದನ್ನು ತಿಳಿಯದೆ; * **ಬನ್ನಬಡಲೇಂ?**=ಏಕೆ ಕೋಟಲೆಗೊಳ್ಳುತ್ತಿರುವೆ?; * **ಗುರುಕರುಣದಿಂ** =ಗುರುಬೋಧೆಯಿಂದ; * **ಚಿತ್ತೆಂದು**=(ಚಿತ್+ಎಂದು) ಚಿತ್ಸರೂಪನೆಂದು; * **ನಿರ್ಧರಿಸು** =ದೃಢಪಡಿಸಿಕೊ

**ಪಾಠಾಂತರ-೧:** * **ನಿನ್ನ ತಾಯಿಯು ಕುಂತಿಯೆನೆ ಹರಿಯಾಗ ತಿಳಿದಂತೆ**=ನಿನ್ನ ತಾಯಿ ಕುಂತಿಯೆಂದು ಶ್ರೀಹರಿ ತಿಳುಹೆ ತಿಳಿದಂತೆ (ಕು) (ಅರಾಸೇ-ಇ)

**ಪಾಠಾಂತರ-೨:** * **ನಿನ್ನನರಿಯದೆ**=ತನ್ನನರಿಯದೆ (ಕು)

**ಪಾಠಾಂತರ-೩:** **ಬನ್ನಬಡಲೇಂ**=ಬನ್ನಬಡುತಿರೆ (ಕು); * **ತಿಳಿದು**=ತಿಳುಹೆ (ಕು)

**ಪೂರ್ವ ಕಥೆ:** **ತನ್ನ ಜನನದ ಪರಿಯನರಿಯದೆ**- ಕರ್ಣನು ತನ್ನ ಜನ್ಮವನ್ನರಿತ ಕಥೆಯ ವಿಷಯಕ್ಕೆ ಪೂರ್ವ ಕಥೆ ಈ ರೀತಿ ಇದೆ.

## ಪೂರ್ವಕಥೆ: ಕರ್ಣನು ತನ್ನ ನಿಜಸ್ಥಿತಿಯನ್ನು ತಿಳಿದದ್ದು

ದೂರ್ವಾಸರು ಮಕ್ಕಳಾಗುವ ಮಂತ್ರವನ್ನು ಹೇಳಿಹೋದಮೇಲೆ ಕುಂತಿಯು ತಾನಿನ್ನೂ ಎಳೆಯವಳಾಗಿದ್ದರೂ ದೂರ್ವಾಸರ ಮಂತ್ರವು ಫಲಕಾರಿಯಹುದೋ ಅಲ್ಲವೋ ನೋಡಬೇಕೆಂದು ಚಪಲದಿಂದ ಒಂದುದಿವಸ ನದಿಗೆ ಬಂದಿದ್ದಾಗ ಸೂರ್ಯಮಂತ್ರವನ್ನು ಪುರಶ್ಚರಣೆ ಮಾಡಿದಳು. ಒಡನೆ ಸೂರ್ಯನು ಆಕೆಯ ಮೇಲೆ ಅನುಗ್ರಹಿಸಲು ಆಕೆಯ ಕರ್ಣದಿಂದ ಕರ್ಣನುದಿಸಿದನು. ಅಪ್ರೌಢಳಾದ ತಾನು ಶಿಶುವನ್ನೆತ್ತಿಕೊಂಡು ಹೋದರೆ ಊರೊಳಗೆಲ್ಲರೂ ನಗುವರೆಂದು ಆಕೆ ಆ ಮಗುವನ್ನು ಒಂದೆಲೆಯ ಮೇಲೆ ಮಲಗಿಸಿ ನದಿಯ ದಡದಲ್ಲಿಟ್ಟು ತಾನು ಮನೆಗೆ ಹೋದಳು. ಇತ್ತ ರಾಧೆಯೆಂಬ ಬೆಸ್ತರವಳು ಆ ಕೂಸನ್ನು ಕಂಡು ಮನೆಗೆ ತೆಗೆದುಕೊಂಡು ಹೋಗಿ ಅಕ್ಕರೆಯಿಂದ ಸಾಕುತ್ತ ಬಂದಳು. ಕರ್ಣನು ದೊಡ್ಡವನಾಗುತ್ತ ರಾಧೆಯನ್ನೇ ತನ್ನ ತಾಯಿಯೆಂದು ತಿಳಿದುಕೊಂಡಿದ್ದನು. ದೈವಯೋಗದಿಂದ ಕರ್ಣನು ಕೌರವರ ಗುಂಪಿನಲ್ಲೊಬ್ಬ ಮುಖಂಡನಾಗಿ ಬೆಳೆದನು. ಕೆಲವು ಕಾಲದ ಮೇಲೆ ಕೌರವರಿಗೂ ಪಾಂಡವರಿಗೂ ಘೋರವಾದ ಯುದ್ಧ ಪ್ರಸಂಗವೊದಗಿತು. ಆ ಸಮಯದಲ್ಲಿ ಕೃಷ್ಣನು ಸಂಧಿಗಾಗಿ ಹಸ್ತಿನಾಪುರಕ್ಕೆ ಬಂದಿದ್ದನು. ಅವನ ಸಂಧಿಯ ಮಾತೇನೂ ನಡೆಯಲಿಲ್ಲ. ಆದರೆ ಆ ಸಮಯದಲ್ಲಿ ಅವನೊಂದು ಮಹತ್ಕಾರ್ಯವನ್ನು

ಸಾಧಿಸಿದನು. ಕೌರವರ ಗುಂಪಿನಲ್ಲಿ ಕರ್ಣನು ಬಹು ಪ್ರಮುಖನಾಗಿದ್ದನು. ಮೆಲ್ಲಗೆ ಅವನನ್ನಗಲಿಸ ಬೇಕೆಂದು ಕೃಷ್ಣನು ಅವನಿಗೆ ಅವನ ಜನ್ಮ ವೃತ್ತಾಂತವನ್ನು ಹೇಳಿದ್ದಲ್ಲದೆ ಕೌರವರನ್ನು ಬಿಟ್ಟು ಬಂದರೆ ಪಾಂಡವರಲ್ಲಿ ಹಿರಿಯನೆನಿಸಿ ಸಿಂಹಾಸನಕ್ಕೆ ಅರ್ಹನಾಗುವೆಯೆಂದು ಮುಂತಾಗಿ ಹೇಳಿದನು. ಇಷ್ಟು ದಿನ ಕೌರವನ ಉಪ್ಪುಂಡು ಈಗ ಅವನನ್ನು ಕೈಬಿಡಲಾರೆನೆಂದು ಕರ್ಣನು ಹೇಳಿದರೂ ಅವನ ಜನ್ಮ ವೃತ್ತಾಂತವನ್ನು ಅವನ ಕಿವಿಯ ಮೇಲೆ ಹಾಕಿದ್ದರಿಂದ ಪಾಂಡವರ ಮೇಲೆ ಬಿಡುವ ಅವನ ಬಾಣಗಳು ಎಷ್ಟೋ ನಿರ್ವೀರ್ಯವಾಗುವದಕ್ಕೆ ಅವಕಾಶವಾಯಿತು. ಎಷ್ಟೋ ಸಂದರ್ಭದಲ್ಲಿ ನಮ್ಮ ನಿಜಸ್ವರೂಪವು ನಮಗೆ ಇತರರು ತಿಳಿಸಿದಾಗ ಮಾತ್ರ ತಿಳಿಯುವದು.

---

ಹತ್ತರೊಳು ತಾ ತನ್ನನುಳಿದೊಂ
ಬತ್ತಗಣಿಸಲು, ಕಡೆಯಣವನಿಂ
ಹತ್ತು ಮಂದಿಯ ತೋರೆ, ಭ್ರಮೆಯಳಿದರಿದ ತೆರನಂತೆ ।
ಸತ್ಯವಹ ಗುರುವಾಕ್ಯದಿಂದಲಿ
ಚಿತ್ತದ ಭ್ರಮೆಯಳಿಯೆ ನೀನೇ
ನಿತ್ಯಮುಕ್ತನೆನುತ್ತ ನಿನ್ನನು ತಿಳಿದು ನಿಶ್ಚಯಿಸು ॥ ॥೫೨॥

**ತಾತ್ಪರ್ಯ:** ಹತ್ತು ಜನರಲ್ಲಿ ಒಬ್ಬನು ತನ್ನನ್ನು ಬಿಟ್ಟುಕೊಂಡು ಉಳಿದವರನ್ನು ಎಣಿಸಲು ಒಂಬತ್ತೇ ಆಯಿತು. ಕೊನೆಯವನಿಂದ ಎಣಿಸಿಕೊಂಡು ಬಂದಾಗ ಎಣಿಸಿದವನು ತಾನೇ ಹತ್ತನೆಯವನು ಆಗುವನು. ಆಗ ತನ್ನನ್ನು ತಾನು ಎಣಿಸದೆ ಬಿಟ್ಟನೆಂದು ಜ್ಞಾನವುಂಟಾಗಿ ಒಂಬತ್ತೆಂಬ ಭ್ರಾಂತಿ ಹೋಗುವುದು. ಹಾಗೆಯೇ ಸತ್ಯ ದರ್ಶನವೀಯುವ ಸದ್ಗುರುವಿನ ಉಪದೇಶದಿಂದ ಚಿತ್ತದ ಭ್ರಮೆಯನ್ನು ಕಳೆದುಕೊಂಡು ನೀನಾಗಿಯೇ ಜೀವನ್ಮುಕ್ತನಾಗುವೆಯೆಂದು ತಿಳಿದು ನಿಶ್ಚಯಿಸಿಕೋ.

**ಶಬ್ದಾರ್ಥ:** ಹತ್ತರೊಳು ತಾ ತನ್ನನುಳಿದೊಂಬತ್ತುಗಣಿಸಲು=ಹತ್ತು ಜನರಲ್ಲಿ ಒಬ್ಬನು ತನ್ನನ್ನು ಬಿಟ್ಟುಕೊಂಡು ಉಳಿದವರನ್ನು ಎಣಿಸಲು ಒಂಬತ್ತೇ ಆಯಿತು. ಕಡೆಯಣವನಿಂಹತ್ತು ಮಂದಿಯ ತೋರೆ=ಕೊನೆಯಿಂದ ಎಣಿಸಿಕೊಂಡು ಬಂದಾಗ ಎಣಿಸಿದವನು ತಾನೇ ಹತ್ತನೆಯವನಾಗುವನು.

**ಟಿಪ್ಪಣಿ:** ಈ ದಶಮನ ಕಥೆಯು ಬಹು ಅನಾದಿಯಾದದ್ದು. ಶ್ರೀಶಂಕರಾಚಾರ್ಯರ ಭಾಷ್ಯದಲ್ಲಿಯೂ ಇದೆ.

---

ಗರಹಿಡಿದ ಮಾನವನು ತನ್ನನು
ಮರೆದಿರಲು, ಮಿಗೆ ಮಂತ್ರವಾದಿಯ
ಕರೆದು ಮಂತ್ರಿಸೆ, ತನ್ನ ತಾನೆಂದರಿವ ಪರಿಯಂತೆ ।
ಪರಮಗುರುವಿನ ಕರುಣದಲಿ ಹರ
ವರಿಯ ಮಾಯಾಭ್ರಾಂತಿಯಳಿಯಲು
ನಿರುಪಮ ನಿರಾಲಂಬ ನಿಜ ನೀನೆಂದು ನಿಶ್ಚಯಿಸು ॥ ॥೫೩॥

**ತಾತ್ಪರ್ಯ:** ಪಿಶಾಚಿಹಿಡಿದ ಮನುಷ್ಯನು ಎಚ್ಚರವಿಲ್ಲದೆ ತಾನಾರು ಎಂಬುದನ್ನು ಮರೆತಿರುವಾಗ ಮಂತ್ರವಾದಿಯನ್ನು ಕರೆಯಿಸಿ ಮಂತ್ರಹಾಕಿಸಿದಾಗ ತನ್ನನ್ನು ತಾನು ಯಾರು ಎಂದು ಆ ವ್ಯಕ್ತಿ ತಿಳಿಯುವ ಹಾಗೆ, ಆವರಿಸಿಕೊಂಡಿರುವ ಚಿತ್ತದ ಭ್ರಮೆಯನ್ನು ಶ್ರೇಷ್ಠ ಗುರುವಿನ ಅನುಗ್ರಹದಿಂದ ಹೋಗಲಾಡಿಸಿಕೊಂಡಾಗ ನೀನೇ ಉಪಮಾತೀತನಾದ, ಸರ್ವಸ್ವತಂತ್ರನಾದ ಸತ್ಯಸ್ವರೂಪನಾದ ಪರಬ್ರಹ್ಮನೆಂದು ತಿಳಿಯುತ್ತೀಯೆ, ಇದನ್ನು ದೃಢವಾಗಿ ನಂಬು.

**ಶಬ್ದಾರ್ಥ:** **ಗರಹಿಡಿದ**=ಪಿಶಾಚವು ಹಿಡಿದ (ದೆವ್ವ ಹಿಡಿದ), ಗ್ರಹಚೇಷ್ಟೆಗೆ ಒಳಗಾದ; * **ಗರ**=ಗ್ರಹ; ಹರವರಿಯ=ಪ್ರಕಟವಾದ, ಆವರಿಸಿದ; * **ಪರಮಗುರು**=ಶ್ರೇಷ್ಠಗುರು; * **ಮಾಯಾ** =**ಭ್ರಾಂತಿಯಳಿಯಲು**=ಚಿತ್ತದ ಭ್ರಮೆ ಹೋಗಲಾಡಿಸಲು; * **ನಿರುಪಮ**=ಉಪಮಾತೀತನಾದ; * **ನಿರಾಲಂಬ**=ಸರ್ವತಂತ್ರ ಸ್ವತಂತ್ರ; * **ನಿಜ**=ಸತ್ಯಸ್ವರೂಪನಾದ ಪರಬ್ರಹ್ಮನು

---

**ಬಲುಭುಜಗ ಕನಸಿನಲಿ ಕಚ್ಚಲು,**
**ಕಳವಳಿಸಿ ಗಡಗಡನೆ ನಡುಗಲು,**
**ಕೆಲದಲಿದ್ದವರಂಜಬೇಡೆಂದಂಜಿಕೆಯ ಬಿಡಿಸೆ, ।**
**ತಿಳಿದು ಸ್ವಸ್ಥದಲಿದ್ದವೋಲ್ಗುರು**
**ತಿಳುಹೆ ಮಾಯಾಭ್ರಮೆಯಡಗಿ ನಿ**
**ಶ್ಚಲತೆಯಾಗಿಹ ನಿತ್ಯಸುಖಿ ನೀನೆಂದು ನಿಶ್ಚಯಿಸು ॥** ॥೫೪॥

**ತಾತ್ಪರ್ಯ:** ಒಬ್ಬನು ಮಲಗಿರುವಾಗ ಕನಸಿನಲ್ಲಿ ದೊಡ್ಡಹಾವೊಂದು ಬಂದು ಕಚ್ಚಿದಂತಾಗಲು ಹೆದರಿ ಗಡಗಡನೆ ನಡುಗುತ್ತಿದ್ದಾಗ ಅವನ ಬಳಿಯಲ್ಲಿ ಇದ್ದವರು ಹೆದರಬೇಡ ನಿಜವಾಗಿ ಹಾವು ಕಚ್ಚಿಲ್ಲ ಇದು ನಿನಗೆ ಬಿದ್ದ ಕನಸು ಎಂದು ಧೈರ್ಯ ಹೇಳಿ ಭಯವನ್ನು ದೂರಮಾಡುವ ಹಾಗೆ, ಗುರುವಿನ ಉಪದೇಶದಿಂದ ನಿಜಸ್ಥಿತಿಯನ್ನು ತಿಳಿದು ಮಾಯಾ ಭ್ರಾಂತಿ ನಾಶವಾಗಿ ಸ್ವಸ್ಥಚಿತ್ತದ, ನಿಶ್ಚಲಜ್ಞಾನಿಯಾಗಿ ನೀನೇ ನಿತ್ಯಾನಂದ ಸ್ವರೂಪನೆಂದು ನಿಶ್ಚಯಿಸಿಕೋ.

**ಶಬ್ದಾರ್ಥ:** **ಸ್ವಸ್ಥದಲ್ಲಿದ್ದವೋಲ್**=ತನ್ನ ಸ್ವಾಭಾವಿಕಸ್ಥಿತಿಯಲ್ಲಿದ್ದ ಹಾಗೆ; * **ಮಾಯಾ ಭ್ರಮೆ ಅಡಗಿ**=ಚಿತ್ತ ಭ್ರಾಂತಿ ಹೋಗಿ; * **ನಿತ್ಯ ಸುಖಿ**=ನಿತ್ಯಾನಂದ ಸ್ವರೂಪಿ; * **ಅಂಜಬೇಡ**=ಹೆದರಬೇಡ; * **ಅಂಜಿಕೆ**=ಹೆದರಿಕೆ; * **ಬಲುಭುಜಗ**=ದೊಡ್ಡ ಹಾವು.

---

**ಹೊಳೆಯುತಿಹ ಮಣಿಮಯದ ಮಂಟಪ**
**ದೊಳಗೆ ಪ್ರತಿಬಿಂಬಿಸುವ ಶುನಕಾ**
**ವಳಿಯ ಕಂಡದರೊಡನೆ ಕಲಹಿಪ ಶುನಕನಂದದಲಿ ।**

**ಬಲಿದವಿದ್ಯೋಪಾಧಿಯಲಿ ತಾ**
**ಹೊಳೆದು ಬಹುರೂಪಾಗಿ ತೋರ್ಪುದ**
**ತಿಳಿದು ಗುರುಕೃಪೆಯಿಂದಲದ್ವಯನೆಂದು ನಿಶ್ಚಯಿಸು ॥ ॥೫೫॥**

**ತಾತ್ಪರ್ಯ:** ಥಳಥಳನೆ ಪ್ರಕಾಶಿಸುತ್ತಿರುವ ರತ್ನ (ಮಂದಿರದ) ಮಂಟಪದ ಕನ್ನಡಿ ಗೋಡೆಯಲ್ಲಿ ಪ್ರತಿಫಲಿಸುವ ತನ್ನ ಪ್ರತಿಬಿಂಬಗಳನ್ನೇ ಶುನಕಾವಳಿ ಎಂದು ಭಾವಿಸಿ ಅವುಗಳೊಡನೆ ಜಗಳಕ್ಕೇಳುವ ನಾಯಿಯ ಹಾಗೆ ಬಲವಾಗಿ ಬೇರೂರಿದ ಅವಿದ್ಯೆಯೆಂಬ ಉಪಾಧಿಯಲ್ಲಿ ಸಿಕ್ಕಿ ತಾನು ಬಹು ರೂಪಾಗಿ ತೋರುತ್ತಿದ್ದು, ಬಳಿಕ ಗುರುವಿನ ಅನುಗ್ರಹದಿಂದ ಸುಜ್ಞಾನವುಂಟಾದಾಗ ನೀನು ಅದ್ವಯನಾದ ಆತ್ಮನೆಂದು ನಿರ್ಧರಿಸು.

**ಶಬ್ದಾರ್ಥ: ಶುನಕನಂದದಲಿ**=ಕನ್ನಡಿ ಗೋಡೆಯಲ್ಲಿ ಕಂಡ ತನ್ನ ಪ್ರತಿಬಿಂಬಗಳನ್ನೇ ಬೇರೆ ನಾಯಿಗಳೆಂದು ತಿಳಿದು ಅವುಗಳೊಡನೆ ಜಗಳಕ್ಕೇಳುವ ಹಾಗೆ. * **ತೋರ್ಪುದ**=ಕಾಣುವುದನ್ನು; * **ಶುನಕಾವಳಿ**=ನಾಯಿಗಳ ಗುಂಪು; * **ಮಣಿಮಯಮಂಟಪ**=ರತ್ನ ಮಂದಿರದ ಗೋಡೆಯೊಳಗೆ

**ಪದವಿಭಾಗ:** ಬಲಿದ+ಅವಿದ್ಯೋ+ಉಪಾಧಿಯಲಿ

**ಟಿಪ್ಪಣಿ: ಶುನಕನಂದದಲಿ**– ಕನ್ನಡಿಯ ಗೋಡೆಯಲ್ಲಿ ಕಂಡ ತನ್ನ ಪ್ರತಿಬಿಂಬಗಳನ್ನೇ ಬೇರೆ ನಾಯಿಗಳೆಂದು ತಿಳಿದು ಅವುಗಳೊಡನೆ ಜಗಳಕ್ಕೆದ್ದ ಈ ನಾಯ ಕಥೆಯನ್ನು ಶ್ರೀ ಸ್ವಾಮಿ ರಾಮತೀರ್ಥರು ತಮ್ಮ ಉಪನ್ಯಾಸದಲ್ಲಿ ಉದಾಹರಿಸಿದ್ದಾರೆ. ಆದ್ದರಿಂದ ಈ ಕಥೆಯು ಉತ್ತರದೇಶದಲ್ಲೂ ಪ್ರಚಾರದಲ್ಲಿರಬೇಕೆಂದು ತೋರುತ್ತದೆ.

---

**ಪಿತ್ಥ ತಲೆಗೇರಿದರೆ ಲೋಚನ**
**ಕತ್ತಲಿಸಿ ಹಗಲೆಂದರಿಯದಿರ**
**ಉತ್ತಮದ ವೈದ್ಯರು ಚಿಕಿತ್ಸೆಯ ಮಾಡೆ ತಿಳಿದಂತೆ ।**
**ಅತ್ಯಧಿಕಗುರುಬೋಧೆಯಿಂದಲಿ**
**ಚಿತ್ತದ ಭ್ರಮೆಯಡಗಿ ನೀನೇ**
**ನಿತ್ಯಮುಕ್ತನೆನುತ್ತ ನಿನ್ನನು ತಿಳಿದು ನಿಶ್ಚಯಿಸು ॥ ॥೫೬॥**

**ತಾತ್ಪರ್ಯ:** ವಾತ, ಪಿತ್ಥ, ಕಫಗಳೆಂಬ ಮೂರು ದೋಷಗಳಲ್ಲಿ ಒಂದಾದ ಪಿತ್ಥ ವಿಕಾರದಿಂದ ಕಣ್ಣು ಕತ್ತಲೆ ಕವಿದು ಇದು ಹಗಲು ಎಂದು ತಿಳಿಯದೆ ಕಳವಳಗೊಂಡಾಗ ವೈದ್ಯರು ಚಿಕಿತ್ಸೆ ಮಾಡಿ ಪಿತ್ಥವಿಕಾರವನ್ನು ಹೋಗಲಾಡಿಸಿದಾಗ ಹಗಲನ್ನು ತಿಳಿದ ಹಾಗೆ, ಶ್ರೇಷ್ಠನಾದ ಗುರುವಿನ ಉಪದೇಶದಿಂದ ಮಾಯಾಭ್ರಾಂತಿಯನ್ನು ನಿವಾರಣೆ ಮಾಡಿಕೊಂಡು ಆತ್ಮ ಜ್ಞಾನದಿಂದ ನೀನು ನಿತ್ಯ ಮುಕ್ತ ಸ್ವರೂಪನೆಂದು ನಿಶ್ಚಯಿಸು.

**ಶಬ್ದಾರ್ಥ:** * **ಪಿತ್ಥ**=ತ್ರಿದೋಷಗಳಲ್ಲಿ ಒಂದು ವಿಕಾರ; * **ಲೋಚನ ಕತ್ತಲಿಸಿ**=ಕಣ್ಣು ಕತ್ತಲೆಗೊಂಡು; **ಲೋಚನ** =ಕಣ್ಣು; **ತಿಳಿದಂತೆ**=ಹಗಲೆಂದು ತಿಳಿದ ಹಾಗೆ; * **ಅತ್ಯಧಿಕ ಗುರುಬೋಧೆ**= ಶ್ರೇಷ್ಠ ಗುರುವಿನ ಉಪದೇಶ; * **ಚಿತ್ತದ ಭ್ರಾಂತಿ**=ಮಾಯಾ ಭ್ರಾಂತಿ; * **ನಿನ್ನನು ನೀನು ತಿಳಿದು**=ಆತ್ಮ ಜ್ಞಾನದಿಂದ;

**ಆವರಣವಿಕ್ಷೇಪಶಕ್ತಿಗ**
**ಳಾವರಿಸೆ ಪರವಸ್ತುವನು ಜಗ**
**ಜೀವರೂಪಾಗಿಹುದು ಸ್ವಾಪ್ನಪದಾರ್ಥದಂದದಲಿ; ।**
**ಪಾವನದ ಗುರುಪಾದಪದ್ಮದ**
**ಸೇವೆಯಲಿ ಸಂಸಾರವಳಿಯೆ ನಿ**
**ರಾವರಣ ನಿಸ್ಸೀಮ ನಿಜ ನೀನೆಂದು ನಿಶ್ಚಯಿಸು ॥ ॥೫೭॥**

**ತಾತ್ಪರ್ಯ:** ಮನುಷ್ಯನನ್ನು ತಮೋಗುಣದಿಂದ ಕರ್ಮಗಳಲ್ಲಿ ತೊಡಗಿಸುವ ಆವರಣ ಶಕ್ತಿಯೂ ರಜೋಗುಣದಿಂದ ಆತ್ಮನ ವಿಚಾರ ಬಿಟ್ಟು ಉಳಿದ ವಿಷಯಗಳ ಕಡೆ ಮನಸ್ಸನ್ನು ಹರಿಸುವ ವಿಕ್ಷೇಪಶಕ್ತಿಯೂ ಪರವಸ್ತುವನ್ನು ಮುಸುಕಿರುತ್ತದೆ. ಆಗ ಕನಸಿನಲ್ಲಿ ನಿಜವಾಗಿರುವವನು ತಾನೊಬ್ಬನೇ ಆದರೂ ಹೊರಗೆ ಅನೇಕ ಜೀವರೂ ಜಗತ್ತೂ ಕಾಣುತ್ತದೆ. ಹೀಗೆ ಆವರಣ ವಿಕ್ಷೇಪಗಳಿಂದ ಮುಸುಕಿ ಹುಟ್ಟು ಸಾವುಗಳಿಂದ ಕೂಡಿರುವ ಸಂಸಾರವೆಂಬ ಭ್ರಾಂತಿ ಅಳಿಯಬೇಕಾದರೆ ಪವಿತ್ರವಾದ ಗುರುಚರಣ ಸೇವೆ ಮಾಡಬೇಕು. ಆತನ ಅನುಗ್ರಹ ಪಡೆದಾಗ ತಮೋಗುಣ ರಜೋಗುಣಗಳ ಹೊದಿಕೆಯಿಲ್ಲದ ನಿರಾವರಣ ಸ್ವರೂಪದ ಅವಧಿರಹಿತವಾದ ಸತ್ಯಸ್ವರೂಪ ನೀನೆಂಬ ನಿಶ್ಚಯ ಜ್ಞಾನ ನಿನಗೆ ಉಂಟಾಗುತ್ತದೆ.

**ಶಬ್ದಾರ್ಥ: ಸ್ವಾಪ್ನಪದಾರ್ಥದಂದದಲಿ=** ಕನಸಿನಲಿ ನಿಜವಾಗಿರುವವನು ತಾನೊಬ್ಬನೇ ಆದರೂ ಹೊರಗೆ ಅನೇಕ ಜೀವರೂ ಜಗತ್ತೂ ಕಾಣುತ್ತಿರುವಂತೆ; **ಸಂಸಾರವಳಿಯೆ=**ಹುಟ್ಟು ಸಾವುಗಳು ಹೋಗಲಾಗಿ; * **ಆವರಣ ಶಕ್ತಿ=**ಮನುಷ್ಯನನ್ನು ತಮೋಗುಣದಿಂದ ಕರ್ಮಗಳಲ್ಲಿ ತೊಡಗಿಸುವ ಶಕ್ತಿ; **ವಿಕ್ಷೇಪ ಶಕ್ತಿ=**ರಜೋಗುಣದಿಂದ ಆತ್ಮನ ವಿಚಾರ ಬಿಟ್ಟು ಉಳಿದ ವಿಷಯಗಳ ಕಡೆ ಮನಸ್ಸನ್ನು ಹರಿಸುವ ಶಕ್ತಿ. * **ನಿರಾವರಣ=**ತಮೋಗುಣ ರಜೋಗುಣರಹಿತವಾಗಿ ಸಂಸಾರದ ಭ್ರಾಂತಿ ಅಳಿದ ಆತ್ಮ ಸ್ವರೂಪ; * **ನಿಸ್ಸೀಮ=**ನಿರವಧಿರೂಪನಾದ ಆತ್ಮ; * **ನಿಜ=**ಆತ್ಮದ ಸತ್ಯ ಸ್ವರೂಪ.

---

**ಅಸಿಪದದಖಂಡಾದ್ವಯಾಮೃತ**
**ರಸಭರಿತನಿಸ್ಸೀಮಸಾಗರ**
**ವೆಸೆಯಲದರೊಳು ತೋರ್ಪ ತುಂಗತರಂಗದಿಂದೊಗೆದು ।**
**ಪಸರಿಸಿದ ಬ್ರಹ್ಮಾಂಡ ಬುದ್ಬುದ**
**ದಸಮಸಚ್ಚಿತ್ಸುಖಮಯದಿ ರಂ**
**ಜಿಸುತಲಿರ್ಪುದಪಾರವಂತಿಂತೆನಲಶಕ್ಯವಲಾ ॥ ॥೫೮॥**

**ತಾತ್ಪರ್ಯ:** ಐಕ್ಯಾರ್ಥ ಸೂಚಕವಾದ ಅಸಿ ಎಂಬ ಮಾತಿನಿಂದ ತಿಳಿದು ಬರುವ ಅಖಂಡವಾದ ಅದ್ವೈತವಾದ ಅಮೃತರಸದಿಂದ ತುಂಬಿ ತುಳುಕಾಡುವ ಅಪಾರ ಸಾಗರದಲ್ಲಿ ತೋರುವ, ಎತ್ತರದ ಅಲೆಗಳು ಮೇಲೆದ್ದು ಹರಡಿರುವ ಬ್ರಹ್ಮಾಂಡವೆಂಬ

ನೀರ್ಗುಳ್ಳೆಯು ಅಸಮಾನವಾಗಿಯೂ ಸಚ್ಚಿದಾನಂದಮಯವೂ ಆಗಿ ಕಂಗೊಳಿಸುತ್ತದೆ. ಇದನ್ನು ಹಾಗೆ ಹೀಗೆ ಎಂದು ಬಣ್ಣಿಸಲು ಅಶಕ್ಯವಾಗಿದೆ.

**ಶಬ್ದಾರ್ಥ:** ಅಸಿ ಪದದ=ಐಕ್ಯಾರ್ಥ ಸೂಚಕವಾದ ಅಸಿ ಎಂಬ ಮಾತಿನಿಂದ ತಿಳಿದು ಬರುವ; * ತುಂಗತರಂಗ=ಎತ್ತರವಾದ ಅಲೆಗಳು; * ಪಸರಿಸಿದ=ಹರಡಿದ; * ಬುದ್ಬುದ=ನೀರ್ಗುಳ್ಳೆ; *ಅಸಮ=ಅಸಮಾನ; * ಅಂತಿಂತು=ಹಾಗೆ ಹೀಗೆ; * ಅಶಕ್ಯವಲಾ=ಅಸಾಧ್ಯವಾಗಿದೆ.

---

**ಕ್ಷೀರಕ್ಷೀರವ ಬೆರಸಿದಂದದಿ,**
**ನೀರು ನೀರೊಳು ಸೇರಿದಂದದಿ,**
**ಸಾರಿ ಸಕ್ಕರೆಯೊಳಗೆ ಸಕ್ಕರೆ ಕೂಡಿದಂದದಲಿ, ।**
**ಧೀರಗುರುವಿನ ಕರುಣದಲಿ ಸಂ**
**ಸಾರಶರಧಿಯ ದಾಂಟಿ ಸುಖಸಾ**
**ಕಾರಸಹಜಾದ್ವೈತದೊಳಗೊಳಗೊಂದಿ ಸುಖಿಯಾಗು ॥ ॥೫೯॥**

**ತಾತ್ಪರ್ಯ:** ಹಾಲಿನೊಂದಿಗೆ ಹಾಲನ್ನು, ನೀರೊಡನೆ ನೀರನ್ನು, ಸಕ್ಕರೆಯೊಡನೆ ಸಕ್ಕರೆಯನ್ನು ಬೆರೆಸಿದ ಹಾಗೆ ತತ್‌ತ್ವಂ ಪದಾರ್ಥಗಳ ಐಕ್ಯವನ್ನು ತಿಳಿಯಲು ಅಖಂಡವಸ್ತುವೊಂದೇ ಆಗುವುದೇ ಹೊರತು ಭೇದವೇನೂ ತೋರುವುದಿಲ್ಲ. ಅದರಂತೆಯೇ ಧೀರನಾದ ಗುರುವಿನ ದಯೆಯಿಂದ ಸಂಸಾರವೆಂಬ ಸಾಗರವನ್ನು ದಾಟಿ ಸುಖವೇ ಮೂರ್ತಿಗೊಂಡಂಥ ಸಹಜಾದ್ವೈತದೊಳಗೆ ಲೀನನಾಗಿ ಆನಂದಪಡು.

**ಶಬ್ದಾರ್ಥ:** ಕ್ಷೀರಕ್ಷೀರವ ಬೆರಸಿದಂದದಿ=ಹಾಲುಹಾಲಿನಲ್ಲಿ ಸೇರಿದರೆ ಗುರುತಿಸುವುದಕ್ಕೆ ಆಗದಂತೆ ತತ್‌ತ್ವಂ ಪದಾರ್ಥಗಳ ಐಕ್ಯವನ್ನು ತಿಳಿಯಲು ಅಖಂಡ ವಸ್ತುವೊಂದೇ ಆಗುವುದೇ ಹೊರತು ಭೇದವೇನೂ ತೋರುವುದಿಲ್ಲ.* **ಸಂಸಾರಶರಧಿಯದಾಂಟಿ**=ಸಂಸಾರವೆಂಬ ಸಾಗರ ದಾಟಿ; **ಸುಖಸಾಕಾರ**=ಸುಖವೇ ಮೂರ್ತಿಗೊಂಡಂಥ.

**ಟಿಪ್ಪಣಿ:** ನೀರು ನೀರೊಳು ಸೇರಿದಂದದಿ=ಈ ಅರ್ಥದಲ್ಲಿ ಕಠೋಪನಿಷತ್ತಿನಲ್ಲಿ ಹೇಳಿರುವುದೇನೆಂದರೆ: "ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥

**ಪಾಠಾಂತರ:** ಕ್ಷೀರ ಕ್ಷೀರವ ಬೆರಸಿದಂದದಿ । ನೀರನೀರೊಳು ಸೇರಿದಂದದಿ । ಸಾರಿ ಸಕ್ಕರೆಯೊಳಗೆ ಸಕ್ಕರೆ ಕೂಡಿದಂದದಲಿ ॥ ಎಂಬುದಕ್ಕೆ (ಕು) ಪ್ರತಿಯಲ್ಲಿ ಹೀಗಿದೆ:

ಕ್ಷೀರ ಕ್ಷೀರವ ಬೆರಸಿದಂದದಿ । ನೀರೊಳಗೆ ನೀರಡಸಿದಂದದಿ । ಸಾರ ಸಕ್ಕರೆಯೊಳಗೆ ಸಕ್ಕರೆ ಬೆರಸಿದಂದದಲಿ ।

---

**ಇಂತು ಜೀವೇಶ್ವರತೆಯೆಂಬುದು**
**ಭ್ರಾಂತಿ ಕಲ್ಪಿತವೆಂದು ತಿಳುಪಿದ**
**ನಂತರದೊಳಸಿಪದದಖಂಡಾರ್ಥವನು ಬೋಧಿಸಲು ।**
**ಅಂತರಂಗದೊಳೈಕ್ಯಪದನಿ**
**ಶ್ಚಿಂತಸುಖಮಯನಾಗಿ ಶುಕನ**
**ತ್ಯಂತ ಸಹಜಾನಂದಗುರುಪದಚಿಂತೆಯಲಿ ನಿಂದ ॥ ॥೬೦॥**

**ತಾತ್ಪರ್ಯ:** ಈ ರೀತಿಯಲ್ಲಿ ವ್ಯಾಸನು ತನ್ನ ಮಗ ಶುಕನಿಗೆ, ಜೀವ ಮತ್ತು ಈಶ್ವರತ್ವವೆಂಬುದು ಮಾಯೆಯಿಂದ (ಭ್ರಾಂತಿಯಿಂದ) ಉಂಟಾದುದು ಎಂದು ತಿಳಿಸಿ ಆಮೇಲೆ 'ಅಸಿ' ಪದದ ಅಭಿನ್ನ ಸ್ವರೂಪವನ್ನು ಬೋಧಿಸಿದನು. ಬಳಿಕ ಶುಕನು ತನ್ನ ಅಂತರಂಗದಲ್ಲಿ ಐಕ್ಯಭಾವ ಹೊಂದಿ ಅನುಮಾನರಹಿತವಾದ ಅನಂತ ಸುಖವೆನಿಸಿದ ಶ್ರೇಷ್ಠ ಸಹಜಾನಂದ ಭಾವದಿಂದ ಗುರುವಿನ ಪಾದಧ್ಯಾನದಲ್ಲಿ ನಿರತನಾದನು.

**ಶಬ್ದಾರ್ಥ: ತಿಳುಪಿದ+ಅನಂತರದೊಳು**=ತಿಳಿಸಿದ ಮೇಲೆ; **ಅಸಿಪದದ+ಅಖಂಡಾರ್ಥವನು**=ಅಸಿ ಪದದ ಅಭಿನ್ನ ಸ್ವರೂಪವನ್ನು;

**ಟಿಪ್ಪಣಿ: ಸಹಜಾನಂದ ಗುರುಪದ ಚಿಂತೆಯಲಿ**=ಎಂಬ ಮಾತಿನಲ್ಲಿ ಶ್ಲೇಷಾರ್ಥವಿದೆ. ಸಹಜಾನಂದ ಎಂಬುದು ಅದ್ವೈತಾನಂದ ಭಾವವೂ ಹೌದು. ಮಹಲಿಂಗರಂಗ ಕವಿಯ ಗುರುವಿನ ಹೆಸರೂ ಆಗಿದೆ.

---

## ಮಂಗಳ (೬೧)

**ಅಂಧಕಾಸುರಮಥನ, ಸಿಂಧುರ**
**ಬಂಧುರಾಜಿನವಸನ, ವನರುಹ**
**ಬಂಧುಶತಸಾಹಸ್ರಕೋಟಿದ್ಯುತಿವಿತತಿಚೈತ್ರ, ।**
**ಇಂದುಧರ, ಶಿವ, ಶಂಭು, ಮೃಡ, ಶಿತಿ**
**ಕಂಧರ, ಪರಂಜ್ಯೋತಿ, ಸಂಸೃತಿ**
**ಬಂಧವಿರಹಿತ, ಮಲ್ಲಿಕಾರ್ಜುನ ಸಲಹು ಮೂಜಗವ ॥ ॥೬೧॥**

**......... ಅಸಿ ಪದಾರ್ಥ ನಿರ್ಣಯವೆಂಬ ಐದನೆಯ ಅಧ್ಯಾಯವು ಮುಗಿದುದು.**

ತಾತ್ಪರ್ಯ: ಅಂಧಕಾಸುರನನ್ನು ಸಂಹರಿಸಿದ ಪರಮೇಶ್ವರನೇ, ಗಜಾಸುರನ ಸುಂದರವಾದ ಚರ್ಮವನ್ನು ವಸ್ತ್ರವಾಗಿ ಧರಿಸಿದವನೇ, ಕಮಲ ಪ್ರಿಯನಾದ ನೂರು ಸಾವಿರ ಕೋಟಿ ಸಂಖ್ಯೆಯ ಪ್ರಕಾಶದ ಸಮೂಹಕ್ಕೆ ಚೈತ್ರ ಮಾಸದಂತಿರುವನೇ (ಚೈತ್ರ ಮಾಸದಲ್ಲಿ ಸೂರ್ಯನ ಕಾಂತಿ ಹೆಚ್ಚುತ್ತಿರುತ್ತದೆ). ಚಂದ್ರ ಚೂಡನೇ, ಮಂಗಳ

ರೂಪನೇ (ಶಿವ), ಜನನಮರಣ ದೂರನೇ (ಶಂಭು), ತಾಂಡವಲೀಲಾವಿನೋದನೇ (ಮೃಡ), ವಿಷವನ್ನು ಕುಡಿದು ಲೋಕರಕ್ಷಣೆ ಮಾಡಿದ ನೀಲಕಂಠನೇ (ಶಿತಿಕಂಧರ) ಪರಂಜ್ಯೋತಿ ಸ್ವರೂಪನೇ, ಸಂಸಾರ ಬಂಧನದಿಂದ ದೂರನಾದವನೇ (ಸಂಸೃತಿ ಬಂಧವಿರಹಿತ) ಶ್ರೀಶೈಲದಲ್ಲಿ ನೆಲಸಿರುವ ಮಲ್ಲಿಕಾರ್ಜುನ ಸ್ವಾಮಿಯೇ, ಮೂರು ಲೋಕಗಳನ್ನು (ಎಲ್ಲರನ್ನೂ) ರಕ್ಷಿಸು.

**ಶಬ್ದಾರ್ಥ: ಅಂಧಕಾಸುರಮಥನ**=ಅಂಧಕಾಸುರನನ್ನು ಕೊಂದವನೇ; **ಸಿಂಧುರ ಬಂಧು ರಾಜಿನವಸನ**=ಆನೆಯ (ಗಜಾಸುರನ) ಸುಂದರವಾದ ಚರ್ಮವೇ ವಸನವಾಗಿ ಉಳ್ಳವನು; **ವನರುಹಬಂಧುಶತಸಾಹಸ್ರಕೋಟಿದ್ಯುತಿ ವಿತತಿ ಚೈತ್ರ**=ಕಮಲಪ್ರಿಯನಾದ ನೂರು ಸಾವಿರ ಕೋಟಿ ಸಂಖ್ಯೆಯ ಪ್ರಕಾಶದ ಸಮೂಹಕ್ಕೆ ಚೈತ್ರಮಾಸದಂತೆ ಇರುವವನು ಎಂದರ್ಥ. (ಚೈತ್ರದಲ್ಲಿ ಸೂರ್ಯನ ಕಾಂತಿಯು ಹೆಚ್ಚುತ್ತಿರುವುದು) **ಶಿತಿಕಂಧರ**=ಕಪ್ಪಾದ ಕುತ್ತಿಗೆಯುಳ್ಳವನು ಈಶ್ವರನು ಕ್ಷೀರಸಮುದ್ರಮಥನದಲ್ಲಿ ಹುಟ್ಟಿದ ವಿಷವನ್ನು ಕುಡಿದಿದ್ದರಿಂದ ಅದು ಕುತ್ತಿಗೆಯಲ್ಲಿ ನಿಂತು ಕಪ್ಪಾಗಿರುವುದು. (ಅದರಿಂದ ಅವನಿಗೆ ನೀಲಕಂಠನೆಂದು ಹೆಸರು). ವಿಷವು ಕಪ್ಪಾಗಿರುವುದು ಕವಿ ಸಮಯ.

**ಟಿಪ್ಪಣಿ-೧: ಶತಸಾಹಸ್ರಕೋಟಿ**=ನೂರು ಸಾವಿರ ಕೋಟಿ; ಎಣಿಕೆಯಲ್ಲಿ ೧೩ನೇ ಸ್ಥಾನದ ಸಂಖ್ಯೆ;

## ಪೂರ್ವ ಕಥೆ:

*** ಸಿಂಧೂರಬಂಧುರಾಜೀನವಸನ**- ಗಜಚರ್ಮಾಂಬರಧರ; ಗಜಾಸುರನು ಶಿವನಿಗೆ ವಸ್ತ್ರವಾದ ಕಥೆ ಹೀಗಿದೆ:

ಒಬ್ಬ ಅಸುರ. ಮಹಿಷಾಸುರನ ಮಗ. ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಅನೇಕ ವರಗಳನ್ನು ಪಡೆದು ದೇವತೆಗಳನ್ನು ಪೀಡಿಸುತ್ತಿರಲಾಗಿ ದೇವತೆಗಳು ಶಿವನನ್ನೇ ಮೊರೆಹೊಕ್ಕರು. ಶಿವನು ಇವನ ಮೇಲೆ ಯುದ್ಧಕ್ಕೆ ಬಂದ. ಆಗ ಗಜಾಸುರ "ಸ್ವಾಮಿನ್, ನಿನ್ನಿಂದಲೇ ಸಾಯಬೇಕೆಂಬ ಉದ್ದೇಶದಿಂದಲೇ ನಾನು ದೇವತೆಗಳನ್ನು ಪೀಡಿಸಿದೆ. ನನ್ನನ್ನು ಕೊಂದು ನನ್ನ ಚರ್ಮವನ್ನು ನೀನು ಧರಿಸುವುದಾಗಿ ವಾಗ್ದಾನ ಮಾಡಿದರೆ ನಾನು ಸಂತೋಷವಾಗಿ ಸಾಯುವೆನು" ಎಂದ. ಶಿವನು ಅದಕ್ಕೆ ಸಮ್ಮತಿಸಿ ಅವನನ್ನು ಕೊಂದು ಅವನ ಬಯಕೆಯಂತೆಯೇ ಗಜ ಚರ್ಮ ಧರಿಸಿ ಗಜ ಚರ್ಮಾಂಬರ (ಸಿಂಧುರ ಬಂಧುಕ ಅಜಿನವನಸಧಾರಿ) ಆದನು.

**ಪುರಾಣ ನಾಮಚೂಡಾಮಣಿ ಪುಟ-೧೭೭; 'ಗಜ' ಟಿಪ್ಪಣಿ**

## ಪೂರ್ವ ಕಥೆ-೨: ಅಂಧಕಾಸುರ ಮಥನ
## (ಶಿವ ಅಂಧಕಾಸುರನನ್ನು ಕೊಂದ ಕಥೆ)

ಕಶ್ಯಪಮುನಿಯಲ್ಲಿ ದನುವೆಂಬ ಹೆಂಡತಿಯಲ್ಲಿ ಜನಿಸಿದವ ಅಂಧಕಾಸುರ. ಮಹಿಷಾಸುರನ ಸೇನೆಯಲ್ಲಿದ್ದ ಮಹಾಕಾಲವನದಲ್ಲಿ ಇವನಿಗೂ ಪರಮೇಶ್ವರನಿಗೂ ಘೋರ ಯುದ್ಧವಾಗುತ್ತಿರಲಾಗಿ ಇವನ ಮೈಯಿಂದ ಬಿದ್ದ ಒಂದೊಂದು ಹನಿ ರಕ್ತವೂ ಒಬ್ಬೊಬ್ಬ ರಾಕ್ಷಸನಾಗುತ್ತಿರಲು ಇದನ್ನು ಕಂಡು ವಿಷ್ಣು ಶುಷ್ಕರೇವತಿಯೆಂಬ ರಕ್ಕಸಿಯನ್ನು ಸೃಷ್ಟಿಮಾಡಿದ. ಆಕೆ ಇವನ ರಕ್ತವನ್ನು ಶೋಷಿಸತೊಡಗಿದಳು. ನಿರ್ವೀರ್ಯನಾದ ಅಂಧಕನು ಶಿವನನ್ನು ಮೊರೆ ಹೊಕ್ಕ ಆತನ ಪ್ರಮಥ ಗಣಗಳಲ್ಲಿ ಒಬ್ಬನಾದ (ಮತ್ಸ್ಯ ಪುರಾಣ ೧೭೮) (ಪುರಾಣ ನಾಮಚೂಡಾಮಣಿ ಪುಟ ೧೫)

## ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಅಸಿಪದಾರ್ಥ ನಿರ್ಣಯವೆಂಬ ಐದನೆಯ ಅಧ್ಯಾಯವು ಮುಗಿದುದು.**

## ಸಾರಸಂಗ್ರಹ

### ಐದನೆಯ ಅಧ್ಯಾಯ - ಅಸಿಪದಾರ್ಥ ನಿರ್ಣಯ

ಇನ್ನು ತತ್ತ್ವಂಪದಗಳ ಲಕ್ಷ್ಯವು ಒಂದೇ ಬ್ರಹ್ಮವೆಂಬುದನ್ನು ತೋರಿಸಬೇಕಾಗಿದೆ. ಮಾಯಾಶಕ್ತಿಗೆ ಸತ್ತ್ವ, ರಜ, ತಮ–ಎಂಬ ಮೂರು ಗುಣಗಳುಂಟು. ಅದರಲ್ಲಿ ಶುದ್ಧ ಸತ್ತ್ವಗುಣ ಪ್ರಧಾನವಾದದ್ದಕ್ಕೆ ವಿದ್ಯೆಯೆಂದು ಹೆಸರು. ಇದರ ಉಪಾಧಿಯಿಂದ ಬ್ರಹ್ಮವು ಸರ್ವಜ್ಞನಾದ ಈಶ್ವರನೆನಿಸಿಕೊಳ್ಳುವದು. ಮಲಿನಸತ್ತ್ವಗುಣ ಪ್ರಧಾನವಾದದ್ದಕ್ಕೆ, ಎಂದರೆ ರಜಸ್ತಮೋಗುಣಗಳಿಂದ ಕಲುಷಿತವಾದ ಸತ್ತ್ವಗುಣದ್ದಕ್ಕೆ, ಅವಿದ್ಯೆಯೆಂದು ಹೆಸರು. ಇದರ ಉಪಾಧಿಯಿಂದ ಅದೇ ಬ್ರಹ್ಮವು ಕಿಂಚಿಜ್ಜ್ಞನಾದ ಜೀವನೆನಿಸಿಕೊಳ್ಳುವದು. ಪರಮಾತ್ಮನ ನಿಜಸ್ವರೂಪದ ಅರಿವಿಲ್ಲದ್ದರಿಂದುಂಟಾದ ಈ ಎರಡು ಉಪಾಧಿಗಳನ್ನೂ ಕಳೆದರೆ ಉಳಿಯುವದು ಶುದ್ಧಬ್ರಹ್ಮವೊಂದೇ. ಬ್ರಹ್ಮವೇ ಜೀವನಾದರೆ ಜೀವನ ದುಃಖವು ಬ್ರಹ್ಮಕ್ಕೆ ಅಂಟುವದೆಂದು ತಿಳಿಯಬಾರದು. ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನಿಗೆ ನೀರಿನ ಕಂಪಕಲುಷಗಳ ಸೋಂಕು ಹೇಗಿಲ್ಲವೋ ಹಾಗೆ ಜೀವನ ದುಃಖದ ಸೋಂಕು ಆತ್ಮನಿಗಿಲ್ಲ. ಸುಖದುಃಖಗಳೆಲ್ಲ ಉಪಾಧಿಯ ಧರ್ಮಗಳಾದರೂ ಜೀವನದಲ್ಲಿ ಅವಿದ್ಯೆಯಿಂದ ತೋರುವವು. ಜೀವನ ಲೋಕಾಂತರ ಗಮನಗಳ ಸಂಬಂಧವೂ ಹಾಗೆಯೇ, ಗಡಿಗೆಯಲ್ಲಿರುವ ಆಕಾಶವು ಗಡಿಗೆ ಹೋದೆಡೆಯೆಲ್ಲಾ ಇದ್ದು ಗಡಿಗೆಯು ಒಡೆದುಹೋಗುತ್ತಲೇ ಮಹಾಕಾಶವೇ ಆಗುವಂತೆ ಬ್ರಹ್ಮವು ಲಿಂಗದೇಹದ ಉಪಾಧಿಯ ದೃಷ್ಟಿಯಿಂದ ಅದು ಹೋದೆಡೆಗೆಲ್ಲ ಹೋಗಿ ಲಿಂಗದೇಹವು ಭಂಗವಾಗುತ್ತಲೇ ಬ್ರಹ್ಮವಾಗಿಬಿಡುವದು. ಉಪಾಧಿಯಿಂದ ಭೇದವು ತೋರುವುದೇ ಹೊರತು ಬೇರೆ ಇಲ್ಲ. ಉಪಾಧಿಯಾಗಿರುವ ಸೃಷ್ಟಿ ವಿಷಯಗಳೆಲ್ಲ ಬರೀ ಆರೋಪ. ಗುರುವಿನುಪದೇಶದಿಂದ ಈ ತತ್ತ್ವವನ್ನು ತಿಳಿದುಕೊಂಡು ನೀನು ಬ್ರಹ್ಮವೆಂದು ನಿಶ್ಚಯಿಸಬೇಕು. ಹಾಲು ಹಾಲಿನಲ್ಲಿ ಸೇರಿದರೆ ಎರಡೂ ಒಂದೇ ಆಗುವಂತೆ ತತ್ತ್ವಂಪದಾರ್ಥಗಳ ಲಕ್ಷ್ಯವನ್ನು ತಿಳಿದರೆ ಅಖಂಡವಸ್ತುವೊಂದೇ ಆಗುವದೇ ಹೊರತು ಭೇದವೇನೂ ತೋರುವುದಿಲ್ಲ.

*****

# ಆರನೆಯ ಅಧ್ಯಾಯ

## ಸಪ್ತ ಭೂಮಿಕೆಗಳ ಅಭ್ಯಾಸ

**ಸೂಚನೆ ॥**

**ಭೂಮಿಕೆಗಳಭ್ಯಾಸದಿರವನು**
**ಸಾಮರಸದ ಸಮಾಧಿಭೇದವ**
**ನೇಮಿಸಿದನಾ ಬಾದರಾಯಣ ಶುಕಮುನೀಶ್ವರಗೆ ॥**

**ತಾತ್ಪರ್ಯ:** ಮನಸ್ಸನ್ನು ಆತ್ಮಸ್ಥಿತಿಗೆ ಹತ್ತಿಸುವ ಏಳುಮೆಟ್ಟಿಲುಗಳ ಸಾಧನೆಯ ರೀತಿಯನ್ನು ತನ್ಮಯವಾದ ಮನಸ್ಸಿನ ಏಕಾಗ್ರತೆಯ ಬಗೆಗಳನ್ನು ವ್ಯಾಸಮಹರ್ಷಿ ಶುಕಮುನೀಶ್ವರನಿಗೆ ಬೋಧಿಸಿದನು.

**ಶಬ್ದಾರ್ಥ:** **ಭೂಮಿಕೆಗಳ**=ಮನಸ್ಸನ್ನು ಆತ್ಮಸ್ಥಿತಿಗೆ ಹತ್ತಿಸುವ ಮೆಟ್ಟಿಲುಗಳ; **ಸಾಮರಸದ**=ಸಮರಸದ ತನ್ಮಯವಾದ. **ಸಮಾಧಿ ಭೇದವ**=ಮನಸ್ಸಿನ ಏಕಾಗ್ರತೆಯ ಬಗೆಗಳನ್ನು; * **ಬಾದರಾಯಣ** =ವೇದವ್ಯಾಸ ಋಷಿ

**ಟಿಪ್ಪಣಿ–೧:** * **ಸೂಚನೆ**= ಷಟ್ಪದಿ ಕಾವ್ಯಗಳಲ್ಲಿ ಆಯಾ ಸಂಧಿಯ ಸಾರಾಂಶವನ್ನು ಅತಿ ಸಂಕ್ಷಿಪ್ತವಾಗಿ ತಿಳಿಸುವ ಅರ್ಧ ಷಟ್ಪದಿಯ ಸೂಚನಾ ಪದ್ಯ.

**ಟಿಪ್ಪಣಿ–೨:** * **ಸಾಮರಸದ**=ಸಮರಸದ, ಇಲ್ಲಿ ಛಂದಸ್ಸಿನ ನಿಯಮದಂತೆ ಈ ಸಾಲಿನಲ್ಲಿ ೩–೪, ೩–೪ ಮಾತ್ರಾ ನಿಯಮಕ್ಕಾಗಿ ಸಮರಸದ ಪದವನ್ನು ಕವಿ ಸಾಮರಸವೆಂದು ಮಾಡಿದ್ದಾನೆ. ಹಿಂದಿನ ಕವಿಗಳು ಹೀಗೆ ಛಂದೋನಿಯಮ ಪಾಲನೆಗಾಗಿ ಅಕ್ಷರಗಳನ್ನು ಲಘುವನ್ನು ದೀರ್ಘ ವನ್ನಾಗಿ (ಸಮರಸ=ಸಾಮರಸ) ದೀರ್ಘವನ್ನು ಲಘುವನ್ನಾಗಿ (ವೀರನಾರಾಯಣನ= ವೀರನರಾಯಣನ , ಕುಮಾರವ್ಯಾಸ ಭಾರತ, ಪೀಠಿಕಾ ಸಂಧಿ ಪದ್ಯದಲ್ಲಿ) ಮಾಡಿರುವುದುಂಟು.

---

### ಇಷ್ಟದೇವತಾಸ್ತುತಿ ಮೊದಲಾದದ್ದು (೧–೩)

**ಭೂಷಣದ ಮಂಜೂಷ ಬಲಿಯ ನಿ**
**ವಾಸ; ಸುರಪಥ ಪುಷ್ಪವಾಟ; ದಿ**
**ಗೀಶರಂಬರಪಾಲಕರು; ಪಾಲ್ಗಡಲೆ ಬತ್ತಳಿಕೆ; ।**
**ಶ್ರೀಶನೇ ಶರ; ಧರೆಯೆ ರಥ; ವನ**
**ಜಾಸನನು ರಥಸೂತನಾ ಶೈ**
**ಲೇಶ ಧನಪತಿಮಿತ್ರ ಸುರಕುಲಸಾರ್ವಭೌಮಂಗೆ ॥ ॥೧॥**

**ತಾತ್ಪರ್ಯ:** ಪರಶಿವನಿಗೆ ಪಾತಾಳಲೋಕ ಆಭರಣಗಳನ್ನಿಡುವ ಪೆಟ್ಟಿಗೆ ಆಗಿದೆ ಆಕಾಶವೇ ಹೂವಿನ ತೋಟ ಅಷ್ಟದಿಕ್ಪಾಲಕರು ವಸ್ತ್ರಪಾಲಕರು ಹಾಲಿನ ಸಾಗರವೇ

ಬಾಣದ ಚೀಲ, ವಿಷ್ಣುವೇ ಬಾಣ, ಬ್ರಹ್ಮನೇ ಸಾರಥಿ ಆಗಿರುವ ಶ್ರೀ ಶೈಲಾಧಿಪತಿಯೂ, ಕುಬೇರನ ಮಿತ್ರನೂ ಎನಿಸಿದ ಶ್ರೀಮಲ್ಲಿಕಾರ್ಜುನಸ್ವಾಮಿ ನಮ್ಮನ್ನು ಸಲಹಲಿ.

**ಶಬ್ದಾರ್ಥ: ಭೂಷಣದ ಮಂಜೂಷ**=ಆಭರಣಗಳ ಪೆಟ್ಟಿಗೆ; **ಬಲಿಯ ನಿವಾಸ**=ಪಾತಾಳ ಲೋಕ; **ಸುರಪಥ**=ಆಕಾಶ; **ಪುಷ್ಪವಾಟ**=ಹೂವಿನ ತೋಟ; **ದಿಗೀಶರು**=ಅಷ್ಟದಿಕ್ಪಾಲಕರು; **ಅಂಬರ ಪಾಲಕರು**=ವಸ್ತ್ರಗಳನ್ನು ರಕ್ಷಿಸುವರು; **ಪಾಲ್ಗಡಲು**=ಕ್ಷೀರಸಾಗರ; * **ಬತ್ತಳಿಕೆ**=ಬಾಣದ ಚೀಲ; **ರಥಸೂತ**=ಸಾರಥಿ; **ವನಜಾಸನ**=ಬ್ರಹ್ಮನು; **ಶೈಲೇಶ**=ಶ್ರೀಶೈಲದ ಒಡೆಯನು; **ಧನಪತಿ ಮಿತ್ರ**=ಕುಬೇರ; **ಸುರಕುಲಸಾರ್ವಭೌಮ**=ದೇವತೆಗಳ ಸಮೂಹಕ್ಕೆಲ್ಲ ಚಕ್ರವರ್ತಿ (ಶ್ರೀಶೈಲಮಲ್ಲಿಕಾರ್ಜುನೇಶ್ವರ ಸ್ವಾಮಿ)

**ಟಿಪ್ಪಣಿ: ದಿಗೀಶರು**=ಅಷ್ಟದಿಕ್ಪಾಲಕರು; ಪೂರ್ವ–ಆಗ್ನೇಯ–ದಕ್ಷಿಣ–ನೈಋತ್ಯ–ಪಶ್ಚಿಮ–ವಾಯುವ್ಯ–ಉತ್ತರ–ಈಶಾನ್ಯ ಎಂಬ ಎಂಟು ದಿಕ್ಕುಗಳಿಗೆ ಕ್ರಮವಾಗಿ ಅಧಿಪತಿಗಳಾದ ಇಂದ್ರ–ಅಗ್ನಿ–ಯಮ–ನಿರ್ಋತಿ–ವರುಣ–ವಾಯು–ಕುಬೇರ–ಈಶಾನ್ಯ ಇವರೇ ಎಂಟು ಮಂದಿ.

**ಟಿಪ್ಪಣಿ–೨:** ಶಬ್ದದ ಸರಿ ರೂಪ ನಿರ್ಋತಿ (ನಿರ್ಋತಿ ಅಥವಾ ನಿರೃತಿ) ಎಂಬ ಶಬ್ದವನ್ನು ಚಿದಂಬರಯ್ಯನವರು ನಿರುರುತಿ ಎಂದಿದ್ದಾರೆ.

**ಟಿಪ್ಪಣಿ–೩:** ೫ನೇ ಅಧ್ಯಾಯ ೧ನೇ ಪದ್ಯದ ಪ್ರಕಾರ ವಿಷ್ಣುವೇ ಬಾಣ, ಭೂಮಿಯೇ ರಥ, ಬ್ರಹ್ಮನೇ ಸಾರಥಿ ಎಂದು ತಿಳಿಯಬೇಕು.

---

**ಖೂಳರಿಗೆ, ಕುಹಕರಿಗೆ, ಕುತ್ಸಿತ**
**ಶೀಲರಿಗೆ, ಕುಟಿಲರಿಗೆ, ಹಿರಿಯರ**
**ನೇಳಿಲವ ಮಾಳ್ಪರಿಗೆ, ಕಾಮಾಂಧರಿಗೆ, ಕಠಿನರಿಗೆ, ।**
**ಹಾಳುವಾದದಿ ಹೊತ್ತುಗಳೆವರ**
**ನಾಳಿಗೊಂಬರಿಗಧಮರಿಂಗಿದ**
**ಪೇಳದಿರು ಮರೆದರಿದು ದುರುಳರಿಗನುಭವಾಮೃತವ ॥ ॥೨॥**

**ತಾತ್ಪರ್ಯ:** ನೀಚರಿಗೆ, ಕುಚೋದ್ಯಗಾರರಿಗೆ, ಕೀಳಾದ ಆಚಾರವುಳ್ಳವರಿಗೆ, ಮನಸ್ಸಿನಲ್ಲೊಂದು, ಬಾಯಲ್ಲೊಂದು ಇರುವವರಿಗೆ, ಹಿರಿಯರನ್ನು ದೂಷಣೆ ಮಾಡು ವವರಿಗೆ, ಕಾಮಾತುರದಿಂದ ಕಣ್ಣು ಕಾಣದಿರುವವರಿಗೆ, ಕ್ರೂರಚಿತ್ತರಿಗೆ, ವ್ಯರ್ಥವಾದ ಗಳಿಂದ ಕಾಲಹರಣ ಮಾಡುವವರನ್ನು ಗೆಳೆಯರನ್ನಾಗಿ ಮಾಡಿಕೊಳ್ಳುವವರಿಗೆ, ತಿಳಿದೇ ಆಗಲಿ, ತಿಳಿಯದೆ ಆಗಲಿ ದುಷ್ಟರಾದವರಿಗೆ ಅಪ್ಪಿತಪ್ಪಿಯೂ ಈ ಅನುಭವಾಮೃತವನ್ನು ಹೇಳಬೇಡ.

**ಶಬ್ದಾರ್ಥ:** * **ಖೂಳರಿಗೆ**=ನೀಚರಿಗೆ; * **ಕುಹಕರಿಗೆ**=ಕುಚೋದ್ಯಗಾರರಿಗೆ; **ಕುತ್ಸಿತಶೀಲರಿಗೆ**=ಕೀಳಾದ ಆಚಾರವುಳ್ಳರಿಗೆ; **ಕುಟಿಲರಿಗೆ**=ಮನಸ್ಸಿನಲ್ಲೊಂದು ಬಾಯಲ್ಲೊಂದು ಇರುವವರಿಗೆ; **ಏಳಿಲವಮಾಳ್ಪರಿಗೆ**=ಜರಿಯುವವರಿಗೆ; **ಹೊತ್ತುಗಳೆವರನು+ಆಳಿಗೊಂಬರಿಗೆ**=ವ್ಯರ್ಥ ವಾದ ವಾದಗಳಿಂದ ಕಾಲ ಹರಣ ಮಾಡುವವರನ್ನು ಗೆಳೆಯರಾಗಿ ಮಾಡಿಕೊಳ್ಳುವವರಿಗೆ; **ಮರೆದರಿದು**=ತಿಳಿಯದೆ ಆಗಲಿ ತಿಳಿದೇ ಆಗಲಿ; * **ಅಧಮರಿಗೆ**=ನೀಚರಿಗೆ; * **ದುರುಳರಿಗೆ**=ದುಷ್ಟರಿಗೆ; * **ಪೇಳದಿರು**=ಹೇಳಬೇಡ (ಉಪದೇಶಿಸಬೇಡ);

ನಿರ್ಗುಣಾಷ್ಟಾಂಗವನು ಸಾಧಿಸು
ವಗ್ಗಳಿಕೆಯುಳ್ಳವರಿಗಾವಗ
ಭರ್ಗನಲ್ಲಿಯೆ ಭಕ್ತಿಭಾವವ ಮಾಳ್ಪ ಸುಜನರಿಗೆ, ।
ಸ್ವರ್ಗಸುಖವನು ತುಚ್ಛವಾಗಿಯೆ
ನುಗ್ಗುಮಾಡಿ ಸಮಗ್ರವಾದಪ
ವರ್ಗವನು ಬಯಸುವರಿಗುಸುರೀ ಅನುಭವಾಮೃತವ ॥ ॥೩॥

ತಾತ್ಪರ್ಯ: ನಿರ್ಗುಣಬ್ರಹ್ಮಸಂಬಂಧವಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗ ಯೋಗವನ್ನು ಸಾಧಿಸುವವರಿಗೆ, ಸದಾ ಪರಮೇಶ್ವರನಲ್ಲಿ ಭಕ್ತಿಭಾವವುಳ್ಳವರಿಗೆ, ಸ್ವರ್ಗಲೋಕದ ಸುಖವನ್ನು ಹೀನವೆಂದು ಭಾವಿಸಿ ಪಕ್ಕಕ್ಕೆ ತಳ್ಳಿ ಅದ್ವೈತ ಭಾವದ ಮೋಕ್ಷವೆನಿಸಿದ ಸಾಯುಜ್ಯಮುಕ್ತಿಯನ್ನು ಅಪೇಕ್ಷಿಸುವವರಿಗೆ ಈ ಅನುಭವಾಮೃತವನ್ನು ತಿಳಿಸು.

ಶಬ್ದಾರ್ಥ: * ನಿರ್ಗುಣ=ನಿರ್ಗುಣಬ್ರಹ್ಮ ಸಂಬಂಧವಾದ; * ಅಷ್ಟಾಂಗ=ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣಗಳೆಂಬ ಅಷ್ಟಾಂಗಯೋಗ. * ಅಗ್ಗಳಿಕೆ =ಹಿರಿಮೆ; ನುಗ್ಗುಮಾಡಿ=ಹಿಂದಕ್ಕೆ ತಳ್ಳಿ, ಪಕ್ಕಕ್ಕೆ ಸರಿಸಿ; * ಭರ್ಗ=ಪರಮೇಶ್ವರ; ಸಮಗ್ರವಾದ+ ಅಪವರ್ಗವನು=ಸಾಯುಜ್ಯ ಮುಕ್ತಿಯನ್ನು; * ಉಸುರು=ತಿಳಿಸು; * ತುಚ್ಛವಾಗಿ =ಹೀನವೆಂದು ಭಾವಿಸಿ; * ಮಾಳ್ಪ=ಆರಾಧಿಸುವ; ಸಮಗ್ರವಾದ=ಅದ್ವೈತಭಾವದ;

ಟಿಪ್ಪಣಿ–೧: ನಿರ್ಗುಣಾಷ್ಟಾಂಗ: ಮುಂದೆ ಇದೇ ಅಧ್ಯಾಯದ ೭೯ ಮತ್ತು ೮೦ನೇಯ ಪದ್ಯಗಳಲ್ಲಿ ಈ ಕವಿಯೇ ಉಲ್ಲೇಖಿಸಿರುವಂತೆ ನಿರ್ಗುಣಜ್ಞಾನದ ಪ್ರಕಾರಾಂತರಗಳಾಗಿರುವ ಯಮ ನಿಯಮಾದಿ ಎಂಟುಸಾಧನಗಳು.

ಟಿಪ್ಪಣಿ–೨: ಪಾತಂಜಲ ಯೋಗಶಾಸ್ತ್ರದಂತೆ ಯಮ ನಿಯಮಾದಿಗಳನ್ನು ಹಿಂದೆ ಅಧ್ಯಾಯ ೨ ಪದ್ಯ ೬೮ ಟಿಪ್ಪಣಿಯಲ್ಲಿ ವಿವರಿಸಲಾಗಿದೆ. ಅವುಗಳು ಸ್ಥೂಲಗಳೆಂದು ಭಾವಿಸಿ ಕವಿಯು ಇಲ್ಲಿ ತನ್ನ ವಿವರಣೆಯನ್ನು ನಿರ್ಗುಣಾಷ್ಟಾಂಗವೆಂದು ಕರೆದಿರುವಂತೆ ತೋರುತ್ತದೆ.

ಟಿಪ್ಪಣಿ–೩: ಸಮಗ್ರವಾದ+ಅಪವರ್ಗ (ಮೋಕ್ಷ)ಸಾಯುಜ್ಯಮುಕ್ತಿ=ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಎಂಬ ಮುಕ್ತಿಗಳಲ್ಲಿ ದ್ವೈತಭಾವವಿರುವುದರಿಂದ ಅವು ಸಮಗ್ರಗಳಲ್ಲ ಎಂದರೆ ಪೂರ್ಣಗಳಲ್ಲ.

---

## ಭೂಮಿಕೆಗಳ ಶ್ರೇಷ್ಠತೆ (೪–೫)

ಹಲವು ತೆರದಭ್ಯಾಸವುಂಟೈ
ತಿಳಿಯಲೀ ಆತ್ಮಾಪರೋಕ್ಷವ;
ಕೆಲವು ಸಾಂಖ್ಯವು, ಯೋಗಗಳು, ಕೆಲಕೆಲವು ವೇದಾಂತ, ।
ಕೆಲವು ಸಿದ್ಧಾಂತಗಳು, ಕೆಲವೆಲೆ
ಬಲುಮೆಯಹ ಶಾಸ್ತ್ರಪ್ರಮೇಯವು
ಸುಲಭವಲ್ಲವು ಸಾಧಿಸುವೊಡೀ ಭೂಮಿಕೆಗಳಿರವ ॥ ॥೪॥

**ತಾತ್ಪರ್ಯ:** ಆತ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಸಪ್ತಭೂಮಿಕೆಗಳನ್ನು ತಿಳಿಯ ಬೇಕಾದರೆ ಹಲವು ಬಗೆಯ ಅಭ್ಯಾಸಗಳನ್ನು ಮಾಡಬೇಕಾಗುತ್ತದೆ. ಆತ್ಮ, ಅನಾತ್ಮ, ವಿವೇಕ ಮೊದಲಾದ ಸಾಂಖ್ಯ ಶಾಸ್ತ್ರದ ಸಂಬಂಧವಾದ ಕೆಲವು ವಿಚಾರಗಳು, ಮನೋನಿಗ್ರಹ ಮೊದಲಾದ ಯೋಗಶಾಸ್ತ್ರ ಸಂಬಂಧವಾದ ಕೆಲವು ವಿಚಾರಗಳು (ಸಾಂಖ್ಯಯೋಗ, ವೇದಾಂತ, ಸಂಪ್ರದಾಯ, ಶಾಸ್ತ್ರಗಳ ಕೆಲಕೆಲವು ವಿಚಾರಗಳು), ಸರ್ವಾತ್ಮಭಾವ ಮೊದಲಾದ ವೇದಾಂತ ಶಾಸ್ತ್ರದ ಕೆಲವು ವಿಚಾರಗಳು, ನಾದೋತ್ಪತ್ತಿ ಮೊದಲಾದ ಕೆಲವು ಸಂಪ್ರದಾಯಗಳ ನಿಶ್ಚಿತ ವಿಚಾರಗಳು, ಶಾಸ್ತ್ರದಲ್ಲಿ ಹೇಳಿರುವ ಪ್ರಮಾಣಗಳನ್ನು ಹಿಡಿದು ಮಾಡುವ ಕೆಲವು ವಿಚಾರಗಳು-ಇವುಗಳನ್ನೆಲ್ಲ ಅಭ್ಯಾಸ ಮಾಡದ ಹೊರತು ಸಪ್ತಭೂಮಿಕೆಗಳನ್ನು ಸಾಧಿಸಿ ತಿಳಿಯುವುದು ಸುಲಭವಲ್ಲ.

**ಶಬ್ದಾರ್ಥ: ಆತ್ಮ+ಅಪರೋಕ್ಷವ**=ಆತ್ಮ ಸಾಕ್ಷಾತ್ಕಾರವನ್ನು; **ಕೆಲವು ಸಾಂಖ್ಯವು**=ಆತ್ಮನಾತ್ಮವಿವೇಕ ಮೊದಲಾದ ಸಾಂಖ್ಯ ಶಾಸ್ತ್ರ ಸಂಬಂಧದ ಕೆಲವು ವಿಚಾರಗಳು; **ಯೋಗಗಳು**=ಮನೋನಿಗ್ರಹ ಮೊದಲಾದ ಯೋಗಶಾಸ್ತ್ರ ಸಂಬಂಧವಾದವು; **ಕೆಲಕೆಲವು ವೇದಾಂತ**=ಸರ್ವಾತ್ಮಭಾವ ಮೊದಲಾದ ವೇದಾಂತ ಶಾಸ್ತ್ರ ಸಂಬಂಧವಾದವು; **ಕೆಲವು ಸಿದ್ಧಾಂತಗಳು**=ನಾದೋತ್ಪತ್ತಿ ಮೊದಲಾದ ಕೆಲವು ಶೈವ ಮೊದಲಾದ ಸಂಪ್ರದಾಯಗಳ ನಿಶ್ಚಿತಾರ್ಥಗಳು; **ಶಾಸ್ತ್ರಪ್ರಮೇಯವು**= ಶಾಸ್ತ್ರದಲ್ಲಿ ಹೇಳಿರುವ ಪ್ರಮಾಣಗಳನ್ನು ಹಿಡಿದುಮಾಡುವ ವಿಚಾರಗಳು; * **ಭೂಮಿಕೆಗಳು**=ಸಪ್ತ ಭೂಮಿಕೆಗಳು (ಏಳು ಬಗೆಯ ಮೆಟ್ಟಿಲುಗಳು); * **ಇರವ**=ಅಸ್ತಿತ್ವವನ್ನು;

---

**ಸಪ್ತಭೂಮಿಕೆಗಳನು ತಿಳಿ ಪರ**
**ವಸ್ತುವನು ಹೊಂದುವೊಡೆ; ಮನಸಿಗೆ**
**ಸ್ವಸ್ಥವಹ ಸೋಪಾನವಾಗಿರ್ಪವನುಕ್ರಮದಿಂದ ।**
**ವಿಸ್ತರಿಸಿ ಪೇಳುವೆನು ಕೇಳೈ;**
**ಹಸ್ತದಾಮಲಕದವೊಲಾತ್ಮನು**
**ನಿಸ್ತರಂಗಚಿದಬ್ಧಿಯವೊಲದರಿಂದ ತೋರುವನು ॥ ॥೫॥**

**ತಾತ್ಪರ್ಯ:** ಅಖಂಡವಸ್ತುವಿನ ಜ್ಞಾನಸಿದ್ಧಿಗೆ ಸಪ್ತಭೂಮಿಕೆಗಳ ಅಭ್ಯಾಸವನ್ನು ತಿಳಿಯಬೇಕು; ಮನಸ್ಸಿಗೆ ನೆಮ್ಮದಿ ತರುವ ಸಾಧನೆಯ ಏಳುಮೆಟ್ಟಿಲುಗಳನ್ನು ಕ್ರಮವಾಗಿ ವಿಸ್ತಾರವಾಗಿ ಹೇಳುತ್ತೇನೆ ಕೇಳು. (ಅಲೆಗಳಿಲ್ಲದಂಥ) ಯಾವ ಭಾಗವು ಪರೋಕ್ಷವಾಗಿ ಕಾಣದೆ ಎಲ್ಲಾ ಭಾಗವೂ ಕಾಣುವ ಜ್ಞಾನ ಅಂಗೈಯೊಳಗಣ ನೆಲ್ಲಿಯ ಕಾಯಂತೆ, ಪ್ರಶಾಂತ ಸಮುದ್ರದಂತೆ ಆತ್ಮ ಸಾಕ್ಷಾತ್ಕಾರವು ಸಪ್ತಭೂಮಿಕೆಗಳ ಸಾಧನೆಯಿಂದ ಆಗುತ್ತದೆ.

**ಶಬ್ದಾರ್ಥ: (ಹಸ್ತದಾಮಲಕದವೊಲು)**=(ಹಸ್ತದ+ಅಮಲಕದವೊಲು) ಯಾವ ಭಾಗವೂ ಪರೋಕ್ಷವಾಗಿ ಉಳಿಯದೆ ಎಲ್ಲಾ ಭಾಗವೂ ಕಾಣುವ ಅಂಗೈಯೊಳಗಣ ನೆಲ್ಲಿಯ ಕಾಯಂತೆ; **ನಿಸ್ತರಂಗ ಚಿದಬ್ಧಿಯವೊಲ್**=(ನಿಸ್ತರಂಗ+ಚಿತ್+ಅಬ್ಧಿಯವೊಲ್) ಅಲೆಗಳಿಲ್ಲದಂಥ ಜ್ಞಾನ ಸಮುದ್ರದಂತೆ; * **ಮನಸ್ಸಿಗೆ ಸ್ವಸ್ಥವಾದ**=ಮನಸ್ಸಿಗೆ ನೆಮ್ಮದಿ ತರುವಂಥ; * **ಸೋಪಾನವಾಗಿರ್ಪವನು**

ಕ್ರಮದಿಂದ=(ಸೋಪಾನವಾಗಿರ್ಪ+ಅನು+ಕ್ರಮದಿಂದ) ಮೆಟ್ಟಿಲುಗಳಾಗಿರುವ ಸಪ್ತ ಭೂಮಿಕೆಗಳನ್ನು ಕ್ರಮವಾಗಿ (ಒಂದಾದ ಮೇಲೆ ಒಂದರಂತೆ).

**ಟಿಪ್ಪಣಿ-೧: * ಸಪ್ತ ಭೂಮಿಕೆಗಳು=೧) ಸುಖೇಚ್ಛೆ; ೨) ಸದಾತ್ಮವಿಚಾರ; ೩) ನಿಸ್ಸಂಗ; ೪) ವಾಸನಾಕ್ಷಯ; ೫) ಆನಂದಿನಿ; ೬) ತುರೀಯ; ೭) ತುರೀಯಾತೀತ;** (ಇವನ್ನು ಮುಂದಿನ ಪದ್ಯದಲ್ಲಿ (೬-೬) ಹೇಳಿದ್ದಾನೆ).

**ಟಿಪ್ಪಣಿ-೨:** ಏಳುಬಗೆಯ ಮೆಟ್ಟಿಲುಗಳನ್ನು ಮಾಡಿರುವ ಪದ್ಧತಿಯು ವೇದಾಂತಿಗಳ ಮೇಲೆ ಆಗಿರುವ ಯೋಗಶಾಸ್ತ್ರದ ಪರಿಣಾಮದ ಸೂಚನೆಯಾಗಿರುವುದು. ಯೋಗಶಾಸ್ತ್ರದವರ ಧ್ಯೇಯವಾದ ಸಮಾಧಿಯು ಹೊಸದಾಗಿ ಪಡೆಯತಕ್ಕದ್ದಾದ್ದರಿಂದ ಅವರಿಗೆ ಅದನ್ನು ಪಡೆಯುವುದಕ್ಕೆ ಮೆಟ್ಟಿಲುಗಳು ಬೇಕಾಗುವುವು. ಅದರಂತೆಯೇ ಅವರು ತಮಗೆ ಬೇಕಾದ ಮೆಟ್ಟಿಲುಗಳನ್ನು ಮಾಡಿಕೊಂಡಿರುವರು. ವೇದಾಂತಿಗಳ ಧ್ಯೇಯವಾದ ಬ್ರಹ್ಮವು ಹೊಸದಾಗಿ ಪಡೆಯತಕ್ಕದ್ದಲ್ಲ. ಇದ್ದುದ್ದನ್ನೇ ಗುರುತಿಸುವುದು; ಇದಕ್ಕೆ ಮೆಟ್ಟಿಲುಗಳು ಬೇಕಿಲ್ಲ. ಆದರೂ ಉಪನಿಷತ್ತುಗಳಲ್ಲಿ ಒಂದೊಂದು ಕಡೆ ಯೋಗಶಾಸ್ತ್ರದ ಮಾತುಗಳ ಛಾಯೆ ಕಾಣುವುದರಿಂದ ಕೆಲವರು ವೇದಾಂತಿಗಳು ಬ್ರಹ್ಮಜ್ಞಾನಕ್ಕೂ ಈ ಭೂಮಿಕೆಗಳನ್ನು ಕಲ್ಪನೆಮಾಡಿದ್ದಾರೆ. ಆದ್ದರಿಂದ ಇದು ವೇದಾಂತದ ನಿಜವಾದ ಪ್ರಕ್ರಿಯೆಗೆ ಸಂಬಂಧಪಟ್ಟಿದ್ದಲ್ಲ. ಈ ಏಳು ಭೂಮಿಕೆಗಳೂ ಯಾವುವು ಎಂಬುದನ್ನು ಮುಂದಿನ ಪದ್ಯದಲ್ಲಿ (೬-೬) ಕವಿಯು ವಿವರಿಸಿದ್ದಾನೆ.

**ಟಿಪ್ಪಣಿ-೩:** ಕವಿ ಮಹಲಿಂಗರಂಗನ ಶಿಷ್ಯರಾದ ಶ್ರೀಶಂಕರಾನಂದರೂ, ಜ್ಞಾನಸಿಂಧುವೆಂಬ ಗ್ರಂಥದ ಕರ್ತರಾದ ಶ್ರೀ ಚಿದಾನಂದಾವಧೂತರೂ, ಶ್ರೀಮನ್ನಿಜಗುಣ ಶಿವಯೋಗಿಗಳೂ ಈ ಏಳನ್ನೇ ಹೇಳಿದ್ದಾರೆ. ಯೋಗವಾಸಿಷ್ಠಕಾರರೂ ಏಳನ್ನೇ ಹೇಳಿದ್ದರೂ ಅವರು ಹೇಳುವ ಸಪ್ತಭೂಮಿಕೆಗಳೇ ಬೇರೆ. ಅವು ಯಾವುವೆಂದರೆ:
**೧) ಶುಭೇಚ್ಛೆ**=ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳಬೇಕೆಂಬ ಇಚ್ಛೆ; **೨) ವಿಚಾರಣ**=ಆತ್ಮ ವಿಚಾರವನ್ನು ಮಾಡುವುದು; **೩) ತನುಮಾನಸ**=ಮನಸ್ಸನ್ನು ವಿಷಯಗಳ ಕಡೆಗೆ ಬಿಡದೆ ಸೊರಗಿಸುವುದು; **೪) ಸತ್ತ್ವಾಪತ್ತಿ**=ಮನಸ್ಸು ಆತ್ಮಸ್ವರೂಪದಲ್ಲಿ ನಿಲ್ಲುವುದು; **೫) ಅಸಂಸಕ್ತಿ**=ಮನಸ್ಸಿಗೆ ಎರಡನೆಯದನ್ನು ಹಚ್ಚಿಕೊಳ್ಳದೆ ಇರುವುದು; **೬) ಪದಾರ್ಥಾಭಾವಿನೀ**=ಹೊರಗಾಗಲೀ ಒಳಗಾಗಲಿ ಯಾವುದೊಂದು ವಿಶೇಷ ಜ್ಞಾನವೂ ಆಗದಿರುವುದು; **ತುರ್ಯಗಾ**=(ಮೂರವಸ್ಥೆಗಳ ಸಾಕ್ಷಿಯಾಗಿ) ನಾಲ್ಕನೆಯದು ಎನಿಸದೆ ತನ್ನ ಸ್ವರೂಪದಲ್ಲಿಯೇ ತಾನು ಸೇರಿಕೊಳ್ಳುವುದು (ಮುಂದಿನ ಪದ್ಯದ (೬-೬)ರ ಟಿಪ್ಪಣಿಯನ್ನು ಇಲ್ಲಿ ಸೇರಿಸಿದೆ-ಸಂಪಾದಕ).

---

## ಭೂಮಿಕೆಗಳ ವಿವರ (೬)

**ಮೊದಲ ಭೂಮಿ ಸುಖೇಚ್ಛೆಯೆರಡನೆ**
**ಯದು ಸದಾತ್ಮವಿಚಾರ, ಮೂರೆನಿ**
**ಪುದು ಕಣಾ ನಿಸ್ಸಂಗ, ನಾಲ್ಕದು ವಾಸನಾಕ್ಷಯವು, ।**
**ಒದವಿದಾನಂದಿನಿಯೆ ಐದನೆ**
**ಯದು, ತುರಿಯವಾರನೆಯದದರಿಂ**
**ತುದಿಯ ತುರಿಯಾತೀತವೇ ಏಳನೆಯ ಭೂಮಿಕೆಯು ॥ ॥೬॥**

**ತಾತ್ಪರ್ಯ:** ಸಪ್ತಭೂಮಿಕೆಗಳು ಯಾವುವು ಎಂಬುದನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ. ಮೊದಲನೆಯ ಭೂಮಿಕೆ **ಸುಖೇಚ್ಛೆ**; ಎಂದರೆ ಈ ಲೋಕದ ಮತ್ತು ಪರಲೋಕದ ವಿಷಯಸುಖವನ್ನು ತುಚ್ಛವಾಗಿ ತಿಳಿದು ಸಹಜಾನಂದವನ್ನು ಬಯಸುವುದು. ಎರಡನೆಯ ಭೂಮಿಕೆ **ಸದಾತ್ಮವಿಚಾರ** ಎಂದರೆ ತಾನು ಯಾರು? ತಾನು ಸಂಸಾರದಲ್ಲಿ ಬಿದ್ದುದ್ದು ಹೇಗೆ? ಎಂದು ವಿಚಾರಪರನಾಗಿ ಗುರುಗಳನ್ನು ಸೇರಿ ಜೀವೇಶ್ವರರ ಸ್ವರೂಪವನ್ನು ತಿಳಿಯುವುದು. ಮೂರನೆಯ ಭೂಮಿಕೆ ಎಂದರೆ **ನಿಸ್ಸಂಗ**; ವಿಷಯಗಳ ನೆನಪನ್ನು ಮನಸ್ಸಿಗೆ ತಂದುಕೊಳ್ಳದೆ ವಿಷಯಾಸಕ್ತರೊಡನೆ ಬೆರೆಯದೆ ಕರ್ಮದಸೋಂಕು ದೇಹೇಂದ್ರಿಯಗಳಿಗೇ ಹೊರತು ತನಗಲ್ಲವೆಂದು ನಿಶ್ಚಯಿಸುವುದು. ನಾಲ್ಕನೆಯ ಭೂಮಿಕೆಯ **ವಾಸನಾಕ್ಷಯ**; ಕಾಣುವುದೆಲ್ಲ ಸತ್ಯವೆಂದು ಭ್ರಮಿಸದೆ ತ್ರಿವಿಧವಾಸನೆಗಳನು ಬಿಟ್ಟು ಕಿಲುಬನ್ನೆಲ್ಲ ತಿಕ್ಕಿ ತೊಳೆದ ಕನ್ನಡಿಯಂತೆ ಇರುವುದು. ಐದನೆಯ ಭೂಮಿಕೆ **ಆನಂದಿನಿ**; ಮನಸ್ಸು, ಆತ್ಮ ಸ್ವರೂಪದಲ್ಲಿ ಮುಳುಗಿ ಸಹಜಾನಂದವನ್ನು ಅನುಭವಿಸುವ ಯೋಗನಿದ್ರಾಸ್ಥಿತಿ. ಆರನೆಯ ಭೂಮಿಕೆ **ತುರ್ಯಾವಸ್ಥೆ** ಕೇವಲ ಸ್ವಭಾವಸ್ಥಿತಿಯಲ್ಲಿರುವುದು. ಏಳನೆಯ ಭೂಮಿಕೆ ಎಂದರೆ **ತುರ್ಯಾತೀತ**, ವಿದೇಹ ಮುಕ್ತಿಯಂಥ ಸ್ಥಿತಿ.

**ಟಿಪ್ಪಣಿ-೧:** ಸಪ್ತ ಭೂಮಿಕೆಗಳ ಬಗ್ಗೆ ಈ ಕವಿ ತಾನೇ ಮುಂದಿನ ಪದ್ಯದಿಂದ (೬-೭ರಿಂದ) ೪೦ನೇ ಪದ್ಯದವರೆಗೆ ವಿವರಿಸುತ್ತಾನೆ.

**ಟಿಪ್ಪಣಿ-೨:** ಸಪ್ತ ಭೂಮಿಕೆಗಳ ಬಗ್ಗೆ ಇತರರು ಪ್ರಸ್ತಾಪಿಸಿರುವ ವಿಚಾರವನ್ನು ಹಿಂದಿನ ಪದ್ಯದ ಟಿಪ್ಪಣಿಯಲ್ಲಿ ಸೇರಿಸಿದೆ (ಅನುವಾದಕ)

**ಟಿಪ್ಪಣಿ-೩:** ಸಪ್ತ ಭೂಮಿಕೆಗಳ ಬಗ್ಗೆ ೬ನೇ ಅಧ್ಯಾಯದ ಸಾರಾಂಶದಲ್ಲಿ ಹೊ.ಚಿ. ಅವರು ವಿವರಿಸಿರುವುದನ್ನು ಇಲ್ಲಿ ತಾತ್ಪರ್ಯದಲ್ಲಿ ಅಡಕವಾಗಿದೆ.

---

## ಸುಖೇಚ್ಛೆ (೭-೧೦)

**ಹಿಂದೆಮಾಡಿದ ಸುಕೃತಫಲ ತನ**
**ಗಿಂದು ಬಂದೊದಗಿದರೆ ನರನದ**
**ರಿಂದ ಪರಮವಿವೇಕವೈರಾಗ್ಯವನ್ನು ನೆರೆ ಪಡೆಯೆ ।**
**ಒಂದರಲ್ಲಿಯು ಸುಖದ ರುಚಿ ತನ**
**ಗೊಂದುಬಾರಿಯು ತೋರದಿಹುದದ**
**ರಿಂದ ಮನದಲಿ ನೊಂದು ಸುಖದಿಚ್ಛೆಯನು ಮಾಡುವನು ॥ ॥೭॥**

**ತಾತ್ಪರ್ಯ:** ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯದ ಫಲಗಳು ಈ ಜನ್ಮದಲ್ಲಿ ಲಭ್ಯವಾದಾಗ ಅದರಿಂದ ಮಾನವನು ಪರಮ ವಿವೇಕವನ್ನೂ, ವೈರಾಗ್ಯವನ್ನೂ ಪಡೆಯುತ್ತಾನೆ. ಆದರೆ ಈ ಜನ್ಮದ ಯಾವುದೇ ಹೊರಗಣವಿಷಯಗಳಲ್ಲಿ

ಒಮ್ಮೆಯಾದರೂ ಆತ್ಮಾನಂದವು ದೊರಕದಿದ್ದಕ್ಕೆ ಮನಸ್ಸಿನಲ್ಲಿ ದುಃಖಿಸಿ ಶಾಶ್ವತಸುಖಕ್ಕಾಗಿ ಹಂಬಲಿಸುತ್ತಾನೆ. ಇದೇ ಸುಖೇಚ್ಛೆಯೆಂಬ ಮೊದಲಭೂಮಿಕೆ.

**ಶಬ್ದಾರ್ಥ:** * ಹಿಂದೆ ಮಾಡಿದ ಸುಕೃತ=ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯಫಲ; * ತನಗಿಂದು ಬಂದುಒದಗಿದರೆ=ಈ ಜನ್ಮದಲ್ಲಿ ಲಭ್ಯವಾದಾಗ; ಒಂದರಲ್ಲಿಯು=ಹೊರಗಣ ಯಾವ ವಿಷಯದಲ್ಲಿಯೂ; ಸುಖದರುಚಿ=ಆತ್ಮಾನಂದ; ಸುಖದಿಚ್ಛೆ=ಶಾಶ್ವತ ಸುಖದಿಚ್ಛೆ;

---

**ಮಡದಿ, ಮನೆ, ಮನೆವಾರ್ತೆ, ಮಕ್ಕಳೊ**
**ಳೊಡವೆವಸ್ತುಗಳಲ್ಲಿ ಬಿಡದೇ**
**ತೊಡರಿಕೊಂಡಿಹ ಮನವ ಮೆಲ್ಲನೆ ಸಡಿಲಿಸುತ್ತೊಡನೆ ।**
**ದೃಢವಿರಕ್ತಿಯ ಮಾಡಿ, ದುಃಖವ**
**ಕೊಡಹಿ, ಲೇಸಿನ ಬಟ್ಟೆಯೊಳು ಮುಂ**
**ದಡಿಯಿಡುತ ಹಾರೈಸುತಿಹನವ ಮೋಕ್ಷವನು ಬಯಸಿ ॥ ॥೮॥**

**ತಾತ್ಪರ್ಯ:** ಹೆಂಡತಿ ಮನೆ (ಗೃಹಕೃತ್ಯ) ಮಕ್ಕಳು, ಒಡವೆ ವಸ್ತುಗಳು ಇವುಗಳಲ್ಲಿ ಸದಾ ಆಸಕ್ತವಾಗಿರುವ ಮನಸ್ಸನ್ನು ಸ್ವಲ್ಪಸ್ವಲ್ಪವಾಗಿ ಅವುಗಳಿಂದ ಬಿಡಿಸಿಕೊಳ್ಳುತ್ತ ದೃಢವೈರಾಗ್ಯ ಹೊಂದಿ ದುಃಖವನ್ನು ದೂರಮಾಡಿ ಪುಣ್ಯದದಾರಿಯಲ್ಲಿ, ಮುಂದುವರಿಯುತ್ತಾ ಮೋಕ್ಷವನ್ನು ಬಯಸುತ್ತಾ ಇರುವುದೇ ಸುಖೇಚ್ಛೆಯಾಗಿದೆ.

**ಶಬ್ದಾರ್ಥ:** ಮನೆವಾರ್ತೆ=ಗೃಹಕೃತ್ಯ; ಬಿಡದೇ ತೊಡರಿಕೊಂಡಿಹ=ಸದಾ ಅವುಗಳಲ್ಲಿ ಆಸಕ್ತವಾಗಿರುವ; ಮೆಲ್ಲನೆ ಸಡಲಿಸುತ್ತ ಒಡನೆ=ಸ್ವಲ್ಪಸ್ವಲ್ಪವಾಗಿ ಅವುಗಳ ಮೋಹದಿಂದ ದೂರವಾಗುತ್ತಾ; ದುಃಖಕೊಡಹಿ=ದುಃಖವನ್ನು ದೂರಮಾಡಿ; ಲೇಸಿನಬಟ್ಟೆಯೊಳು=ಪುಣ್ಯದ ಮಾರ್ಗದಲ್ಲಿ; ಮುಂದಡಿಯಿಡುತ=ಮುಂದುವರಿಯುತ್ತ; ಮೋಕ್ಷವನು ಬಯಸಿ=ಸುಖೇಚ್ಛೆಯಾಗಿಸಿ;

---

**ಯೋಗಸಿದ್ಧಿಯ ಬಯಸ; ದಿವಿಜರ**
**ಭೋಗವನು ತಾನೊಲ್ಲ; ಸಕಲವ**
**ದಾಗಿ ಕೆಡುವದಿದೆಂದು ನಿಸ್ಪೃಹನಾಗಿ ನಿಮಿಷದಲಿ ।**
**ಮೇಗೆ ತನಗಿನ್ನಾವುದೋ ಗತಿ!**
**ಶ್ರೀಗುರುವಿನುಪದೇಶ ತನಗದು**
**ಹೇಗಹುದೊ! ಎಂಬನು ಸುಖೇಚ್ಛೆಯ ಯೋಗಿಯೆನಿಸುವನು ॥ ॥೯॥**

**ತಾತ್ಪರ್ಯ:** ಸುಖೇಚ್ಛೆಯೆಂಬ ಮೊದಲ ಭೂಮಿಕೆಯ ಸಾಧಕನಾಗುವವನು, ಯೋಗಸಿದ್ಧಿಯನ್ನು ಬಯಸುವುದಿಲ್ಲ, ದೇವತೆಗಳು ಅನುಭವಿಸುವ ಸುಖಗಳನ್ನು ತಾನಾಗಿ ಬಂದರೂ ಬಯಸುವುದಿಲ್ಲ, ಸಮಸ್ತ ಭೋಗಗಳು ನಶ್ವರವಾದುದರಿಂದ ತಾವಾಗಿಯೇ ನಾಶವಾಗುವುದೆಂದು ತಿಳಿಯುತ್ತಾ ಅವು ಯಾವುದನ್ನೂ ಬಯಸದೆ ಮುಂದೆ ತನಗೆ ಎಂಥ ಗತಿಯು ಬರುವುದೋ, ಯಾವ ಸದ್ಗುರುವಿನ ಅನುಗ್ರಹ

ತನಗೆ ಹೇಗಾಗುವುದೋ ಎಂಬ ಚಿಂತೆಯಲ್ಲಿರುವವನೇ ಸುಖೇಚ್ಛೆಯನ್ನು ಬಯಸುವ ಯೋಗಿಯೆನಿಸುವನು.

**ಶಬ್ದಾರ್ಥ:** * **ಯೋಗಸಿದ್ಧಿಯ**=ಅಷ್ಟಾಂಗ ಯೋಗಗಳ ಸಿದ್ಧಿಯನ್ನು; **ಬಯಸ**=ಅಪೇಕ್ಷಿಸುವುದಿಲ್ಲ; * **ದಿವಿಜರ ಭೋಗವನು**=ದೇವತೆಗಳು ಅನುಭವಿಸುವ ಸುಖಗಳನ್ನು; * **ತಾನೊಲ್ಲ**=ತಾನಾಗಿ ಬಯಸುವುದಿಲ್ಲ; * **ಸಕಲವೂ ಅದಾಗಿ ಕೆಡವುದು**=ಆ ಸುಖಗಳೆಲ್ಲ ನಶ್ವರವಾದ್ದರಿಂದ ತಾನಾಗಿಯೇ ನಾಶವಾಗುವುವು; **ನಿಸ್ಪೃಹನಾಗಿ**=ಯಾವುದನ್ನೂ ಬಯಸದೆ; **ಮೇಗೆ**=ಮುಂದೆ, ಭವಿಷ್ಯದಲ್ಲಿ; **ಶ್ರೀಗುರುವಿನ ಉಪದೇಶ**=ಸದ್ಗುರುವಿನ ಅನುಗ್ರಹ; * **ಅದು ಹೇಗಹುದೊ**=ಹೇಗೆ ಲಭ್ಯವಾಗುತ್ತದೋ; * **ಎಂಬನು**=ಎಂದು ಬಯಸುವವನು;

---

**ಪುಣ್ಯವನು ಮಾಡುವನು; ಪಾಪವ**
**ಮುನ್ನಲೇ ವರ್ಜಿಸುವ; ದುಃಖವ**
**ನನ್ಯರಿಂಗಾಚರಿಸ; ತನ್ನಂತೆಲ್ಲರನು ಬಗೆವ; ।**
**ಉನ್ನತಾಶೆಯ ಬಿಡುವ; ದೇಹವ**
**ಮನ್ನಿಸನು ಮಿಗೆ; ಸತ್ಯಪ್ರಿಯಸಂ**
**ಪನ್ನವಚನವ ನುಡಿವ ಪ್ರಥಮದ ಭೂಮಿಕೆಯನೈದಿ ॥ ॥೧೦॥**

**ತಾತ್ಪರ್ಯ:** ಮೊದಲ ಸೋಪಾನವಾದ ಸುಖೇಚ್ಛೆಯನ್ನು ಸಾಧನೆ ಮಾಡುವ ಯೋಗಿಯ ಲಕ್ಷಣಗಳನ್ನು ಕವಿ ಇಲ್ಲಿ ಹೇಳಿದ್ದಾನೆ. ಆತ ಪುಣ್ಯಕಾರ್ಯಗಳನ್ನೇ ಮಾಡುತ್ತಾನೆ; ಪುಣ್ಯಕಾರ್ಯಗಳ ಕಡೆ ಮನಸ್ಸುಹಾಕುವುದಕ್ಕೆ ಮೊದಲೇ ಪಾಪಕಾರ್ಯಗಳಿಂದ ದೂರನಾಗುವನು; ಅನ್ಯರಿಗೆ ದುಃಖವುಂಟುಮಾಡುವ ಪಾಪಕಾರ್ಯಗಳನ್ನು ಮಾಡುವುದಿಲ್ಲ; ಎಲ್ಲರನ್ನೂ ತನ್ನಂತೆಯೇ ಭಾವಿಸುತ್ತಾನೆ; ಅತ್ಯಾಸೆಯನ್ನು ತೊರೆದಿರುತ್ತಾನೆ; ದೇಹಾಭಿಮಾನವನ್ನು ಅತಿಯಾಗಿ ಪರಿಗಣಿಸುವುದಿಲ್ಲ; ಸದಾ ಸತ್ಯವಾಕ್ಕನ್ನೂ, ಪ್ರಿಯವಾದ ಮಾತುಗಳನ್ನು ಆಡುವ ಗುಣವುಳ್ಳವನಾಗಿರುತ್ತಾನೆ. ಈ ಬಗೆಯ ಗುಣಗಳಿಂದ ಪ್ರಥಮಭೂಮಿಕೆಯಾದ ಸುಖೇಚ್ಛೆಯನ್ನು ಸಾಧಿಸುವ ಸಾಧಕನಾಗಿರುತ್ತಾನೆ.

**ಶಬ್ದಾರ್ಥ:** **ಪಾಪವವ ಮುನ್ನಲೇ ವರ್ಜಿಸುವ**=ಪುಣ್ಯ ಕರ್ಮದ ಕಡೆಗೆ ಮನಸ್ಸನ್ನು ಹಾಕುವುದಕ್ಕೆ ಮೊದಲೇ ಪಾಪಕಾರ್ಯಗಳಿಂದ ದೂರನಾಗುತ್ತಾನೆ; * **ಉನ್ನತಾಸೆಯ**=ಅತ್ಯಾಸೆಯನ್ನು ದುರಾಸೆಯನ್ನು; **ದೇಹವ ಮಿಗೆ ಮನ್ನಿಸನು**=ದೇಹದ ಮೋದವನ್ನು ಅತಿಯಾಗಿ ಪರಿಗಣಿಸುವುದಿಲ್ಲ; **ಸತ್ಯಪ್ರಿಯಸಂಪನ್ನ**=ಸತ್ಯವಾದ ಮತ್ತು ಪ್ರಿಯವೆಂಬ ಮಾತಿನ ಸಂಪತ್ತಿನಿಂದ ಕೂಡಿದವನು.

**ಟಿಪ್ಪಣಿ:** **ಸತ್ಯಪ್ರಿಯಸಂಪನ್ನ ವಚನವ ನುಡಿವ**=ಸತ್ಯವೂ ಪ್ರಿಯವೂ ಆದ ಮಾತುಗಳನ್ನು ಸಾಧಕನು ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಂ ಅಪ್ರಿಯಂ । ಪ್ರಿಯಾಂಚನಾನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ ॥ ಎಂಬ ಸ್ಮೃತಿ ವಾಕ್ಯ ಆಧಾರವಾಗಿದೆ.

---

## ಆತ್ಮವಿಚಾರ (೧೧-೧೬)

ತಾನದಾರೋ? ತನುವಿನೊಳು ತಾ
ನೇನು ರೂಪಿನೊಳಿಹೆನೊ? ತನಗಿ
ನ್ನೇನುಕಾರಣ ಬಂದುದೀ ಸಂಸಾರಸುಖದುಃಖ? ।
ಈ ನಿಬಿಡದಜ್ಞಾನ ತನಗಿ
ನ್ನೇನುವಿಧದಲಿ ಕೆಡುವುದೋ? ತ
ನ್ನೀ ನಿಜವನೆಂತರಿವೆನೆಂದು ವಿಚಾರಿಸುವನೊಳಗೆ ॥ ॥೧೧॥

**ತಾತ್ಪರ್ಯ:** ನಾನು ಯಾರು? ಈ ಶರೀರದಲ್ಲಿ ನಾನು ಯಾವ ರೂಪದಿಂದ ಇರುವೆನು? ನನಗೆ ಯಾವ ಕಾರಣದಿಂದ ಈ ಸಂಸಾರದಿಂದ ಸುಖದುಃಖಗಳು ಬಂದಿವೆ? ಈ ದಟ್ಟವಾದ ಅಜ್ಞಾನವು ನನಗೆ ಇನ್ನು ಯಾವ ಯಾವ ರೀತಿಯಲ್ಲಿ ನನ್ನನ್ನು ಭಾಧಿಸುತ್ತದೆ? ನನ್ನ ನಿಜ ಸ್ವರೂಪವನ್ನು ಹೇಗೆ ತಿಳಿದುಕೊಳ್ಳುವೆನು? ಈ ರೀತಿಯಾಗಿ ತನ್ನಲ್ಲಿ ತಾನು ಸದಾತ್ಮವಿಚಾರದ ಸಾಧನೆ ಮಾಡುವುದು ಎರಡನೆಯ ಭೂಮಿಕೆ ಆಗಿದೆ.

**ಶಬ್ದಾರ್ಥ:** * ತನುವಿನೊಳು=ಈ ಶರೀರದಲ್ಲಿ; ಏನುರೂಪಿನೊಳು=ಯಾವ ರೂಪದಲ್ಲಿ; ನಿಬಿಡದ=ದಟ್ಟವಾದ; ಅಜ್ಞಾನ=ಅಹಂಕಾರ; ಇನ್ನೇನು ವಿಧದಲಿ=ಬೇರೆಯಾವ ವಿಧದಲಿ; ವಿಚಾರಿಸುವನು=ಸದಾತ್ಮವಿಚಾರವೆಂಬ ಎರಡನೆಯ ಭೂಮಿಕೆಯ ಸಾಧನವನ್ನು ನಡೆಸುವನು.

---

ನಾನು ನಾನೆಂದೆಂಬ ಹಮ್ಮಿದು
ತಾನದೇನೋ? ತನಗೆ ತಾನಿ
ನ್ನೇನುಕಾರಣ ಮರೆಯೊಳುಳಿದೆನೊ ತನ್ನನರಿವಲ್ಲಿ? ।
ತಾನು ತೋರುತ ತೋರದಿರುತಿಹು
ದೇನು ಬೆಡಗಿಂತೆನ್ನ ಮರವೆಯ
ದೇನೆನುತ ತನ್ನೊಳಗೆ ತಿಳಿಯೆ ವಿಚಾರವೆನಿಸುವದು ॥ ॥೧೨॥

**ತಾತ್ಪರ್ಯ:** ನಾನು ನಾನು ಎನ್ನುವುದೇ ಅಹಂಕಾರವು; ಇದು ಹೇಗೆ ಉಂಟಾಯಿತು? ಸದಾತ್ಮವಿಚಾರ ಮಾಡುವಲ್ಲಿ ನನ್ನನ್ನು ನಾನು ತಿಳಿಯಲಾರದವನಾದೆನೊ? ನನ್ನ ಸುಜ್ಞಾನವೆಲ್ಲಿ ಹೋಯಿತು, ನಾನು ಯಾರೆಂಬುದು ಸ್ಥೂಲವಾಗಿ ತೋರಿದರೂ ನಿಜವು ಮಾತ್ರ ತಿಳಿಯದಾಗಿದೆ. ಇದೇನು ಅಚ್ಚರಿ! ಈ ರೀತಿ ನನ್ನನ್ನು ಆವರಿಸಿದ ಅಜ್ಞಾನ ಯಾವ ರೀತಿಯದು? ಎಂಬುದಾಗಿ ತನ್ನಲ್ಲಿ ತಾನು ವಿಚಾರಮಾಡುವುದೇ ಎರಡನೇ ಭೂಮಿಕೆಯಾದ ಸದಾತ್ಮ ವಿಚಾರವೆನಿಸುವುದು.

**ಶಬ್ದಾರ್ಥ:** ನಾನು=ತಾನು, ಹಮ್ಮು=ಅಹಂಕಾರ; ಮರೆಯೊಳುಳಿದೆನೊ=ನನ್ನ ನಿಜವನ್ನು ನಾನು ಅರಿಯಲಾರದವನಾದೆನೊ; ತಾನುತೋರುತತೋರದಿರುತಿಹದು=ನಾನು ನಾನೆಂಬ ಸಾಮಾನ್ಯ

ಜ್ಞಾನವು ತೋರಿದರೂ ಅದರ ಸ್ವರೂಪ ಜ್ಞಾನವು ತೋರದೆ ಇರುತಿಹುದು; * ಬೆಡಗು=ಆಶ್ಚರ್ಯ; * ಮರೆವೆ=ಅಜ್ಞಾನ;

---

**ವಿರತಿಸುಖವನು ಬಲ್ಲ; ವೇದದ**
**ಪರಮಸಾರವನರಿವ; ದೇಹದ**
**ಬರಿಯ ಹಮ್ಮನು ಬಿಡುವನಾತ್ಮವಿಚಾರವನು ಪಡೆವ; ।**
**ಹಿರಿಯರನು ಸೇವಿಸುವನವರಿಂ**
**ದರಿವನಾತ್ಮಹಿತಾಹಿತವ; ಸಂ**
**ಸರಣದುಃಖವ ಪರಿಹರಿಸಿ ಗುರುಪದವ ಸಾರುವನು ॥ ॥೧೩॥**

**ತಾತ್ಪರ್ಯ:** ಸದಾತ್ಮವಿಚಾರಿಯಾದವನು, ವೈರಾಗ್ಯದ ಸುಖವೇನೆಂದು ತಿಳಿಯ ಬಲ್ಲನು; ವೇದಾಂತದ ಸಾರಸರ್ವಸ್ವವನ್ನು ತಿಳಿದುಕೊಂಡು ದೇಹಾಭಿಮಾನವನ್ನು, ಅಹಂಕಾರವನ್ನು ಬಿಟ್ಟು ಬಿಡುವನು; ಸದಾ ಆತ್ಮಚಿಂತನೆಯಲ್ಲಿ ನಿರತನಾಗಿರುವನು; ಜ್ಞಾನಿಗಳಾದ ಗುರುಹಿರಿಯರ ಸೇವೆ ಮಾಡುತ್ತಿರುವನು; ಅವರ ಸುಬೋಧಗಳಿಂದ ತನಗೆ ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎಂಬುದನ್ನು ತಿಳಿಯುವನಲ್ಲ; ಇಹಲೋಕಕ್ಕೂ ಪರಲೋಕಕ್ಕೂ ಅಲೆದಾಡುವ ಕಷ್ಟವನ್ನು ಅರಿಯುವನು; ಸಂಸಾರದ ಜನ್ಮಾಂತರಗಳ ಬವಣೆಯನ್ನು ಹೋಗಲಾಡಿಸಿಕೊಂಡು ಗುರುಪಾದದಲ್ಲಿ ಐಕ್ಯನಾಗುವನು.

**ಶಬ್ದಾರ್ಥ:** * **ವಿರತಿಸುಖ**=ವೈರಾಗ್ಯ ಸುಖ; * **ದೇಹದ ಬರಿಯ ಹಮ್ಮನು**=ದೇಹಾಭಿಮಾನವನ್ನು; * **ಹಿರಿಯರ ಸೇವಿಸುವನು**=ಗುರುಹಿರಿಯರ ಸೇವೆಯಲ್ಲಿ ನಿರತನಾಗಿರುತ್ತಾನೆ; * **ಸಂಸರಣ ದುಃಖವ**=ಸಂಸಾರದ ಜನ್ಮಾಂತರಗಳ ಬವಣೆಯನ್ನು, ಇಹಲೋಕಕ್ಕೂ, ಪರಲೋಕಕ್ಕೂ ಸುತ್ತುವ ಕಷ್ಟವನ್ನು * **ಗುರುಪದವಸಾರುವನು**=ಗುರುಪಾದವ ಸೇರುವನು; **ಆತ್ಮಹಿತಾಹಿತವ**=ತನಗೆ ಒಳ್ಳೆಯದಾಗುವುದನ್ನೂ, ಕೆಟ್ಟದಾಗುವುದನ್ನೂ.

---

**ಪರಮಕರುಣಾಶರಧಿಯೆನಿಸುವ**
**ಗುರುವರನ ಶಿಕ್ಷೆಯಲಿ ಮನಸಿನ**
**ಪರಿಪರಿಯ ನೆನಹೆಂಬ ಕರ್ಕಶಕದಡು ನೆರೆ ತಿಳಿಯೆ ।**
**ಹಿರಿದು ಶಾಂತಿಯನೈದಿ, ಪಳುಕಿನ**
**ತೆರದಿ ನಿರ್ಮಲವಾದ ಬುದ್ಧಿಯ**
**ತಿರುಳಿನಲಿ ನಿಜಸುಖವ ತಿಳಿವ ವಿಚಾರಪರನಾಗಿ ॥ ॥೧೪॥**

**ತಾತ್ಪರ್ಯ:** ಪರಮದಯಾಸಮುದ್ರನೆನಿಸಿದ ಗುರುಶ್ರೇಷ್ಠನ ಉಪದೇಶದಿಂದ, ಎಷ್ಟೇ ಪ್ರಯತ್ನಮಾಡಿದರೂ ಮನಸ್ಸಿನ ಬಗೆಬಗೆಯ ಕಲ್ಪನೆಗಳ ಹಿಮ್ಮೆಟ್ಟುವುದಿಲ್ಲ. ಆದ್ದರಿಂದ ಆ ಕಲ್ಪನೆಗಳೆಂಬ ನೆನಪುಗಳ ಕಠಿಣದೋಷಗಳೆಂಬ ಬಲವಾದ ಹೊಲಸನ್ನು ಚೆನ್ನಾಗಿ ತಿಳಿದು ದೂರಮಾಡಿ ಪರಮಶಾಂತಿಯನ್ನು ಗಳಿಸಿ ಸ್ಫಟಿಕದ ಹರಳಿನಂತೆ

ನಿರ್ಮಲಚಿತ್ತಸಾರವನ್ನು ತಿಳಿದು ವಿಚಾರವಂತನಾಗಿ ನಿತ್ಯಸುಖ ಯಾವುದೆಂಬುದನ್ನು ತಿಳಿಯುತ್ತಾನೆ.

**ಶಬ್ದಾರ್ಥ:** * **ಪರಮಕರುಣಾಶರಧಿ**=ಶ್ರೇಷ್ಠ ದಯಾಸಮುದ್ರ; * **ಶಿಕ್ಷೆಯಲಿ**=ಉಪದೇಶದಿಂದ; **ಪಳುಕಿನ**=ಸ್ಫಟಿಕ; **ನಿಜ ಸುಖ**=ನಿತ್ಯ ಸುಖ=ಮೋಕ್ಷ;

**ಟಿಪ್ಪಣಿ:** **ಕರ್ಕಶಕದಡು**=ಬಲವಾದ ಹೊಲಸು (ಎಷ್ಟೇ ಪ್ರಯತ್ನ ಮಾಡಿದರೂ ಮನಸ್ಸಿನ ಬಗೆ ಬಗೆಯ ಕಲ್ಪನೆಗಳು ಹಿಮ್ಮೆಟ್ಟುವುದಿಲ್ಲ. ಆದ್ದರಿಂದ ಆ ಕಲ್ಪನೆಗಳೆಂಬ ದೋಷವನ್ನು ಕವಿಯು ಕರ್ಕಶವೆಂದು ಕರೆದಿದ್ದಾನೆ.)

---

**ಜೀವಪರಮರ ಲಕ್ಷಣವ, ಮಾ**
**ಯಾವರಣದಿಂದಾದ ಮರವೆಯ,**
**ಭಾವಿಸುತ ವಾಚ್ಯಾರ್ಥಲಕ್ಷ್ಯಾರ್ಥಗಳ ವಿವರಣೆಯ, ।**
**ತೀವಿ ಲಕ್ಷಣೆಯಿಂದ ವಾಕ್ಯವ,**
**ಕೇವಲಾಖಂಡಾದ್ವಯಾತ್ಮನ**
**ಸಾವಧಾನದಿ ತಿಳಿದೊಡಾತ್ಮವಿಚಾರವೆನಿಸುವುದು ॥** ॥೧೫॥

**ತಾತ್ಪರ್ಯ:** ಜೀವಾತ್ಮ ಪರಮಾತ್ಮರ ಲಕ್ಷಣವನ್ನು, ಮಾಯಾಭಾವನೆ ಆವರಿಸಿ ಆತ್ಮಸ್ವರೂಪದ ಬಗ್ಗೆ ಆಗಿರುವ ವಿಸ್ಮೃತಿಯನ್ನು ತತ್ತ್ವಮಸಿ ಮಹಾವಾಕ್ಯದ ವಾಚ್ಯಾರ್ಥ, ಲಕ್ಷ್ಯಾರ್ಥಗಳ ವಿವರಣೆಯಿಂದ ಲಕ್ಷಣವನ್ನು ತಿಳಿಯುತ್ತಾ ಶುದ್ಧ ಸ್ವರೂಪದ (ಕೇವಲ) ಅಖಂಡವೂ ಅದ್ವಯವೂ ಆದ ಆತ್ಮನನ್ನು ದೃಢಮನಸ್ಸಿನಿಂದ ಸಾವಧಾನವಾಗಿ ತಿಳಿಯುವುದೇ ಆತ್ಮವಿಚಾರವೆಂಬ ಭೂಮಿಕೆ ಆಗಿರುವುದು.

**ಶಬ್ದಾರ್ಥ:** * **ಜೀವ ಪರಮರ**=ಜೀವಾತ್ಮ ಪರಮಾತ್ಮರ; * **ಮಾಯಾವರಣ**=ಮುಸುಕು; * **ಮರವೆ**=ವಿಸ್ಮೃತಿ; * **ವಾಕ್ಯ**=ತತ್ತ್ವಮಸಿ ಎಂಬ ಮಹಾವಾಕ್ಯ; * **ಕೇವಲ**=ಶುದ್ಧ ಸ್ವರೂಪದ; **ತೀವಿ ಲಕ್ಷಣೆಯಿಂದ ವಾಕ್ಯವ**=ವಾಕ್ಯವನ್ನು ಲಕ್ಷಣೆಯಿಂದ ತೀವಿ ಎಂದು ಅನ್ವಯವು ಎಂದರೆ ವಾಕ್ಯಕ್ಕೆಲ್ಲ ಲಕ್ಷ್ಯಾರ್ಥವನ್ನು ಮಾಡಬೇಕೆಂದು ತಾತ್ಪರ್ಯ. **ಆವರಣ**=ಆತ್ಮ ಸ್ವರೂಪವು ಕಾಣಬರದಂತೆ ಮುಚ್ಚಿಕೊಂಡ ಮುಸುಕು.

**ಟಿಪ್ಪಣಿ–೧:** * **ವಾಚ್ಯಾರ್ಥ**– ಈ ಶಬ್ದಕ್ಕೆ ಇದು ಅರ್ಥವೆಂದು ಶಬ್ದಕ್ಕೆ ಲೋಕರೂಢಿಯಾದ ಸಂಕೇತವೊಂದಿರುತ್ತದೆ. ಹೀಗೆ ಸಂಕೇತ ಬಲದಿಂದ ಒಂದು ಶಬ್ದವನ್ನು ಕೇಳಿದ ಕೂಡಲೇ ತಿಳಿಯುವ ಅರ್ಥಕ್ಕೆ ವಾಚ್ಯಾರ್ಥವೆಂದು ಹೆಸರು. ಈ ಶಬ್ದವೃತ್ತಿಗೆ ಅಭಿಧಾವೃತ್ತಿಯೆಂದು ಹೆಸರು (ಭಾಕಾಮಿ ಪುಟ ೪೯)

**ಟಿಪ್ಪಣಿ–೨:** * **ಲಕ್ಷ್ಯಾರ್ಥ**– ಒಂದೊಂದುಕಡೆ ಶಬ್ದದ ವಾಚ್ಯಾರ್ಥವು ಸನ್ನಿವೇಶಕ್ಕೆ ಹೊಂದದಿದ್ದಲ್ಲಿ ಹೊಂದಿಕೆ ಆಗುವಂತೆ ಅದನ್ನು ಸರಿಪಡಿಸಿ ಅರ್ಥಕೊಡುವುದೇ ಲಕ್ಷಣಾ ವೃತ್ತಿ. ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದು ಹೆಸರು.

---

**ಈ ವಿವೇಕ ವಿಚಾರ ನೆಲೆಗೊಳ**
**ಲಾವರಣವಳಿದಾತ್ಮವಸ್ತುವ**
**ಭಾವಿಸುತಲದರರಿವಿಗೊಲಿದಾಸೆಯನು ಮಾಡುತ್ತ ।**
**ತೀವಿದೀ ಜ್ಞಾತೃತ್ವವೆಡೆಗೊಂ**
**ಡಾವಗಲು ನಿಸ್ಸಂಗಿಯಾಗೆ ಸು**
**ಖಾವಬೋಧವು ತೋರುತಿಹುದೆರಡನೆಯ ಭೂಮಿಯಲಿ ॥೧೬॥**

**ತಾತ್ಪರ್ಯ:** ಆತ್ಮಸ್ವರೂಪದ ವಿವೇಚನೆ ಮಾಡಿದಾಗ ಆತ್ಮನನ್ನು ಆವರಿಸಿದ ಮಾಯೆಯೆಂಬ ಮುಸುಕು ನಾಶವಾಗುತ್ತದೆ. ಆತ್ಮವಸ್ತುವನ್ನು ಕಾಣಬೇಕೆಂಬ ಹಂಬಲ ನೆಲೆಗೊಳಿಸುತ್ತದೆ; ಆಗ ಆತ್ಮ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸುತ್ತಾ ಸದಾ ಜ್ಞಾತೃತ್ವ ಉಂಟಾಗಿ ನಿಸ್ಸಂಗವೆಂಬ ಮೂರನೆಯ ಮೆಟ್ಟಿಲನ್ನೇರಲು ಸಿದ್ಧವಾಗುತ್ತಾನೆ. ಆ ಹಂತದಲ್ಲಿ ತೋರುವ ಸುಖಾವಬೋಧವು (ಸುಖದ ಜ್ಞಾನವು) ಎರಡನೇ ಭೂಮಿಕೆಯಾಗಿದೆ.

**ಶಬ್ದಾರ್ಥ: ಆವರಣವು**=ಆತ್ಮಸ್ವರೂಪವು ಕಾಣಬರದಂತೆ ಮುಚ್ಚಿಕೊಂಡಿರುವ ಮುಸುಕು; **ಅದರ+ಅರಿವಿಗೆ**=ಆ ಆತ್ಮಸ್ವರೂಪದ ಜ್ಞಾನಕ್ಕೆ;

**ಟಿಪ್ಪಣಿ-೧: ಜ್ಞಾತೃತ್ವವೆಡೆಗೊಂಡು**=ನಾನು ತಿಳಿಯುವವನು ಎಂಬ ಕಲ್ಪನೆಯಿಂದ ಕೂಡಿ; ಮನಸ್ಸಿನಲ್ಲಿ ಆತ್ಮ ವಸ್ತುವನ್ನು ಭಾವಿಸುವಾಗ ನಾನು ತಿಳಿಯುವವನು ಎಂಬ ಕಲ್ಪನೆಯಿರುವುದು. ಆತ್ಮ ಸಾಕ್ಷಾತ್ಕಾರವಾದಾಗ ಅದು ಸುಳ್ಳೆನಿಸಿ ಹೋಗುವುದು. **ನಿಸ್ಸಂಗಿಯಾಗಿ**=ನಿಸ್ಸಂಗವೆಂಬ ಮೂರನೆ ಮೆಟ್ಟಿಲಿಗೆ ಹತ್ತುವವನಾಗಲು; **ಸುಖಾವಬೋಧವು**=ಸುಖದ ಜ್ಞಾನವು;

---

## ನಿಸ್ಸಂಗ (೧೭-೨೭)

**ವಿಷಯಸುಖವನು ಚಿಂತಿಸದೆ, ತನ**
**ಗೆಸೆವ ವೈರಾಗ್ಯವನು ಬಿಡದಿರು**
**ತಸಮಸಜ್ಜನರೊಡನೆ ಗೋಷ್ಠಿಯ ಮಾಡಿ, ದುರ್ಜನರ ।**
**ಘಸಣೆಯನು ಬಿಟ್ಟಾತ್ಮನಲ್ಲಿಯೆ**
**ವ್ಯಸನ ದೃಢತರವಾಗೆ ನಿಜಸುಖ**
**ವೊಸರುತಂಗಯ್ಯೊಳಗೆ ಮಾಣಿಕದಂತೆ ತೋರುವುದು ॥ ॥೧೭॥**

**ತಾತ್ಪರ್ಯ:** ಪಂಚೇಂದ್ರಿಯಗಳಿಗೆ ಸಂಬಂಧಿಸಿದಂತೆ ಶಬ್ದ ಸ್ಪರ್ಶ ರೂಪಾದಿ ವಿಷಯಾಸಕ್ತಿಗೆ ಒಳಗಾಗದೆ ವೈರಾಗ್ಯ ಬುದ್ಧಿಯಿಂದ ಕೂಡಿದವರಾಗಿ ಅಸಮಾನವಾದ ಸಜ್ಜನರೊಡನೆ ಸರಸಸಲ್ಲಾಪ ಮಾಡುತ್ತ ದುರ್ಜನರ ಗೋಜಿಗೆ ಹೋಗದೆ ಸದಾ ಆತ್ಮ ಚಿಂತನೆಯಲ್ಲೇ ನಿರತನಾಗಿ ಮನೋದಾರ್ಢ್ಯದಿಂದ ಇದ್ದಾಗ ಅಂಗೈಯಲ್ಲಿ ಹೊಳೆಯುವ ಮಾಣಿಕ್ಯದಂತೆ ನಿತ್ಯಾನಂದವು ಉಕ್ಕಿ ಹೊರಹೊಮ್ಮುತ್ತದೆ.

**ಶಬ್ದಾರ್ಥ:** ಘಸಣಿ=ಗೋಜು; ವ್ಯಸನ=ಒಂದನ್ನು ಬಿಟ್ಟಿರಲಾರದಿರುವುದು; ಒಸರುತ್ತ=ಜಿನುಗುತ್ತ, ತೊಟ್ಟಿಕ್ಕುತ್ತ; ಅಂಗೆಯ್ಯೊಳಗೆ ಮಾಣಿಕದಂತೆ=ಯಾವ ಭಾಗವೂ ಪರೋಕ್ಷವಾಗಿ ಉಳಿಯದಂತೆ ಎಲ್ಲ ಭಾಗವೂ ಸ್ಪಷ್ಟವಾಗಿ ಅಂಗೈಯಲ್ಲಿ ಹೊಳೆಯುವ ಮಾಣಿಕ್ಯದ ಹಾಗೆ; ಗೋಷ್ಠಿ=ಸರಸಸಲ್ಲಾಪ ಸಭೆ.

**ಪಾಠಾಂತರ:** ವೊಸರುತಂಗಯ್ಯೊಳಗೆ=ವೊಸರುತಂಗಯ್ಯೊಳಗೆ (ಕು) ವೊನೆರೆಕರತಲದ (ಅರಾಸೇ)

---

**ತಾನೆ ಸತ್ಯಜ್ಞಾನಸುಖಮಯ;**
**ಸ್ವಾನುಭವಸಂವೇದ್ಯ ಘನವಿ**
**ನ್ನೇನು? ತೋರುವ ತೋರಿಕೆಯ ಸಂಸರ್ಗ ತನಗಿಲ್ಲ; ।**
**ಭಾನು ಬೆಳಗಲು ಲೋಕ ಚೇಷ್ಟಿಸು**
**ವಾ ನಿಯಮದಲಿ ಸಕಲಕರಣಕೆ**
**ತಾನು ತಿಳಿಯೆ ನಿಮಿತ್ತಕಾರಣನೆಂದು ಬಗೆದಿಹನು ॥ ॥೧೮॥**

**ತಾತ್ಪರ್ಯ:** ಆತ್ಮಜ್ಞಾನವಾದ ಕೂಡಲೇ ತಾನೇ ಸಚ್ಚಿದಾನಂದ ಸ್ವರೂಪನೆಂದು ತನ್ನ ಅನುಭವದಿಂದಲೇ ತಿಳಿಯುತ್ತಾನೆ. ಸಚ್ಚಿದಾನಂದ ಸ್ವರೂಪನಾದ ತನಗಿಂತ ಹೆಚ್ಚಿನದೇನಿಲ್ಲವೆಂದು ತಿಳಿಯುತ್ತಾನೆ. ಮಾಯಾಸಂಬಂಧವನ್ನೆಲ್ಲ (ತೋರುವ ತೋರಿಕೆಯ) ಹೋಗಲಾಡಿಸಿಕೊಂಡು ನಿಸ್ಸಂಗಿ ತಾನೆಂದು ಅರಿಯುತ್ತಾನೆ. ಸೂರ್ಯೋದಯವಾದ ಕೂಡಲೆ ಲೋಕವ್ಯಾಪಾರಗಳೆಲ್ಲ ಆರಂಭವಾಗುತ್ತದೆ. ಅದೇ ರೀತಿಯಲ್ಲಿ ಸಕಲೇಂದ್ರಿಯಗಳಿಗೆ ತನ್ನ ಬರೀ ಇರುವಿಕೆಯ ಬಲದಿಂದ ಇಂದ್ರಿಯಗಳು ಲೋಕವ್ಯಾಪಾರಕ್ಕೆ ತೊಡಗುತ್ತವೆ ತಾನು ನಿಮಿತ್ತಕಾರಣನೆಂದು ತಿಳಿದಿರುತ್ತಾನೆ.

**ಶಬ್ದಾರ್ಥ:** * ಸತ್ಯಜ್ಞಾನಸುಖಮಯ=ಸಚ್ಚಿದಾನಂದ ಸ್ವರೂಪನು; ಸ್ವಾನುಭವಸಂವೇದ್ಯ=ತನ್ನ ಅನುಭವದಿಂದಲೇ ತಿಳಿದು ಬರತಕ್ಕವನು; ಘನವಿನ್ನೇನು?=ಸಚ್ಚಿದಾನಂದ ಸ್ವರೂಪನಾದ ತನಗಿಂತ ಹೆಚ್ಚಿನದೇನಿದೆ?; ಸಂಸರ್ಗ ತನಗಿಲ್ಲ=ಈ ಮಾತು ನಿಸ್ಸಂಗವೆಂಬ ೩ನೇ ಭೂಮಿಕೆಯನ್ನು ನೆನಪು ಕೊಡುವದು; ನಿಮಿತ್ತ ಕಾರಣನು=ತನ್ನ ಬರೀ ಇರುವಿಕೆಯ ಬಲದಿಂದ ಇಂದ್ರಿಯಗಳು ಚೇಷ್ಟಿಸುವಂತೆ ಮಾಡುವವನು.

---

**ಹರಿವ ಜಲಗಳು ಜನ್ಮಭೂಮಿಯ**
**ನರಿಯದಂದದೊಳಾತ್ಮನಿಂದಲಿ**
**ಸ್ಫುರಿಸುತಿಹ ಕರಣಗಳು ಕಾರಣವಾದ ವಸ್ತುವನು ।**
**ಅರಿಯಲರಿಯವು; ತಿಳಿಯೆ ಸೂರ್ಯನ**
**ಕಿರಣದಂತೆ ಪ್ರವೃತ್ತಿಮುಖವಾ**
**ಗಿರುತಿರಲ್ಕದರಲ್ಲಿ ಸಂಗವದಿಲ್ಲವೆಂದಿರ್ಪ ॥ ॥೧೯॥**

**ತಾತ್ಪರ್ಯ:** ಇನ್ನು ಮೂರನೆಯ ಭೂಮಿಕೆಯನ್ನು ಶುಕನಿಗೆ ವ್ಯಾಸನು ವಿವರಿಸುತ್ತಿದ್ದಾನೆ: ಹರಿಯುವ ನದಿಗಳು ತಮ್ಮ ಹುಟ್ಟಿನ ನೆಲೆಯನ್ನು ತಾವೇ ತಿಳಿಯದಿರುವ ಹಾಗೆ

ಆತ್ಮನಿಂದಲೇ ಸುಖಿಸುತ್ತಿರುವ ಇಂದ್ರಿಯಗಳು ತಮಗೆ ಆಧಾರವಾಗಿರುವ ಪರವಸ್ತುವನ್ನು ತಿಳಿದುಕೊಳ್ಳಲಾರವು. ಹೇಗೆಂದರೆ ಲೋಕವನ್ನು ಬೆಳಗುವ ಸೂರ್ಯ ಕಿರಣಗಳು ಯಾವ ವಸ್ತುವಿಗೆ ತಾಕಿದರೂ ಆ ವಸ್ತುವಿನ ಯಾವ ಗುಣದ ಸೋಂಕನ್ನೂ ಅಂಟಿಸಿಕೊಳ್ಳದಿರುವಂತೆ ಜಡಾತ್ಮಗಳಾದ ಇಂದ್ರಿಯಗಳ ಸಂಸಾರದಲ್ಲಿದ್ದರೂ ಸೋಂಕಿಲ್ಲದೆ ನಿಸ್ಸಂಗಿ ಆಗಿರುತ್ತಾನೆ.

**ಶಬ್ದಾರ್ಥ:** ಕಾರಣವಾದ=ತನಗೆ ಆಧಾರವಾಗಿರುವ; **ಸೂರ್‍ಯನ ಕಿರಣದಂತೆ**=ಸೂರ್‍ಯನ ಕಿರಣಗಳು ಯಾವ ವಸ್ತುವಿಗೆ ತಾಗಿದರೂ ಆ ವಸ್ತುವಿನ ಯಾವ ಗುಣದ ಸೋಂಕನ್ನು ಅಂಟಿಸಿಕೊಳ್ಳದಿರುವಂತೆ; ಸೂರ್ಯನ ಕಿರಣಗಳಿಗೆ ವಸ್ತುವಿನ ಗುಣ ಅಂಟದಿರುವಂತೆ; * ಸಂಗವದಿಲ್ಲವೆಂದಿರ್ಪ=ನಿಸ್ಸಂಗಿಯಾಗಿರುತ್ತಾನೆ.

---

**ಜಲದೊಳಗೆ ತೋರುವ ತರಂಗಾ**
**ವಳಿಗಳೇರಿಯ ಮೀರಿ ತೋರ್ಪುವು;**
**ತಿಳಿಯಲುದಕವ ಮೀರಿ ತೋರಲ್ಕಳವೆ? ಕರಣಗಳು ।**
**ಹೊಳೆವವಾತ್ಮನ ತೇಜದಿಂದದ**
**ನುಳಿದು ತೋರಲ್ಕರಿಯವೀ ತನು**
**ಗಳನುಳಿದು ತೋರುವವು; ತನಗವಕಾ ಪರಿಯ ಸಂಗ ॥ ॥೨೦॥**

**ತಾತ್ಪರ್ಯ:** ನೀರಿನಲ್ಲಿ ಏಳುವ ಅಲೆಗಳು ದಡಮೀರಿ ಹರಿದು ನೀರನ್ನು ಬಿಟ್ಟು ಬರದಂತೆ ಕಾಣಿಸಿಕೊಂಡರೂ ನೀರನ್ನು ಬಿಟ್ಟಿರುವುದಿಲ್ಲ. ಹಾಗೆಯೇ ಇಂದ್ರಿಯಗಳು ಶರೀರದ ಹೊರಗಿದ್ದು ಬೆಳಗಬಲ್ಲವು ಹೇಗೆಂದರೆ ಇಂದ್ರಿಯಗಳು ಶರೀರಗಳನ್ನು ತಮ್ಮ ದಾರಿಗೆ ನೋಡುತ್ತಿರುವುವು. ಆದರೆ ಆತ್ಮತೇಜದ ಬೆಂಬಲವನ್ನು ಬಿಟ್ಟು ಬೆಳಗಲಾರವು. ಅದೇರೀತಿಯಾಗಿ ತನಗೂ ಶರೀರಕ್ಕೂ ಇರುವ ಸಂಗವೆಂದು ತಿಳಿಯಬೇಕು.

**ಶಬ್ದಾರ್ಥ: ತನಗೆ+ಅವಕೆ ಆ ಪರಿಯ ಸಂಗ**=ಆತ್ಮನಿಗೂ ಇಂದ್ರಿಯಗಳಿಗೂ ಇರುವ ಸಂಗದ ರೀತಿ ಅದು;

**ಟಿಪ್ಪಣಿ:** ಆತ್ಮನಿಗೂ ಇಂದ್ರಿಯಗಳಿಗೂ ಇರುವುದು ಎಂಥ ಸಂಗವೆಂದರೆ ಅಲೆಗಳು ಏರಿಯನ್ನು ಬಿಟ್ಟು ಬಂದು ಕಾಣಿಸಿಕೊಳ್ಳುವಂತೆ ನೀರನ್ನು ಬಿಟ್ಟು ಬಂದು ಕಾಣಿಸಿಕೊಳ್ಳಲಾರವಷ್ಟೇ. ಹಾಗೆ ಇಂದ್ರಿಯಗಳು ಶರೀರದ ಹೊರಗಿದ್ದು ಬೆಳಗಬಲ್ಲವು. ಹೇಗೆಂದರೆ ಇಂದ್ರಿಯಗಳು ಶರೀರಗಳನ್ನು ತಮ್ಮೆದುರಿಗೆ ನೋಡುತ್ತಿರುವುವು. ಆದರೆ ಆತ್ಮ ತೇಜದ ಬೆಂಬಲವನ್ನು ಬಿಟ್ಟು ಬೆಳಗಲಾರವೆಂದರ್ಥ.

---

**ಹಾಲುಮೊಸರಂದದ ವಿಕಾರ್‍ಯನು,**
**ಕೇಳು ಸ್ವರ್ಗದವೋಲು ಪ್ರಾಪ್ಯನು,**
**ಹೇಳಲೇನುತ್ಪಾದ್ಯ ಘಟದಂದದಲಿ, ದ್ವಿಜನಂತೆ ।**

**ಮೇಲೆ ಸಂಸ್ಕಾರ್ಯನುಮೆನಿಸನವ;**
**ಕೇಳು ನೀನದರಂತೆ ಕರಣದ**
**ಕೋಳವಹ ನಾಲ್ಕಾದ ಕರ್ಮದ ಸಂಗ ತನಗಿಲ್ಲ ॥ ॥೨೧॥**

ತಾತ್ಪರ್ಯ: ಈ ಪದ್ಯದಲ್ಲಿ ನಿಸ್ಸಂಗವೆಂಬ ಭೂಮಿಕೆಯ ಲಕ್ಷಣವನ್ನು ಹೇಳುತ್ತಾರೆ. ಈ ಲಕ್ಷಣ ಹೊಂದಿದವನು, ಹಾಲು ಮೊಸರಾಗುವ ಹಾಗೆ ಬದಲಾವಣೆಯನ್ನು ಹೊಂದದೆ ಅವಿಕಾರ್ಯನು ಆಗಿರುತ್ತಾನೆ ಸ್ವರ್ಗಲೋಕವನ್ನು ಹೊಸದಾಗಿ ಹೊಂದುವನಂತೆ ಆಗಿರುವವ ಆಗಿರುವುದಿಲ್ಲ. (ಅಪ್ರಾಪ್ಯ); ಮಣ್ಣಿನಿಂದ ಮಡಕೆ ಆಗುವ ಹಾಗೆ ಹೊಸದಾಗಿ ಹುಟ್ಟುವನು ಆಗಿರುವುದಿಲ್ಲ (ಅನುತ್ಪಾದ್ಯ) ಹೊಸದಾಗಿ ಕರ್ಮದಿಂದ ಶುದ್ಧಿಯನ್ನು ಪಡೆದು ಹೊಸದಾಗಿ ಸಂಸ್ಕಾರ ಪಡೆದವನಾಗಿ ಆಗಿರುವುದಿಲ್ಲ (ಅಸಂಸ್ಕಾರ್ಯ) ಎಂದರೆ ವಿಕಾರ್ಯ ಪ್ರಾಪ್ಯ, ಉತ್ಪಾದ್ಯ, ಸಂಸ್ಕಾರ್ಯಗಳೆಂಬ ಇಂದ್ರಿಯಗಳಿಗೆ ಬಂಧನವಾದಂಥ ನಾಲ್ಕು ರೀತಿಯ ಕರ್ಮಗಳ ಸಂಗವಿಲ್ಲದ ಆತ್ಮ ರೂಪಿಯೇ ನಿಸ್ಸಂಗ ಭೂಮಿಕೆಯವ ನಾಗಿರುತ್ತಾನೆ.

**ಶಬ್ದಾರ್ಥ:** ವಿಕಾರ್ಯನು=ವಿಕಾರನಾಗುವವನು, ಬದಲಾವಣೆಯನ್ನು ಹೊಂದುವವನು; ಎನಿಸನು=ಅನ್ನಿಸಿಕೊಳ್ಳುವುದಿಲ್ಲ; ಬದಲಾವಣೆಯನ್ನು ಹೊಂದುವುದಿಲ್ಲ ಎಂದರ್ಥ; ಪ್ರಾಪ್ಯನು=ಹೊಸದಾಗಿ ದೊರೆಯುವವನು (ಎನಿಸನು); ಉತ್ಪಾದ್ಯ=ಹೊಸದಾಗಿ ಹುಟ್ಟುವವನು (ಎನಿಸನು); ಸಂಸ್ಕಾರ್ಯನು=(ಬ್ರಾಹ್ಮಣರಂತೆ) ಸಂಸ್ಕಾರವನ್ನು (ಕರ್ಮದಿಂದ ಶುದ್ಧಿಯನ್ನು ಪಡೆಯುವವನು (ಎನಿಸನು); ನಾಲ್ಕಾದಕರ್ಮದ ಸಂಗ=ವಿಕಾರ್ಯ ಪ್ರಾಪ್ಯ, ಉತ್ಪಾದ್ಯ, ಸಂಸ್ಕಾರ್ಯ ಎಂಬ ಕರ್ಮಸಂಬಂಧಸ್ವರೂಪಗಳು ನಾಲ್ಕು (ಆತ್ಮನಿಗಿಲ್ಲವೆಂದರ್ಥ); * ಕರಣದಕೋಳವಹ= ಇಂದ್ರಿಯಗಳಿಗೆ ಬಂಧನವಾಗಿಹ;

---

**ಹಮ್ಮು ಕರ್ಮವ ಮಾಡಿ ತತ್ಫಲ**
**ಧರ್ಮವಹ ಸುಖದುಃಖದನುಭವ**
**ವೆಮ್ಮದೆಂದೇ ಬಗೆದು ಕರ್ತೃತ್ವಾಭಿಮಾನದಲಿ ।**
**ಹೆಮ್ಮೆಯೇ ಒಡಲಾಗಿ ಮೆರೆವೀ**
**ದುರ್ಮದದ ಹಮ್ಮಿಗೆಯು ನಿಜವಹ**
**ನಿರ್ಮಲಾತ್ಮಕನಾದೆನಗೆ ಸಂಸರ್ಗವಿಲ್ಲೆಂದ ॥ ॥೨೨॥**

**ತಾತ್ಪರ್ಯ:** ಅಹಂಕಾರದ ಕರ್ಮಗಳನ್ನು ಮಾಡಿ ಅದರ ಫಲಗಳಾದ ಸುಖ ದುಃಖಗಳ ಅನುಭವವನ್ನು ತನ್ನದು ಎಂದು ತಿಳಿದು, ತಾನೇ ಅದರ ಕರ್ತೃವೆಂದು ಅಭಿಮಾನದಲ್ಲಿ ಅಹಂಕಾರಿ ಆಗಿ ಮೆರೆಯುವಂಥ ದುರಭಿಮಾನದ ಅಹಂಕಾರತ್ವಕ್ಕೂ ನಿರ್ಮಲಸ್ವರೂಪಿಯಾದ ಆತ್ಮನಾಗಿರುವ ತನಗೂ ನಿಜವಾಗಿಯೂ ಏನೂ ಸಂಬಂಧವಿಲ್ಲವೆಂದು ತಿಳಿಯುವವನೇ ಮೂರನೇ ಮೆಟ್ಟಿಲಾದ ನಿಸ್ಸಂಗತ್ವದಲ್ಲಿರುತ್ತಾನೆ.

**ಶಬ್ದಾರ್ಥ:** * ಹಮ್ಮು=ಅಹಂಕಾರ; ತತ್ಫಲ=ಅದರಿಂದ ಉಂಟಾಗುವ ಸುಖದುಃಖಗಳು; * ಕರ್ತೃತ್ವಾಭಿಮಾನ=ತಾನೇ ಅದರ ಕರ್ತೃವೆಂಬ ಅಭಿಮಾನಿಯಾಗಿರುವವನು; * ಹೆಮ್ಮೆಯೇ ಒಡಲಾಗಿ=ಅಹಂಕಾರವೇ ಶರೀರವಾಗುಳ್ಳ (ಅಹಂಕಾರಮಯಿ); * ದುರ್ಮದದ=ದುರಭಿಮಾನದ; * ಸಂಸರ್ಗ=ಸಂಬಂಧ, ಸಂಪರ್ಕ;

**ಟಿಪ್ಪಣಿ:** ಹೊಚಿ ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ; ಶಬ್ದಾರ್ಥ ಅನುವಾದಕನದು.

---

**ಗಗನಲತೆಯಲಿ ಪಕ್ಷಿ ಸುಳಿದೊಡೆ**
**ಬಗೆಯಲದಕನ್ಯೋನ್ಯ ಸಂಗತಿ**
**ಯೊಗೆವುದೇ? ಚಿದ್ಗಗನಲತೆಯಲಿ ಹಮ್ಮುಸುಳಿದಾಡೆ ।**
**ನೆಗಳಿದೀ ನಿಸ್ಸಂಗ, ನಿರ್ಗುಣ**
**ನಗಣಿತನಿಜಾನಂದ, ನಿರುಪಮ,**
**ನಿಗಮವೇದ್ಯ, ನಿರಂಗನೆನಗದಕೆಂತಹುದು ಸಂಗ? ॥ ॥೨೩॥**

**ತಾತ್ಪರ್ಯ:** ಆಕಾಶವೆಂಬ ಬಳ್ಳಿಯ ಮೇಲೆ ಹಕ್ಕಿ ಕಾಣಿಸಿಕೊಂಡರೆ (ಇಲ್ಲಿ ಆಕಾಶವನ್ನು ಬಳ್ಳಿಯನ್ನಾಗಿ ರೂಪವನ್ನಾಗಿ ಭಾವಿಸಿದೆ) ಆ ಹಕ್ಕಿಗೂ ಆಕಾಶವೆಂಬ ಬಳ್ಳಿಗೂ ಪರಸ್ಪರ ಸಂಬಂಧ ಉಂಟಾಗುತ್ತದೆಯೇ? ಇಲ್ಲ. ಅದೇ ರೀತಿಯಾಗಿ ಚಿದಾಕಾಶವೆಂಬ ಬಳ್ಳಿಯಲ್ಲಿ ನಾನು ನನ್ನದು ಎಂಬ ಅಹಂಕಾರ ಕಾಣಿಸಿಕೊಂಡರೆ ಅದಕ್ಕೂ ಸಂಗ ರಹಿತನೂ, ಗುಣರಹಿತನೂ ಅಮಿತಸತ್ಯಾನಂದನೂ ವೇದಗೋಚರನೂ ಅಸಮಾನನೂ ಆದ ಆತ್ಮನಾದ ನಾನು ನಿಸ್ಸಂಗನಾದ್ದರಿಂದ (ಅವಯವರಹಿತ ನಾದುದರಿಂದ) ಅವನಿಗೂ ಸಂಬಂಧವಿಲ್ಲವೆಂದೂ ತಿಳಿಯುವುದೇ ನಿಸ್ಸಂಗವೆಂಬ ಮೂರನೆಯ ಭೂಮಿಕೆ ಆಗಿರುತ್ತದೆ.

**ಶಬ್ದಾರ್ಥ:** ಅನ್ಯೋನ್ಯ ಸಂಗತಿ=ಒಂದಕ್ಕೊಂದು ಸಂಬಂಧವು; ನಿರಂಗ=ಅವಯವವಿಲ್ಲದವನು (ಸಂಬಂಧವಾಗ ಬೇಕಾದರೆ ಅಂಗವಿರಬೇಕಾಗುವುದು ಆತ್ಮನು ನಿರಂಗನಾದ್ದರಿಂದ ಅವನಿಗೆ ಯಾವ ಸಂಬಂಧವೂ ಇಲ್ಲ); ಎನಗೆ=ನಿಸ್ಸಂಗ ಮೊದಲುಗೊಂಡು ನಿರಂಗನೆಂಬುದರವರೆಗೆ ಗುಣಗಳುಳ್ಳ ನನಗೆ ಎಂದರ್ಥ. * ನಿಗಮವೇದ್ಯ=ವೇದಗೋಚರನು.

---

**ತ್ರಿಜಗವಿದು ಬಗೆಯಿಂದ ತೋರ್ಪುದು**
**ನಿಜದವೋಲ್; ಬಗೆಯಡಗೆ ಕೆಡುವದು;**
**ಭುಜಗ ರಜ್ಜುವಿನಲ್ಲಿ ತೋರ್ದಳಿವಂತೆ; ಶುಕ್ತಿಯಲಿ ।**
**ರಜತದಂದದನಾದ್ಯವಿದ್ಯಾ**
**ವೃಜಿನಲಿಂಗಶರೀರಸಂಗವು**
**ನಿಜದೊಳೆನಗಿಲ್ಲೆಂದು ನಿಸ್ಸಂಗತಿಯನೊಂದಿಹನು ॥ ॥೨೪॥**

**ತಾತ್ಪರ್ಯ:** ಮಾಯಾಶಕ್ತಿಯಿಂದ ಉಂಟಾದ ಆವರಣದಿಂದ ಕೂಡಿರುವ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ತ್ರಿಲೋಕಗಳು, ಮನೋವ್ಯಾಪಾರದಿಂದ ಜಡಬುದ್ಧಿಗೆ ನಿಜಲೋಕಗಳೆಂದೇ ತೋರುತ್ತದೆ. ಅಂಥ ಭೇದಬುದ್ಧಿ ಅಳಿದುಹೋದಾಗ (ನಿಜ ತಿಳಿಯದ) ತ್ರಿಲೋಕಗಳೆಂಬ ಭಾವನೆಯೂ ಅಳಿದುಹೋಗುತ್ತದೆ. ಹಾಗೆಯೇ ಹಗ್ಗದಲ್ಲಿ ಹಾವು ಎಂಬ ಭ್ರಾಂತಿ ತಲೆದೋರಿ ನಿಜಸ್ಥಿತಿ ತಿಳಿದಾಗ ಭ್ರಾಂತಿ ಅಳಿದು ಇದು ಹಾವಲ್ಲ ಹಗ್ಗ ಎಂದು ತಿಳಿಯುವ ಹಾಗೆ; ನಂತರ (ಸತ್ಯ ತಿಳಿದಾಗ) ಇದು ಬೆಳ್ಳಿ ಅಲ್ಲ ಕಪ್ಪೆ ಚಿಪ್ಪೆಂದು ತಿಳಿದ ಹಾಗೆ, ಅನಾದಿಯಿಂದ ಅವಿದ್ಯೆಯೆಂಬ ಪಾಪದ ರೂಪವಾದ ಲಿಂಗ ಶರೀರದ ಸಂಗವು ನಿಜವಾಗಿಯೂ ತನಗೆ ಇಲ್ಲವೆಂದು ತಿಳಿಯುವವನು ನಿಸ್ಸಂಗತಿಯನ್ನು (ನಿಸ್ಸಂಗವೆಂಬ ಮೂರನೆಯ ಭೂಮಿಕೆಯನ್ನು) ಹೊಂದಿದವನಾಗಿರುತ್ತಾನೆ.

**ಶಬ್ದಾರ್ಥ:** **ತ್ರಿಜಗ**=ಸ್ವರ್ಗ ಮರ್ತ್ಯ ಪಾತಾಳ; **ಬಗೆಯಡಗೆ ಕೆಡುವದು**=ಮನಸ್ಸಿನ ಭ್ರಾಂತಿ ತೊಲಗಿದಾಗ ನಿಜ ತಿಳಿಯುವುದು; **ಅನಾದ್ಯವಿದ್ಯಾವೃಜಿನಲಿಂಗಶರೀರಸಂಗವು**=ಅನಾದಿಯಾದ ಅವಿದ್ಯೆಯೆಂಬ ಪಾಪದರೂಪನಾದ ಲಿಂಗಶರೀರದ ಸಂಗವು;

**ಟಿಪ್ಪಣಿ:**

**ಮನೋದೃಶ್ಯಮಿದಂದ್ವೈತಂ ಯತ್ಕಿಂಚಿತ್‌ಸಚರಾಚರಾ ।**

**ಮನಸೋಹ್ಯಮನೀಭಾವೇ ದ್ವೈತಂ ನೈವೋಪಲಭ್ಯತೇ ॥** **(ಮಾಂಡೂಕ್ಯಕಾರಿಕೆ)**

**ಪದವಿಭಾಗ:** ರಜತದಂದದ=ರಜತ+ಅಂದದ

---

**ಪುಸಿಯ ಹಮ್ಮೇ ಕನಸಿನಂದದೊ**
**ಳೆಸೆದು ಜಗವಾದಂತೆ ತೋರ್ಪುದು;**
**ಬಿಸಿಲದೊರೆಯಂದದಿ ವಿಚಾರಿಸಿ ನೋಡೆ ತೋರದದು; ।**
**ಅಸಮತೇಜೋನಿಧಿಗೆ ಹಮ್ಮಿನ**
**ಘಸಣೆಯುಂಟೇ? ರವಿಗೆ ಕತ್ತಲೆ**
**ಮುಸುಕುವದೆ? ಅದರಂತೆ ತಾ ನಿಸ್ಸಂಗನೆಂದಿಹನು ॥** **॥೨೫॥**

**ತಾತ್ಪರ್ಯ:** ಮಿಥ್ಯಾತ್ಮಕವಾದ ಹಮ್ಮೇ (ಅಹಂಕಾರವೇ) ಸ್ವಪ್ನದ ರೀತಿಯಲ್ಲಿ ತೋರಿ ಈ ಜಗತ್ತು ಸೃಷ್ಟಿಯಾದಂತೆ ಕಾಣಿಸುವುದು; ಅದರಂತೆಯೇ ವಿಚಾರಮಾಡಿದರೆ ಈ ಜಗತ್ತು ಮರೀಚಿಕೆಯಂತೆ ಸುಳ್ಳಾದುದೇ ಹೊರತು ನಿಜವಾದುದಲ್ಲ. ಅಸಮಾನ ತೇಜೋರಾಶಿಯಿಂದ ಪರಿಪೂರ್ಣವಾದ ಆತ್ಮನಿಗೆ ಅಹಂಕಾರದ ತೊಡಕು ಇರಲು ಶಕ್ಯವೇ? ಸೂರ್ಯನಿಗೆ ಕತ್ತಲು ಆವರಿಸುವುದುಂಟೇ? ಅದರಂತೆ ತಾನು ನಿಸ್ಸಂಗನೆಂದು ತಿಳಿಯುವುದೇ ಮೂರನೆಯ ಭೂಮಿಕೆಯಾಗಿದೆ.

**ಶಬ್ದಾರ್ಥ:** * **ಪುಸಿ**=ಮಿಥ್ಯೆ ಸುಳ್ಳು; * **ಹಮ್ಮು**=ಅಹಂಕಾರ; * **ಬಿಸಿಲುದೊರೆ**=ಮರೀಚಿಕೆ; **ವಿಚಾರಿಸಿ ನೋಡೆ**=ಪರಾಮರ್ಶಿಸಿದರೆ; * **ಘಸಣೆ**=ತೊಡಕು; * **ಮುಸುಕುವದೆ?**=ಆವರಿಸುವುದುಂಟೆ?

**ಟಿಪ್ಪಣಿ: ಪುಸಿಯ ಹಮ್ಮೇ ಕನಸಿನಂದದೊಳೆಸೆದು ಜಗವಾದಂತೆ ತೋರ್ಪುದು**=ಈ ಪೂರ್ವಾರ್ಧದ ಸಾಲುಗಳ ಅರ್ಥವು ಬಹುಮಟ್ಟಿಗೆ ಹಿಂದಿನಪದ್ಯದ ಪೂರ್ವಾರ್ಧದ ಸಾಲುಗಳ ರೂಪಾಂತರವು. ಅಲ್ಲಿ ಮನಸ್ಸು ಸುಷುಪ್ತಿ ಮುಂತಾದ ಅವಸ್ಥೆಯಲ್ಲಿ ಲಯವಾದರೆ ಜಗತ್ತಿಲ್ಲವೆಂದಿದೆ. ಇಲ್ಲಿ ವಿಚಾರ ಮಾಡಿ ನೋಡಿದರೆ ಹಮ್ಮೇ ಇಲ್ಲವಾದ್ದರಿಂದ ಜಗತ್ತಿಲ್ಲವೆಂದಿದೆ.

---

**ಅನಿಲ ಸುಳಿದಾಡಿದೊಡೆ ಗಗನ**
**ಕ್ಕನಿಲಗೆತ್ತಣ ಸಂಗ? ಆತ್ಮನು**
**ತನುರಹಿತ ಪರಿಪೂರ್ಣ ನಿತ್ಯಾನಂದವಿಗ್ರಹನು ।**
**ನೆನಹಿನೊಡಲಾಗಿರ್ಪ ಮಾಯಾ**
**ಜನಿತವಹ ಷೋಡಶವಿಕಾರದ**
**ಮನದ ಸಂಗವದೆತ್ತಣದು ತನಗೆಂದು ಬಗೆದಿಹನು ॥ ॥೨೬॥**

**ತಾತ್ಪರ್ಯ:** ಆಕಾಶದಲ್ಲಿ ಸುಳಿದಾಡುವ ಗಾಳಿಗೂ, ಆಕಾಶಕ್ಕೂ ಯಾವ ಸಂಬಂಧವಿದೆ? ಯಾವ ಸಂಬಂಧವೂ ಇಲ್ಲ. ಹಾಗೆಯೇ ಶರೀರವಿಲ್ಲದಿರುವ ಆತ್ಮನು ಪರಿಪೂರ್ಣನು; ಶಾಶ್ವತಸುಖಸ್ವರೂಪಿಯೂ ಆಗಿದ್ದಾರೆ. ಕಲ್ಪನೆಗಳಿಗೆಲ್ಲ ಆಶ್ರಯವಾಗಿರುವ "ಮಾಯೆಯಿಂದ ಜನಿಸಿದ ಮನಸ್ಸಿನ ಹದಿನಾರು ವಿಕಾರಗಳ ಸಾಂಗತ್ಯ ನನಗಿಲ್ಲ" ಎಂದು ಭಾವಿಸುವುದೇ ನಿಸ್ಸಂಗಭೂಮಿಕೆಯ ಲಕ್ಷಣವಾಗಿದೆ.

**ಶಬ್ದಾರ್ಥ:** * **ಅನಿಲಸುಳಿದಾಡಿದೊಡೆ**=ಗಾಳಿ ಸಂಚರಿದಾಗ; * **ತನುರಹಿತ**=ಶರೀರವಿಲ್ಲದ; * **ಸಂಗ**=ಸಾಂಗತ್ಯ; * **ನೆನಹಿನೊಡಲಾಗಿರ್ಪ**=ಕಲ್ಪನೆಗಳಿಗೆಲ್ಲ ಆಶ್ರಯವಾಗಿರುವ;

**ಟಿಪ್ಪಣಿ: ಷೋಡಶವಿಕಾರ:** ೧) ರಾಗ; ೨) ದ್ವೇಷ; ೩) ಕಾಮ; ೪) ಕ್ರೋಧ; ೫) ಲೋಭ; ೬) ಮೋಹ; ೭) ಮದ; ೮) ಮತ್ಸರ; ೯) ಅಸೂಯೆ; ೧೦) ದಂಭ; ೧೧) ದರ್ಪ; ೧೨) ಅಹಂಕಾರ; ೧೩) ಇಚ್ಛೆ; ೧೪) ಭಕ್ತಿ; ೧೫) ಶ್ರದ್ಧೆ; ಈರ್ಷ್ಯೆ(ವಾಸುದೇವಮನನ ಗ್ರಂಥದಿಂದ)

೧) ಸಂಜ್ಞಾನ (ಚೇತನಭಾವ); ೨) ಅಜ್ಞಾನ (ಈಶ್ವರಭಾವ); ೩) ವಿಜ್ಞಾನ (ಕಲಾದಿಪರಿಜ್ಞಾನ); ೪) ಪ್ರಜ್ಞಾನ; ೫) ಮೇಧಾ; ೬) ದೃಷ್ಟಿ; ೭) ಧೃತಿ; ೮) ಮತಿ; ೯) ಮನೀಷಾ; ೧೦) ಜೂತಿ (ದುಃಖತ್ವಭಾವ); ೧೧) ಸ್ಮೃತಿ; ೧೨) ಸಂಕಲ್ಪ; ೧೩) ಕ್ರತು; ೧೪) ಅಸು; ೧೫) ಕಾಮ; ೧೬) ವಶ; ಈ ೧೬ ಮನಸ್ಸಿನ ವಿಕಾರಗಳು; (ಐತರೇಯೋಪನಿಷತ್ತು)

---

**ಮುನ್ನ ಮಾಡಿದ ಪುಣ್ಯಫಲದಿಂ**
**ದುನ್ನತ ವಿರಕ್ತಿಯನು ಪಡೆದದ**
**ಮನ್ನಿಸುತ ಸಜ್ಜನಸಮಾಗಮದಿಂದ, ಶಾಸ್ತ್ರವನು ।**

ತನ್ನ ಮತಿಯ ವಿವೇಕದಿಂ ತಿಳಿ
ದನ್ಯ ಜಡಸಂಗವನುಳಿದ ಚೈ
ತನ್ಯ ತಾನೆಂಬೆಚ್ಚರವೆ ಮೂರನೆಯ ಭೂಮಿಕೆಯು ॥ ॥೨೭॥

ತಾತ್ಪರ್ಯ: ಪೂರ್ವಜನ್ಮದಲ್ಲಿ ತಾನು ಮಾಡಿದ ಸುಕೃತಫಲಗಳಿಂದ ಶ್ರೇಷ್ಠ ಗಳಿಸಿದ್ದ ವೈರಾಗ್ಯವನ್ನು ಸಾಧುಸಜ್ಜನರ ಸಹವಾಸದಿಂದ ಅದನ್ನು ಉಳಿಸಿಕೊಳ್ಳುತ್ತ ತನ್ನ ಬುದ್ಧಿಯ ವಿವೇಚನಾಶಕ್ತಿಯಿಂದ ಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಾ, ಉಳಿದ ಜಡವಸ್ತುಗಳಿಗೂ ಆತ್ಮಸ್ವರೂಪನಾದ ತನಗೂ ಯಾವ ಸಂಗವೂ ಇಲ್ಲವೆಂದು ತಿಳಿಯುತ್ತ, ಮೂಢ ಜನರ ಸಹವಾಸವನ್ನು ತೊರೆದಂಥ ಶುದ್ಧಚೈತನ್ಯಸ್ವರೂಪವೇ ತಾನೆಂಬ ಎಚ್ಚರವನ್ನು ಹೊಂದಿರುವುದೇ ನಿಸ್ಸಂಗವೆಂಬ ಮೂರನೆಯ ಭೂಮಿಕೆ ಆಗಿದೆ.

ಶಬ್ದಾರ್ಥ: * ಮುನ್ನ ಮಾಡಿದ=ಪೂರ್ವ ಜನ್ಮದಲ್ಲಿ ತಾನು ಮಾಡಿದ; * ಪುಣ್ಯ ಫಲದಿಂದ=ಸುಕೃತ ಫಲಗಳಿಂದ; * ಉನ್ನತ ವೈರಾಗ್ಯ=ಶ್ರೇಷ್ಠ ವೈರಾಗ್ಯ; * ಸಜ್ಜನಸಮಾಗಮದಿಂದ=ಸಜ್ಜನರ ಸಹವಾಸದಿಂದ; ಅದ=ಆ ವೈರಾಗ್ಯವನ್ನು; ಅನ್ಯಜಡಸಂಗವನುಳಿದ=ಉಳಿದ ಮೂಢ ಜನರ ಗೋಷ್ಠಿಯನ್ನು ಬಿಟ್ಟಂಥ ಎಂಬುದೊಂದರ್ಥ; ಉಳಿದ ಜಡವಸ್ತುಗಳಿಗೂ ಆತ್ಮ ಸ್ವರೂಪನಾದ ತನಗೂ ಯಾವ ಸಂಗವೂ ಇಲ್ಲವೆಂದು ತಿಳಿದಂಥ ಎಂಬುದು ಇನ್ನೊಂದರ್ಥ.

---

## ವಾಸನಾ ಕ್ಷಯ (೨೮–೩೧)

ಇಂತು ಭೂಮಿತ್ರಿತಯವನು ನೆರೆ
ಸಂತತಾಭ್ಯಾಸವನು ಮಾಡುತ,
ಚಿಂತಿಸದೆ ಹಿಂದಾದುದನು, ಮುಂದೇನುಭಾವಿಸದೆ, ।
ಮುಂತೆ ದೃಷ್ಟಿಪಥಕ್ಕೆ ಬಿದ್ದುದ
ನೆಂತುಮಿದು ನಿಜವೆಂದು ಬಗೆಯದೆ,
ಭ್ರಾಂತಿಯಳಿದುಳಿದಿರ್ಪುದೇ ನಿರ್ವಾಸನೆಯ ಭೂಮಿ ॥ ॥೨೮॥

ತಾತ್ಪರ್ಯ: ಈ ರೀತಿಯಲ್ಲಿ ಸುಖೇಚ್ಛೆ, ಆತ್ಮ ವಿಚಾರ, ನಿಸ್ಸಂಗಗಳೆಂಬ ಮೊದಲ ಮೂರು ಭೂಮಿಕೆಗಳನ್ನು ಎಡಬಿಡದೆ ಅಭ್ಯಾಸ ಮಾಡುತ್ತಾ (ಗತಕಾಲದ) ಹಿಂದೆ ಕಳೆದು ಹೋದದನ್ನು ಚಿಂತಿಸದಿರುವುದು; (ಭವಿಷ್ಯತ್ಕಾಲದ) ಮುಂದೆ ಏನು ಸಂಭವಿಸುವುದೋ ಎಂಬುದನ್ನು ಆಲೋಚಿಸದೆ ಇರುವುದು, (ವರ್ತಮಾನ ಕಾಲದ) ಇದಿರಾಗಿ ದೃಷ್ಟಿಗೋಚರವಾಗುತ್ತಿರುವ ಈಗ ಕಾಣುವ ಮಾಯಾ ಸೃಷ್ಟಿಯನ್ನು ಯಾವ ರೀತಿಯಲ್ಲಿ ನೋಡಿದರೂ ಇದು ಸುಳ್ಳಾದುದು ಎಂದು ಭಾವಿಸುವುದು; ಈ ಶರೀರವನ್ನು ಸತ್ಯವೆಂದು ನಂಬದೆ ಭ್ರಾಂತಿಯನ್ನು ತೊರೆದಿರುವುದೇ ನಿರ್ವಾಸನೆ ಎಂಬ ನಾಲ್ಕನೆಯ ಭೂಮಿಕೆ ಆಗಿದೆ.

**ಶಬ್ದಾರ್ಥ:** * **ಭೂಮಿತ್ರಿತಯ**=ಸುಖೇಚ್ಛೆ, ಆತ್ಮ ವಿಚಾರ, ನಿಸ್ಸಂಗವೆಂಬ ಮೂರು ಭೂಮಿಕೆಗಳು; * **ಹಿಂದಾದುದನು ಚಿಂತಿಸದೆ**=ಗತಕಾಲದ ವಿಚಾರಗಳನ್ನು ಯೋಚಿಸದೆ; ***ಮುಂದಾದನು ಭಾವಿಸದೆ**=ಭವಿಷ್ಯತ್ಕಾಲದ ಆಗುಹೋಗುಗಳ ಬಗ್ಗೆ ಕಳವಳ ಹೊಂದದೆ. **ಮುಂತೆ**=ಇದಿರಾಗಿ; * **ದೃಷ್ಟಿಪಥಕ್ಕೆ ಬಿದ್ದುದ**=ವರ್ತಮಾನಕಾಲದಲ್ಲಿ ಕಾಣಿಸುವುದನ್ನು; * **ಭ್ರಾಂತಿಯನ್ನು**=ಮಾಯೆಯನ್ನು; **ಎಂತುಮಿದು**=ಯಾವ ರೀತಿಯಿಂದ ನೋಡಿದರೂ; (ಇದು ಸುಳ್ಳಾದುದು). **ನಿರ್ವಾಸನೆಯ ಭೂಮಿ**=ವಾಸನಾಕ್ಷಯವೆಂಬ ನಾಲ್ಕನೆಯ ಭೂಮಿಕೆ ಆಗಿದೆ.

---

**ತನುವು ತಾನೆಂದೆಂಬ ವಾಸನೆ**
**ಯೆನಿತೆನಿತೊ ವಿಧ ಶಾಸ್ತ್ರವಾಸನೆ,**
**ಘನತರದ ಲೌಕಿಕದ ವಾಸನೆಯಾದಿಯಾಗಿರ್ದ ।**
**ಇನಿತು ವಾಸನೆಗಳಲಿ ಲೇಪವ**
**ದೆನಿಪ ಮನವನು ತೆಗೆದು; ಯೋಗದಿ**
**ಚಿನುಮಯಾತ್ಮನೊಳೊಂದಿಸಲು ನಿರ್ವಾಸನೆಯ ಭೂಮಿ ॥ ॥೨೯॥**

**ತಾತ್ಪರ್ಯ:** ಈ ಶರೀರವು ತಾನೇ (ಆತ್ಮ) ಎಂಬ ವಾಸನೆಯು, ಹಲವು ಶಾಸ್ತ್ರಗಳಲ್ಲಿ ಅನೇಕ ವಿಧಗಳಲ್ಲಿ ಹೇಳಿರುವುದು ಎಂಬ ಅರ್ಥದಲ್ಲಿ ತೊಳಲುತ್ತಿರುವ ವಾಸನೆ, ಈ ಲೋಕದಲ್ಲಿ ತಾನು ಕೀರ್ತಿವಂತನಾಗಬೇಕೆಂಬ ಬಲತರವಾದ ಮೋಹ ವಾಸನೆ, ಇವೇ ಮೊದಲಾದ ನಾನಾ ಬಗೆಯ ವಾಸನೆಗಳಿಗೆ ಅಂಟಿ ಕೊಂಡಿರುವ ಮನಸ್ಸನ್ನು ಯೋಗಾಭ್ಯಾಸದಿಂದ ದೂರಮಾಡಿ ಚಿನ್ಮಯರೂಪನಾದ ಆತ್ಮನಲ್ಲಿ ಮನಸ್ಸನ್ನು ಲೀನಗೊಳಿಸುವುದೇ ನಿರ್ವಾಸನೆಯೆಂಬ ನಾಲ್ಕನೆಯ ಭೂಮಿಕೆ ಆಗಿದೆ.

**ಶಬ್ದಾರ್ಥ:** **ಎನಿತೆನಿತೊ ವಿಧ**=ಎಷ್ಟೆಷ್ಟೋ ಬಗೆಯಾದ; **ಶಾಸ್ತ್ರವಾಸನೆ**=ಬೇರೆ ಬೇರೆ ಶಾಸ್ತ್ರಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಹೇಳಿರುವದೆಂಬರ್ಥದಲ್ಲಿಯೇ ತೊಳಲುತ್ತಿರುವುದು; **ಲೌಕಿಕದ ವಾಸನೆ**=ಈ ಲೋಕದಲ್ಲಿ ತಾನು ಹೆಸರುವಾಸಿಯನ್ನು ಹೊಂದಬೇಕೆಂಬ ಬಲವಾದ ಇಚ್ಛೆ; **ಯೋಗಾದಿ**=ಸಾಧನದಿಂದ; * **ಲೇಪ**=ಅಂಟಿಕೊಂಡಿರುವ ಪದರ; * **ನಿರ್ವಾಸನೆ**=ವಾಸನಾಕ್ಷಯ;

---

**ವಾಸನಾಕ್ಷಯವೆನಿಸುವದು ದು**
**ರ್ವಾಸನೆಗಳೆನಿಸಿರ್ಪ ಪಂಚ**
**ಕ್ಲೇಶವಳಿವುದರಿಂದ ಚಿತ್ತದ ಮಲಿನವನು ತೊಳೆದು, ।**
**ಭಾಸಮಾನದಿ ಬುದ್ಧಿ ಬೆಳಗುತ**
**ಸೂಸದಂತರ್ಮುಖವದಾಗಿರ**
**ಲೀ ಸಕಲ ತೋರುವದು ಕನಸಿನವೋಲು ಪುಸಿಯಾಗಿ ॥ ॥೩೦॥**

**ತಾತ್ಪರ್ಯ:** ದುರ್ವಾಸನೆಗಳೆಂಬ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಐದು ಕ್ಲೇಶಗಳನ್ನು ಕಳೆದು ಬಿಡುವುದೇ ವಾಸನಾಕ್ಷಯವೆಂಬ ನಾಲ್ಕನೆಯ ಭೂಮಿಕೆ

ಆಗಿದೆ. ಹೀಗೆ ಪಂಚಕ್ಲೇಶಗಳನ್ನು ಕಳೆಯುವುದರ ಮೂಲಕ ಮನಸ್ಸಿನಲ್ಲಿರುವ ಕಲ್ಮಷಗಳನ್ನೆಲ್ಲಾ ತೊಳೆದು ಪರಿಶುದ್ಧಗೊಳಿಸಿ ಪ್ರಕಾಶಮಾನವಾದ ಚಿದಾಕಾಶದಲ್ಲಿ ಹೊಳೆಯುತ್ತಿರುವ ಬುದ್ಧಿಯು ಒಳಮುಖಿಯಾಗಿ ಸ್ಥಿರವಾಗಿದ್ದರೆ ಬಾಹ್ಯಜಗತ್ತಿನ ಸಮಸ್ತವಸ್ತುಗಳೂ ಅಂತಹವನಿಗೆ ಸ್ವಪ್ನಪ್ರಾಯವಾಗಿ ಕಾಣಿಸುತ್ತವೆ.

**ಶಬ್ದಾರ್ಥ: ಪಂಚಕ್ಲೇಶಗಳು**=(ಅ೧, ಪ೨೨ರಲ್ಲಿ ಹೇಳಿದೆ), ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ; **ಸೂಸದೆ**= ಹೊರಗೆ ಹರಿದಾಡುವುದಕ್ಕೆ ಬಿಡದೆ (ಒಳಮುಖಿಯಾಗಿ); **ಸಕಲ**=ಎಲ್ಲಾ ಜಗತ್ತು; * **ಪುಸಿಯಾಗಿ**=ಸುಳ್ಳಾಗಿ; * **ಭಾಸಮಾನವಾಗಿ**=ಪ್ರಕಾಶಮಾನವಾಗಿ; * **ಮಲಿನ**=ಕಲ್ಮಷ;

**ಟಿಪ್ಪಣಿ:** (ಅ–೧, ಪದ್ಯ ೭ರಲ್ಲಿ ಪಂಚಕ್ಲೇಶಗಳ ವಿವರಣೆ ಇದೆ. ೧) ತನ್ನನರಿಯದುದೇ ಅವಿದ್ಯೆ; ೨) ಅನ್ಯದೊಳು ತಾನೆಂಬುದು ಅಸ್ಮಿತೆ; ೩) ಉನ್ನತದ ಭೋಗಾಭಿಲಾಷೆಯೆ ರಾಗ; ೪) ಮುನ್ನಲದು ಪ್ರತಿಕೂಲಮಾದೊಡೆ ನನ್ನಿ ಅದರಿಂ ದ್ವೇಷ; ೫) ಗನ್ನಗತಕದಿಂ ತೊಡರಿ ಬಿಡದಿಹುದು ಅಭಿನಿವೇಶ; (ಅನುಭವಾಮೃತ ಅ–೧೦; ಪ–೭)

---

**ಕಿಲುಬುಹತ್ತಿದ ಕನ್ನಡಿಯವೋ**
**ಲೆಲೆಮಗನೆ, ಬಹುಜನ್ಮಜನ್ಮದಿ**
**ತೊಳತೊಳಲಿ ಸಂಸಾರದಲಿ ಗಳಿಸಿರ್ದ ವಾಸನೆಯ ।**
**ಕಲುಷವನು ಕಡೆಗಾಣಿಸಲು ನಿ**
**ರ್ಮಲವ ಮಾಡಿದ ಮುಕುರದಂದದಿ**
**ಪೊಳೆವ ಮನವಾತ್ಮನಲಿ ನೆಲೆಗೊಳೆ ವಾಸನಾಕ್ಷಯವು ॥ ॥೩೧॥**

**ತಾತ್ಪರ್ಯ:** ಎಲೈ ಪುತ್ರನಾದ ಶುಕನೇ ಕೇಳು; ಕನ್ನಡಿಯಲ್ಲಿ ಕಿಲುಬು (ಕೊಳೆ) ಸೇರಿದರೆ ಅದರ ಕಾಂತಿಯು ಕುಂದುತ್ತದೆ. ಅದರಂತೆಯೇ, ಅನೇಕ ಜನ್ಮಗಳಲ್ಲಿ ಸುತ್ತಿಸುತ್ತಿ ಬಳಲಿ ಸಂಸಾರಬಂಧನಗಳಿಂದ ಗಳಿಸಿದ ಮನಸ್ಸಿಗೆ ಹತ್ತಿದ ವಾಸನೆಗಳೆಂಬ ಕೊಳೆಗಳನ್ನೆಲ್ಲ ಕೊನೆಗಾಣಿಸಬೇಕಾದರೆ ಚೆನ್ನಾಗಿ ಕನ್ನಡಿಯನ್ನು ಶುಚಿಗೊಳಿಸಿದ ಹಾಗೆ ಮನಸ್ಸನ್ನು ಪರಿಶುದ್ಧಿಗೊಳಿಸಿ ಆತ್ಮನಲ್ಲಿ ನಿಲ್ಲಿಸಬೇಕು. ಅದೇ ವಾಸನಾಕ್ಷಯವೆಂಬ ಭೂಮಿಕೆ ಆಗಿದೆ.

**ಶಬ್ದಾರ್ಥ:** * **ಕಿಲುಬು ಹತ್ತಿದ**=ಮನಸ್ಸಿಗೆ ಹತ್ತಿದ ಮಲಿನತೆ (ಕೊಳೆ); * **ತೊಳತೊಳಲಿ**= ಸುತ್ತಿಸುತ್ತಿಬಳಲಿ; * **ಕಲುಷ**=ಕಿಲುಬು; * **ಮುಕುರ**=ಕನ್ನಡಿ; * **ಕಡೆಗಾಣಿಸಲು**=ಕೊನೆಗಾಣಿಸಲು;

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಟೀಕೆ–ಟಿಪ್ಪಣಿ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

## ಆನಂದಿನಿ (೩೨–೩೫)

**ಇದುಕಣಾ, ನಾಲ್ಕನೆಯ ಭೂಮಿಯ**
**ಹದನ; ಮೇಲಲ್ಲಿಂದಲಭ್ಯಾ**
**ಸದೊಳು ನಿರ್ಮಲಚಿತ್ತವಾತ್ಮಾನಂದದೊಳು ಮುಳುಗೆ ।**

**ಮುದವೊದವಿದಾನಂದಪದದೊಳು**
**ಪುದಿದು ನಿದ್ರಾಳುವಿನವೋಲಿರ**
**ಲದನು ಪೇಳ್ವರು ಸುಪ್ತಿಯೆಂದು ನಿರಸ್ತಮಾಯೆಯನು ॥ ॥೩೨॥**

**ತಾತ್ಪರ್ಯ:** ಇದುವರೆಗೆ ಹೇಳಿದ್ದು ನಾಲ್ಕನೆಯ ಭೂಮಿಕೆಯ ವಿಷಯದ ರೀತಿಯಾಗಿದೆ. ಇನ್ನು ಇಲ್ಲಿಂದ ಮುಂದಕ್ಕೆ ಆನಂದಿನಿ ಎಂಬ ಐದನೆಯ ಭೂಮಿಕೆ ಹೇಳುವೆನು. ಅಭ್ಯಾಸಬಲದಲ್ಲಿ ನಿರ್ಮಲಚಿತ್ತನಾಗಿ ಆತ್ಮಾನಂದದಲ್ಲಿ ತಲ್ಲೀನನಾಗಿ ಪರಿಪೂರ್ಣಸಂತೋಷದಿಂದ ಉಂಟಾದ ಆನಂದಸ್ವರೂಪಿ ಆಗಿ ವಿಷಯಾತೀತವಾದ ಗಾಢನಿದ್ರೆಯಲ್ಲಿ ಸುಷುಪ್ತಿಯಲ್ಲಿದ್ದರೆ ಆ ಬ್ರಹ್ಮಾನಂದಕ್ಕೆ ಆನಂದಿನಿ ಎಂದು ಹೇಳುವರು.

**ಶಬ್ದಾರ್ಥ:** **ಇದು ಕಣಾ**=ಇದು ಕಣಯ್ಯ (ಆತ್ಮೀಯ ಸಂಬೋಧನೆ); * **ಹದನ**=ರೀತಿ ಕ್ರಮ; * **ಆನಂದದೊಳು ಪುದಿದು**=ಆನಂದಸ್ವರೂಪದಲ್ಲಿ ವ್ಯಾಪಿಸಿ; ಈ ಮಾತು ಆನಂದಿನಿ ಎಂಬ ಐದನೆಯ ಭೂಮಿಕೆಯನ್ನು ಸೂಚಿಸುತ್ತದೆ; **ಮೇಲೆ ಅಲ್ಲಿಂದಲಿ**=ಇಲ್ಲಿಂದ ಮುಂದಕ್ಕೆ ಐದನೇ ಭೂಮಿಕೆ ಹೇಳುವೆನು; * **ಮುಳುಗೆ**=ತಲ್ಲೀನವಾಗಲು; * **ಮುದವು ಒದವಿದ ಆನಂದಪದ**=ಪರಿಪೂರ್ಣವಾದ ಸಂತೋಷದಿಂದ ಉಂಟಾದ ಆನಂದ ಸ್ವರೂಪ ಹೊಂದಿ; * **ನಿರಸ್ತಮಾಯೆಯನು**=ಮಾಯಾತೀತವಾದ ಗಾಢನಿದ್ರೆ; **ಸುಪ್ತಿಯೆಂದು**=ಆನಂದಿನಿ ಎಂಬ ಭೂಮಿಕೆಯಲ್ಲಿ ವಿಷಯಗಳ ಸಂಬಂಧವಿಲ್ಲವಾದ್ದರಿಂದ ಅದಕ್ಕೆ ವಿಷಯಗಳ ಸಂಬಂಧವಿಲ್ಲದ ಗಾಢನಿದ್ರೆಯ ಹೋಲಿಕೆಯನ್ನು ಹೇಳುವರು.

---

**ತಮದೊಳೊಂದಿರೆ ನಿದ್ರೆ; ಜಾಗ್ರದ**
**ಭ್ರಮೆಯಳಿದು ನಿಜಸುಖದೊಳಗೆ ನಿ**
**ರ್ಮಮತೆಯಿಂದಡಗಿರಲು ಬುದ್ಧಿಗೆ ಯೋಗನಿದ್ರೆಯದು; ।**
**ತಮದ ನಿದ್ರಾನಂದ ಕ್ಷಣಿಕವು;**
**ವಿಮಲಯೋಗಾನಂದವಧಿಕವಿ**
**ದಮಮ! ಸಹಜಾನಂದವಂತಿಂತೆನಲಶಕ್ಯವಲಾ !! ॥ ॥೩೩॥**

**ತಾತ್ಪರ್ಯ:** ತಮೋಗುಣದ ಲಕ್ಷಣವಾದ ಅಜ್ಞಾನದ ನಿದ್ರಾವಸ್ಥೆಯನ್ನು ಹೊಂದಿದರೆ ಜಾಗ್ರದವಸ್ಥೆಯ ಭ್ರಾಂತಿಯು ತೊಲಗಿ ಹೋಗಿ ನಿಜವಾದ ಸುಖದಲ್ಲಿ ನನ್ನದೆಂಬ ದುರಭಿಮಾನದ ಮಮಕಾರ ಅಡಗಿಹೋದಾಗ ಬುದ್ಧಿಗೆ ಪರವಶತೆ ಉಂಟಾಗುತ್ತದೆ. ಅದು ಯೋಗನಿದ್ರೆ ಎನಿಸಿಕೊಳ್ಳುತ್ತದೆ. ತಮೋಗುಣದಿಂದ ಉಂಟಾಗುವ ಅಜ್ಞಾನವೆಂಬ ನಿದ್ರೆಯಸುಖ ಸ್ಥಿರವಾದುದಲ್ಲ. ನಿರ್ಮಲವಾದ ಯೋಗನಿದ್ರೆಯ ಆನಂದ ಅಧಿಕವಾದುದು. ಅರೆರೆ! ಅತಿಶಯವಾದ ಸಹಜಾನಂದದ ಸುಖವನ್ನು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲವಲ್ಲಾ!

**ಶಬ್ದಾರ್ಥ:** * **ತಮ**=ತಮೋಗುಣ, ಅಜ್ಞಾನ; * **ಜಾಗ್ರದ**=ಎಚ್ಚರದ ಅವಸ್ಥೆ; * **ನಿಜಸುಖ**= ಸಹಜಾನಂದ; **ನಿರ್ಮಮತೆಯಿಂದ**=ನನ್ನದೆಂಬ ದುರಭಿಮಾನವಿಲ್ಲದೆ; **ಯೋಗನಿದ್ರೆ**=ಮನಸ್ಸನ್ನು

ಆತ್ಮನಲ್ಲಿ ಮುಳುಗಿಸಿರುವುದು; * ಕ್ಷಣಿಕ=ಸ್ಥಿರವಲ್ಲ; * ವಿಮಲ=ನಿರ್ಮಲ; * ಅಮಮ=ಅರೆರೆ, ಆಶ್ಚರ್ಯಸೂಚಕವಾದ ಅವ್ಯಯ ಪದ; * ಅಂತಿಂತೆನಲು=ಎಷ್ಟೆಂದು ಹೇಳಲು;

---

**ಜೀವಪರಮೈಕ್ಯವನು ಪಡೆದವ**
**ಗಾವ ಸಂಗವುಮಿಲ್ಲ; ನೆರೆ ಸ**
**ದ್ಭಾವವೇ ಒಡಲಾಗಿ, ನಿರ್ವಾಸನೆಯೆ ನೆಲೆಯಾಗಿ, ।**
**ಕೇವಲಾನಂದಾನುಭವವೇ**
**ಸಾವಧಾನದಿ ಹೊರಗೊಳಗೆ ನೆರೆ**
**ತೀವಿರುವುದದ ತಿಳಿಯಲಾನಂದಿನಿಯೆನಿಪ ಭೂಮಿ ॥ ॥೩೪॥**

ತಾತ್ಪರ್ಯ: ಜೀವಾತ್ಮ ಪರಮಾತ್ಮ ಒಂದೇ ಎಂದು ಐಕ್ಯಭಾವ ತಾಳಿದವನಿಗೆ ನಿಸ್ಸಂಗತ್ವ ಇರುತ್ತದೆ. ಸತ್ತ್ವ ರೂಪವಾದ ಬ್ರಹ್ಮಸ್ವರೂಪವೇ ಆತನ ಶರೀರವಾಗಿರುತ್ತದೆ. ಜೀವಾತ್ಮ ಪರಮಾತ್ಮಗಳ ಐಕ್ಯಭಾವದಿಂದ ಸಂಗದೂರನಾಗಿರುತ್ತಾನೆ. ಶರೀರವು ಬ್ರಹ್ಮಸ್ವರೂಪಿಯಾಗುವುದು. ವಾಸನೆಗಳೆಲ್ಲ ನಾಶವಾಗಿರಲು, ಆನಂದಾನುಭವ ತುಂಬಿ ತುಳುಕುವುದು. ಅವನಿಗೆ ಮುಖ್ಯವಾದ ಆನಂದಾನುಭವವೇ ಸಾವಧಾನದಿಂದ ಅವನಲ್ಲಿ ಒಳಗೂ ಹೊರಗೂ ತುಂಬಿಕೊಂಡಿರುತ್ತದೆ. ಈ ರೀತಿ ಆನಂದವೇ ಸರ್ವವ್ಯಾಪಿಯಾಗಿರುವ ಅನುಭವದ ಸಾಕ್ಷಾತ್ಕಾರವೇ ಆನಂದಿನಿ ಎಂಬ ಭೂಮಿಕೆ ಆಗಿದೆ.

ಶಬ್ದಾರ್ಥ: * ಜೀವಪರಮೈಕ್ಯ=ಜೀವಾತ್ಮ ಪರಮಾತ್ಮ ಒಂದೇ ಎಂಬ ಭಾವ; * ಸಂಗವುಮಿಲ್ಲ =ನಿಸ್ಸಂಗತ್ವ; ಸದ್ಭಾವವೇ ಒಡಲು=ಸತ್ತ್ವರೂಪವಾದ ಬ್ರಹ್ಮನ ಸ್ವರೂಪವೇ ದೇಹ; ನಿರ್ವಾಸನೆಯೆ ನೆಲೆಯಾಗಿ=ವಾಸನಾಕ್ಷಯವು ಕದಲದೆ ಇರಲು; ಆನಂದಿನಿ ಎನಿಪಭೂಮಿ=ಆನಂದಿನಿ ಎಂಬ ಐದನೆಯ ಸಾಧನೆಯ ಮೆಟ್ಟಿಲಾಗಿದೆ; * ಸಾವಧಾನದಿ=ಕ್ರಮಕ್ರಮವಾಗಿ;

---

**ಒಳಗೆ ಸಚ್ಚಿತ್ಸುಖಮಯಾತ್ಮನು**
**ಬೆಳಗಿ ಪ್ರತಿಬಿಂಬಿಸುತ ಮಿಗೆ ನಿ**
**ರ್ಮಳನಿಜಾಂತರ್ಮುಖವಿಕಾಸವಿಶುದ್ಧಬುದ್ಧಿಯಲಿ ।**
**ಥಳಥಳನೆ ಹೊಳೆಹೊಳೆದು ಚಿತ್ತದ**
**ಬೆಳಕಿನೊಳು ಬೆರೆದಿರಲು ತಿಂಗಳ**
**ಬೆಳಕು ಪಳುಕಿನೊಳೆಸೆವವೋಲದ್ವೈತನಾಗಿಹನು ॥ ॥೩೫॥**

ತಾತ್ಪರ್ಯ: ನಿರ್ಮಲವಾಗಿಯೂ ನಿಜವಾಗಿಯೂ ಅಂತರ್ಮುಖವಾಗಿ ವಿಕಾಸ ಹೊಂದಿದ ಪರಿಶುದ್ಧವಾದ ಬುದ್ಧಿಯಲ್ಲಿ ಬೆರೆತು ಥಳಥಳನೆ ಹೊಳೆಯುತ್ತಾ ಹೃದಯ ಕಮಲದಲ್ಲಿ ಸಚ್ಚಿದಾನಂದಮಯನಾದ ಪರಬ್ರಹ್ಮನು ಬುದ್ಧಿಯ ಉಪಾಧಿಯೊಳಗಿರು ವಂತೆ ಕಾಣಲು ಅಥವಾ ಬುದ್ಧಿಯೇ ಆತ್ಮನೆಂಬಂತೆ ಕಾಣಲು ಬೆಳದಿಂಗಳು

ಸ್ಫಟಿಕದ ಬೆಳಕಿನೊಡನೆ ಬೆರೆತಾಗ ಎರಡರ ಕಾಂತಿಯೂ ಒಂದಾಗಿ ತೋರುವಂತೆ ಅದ್ವೈತಸ್ವರೂಪಿ ಆಗಿರುತ್ತಾನೆ.

**ಶಬ್ದಾರ್ಥ: ಪ್ರತಿಬಿಂಬಿಸುತ ಮಿಗೆ ನಿರ್ಮಲನಿಜಾಂತರ್ಮುಖವಿಕಾಸವಿಶುದ್ಧಬುದ್ಧಿಯಲಿ**=ಆತ್ಮನು ಬುದ್ಧಿಯ ಉಪಾಧಿಯೊಳಗಿರುವಂತೆ ಕಾಣಲು ಅಥವಾ ಬುದ್ಧಿಯೇ ಆತ್ಮನೆಂಬಂತೆ ಕಾಣಲು; **ತಿಂಗಳಬೆಳಕುಪಳುಕಿನೊಳ್ ಎಸೆವವೋಲ್**=ಬೆಳದಿಂಗಳು ಸ್ಫಟಿಕದ ಬೆಳಕಿನೊಡನೆ ಬೆರೆತಾಗ ಎರಡರ ಕಾಂತಿಯೂ ಒಂದಾಗಿ ತೋರುವಂತೆ; * **ಅದ್ವೈತವಾಗಿಹನು**=ಅದ್ವೈತಸ್ವರೂಪಿ ಆಗಿರುತ್ತಾನೆ; * **ಸಚ್ಚಿತ್ಸುಖಮಯಾತ್ಮನು**=ಸಚ್ಚಿದಾನಂದ ಸ್ವರೂಪನು;

---

## ತುರೀಯ (೩೬-೩೯)

**ಕೇಳದಾನಂದಿನಿಯೆನಿಪುದಿಂ**
**ತೇಳು ಭೂಮಿಕೆಯೊಳಗೆ ಸಂತತ**
**ಮೇಲೆ ತುರಿಯದ ಭೂಮಿಕೆಯೊಳಭ್ಯಾಸವೊದಗುತಿರೆ ।**
**ಮೇಳವಿಸುತಾನಂದಪದದೊಳು**
**ಹೇಳಲೇನುನ್ಮನ್ಯವಸ್ಥೆಯ**
**ತಾಳಿ ಭಾವಾಭಾವವಳಿದು ಸ್ವಭಾವವಾಗಿಹುದು ॥ ॥೩೬॥**

**ತಾತ್ಪರ್ಯ:** ಈ ಆನಂದಿನಿ ಎಂಬ ಭೂಮಿಕೆಯನ್ನು ಅಭ್ಯಾಸ ಮಾಡುತ್ತಾ ಒಳಗೂ ಹೊರಗೂ ಸಂತೋಷ ಪರಿಪೂರ್ಣನಾಗಿದ್ದರೆ ಏಳು ಭೂಮಿಕೆಗಳಲ್ಲಿ ಆರನೆಯದಾದ ತುರೀಯವೆಂಬ ಆರನೆಯ ಮೆಟ್ಟಿಲನ್ನು ಹತ್ತುವನು. ಹೆಚ್ಚಿಗೆ ಹೇಳಲೇನಿದೆ! ಅದರ ಅಭ್ಯಾಸದಿಂದ ಆನಂದಾನುಭವ ಹೆಚ್ಚುತ್ತಾ ಅತಿಶಯವಾದ ಉನ್ಮನೀ ಹಂತದಲ್ಲಿ (ಬ್ರಹ್ಮಾನಂದದಲ್ಲಿ ಮಗ್ನನಾಗಿ) ಭಾವಾಭಾವಗಳು ಲಯವಾಗಿ ಎಂದರೆ ಜೀವೇಶ್ವರಭೇದವೆಂಬ ಬುದ್ಧಿ ತೊಲಗಿ ಸ್ವಭಾವಸಿದ್ಧವಾದ ಸಹಜಾನಂದವು ಲಭಿಸುವುದು.

**ಟಿಪ್ಪಣಿ-೧:** ತುರೀಯವೆಂಬ ಮಾತಿಗೆ (ಮೂರವಸ್ಥೆಗಳಿಗೆ ಸಾಕ್ಷಿಯಾದ) ನಾಲ್ಕನೆಯದೆಂದರ್ಥ; ಅದು ಇಲ್ಲಿ ಆರನೆಯ ಭೂಮಿಕೆ ಆಗಿದೆ. ಈ ಮೆಟ್ಟಿಲಿನ ಸಮಾಧಿಯು ತಾನಾಗಿ ಇಳಿಯದಿದ್ದರೂ ಹೊರಗಣನವರಿಂದ ಹೊರ ಮುಖಕ್ಕೆ ತರಲಾಗುವುದು.

**ಶಬ್ದಾರ್ಥ: ಮೇಳವಿಸುತ್ತ**=ಹೆಚ್ಚುತ್ತ, ಹೊಂದಿಕೊಂಡರೆ; **ಭಾವಾಭಾವವಳಿದು**=ಇಲ್ಲಿ ಇಂಥದ್ದು ಉಳಿದುಕೊಂಡಿರುವುದೆಂಬ ಭಾವದ ಕಲ್ಪನೆಯೂ ಇಲ್ಲಿ ಏನೂ ಉಳಿದುಕೊಂಡಿಲ್ಲವೆಂಬ ಅಭಾವ ಕಲ್ಪನೆಯೂ ನಾಶವಾಗಿ; * **ಉನ್ಮನಿ ಅವಸ್ಥೆ**=ಸೋಹಮಸ್ಮಿಬ್ರಹ್ಮಾಹಮಸ್ಮಿ ಎಂಬ ಸ್ಥಿತಿ. ಬ್ರಹ್ಮಾನಂದದಲ್ಲಿ ಮಗ್ನನಾದ ಸ್ಥಿತಿ (ಪ.ಪ. ಪುಟ-೯೬)

---

**ದ್ವೈತವದ್ವೈತಂಗಳೆಂಬೀ**
**ಮಾತದೇನೂ ತೋರದೆಯೆ, ಚಿ**
**ಜ್ಯೋತಿ ಮಾತ್ರವೆ ಆಗಿ, ಚಿತ್ರದ ದೀಪದಂದದಲಿ ।**

**ಕೌತುಕವ ತೋರುತ್ತಖಂಡ ನಿ**
**ಜಾತಿಶಯಲಕ್ಷ್ಯಾರ್ಥವಾಗಿ**
**ದರ್ಾ ತುರ್ಯಪರಮಾತ್ಮಪದವಾಗಿರ್ಪನವನೆಂದ ॥ ॥೩೭॥**

**ತಾತ್ಪರ್ಯ:** ಈ ತುರೀಯವೆಂಬ ಆರನೆಯ ಭೂಮಿಕೆಯಲ್ಲಿ ಇದು ದ್ವೈತವು ಇದು ಅದ್ವೈತವು ಎಂಬ ಭೇದವೇನೂ ತೋರುವುದಿಲ್ಲ. ಅರಿವೆಂಬ ಜ್ಯೋತಿಯೊಂದೇ ಇರುತ್ತದೆ. ಹಲವು ಬಗೆಯ ರತ್ನಗಳ ಎದುರು ಇಟ್ಟಿರುವ ದೀಪವು ಎಲ್ಲ ರತ್ನಗಳಲ್ಲಿ ಪ್ರತಿಫಲಿಸಿದರೂ ಆ ರತ್ನಗಳಿಗೂ ತನಗೂ ಸಂಬಂಧವಿಲ್ಲದಿರುತ್ತದೆ ಹಾಗೆ ತನಗೆ ತಾನೇ ಚಿಜ್ಜ್ಯೋತಿ ಬೆಳಗುತ್ತಿರುತ್ತದೆ. ಅದೇ ರೀತಿಯಾಗಿ ಅಖಂಡವೂ ಶಾಶ್ವತವೂ ಅತಿಶಯವೂ ಲಕ್ಷ್ಯಾರ್ಥವೂ ಆದ ಚಿತ್ರದೀಪದಂತೆ ಅಚ್ಚರಿಮೂಡಿಸುತ್ತಾ ಚಿಜ್ಜ್ಯೋತಿ ಆಗಿ ಸಾಧಕನು ಆ ತುರೀಯವೆಂಬ ಪರಮಾತ್ಮಪದದಲ್ಲಿ ಇರುತ್ತಾನೆ.

**ಶಬ್ದಾರ್ಥ:** **ಚಿಜ್ಜ್ಯೋತಿ**=ಜ್ಞಾನದ ಹೊಳಪು; **ಕೌತುಕ**=ಆಶ್ಚರ್ಯ; **ಅಖಂಡನಿಜಾತಿಶಯ ಲಕ್ಷ್ಯಾರ್ಥವು**=ಅಖಂಡವೂ, ನಿಜವೂ (ಶಾಶ್ವತವೂ) ಅತಿಶಯವೂ ಲಕ್ಷ್ಯಾರ್ಥವೂ ಆಗಿರುವಂಥ;

**ಟಿಪ್ಪಣಿ:** * ತುರ್ಯ=ನಾಲ್ಕನೇ ಅವಸ್ಥೆ ಎಂದರ್ಥ ಇಲ್ಲಿ ಆರನೇ ಅವಸ್ಥೆಗೆ ಈ ಪದ ಉಳಿಸಿದ್ದಾನೆ. ತುರ್ಯ, ತುರಿಯ, ತುರೀಯವೆಂಬ ಮೂರು ಶಬ್ದರೂಪಗಳನ್ನು ಒಂದೇ ಅರ್ಥದಲ್ಲಿ ಈ ಗ್ರಂಥದಲ್ಲಿ ಕವಿ ಬಳಸಿದ್ದಾನೆ.

**ಟಿಪ್ಪಣಿ:** * **ಚಿತ್ರದೀಪದಂದದಲಿ**=ಹಲವು ರತ್ನಗಳ ಎದುರು ಇಟ್ಟಿರುವ ದೀಪವು ಎಲ್ಲ ರತ್ನಗಳಲ್ಲಿ ಪ್ರತಿಫಲಿಸಿದರೂ ಆ ರತ್ನಗಳಿಗೂ ತನಗೂ ಸಂಬಂಧವಿಲ್ಲದೆ ಇರುತ್ತದೆ. ತನಗೆ ತಾನೇ ಬೆಳಗುತ್ತಿರುತ್ತದೆ.

---

**ಮೂರವಸ್ಥೆಯ ಮೀರಿ, ವಿಕೃತಿಗ**
**ಳಾರ ನೆರೆ ಪರಿಹರಿಸಿ, ಸಚ್ಚಿ**
**ತ್ಸಾರಸುಖರೂಪಾಗಿ, ತುರ್ಯಾವಸ್ಥೆಯೆಂದೆನಿಸಿ, ।**
**ಪಾರಮಾರ್ಥಿಕವಪ್ಪುದೇ ಕೇ**
**ಳಾರನೆಯ ಭೂಮಿಕೆಯೆನಿಪ್ಪುದು;**
**ಧೀರ, ತಿಳಿ ಕೈವಲ್ಯವದ ತಾ ಸಾರಿ ಸುಖಿಯಹನು ॥ ॥೩೮॥**

**ತಾತ್ಪರ್ಯ:** ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ದಾಟಿ, ಅಸ್ತಿ, ಜಾಯತೇ, ವರ್ಧತೇ, ವಿಪರಿಣಮತೇ, ಅಪಕ್ಷೀಯತೆ, ವಿನಶ್ಯತಿ ಎಂಬ ಆರು ವಿಕಾರಗಳನ್ನು ಪರಿಹರಿಸಿಕೊಂಡು ಸಚ್ಚಿತ್ ಸಾರಭೂತವಾದ ಸುಖಸ್ವರೂಪವಾಗಿ ತುರ್ಯಾವಸ್ಥೆಯೆಂಬ ಆರನೆಯ ಭೂಮಿಕೆಯಲ್ಲಿ ನಿಲ್ಲುವನು. ಎಲೈ ಧೀರನಾದ ಶುಕನೇ ಕೇಳು, ಆ ಭೂಮಿಕೆಯಿಂದ ಕೈವಲ್ಯವು ಲಭಿಸಲು ಅದರಲ್ಲಿ ಸೇರಿ ಸುಖಪಡುವನು.

**ಶಬ್ದಾರ್ಥ:** **ತುರ್ಯಾವಸ್ಥೆ**=ಮೂರವಸ್ಥೆಗಳ ಸಾಕ್ಷಿಯಾದ ನಾಲ್ಕನೆಯದು.

**ಟಿಪ್ಪಣಿ–೧: ಮೂರವಸ್ಥೆ**=(ಅ ೩, ಪ ೮, ೯ ರಲ್ಲಿ ವಿವರವಾಗಿ ಹೇಳಿದೆ); ಜಾಗ್ರತ್ (ಎಚ್ಚರ), ಸ್ವಪ್ನ (ಕನಸು), ಸುಷುಪ್ತಿ (ನಿದ್ರೆ) ಈ ಮೂರು ಅವಸ್ಥೆಗಳು.

**ಟಿಪ್ಪಣಿ–೨: ವಿಕೃತಿಗಳಾರು**=(ಅ ೩, ಪ ೩೫ರಲ್ಲಿ ಹೇಳಿದೆ) ೧) ಅಸ್ತಿ (ಇರುತ್ತದೆ); ೨) ಜಾಯತೇ (ಹುಟ್ಟುತ್ತದೆ); ೩) ವರ್ಧತೇ (ಬೆಳೆಯುತ್ತದೆ); ೪) ವಿಪರಿಣಮತೇ (ಬೇರೆ ರೂಪನ್ನು ಪಡೆಯುತ್ತದೆ); ೫) ಅಪಕ್ಷೀಯತೇ (ಸೊರಗುತ್ತದೆ); ೬) ವಿನಶ್ಯತಿ (ಮರಣವನ್ನು ಪಡೆಯುತ್ತದೆ) ಇವು ಷಡ್ಭಾವ ವಿಕೃತಿಗಳು.

---

**ಆರನೆಯದೀ ಭೂಮಿಯಳವಡೆ**
**ತೋರುವುದು ವ್ಯವಹಾರ ಯೋಗಿಗೆ;**
**ನೀರೆ ತೆರೆಯಾದಂತೆ ತನ್ನೊಳು ತಾನೆ ವ್ಯವಹರಿಪ; ।**
**ಬೇರೆ ಮತ್ತೊಂದಿರದೆ, ಕಾರಣ**
**ಕಾರಿಯಗಳಳಿದುಳಿದು, ಸುಖಸಾ**
**ಕಾರಸಾಯುಜ್ಯವನು ಪಡೆದಿಹನೆಂದನಾ ಮುನಿಪ ॥ ॥೩೯॥**

**ತಾತ್ಪರ್ಯ:** ಸಾಧಕನು ಆರನೆಯ ಭೂಮಿಕೆಯಾದ ತುರ್ಯವೆಂಬ ಸಾಧನೆಯಲ್ಲಿದ್ದರೂ ಆಹಾರ, ನಿದ್ರೆ ಮೊದಲಾದ ವ್ಯವಹಾರಗಳು ಅವನಲ್ಲಿ ಕಾಣಿಸಿಕೊಳ್ಳುತ್ತವೆ. ಆ ವ್ಯವಹಾರಗಳು ಹೊರಗಣವರಿಗೆ ವಿಷಯಗಳೊಡನೆ ವ್ಯವಹರಿಸುವಂತೆ ಕಾಣಬಹುದಾದರೂ ನೀರು ಅಲೆಯಂತೆಯೇ ಕಾಣುವ ಹಾಗೆ ನೀರೇ ತನ್ನಲ್ಲಿ ತಾನು ವ್ಯವಹರಿಸುವ ವಿಷಯ ಹೊರತು ಮತ್ತೇನೂ ತೋರುವುದೇ ಇಲ್ಲವು; ಅವನ ಪಾಲಿಗೆ ಕಾರಣವಾದ ತ್ರಿಗುಣಾತ್ಮಕ ಮಾಯೆಯೂ, ಕಾರ್ಯವಾದ ವಿವಿಧ ಜಗತ್ತೂ ತನ್ನ ಭಾಗಕ್ಕೆ ನಾಶವಾಗಿ ತಾನೊಬ್ಬನೇ ಉಳಿದುಕೊಂಡು ಸುಖವೇ ರೂಪುಗೊಂಡಂಥ ಐಕ್ಯವೆಂಬ ಮುಕ್ತಿಯನ್ನು ಪಡೆದಿರುತ್ತಾನೆ ಅವನ ಪಾಲಿಗೆ ಮಾಯೆಯೂ, ಸರ್ವ ಜಗತ್ತೂ ಇಲ್ಲವಾಗಿ, ಅವನೊಬ್ಬನೇ ಇರುವಂತೆ ತೋರುವುದು, ಆ ಸ್ಥಿತಿಯಲ್ಲಿ ಅಖಂಡಸುಖಿಸ್ವರೂಪ ಮುಕ್ತಿಯನ್ನೂ ಪಡೆದಿರುತ್ತಾನೆ ಎಂದರೆ ಎಂದು ವ್ಯಾಸನು ಶುಕನಿಗೆ ಹೇಳಿದನು.

**ಶಬ್ದಾರ್ಥ:** **ವ್ಯವಹಾರ**=ಆಹಾರ, ನಿದ್ರೆ ಮೊದಲಾದ ವಿದ್ಯಮಾನವು (ಆರನೆಯ ಭೂಮಿಕೆಯಲ್ಲಿ ತೋರುವುದೆಂದರ್ಥ); **ನೀರೆ ತೆರೆಯಾದಂತೆ**=ಅವು (ಯೋಗಿ) ಹೊರಗಣವರಿಗೆ ವಿಷಯಗಳೊಡನೆ ವ್ಯವಹರಿಸುವಂತೆ ಕಂಡರೂ ತನ್ನೊಡನೆ ತಾನೇ ವ್ಯವಹರಿಸುವನು. **ಕಾರಣಕಾರಿಯಗಳಳಿದುಳಿದು**=ಕಾರಣವಾದ ತ್ರಿಗುಣಾತ್ಮಕ ಮಾಯೆಯೂ ಕಾರ್ಯವಾದ ವಿವಿಧ ಜಗತ್ತೂ ತನ್ನ ಭಾಗಕ್ಕೆ ನಾಶವಾಗಿ ತಾನೊಬ್ಬನೇ ಉಳಿದುಕೊಂಡು; **ಸುಖಸಾಕಾರಸಾಯುಜ್ಯವನು**=ಸುಖವೇ ರೂಪುಗೊಂಡಂಥ ಐಕ್ಯವೆಂಬ ಮುಕ್ತಿಯನ್ನು.

---

## ತುರೀಯಾತೀತ (೪೦-೪೨)

ಏಳನೆಯ ಭೂಮಿಕೆಯ ಕೇಳೆಲೆ
ಬಾಲ, ತುರ್ಯಾತೀತವನುಪಮ
ಲೀಲೆಯದು ವಾಙ್ಮನಕಗೋಚರವಾಗಿ ಚಿತ್ತೆಂದು ।
ಹೇಳಲಾಗದಚಿತ್ತೆನುತ್ತದ
ಕೇಳಲಾಗದಸತ್ತು ಸತ್ತೆಂ
ದಾಲಿಸುವೊಡರಿದಪ್ಪ ನಿಜಪದವುಸುರಲೆಡೆಯಿಲ್ಲ ॥ ॥೪೦॥

ತಾತ್ಪರ್ಯ: ಎಲೈ ಶುಕನೆ ಕೇಳು, ಇನ್ನು ಏಳನೆಯ ಭೂಮಿಕೆಯಾದ ತುರ್ಯಾತೀತವನ್ನು ಕುರಿತು ಹೇಳುವೆನು. ಆರನೆಯ ಭೂಮಿಕೆಯನ್ನು ದಾಟಿದ ಅವಸ್ಥೆಯಾದ ತುರ್ಯಾತೀತಕ್ಕೆ ಸಮಾನವಾದ ಸುಖವೇ ಬೇರೆ ಇಲ್ಲವು; ಆ ಸುಖವು ಮಾತಿಗೆ ಮನಸ್ಸಿಗೆ ಅಗೋಚರವು. ಅದನ್ನು ಚಿತ್ತೆಂದಾಗಲಿ ಸತ್ತೆಂದಾಗಲಿ ವಿಭಾಗಿಸಲಿಕ್ಕೂ ಬಾರದು. ವಿವರಿಸಲಿಕ್ಕೆ ಕಷ್ಟವಾದ ಆತ್ಮಸ್ವರೂಪಸ್ಥಿತಿಯನ್ನು ಕುರಿತು ಏನನ್ನು ಹೇಳುವುದಕ್ಕೂ ಅವಕಾಶವಿಲ್ಲ.

ಶಬ್ದಾರ್ಥ: ತುರ್ಯಾತೀತವು=ತುರ್ಯವೆಂಬ ಆರನೆಯ ಭೂಮಿಕೆಯನ್ನು ದಾಟಿದ್ದು. ನಿಜಪದ= ಆತ್ಮಸ್ವರೂಪ ಸ್ಥಿತಿ; ಉಸಿರಲೆಡೆಯಿಲ್ಲ=ಅಲ್ಲಿ ಏನನ್ನೂ ಹೇಳುವುದಕ್ಕೂ ಅವಕಾಶವಿಲ್ಲ;

ಪದವಿಭಾಗ: ವಾಙ್ಮನಕಗೋಚರವಾಗಿ=ವಾಕ್+ಮನಕೆ+ಅಗೋಚರ+ಆಗಿ; ಹೇಳಲಾಗದ ಚಿತ್ತೆನುತ್ತದ=ಹೇಳಲು+ಆಗದು+ಅಚಿತ್+ಎನುತ್ತ+ಅದ; ಕೇಳಲಾಗದಸತ್ತುಸತ್ತೆಂದು=ಕೇಳಲು+ ಆಗದು+ಅಸತ್ತು+ಸತ್ತು+ಎಂದು;

---

ಸಪ್ತಭೂಮಿಯಲಾದಿಯಹ ಭೂ
ಮಿತ್ರಿತಯವೇ ಸಾಧನಗಳೆನಿ
ಸುತ್ತಲಿಹವಭ್ಯಾಸನಿಷ್ಠರಿಗೆಲೆ ಮುನೀಶ್ವರನೆ ।
ಮತ್ತೆ ನಾಲ್ಕನೆಯಾದ ಭೂಮಿಕೆ
ಚಿತ್ತೆನಿಸುವುದು ಕೇಳು; ಜೀವ
ನ್ಮುಕ್ತಿಪರ್ಯಾಯಗಳು ಕಡೆಯಹ ಮೂರುಭೂಮಿಗಳು ॥ ॥೪೧॥

ತಾತ್ಪರ್ಯ: ಎಲೈ ಶುಕನೆ ಕೇಳು; ಇದುವರೆಗೆ ಹೇಳಿದ ಸಪ್ತಭೂಮಿಕೆಗಳಲ್ಲಿ ಮೊದಲನೇ ಸುಖೇಚ್ಛೆ, ಎರಡನೇ ಆತ್ಮವಿಚಾರ, ಮೂರನೆಯದಾದ ನಿಸ್ಸಂಗ ಇವುಗಳೇ (ತ್ರಿತಯ) ಅಭ್ಯಾಸಶೀಲರಿಗೆ ಸಾಧನಗಳಾಗಿರುವವು. ನಾಲ್ಕನೆಯ ಭೂಮಿಕೆಯು ವಾಸನಾಕ್ಷಯವೆಂಬುದು ಚಿತ್ತೆನಿಸುವುದು (ಜ್ಞಾನವಾಗಿದೆ). ಕಡೆಯ ಮೂರು ಎಂದರೆ ಆನಂದಿನಿ, ತುರ್ಯ, ತುರ್ಯಾತೀತ ಇವು ಜೀವನ್ಮುಕ್ತಿಯ ಪರ್ಯಾಯಗಳು ಎಂದರೆ ಸಮಾನಪದಗಳು ಆಗಿವೆ ಎಂದು ತಿಳಿ.

**ಶಬ್ದಾರ್ಥ:** ಭೂಮಿತ್ರಿತಯವೇ=ಸುಖೇಚ್ಛೆ, ಆತ್ಮವಿಚಾರ, ನಿಸ್ಸಂಗ ಈ ಮೂರು ಭೂಮಿಕೆಗಳೇ ಸಾಧನಗಳಾಗಿವೆ. ನಾಲ್ಕನೆಯದಾದ ಭೂಮಿಕೆ=ವಾಸನಾಕ್ಷಯವೆಂಬುದು; ಚಿತ್ತೆನಿಸುವುದು= ಜ್ಞಾನವೆನಿಸಿ ಕೊಳ್ಳುವುದು; ಕಡೆಯಹ ಮೂರು ಭೂಮಿಕೆಗಳು=ಆನಂದಿನಿ, ತುರ್ಯ, ತುರ್ಯಾತೀತ ಇವು, ೫, ೬, ೭ನೇ ಸಾಧನೆಯ ಮೆಟ್ಟಿಲುಗಳು; ಜೀವನ್ಮುಕ್ತಿ ಪರ್ಯಾಯಗಳು=ಜೀವನ್ಮುಕ್ತಿಗೆ ಸಮಾನಪದಗಳಾಗಿವೆ.

---

**ತುರ್ಯಗಾಮಿನಿಯೇಳನೆಯದೆಲೆ**
**ಆರ್ಯ, ಕಡೆಯಾಗಿರ್ಪ ಭೂಮಿಕೆ;**
**ಕಾರ್ಯಕಾರಣವಳಿದು ಕೇವಲ ನಿರ್ವಿಕಲ್ಪಕವು; ।**
**ಧೀರರದನು ವಿದೇಹಮುಕ್ತಿಯ**
**ಸಾರವೆಂದೇ ಹೇಳುವರು ನಿ**
**ರ್ಧಾರಿಸಲು ನಿಶ್ಚೇಷ್ಟೆವಡೆದಿಹುದಾಗಿ ದೇಹದಲಿ ॥ ॥೪೨॥**

**ತಾತ್ಪರ್ಯ:** ತುರ್ಯಾತೀತವೆಂಬ ಏಳನೆಯ ಭೂಮಿಕೆ ಕೊನೆಯ ಭೂಮಿಕೆ ಆಗಿರುವುದು; ಮೂರವಸ್ಥೆಗಳ ಸಾಕ್ಷಿಯಾಗಿ ನಾಲ್ಕನೆಯದಾದ ಆತ್ಮನೊಡನೆ ಸೇರಿಹೋದದ್ದು ತುರ್ಯಗಾಮಿ. ಕಾರ್ಯಕಾರಣಗಳು ಅಳಿದು ದೇಹವು ಆಹಾರ ನಿದ್ರೆ ಮೊದಲಾದ ಯಾವುದಕ್ಕೂ ಕ್ರಿಯೆಯನ್ನು ಮಾಡದೆ ಇರುವುದರಿಂದ ನಿಶ್ಚೇಷ್ಟೆ ಪಡೆದಾಗ ಧೀರರು ಇದನ್ನು ದೇಹವು ಸತ್ತ ಮೇಲೆ ಆಗುವ ಜೀವಬ್ರಹ್ಮೈಕ್ಯವೆಂದೇ ಹೇಳುವರು ವಿದೇಹ ಮುಕ್ತಿ ಎನ್ನುವುದು ಇನ್ನೊಂದು ಹೆಸರು.

**ಶಬ್ದಾರ್ಥ:** ತುರ್ಯಗಾಮಿ=(ಮೂರವಸ್ಥೆಗಳಸಾಕ್ಷಿಯಾಗಿ) ನಾಲ್ಕನೆಯದಾದ ಆತ್ಮನೊಡನೆ ಸೇರಿಹೋದದ್ದು. ಈ ಮೆಟ್ಟಿಲಿನ ಸಮಾಧಿಯು ತನಗೆ ತಾನೂ ಇಳಿಯುವುದಿಲ್ಲ, ಹೊರಗಣವರಿಂದ ಇಳಿಸಲಾಗುವುದೂ ಇಲ್ಲ. ವಿದೇಹಮುಕ್ತಿ=ದೇಹವು ಸತ್ತ ಮೇಲೆ ಆಗುವ ಜೀವಬ್ರಹ್ಮೈಕ್ಯ; ನಿಶ್ಚೇಷ್ಟೆ ಪಡೆದಿಹುದಾಗಿ=(ದೇಹವು) ಆಹಾರ ನಿದ್ರೆ ಮೊದಲಾದ ಯಾವುದಕ್ಕೂ ಕ್ರಿಯೆಯನ್ನು ಮಾಡದೆ ಇರುವುದರಿಂದ.

**ಟಿಪ್ಪಣಿ:** ಇಲ್ಲಿಗೆ ಏಳು ಭೂಮಿಕೆಗಳ ನಿರೂಪಣೆ ಮುಗಿಯುತ್ತದೆ. ಮುಂದಿನ ಪದ್ಯದಿಂದ ಶ್ರವಣಾದಿಗಳ ವಿವರಣೆ ಪ್ರಾರಂಭವಾಗುತ್ತದೆ.

---

## ಶ್ರವಣಾದಿಗಳ ವಿವರಣೆ (೪೩–೫೩)

**ಈ ಪರಿಯ ಭೂಮಿಕೆಗಳಿರವ ನಿ**
**ರೂಪಿಸುತಲಭ್ಯಾಸದನುಗುಣ**
**ರೂಪವಹ ಶ್ರವಣಾದಿಗಳ ವಿವರಣೆಯ ತಿಳಿವಂತೆ ।**
**ಆ ಪರಮಪುರುಷಂಗೆ ಪೇಳಿದ**
**ನೀ ಪರಿಯಲಾ ವ್ಯಾಸಮುನಿಪತಿ**
**ದೀಪಿಸುವ ವೇದಾಂತಕನುಗುಣವೆನಲು ಹರುಷದಲಿ ॥ ॥೪೩॥**

**ತಾತ್ಪರ್ಯ:** ಈ ರೀತಿಯಾದ ಸಪ್ತ ಭೂಮಿಕೆಗಳ ಸ್ಥಿತಿಯನ್ನು ಅವುಗಳ ಅಭ್ಯಾಸಕ್ಕೆ ತಕ್ಕಂತೆ ಸೂಕ್ತವಾದ ದೃಷ್ಟಾಂತಗಳೊಡನೆ ಶ್ರವಣ, ಮನನ, ನಿಧಿಧ್ಯಾಸನಗಳ ವಿವರಣೆಯನ್ನು ಸರಳವಾಗಿ ವೇದವ್ಯಾಸಮುನಿ ಜ್ಞಾನದಬೆಳಕು ಕಾಣಿಸುವ ವೇದಾಂತ ಶಾಸ್ತ್ರಕ್ಕೆ ತಕ್ಕವನಾದ ಪುರುಷಶ್ರೇಷ್ಠನಾದ ಶುಕಮುನಿಗೆ ಸಂತೋಷದಿಂದ ವಿವರಿಸಿದರು.

**ಶಬ್ದಾರ್ಥ:** ಶ್ರವಣಾದಿಗಳ ವಿವರಣೆ=ಶ್ರವಣ, ಮನನ ನಿಧಿಧ್ಯಾಸನಗಳ ವಿವರಣೆ; ಆ ಪರಮ ಪುರುಷಂಗೆ=ಆ ಪುರುಷಶ್ರೇಷ್ಠನಾದ ಶುಕಮುನಿಗೆ; ವೇದಾಂತ=ಉಪನಿಷತ್ತು; * ಅನುಗುಣವೆನಲು=ತಕ್ಕಂತೆ; ದೀಪಿಸುವ=ಜ್ಞಾನದ ಬೆಳಕನ್ನು ಕಾಣಿಸುವಂತೆ;

**ಟಿಪ್ಪಣಿ:** ಶ್ರವಣಾದಿಗಳ ವಿವರಣೆ=ಶ್ರವಣಮನನನಿಧಿಧ್ಯಾಸನಗಳ ವಿವರಣೆ ಇವು ವೇದಾಂತ ಪ್ರಕ್ರಿಯೆಗೆ ಸಮ್ಮತವಾದ ಸಾಧನಗಳು. ಶ್ರವಣದಲ್ಲಿ ಶಾಸ್ತ್ರ ವಾಕ್ಯವನ್ನು ಪ್ರಧಾನವಾಗಿ ಕೇಳುವುದು; ಮನನದಲ್ಲಿ ತನ್ನ ಯುಕ್ತಿಗಳನ್ನು ಕೂಡಿಸಿ ತನ್ನಲ್ಲೇ ಮೆಲುಕುಹಾಕಿ, ಸಂಶಯಗಳನ್ನು ಪ್ರಧಾನವಾಗಿ ಹೋಗಲಾಡಿಸಿ ಕೊಳ್ಳುವುದು ಇರುವುವು. ಯುಕ್ತ್ಯಾನುಭವಗಳ ಸಂಬಂಧವೇ ಇಲ್ಲದ ಶ್ರವಣವಿರುವುದಿಲ್ಲ. ಉಳಿದವುಗಳೂ ಹಾಗೆಯೇ. ಆದ್ದರಿಂದ ಈ ಮೂರರ ಅರ್ಥವನ್ನು ಸಾಕ್ಷಾತ್ಕಾರದವರೆಗೂ ಮುಟ್ಟಿಸಿರುವನು.

---

**ತನಯ ಕೇಳ್ಳೈ, ಸದ್ಗುರುವಿನಿಂ**
**ದನುಭವಕೆ ಸರಿಯಾಗಿ ತನ್ನೀ**
**ಮನಕೊಡಂಬಡುವಂತೆ ಶಾಸ್ತ್ರಾರ್ಥವನು ನೆರೆ ತಿಳಿದು, ।**
**ಘನತರದ ಜನ್ಮಾಂತರದ ವಾ**
**ಸನೆಯ ಕೂಡಿದವಿದ್ಯೆಯಳಿದಾ**
**ತ್ಮನ ನಿಜವ ನಿಶ್ಚಯಿಸಿ ತಿಳಿವುದೆ ಶ್ರವಣವೆನಿಸುವುದು ॥ ॥೪೪॥**

**ತಾತ್ಪರ್ಯ:** ಶುಕನೆ ಕೇಳು, ಸದ್ಗುರುವಿನ ಮೂಲಕ ವಿಚಾರಮಾಡಿ ಅನುಭವಕ್ಕೆ ಸರಿಯಾಗಿ ಸಂಶಯಗಳನ್ನು ಕಳೆದುಕೊಂಡು ತನ್ನ ಮನಸ್ಸಿಗೆ ಒಡಂಬಡುವಂತೆ (ಒಪ್ಪಿಗೆಯಾಗುವ ಹಾಗೆ) ಶಾಸ್ತ್ರಾರ್ಥಗಳನ್ನು ಚೆನ್ನಾಗಿ ಅರಿತುಕೊಂಡು ಬಹುಕಾಲದಿಂದ ದಟ್ಟವಾಗಿ ಆವರಿಸಿ ಜನ್ಮಾಂತರದ ವಾಸನೆಯಿಂದ ಅನುಸರಿಸಿಕೊಂಡು ಬಂದಿರುವ ಅವಿದ್ಯೆಯನ್ನು ಕಳೆದುಕೊಂಡು ಆತ್ಮದ ನಿಜಸ್ವರೂಪವನ್ನು ನಿಶ್ಚಯಿಸಿ ತಿಳಿಯುವುದೇ ಶ್ರವಣವೆನಿಸುತ್ತದೆ.

**ಟಿಪ್ಪಣಿ–೧:** ಅನುಭವಕ್ಕೆ ಸರಿಯಾಗಿ ಮನಕೊಡಂಬಡುವಂತೆ ಶಾಸ್ತ್ರಾರ್ಥವನು ನೆರೆತಿಳಿದು =ಜಗತ್ತು ಸುಳ್ಳು ಎಂಬುದೇ ಮುಂತಾದ ಮಾತುಗಳು ತನ್ನ ಅವಿಚಾರದಿಂದ ತೋರುವ ಅನುಭವಕ್ಕೆ ವಿರೋಧವಾಗಿ ಕಂಡರೂ ವಿಚಾರದಿಂದ ತೋರುವ ಅನುಭವಕ್ಕೆ ಅನುಗುಣವಾದದ್ದೆನಿಸುವ ಹಾಗೆ ತಿಳಿದು.

**ಟಿಪ್ಪಣಿ–೨:** ನಿಶ್ಚಯಿಸಿ ತಿಳಿವುದೆ ಶ್ರವಣ=ಇಲ್ಲಿ ಅವಿದ್ಯೆಯನ್ನು ಕಳೆದುಕೊಂಡು ನಿಶ್ಚಯಿಸುವುದನ್ನು ಶ್ರವಣವೆಂದಿದೆ. ಶ್ರವಣದಿಂದ ಅವಿದ್ಯೆಯು ಹೋಗದವರಿಗೆ ಮುಂದೆ ಮನನನಿಧಿಧ್ಯಾಸನ ವಿಚಾರಗಳಿವೆ.

**ಪದವಿಭಾಗ: ಕೂಡಿದವಿದ್ಯೆಯುಳೀದಾತ್ಮನ=ಕೂಡಿದ+ಅವಿದ್ಯೆ+ಉಳಿದು+ಆತ್ಮನ;**

---

**ತತ್ತ್ವಮಸಿ ವಾಕ್ಯಾರ್ಥವನು ಶಾ**
**ಸ್ತ್ರೋಕ್ತವಾಗಿಯೆ ತಿಳಿದು, ಮಾಯಾ**
**ತತ್ತ್ವ ಮೊದಲಾದಖಿಲವೆಲ್ಲವ ಮಿಥ್ಯೆಯೆಂದರಿದು, ।**
**ಸತ್ಯಸಂವಿನ್ಮಾತ್ರವೆನಿಸುವ**
**ಪ್ರತ್ಯಗಾತ್ಮಪರಾತ್ಮರೈಕ್ಯಾ**
**ಪತ್ತಿಯೇ ತಾನೆಂದೆನುತ ನಿಶ್ಚಯಿಪುದೇ ಶ್ರವಣ ॥ ॥ ೪೫ ॥**

**ತಾತ್ಪರ್ಯ:** ತತ್ ತ್ವಂ ಅಸಿ (ತತ್ತ್ವಮಸಿ) ಎಂಬ ಪದತ್ರಯದ ವಾಕ್ಯಾರ್ಥವನ್ನು ಶಾಸ್ತ್ರಗಳಲ್ಲಿ ಹೇಳಿರುವಂತೆ ತಿಳಿದುಕೊಂಡು ಮಾಯೆಯಿಂದಾದ ಎಲ್ಲವನ್ನು ಸುಳ್ಳೆಂದು ಗ್ರಹಿಸಿ ನಿಜವಾದ ಜ್ಞಾನವೆಂದೆನಿಸಿದ ಜೀವಾತ್ಮ ಪರಮಾತ್ಮರ ಏಕತ್ವವೇ (ಐಕ್ಯಾಪತ್ತಿ) ತಾನೆಂದು ನಿಶ್ಚಯಿಸಿ ತಿಳಿದುಕೊಳ್ಳುವುದೇ ಶ್ರವಣವೆಂದೆನ್ನಿಸಿಕೊಳ್ಳುವುದು.

**ಶಬ್ದಾರ್ಥ: * ತತ್ತ್ವಮಸಿ=ತತ್+ತ್ವಂ+ಅಸಿ=ನೀನು ಪರಬ್ರಹ್ಮಸ್ವರೂಪಿ ಆಗಿದ್ದೀಯೆ; ಶಾಸ್ತ್ರೋಕ್ತವಾಗಿಯೆ=ಶಾಸ್ತ್ರಗಳಲ್ಲಿ ಹೇಳಿರುವಂತೆಯೇ; ಸತ್ಯಸಂವಿನ್ಮಾತ್ರ=(ಸತ್ಯ+ಸಂವಿತ್+ಮಾತ್ರ) =ನಿಜವಾದ ಜ್ಞಾನ ಮಾತ್ರ; ಪ್ರತ್ಯಗಾತ್ಮಪರಾತ್ಮಕ=ಜೀವೇಶ್ವರ; ಐಕ್ಯಾಪತ್ತಿ=ಏಕತ್ವವು;**

**ಟಿಪ್ಪಣಿ:** ಮಾಯಾತತ್ತ್ವ=ಮಾಯೆ ಎಂದರೆ ಅವಿದ್ಯೆ, ಮಿಥ್ಯಾಜ್ಞಾನ, ಭ್ರಾಂತಿ, ಇವನ್ನೆಲ್ಲ ಅರ್ಥ ಮಾಡಿಕೊಳ್ಳುವುದೇ ಮಾಯಾತತ್ತ್ವ. ಮಾಯೆಗೆ ಆವರಣ ವಿಕ್ಷೇಪಗಳೆಂಬ ಶಕ್ತಿಗಳಿವೆ. ಆವರಣ ಶಕ್ತಿಯು ಬ್ರಹ್ಮವನ್ನು ಮರೆಮಾಡಿದೆ. ವಿಕ್ಷೇಪಶಕ್ತಿಯು ಜಗತ್ತನ್ನು ಜೀವರನ್ನೂ ಕಾಣುವಂತೆ ಮಾಡುತ್ತದೆ. (ಪಪ–ಪುಟ ೩೦೯)

**ಪಾಠಾಂತರ:** ಅರಾಸೇ ಅವರ ಪ್ರತಿ ಕುಮಾಂಡೂರು ಅವರ ಪ್ರತಿಗಳಲ್ಲಿ ಮೊದಲ ಸಾಲಿನಲ್ಲಿ ತತ್ತ್ವಮಸಿ ವಾಕ್ಯಾರ್ಥವನ್ನು ಗುರುಶ್ರೀ ಗುರು ಪದ ಅಧಿಕವಾಗಿ ಸೇರಿದೆ. ತತ್ತ್ವಮಸಿ ವಾಕ್ಯಾರ್ಥವನು ಗುರುಶ್ರೀ ಎಂದಿದೆ. ಇಲ್ಲಿ ಗುರು ಪದ ಅಧಿಕಪದವಾಗಿದೆ. ಭಾಮಿನಿಷಟ್ಪದಿಯ ಲಕ್ಷಣದಂತೆ ೩+೪+೩+೪ ಛಂದೋಲಕ್ಷಣದ ಪ್ರಕಾರ ಗುರು ಪದ ಬೇಕಾಗಿಲ್ಲ ಅನವಶ್ಯಕವಾಗಿ ಸೇರಿಕೊಂಡಿದೆ. (ಅನುವಾದಕನ ಟಿಪ್ಪಣಿ).

---

**ಗುರುಪದಾಂಬುಜಸೇವೆಯನು ಮನ**
**ದೆರಕವಾಗಿಯೆ ಮಾಡುತಿರೆ, ತ**
**ತ್ಕರುಣವಾಗಲು ತನಗೆ, ಪಾಪಚ್ಛೇದರೂಪಾದ ।**
**ಪರಮಶಾಂಭವಬೋಧೆಯೆನಿಸುವ**
**ನಿರತಿಶಯಸಂಪೂರ್ಣದೃಷ್ಟಿಯ**
**ಧರಿಸಿ ಸಹಜಾನಂದವಾಗಿರೆ ಶ್ರವಣವೆನಿಸುವುದು ॥ ॥ ೪೬ ॥**

**ತಾತ್ಪರ್ಯ:** ಎರಕ ಹೊಯ್ದಂತೆ ಏಕಚಿತ್ತದಿಂದ ಮನಃಪೂರ್ವಕವಾಗಿ ಸದ್ಗುರುವಿನ ಪಾದಕಮಲಗಳ ಸೇವೆಯನ್ನು ಶ್ರದ್ಧಾಭಕ್ತಿಗಳಿಂದ ಮಾಡುತ್ತಿದ್ದರೆ ಗುರುವಿನ

ಅನುಗ್ರಹವುಂಟಾಗುತ್ತದೆ ಆಗ ಪಾಪವನ್ನು ನಾಶಮಾಡುವ ಉತ್ಕೃಷ್ಟ ಶಿವಜ್ಞಾನವೆನಿಸಿದ ಶಾಂಭವಬೋಧೆ ಉಂಟಾಗಿ ಅತಿಶಯವಾದ ಸಂಪೂರ್ಣದೃಷ್ಟಿಯನ್ನು ಹೊಂದಿ ಸಹಜಾನಂದದಲ್ಲಿರುತ್ತಾನೆ. ಅದೇ ಶ್ರವಣವೆಂಬ ಭೂಮಿಕೆ.

**ಶಬ್ದಾರ್ಥ: ಮನದೆರಕವಾಗಿಯೆ**=ಮನಃಪೂರ್ವಕವಾಗಿಯೆ; **ಪರಮಶಾಂಭವಬೋಧೆ**= ಉತ್ಕೃಷ್ಟವಾದ ಶಿವಜ್ಞಾನ ಅಥವಾ ತತ್ತ್ವಜ್ಞಾನ; * **ಪಾಪಚ್ಛೇದರೂಪಾದ**=ಪಾಪವನ್ನು ನಾಶಮಾಡುವ.

**ಟಿಪ್ಪಣಿ-೧: ಮನದೆರಕವಾಗಿಯೆ**=ಎರಕವೆಂದರೆ ಲೋಹದ ರಸವನ್ನೆರೆದು ಒಂದು ಮೂರ್ತಿಯನ್ನು ಮಾಡುವುದು. ಹಾಗೆಯೇ ಗುರು ಮೂರ್ತಿಯನ್ನು ಕಲ್ಪಿಸಿಕೊಳ್ಳಬೇಕು ಎಂದಾದರೂ ಅರ್ಥವನ್ನು ಮಾಡಬಹುದು.

---

## ಮನನ (೪೭-೫೦)

**ಶ್ರವಣದಿಂ ನಿಶ್ಚಯಿಸಿ ತಾನನು**
**ಭವದಿ ಕಂಡರ್ಥವನು, ಮತಭೇ**
**ದವನು ಖಂಡಿಸಿ ಪ್ರಬಲಶ್ರುತಿಯುಕ್ತ್ಯನುಭವಗಳಿಂದ, ।**
**ಅವಘಟಿಪ ಸಂಶಯವಿಪರ್ಯಾ**
**ಸವನು ಕಳೆದೀಡಾಡಿ, ತನ್ನನು**
**ಭವವ ಕೆಡಿಸದೆ ರಕ್ಷಿಸುವದೇ ಮನನವೆನಿಸುವುದು ॥ ॥೪೭॥**

**ತಾತ್ಪರ್ಯ:** ಪರಮ ಶಾಂಭವಬೋಧೆಯಿಂದ ಹೊಂದಿದ ಶ್ರವಣದಿಂದ ಯಾವುದು ಸರಿ ಎಂಬುದನ್ನು ನಿರ್ಧರಿಸಿಕೊಂಡು, ಶಾಸ್ತ್ರವು ತನಗೆ ನೆನಪಿಸಿದ ಅನುಭವಗಳ ಸ್ವರೂಪವನ್ನು ತಿಳಿದುಕೊಂಡು ಪ್ರಬಲವಾದ ವೇದೋಕ್ತ ಪ್ರಮಾಣಗಳಿಂದಲೂ ಸ್ವಾನುಭವದಿಂದಲೂ ಮತಭೇದಗಳನ್ನು ಖಂಡಿಸಿ, ಬಂದೊದಗುವ ಸಂಶಯಗಳನ್ನು ಖಂಡಿಸುತ್ತಾ ಒಂದನ್ನು ಇನ್ನೊಂದಾಗಿ ನಿಶ್ಚಯಿಸುವ ವಿರೋಧ ಬುದ್ಧಿಯನ್ನು ದೂರಮಾಡಿ ಗುರುವಿನಿಂದಲೂ ಶಾಸ್ತ್ರದಿಂದಲೂ ತಿಳಿದ ಅರ್ಥಕ್ಕೆ ಭಿನ್ನವಾಗದಿರುವ ಹಾಗೆ ಅನುಭವಗಳನ್ನು ಸಾರ್ಥಕ ಪಡಿಸಿಕೊಳ್ಳುವುದೇ ಮನನವೆಂದೆನಿಸುವುದು.

**ಶಬ್ದಾರ್ಥ: ತಾನನುಭವದಿಕಂಡರ್ಥವನು**=ಶಾಸ್ತ್ರವು ತನಗೆ ನೆನಪು ಕೊಟ್ಟಂಥ ಅನುಭವಗಳ ಸ್ವರೂಪವನ್ನು; **ಅವಘಟಿಪ**=ಬಂದೊದಗುವ; **ಸಂಶಯವಿಪರ್ಯಾಸವನು**=ಹಾಗೋ ಹೀಗೋ ಎಂಬ ಸಂಶಯವನ್ನೂ ಒಂದನ್ನು ಇನ್ನೊಂದಾಗಿ ನಿಶ್ಚಯಿಸುವ ವಿರೋಧ ಬುದ್ಧಿಯನ್ನೂ; **ಈಡಾಡಿ**=ದೂರಕ್ಕೆ ಚೆಲ್ಲಾಡಿ; **ತನ್ನನುಭವ ಕೆಡಿಸದೆ**=ಗುರುವಿನಿಂದಲೂ ಶಾಸ್ತ್ರದಿಂದಲೂ ತಿಳಿದ ಅರ್ಥಕ್ಕೆ ಭಿನ್ನವಾಗದಂತೆ ತನಗೆ ಮರೆಯಾಗಿರುವ ತನ್ನ ಅನುಭವಗಳನ್ನು ವ್ಯರ್ಥಮಾಡಿಕೊಳ್ಳುತ್ತದೆ.

**ಟಿಪ್ಪಣಿ: ತನ್ನನುಭವವಕೆಡಿಸದೆ**=ನಮ್ಮ ಕೆಲವು ಅನುಭವಗಳು ನಮಗೆ ಮರೆಯಾಗಿರುವವು. ಶಾಸ್ತ್ರದಿಂದ ಅವುಗಳ ನೆನಪನ್ನು ತಂದುಕೊಂಡು ಅವನ್ನು ಆತ್ಮವಿಚಾರಕ್ಕೆ ಉಪಯೋಗ ಮಾಡಿಕೊಂಡರೆ ಅವುಗಳ ಸದುಪಯೋಗವಾದಂತಾಯಿತು. ಇಲ್ಲದಿದ್ದರೆ ಅವುಗಳನ್ನು ಹಾಳು ಮಾಡಿಕೊಂಡಂತಾಗುವುದು.

---

**ತನಯ ಕೇಳ್ಳೆ, ಸಕಲವಹ ವಾ**
**ಸನೆಯಳಿದು, ಮೃಗತೃಷ್ಣೆಯಂದದಿ**
**ತನಗೆ ತೋರುವ ತೋರಿಕೆಯ ಪುಸಿಯೆಂದು ನಿಶ್ಚಯಿಸಿ ।**
**ಘನಗುರುವಿನುಪದೇಶವನು ಚಿಂ**
**ತನೆಯ ಮಾಡುವ ಮನನಕಾಲದ**
**ನೆನಹು ನೌಕಾಸ್ತಂಭಸಂಸ್ಥಿತಕಾಕನಂತಿಹುದು ॥ ॥೪೮॥**

**ತಾತ್ಪರ್ಯ:** ಶುಕನೆ ಕೇಳು, ಶಾಸ್ತ್ರವಾಸನೆ, ಲೌಕಿಕವಾಸನೆಗಳನ್ನು ತೊರೆದು ಮರೀಚಿಕೆಯಂತೆ ತನಗೆ ತೋರುವ ಮಾಯಾವರಣರೂಪವಾದ ಚರಾಚರಾತ್ಮಕವಾದ ತೋರಿಕೆಯನ್ನು ಸುಳ್ಳೆಂದು ನಿಶ್ಚಯಿಸಿ ಶ್ರೇಷ್ಠ ಗುರುವಿನ ಉಪದೇಶವನ್ನು ಚಿಂತಿಸುತ್ತಲಿರುವುದೇ ಮನನವೆನಿಸುತ್ತದೆ. ಇಂತಹ ಮನನಕಾಲದಲ್ಲಿ ಚಿತ್ತವು ಹಡಗಿನ ಧ್ವಜಸ್ತಂಭದ ಮೇಲೆ ಕುಳಿತಿರುವ ಕಾಗೆಯಂತೆ ಕಾಣುತ್ತಿರುವುದು.

**ಶಬ್ದಾರ್ಥ:** ತನಯಕೇಳ್ಳೆ=ಶುಕನೇ ಕೇಳು; ಸಕಲವಹವಾಸನೆ=ಶಾಸ್ತ್ರವಾಸನೆ, ಲೌಕಿಕವಾಸನೆ (ವಿವರಗಳಿಗೆ ೬-೨೯ನೇ ಪದ್ಯ ನೋಡಿ); ನೌಕಾಸ್ತಂಭಸಂಸ್ಥಿತಕಾಕನಂತೆ=ಹಡಗಿನ ಧ್ವಜಸ್ತಂಭದ ಮೇಲಿರುವ ಕಾಗೆಯಂತೆ.

**ಟಿಪ್ಪಣಿ:** ನೌಕಾಸ್ತಂಭಸಂಸ್ಥಿತ ಕಾಕನಂತೆ=ಹಡಗಿನ ಮೇಲೆ ಕುಳಿತ ಕಾಗೆಯು ಸ್ವಭಾವವಾದ ಚಪಲದಿಂದ ಅತ್ತಿತ್ತ ಹಾರಿ ಹೋದರೂ ಎಲ್ಲಿಯೂ ತನಗೆ ಸುರಕ್ಷಿತವಾದ ಸ್ಥಾನವನ್ನು ಕಾಣದೆ ಮತ್ತೆ ಅಲ್ಲಿಗೇ ಬಂದು ಕುಳಿತುಕೊಳ್ಳುವಂತೆ ಧ್ಯಾನ ಮಾಡುವಾಗ ಮನಸ್ಸು ಅತ್ತಿತ್ತ ಚಲಿಸಿದರೂ ಹೊರಗಣ ವಿಷಯಗಳು ಸುರಕ್ಷಿತವಲ್ಲವೆಂಬುದನ್ನು ವಿಚಾರಕ್ಕೆ ತಂದುಕೊಂಡು ಮತ್ತೆ ಹಿಂದಿರುಗಿ ಆತ್ಮ ಸ್ವರೂಪದಲ್ಲಿಯೇ ನಿಲ್ಲುವದು.

---

**ಆಸನವನಳವಡಿಸಿ, ಪ್ರಾಣವ**
**ಸೂಸದಂದದಿ ನಿಲಿಸಿ, ದೃಷ್ಟಿಯ**
**ನಾಸಿಕಾಗ್ರದೊಳಿಟ್ಟು, ತನುಶಿರಗಳನು ರುಜುಮಾಡಿ, ।**
**ಲೇಸೆನಿಸುವೇಕಾಂತದೆಡೆಯೊಳು**
**ದೇಶಿಕೋತ್ತಮನಿಂದ ತನಗುಪ**
**ದೇಶವಾದುದ ಮರಳಿಯಾವರ್ತಿಸುವದೇ ಮನನ ॥ ॥೪೯॥**

**ತಾತ್ಪರ್ಯ:** ಯೋಗಶಾಸ್ತ್ರದಲ್ಲಿ ತಿಳಿಸಿರುವಂತೆ ಆಸನಭೇದಗಳನ್ನು ತಿಳಿದುಕೊಂಡು ತನಗೆ ಯುಕ್ತವಾದ ಆಸನದಲ್ಲಿ ಕುಳಿತು ಪ್ರಾಣಾಯಾಮದಿಂದ ಪ್ರಾಣವಾಯು ಹೊರಬೀಳದಂತೆ ಕೇಂದ್ರೀಕರಿಸಿ ದೃಷ್ಟಿಯನ್ನು ಮೂಗಿನ ತುದಿಯಲ್ಲಿ ನೆಟ್ಟು ಶರೀರವನ್ನು ಶಿರವನ್ನೂ ನೇರವಾಗಿರಿಸಿ ಪರಿಶುದ್ಧವಾದ ಏಕಾಂತ ಪ್ರದೇಶದಲ್ಲಿ ಕುಳಿತು ಧ್ಯಾನಸ್ಥನಾಗಬೇಕು. ಸದ್ಗುರುವಿನಿಂದ ಉಪದೇಶವಾದ ಮಂತ್ರವನ್ನು ಮತ್ತೆ ಮತ್ತೆ ಮನಸ್ಸಿಗೆ ತಂದುಕೊಳ್ಳುವುದೇ ಮನನವೆನಿಸುತ್ತದೆ.

**ಶಬ್ದಾರ್ಥ: * ಆಸನವನಳವಡಿಸಿ**=ಸೂಕ್ತವಾದ ಆಸನದಲ್ಲಿ ಕುಳಿತು; **ಪ್ರಾಣವಸೂಸದಂದದಿ ನಿಲಿಸಿ**=ಪ್ರಾಣವಾಯುವನ್ನು ಪ್ರಾಣಾಯಾಮದಿಂದ ಕದಲದಂತೆ (ಹೊರಬೀಳದಂತೆ) ಮಾಡಿ; **ದೃಷ್ಟಿಯ ನಾಸಿಕಾಗ್ರದೊಳಿಟ್ಟು**=ದೃಷ್ಟಿಯನ್ನು ಮೂಗಿನ ಮೇಲೆ ನೆಟ್ಟು (ಮನಸ್ಸನ್ನು ಚಲಿಸದಂತೆ ಮಾಡಿ); **ಲೇಸೆನಿಸುವ ಏಕಾಂತದೆಡೆಯೊಳು**=ಪರಿಶುದ್ಧವಾದ ಏಕಾಂತ ಪ್ರದೇಶದಲ್ಲಿ ಕುಳಿತು; *** ದೇಶಿಕೋತ್ತಮನಿಂದ**=ಸದ್ಗುರುವಿನಿಂದ; **ತನಗೆ ಉಪದೇಶವಾದಾಗ**=ಉಪದೇಶ ಹೊಂದಿದ ಮಂತ್ರವನ್ನು; *** ಮರಳಿ**=ಮತ್ತೆ ಮತ್ತೆ; **ಆವರ್ತಿಸುವುದು**=ಮತ್ತೆ ಮತ್ತೆ ಮನಸ್ಸಿಗೆ ತಂದುಕೊಂಡು ಧ್ಯಾನಿಸಬೇಕು.

**ಟಿಪ್ಪಣಿ–೧: ಆಸನವನಳವಡಿಸಿ**=ಈ ಪದ್ಯದಲ್ಲಿ ಹೇಳಿರುವ ಧ್ಯಾನದ ಲಕ್ಷಣವನ್ನು ಗೀತೆಯಲ್ಲಿ ಅಧ್ಯಾಯ ೬ ಶ್ಲೋಕ ೧೦, ೧೧, ೧೨, ೧೩ರಲ್ಲಿ ವಿವರಿಸಿದೆ.

೧ಎ: **ಯೋಗೀಯುಞ್ಜೀತ ಸತತಮಾತ್ಮಾನಂ ರಹಸಿಸ್ಥಿತಃ ಏಕಾಕೀ ಯತಚಿತ್ತಾತ್ಮಾ ನಿರಾಶೀರ ಪರಿಗ್ರಹಃ** (೬–೧೦) ಗೀತೆ [ಧ್ಯಾನವನ್ನು ಮಾಡಬೇಕೆನ್ನುವವನು ಗುಟ್ಟಾದ ಕಡೆ ಒಂಟಿಯಾಗಿದ್ದು ಉಪಕರಣಗಳೂ ಇಲ್ಲದವನಾಗಿ ಯಾವಾಗಲೂ ಮನಸ್ಸನ್ನು ಪರಮಾತ್ಮನಲ್ಲಿಯೇ ಕೂಡಿಸಿಕೊಂಡಿರಬೇಕು].

೧ಬಿ: **ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್** ॥ [ಶುದ್ಧವಾದ ಕಡೆ ಹೆಚ್ಚು ಎತ್ತರವೂ ಹೆಚ್ಚು ತಗ್ಗೂ ಆಗದಂತೆ ದರ್ಭೆ, ಹುಲಿಯ ಅಥವಾ ಜಿಂಕೆಯ ಚರ್ಮ, ಬಟ್ಟೆ–ಇವುಗಳನ್ನು ಕ್ರಮವಾಗಿ ಒಂದರ ಮೇಲೊಂದಾಗಿ ತಾನೇ ಬಳಸುವ ತನ್ನ ಪೀಠವನ್ನು ಅಲ್ಲಾಡದಂತೆ ಚೆನ್ನಾಗಿ ಹಾಸಿ,] ೬–೧೧ ಗೀತೆ

೧ಸಿ: **ತತ್ರೈಕಾಗ್ರಂ ಮನಃಕೃತ್ವಾ ಯತ್ತಚಿತ್ತೇಂದ್ರಿಯ ಕ್ರಿಯಃ ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮ ವಿಶುದ್ಧಯೆ** ॥ ೬–೧೨ ಗೀತೆ [ಅಲ್ಲಿ ಪೀಠದ ಮೇಲೆ ಕುಳಿತು ಮನಸ್ಸಿನ ಮತ್ತು ಇಂದ್ರಿಯಗಳ ಕೆಲಸವನ್ನು ಬಿಗಿ ಹಿಡಿದ ಮನಸ್ಸನ್ನು ಒಮ್ಮುಖವಾಗಿ ಮಾಡಿ, ಮನಸ್ಸಿನ ಶುದ್ಧಿಗಾಗಿ ಮನೋನಿಗ್ರಹವನ್ನು ಅಭ್ಯಾಸಮಾಡಬೇಕು.]

**ಟಿಪ್ಪಣಿ–೧: ೧ಡಿ: ಸಮಂ ಕಾಯೋಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ಸಂಪ್ರೇಕ್ಷ್ಯನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್** [ಮೈ, ತಲೆ, ಕೊರಳು–ಇವುಗಳನ್ನು ನೆಟ್ಟಗೆ ಅಲ್ಲಾಡದಂತೆ ಇಟ್ಟುಕೊಂಡು ನೆಲೆಯಾಗಿದ್ದು ತನ್ನ ಮೂಗಿನ ತುದಿಯ ಕಡೆಗೆ ನೋಡುತ್ತ ದಿಕ್ಕುಗಳನ್ನು ಕೂಡ ನೋಡದೆ] ೬–೧೩ ಗೀತೆ

೧ಇ: **ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತಮತ್ಪರಃ** [ತಿಳಿಯಾದ ಮನಸ್ಸಿನವನಾಗಿ (ಕರ್ಮಗಳನ್ನು ಬಿಟ್ಟಿದ್ದರ) ದಿಗಿಲು ಇಲ್ಲದವನಾಗಿ ಗುರುಸೇವೆ ಮೊದಲಾದ ವ್ರತಗಳನ್ನು ನಡೆಸುತ್ತ ಮನಸ್ಸನ್ನು ಬಿಗಿ ಹಿಡಿದು ನನ್ನಲ್ಲಿಟ್ಟು, ನನ್ನನ್ನೇ ಹೆಚ್ಚಿನ ಗತಿಯೆಂದು ಧ್ಯಾನ ಮಾಡುತ್ತ ಇರಬೇಕು] ೬–೧೪ ಗೀತೆ

**[ಆಕರ: ಗೀತೆಯ ಕೈಗನ್ನಡಿ–ಹೊಸಕೆರೆ ಚಿದಂಬರಯ್ಯ ಅನುವಾದ ಪುಟ–೧೦೪.]**

**ಟಿಪ್ಪಣಿ–೨: ದೃಷ್ಟಿಯ ನಾಸಿಕಾಗ್ರದೊಳಿಟ್ಟು**=ದೃಷ್ಟಿಯನ್ನು ಮೂಗಿನ ಮೇಲೆ ಇಟ್ಟು (ಈ ಮಾತಿಗೆ ಮೂಗಿನ ತುದಿಯನ್ನು ನೋಡುತ್ತಿರಬೇಕು ಎಂದರ್ಥವನ್ನು ಮಾಡಬಾರದು. ಏಕೆಂದರೆ ಮೂಗಿನ ತುದಿಯನ್ನು ನೋಡುವುದರಿಂದ ಯಾವ ಪುರುಷಾರ್ಥವೂ ಇಲ್ಲ. ದೃಷ್ಟಿಯೊಡನೆ ಮನಸ್ಸು ಹೊರಗೆ ಹೋಗಬಹುದಾದ್ದರಿಂದ ಅದನ್ನು ಅತ್ತಿತ್ತ ಹರಿಯಬಿಡಬಾರದೆಂದು ತಾತ್ಪರ್ಯ).

**ಟಿಪ್ಪಣಿ-೩:** ತನುಶಿರಗಳನು ರುಜುಮಾಡಿ=ಶರೀರವನ್ನೂ ಶಿರಸ್ಸನ್ನೂ ನೆಟ್ಟಗೆ ಇಟ್ಟುಕೊಳ್ಳದಿದ್ದರೆ ಬೆನ್ನು ಹುರಿಯ ನಡುವೆ ನೆಟ್ಟಗೆ ಹೋಗಿರುವ ಸುಷುಮ್ನೆಯೆಂಬ ನಾಡಿಗೆ ನಡುವೆ ತಡೆಯಾಗುವುದರಿಂದ ಮನಸ್ಸು ತನ್ನ ಉದ್ದೇಶಕ್ಕೆ ನೆರವಾಗಲಾರದು-ಸ್ವಾಮಿ ವಿವೇಕಾನಂದ: ರಾಜಯೋಗಗ್ರಂಥ ಪುಟ-೭

**ಟಿಪ್ಪಣಿ-೪:** ಈ ಪದ್ಯದಲ್ಲಿ ಹೇಳಿರುವುದೆಲ್ಲಾ ನಿಧಿಧ್ಯಾಸನಕ್ಕೆ ಸೇರಿದ ಮಾತುಗಳಾದರೂ ಮನನವು ನಿಧಿಧ್ಯಾಸನಕ್ಕೊಯ್ದು ಬಿಡಬೇಕೆಂಬ ದೃಷ್ಟಿಯಿಂದ ಇವುಗಳನ್ನು ಮನನದ ಲಕ್ಷಣದಲ್ಲಿ ಸೇರಿಸಿದ್ದಾಗಿದೆ.

---

**ಮನನದಭ್ಯಾಸವನು ಬಿಡದಂ**
**ತನವರತ ಮಾಡುತ್ತ, ನೆರೆ ತ**
**ನ್ನನುಭವವು ದೃಢವಾಗಿ ನಿಲುವಂದದಲಿ ನಿಶ್ಚಯಿಸೆ, ।**
**ಜನನಹೇತುವೆನಿಪ್ಪ ಕರ್ಮಗ**
**ಳನಿತು ನಾಶವನೈದುವುವು ತಿಳಿ;**
**ಮನದ ಸಂಶಯ ಹೋಗಿ ಹೃದಯಗ್ರಂಥಿಯಳಿದಿಹುದು ॥ ॥೫೦॥**

**ತಾತ್ಪರ್ಯ:** ಹೀಗೆ ಮನನದ ಅಭ್ಯಾಸವನ್ನು ಬಿಡದೆ ನಿರಂತರವಾಗಿ ಮಾಡುತ್ತಾ ಬಂದರೆ, ಶಾಸ್ತ್ರವು ತನಗೆ ನೆನಪುಗೊಟ್ಟಂಥ ತನ್ನ ಅನುಭವವು ಸ್ಥಿರವಾಗಿ ತನ್ನಲ್ಲಿ ನಿಲ್ಲುವಂತೆ ಮಾಡಿದರೆ, ಮರುಹುಟ್ಟಿಗೆ ಕಾರಣವೆನಿಸುವ ಸಕಲ ಕರ್ಮಗಳೂ ನಾಶ ಹೊಂದುವುವು. ಹೀಗಾದಾಗ ಮನಸ್ಸಿನ ಸಂಶಯಗಳು ತೊಲಗಿ ಅವಿದ್ಯೆಯಿಂದ ಮನಸ್ಸಿನಲ್ಲಿ ಹುಟ್ಟುವ ಬಯಕೆ (ಹೃದಯ ಗ್ರಂಥಿ) ನಾಶವಾಗುತ್ತದೆ ಎಂದು ತಿಳಿ.

**ಶಬ್ದಾರ್ಥ:** ತನ್ನನುಭವವು=ಶಾಸ್ತ್ರವು ತನಗೆ ನೆನಪುಗೊಟ್ಟಂಥ ತನ್ನ ಅನುಭವವು; ಹೃದಯಗ್ರಂಥಿ= ಅವಿದ್ಯೆಯಿಂದ ಮನಸ್ಸಿನಲ್ಲಿ ಹುಟ್ಟುವ ಬಯಕೆ; * ಜನನ ಹೇತು=ಮರುಹುಟ್ಟಿಗೆ ಕಾರಣವಾದ; * ಅನಿತು=ಅಷ್ಟೂ;

---

## ನಿದಿಧ್ಯಾಸನ (ಪ ೫೧-೫೩)

**ದಿನದಿನಕೆ ಮನನದಲಿ ಮನಸಿನ**
**ನೆನಹು ತನುಧರ್ಮಗಳ ಮರೆದಾ**
**ತ್ಮನಲಿ ತಾನೆಂದೆಂಬ ಭಾವಜ್ಞಾನ ದೃಢವಾಗಿ, ।**
**ಘನಪರಂಜ್ಯೋತಿಸ್ವರೂಪನೆ**
**ತನಗೆ ತಾನಾಗಿರ್ದವಸ್ಥೆಯ**
**ನನುಗಮಿಸೆ ನಿದಿಧ್ಯಾಸವೆನಿಪುದು ರಾಜಯೋಗದಲಿ ॥ ॥೫೧॥**

**ತಾತ್ಪರ್ಯ:** ಮನನದಿಂದ ಮನಸ್ಸಿನಲ್ಲಿ ಉಂಟಾಗುವ ಸ್ಮರಣೆ ದಿನದಿನಕ್ಕೂ ಬೇರೂರುತ್ತಾ ಶರೀರಧರ್ಮಗಳನ್ನೆಲ್ಲ ಮರೆಯುತ್ತಾ ತಾನೇ ಆತ್ಮನೆಂಬ ಭಾವ

ಜ್ಞಾನವು ಸ್ಥಿರವಾಗುತ್ತಾ ಬಂದರೆ ತನಗೆ ತಾನೇ ಘನವಾದ ಪರಂಜ್ಯೋತಿ ಸ್ವರೂಪನಾಗಿ ವಿಚಾರದಿಂದ ದೃಢವಾದ ರಾಜಯೋಗದ ಅವಸ್ಥೆಯನ್ನು ಪಡೆದಾಗ ಅದೇ ನಿದಿಧ್ಯಾಸನವೆನಿಸಿಕೊಳ್ಳುತ್ತದೆ.

**ಶಬ್ದಾರ್ಥ: ಅನುಗಮಿಸೆ=ಪಡೆಯಲಾಗಿ; ಭಾವಜ್ಞಾನ=ಆತ್ಮಜ್ಞಾನ**

**ಟಿಪ್ಪಣಿ–೧:** ರಾಜಯೋಗದಲಿವಿಚಾರದಿಂದ ದೃಢವಾದ ಈ ನಿದಿಧ್ಯಾಸನವು ರಾಜಯೋಗದ್ದು; ಪಾತಂಜಲಯೋಗಶಾಸ್ತ್ರದಂತೆ ಪ್ರತ್ಯಾಹಾರಾದಿಗಳಿಂದ ಮನಸ್ಸು ಅಂತರ್ಮುಖವಾಗಿ ಏಕಾಕಾರವಾಗಿ ನಿಲ್ಲುವ ನಿದಿಧ್ಯಾಸನವು ಹಠಯೋಗದ್ದೆಂದು ಜ್ಞಾನಿಗಳ ಅಭಿಪ್ರಾಯ. ಜ್ಞಾನಿಗಳಿಗೆ ಮನಸ್ಸು ಬಹಿರ್ಮುಖವಾಗಿದ್ದರೂ ಅವರಿಗೆ ಸರ್ವವೂ ಬ್ರಹ್ಮವೆಂಬ ದೃಢಜ್ಞಾನವಿರುವುದರಿಂದ ಅದೇ ನಿದಿಧ್ಯಾಸನವೆನಿಸಿಕೊಳ್ಳುವುದು.

---

**ಬ್ರಹ್ಮಮಯವಾಗಿರ್ಪವಸ್ಥಾ**
**ಧರ್ಮವು ನಿಧಿಧ್ಯಾಸವಪ್ಪುದು;**
**ಬ್ರಹ್ಮಸಾಕ್ಷಾತ್ಕರಿಸೆ ಬುದ್ಧಿ ಸಮಾಧಿಯೆನಿಸಿವದು; ।**
**ಹಮ್ಮಿನಿಂ ಪ್ರಾರಬ್ಧಕರ್ಮದ**
**ಬಿಮ್ಮು ತೀರಲು ಸಂಪಿಗೆಯನಳಿ**
**ನೆಮ್ಮಿದಂತೆ ವಿದೇಹಕೈವಲ್ಯದಲಿ ಸುಖಿಯಹನು ॥ ॥೫೨॥**

**ತಾತ್ಪರ್ಯ:** ಬುದ್ಧಿಯು ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದರೆ ಅದೇ ಸಮಾಧಿಯೆನಿಸುವುದು. ಬ್ರಹ್ಮನ ಮಾಯಾಶಕ್ತಿಯ ಅಹಂಕಾರದಿಂದ ಉಂಟಾದ ಪ್ರಾರಬ್ಧಕರ್ಮಬಂಧವು ನಾಶವಾದರೆ, ಕೆಂಡಸಂಪಗೆಯ ಹೂವನ್ನು ಮುತ್ತಿದ ಭ್ರಮರವು ತನಗರಿವಿಲ್ಲದಂತೆಯೇ ತನ್ನ ದೇಹವನ್ನು ಕಳೆದುಕೊಂಡು ಆ ಸುವಾಸನೆಯಲ್ಲಿಯೇ ಒಂದಾಗಿ ಬಿಡುವಂತೆ ವಿದೇಹಕೈವಲ್ಯವೆನಿಸುವ ಸಾಯುಜ್ಯ ಪದವಿಯನ್ನು ಸೇರಿ ಸುಖಿಸುತ್ತಾನೆ.

**ಶಬ್ದಾರ್ಥ:** ಬ್ರಹ್ಮಮಯವಾಗಿರ್ಪ=ಭಾವನೆಯಿಂದ ಬ್ರಹ್ಮವನ್ನು ಅನುಸಂಧಾನ ಮಾಡುತ್ತಿರುವಂಥ (ಭಾವನೆಯಿಂದ ಅನುಸಂಧಾನ ಮಾಡುವುದು ನಿದಿಧ್ಯಾಸನವು) **ಸಾಕ್ಷಾತ್ಕರಿಸೆ ಬುದ್ಧಿ ಸಮಾಧಿಯೆನಿಸುವುದು**=ಬುದ್ಧಿಗೆ ಬ್ರಹ್ಮಸಾಕ್ಷಾತ್ಕಾರವಾದರೆ ಅದೇ ಸಮಾಧಿಯೆನಿಸುವುದು; **ಸಂಪಿಗೆಯನಳಿನೆಮ್ಮಿದಂತೆ**=ಭ್ರಮರವು ಸಂಪಗೆಯ ಹೂವನ್ನು ಆಶ್ರಯಿಸಿದ ಹಾಗೆ

**ಟಿಪ್ಪಣಿ: ಸಂಪಿಗೆಯನಳಿನೆಮ್ಮಿದಂತೆ**=ಭ್ರಮರವು ಸಂಪಗೆಯ ಹೂವನ್ನು ಆಶ್ರಯಿಸಿದ ಹಾಗೆ ಸಂಪಿಗೆಯ ಹೂವನ್ನು ಮುತ್ತಿದ ಭ್ರಮರವು ತನಗರಿವಿಲ್ಲದಂತೆ ತನ್ನ ದೇಹವನ್ನು ಕಳೆದುಕೊಂಡು ಆ ಸುವಾಸನೆಯಲ್ಲಿ ಒಂದಾಗಿ ಹೋಗಿಬಿಡುತ್ತದೆ.

---

**ಶ್ರವಣದಿಂದಜ್ಞಾನ ಕೆಡಲಂ**
**ತವಿರಳಪರಂಜ್ಯೋತಿ ಮನನದಿ**
**ಸವನಿಸಲು ದೃಢವಾಗಿ, ನಿಶ್ಚಲವಾದ ನಿಜಪದವು ।**

**ಧ್ರುವಪದವೆನಿಪ್ಪುದದು ನಿದಿಧ್ಯಾ**
**ಸವದು ಜೀವನ್ಮುಕ್ತಿ ನಿನಗಂ**
**ತವುಗಳಿಂದಲಿ ದೊರಕುವದು ಶುಕಯೋಗಿ ಕೇಳೆಂದ ॥೫೩॥**

**ತಾತ್ಪರ್ಯ:** ಶ್ರವಣದಿಂದಲೆ ಅಜ್ಞಾನವು ಹೋದಮೇಲೆ ಮನನ ನಿದಿಧ್ಯಾಸನಗಳೇಕೆ? ಹಾಗೆಯೇ ಅತಿಶಯವೂ ಆನಂದಮಯವೂ ಆದ ಪರಂಜ್ಯೋತಿಯು ಮನನದಿಂದ ದೊರಕಿದಾಗ ಶಾಶ್ವತವೂ ದೃಢವೂ ಆದ ಪದವಿ (ಧ್ರುವ ಪದವಿ) ಎನಿಸುತ್ತದೆ. ಅದೇ ನಿದಿಧ್ಯಾಸವು. ಆ ನಿದಿಧ್ಯಾಸದಿಂದಲೇ ನಿನಗೆ ಜೀವನ್ಮುಕ್ತಿ ಲಭಿಸುವುದೆಂದು ತಿಳಿ ಎಂದು ಶುಕಯೋಗಿಗೆ ವ್ಯಾಸನು ಹೇಳಿದನು.

**ಶಬ್ದಾರ್ಥ: ಶ್ರವಣದಿಂದಜ್ಞಾನಕೆಡಲು** (ಶ್ರವಣದಿಂದ+ಅಜ್ಞಾನಕೆಡಲು) ಶ್ರವಣದಿಂದಲೇ ಅಜ್ಞಾನವು ಹೋದ ಮೇಲೆ ಇನ್ನು ಮನನ ನಿದಿಧ್ಯಾಸನಗಳೇಕೆ? **ಸವನಿಸಲು**=ದೊರೆಯಲು; **ಧ್ರುವಪದವೆನಿಪ್ಪುದು**=ಶಾಶ್ವತವಾದ ಪದವಿಯೆನಿಸಿಕೊಳ್ಳುವುದು;

**ಟಿಪ್ಪಣಿ-೧: ಶ್ರವಣದಿಂದಜ್ಞಾನಕೆಡಲು**=ಇಲ್ಲಿ ಅಜ್ಞಾನವೆಂಬ ಶಬ್ದಕ್ಕೆ ಸಂಪೂರ್ಣವಾಗಿ ಅಕ್ಷರಾರ್ಥವನ್ನು ಮಾಡಿಕೊಳ್ಳಬಾರದು. ಅದರ ಮಡಿಕೆಯು ಕಡಿಮೆಯಾಯಿತೆಂದಿಷ್ಟೇ ಮಾಡಿಕೊಳ್ಳಬೇಕು ಏಕೆಂದರೆ ಇದು ಸಾಧನದ ಪ್ರಕರಣ. ಶ್ರವಣವಾದ ಮೇಲೆ ಮನನ ನಿದಿಧ್ಯಾಸನಗಳ ಮೆಟ್ಟಿಲುಗಳನ್ನೇರುವ ವಿಚಾರವೂ ಇಲ್ಲಿ ಬೇಕು. ಯಾವ ಮೆಟ್ಟಿಲೂ ಇಲ್ಲದಂಥ ವಿಚಾರ ಪ್ರಕರಣವು ಮುಂದಿನ ಅಧ್ಯಾಯದಲ್ಲಿರುವುದು.

**ಟಿಪ್ಪಣಿ-೨: * ಜೀವನ್ಮುಕ್ತಿ**- ದೇಹಾದಿ ಪ್ರಪಂಚದ ಪ್ರತೀತಿ ಆದಾಗ್ಯೂ ಬ್ರಹ್ಮಸ್ವರೂಪದಿಂದ ಸ್ಥಿತಿ ಉಂಟಾಗುವುದೇ ಜೀವನ್ಮುಕ್ತಿ ಆಗಿರುವುದು. ಶ್ರೀ ಶೃತಿವಿಚಾರ ಚಂದ್ರೋದಯ-ಪುಟ-೧೮೯.

---

## ಸಮಾಧಿಯ ಆರು ಭೇದಗಳು (೫೪-೬೦)

**ನಿತ್ಯವಧ್ಯಾತ್ಮದ ವಿಚಾರದಿ**
**ಚಿತ್ತವಂತರ್ಮುಖವದಾಗಲು,**
**ಚಿತ್ತಿನನುಸಂಧಾನದಪರೋಕ್ಷಾನುಭವದಿಂದ ।**
**ಸತ್ಯ ಸಹಜಾನಂದ ಪರತರ**
**ವಸ್ತು ಸಾಕ್ಷಾತ್ಕರಿಸಿ, ಬುದ್ಧಿಯ**
**ವೃತ್ತಿಯೊಡನೇಕತ್ವವಾಗೆ ಸಮಾಧಿಯೆನಿಸುವದು ॥ ॥೫೪॥**

**ತಾತ್ಪರ್ಯ:** ಮನಸ್ಸು ಪ್ರತಿನಿತ್ಯವೂ ಅಧ್ಯಾತ್ಮದ ವಿಚಾರದಲ್ಲಿ ಮಗ್ನವಾಗಿ ಒಳಮುಖಿ ಆದಾಗ ಚಿದ್ರೂಪವಾದ ಆತ್ಮನ ಅನುಸಂಧಾನದಿಂದ ಪ್ರತ್ಯಕ್ಷಾನುಭವವಾಗುತ್ತದೆ. ಆಗ ನಿಜವಾದ ಮತ್ತು ಸಹಜಾನಂದಮಯವಾದ ಪರಾತ್ಪರವಸ್ತು ಸಾಕಾರ ಗೊಳ್ಳುವುದು. ಅದು ಬುದ್ಧಿಯ ವೃತ್ತಿಯೊಡನೆ ಏಕತ್ವ ಹೊಂದಿ ಸಮಾಧಿ ಎನ್ನಿಸುತ್ತದೆ.

**ಶಬ್ದಾರ್ಥ: * ಅಂತರ್ಮುಖ=ಒಳಮುಖ; * ಅಪರೋಕ್ಷಾನುಭವ=ಪ್ರತ್ಯಕ್ಷಾನುಭವ, ಬ್ರಹ್ಮಾನುಭವ; ಚಿತ್ತಿನ=ಚಿದ್ರೂಪವಾದ ಆತ್ಮನ;**

**ಟಿಪ್ಪಣಿ: * ಅಪರೋಕ್ಷಾನುಭವ=**ಭಕ್ತಿಗೆ ಕಾರಣವಾದ ಜ್ಞಾನವು ಮೊದಲು ಪರೋಕ್ಷ ಅಭ್ಯಾಸದಿಂದ ಅದು ಪಕ್ವವಾಗಿ ಅಪರೋಕ್ಷವಾಗುತ್ತದೆ. ಮತ್ತೊಂದು ಭಾವಕ್ಕೆ ಅವಕಾಶಕೊಡದೆ ತಾನೇ ತಾನಾಗಿ ಸದಾ ಸರ್ವಥಾ ಇರುವುದೇ ಅಪರೋಕ್ಷ ಜ್ಞಾನದ ನಿರ್ದೋಷಾವಸ್ಥೆ. (ಪರಮಾರ್ಥ ಪದಕೋಶ ಪುಟ-೩೭)

---

**ಧ್ಯಾನನಿಶ್ಚಲವೇ ಸಮಾಧಿಯ**
**ದೇ ನಿದಾನಿಸಲಾರುಭೇದವು**
**ಮಾನನಿಧಿ ಸವಿಕಲ್ಪಕವು ತಿಳಿ ನಿರ್ವಿಕಲ್ಪಕವು ।**
**ಧ್ಯಾನಿಸಲು ಸವಿಕಲ್ಪಕವೆ ದೃ**
**ಶ್ಯಾನುವಿದ್ಧವದೇ ಮಗುಳೆ ಶ**
**ಬ್ದಾನುವಿದ್ಧವಿವೆರಡು ಬಾಹ್ಯಾಭ್ಯಂತರಗಳಿಂದ ॥** **॥೫೫॥**

**ತಾತ್ಪರ್ಯ:** ವಿಚಾರಮಾಡಿದರೆ ನಿಶ್ಚಲವಾದ ಧ್ಯಾನವೇ ಸಮಾಧಿ. ಇದು ೬ ಭೇದಗಳಿಂದ ಕೂಡಿದೆ. ೧) ಸವಿಕಲ್ಪಕ; ೨) ನಿರ್ವಕಲ್ಪಕ; ೩) ದೃಶ್ಯ; ೪) ದೃಶ್ಯಾನುವಿದ್ಧ; ೫) ಶಬ್ದ; ೬) ಶಬ್ದಾನುವಿದ್ಧ; ಸಮಾಧಿಯು ಸವಿಕಲ್ಪಕ ಮತ್ತು ನಿರ್ವಿಕಲ್ಪಕವೆಂದು ಎರಡು ಬಗೆ. ಸವಿಕಲ್ಪಕದಲ್ಲಿ ದೃಶ್ಯಾನುವಿದ್ಧ ಮತ್ತು ಶಬ್ದಾನುವಿದ್ಧಿ ಎಂದು ಎರಡು ಬಗೆ. ಈ ದೃಶ್ಯಾನುವಿದ್ಧವು ಬಾಹ್ಯ ಅಭ್ಯಂತರ ಎಂಬ ಭೇದಗಳಾಗುತ್ತವೆ. ಶಬ್ದಾನಿವಿದ್ಧವು ಬಾಹ್ಯ ಅಭ್ಯಂತರಗಳೆಂದು ಎರಡು ಭೇದಗಳಾಗುತ್ತವೆ. ಇನ್ನು ನಿರ್ವಿಕಲ್ಪದಲ್ಲೂ ಬಾಹ್ಯ ಅಭ್ಯಂತರ ಎರಡು ವಿಧವಾಗಿರುತ್ತದೆ. ಹೀಗೆ ಒಟ್ಟಿನಲ್ಲಿ ೧) ಬಾಹ್ಯ ದೃಶ್ಯಾನುವಿದ್ಧಿ; ೨) ಅಂತರ ದೃಶ್ಯಾನುವಿದ್ಧಿ; ೩) ಬಾಹ್ಯ ಶಬ್ದಾನುವಿದ್ಧ; ೪) ಅಂತರಶಬ್ದಾನುವಿದ್ಧ; ೫) ಬಾಹ್ಯ ನಿರ್ವಿಕಲ್ಪ; ೬) ಅಂತರನಿರ್ವಿಕಲ್ಪ ಎಂದು ಆರು ಬಗೆಗಳಾಗಿವೆ.

**ಶಬ್ದಾರ್ಥ: ನಿಧಾನಿಸಲು=**ವಿಚಾರ ಮಾಡಿ ನೋಡಿದರೆ; *** ದೃಶ್ಯಾನುವಿದ್ಧ=**ದೃಶ್ಯದಿಂದ ಕೂಡಿದ್ದು; *** ಶಬ್ದಾನುವಿದ್ಧ=**ಶಬ್ದದಿಂದ ಕೂಡಿದ್ದು; *** ಬಾಹ್ಯ=**ಹೊರಗು; *** ಅಂತರ=**ಒಳಗು; *** ಸವಿಕಲ್ಪಕ=**ಪ್ರತ್ಯಕ್ಷದ ಒಂದು ಭೇದ; *** ನಿರ್ವಿಕಲ್ಪಕ=**ಜ್ಞಾನ, ಜ್ಞಾತೃ, ಜ್ಞೇಯಗಳು ಇಲ್ಲವಾದ ಸ್ಥಿತಿ (ಪರಮಾರ್ಥಪದಕೋಶ ಪುಟ ೨೨೧)

**ಟಿಪ್ಪಣಿ-೧:** ಸವಿಕಲ್ಪಕ, ನಿರ್ವಿಕಲ್ಪಕ, ದೃಶ್ಯಾನುವಿದ್ಧ (ದೃಶ್ಯದಿಂದ ಕೂಡಿದ್ದು), ಶಬ್ದಾನುವಿದ್ಧ (ಶಬ್ದದಿಂದ ಕೂಡಿದ್ದು) ಬಾಹ್ಯ, ಅಂತರ, ಬಾಹ್ಯ, ಅಭ್ಯಂತರ, ಬಾಹ್ಯ ಅಭ್ಯಂತರ;

**ಟಿಪ್ಪಣಿ-೨:** ಸರಸ್ವತೀರಹಸ್ಯೋಪನಿಷತ್ತಿನಲ್ಲಿ (ಸಂ ೧೦೭) ದೃಶ್ಯಾನುವಿದ್ಧಿ, ಶಬ್ದಾನುವಿದ್ಧಿ, ನಿಃಸಂಕಲ್ಪ, ನಿರ್ವಿಕಲ್ಪ, ನಿರ್ವೃತ್ತಿಕ, ನಿರ್ವಾಸನ ಎಂದು ೬ ಬಗೆ ಸಮಾಧಿ ಹೇಳಿದೆ. (ಶ್ರೀವತ್ಸ ನಿಘಂಟು ಪುಟ ೩೨೭)

**ಟಿಪ್ಪಣಿ-೩:** ಆರುಭೇದಗಳನ್ನು ನಕ್ಷೆರೂಪದಲ್ಲಿ ಹೀಗೆ ತೋರಿಸಬಹುದು.




---

**ಒಳಗೆ ಕರಣಂಗಳನು ಕುರುಹಿ**
**ಟ್ಟಳವಡಲು ದೃಶ್ಯತ್ವದಿಂ, ತಾ**
**ತಿಳಿಯುತವನೊಂದೊಂದನಿದಿರಿಟ್ಟರಿದು, ತಾನದಕೆ ।**
**ತಳೆದು ಸಾಕ್ಷಿತ್ವವನು, ಬೇರಾ**
**ಗುಳಿವುದೇ ದೃಶ್ಯಾನುವಿದ್ದವು;**
**ಬಳಕೆಯ ಸಮಾಧಿಯು ಕುಮಾರನೆ ಕೇಳು ನೀನೆಂದ ॥ ॥೫೬॥**

**ತಾತ್ಪರ್ಯ:** ಒಳಗಣ ಇಂದ್ರಿಯಗಳನ್ನು ದೃಶ್ಯತ್ವದಿಂದ ಗುರುತಿಸಿ ಅಳವಡಿಸಲು ಇದು ನೋಡುವ ಕಣ್ಣು, ಕೇಳುವ ಕಿವಿ, ಇತ್ಯಾದಿಯಾಗಿ ಇಂದ್ರಿಯಗಳನ್ನು ತನ್ನ ಇದಿರಿನವುಗಳ ಹಾಗೆ ಮಾಡಿಕೊಂಡು ತಾನು ಅವುಗಳಿಗೆ ಸಾಕ್ಷಿಯಾಗಿ ಬೇರೆಯಾಗಿ ಉಳಿಯುವುದೇ ಅಭ್ಯಂತರ ದೃಶ್ಯಾನುವಿದ್ದವು. ಏಕೆಂದರೆ ಇಲ್ಲಿ ದೃಶ್ಯಗಳಾದ ಕರಣಗಳೆಲ್ಲ ಒಳಗಿನವುಗಳಾಗಿವೆ. ಇದನ್ನೇ ರೂಢಿಯಲ್ಲಿ ಜನರು ಸಮಾಧಿ ಎನ್ನುತ್ತಾರೆ. ಕುಮಾರಾ, ಇದನ್ನು ತಿಳಿ ಎಂದು ವ್ಯಾಸನು ನುಡಿದನು.

**ಶಬ್ದಾರ್ಥ:** * **ಕರಣಂಗಳನು**=ಇಂದ್ರಿಯಗಳು; **ಕುರುಹಿಟ್ಟು**=ಗುರುತಿಸಿ; **ಅಳವಡಲು**=ದೃಶ್ಯತ್ವದಿಂದ ಅಳವಡಲು; **ಒಂದೊಂದನು+ಇದಿರು+ಇಟ್ಟು+ಅರಿದು**=ಇದು ನೋಡುವ ಕಣ್ಣು, ಕೇಳುವ ಕಿವಿ, ಮುಂತಾಗಿ ಇಂದ್ರಿಯಗಳನ್ನು ತನ್ನ ಇದಿರಿನವುಗಳ ಹಾಗೆ ಮಾಡಿಕೊಂಡು; **ದೃಶ್ಯಾನುವಿದ್ದವು**=ಇಲ್ಲಿ ದೃಶ್ಯಗಳಾದ ಕರಣಗಳೆಲ್ಲ ಒಳಗಿನವುಗಳಾದ್ದರಿಂದ ಇದು ಅಭ್ಯಂತರ ದೃಶ್ಯಾನುವಿದ್ದವು. **ಬಳಕೆಯ ಸಮಾಧಿಯು**=ರೂಢಿಯಲ್ಲಿ ಜನರು ಇದನ್ನೇ ಸಮಾಧಿ ಎನ್ನುತ್ತಾರೆ.

---

**ಅವನಿದ ಕೇಳುವನು, ಕಾಣುವ**
**ನಾವನಾಸ್ವಾದಿಸುವ, ಗಂಧವ**
**ನಾವನಾಘ್ರಾಣಿಸುವ, ಶೀತೋಷ್ಣಗಳನರುಹಿಸುವ, ।**

**ಆ ವಿಭುವೆ ತಾನೆನ್ನುತಲಿ ತಾ**
**ನೀ ವಿಷಯಗಳ ಕುರಿತು ಕುರುಹನು**
**ಭಾವಿಸಲು ದೃಶ್ಯಾನುವಿದ್ಧವು ಮಗನೆ ಕೇಳೆಂದ ॥ ॥೫೭॥**

**ತಾತ್ಪರ್ಯ:** ಯಾವನು ಇದನ್ನು ಕೇಳುತ್ತಾನೆಯೋ, ಯಾವನು ಇದನ್ನು ಕಾಣುತ್ತಾನೆಯೋ, ಯಾವನು ರುಚಿ ನೋಡುತ್ತಾನೆಯೋ, ಯಾವನು ವಾಸನೆಯನ್ನು ಮೂಸಿನೋಡುತ್ತಾನೆಯೋ, ಯಾವನು ಶೀತೋಷ್ಣಗಳನ್ನು ತಿಳಿಸುತ್ತಾನೆಯೋ, ಅದೇ ದೃಶ್ಯಾನುವಿದ್ಧವು ಎಂಬ ಸಮಾಧಿ ಆಗಿರುತ್ತದೆ. ಆ ಆತ್ಮವೇ ಪ್ರಭುವೇ ತಾನಾಗಿ ಪಂಚಭೂತಗಳಿಗೆ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂದು ಭಾವಿಸಿದರೆ ಅದೇ ದೃಶ್ಯಾನುವಿದ್ಧವು ಎಂದು ಶುಕನೇ ತಿಳಿ ಎಂದು ವ್ಯಾಸನು ಹೇಳಿದನು.

**ಟಿಪ್ಪಣಿ: ಈ ವಿಷಯಗಳ ಕುರಿತು ಕುರುಹನು ಭಾವಿಸಲು**=ಕೇಳುವಿಕೆ, ಕಾಣುವಿಕೆ ಮೊದಲಾದವುಗಳಿಗೆಲ್ಲ ಶಕ್ತಿಯನ್ನು ಕೊಡುವ ವಸ್ತು ಬೇರೆ ಇರಬೇಕೆಂದು ಇವುಗಳ ಸಹಾಯದಿಂದ ಅದನ್ನು ಸಿಲುಕಿಸಿಕೊಂಡರೆ; ಇಂದ್ರಿಯಗಳ ಪ್ರೇರಕನು ಆತ್ಮನೆಂಬ ಅರ್ಥದಲ್ಲಿ ಕೇನೋಪನಿಷತ್ತು ಹೀಗೆ ಹೇಳಿದೆ:ಕೇನೇಷಿತಂ ಪತತಿ ಪ್ರೇಷಿತಂ । ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ । ಕೇನೇಷಿತಾಂ ವಾಚಮಿಮಾಂ ವದಂತಿ । ಚಕ್ಷುಃ ಶ್ರೋತ್ರಂ ಖಲು ದೇವಾಯುನಕ್ತಿ ॥

---

**ಮನಕೆ, ವಚನಕೆ, ಕಣ್ಗಗೋಚರ**
**ನೆನಿಸುವಾತ್ಮನನಾವ ಪರಿಯಲಿ**
**ನೆನೆಯಬಹುದೆಂದೆನಲು ಕೇಳು ತಟಸ್ಥಲಕ್ಷಣವ; ।**
**ಅನುವಿನಿಂ ಶಾಖಾಗ್ರದಲಿ ಚಂ**
**ದ್ರನನು ಸಾಧಿಸುವಂತೆ ಕರಣಗ**
**ಳನಿತುವನು ಕುರುಹಿಟ್ಟರಿಯೆ ದೃಶ್ಯಾನುವಿದ್ಧವದು ॥ ॥೫೮॥**

**ತಾತ್ಪರ್ಯ:** ಮನಸ್ಸಿಗೆ, ಮಾತಿಗೆ, ಕಣ್ಣಿಗೆ ಕಾಣಿಸದಿರುವ ಆತ್ಮನನ್ನು ಯಾವ ರೀತಿಯಲ್ಲಿ ಧ್ಯಾನಿಸಲು ಸಾಧ್ಯ? ಎಂದು ಕೇಳುವವರಿಗೆ ಹೇಳುತ್ತೇನೆ ಕೇಳು. ತಟಸ್ಥಲಕ್ಷಣದ ಮೂಲಕ ಕಾಣಬಹುದು. ಹಾಗೆಂದರೆ ಕ್ರಮವಾಗಿ ಕೊಂಬೆಯ ತುದಿಯ ಮೂಲಕವಾಗಿ ಚಂದ್ರನನ್ನು ತೋರಿಸುವಂತೆ ಒಂದರ ಸಹಾಯದಿಂದ ತೋರಿಸಿ ಹೇಳುವುದು. ಆ ರೀತಿಯಲ್ಲಿ ಇಂದ್ರಿಯಗಳೆಲ್ಲವನ್ನು ಗುರುತಿಸಿಕೊಂಡು ತಿಳಿಯುವುದೇ ದೃಶ್ಯಾನುವಿದ್ಧವೆನಿಸುತ್ತದೆ.

**ಶಬ್ದಾರ್ಥ:** * **ಕಣ್ಣಗೋಚರನೆನಿಸುವಾತ್ಮನನಾವದಿರಿಯಲಿ**= ಕಣ್ಗೆ+ಅಗೋಚರನು+ಎನಿಸುವ+ಆತ್ಮನನ್ನು+ಆವರಿಯಲಿ=ಕಣ್ಣಿಗೆ ಕಾಣಿಸದಿರುವ ಆತ್ಮನನ್ನು ಯಾವ ರೀತಿಯಲ್ಲಿ; * **ನೆನೆಯಬಹುದು**=ಧ್ಯಾನಿಸಬಹುದು; * **ಅನುವಿನಿಂ**=ಕ್ರಮವಾಗಿ; * **ಶಾಖಾಗ್ರಹದಲಿ**=ಕೊಂಬೆಯ ತುದಿಯಲಿ; * **ಕರಣಗಳು**=ಇಂದ್ರಿಯಗಳು; * **ಕುರುಹಿಟ್ಟರಿಯೆ**=ಗುರುತಿಸಿಕೊಂಡು;

**ಟಿಪ್ಪಣಿ: ತಟಸ್ಥಲಕ್ಷಣ**=ಕೊಂಬೆಯ ತುದಿಯ ಮೂಲಕವಾಗಿ ಚಂದ್ರನನ್ನು ತೋರಿಸುವಂತೆ ಒಂದರ ಸಹಾಯದಿಂದ ತೋರಿಸಿ ಹೇಳುವುದು.

---

**ಹಲವು ಛಿದ್ರದ ಘಟದೊಳಗೆ ಹೊಳೆ**
**ಹೊಳೆವ ದೀಪಜ್ವಾಲೆಯಂದದೊ**
**ಳೊಳಹೊರಗೆ ಬೆಳಗುತಲಿ ಕರಣದ್ವಾರದಿಂದಾವ, ।**
**ತಿಳಿಯುತಿಹನೋ ಆತ ತಾನೆಂ**
**ದೊಳಗೆ ತನ್ನನು ಕಂಡು ಮನನದೊ**
**ಳೊಲಿದು ಸೋಹಮ್ಮೆನುತಲಿರೆ ಶಬ್ದಾನುವಿದ್ಧವದು ॥ ॥೫೯॥**

**ತಾತ್ಪರ್ಯ:** ಹಲವಾರು ತೂತುಗಳಿರುವ ಮಡಕೆಯೊಳಗೆ ಇಟ್ಟ ದೀಪದ ಬೆಳಕು ಒಳಗೂ ಹೊರಗೂ ಬೆಳಗುತ್ತದೆ. ಅದರಂತೆ ಒಳಗೂ ಹೊರಗೂ ಇಂದ್ರಿಯಗಳ ಮೂಲಕ ಪ್ರಕಾಶಿಸುವ ಆತ್ಮನು ತಾನೇ ಎಂದು ತಿಳಿದುಕೊಂಡು ಮನನದಿಂದ ಸಾಧನೆಮಾಡಿ ಅವನೇ ನಾನು ಎಂದುಕೊಳ್ಳುತ್ತಿದ್ದರೆ ಅದೇ ಶಬ್ದಾನುವಿದ್ಧವು. ಮನಸ್ಸಿನಲ್ಲಿಯೇ ಸೋಹಮ್ಮೆನ್ನುತ್ತಲಿರುವುದರಿಂದ ಇದು ಅಭ್ಯಂತರ ಶಬ್ದಾನುವಿದ್ಧವು.

**ಶಬ್ದಾರ್ಥ:** * **ಛಿದ್ರ**=ತೂತು; * **ಘಟ**=ಮಡಕೆ, ಗಡಿಗೆ; * **ದೀಪದ ಜ್ವಾಲೆ**=ದೀಪದ ಬೆಳಕು; * **ಕರಣ ದ್ವಾರದಿಂದ**=ಇಂದ್ರಿಯಗಳ ಮೂಲಕ; **ಸೋಹಮ್ಮೆನುತಲಿರೆ**=ಅವನೇ ನಾನೆಂದುಕೊಳ್ಳುತ್ತಿದ್ದರೆ; **ಶಬ್ದಾನುವಿದ್ಧವದು**=ಮನಸ್ಸಿನಲ್ಲಿಯೇ ಸೋಹಮೆನುತ್ತಲಿರುವದರಿಂದ ಇದು ಅಭ್ಯಂತರ ಶಬ್ದಾನುವಿದ್ಧವು.

**ಟಿಪ್ಪಣಿ: ಹಲವು ಛಿದ್ರದ ಘಟದೊಳಗೆ ಹೊಳೆಹೊಳೆವ ದೀಪಜ್ವಾಲೆಯಂದದೊಳು**=ಇದೇ ಅಭಿಪ್ರಾಯವನ್ನು ಶ್ರೀ ಶಂಕರ ಭಗವತ್ಪಾದರು ದಕ್ಷಿಣಾಮೂರ್ತಿ ಸ್ತೋತ್ರ (ಸಂಖ್ಯೆ ೪)ರಲ್ಲಿ ಹೇಳಿದ್ದಾರೆ. ನಾನಾಛಿದ್ರಘಟೋದರಸ್ಥಿತಮಹಾದೀಪಪ್ರಭಾಭಾಸ್ವರಂ । **ಜ್ಞಾನಂ ಯಸ್ಯ ತು ಚಕ್ಷುರಾದಿಕರಣದ್ವಾರಾ ಬಹಿಃ ಸ್ಪಂದತೇ ॥ ಜಾನಾಮೀತಿ ತಮೇವ ಭಾಂತಮನುಭಾತ್ಯೇ ತತ್ಸಮಸ್ತಂ ಜಗತ್ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀದಕ್ಷಿಣಾಮೂರ್ತಯೇ ॥**

* **ಅನುವಾದ:** ಅನೇಕ ರಂಧ್ರಗಳನ್ನುಳ್ಳ ಗಡಿಗೆಯ ಹೊರಗೆ ಆ ರಂಧ್ರಗಳಿಂದ ಬೆಳಕು ಹೊರಡುತ್ತಿದ್ದರೆ ಆ ಬೆಳಕು ಗಡಿಗೆಯಿಂದಲೇ ಬಂದುದು ಆಗಿರುತ್ತದೆಯೇ? ಗಡಿಗೆಯು ಬೆಳಕಿಲ್ಲದ ಪದಾರ್ಥವಾದ್ದರಿಂದ ಅದರಿಂದ ಬೆಳಕು ಬರುವ ಹಾಗಿಲ್ಲ. ಆದ್ದರಿಂದ ಗಡಿಗೆಯ ರಂಧ್ರಗಳಿಂದ ಬೆಳಕು ಹೊರಹೊಮ್ಮುತ್ತಿದ್ದರೆ ಅದರೊಳಗಡೆಯಲ್ಲಿ ಬೆಳಕಿನದೀಪ ಇರಲೇಬೇಕೆಂದು ನಿಶ್ಚಿತವಾಗುತ್ತದೆ. ಇದರಂತೆ ಈ ದೇಹೇಂದ್ರಿಯಗಳೆಲ್ಲಾ ಜಡಗಳೆಂದು ನಿದ್ರೆಯ ಕಾಲದಲ್ಲಿಯೂ, ಮರಣ, ಮೂರ್ಛಾದಿ ಅವಸ್ಥೆಗಳಲ್ಲಿಯೂ ಸ್ಪಷ್ಟವಿರುವುದರಿಂದ ಇದರಿಂದಲೇ ಹೊರಗಿನ ಪದಾರ್ಥಗಳ ಜ್ಞಾನವಾಗುವುದೆಂದು ಹೇಳಲಾಗುವುದಿಲ್ಲ. ಆದ ಕಾರಣ ಈ ದೇಹದ ಒಳಗೆ ಜ್ಞಾನ ಸ್ವರೂಪವಾದ ಪದಾರ್ಥವೊಂದಿರಬೇಕು ಇದರ ಜ್ಞಾನವೇ ದೇಹದ ರಂಧ್ರಗಳಂತಿರುವ ಇಂದ್ರಿಯಗಳ ಮೂಲಕ ಹೊರಹೊರಟು ಹೊರಗಿನ ಪದಾರ್ಥಗಳನ್ನು ತಿಳಿಯುತ್ತದೆ ಎಂದೂ ನಿಶ್ಚಿತವಾಗುತ್ತದೆ. ಈ ದೇಹಾದಿ ಸಮೂಹಕ್ಕೆ ಬೇರೆಯಾಗಿರುವ ಈ ಜ್ಞಾನಸ್ವರೂಪವಸ್ತುವೇ ಆತ್ಮನು ಎಂದು ತಾತ್ಪರ್ಯವು.

**[ಅನುವಾದ: ಶೃಂಗಗಿರಿ ಕವಿ ನರಸಿಂಹಶರ್ಮ]**

ಬ್ರಹ್ಮ ತೊಡಗಿ ತೃಣಾಂತವಾಗಿಯು
ಬ್ರಹ್ಮವೇ ಮಣಿಗಣದ ಸೂತ್ರದ
ಧರ್ಮದಲನುಸ್ಯೂತಚೈತನ್ಯಸ್ವರೂಪದಲಿ ।
ನೆಮ್ಮಿಕೊಂಡಿಹುದೆಂದದನು ಸೋ
ಹಮ್ಮೆನುತಲನವರತ ನೆನೆಯುವ
ಧರ್ಮವೇ ಶಬ್ದಾನುವಿದ್ಧವು ಮಗನೆ ಕೇಳೆಂದ ॥ ॥೬೦॥

ತಾತ್ಪರ್ಯ: ಚತುರ್ಮುಖ ಬ್ರಹ್ಮನನ್ನು ಮೊದಲು ಮಾಡಿಕೊಂಡು ಹುಲ್ಲುಕಡ್ಡಿಯವರೆಗೆ ಪರಬ್ರಹ್ಮವೇ ಪೋಣಿಸಿದ ಮುತ್ತುಗಳ ಸರದ ಹಾಗೆ ಎಲ್ಲೆಲ್ಲಿಯೂ ತೂರಿಕೊಂಡಿರುವ ಚೈತನ್ಯಸ್ವರೂಪದಿಂದ ಆವರಿಸಿರುವುದನ್ನೇ ಸೋಹಂ (ಅವನೇ ನಾನು) ಎಂಬುದಾಗಿ ತಿಳಿದು ಸದಾ ಮನನಮಾಡುವ ಧರ್ಮವೇ ಶಬ್ದಾನುವಿದ್ಧವು ಎಂದು ತಿಳಿ ಎನ್ನುತ ವ್ಯಾಸ ಶುಕನಿಗೆ ಹೇಳಿದನು.

ಶಬ್ದಾರ್ಥ: ಬ್ರಹ್ಮ ತೊಡಗಿ=ಚತುರ್ಮುಖಬ್ರಹ್ಮನನ್ನು ಮೊದಲು ಮಾಡಿಕೊಂಡು; ಬ್ರಹ್ಮವೇ=ಪರಬ್ರಹ್ಮವೇ; * ಮಣಿಗಣದಸೂತ್ರದ=ಪೋಣಿಸಿದ ಮುತ್ತುಗಳ ಸರದ ಹಾಗೆ; ಅನುಸ್ಯೂತ=ಎಲ್ಲೆಲ್ಲಿಯೂ ತೂರಿಕೊಂಡಿರುವ; * ನೆನೆಯುವ=ಮನನ ಮಾಡುವುದೇ;

ಟಿಪ್ಪಣಿ–೧: ಶಬ್ದಾನುವಿದ್ಧವು=ಇಲ್ಲಿ ಬಾಯಿಂದ ಅವನೇ ನಾನು ಎನ್ನುವುದರಿಂದ ಬಾಹ್ಯ ಶಬ್ದಾನುವಿದ್ಧವಾಯಿತು. (ಮುಂದಿನ ಪದ್ಯದಲ್ಲಿ ಕವಿಯು ನಿರ್ವಿಕಲ್ಪಸಮಾಧಿಯ ವರ್ಣನೆಗೆ ಹೊರಟಿರುವುದರಿಂದ ಬಾಹ್ಯದೃಶ್ಯಾನುವಿದ್ಧಸಮಾಧಿಯ ವರ್ಣನೆಯು ಉಳಿದಂತಾಗುತ್ತದೆ. ಈ ಪದ್ಯದಲ್ಲಿ ಬ್ರಹ್ಮವನ್ನು ಮೊದಲು ಮಾಡಿಕೊಂಡು ಹುಲ್ಲುಕಡ್ಡಿಯವರೆಗಿನ ಬಾಹ್ಯ ವಿಷಯಗಳನ್ನು ಕುರುಹಿಟ್ಟು ಸೋಹಮ್ಮೆನ್ನುವುದರಿಂದ ಇದೇ ಬಾಹ್ಯದೃಶ್ಯಾನುವಿದ್ಧವೂ ಆಯಿತೆಂದು ಸಮಾಧಾನ ಮಾಡಿಕೊಳ್ಳಬಹುದು.

ಟಿಪ್ಪಣಿ–೨: ಬಾಹ್ಯ ದೃಶ್ಯಾನುವಿದ್ಧವೆಂದರೆ ವಸ್ತುಗಳ ನಾಮರೂಪಗಳನ್ನು ಉಪೇಕ್ಷಿಸಿ ಅಸ್ತಿಭಾತಿ ಪ್ರಿಯರೂಪಗಳನ್ನು ಅಂದರೆ ಅವುಗಳ ಇರುವಿಕೆ ತೋರುವಿಕೆ ಮತ್ತು ನಮಗೆ ಬೇಕೆನಿಸುವಿಕೆ ಇವುಗಳನ್ನು ಸ್ಮರಿಸುವುದು ಎಂದು ಸರ್ಪಭೂಷಣ ಶಿವಯೋಗಿಗಳು ಹೇಳುತ್ತಾರೆ– [ಸರ್ಪಭೂಷಣ ಶಿವಯೋಗಿ–ಕೈವಲ್ಯಕಲ್ಪವಲ್ಲರಿ.]

---

ಕನಸಿನಂದದಿ ತೋರ್ಪ ಜಗವಿದು
ಮನದ ಭ್ರಮೆಯೆಂದರಿದು, ಕೇಳಾ
ಮನವನದ್ವಯವಾದ ಬ್ರಹ್ಮದೊಳೈಕ್ಯವನು ಮಾಡೆ, ।
ನೆನಹಡಗಿ, ಬಾಹ್ಯವನು ಮರೆದಾ
ತ್ಮನಲಿ ರಮಿಸುತ್ತಿರ್ಪವಸ್ಥೆಯ
ನನಘ, ತಿಳಿಯೈ ನಿರ್ವಿಕಲ್ಪಸಮಾಧಿಯೆಂದದನು ॥ ॥ ೬೧ ॥

**ತಾತ್ಪರ್ಯ:** ಸ್ವಪ್ನಪ್ರಾಯನಾಗಿ ತೋರುತ್ತಲಿರುವ ಮಿಥ್ಯಾರೂಪವಾದ ಜಗತ್ತಿನ ವ್ಯವಹಾರಗಳೆಲ್ಲ ಮನಸ್ಸಿನ ಭ್ರಮೆಗಳೆಂದು ತಿಳಿದು ಆ ಮನಸ್ಸನ್ನು ಏಕಾತ್ಮವಾದ ಅಖಂಡಬ್ರಹ್ಮನೊಂದಿಗೆ ಲೀನಗೊಳಿಸಿದಾಗ ಭ್ರಾಂತಿರೂಪವಾದ ಕಲ್ಪನೆಗಳೆಲ್ಲ ಅಡಗಿ ಹೋಗಿ ಬಾಹ್ಯರೂಪವಾದ ಮನಸ್ಸಿನ ಚೇಷ್ಟೆಗಳೆಲ್ಲಾ ಮರೆಯಾಗಿ ಆತ್ಮನಲ್ಲಿ ಆನಂದದಿಂದ ವಿಹರಿಸುವ ಅವಸ್ಥೆಯನ್ನೇ (ಬಾಹ್ಯ) ನಿರ್ವಿಕಲ್ಪ ಸಮಾಧಿ ಎನ್ನುವರು.

**ಶಬ್ದಾರ್ಥ:** ನೆನಹು=ಕಲ್ಪನೆಗಳು; * ತೋರ್ಪ=ಕಾಣುವ; * ಅದ್ವಯವಾದ=ಅಖಂಡವಾದ, ಏಕಾತ್ಮವಾದ; * ರಮಿಸುತಿರ್ಪ=ವಿಹರಿಸುತ್ತಿರುವ;

**ಟಿಪ್ಪಣಿ-೧:** ನಿರ್ವಿಕಲ್ಪಸಮಾಧಿಯೆಂದು=ಈ ಪದ್ಯದಲ್ಲಿ ತಾನೇ ಬ್ರಹ್ಮವೆಂಬ ಕಲ್ಪನೆಯ ಸೂಚನೆಯಾಗದೆ ಬ್ರಹ್ಮದಲ್ಲಿ ಮನಸ್ಸು ಐಕ್ಯವಾಗುವುದೆಂದು ಸಾಮಾನ್ಯವಾಗಿ ಹೇಳಿರುವುದರಿಂದ ಇದು ಬಾಹ್ಯನಿರ್ವಿಕಲ್ಪಸಮಾಧಿ.

---

**ಮಕುಟಕಟಕದ ನಾಮರೂಪಿನ**
**ವಿಕೃತಿಯಳಿದ ಸುವರ್ಣದಂದದಿ,**
**ವಿಕರಿಸಿದ ತೆರೆನೊರೆಗಳಡಗಿದ ಶರಧಿಯಂದದಲಿ, ।**
**ಸಕಲಭೇದದಿ ತೋರ್ಪ ಮಾಯಾ**
**ಸಕತಿಯಳಿದೇಕತ್ವ ನಿರುಪಾ**
**ಧಿಕನಿಜತ್ವವೆ ನಿರ್ವಿಕಲ್ಪಸಮಾಧಿಯೆನಿಸುವದು ॥ ॥ ೬೨ ॥**

**ತಾತ್ಪರ್ಯ:** ಚಿನ್ನದಿಂದ ಕಿರೀಟ, ಬಳೆ ಮೊದಲಾದ ನಾನಾರೂಪದ ಒಡವೆಗಳಾಗುತ್ತವೆ. ಅವುಗಳನ್ನು ಬೆಂಕಿಯಲ್ಲಿ ಕಾಯಿಸಿ ಕರಗಿಸಿದರೆ ಅವುಗಳ ಆಕಾರ ಹೋಗಿ ಮೂಲರೂಪವಾದ ಚಿನ್ನವಾಗುತ್ತದೆ. ಅಂತೆಯೇ ಬೇರೆಬೇರೆ ವಿಕಾರತಳೆದ (ರೂಪು ಧರಿಸಿದ) ಸಮುದ್ರದ ತೆರೆನೊರೆಗಳು ಅಡಗಿದಮೇಲೆ ನಿಜಸ್ಥಿತಿಯ ಪ್ರಶಾಂತ ಸಮುದ್ರವೇ ಕಾಣುತ್ತದೆ. ಹಾಗೆಯೇ ನಾನಾಬಗೆಯಲ್ಲಿ ಕಂಡುಬರುವ ಮಾಯಾಶಕ್ತಿ ಅಳಿದರೆ ಮನಸ್ಸೂ ಕೂಡ ಅಡಗಿಹೋಗಿ ಉಪಾಧಿರಹಿತವಾದ ಏಕತ್ವವಾದ ನಿಜಾತ್ಮ ಕಂಡುಬರುತ್ತದೆ. ಅದೇ ನಿರ್ವಿಕಲ್ಪಸಮಾಧಿ ಎನಿಸುತ್ತದೆ.

**ಶಬ್ದಾರ್ಥ:** ಮಕುಟ=ಕಿರೀಟ; ಕಟಕ=ಬಳೆ; ವಿಕೃತಿ=ವಿಕಾರ; ವಿಕರಿಸಿದ=ವಿಕಾರ ಹೊಂದಿದ (ಭಿನ್ನರೂಪ ತಳೆದ);

**ಟಿಪ್ಪಣಿ:** ನಿರ್ವಿಕಲ್ಪ ಸಮಾಧಿ=ಇಲ್ಲಿ ಮನಸ್ಸೂ ಕೂಡ ಅಡಗಿ ಹೋಗಿರುವುದರಿಂದ ಇದು ಅಭ್ಯಂತರ ನಿರ್ವಿಕಲ್ಪ ಸಮಾಧಿ.

---

**ಒಳಹೊರಗೆ ಪರಿಪೂರ್ಣದನುಭವ**
**ನೆಲೆಗೊಳುತಲಿರುತಿರೆ ನಿವಾತ**
**ಸ್ಥಲದ ದೀಪದವೋಲು ನಿಶ್ಚಲವಾಗಿ ತೋರುತಿಹ ।**

**ಉಳಿಮೆಯೇ ತಾನಾಗಿ ನಿಂದಾ**
**ನಿಲವದೇ ನಿಶ್ಚೇಷ್ಟವಡೆದಿರ**
**ಲಲಘುಮತಿ ತಿಳಿ ನಿರ್ವಿಕಲ್ಪಸಮಾಧಿಯೆಂದದನು ॥ ॥೬೩॥**

**ತಾತ್ಪರ್ಯ:** ಒಳಗೂ ಹೊರಗೂ ಪರಿಪೂರ್ಣವಾಗಿಯೂ, ಅದ್ವಯವಾಗಿಯೂ, ನಿಜವಾಗಿಯೂ ಇರುವ ಅನುಭವವು ದೃಢವಾಗಿ ನಿಲ್ಲಲು ಗಾಳಿ ಇಲ್ಲದ ಸ್ಥಲದಲ್ಲಿ ಇರಿಸಿದ ದೀಪದ ಹಾಗೆ 'ನಿಶ್ಚಲವಾಗಿ ಕಾಣಬರುವ ಶೇಷವೇ ತಾನಾಗಿ ನಿಂತಿರಲು ಆ ನಿಶ್ಚೇಷ್ಟಿತವಾದ ಸ್ಥಿತಿಯೇ ನಿರ್ವಿಕಲ್ಪಸಮಾಧಿ ಎನ್ನಿಸುತ್ತದೆ ಎಂಬುದಾಗಿ ಶ್ರೇಷ್ಠ ಯತಿ ಶುಕನೇ ತಿಳಿ ಎಂದನು ವ್ಯಾಸ.

**ಶಬ್ದಾರ್ಥ:** ನಿವಾತಸ್ಥಲ=ಗಾಳಿಯಿಲ್ಲದ ಜಾಗ; ಉಳಿಮೆ=ಶೇಷ; ಅಲಘುಮತಿ=ಶ್ರೇಷ್ಠಮತಿ;

**ಪಾಠಾಂತರ:** ನಿಶ್ಚೇಷ್ಟವಡೆದಿರಲಲಘುಮತಿ=ನಿಶ್ಚೇಷ್ಟವಡೆದಿರಲನಘ ತಿಳಿಯೈ (ಕು)

**ಟಿಪ್ಪಣಿ:** ನಿವಾತಸ್ಥಲದ ದೀಪ=ಗಾಳಿಯಿಲ್ಲದಕಡೆಯ ದೀಪ. ಇದೇ ಅಭಿಪ್ರಾಯವು ಭಗವದ್ಗೀತೆಯಲ್ಲಿದೆ (ಅಧ್ಯಾಯ ೬ ಶ್ಲೋಕ ೧೯) ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾಸ್ಮೃತಾ । ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥
ಗಾಳಿ ಇಲ್ಲದ ಕಡೆಯ ದೀಪವು ಅಲ್ಲಾಡದೆ ಇರುವ ಸ್ಥಿತಿಯು ಧ್ಯಾನವನ್ನು ಅಭ್ಯಾಸ ಮಾಡುವ ಮನೋನಿಗ್ರಹವುಳ್ಳ ಯೋಗಿಯಾದ ಸಾಧಕನಿಗೆ ಹೋಲಿಕೆಯೆಂದು ದೊಡ್ಡವರು ಹೇಳಿರುವರು. [ಗೀತೆಯ ಕೈಗನ್ನಡಿ ಪುಟ-೧೧೦೭-ಹೊಸಕೆರೆ ಚಿದಂಬರಯ್ಯ]

---

**ಶ್ರವಣಮನನಗಳಿಂದಲೀ ಮನ**
**ಸವನಿಸಿಯೆ ಸಾರೂಪ್ಯವಡೆದಿರೆ**
**ಲವಣರಸದಲಿ ಬಿದ್ದ ಪತ್ರತೃಣಾಳಿಯಂದದಲಿ, ।**
**ಜವದಿ ಕತಕದ ರಜವು ಕಲುಷಿತ**
**ಭುವನದೊಳು ಬೆರೆವಂತೆ, ಕೀಟವು**
**ಶಿವಶಿವಾ! ತಾ ಭ್ರಮರವಾದಂತಾಯಿತಾತ್ಮನಲಿ ॥ ॥೬೪॥**

**ತಾತ್ಪರ್ಯ:** ಈ ಮನಸ್ಸೆಂಬುದು ಶ್ರವಣ, ಮನನಗಳಿಂದ ರೂಪುಗೊಂಡು ಆತ್ಮನೊಂದಿಗೆ ಸೇರಿ ಸಾರೂಪ್ಯಮೋಕ್ಷವನ್ನು ಹೊಂದಿರುತ್ತದೆ. ಹೇಗೆಂದರೆ, ಉಪ್ಪು ನೀರಿನಲ್ಲಿ ಬಿದ್ದ ಎಲೆ ಕಡ್ಡಿಗಳು ನೀರಿನಲ್ಲಿ ಕೊಳೆತುಹೋದರೂ ರುಚಿಯಲ್ಲಿ ಉಪ್ಪುಪ್ಪಾಗಿಯೇ ಇರುವುದು; ಚಿಲ್ಲದ ಬೀಜವನ್ನು (ಕತಕಬೀಜ) ತೇಯ್ದು ಪುಡಿ ಪುಡಿ ಮಾಡಿ ನೀರಿನಲ್ಲಿ ಕದಡಿದರೆ ಅದು ನೀರಿನಲ್ಲಿ ಬೆರೆತು ನೀರನ್ನು ತಿಳಿಮಾಡಿ ಇದ್ದ ಕಲ್ಮಷಗಳನ್ನು ಕೂಡಿಕೊಂಡು ತಳಸೇರುತ್ತದೆ; ಅದೇರೀತಿ ಕಣಜದ ಹುಳ ಅವರೆಕಾಯಿ ಹುಳುವನ್ನು ತನ್ನ ಗೂಡಿನಲ್ಲಿಟ್ಟುಕೊಂಡು ಪದೇಪದೇ ಕುಕ್ಕಿ ಸಾಯಿಸಿದಾಗ ಆ ಹುಳು ಮನಸ್ಸಿನಲ್ಲಿ ಕಣಜವನ್ನೇ ಕನವರಿಸಿಕೊಳ್ಳುತ್ತಾ ಸತ್ತು ಕಣಜವೇ ಆಗಿಬಿಡುತ್ತದೆಯಂತೆ. ಈ ರೀತಿಯಲ್ಲಿ ಮನಸ್ಸು, ಶ್ರವಣ, ಮನನಗಳಿಂದ ರೂಪುಗೊಂಡು ಆತ್ಮನೊಂದಿಗೆ ಸೇರಿ ಸಾರೂಪ್ಯಮೋಕ್ಷವನ್ನು ಹೊಂದುತ್ತದೆ.

**ಶಬ್ದಾರ್ಥ:** * **ಸವನಿಸಿಯೆ**=ಸೇರಿಕೊಂಡು; * **ಸಾರೂಪ್ಯಪಡೆದಿರೆ**=ಸಾರೂಪ್ಯಮೋಕ್ಷ ಹೊಂದಿರಲು; * **ಲವಣರಸದಲಿ**=ಉಪ್ಪು ನೀರಿನಲ್ಲಿ; **ಪತ್ರತೃಣಾಳಿಯಂದದಲಿ**=ಎಲೆ ಕಡ್ಡಿಗಳ ರೀತಿಯಲ್ಲಿ; * **ಜವದಿ**=ಬೇಗನೆ; * **ಕತಕದ ರಜವು**=ಚಿಲ್ಲದ ಬೀಜವನ್ನು ಜಜ್ಜಿಮಾಡಿದ ಪುಡಿಯು (ಅಂಕೋಲ ಬೀಜಗಳು). * **ಕಲುಷಿತ ಭುವನದೊಳು**=ಕಲ್ಮಷಗಳನ್ನು ಕೂಡಿಕೊಂಡು ತಳಕ್ಕೆ ಹೋದಂತೆ; * **ಕೀಟ**=ಹುಳು; * **ಭ್ರಮರ**=ಕಣಜದ ಹುಳು.

**ಟಿಪ್ಪಣಿ–೧: ಲವಣರಸದಲಿ ಬಿದ್ದಪತ್ರತೃಣಾಳಿಯಂದದಲಿ**=ಉಪ್ಪುನೀರಿನಲ್ಲಿ ಬಿದ್ದ ಎಲೆಗಳಾಗಲಿ, ಕಡ್ಡಿಗಳಾಗಲಿ ಬೇಗ ಕರಗಿಹೋದರೂ (ಕೊಳೆತು ಹೋದರೂ) ಆ ಕರಗಿದ ರೂಪದಲ್ಲಿಯೇ ತಮ್ಮ ಸ್ವರೂಪವನ್ನು ಅಷ್ಟಿಷ್ಟು ತೋರಿಸಿಕೊಳ್ಳುತ್ತ ರುಚಿಯಲ್ಲಿ ಎಲ್ಲ ಉಪ್ಪುಪ್ಪಾಗಿ ಇರುವುವು. ಅದರಂತೆ ಮನಸ್ಸು ಆತ್ಮನಲ್ಲಿ ಕರಗಿಹೋದರೂ ಹೇಗೋ ತನ್ನ ಸ್ವರೂಪವನ್ನು ತೋರಿಸಿಕೊಳ್ಳುತ್ತ ಆತ್ಮಸ್ವರೂಪವಾಗಿ ಕಾಣಿಸಿಕೊಳ್ಳುವುದು. ಇದು ಕನಿಷ್ಠಪಕ್ಷ ಸಾರೋಪ್ಯಮೋಕ್ಷ.

**ಟಿಪ್ಪಣಿ–೨: ಜವದಿಕತಕದರಜವು ಕಲುಷಿತಭುವನದೊಳು ಬೆರೆವಂತೆ**=ಚಿಲ್ಲ ಬೀಜವನ್ನು (ಕತಕದ ಬೀಜವನ್ನು) ತೇಯ್ದು ನೀರೊಳಗೆ ಕದಡಿದರೆ ಅದು ಒಡನೆ ನೀರಿನಲ್ಲಿ ಬೆರೆತು ನೀರನ್ನು ತಿಳಿಯಾಗಿ ಮಾಡಿ ತನ್ನ ಸ್ವರೂಪವನ್ನು ಮೇಲೆ ತೋರಿಸಿಕೊಳ್ಳದಿದ್ದರೂ ನೀರಿನಲ್ಲಿ ಇತರ ಕಲ್ಮಷಗಳನ್ನು ಕೂಡಿಕೊಂಡು ತಳಕ್ಕೆ ಹೋಗಿ ಅಡಗಿಕೊಂಡಿರುವುದು. ಇದರಿಂದ ಮುಂದೆ ಅದು ಸಮಯ ಬಂದಾಗ ಮೇಲಕ್ಕೇಳುವ ಸಂಭವವುಂಟು. ಈ ರೀತಿಯಲ್ಲಿ ಆತ್ಮನಲ್ಲಿ ಮನಸ್ಸು ಬೆರೆಯುವುದು ಮಧ್ಯಮ ಪಕ್ಷ (ದಸಾರೋಪ್ಯ ಮೋಕ್ಷ)

**ಟಿಪ್ಪಣಿ–೩: ಕೀಟವು ಶಿವಶಿವಾ! ತಾ ಭ್ರಮರವಾದಂತೆ**=ಕಣಜವು ಅವರೆಕಾಯಿ ಹುಳುವನ್ನು ತನ್ನ ಗೂಡಿನೊಳಗಿಟ್ಟುಕೊಂಡು ಗಳಿಗೆಗೊಂದು ಸಲ ತನ್ನ ಮುಳ್ಳುಗಳಿಂದ ಅದನ್ನು ಕಕ್ಕುವುದಂತೆ. ಅದು ಒಮ್ಮೆ ಕುಕ್ಕಿ ಹೋದ ಮೇಲೆ ಆ ಹುಳು ಮನಸ್ಸಿನಲ್ಲಿ ಆ ಕಣಜವನ್ನೇ ಕನವರಿಸಿಕೊಳ್ಳುತ್ತಿರುವದಂತೆ. ಹೀಗಾಗುತ್ತ ಆಗುತ್ತ ಕೊನೆಗೆ ಆ ಹುಳು ಸತ್ತು ಕಣಜವೇ ಆಗಿ ಬಿಡುವುದಂತೆ. ಇದರಂತೆ ಮನಸ್ಸು ಆತ್ಮನಲ್ಲಿ ಬೆರೆತರೆ ಮನಸ್ಸೆಂಬ ಅದರ ತುಚ್ಛವಾದ ಸ್ವರೂಪವೇ ಹೋಗಿ ಅದು ಆತ್ಮವೇ ಆಗಿಬಿಡುವುದು ಅದರಿಂದ ಇದು ಉತ್ತಮಪಕ್ಷ ಸಾರೂಪ್ಯ ಮೋಕ್ಷ.

* **ಟಿಪ್ಪಣಿ–೪:** ಇವುಗಳನ್ನು ಸಂಸ್ಕೃತದಲ್ಲಿ ಲೌಕಿಕ ನ್ಯಾಯಗಳೆಂದು ಕರೆಯುತ್ತಾರೆ. ರಂಗನಾಥ ಶರ್ಮರ ಲೌಕಿಕನ್ಯಾಯ ಗ್ರಂಥ ನೋಡಿ, ವಿವರಗಳಿಗೆ.

---

**ಅರಣಿಗಳಲುದುಭವಿಸಿ ಪಾವಕ**
**ನರಣಿಗಳ ತನ್ನಂತೆ ಮಾಡುವ**
**ಪರಿಯಲೀ ಸೋಹಂಪದಾರ್ಥದಿ ಪುಟ್ಟಿದಾ ಜ್ಞಾನ ।**
**ಎರಡುತನುವೆಂದೆಂಬ ಭೇದವ**
**ಪರಿಹರಿಸಿ ತನ್ಮಯವದಾಗಲು**
**ನಿರುಪಮಾದ್ವಯರೂಪನಾಗಿಹನೆಂದನಾ ಮುನಿಪ ॥ ॥೬೫॥**

**ತಾತ್ಪರ್ಯ:** ಅರಣಿಗಳನ್ನು (ಅರಳಿಯ ಕಟ್ಟಿಗೆಗಳನ್ನು) ಉಜ್ಜಿದಾಗ ಅದರಲ್ಲಿ ಹುಟ್ಟಿದ ಅಗ್ನಿ ಆ ಅರಣಿಗಳನ್ನೇ ತನ್ನಂತೆ ಮಾಡಿಕೊಳ್ಳುವ ಎಂದರೆ ಬೆಂಕಿಯಾಗಿಸುವ

ರೀತಿಯಲ್ಲಿ (ಸೋಹಂ) ಎಂಬ ಪದದಿಂದ ಹುಟ್ಟಿದ ಎಂದರೆ, ಅವನೇ ನಾನೆಂದು ಎಡಬಿಡದೆ ಮನನ ಮಾಡಿದ್ದರಿಂದ ಉಂಟಾದ ಅರ್ಥದಿಂದ ಜೀವ ಈಶ್ವರಗಳೆಂಬ ಎರಡು ಶರೀರಗಳೆಂಬ ಭೇದವನ್ನು ಕಳೆದು ತಾನೇ ತನ್ಮಯವಾಗಲು ಆಗ ಸಾಧಕನು ಉಪಮಾರಹಿತನೂ ಏಕರೂಪನೂ ಆಗುತ್ತಾನೆ.

**ಶಬ್ದಾರ್ಥ:** ಅರಣಿಗಳಲಿ (ಅರಳಿಯ ಕಟ್ಟಿಗೆಗಳಿಂದ); * ಪಾವಕ=ಅಗ್ನಿ, ಬೆಂಕಿ, ಎರಡುತನು ವೆಂದೆಂಬ=ಜೀವ ಈಶ್ವರ ಎಂದೆರಡು ಶರೀರಗಳ; * ನಿರುಪಮ=ಉಪಮಾತೀತ; * ಅದ್ವಯ= ಏಕರೂಪನು; ಪರಿಹರಿಸಿ=ಎರಡೆಂಬ ಭೇದವೇ ಇಲ್ಲವೆಂಬ ಸಂಶಯಕಳೆದು; ಸೋಹಂ ಪದಾರ್ಥದಿಂ=ಅವನೇ ನಾನೆಂದು ಎಡಬಿಡದೆ ಮನನ ಮಾಡಿದ್ದರಿಂದ ಉಂಟಾದ ಅರ್ಥದಿಂದ.

---

**ತನಯ ಕೇಳ್ಳೈ, ಪ್ರಣವವೇ ಧನು**
**ವನುಪಮಾತ್ಮನೆ ಬಾಣ; ಬ್ರಹ್ಮವೆ**
**ಘನತರದ ಲಕ್ಷ್ಯವು; ನಿರಂತರ ಸಾವಧಾನದಲಿ ।**
**ಮನನವನುಮಾಡುತ್ತ ಶರದಂ**
**ತನುಸರಿಸಿ ಲಕ್ಷ್ಯದೊಳು ತಾ ತ**
**ನ್ನನುಭವಾನಂದೈಕರಸಮಯವಾಗಿ ತೋರುವನು ॥ ॥೬೬॥**

**ತಾತ್ಪರ್ಯ:** ಮಗನೇ ಕೇಳು, ಓಂಕಾರವೇ ಬಿಲ್ಲು, ಅನುಪಮ ಜೀವನೇ ಬಾಣ, ಬ್ರಹ್ಮವೇ ಶ್ರೇಷ್ಠವಾದ ಗುರಿ, ಎಡಬಿಡದೆ ಮನಸ್ಸಿಟ್ಟು ಮನನಮಾಡುತ್ತಾ ಹೋದರೆ ಬಿಟ್ಟಬಾಣವು ಗುರಿಮುಟ್ಟುವಂತೆ ಲಕ್ಷ್ಯವಾದ ಬ್ರಹ್ಮವನ್ನು ಅನುಸಂಧಿಸಿ ಜೀವೇಶ್ವರರ ನಿಜಸ್ವರೂಪದ ಐಕ್ಯಾನಂದರೂಪಾನಂದದ ಅನುಭವವಾಗುತ್ತದೆ.

**ಶಬ್ದಾರ್ಥ:** ಪ್ರಣವವೇಧನು=ಓಂಕಾರವೇ ಬಿಲ್ಲು; ಅನುಪಮಾತ್ಮನೆ ಬಾಣ=(ಆತ್ಮ ಎಂದರೆ ಜೀವ) ಜೀವನೇ ಬಾಣ ಎಂದರ್ಥ; ನಿರಂತರ=ಎಡಬಿಡದೆ; ಸಾವಧಾನದಲಿ=ಮನಸ್ಸಿಟ್ಟು; ಶರ=ಬಾಣ, ಲಕ್ಷ್ಯ=ಗುರಿ;

**ಟಿಪ್ಪಣಿ-೧:** ಪ್ರಣವವೇ ಧನು=ಈ ಬಗೆಯ ಕಲ್ಪನೆಗೆ ಆಧಾರವಾಗಿ ಮುಂಡಕಶ್ರುತಿಯಲ್ಲಿರುವು ದೇನೆಂದರೆ: ಪ್ರಣವೋ ಧುಶ್ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ। ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥

**ಟಿಪ್ಪಣಿ-೨:** ಅನುಪಮಾತ್ಮನೆ ಬಾಣ=ಇಲ್ಲಿ ಆತ್ಮಶಬ್ದಕ್ಕೆ ಜೀವನು ಎಂದರ್ಥವನ್ನು ಮಾಡಬೇಕು. ಏಕೆಂದರೆ ಅವನು ಹೋಗಿ ಬ್ರಹ್ಮನಲ್ಲಿ ಐಕ್ಯವಾಗಬೇಕಾಗಿದೆ. ಇಂಥ ಪ್ರಯತ್ನವನ್ನು ಮಾಡುವವರೇ ಕಡಿಮೆಯೆಂಬ ಅರ್ಥವನ್ನು ತೋರಿಸುವುದಕ್ಕಾಗಿ ಕವಿಯು ಈ ಪ್ರಯತ್ನ ಮಾಡುವ ಜೀವನಿಗೆ ಅನುಪಮನೆಂಬ ವಿಶೇಷಣವನ್ನು ಕೊಟ್ಟಿದ್ದಾನೆ.

---

**ತಾನು ತಾನಾಗೇನು ತೋರದೆ**
**ತಾನೆಯಾಗಿರೆ ನಿರ್ವಿಕಲ್ಪ;**
**ಧ್ಯಾನಧಾರಣದಿಂದ ಬುದ್ಧಿ ಸಮಾಧಿಯಾಗಿಹುದು ।**

ಮಾನನಿಧಿ ಸವಿಕಲ್ಪಕವು ತಿಳಿ;
ಭಾನು ಜಲದಲಿ ತೋರ್ಪವೋಲದು
ಸ್ವಾನುಭವಸಂಸಿದ್ಧವಾಗಿಹುದಾಗಿ ಸೋಪಾಧಿ ॥ ॥೬೭॥

**ತಾತ್ಪರ್ಯ:** ಎಲ್ಲಿ ನೋಡಿದರೂ ಬೇರೇನೂ ಕಾಣದೆ ತಾನೇತಾನಾಗಿಯೇ ಆತ್ಮನು ತೋರಿದರೆ ಅದು ನಿರ್ವಿಕಲ್ಪ ಸಮಾಧಿ; ಧ್ಯಾನ ಧಾರಣದಿಂದ ಬುದ್ಧಿಯನ್ನು ಸಮಾಧಿ ಸ್ಥಿತಿಗೆ ತಂದರೆ ಅದು ಸವಿಕಲ್ಪಸಮಾಧಿ ಎಂದು ಮಾನನಿಧಿ ಶುಕನೇ ತಿಳಿದುಕೋ. ನೀರಿನಲ್ಲಿ ಸೂರ್ಯನು ಪ್ರತಿಫಲಿಸುವಂತೆ ಕಾಣುವುದೇ ವಿಕಲ್ಪ. ನಿಜಾನುಭವದಿಂದ ಸಿದ್ಧಿಸತಕ್ಕದ್ದೇ ಉಪಾಧಿ.

**ಶಬ್ದಾರ್ಥ:** * ಭಾನು=ಸೂರ್ಯ; *ಸೋಪಾಧಿ=ಉಪಾಧಿಯನ್ನು ಒಳಗೊಂಡಿದ್ದು; * ಸ್ವಾನುಭವ ಸಂಸಿದ್ಧವಾಗಿಹುದು=ನೈಜಾನುಭವದಿಂದ ಸಿದ್ಧಿಸತಕ್ಕದ್ದು;

**ಟಿಪ್ಪಣಿ-೧:** ಈ ಪದ್ಯಕ್ಕೆ ಹೊಸಕೆರೆ ಚಿದಂಬರಯ್ಯನವರು ಶಬ್ದಾರ್ಥವನ್ನಾಗಲಿ ಟಿಪ್ಪಣಿಯನ್ನಾಗಲಿ ಬರೆದಿಲ್ಲ. ಬರೆದಿರುವ ಶಬ್ದಾರ್ಥ ಅನುವಾದಕನದು.

**ಟಿಪ್ಪಣಿ-೨:** ಸಮಾಧಿ=ಆತ್ಮನಲ್ಲೇ ಮನಸ್ಸನ್ನು ನಿಲ್ಲಿಸುವುದು; ನಿಶ್ಚಲ ಸಮಾಧಿ; ಸವಿಕಲ್ಪಸಮಾಧಿ =ಬುದ್ಧಿಗೆ ತುರ್ಯಾವಸ್ಥೆ ಬರುವುದು; ನಿರ್ವಿಕಲ್ಪ ಸಮಾಧಿ=ಮನೋಲಯವಾಗುವುದು; (ಪರಮಾರ್ಥ ಪದಕೋಶ, ಪುಟ ೩೯೮)

---

ಮನವಡಗಲೇಕತ್ವವಾಗಿಹ
ಘನಸುಖವೆ ತಿಳಿ ನಿರ್ವಿಕಲ್ಪವು;
ಮನಸಹಿತಲಹ ಸುಖವೆ ಸವಿಕಲ್ಪಕಸಮಾಧಿಯದು; ।
ತನಯ, ತುರ್ಯಾವಸ್ಥೆ ಬುದ್ಧಿಗೆ
ಜನಿಸುವದೆ ಸವಿಕಲ್ಪವಾತ್ಮಗೆ
ಮನವಳಿಯೆ ನಿರವಸ್ಥೆ ನಿರ್ಗುಣ ನಿರ್ವಿಕಲ್ಪಕವು ॥ ॥೬೮॥

**ತಾತ್ಪರ್ಯ:** ಮನಸ್ಸೆಂಬುದು ಬ್ರಹ್ಮದಲ್ಲಿ ಲಯವಾಗಿ ಒಂದೇ ಆಗಿರುವ ಬ್ರಹ್ಮಾನಂದ ಸುಖವೇ ನಿರ್ವಿಕಲ್ಪಕಸಮಾಧಿಯೆಂದು ತಿಳಿ. ಮನಸ್ಸು ಬ್ರಹ್ಮದಲ್ಲಿ ಲಯವಾಗದೆ ಇರುವ ಸುಖವು ಸವಿಕಲ್ಪಕಸಮಾಧಿ ಎನಿಸುತ್ತದೆ. ಬುದ್ಧಿಗೆ ತುರ್ಯಾವಸ್ಥೆ ಸವಿಕಲಾತ್ಮ ನಾದವನಿಗೆ ಹುಟ್ಟಿದಾಗ ಮನಸ್ಸು ಲಯವಾಗಿ ಆತ್ಮನಿಗೆ ನಿರವಸ್ಥೆಯೂ ನಿರ್ಗುಣವೂ ನಿರ್ವಿಕಲ್ಪಕವೂ ಉಂಟಾಗುವುದು.

**ಶಬ್ದಾರ್ಥ:** ತುರ್ಯಾವಸ್ಥೆ=ಆತ್ಮಸ್ಥಿತಿ; ನಿರವಸ್ಥೆ=ಯಾವ ಅವಸ್ಥೆಯೂ ಇಲ್ಲದ ಸ್ಥಿತಿ; * ಘನ ಸುಖ=ಬ್ರಹ್ಮಾನಂದ ಸುಖ; * ನಿರ್ಗುಣ=ಗುಣರಹಿತವಾದುದು;

---

ಇಂತು ತನ್ನೊಳು ತಾನೆ ಆತ್ಮನ
ಚಿಂತಿಸುತ್ತಲನಾತ್ಮಗಳ ಕಳೆ
ದಂತರಂಗದಲುಜ್ಜಳಿಪ ಚಿಜ್ಜ್ಯೋತಿರೂಪವನು ।

**ಸಂತತವು ಸಚ್ಛಾಸ್ತ್ರಗುರು ಪೇ**
**ಳ್ದಂತೆ ತಿಳಿದು ಸಮಾಧಿ ನೆಲೆಗೊಳ**
**ಲಂತವಿಲ್ಲದ ಸುಖವ ಪಡೆದವ ಶಾಂತನಾಗಿಹನು ॥ ॥೬೯॥**

**ತಾತ್ಪರ್ಯ:** ಈ ಪ್ರಕಾರವಾಗಿ ತನ್ನಲ್ಲಿತಾನೇ ಆತ್ಮನನು ಕುರಿತು ಚಿಂತಿಸುತ್ತಾ ಅನಾತ್ಮಗಳನ್ನು ದೂರೀಕರಿಸಿದಾಗ ಅಂತರಂಗದಲ್ಲಿ ಪ್ರಕಾಶಿಸುವ ಚಿದಾನಂದ ಸ್ವರೂಪವನ್ನು ಸಚ್ಛಾಸ್ತ್ರಗಳನ್ನು ಸದ್ಗುರುವಿನ ಉಪದೇಶದಂತೆ ತಿಳಿದು ಸಮಾಧಿ ಸ್ಥಿತಿಯನ್ನು ಪಡೆದಾಗ ಆತನು ಅನಂತಸುಖವನು ಪಡೆದ ಶಾಂತಾತ್ಮನು ಆಗಿರುತ್ತಾನೆ.

**ಶಬ್ದಾರ್ಥ:** * **ಇಂತು**=ಈ ಪ್ರಕಾರವಾಗಿ; * **ಅನಾತ್ಮ**=ಆತ್ಮವಲ್ಲದ್ದು; **ಉಜ್ವಳಿಪ**=ಪ್ರಕಾಶಿಸುವ; **ಚಿಜ್ಜ್ಯೋತಿ**=ಚಿದಾನಂದರೂಪ; **ಸಚ್ಛಾಸ್ತ್ರ**=ಮೋಕ್ಷಸಾಧನವಾದ ಶಾಸ್ತ್ರಗಳು; **ಗುರುಪೇಳಿದಂತೆ**=ಗುರುಬೋಧೆ; **ಅಂತವಿಲ್ಲದ ಸುಖ**=ಸಾಯುಜ್ಯ

**ಪಾಠಾಂತರ:** **ಚಿಂತಿಸುತ್ತಲನಾತ್ಮಗಳ ಕಳೆದು**=ಚಿಂತಿಸುತ್ತಿರಲಾತ್ಮವನು ತಿಳಿದು (ಕು. ಪುಟ–೧೯೯)

**ಟಿಪ್ಪಣಿ:** **ಸಚ್ಛಾಸ್ತ್ರಗುರು**=ಸಚ್ಛಾಸ್ತ್ರ ಮತ್ತು ಸದ್ಗುರು. ಸಮತ್ವವನ್ನು ಉಪದೇಶಮಾಡುವ ಶಾಸ್ತ್ರಗಳೂ ಸಾಧುಗಳೂ ಸೇವ್ಯರೆಂದು ಯೋಗವಾಶಿಷ್ಠದ ಈ ಶ್ಲೋಕ ಹೇಳುತ್ತದೆ.

**ಅನಂತಂ ಸಮತಾನಂದಂ ಪರಮಾರ್ಥಂ ವಿದುರ್ಬುಧಾಃ ।**
**ಸ ಏಭ್ಯಃ ಪ್ರಾಪ್ಯತೇ ನಿತ್ಯಂ ತೇ ಸೇವ್ಯಾಃ ಶಾಸ್ತ್ರಸಾಧವಃ ॥**

---

**ಇಂತು ಷಡ್ವಿಧವಹ ಸಮಾಧಿಯ**
**ಸಂತತಾಭ್ಯಾಸದಲಿ ಮನವೇ**
**ಕಾಂತವಾಗಿರುತಿರಲದೇನೋ ! ನೆನಹಡಗಿನಿಂದ ।**
**ಅಂತದನು ಪೇಳಲ್ಕವಾಚ್ಯವು**
**ಕಂತುಹರನೇ ಬಲ್ಲ ಯೋಗಿಯ**
**ಸಂತತಸಮಾಧಿಯನದಾರಿಗು ತಿಳಿಯಲರಿದೆಂದ ॥ ॥೭೦॥**

**ತಾತ್ಪರ್ಯ:** ಈ ಪ್ರಕಾರವಾಗಿ ಆರು ವಿಧವಾಗಿರುವ ಸಮಾಧಿಗಳನ್ನು ಸತತವಾಗಿ ಅಭ್ಯಾಸ ಮಾಡುತ್ತಾ ಬಂದರೆ ಮನಸ್ಸು ಒಂದು ಬಗೆಯಾಗಿ ಏಕಾಂತವಾಗಿ ಶಾಂತವಾಗಿರುವುದು. ಆಗ ನೆನಹು ಅಡಗುವುದರಿಂದ ಎಂದರೆ ಯಾವ ಕಲ್ಪನೆಯೂ ಇಲ್ಲದೆ ಹೋಗುವುದರಿಂದ ಆ ಬ್ರಹ್ಮಾನಂದ ಸುಖಾನುಭವವನ್ನು ಹೇಳುವುದಕ್ಕೆ ಆಗುವುದಿಲ್ಲ. ಅದನ್ನು ಆ ಪರಶಿವನೇ ಬಲ್ಲ. ಆದ್ದರಿಂದ ಯೋಗಿಯ ಸಂತತ ಸಮಾಧಿಯನ್ನು ತಿಳಿಯಲು ಯಾರಿಗೂ ಶಕ್ಯವಿಲ್ಲ.

**ಟಿಪ್ಪಣಿ:** * **ಷಡ್ವಿಧವಹ ಸಮಾಧಿಯ**=ಆರು ಬಗೆಯಾಗಿರುವ ಸಮಾಧಿಯನ್ನು; ೧) ಬಾಹ್ಯ ದೃಶ್ಯಾನುವಿದ್ಧ; ೨) ಅಂತರ ದೃಶ್ಯಾನುವಿದ್ಧ; ೩) ಬಾಹ್ಯಶಬ್ದಾನುವಿದ್ಧ; ೪) ಅಂತರಶಬ್ದಾನುವಿದ್ಧ; ೫) ಬಾಹ್ಯನಿರ್ವಿಕಲ್ಪ; ೬) ಅಂತರನಿರ್ವಿಕಲ್ಪ; (ಶ್ರುತಿವಿಚಾರಚಂದ್ರೋದಯ ಪುಟ ೨೪೩)

**ಶಬ್ದಾರ್ಥ:** ನೆಸಹಡಗಿನಿಂದ=(ನೆನಹು ಅಡಗಿನಿಂದ) ಯಾವ ಕಲ್ಪನೆಯೂ ಇಲ್ಲದೆ ಹೋಗು ವುದರಿಂದ; ಅವಾಚ್ಯವು=ಬಾಯಿಂದ ಹೇಳಲು ಆಗುವುದಿಲ್ಲ; * ಕಂತುಹರನೇಬಲ್ಲ=ಪರಶಿವನೇ ಬಲ್ಲ.

---

## ವಾಗ್ಭೂಮಿ ಮೊದಲಾದ ನಾಲ್ಕು ಭೂಮಿಕೆಗಳು (೭೧–೭೮)

ನಿರ್ವಿಕಲ್ಪ ಸಮಾಧಿಸಿದ್ಧಿಯ
ನಿರ್ವಹಿಸಲೀ ನಾಲ್ಕು ಭೂಮಿಯ
ಸರ್ವದಾಭ್ಯಾಸವನು ಮಾಡಲುಬೇಕದೇಕೆನಲು ।
ದುರ್ವಿಷಯಗಳ ನೆನೆವ ಮನಸಿನ
ಗರ್ವವನು ಕೆಡಿಸುವದು; ನಿಜಸುಖ
ಪರ್ವೆ ಪಸರಿಸಿ ಪರಮಪದವಾಗಿಹುದು ಕೇಳೆಂದ ॥ ॥೭೧॥

**ತಾತ್ಪರ್ಯ:** ನಿರ್ವಿಕಲ್ಪಸಮಾಧಿಯು ಸಿದ್ಧಿಸಬೇಕಾದರೆ ಮುಂದೆ ಹೇಳುವ ನಾಲ್ಕು ಸಾಧನಗಳನ್ನು (ವಾಗ್ಭೂಮಿಕೆ, ಮನೋಭೂಮಿಕೆ, ಜ್ಞಾನಭೂಮಿಕೆ ಮತ್ತು ಶಾಂತಾತ್ಮ ಭೂಮಿಕೆ) ತಪ್ಪದೆ ಅಭ್ಯಾಸಮಾಡಬೇಕು ಏಕೆಂದರೆ ಅವು ಹೀನವಿಷಯಗಳನ್ನು ನೆನೆಯುವ ಮನಸ್ಸಿನ ದರ್ಪವನ್ನು ಮಾಡುತ್ತದೆ; ಅದರಿಂದ ಚಿತ್ಸುಖರೂಪವಾದ ಬ್ರಹ್ಮಾನಂದವು ವಿಸ್ತರಿಸಿ ಹರಡಿ ಮುಕ್ತಿಸಿಗುತ್ತದೆ.

**ಶಬ್ದಾರ್ಥ:** ನಾಲ್ಕು ಭೂಮಿಯ=ವಾಗ್ಭೂಮಿಕೆ, ಮನೋಭೂಮಿಕೆ, ಜ್ಞಾನಭೂಮಿಕೆ ಮತ್ತು ಶಾಂತಾತ್ಮಭೂಮಿಕೆ; * ಸರ್ವದಾ=ತಪ್ಪದೆ; * ದುರ್ವಿಷಯಗಳ=ಹೀನವಿಷಯಗಳು, ತುಚ್ಛವಿಷಯಗಳು, ದುಷ್ಟವಿಷಯಗಳು, ನಿಕೃಷ್ಟವಿಷಯಗಳು; * ಗರ್ವ=ದರ್ಪ; ನಿಜಸುಖ= ಚಿತ್ಸುಖರೂಪವಾದ ಬ್ರಹ್ಮಾನಂದ; ಪರ್ವೆ=ವಿಸ್ತರಿಸಲು, ಹಬ್ಬಲು;

---

ಕೇಳು ಶುಕಯೋಗೀಂದ್ರ, ಪಶುಗಳ
ವೋಲು ವಾಗ್ವ್ಯಾಪಾರವಳಿದು, ಸು
ಶೀಲವಹ ಮೌನದಿ, ಮನೋರಾಜ್ಯತ್ವಮಾತ್ರದಲಿ, ।
ಕಾಲವನು ಕಳೆಯುತ್ತಲಿರುತಿರೆ
ಮೇಲೆ ನೆಲೆಗೊಂಡಿರ್ಪವಸ್ಥೆಯ
ಹೇಳುವರು ಮೊದಲನೆಯ ಭೂಮಿಕೆಯೆಂದು ಬಲ್ಲವರು ॥ ॥೭೨॥

**ತಾತ್ಪರ್ಯ:** ಶುಕಮುನಿಯೇ ಕೇಳು, ತಿರ್ಯಕ್‌ಜಂತುಗಳ ಹಾಗೆ ಮಾತು ಬಾರದ, ಇಂದ್ರಿಯಗಳನ್ನು ಬಿಗಿಹಿಡಿದು ನಿರ್ಮಲವಾದ ಮೌನದಿಂದ ಮನೋರಾಜ್ಯದಲ್ಲಿಯೇ ಇರುವ ಅವಸ್ಥೆಯಲ್ಲಿ ಕಾಲಕಳೆಯುವ ನೆಲೆಯನ್ನು ಮೊದಲನೆಯ ಭೂಮಿಕೆಯಾದ ವಾಗ್ಭೂಮಿಕೆಯೆಂದು ತಿಳಿದವರು ಹೇಳುತ್ತಾರೆ.

**ಶಬ್ದಾರ್ಥ:** * **ಪಶುಗಳವೋಲು**=ಮಾತು ಬಾರದ ಪ್ರಾಣಿಗಳಂತೆ; **ಮನೋರಾಜ್ಯತ್ವದಲ್ಲಿ**=ಮನಸ್ಸು ಬಾಹ್ಯವ್ಯಾಪಾರ ಬಿಟ್ಟು ಧ್ಯಾನವೆಂಬ ಯೋಗಸಾಧನೆಯಲ್ಲಿದ್ದರೆ; * **ಮೊದಲನೆಯಭೂಮಿಕೆ**= ವಾಗ್ಭೂಮಿಕೆ;

**ಟಿಪ್ಪಣಿ-೧:** ವಾಗ್ವ್ಯಾಪಾರವಳಿದು= ಮಾತಾಡು ವುದನ್ನು ಬಿಟ್ಟು ಇಲ್ಲಿ ವಾಗೀಂದ್ರಿಯವನ್ನು ಉಪಲಕ್ಷಣವಾಗಿ ಭಾವಿಸಿ ಇಂದ್ರಿಯಗಳನ್ನೆಲ್ಲ ಬಿಗಿ ಹಿಡಿಯಬೇಕೆಂದು ತಿಳಿಯಬೇಕು. ಈ ಬಗ್ಗೆ ಭೂಮಿಕೆಗಳಿಗೆ ಕಠವಲ್ಲಿಯಲ್ಲಿರುವ ಆಧಾರವೇನೆಂದರೆ: **ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ । ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾಂತ ಆತ್ಮನಿ ॥**

[ಅವು ಯಾವುವೆಂದರೆ, ಒಂದನೆಯದು ಮನಸ್ಸಿನಲ್ಲಿ ವಾಕ್ ಮೊದಲಾದ ಇಂದ್ರಿಯಗಳನ್ನು ಅಡಗಿಸಬಿಡುವಂಥ ವಾಗ್ಭೂಮಿಕೆ. ಎರಡನೆಯದು ಆ ಮನಸ್ಸನ್ನು ನಾನೊಬ್ಬನಿದ್ದೇನೆಂಬಷ್ಟು ಮಾತ್ರ ಸಾಮಾನ್ಯಾಹಂಕಾರ ಜ್ಞಾನದಲ್ಲಿ ಅಡಗಿಸಿ ಬಿಡುವಂಥ ಜ್ಞಾನಭೂಮಿಕೆ. ಮೂರನೆಯದು ಆ ಸಾಮಾನ್ಯಾಹಂಕಾರವನ್ನು ಮಹತ್ತಾದ ಚಿದಾನಂದ ಸ್ವರೂಪದಲ್ಲಿ ಅಡಗಿಸಿಬಿಡುವಂಥ ಮಹದ್ಭೂಮಿಕೆ, ನಾಲ್ಕನೆಯದು ಅಹಂಕಾರದ ವಾಸನೆಯೇ ಇಲ್ಲದ ಆತ್ಮಸ್ವರೂಪದಲ್ಲಿ ನೆಲೆಯಾಗಿರುವಂಥ ಶಾಂತಾತ್ಮಭೂಮಿಕೆ.]

---

**ಆ ಮನೋರಾಜ್ಯತ್ವ ಮಾತ್ರದ**
**ಭೂಮಿಕೆಯಲಭ್ಯಾಸವಳವಡ**
**ಲಾ ಮನೋರಾಜ್ಯವನು ಮೆಲ್ಲನೆ ಬಿಟ್ಟು ಕ್ರಮದಿಂದ ।**
**ನೇಮ ನೆಲೆಗೊಳೆ ತೊಟ್ಟಿಲೊಳಗಿ**
**ರ್ದಾ ಮಗುವಿನಂದದೊಳಗೆರಡನೆ**
**ಭೂಮಿಯೆನಿಪುದು ಕೇಳಹಂಪ್ರತ್ಯಯದ ಮಾತ್ರದಲಿ ॥ ॥೭೩॥**

**ತಾತ್ಪರ್ಯ:** ಆ ಮನೋರಾಜ್ಯತ್ವವು ಕೈಸೇರಿದಮೇಲೆ ಉಳಿದಭೂಮಿಕೆಗಳ ಅಭ್ಯಾಸವನ್ನು ಮಾಡುತ್ತಾಬರಬೇಕು. ತರುವಾಯ ನಿಧಾನವಾಗಿ ಮನೋ ರಾಜ್ಯತ್ವವನ್ನು ಕ್ರಮಕ್ರಮವಾಗಿ ಬಿಡುತ್ತಾಬಂದರೆ ಆ ನಿಯಮವು ನೆಲೆಗೊಂಡು ತೊಟ್ಟಿಲಲ್ಲಿರುವ ಮಗುವಿನ ಹಾಗೆ ನಾನೊಬ್ಬನಿದ್ದೇನೆ ಎಂಬ ಅಹಂ ಪ್ರತ್ಯಯವೆನ್ನುವ ಎರಡನೆಯ ಭೂಮಿಕೆ ಸಿದ್ಧಿಸುವುದು.

**ಶಬ್ದಾರ್ಥ:** * **ಮನೋರಾಜ್ಯತ್ವ**=ಮನೋಭೂಮಿಕೆ; **ಎರಡನೆಯ ಭೂಮಿ**=ಅಹಂಭೂಮಿಕೆ ಎಂಬ ಎರಡನೆಯ ಭೂಮಿಕೆ; * **ಅಹಂಪ್ರತ್ಯಯ**=ನಾನೊಬ್ಬನಿದ್ದೇನೆ ಎಂಬ ಭಾವ; * **ನೇಮ**=ನಿಯಮ;

**ಟಿಪ್ಪಣಿ:** ಹೊಸಕೆರೆ ಚಿದಂಬರಯ್ಯನವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ; ಶಬ್ದಾರ್ಥ ಅನುವಾದಕನದು.

---

## ಮೂರನೆಯ ಭೂಮಿಕೆ ನಿಸ್ಸಂಗದ ಲಕ್ಷಣ (೭೪)

ಕೇಳಹಂಪ್ರತ್ಯಯವನುಳಿದವ
ಮೇಲೆ ತೂಕಡಿಪವನ ತೆರದಲಿ
ಪೇಳಲೇನದ ಸರ್ವದೊಳುದಾಸೀನವಾಗಿರಲು ।
ಹೇಳುತಿಹರಿಂತಿರ್ಪವಸ್ಥೆಯ
ಕಾಲವನು ಮೂರನೆಯ ಭೂಮಿಯ
ಶೀಲವೆಂದರಿದವರು ಶುಕಯೋಗೀಂದ್ರ ಕೇಳೆಂದ ॥ ॥೭೪॥

**ತಾತ್ಪರ್ಯ:** ಅಹಂಕಾರ ದೋಷದಿಂದ ದೂರವಾದವನು ಎಂದರೆ ಸಾಮಾನ್ಯವಾದ ಅಹಂಕಾರವು ಮಹತ್ತಾದ ಚಿದಾನಂದ ಸ್ವರೂಪದಲ್ಲಿ ಅಡಕವಾದಾಗ, ನಿದ್ರಾವಸ್ಥೆಗೆ ಸಿಲುಕಿದವನಿಗೆ ಯಾವುದರ ಮೇಲೂ ಮಮತೆಯೇ ಇಲ್ಲದೆ ಅಲಕ್ಷ್ಯನಾಗಿರುವವನಂತೆ ಎಲ್ಲ ವಿಷಯಗಳಲ್ಲೂ ವಿಷಯಗಳ ನೆನಪನ್ನು ಮನಸ್ಸಿಗೆ ತಂದುಕೊಳ್ಳದೆ ವಿಷಯಾಸಕ್ತರೊಡನೆ ಬೆರೆಯದೆ ಕರ್ಮದಸೋಂಕು ದೇಹೇಂದ್ರಿಯಗಳಿಗೆ ಹೊರತು ತನಗಲ್ಲವೆಂದು ನಿಶ್ಚಯಿಸಿ ಅಲಕ್ಷ್ಯಭಾವದಿಂದಿರುವ ಅವಸ್ಥೆಯ ಕಾಲವನ್ನು ಮೂರನೆಯ ಭೂಮಿಕೆಯಾದ ನಿಸ್ಸಂಗದ ಲಕ್ಷಣವೆಂದು ತಿಳಿದವರು ಹೇಳುತ್ತಾರೆ, ಕೇಳು ಶುಕಯೋಗೀಂದ್ರ.

**ಶಬ್ದಾರ್ಥ:** * **ಅಹಂಪ್ರತ್ಯಯವನುಳಿದವ**=ಅಹಂಕಾರ ದೋಷದಿಂದ ದೂರವಾಗಿ ಉಳಿದವನು ಎಂದರೆ ಸಾಮಾನ್ಯ ಅಹಂಕಾರವನ್ನು ಮಹತ್ತಾದ ಚಿದಾನಂದ ಸ್ವರೂಪದಲ್ಲಿ ಅಡಗಿಸಿದವನು. * **ತೂಕಡಿಪವನತೆರದಲಿ**=ನಿದ್ರಾವಸ್ಥೆಗೆ ಸಿಲುಕಿದವನ ರೀತಿಯಲ್ಲಿ ಯಾವುದೇ ವಿಷಯದಲ್ಲೂ ಮಮತೆಯೇ ಇಲ್ಲದೆ ಅಲಕ್ಷ್ಯವಾಗಿರುವವನಂತೆ. * **ಉದಾಸೀನವಾಗಿರಲು**=ಅಲಕ್ಷ್ಯಭಾವದಿಂದಿರುವ ಅವಸ್ಥೆಯ ಕಾಲವನ್ನು; * **ಮೂರನೆಯ ಭೂಮಿಕೆಯಶೀಲ**=ಮೂರನೆಯ ಭೂಮಿಕೆಯಾದ ನಿಸ್ಸಂಗದ ಲಕ್ಷಣವಾಗಿದೆ.

**ಪಾಠಾಂತರ-೧: ಕೇಳಹಂಪ್ರತ್ಯಯವನುಳಿದವ**=ಕೇಳುಭೂಮಿಕೆಯಲಭ್ಯಾಸವಡೆದಿರ (ಅರಾಸೇ)

**ಪಾಠಾಂತರ-೨: ಭೂಮಿಯ ಶೀಲವೆಂದರಿದವರು**=ಭೂಮಿಯ ಶೀಲವನು ಬಲ್ಲವರು (ಅರಾಸೇ)

**ಟಿಪ್ಪಣಿ-೧:** ಹೊಸಕೆರೆ ಚಿದಂಬರಯ್ಯನವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ, ಶಬ್ದಾರ್ಥ ಪಾಠಾಂತರ ಅನುವಾದಕನದು.

---

## ನಾಲ್ಕನೆಯ ಭೂಮಿಕೆ - ಶಾಂತಾತ್ಮ ಭೂಮಿಕೆ (೭೫)

ಮೌನ ಮೊದಲಾಗಿರಲುಳಿದುದಾ
ಸೀನ ಕಡೆಯಾದವರಲನುಸಂ
ಧಾನವನು ಮರೆದಾಗ ಚಿತ್ತದ ವೃತ್ತಿಯಳಿದಿರಲು ।

**ಆ ನಿದಾನದವಸ್ಥೆ ನೆಲೆಗೊಳ**
**ಲಾ ನಿಲವದಾತ್ಮಸ್ಫುರಣ ಮಾ**
**ತ್ರಾನುಭವ ನಿದ್ರಾಳುವಿನವೊಲ್ನಾಲ್ಕನೆಯಭೂಮಿ ॥ ॥೭೫॥**

**ತಾತ್ಪರ್ಯ:** ಮೌನ ಪ್ರಧಾನವಾದ ಮೊದಲನೆಯ ಭೂಮಿಕೆಯಿಂದ ಉದಾಸೀನತ್ವ ಪ್ರಧಾನವಾದ ಮೂರನೆಯದರವರೆಗಿನವುಗಳಲ್ಲಿ ಆಚರಣೆಗಳನ್ನು ಮರೆತು ಬಿಟ್ಟಾಗ ಉಂಟಾದ ಚಿತ್ತವೃತ್ತಿ ನಶಿಸಿರಲು, ಆ ಮೂಲಕಾರಣವಾದ ಅವಸ್ಥೆ ನೆಲೆಗೊಂಡು ಸ್ಥಿರವಾಗಿ ನಿಲ್ಲುವುದು. ಆ ರೀತಿ ಏಕಪ್ರಕಾರವಾದ ನಿಲುವಾಗಿರುವುದು ಹಾಗೆ ಮನೋನಿಶ್ಚಲತೆಯು ಆತ್ಮಸ್ವರೂಪದ ಸ್ಫುರಣವನ್ನು ಮಾತ್ರ ಅನುಭವಿಸುತ್ತಿರುವ ನಿದ್ರಾಳುವಿನ ಹಾಗೆ ಇರುವಸ್ಥಿತಿಯೇ ನಾಲ್ಕನೆಯ ಭೂಮಿಕೆ ಆಗಿದೆ.

**ಶಬ್ದಾರ್ಥ: ಮೌನ ಮೊದಲಾಗಿರಲುಳಿದುದಾಸೀನ ಕಡೆಯಾದವರಲಿ**=ಮೌನ ಪ್ರಧಾನವಾದ ಮೊದಲನೆಯದರಿಂದ ಉದಾಸೀನ ಪ್ರಧಾನವಾದ ಮೂರನೆಯದರವರೆಗಿನವುಗಳಲ್ಲಿ.

**ನಿಲುವು ಅದು**=ಆ ರೀತಿ ಏಕಪ್ರಕಾರವಾಗಿರುವಿಕೆಯು; **ಆತ್ಮಸ್ಫುರಣ ಮಾತ್ರಾನುಭವ ನಿದ್ರಾಳುವಿನವೋಲ್**=ಆತ್ಮಸ್ವರೂಪದ ಸ್ಫುರಣವನ್ನು ಮಾತ್ರ ಅನುಭವಿಸುತ್ತಿರುವ ನಿದ್ರಾಳುವಿನ ಹಾಗೆ; ಇದುವರೆಗೆ ಎರಡನೆಯದನ್ನು ತಿಳಿಯದೆ ಸುಖವಾಗಿದ್ದೇನೆಂದು ಎಚ್ಚರದಲ್ಲಿ ಆಗುವ ನೆನಹು ನಿದ್ರಾಳುವಿನ ಅನುಭವ; * **ನಿದಾನದವಸ್ಥೆ**=ಎಚ್ಚರದಲ್ಲಿ ಆಗುವ ನೆನಹು;

---

**ಆ ಸಮಾಧಿಯೊಳಿರ್ದ ಯೋಗಿಗ**
**ದೇಸುದಿನವಾದೊಡೆಯುಮಗುಳಂ**
**ತಾ ಸಮಯದೊಳಗಾದಡೆಯು ತನ್ನಿಂದ ಪರರಿಂದ ।**
**ಸೂಸುತೆಚ್ಚರದೋರದಾ ಮನ**
**ಕಾ ಶರೀರವ್ಯವಹರಣೆ ನಿ**
**ರ್ವಾಸನೆಯಲಿ ಜಡಾಂಧಮೂಕರ ಭಾವವಾಗಿಹುದು ॥ ॥೭೬॥**

**ತಾತ್ಪರ್ಯ:** ಆ ಸಮಾಧಿಸ್ಥಿತಿಯು ಹತ್ತಿದ ಕಾಲದಲ್ಲಾಗಲಿ ಮತ್ತು ಆಮೇಲೆ ಎಷ್ಟು ದಿನಗಳ ಮೇಲಾದರೂ ಆಗಲಿ ಸಮಾಧಿಸ್ಥಿತಿಯಲ್ಲಿರುವಾಗ, ತನ್ನಿಂದಾಗಲಿ, ಬೇರೆಯವರಿಂದಾಗಲಿ ಬಹಿರ್ಮುಖವಾಗುತ್ತ ಮನಸ್ಸಿಗೆ ಎಚ್ಚರವೇ ಆಗುವುದಿಲ್ಲ. ಅಂಥ ವ್ಯಕ್ತಿಯು ಹೇಗೆ ಜಡರೂ, ಅಂಧರೂ, ಮೂಕರೂ, ವಿಷಯಗಳನ್ನು ನೋಡದೆ ಮತ್ತು ತಮ್ಮ ಅಭಿಪ್ರಾಯಗಳನ್ನು ಹೇಳದೆ ವ್ಯವಹರಿಸುವರೋ ಹಾಗೆ ಜ್ಞಾನಿಗಳು ನಿರ್ವಾಸನೆಯಿಂದ ವ್ಯವಹರಿಸುವಂತೆ ವರ್ತಿಸುವರು ಎಂದರೆ ವ್ಯವಹಾರಕ್ಕೆ ಮನಸ್ಸು ಹಾಕುವುದಿಲ್ಲ.

**ಶಬ್ದಾರ್ಥ: ಸೂಸುತ**=(ಸಮಾಧಿಯು ಹತ್ತಿದ ಕಾಲದಲ್ಲಾಗಲಿ ಮತ್ತು ಆಮೇಲೆ ಎಷ್ಟು ದಿನಗಳ ಮೇಲಾದರೂ ಆಗಲಿ) ಬಹಿರ್ಮುಖವಾಗುತ್ತ; * **ಎಚ್ಚರದೋರದ+ಆ ಮನಕೆ**=ಮನಸ್ಸಿಗೆ ಎಚ್ಚರವೇ ಉಂಟಾಗದಿರುವಾಗ; **ಜಡ**=ಚೇತನವಿಲ್ಲದವನು; * **ಅಂಧ**=ಕುರುಡ; * **ಮೂಕ**=ಮಾತಿಲ್ಲದವನು;

**ಟಿಪ್ಪಣಿ–೧: ಜಡಾಂಧಮೂಕರಭಾವವಾಗಿಹುದು**=ಹೇಗೆ ಜಡರೂ, ಅಂಧರೂ, ಮೂಕರೂ, ವಿಷಯಗಳನ್ನು ನೋಡದೆ ಮತ್ತು ತಮ್ಮ ಅಭಿಪ್ರಾಯಗಳನ್ನು ಹೇಳದೆ ವ್ಯವಹರಿಸುವರೋ ಹಾಗೆ ಜ್ಞಾನಿಗಳೂ ವ್ಯವಹರಿಸುವರು. (ಇಲ್ಲಿ ಜಡರೂ, ಅಂಧರೂ ಮೊದಲಾದವರು ವಾಸನೆಯಿಂದ ಕೂಡಿದವರಾಗಿದ್ದು ಯೋಗ್ಯತೆ ಇಲ್ಲದ್ದರಿಂದ ಆ ರೀತಿ ವ್ಯವಹರಿಸುವರೆಂದು ತಿಳಿಯಬೇಕು.) ಸಮಾಧಿಯಲ್ಲಿರುವವರು ವ್ಯವಹಾರಕ್ಕೆ ಮನಸ್ಸನ್ನು ಹಾಕುವುದಿಲ್ಲ.

**ಟಿಪ್ಪಣಿ–೨: ನಿರ್ವಾಸನೆಯಲಿ**=ವಾಸನಾರಹಿತರಾಗಿ, ಕ್ಷೇಪರಹಿತರಾಗಿ; ಕ್ಷೇಪ ಎಂದರೆ ಚಿತ್ತದ ೫ ಭೂಮಿಕೆಗಳಲ್ಲಿ ಒಂದು 'ಕ್ಷೇಪ'. ಲೋಕವಾಸನಾ, ದೇಹವಾಸನಾ, ಶಾಸ್ತ್ರವಾಸನಾ ಎಂಬ ರಜೋಗುಣದ ಪರಿಣಾಮವಾದ ದೃಢ ಅನಾತ್ಮ ವಾಸನೆಯನ್ನು ಕ್ಷೇಪವೆನ್ನುತ್ತಾರೆ. ವಿವರಗಳಿಗೆ ನೋಡಿ ಶ್ರೀ ವಿಚಾರ ಸಾಗರ ೭ನೇ ತರಂಗ, ಪುಟ ೨೨೦.

---

**ಮನವಳಿದು, ಕರ್ತೃತ್ವಬುದ್ಧಿಯ**
**ನೆನಹಡಗಿ, ಸಂಸ್ಕೃತಿಯ ಹೊಲಬಿನ**
**ಬಿನುಗು ತೋರದೆ, ಹೊರಗೊಳಗೆ ಸಂತತ ಸಮಾಧಿಯನು ।**
**ಅನುಭವಿಸುತಿರಲವಗೆ ನಿಜಸುಖ**
**ವನವರತ ಬಿಡದಿರ್ಪುದಾಗಿಯೆ**
**ವಿನುತನಾತ್ಮಾರಾಮನಾಗಿಹನೆಂದನಾ ಮುನಿಪ ॥ ॥ ೭೭ ॥**

**ತಾತ್ಪರ್ಯ:** ಮನಸ್ಸು ಲಯವಾಗಿ ಅಹಂಭಾವವು ಅಡಗಿ ಹೋಗಿ ಸಂಸಾರ ವಾಸನೆಯ ವ್ಯಾಮೋಹ ಕಾಣಿಸಿಕೊಳ್ಳದಿರಲು, ಅಂತರಂಗ ಬಹಿರಂಗಗಳಲ್ಲಿ ಏಕರೀತಿ ಯಾಗಿ ಸ್ಥಿರವಾದ ಸಮಾಧಿಯನ್ನು ಅನುಭವಿಸುತ್ತ ಇರುವವನಿಗೆ ಸದಾಕಾಲವು ಸ್ಥಿರಸುಖವು ಇರಲಾಗಿ ಆತನು ಸ್ತೋತ್ರಾರ್ಹನಾಗಿ ಆತ್ಮಾನಂದದಲ್ಲಿರುತ್ತಾನೆ ಎಂದು ಶುಕನಿಗೆ ವ್ಯಾಸನು ಹೇಳಿದನು.

**ಶಬ್ದಾರ್ಥ: ಕರ್ತೃತ್ವ ಬುದ್ಧಿಯ**=ಅಹಂಭಾವವು; * **ನೆನಹು+ಅಡಗಿ**=ಸ್ಮೃತಿಯು ಲಯವಾಗಿ; * **ಸಂಸ್ಕೃತಿಯ ಹೊಲಬಿನ**=ಸಂಸಾರದ ವ್ಯಾಮೋಹದ ಭ್ರಾಂತಿ, ವಾಸನೆಯ; * **ಬಿನುಗು**=ಬಿನ್ನಾಣ, ಭ್ರಾಂತಿ; * **ಅನವರತ**=ಸದಾ; **ವಿನುತನು**=ಸ್ತೋತ್ರಾರ್ಹನು; * **ಆತ್ಮಾರಾಮನಾಗಿಹನು**= ಆತ್ಮಾನಂದದಲ್ಲಿ ಲೀನನಾಗಿರುವವನು;

---

**ಸಗುಣ ನಿರ್ಗುಣವೆಂದು ಯೋಗದ**
**ಬಗೆಗಳೆರಡಾಗಿರ್ಪುವವದರೊಳು**
**ಸಗುಣವೇ ಸಾಕಾರ; ನಿರ್ಗುಣವೇ ನಿರಾಕಾರ; ।**
**ಸಗುಣದಲಿ ಸಾಲೋಕ್ಯ ಮೊದಲಾ**
**ದಗಣಿತದ ಮುಕ್ತಿಗಳ ಪಡೆವರು;**
**ಮಗನೆ, ನಿರ್ಗುಣದಿಂದಲಾ ಸಾಯುಜ್ಯವಹುದೆಂದ ॥ ॥೭೮॥**

**ತಾತ್ಪರ್ಯ:** ಯೋಗಸಾಧನೆಯಲ್ಲಿ ಸಗುಣಾರಾಧನೆ, ನಿರ್ಗುಣಾರಾಧನೆ ಎಂಬ ಎರಡು ಮಾರ್ಗಗಳಿವೆ. ಅದರಲ್ಲಿ ಸಗುಣವು ಸಾಕಾರಸ್ವರೂಪದ್ದಾಗಿದೆ. ನಿರ್ಗುಣವು ನಿರಾಕಾರಸ್ವರೂಪದ್ದಾಗಿದೆ. ಸಗುಣಾರಾಧನೆಯಿಂದ ಸಾಲೋಕ್ಯ, ಸಾಮಿಪ್ಯ ಸಾರೂಪ್ಯವೆಂಬ ಮೂರುಬಗೆಯ ಮುಕ್ತಿಗಳನ್ನು ಹೊಂದುವರು. ನಿರ್ಗುಣಾರಾಧನೆ ಯಿಂದ ಸಾಯುಜ್ಯಮೋಕ್ಷವನ್ನು ಹೊಂದುತ್ತಾರೆ, ಕೇಳು ಶುಕನೆ, ಎಂದು ವ್ಯಾಸನು ಹೇಳಿದನು.

**ಶಬ್ದಾರ್ಥ:** * **ಯೋಗದ ಬಗೆಗಳು**=ಯೋಗಸಾಧನೆಯ ಎರಡು ವಿಧಗಳು; * **ಸಾಕಾರ**=ಸಾಕಾರ ಸ್ವರೂಪದ್ದು; * **ನಿರಾಕಾರ**=ನಿರಾಕಾರ ಸ್ವರೂಪದ್ದು; **ನಿರ್ಗುಣ**=ಶುದ್ಧಬ್ರಹ್ಮದ ಆರಾಧನೆ (ವಿಚಾರ ಚಂದ್ರೋದಯ ಪಂಚದಶಕಲಾ ಅಧ್ಯಾಯ ಪುಟ-೧೮೫, ನೋಡಿ ವಿವರಗಳಿಗೆ) **ಸಗುಣ** =ಕಾರಣಬ್ರಹ್ಮ (ಈಶ್ವರ) ಮತ್ತು ಕಾರ್ಯಬ್ರಹ್ಮ (ಹಿರಣ್ಯಗರ್ಭಾದಿ) ಇದರ ಉಪಾಸನೆ. (ವಿಚಾರ ಚಂದ್ರೋದಯ-೧೫ನೇ ಕಲಾ ಅಧ್ಯಾಯ)

**ಟಿಪ್ಪಣಿ:** **ಸಾಲೋಕ್ಯ**=ಇಷ್ಟ ದೇವತೆಯ ಲೋಕದಲ್ಲಿರುವುದು (ಪಪ ಪುಟ ೪೧೨), ಗುರು ಸೇವೆಯೇ ಸಾಲೋಕ್ಯ, **ಸಾಮಿಪ್ಯ**=ಇಷ್ಟ ದೇವತೆಯ ಸಮೀಪದಲ್ಲಿರುವುದು, ಗುರುವಿನ ನಂಬಿಕೆಯೇ ಸಾಮಿಪ್ಯ, ಸಾಲೋಕ್ಯ=ಇಷ್ಟ ದೇವತೆಯ ಲೋಕದಲ್ಲಿರುವುದು, ಗುರುಸೇವೆಯೇ ಸಾಲೋಕ್ಯ, **ಸಾಯುಜ್ಯ**=ಶುದ್ಧವಾದ ಅರಿವೊಂದೇ ಉಳಿಯುವುದು, ಇಷ್ಟ ದೇವತೆಯೊಡನೆ ಒಂದಾಗುವುದು, ಪರಬ್ರಹ್ಮನಲ್ಲಿ ಲೀನವಾಗುವುದು (ಪರಮಾರ್ಥ ಪದಕೋಶ ಪುಟ ೪೧೨)

---

## ರಾಜಯೋಗದ ಅಷ್ಟಾಂಗಗಳು (೭೯-೮೦)

**ಇಹಪರದ ಭೋಗದ ವಿರಕ್ತಿಯ**
**ಲಿಹುದೆ ತಾ ಯಮ; ತತ್ತ್ವದರ್ಥದ**
**ಸಹಜದನುರಕ್ತಿಯೆ ನಿಯಮ; ಬಾಹ್ಯದೊಳುದಾಸೀನ ।**
**ಅಹುದದೇ ಆಸನವದಿಂದ್ರಿಯ**
**ಗ್ರಹಣವದು ಸಂಯಮನ ವದನಿ**
**ಗ್ರಹಿಸಿ ವಶವನು ಮಾಡೆ ಪ್ರತ್ಯಾಹಾರವೆನಿಸುವುದು ॥ ॥೭೯॥**

**ತಾತ್ಪರ್ಯ:** ಇಹಲೋಕದಲ್ಲೂ ಪರಲೋಕದಲ್ಲೂ ಸುಖಾಪೇಕ್ಷೆಯ ಬಗ್ಗೆ ವಿರಕ್ತ ಭಾವ ತಳೆಯುವುದೇ ಯಮ; ಬ್ರಹ್ಮಜ್ಞಾನದ ಚಿಂತನೆಯಲ್ಲಿ ಸಹಜವಾದ ಆಸಕ್ತಿ ಹೊಂದಿರುವುದೇ ನಿಯಮ; ಲೌಕಿಕದಲ್ಲಿ ಬಾಹ್ಯವಸ್ತುಗಳ ಬಗ್ಗೆ ಅಲಕ್ಷ್ಯ ಭಾವ ದಿಂದಿರುವದೇ ಆಸನ; ಇಂದ್ರಿಯಗಳನ್ನು ಬಿಗಿದಿಟ್ಟುಕೊಳ್ಳುವುದೇ ಸಂಯಮ (ಪ್ರಾಣಾಯಾಮ); ಬಿಗಿದಿಟ್ಟುಕೊಂಡ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳುವುದೇ ಪ್ರತ್ಯಾಹಾರ.

**ಟಿಪ್ಪಣಿ-೧:** ಈ ಪದ್ಯ (೬-೭೯) ಮತ್ತು ಮುಂದಿನ ಪದ್ಯ (೬-೮೦) ಇವೆರಡನ್ನು ಒಟ್ಟಿಗೆ ಅರ್ಥೈಸಬೇಕು. ಈ ಬಗೆಯ ಎರಡು ಪದ್ಯಗಳನ್ನು ಒಟ್ಟಿಗೆ ಅರ್ಥೈಸುವ ಪದ್ಯಗಳನ್ನು 'ಯುಗ್ಮ' ಎಂದು ಕರೆಯುತ್ತಾರೆ.

**ಟಿಪ್ಪಣಿ–೨:** ಯಮ–ಯಮ, ನಿಯಮ, ಮೊದಲಾದವು ಪಾತಂಜಲ ಯೋಗಶಾಸ್ತ್ರದ ಮಾತುಗಳು. ಇವುಗಳು ಆ ಶಾಸ್ತ್ರದಲ್ಲಿ ಹೇಳಿರುವ ಅರ್ಥವನ್ನು ಅಧ್ಯಾಯ ೨ ಪದ್ಯ ೩೬ರಲ್ಲಿ ವಿಚಾರಿಸಿದೆ ನೋಡಿ.

**ಟಿಪ್ಪಣಿ–೩:** ಶ್ರೀಮನ್ನಿಜಗುಣ ಶಿವಯೋಗಿಗಳು ನಿರ್ಗುಣಾಷ್ಟಾಂಗವೆಂಬ ವಿಚಾರದ (ಅಧ್ಯಾಯ) ಕೆಳಗೆ ಯಮಾದಿಗಳ ಅರ್ಥ ವಿವರಣೆಯನ್ನು ಮಹಲಿಂಗರಂಗ ಹೇಳಿದಂತೆಯೇ ಹೇಳಿದ್ದಾರೆ.

**ಟಿಪ್ಪಣಿ–೪:** ಶ್ರೀಸ್ವಾಮಿ ವಿವೇಕಾನಂದರು ಅಷ್ಟಾಂಗಗಳನ್ನು ಸಂಗ್ರಹಿಸಿರುವ ತಮ್ಮ ಗ್ರಂಥವನ್ನು ರಾಜಯೋಗವೆಂದು ಕರೆದಿದ್ದರೂ ಶ್ರೀ ಮಚ್ಛಂಕರಭಗವತ್ಪಾದರು ಇವುಗಳಲ್ಲಿ ಹಠಪ್ರಧಾನವಾಗಿರುವುದರಿಂದ ಹಠವೆಂದು ಕರೆದು ಈ ಹಠವನ್ನು ಅಪಕ್ವಮನಸ್ಸಿನವರಿಗೆ ಬಿಟ್ಟು ಚಿತ್ತಶುದ್ಧಿಯಾದವರಿಗೆ ೧೫ ಬಗೆಗಳನ್ನು ಅಪರೋಕ್ಷಾನುಭೂತಿ ಎಂಬ ಗ್ರಂಥದಲ್ಲಿ ಹೇಳಿ ಅವುಗಳನ್ನು ರಾಜಯೋಗವೆಂದು ಕರೆದಿದ್ದಾರೆ. ಆ ೧೫ ಬಗೆಗಳಲ್ಲಿ ಯಮ ಮೊದಲಾದ ಎಂಟಾಂಗಗಳೂ ಇವೆ.

**ಟಿಪ್ಪಣಿ–೫:** ಅಪರೋಕ್ಷಾನುಭೂತಿಯಲ್ಲಿ ಶ್ರೀಮಚ್ಛಂಕರರು ಹೇಳಿರುವ ಅಷ್ಟಾಂಗಗಳ ಲಕ್ಷಣಗಳೂ ಹೀಗಿವೆ: ೧) **ಯಮ:** ಸರ್ವವೂ ಬ್ರಹ್ಮವೆಂದು ಇಂದ್ರಿಯಗಳನ್ನು ಬಿಗಿಹಿಡಿಯುವುದು; ೨) **ನಿಯಮ:** ಒಂದೇ ಕಲ್ಪನೆಯನ್ನು ಸಾಧಿಸುವುದು; ೩) **ಆಸನ:** ಅಖಂಡ ಬ್ರಹ್ಮಚಿಂತನೆಗೆ ಅನುಕೂಲವಾಗಿ ಕುಳಿತುಕೊಳ್ಳುವ ಸ್ಥಿತಿ; ೪) **ಪ್ರಾಣಾಯಾಮ:** ಎಲ್ಲವೂ ಬ್ರಹ್ಮವೆಂದು ತಿಳಿದು ವೃತ್ತಿಯನ್ನು ನಿರೋಧಿಸುವುದು; ೫) **ಪ್ರತ್ಯಾಹಾರ:** ವಿಷಯಗಳನ್ನೆಲ್ಲ ಬ್ರಹ್ಮಸ್ವರೂಪವನ್ನಾಗಿ ಕಾಣುವುದು; ೬) **ಧಾರಣಾ:** ಮನಸ್ಸು ಹೋದಕಡೆಯಲ್ಲೆಲ್ಲಾ ಬ್ರಹ್ಮವನ್ನರಿಯುವುದು; ೭) **ಧ್ಯಾನ:** ದೇಹಾದಿಗಳ ಎಚ್ಚರವಿಲ್ಲದೆ ತಾನು ಬ್ರಹ್ಮ ಸ್ವರೂಪವೆಂದಿರುವುದು; ೮) **ಸಮಾಧಿ:** ಆ ವೃತ್ತಿಯನ್ನು ಕೂಡ ಮರೆತು ಜ್ಞಾನರೂಪಾಗುವುದು; ಮಹಲಿಂಗರಂಗನು ಈ ಪದ್ಯಗಳಲ್ಲಿ (೬, ೭೯, ೮೦) ಯಮ, ನಿಯಮಾದಿಗಳಿಗೆ ಮೇಲಿನ ಲಕ್ಷಣವನ್ನೇ ಹೇಳದಿದ್ದರೂ ಅದೇ ಬಗೆಯ ಲಕ್ಷಣಗಳನ್ನು ಹೇಳಿರುವುದರಿಂದ ಇದನ್ನು ರಾಜಯೋಗವೆಂದು ಅರಿಯಬೇಕು.

---

**ವಶವ ಮಾಡಿದ ಚಿತ್ತವಾತ್ಮನ**
**ವ್ಯಸನದಲ್ಲಿರೆ ಧಾರಣವು; ಶೋ**
**ಧಿಸಿದ ನಿಜಚೈತನ್ಯ ತಾನೆಂದೆಂಬುದೇ ಧ್ಯಾನ; ।**
**ಎಸೆಯಲಾತ್ಮಧ್ಯಾನದಲಿ ಮನ**
**ಮಿಸುಕದೇಕಾಕಾರವಾಗಿಯೆ**
**ಸಸಿನೆ ನಿಲೆ ಸುಸಮಾಧಿಯದು ಶುಕಯೋಗಿ ಕೇಳೆಂದ ॥ ॥೮೦॥**

**ತಾತ್ಪರ್ಯ:** ಸ್ವಾಧೀನಪಡಿಸಿಕೊಂಡ ಚಿತ್ತವು ಆತ್ಮನಚಿಂತನೆಯಲ್ಲೇ ಇದ್ದರೆ ಧಾರಣವು, ತ್ವಪದ ಮತ್ತು ತತ್ಪದ–ಇವುಗಳಲ್ಲಿ ಭಾಗ ತ್ಯಾಗ ಲಕ್ಷಣೆಯಿಂದ ವಿರೋಧಾಂಶಗಳನ್ನು ಬಿಟ್ಟು ಲಕ್ಷ್ಯಾರ್ಥವಾಗಿ ಕಂಡುಕೊಂಡಂಥ ಶುದ್ಧಚೈತನ್ಯವೇ ತಾನು ಎಂದು ತಿಳಿಯುವುದೇ ಧ್ಯಾನ; ಹೀಗೆ ಆತ್ಮ ಧ್ಯಾನದಲ್ಲಿ ನಿರತವಾಗಿ ಮನಸ್ಸು ಕದಲದೆ ನೆಲೆ ನಿಂತು ಪರಮಾತ್ಮನ ಧ್ಯಾನದಲ್ಲಿ ನಿಶ್ಚಲರೀತಿಯಲ್ಲಿ ಲೀನವಾದರೆ ಅದು ಶ್ರೇಷ್ಠ ಸಮಾಧಿ ಯೋಗ ಎನಿಸಿಕೊಳ್ಳುತ್ತದೆ ಎಂದು ಈ ರೀತಿಯಾಗಿ ಅಷ್ಟಾಂಗಯೋಗವನ್ನು ಶುಕನಿಗೆ ವ್ಯಾಸನು ಹೇಳಿದನು.

**ಶಬ್ದಾರ್ಥ:** ವ್ಯಸನ=ಬಿಟ್ಟಿರಲಾರದಿರುವಿಕೆ, ಚಿಂತನೆಯಲ್ಲಿ ತೊಡಗಿರುವಿಕೆ; **ಶೋಧಿಸಿದ ಚೈತನ್ಯ**=ತ್ವಂಪದ ಮತ್ತು ತತ್ಪದ-ಇವುಗಳಲ್ಲಿ ಭಾಗ ತ್ಯಾಗ ಲಕ್ಷಣೆಯಿಂದ ವಿರೋಧಾಂಶಗಳನ್ನು ಬಿಟ್ಟು ಲಕ್ಷ್ಯಾರ್ಥವಾಗಿ ಕಂಡುಕೊಂಡಂಥ ಶುದ್ಧ ಚೈತನ್ಯ. ಸಸಿನೆ=ನಿಶ್ಚಲವಾಗಿ; * **ಮಿಸುಕದೆ**=ಕದಲದೆ; * ಏಕಾಕಾರವಾಗಿ=ತಲ್ಲೀನವಾಗಿ; ಎಸೆಯಲಾ=ನಿರತವಾಗಲು;

---

## ಲಯ ಮೊದಲಾದ ಅಂತರಾಯಗಳು (೮೧-೮೭)

**ಮಗನೆ ಲಯ, ವಿಕ್ಷೇಪವು, ಕಷಾ**
**ಯಗಳು ಮೊದಲಾದಂತರಾಯಗ**
**ಳಗಣಿತಗಳಾಗಿಹವು ಯೋಗಾಭ್ಯಾಸಕಾಲದಲಿ; ।**
**ಬಗೆಯಲವಕವಕೆಲ್ಲ ಪರಿಹಾ**
**ರಗಳ ಹೇಳುವ ಶ್ರುತಿಪುರಾಣಾ**
**ದಿಗಳನರಿದವಕೆಲ್ಲ ಪರಿಹಾರವನು ಮಾಡುವುದು ॥ ॥೮೧॥**

**ತಾತ್ಪರ್ಯ:** ನಿರ್ವಿಕಲ್ಪ ಸಮಾಧಿಯ ಯೋಗಾಭ್ಯಾಸ ಕಾಲದಲ್ಲಿ ಲಯ (ಆಲಸ್ಯದಿಂದಾಗಲಿ ಅಥವಾ ಸುಷುಪ್ತಿಯಿಂದಾಗಲಿ ಉಂಟಾಗುವ ವೃತ್ತಿಯ ಅಭಾವ), ವಿಕ್ಷೇಪ (ಧ್ಯಾನದಲ್ಲಿ ಪ್ರವೃತ್ತನಾದ ಚಿತ್ತವು ಕದಾಚಿತ್ ಬಾಹ್ಯ ಪ್ರವೃತ್ತಿಗೆ ಒಳಗಾಗುವುದು) ಕಷಾಯಗಳು (ಬಾಹ್ಯ-ಅಂತರರಾಗಾದಿ ದೋಷಗಳು), ಮೊದಲಾದ (ರಸಾಸ್ವಾದವೆಂಬ) ಅಂತರಾಗಾದಿಗಳು (ವಿಘ್ನಗಳು), ಅನೇಕಭೇದಗಳಿಂದ ಕೂಡಿವೆ. ವಿಚಾರ ಮಾಡಿದರೆ ಆ ವಿಘ್ನಗಳಿಗೆಲ್ಲ ಪರಿಹಾರಮಾರ್ಗವನ್ನು ವೇದೋಪನಿಷತ್ತು ಪುರಾಣಗಳು ಹೇಳುವುದನ್ನು ತಿಳಿದರೆ ಪರಿಹಾರಮಾರ್ಗ ತಿಳಿಯುತ್ತದೆ.

**ಶಬ್ದಾರ್ಥ:** ಲಯ=ಆಲಸ್ಯದಿಂದಾಗಲಿ, ಅಥವಾ ಸುಷುಪ್ತಿಯಿಂದಾಗಲಿ ಉಂಟಾಗುವ ವೃತ್ತಿಯ ಅಭಾವ. (ಪರಮಾರ್ಥ ಪದಕೋಶ, ಪುಟ-೩೩೯)) ವಿಕ್ಷೇಪ=ಧ್ಯಾನದಲ್ಲಿ ಪ್ರವೃತ್ತವಾದ ಚಿತ್ತವು ಬಾಹ್ಯ ಪ್ರವೃತ್ತಿಗೆ ಒಳಗಾಗುವುದು; **ಕಷಾಯಗಳು**=ಬಾಹ್ಯ-ಅಂತರ ರಾಗಾದಿ ದೋಷಗಳು); ಮೊದಲಾದ=ರಸಸ್ವಾದವೆಂಬ ವಿಘ್ನ; ಅಂತರಾಯ=ವಿಘ್ನ;

**ಟಿಪ್ಪಣಿ-೧:** ಶ್ರುತಿ=ವಿಘ್ನಗಳ ಪರಿಹಾರದ ವಿಷಯಕ್ಕೆ ಮಾಂಡೂಕ್ಯಕಾರಿಕೆಯಲ್ಲಿ ಹೇಳಿರುವುದು ಹೀಗೆ 'ಲಯೇ ಸಂಬೋಧಯೇಚ್ಚಿತ್ತಂ ವಿಕ್ಷಿಪ್ತಂ ಶಮಯೇತ್ಪುನಃ । ಸಕಷಾಯಂ ವಿಜಾನೀಯಾತ್ಸಮಪ್ರಾಪ್ತಂ ನ ಚಾಲಯೇತ್ ॥ ಎಂದರೆ ಲಯವಾದರೆ ಮನಸ್ಸನ್ನು ಎಚ್ಚರಗೊಳಿಸಬೇಕು. ಹೊರಕ್ಕೆ ನುಗ್ಗಿದರೆ ಮತ್ತೆ ಸಮಾಧಾನಕ್ಕೆ ತರಬೇಕು, ಸಮಕ್ಕೆ ನಿಂತದ್ದನ್ನು ಕದಲಿಸಬಾರದು. ಆ ಸಮತ್ವದ ಸುಖವನ್ನೇ ಸವಿ ನೋಡುತ್ತಿರಬಾರದು. ತಿಳಿವಳಿಕೆಯಿಂದ ಆಸಕ್ತಿಯಿಲ್ಲದವನಾಗಿರಬೇಕು.

**ಟಿಪ್ಪಣಿ-೨:** ಗ್ರಂಥಕಾರನು ಈ ಪರಿಹಾರಗಳ ವಿಷಯಕ್ಕೆ ಶ್ರುತಿಯನ್ನು ನೆನಪುಗೊಟ್ಟಿದ್ದರೂ ತಾನು ಮುಂದೆ ೮೬ ಮತ್ತು ೮೭ನೇ ಪದ್ಯಗಳಲ್ಲಿ ಬೇರೆ ಉಪಾಯಗಳನ್ನೇ ಹೇಳಿರುವನು.

---

## ಲಯ ಎಂದರೇನು? (೮೨)

**ತನ್ನೊಳಪರೋಕ್ಷಾನುಭವ ಸಂ**
**ಪನ್ನವಾದ ಸಮಾಧ್ಯವಸ್ಥೆಯ**
**ಲನ್ಯವೇನೂ ತೋರದೇ ತಾ ತೋರುತಿರ್ಪಾಗ ।**
**ಶೂನ್ಯಭಾವದ ನಿದ್ರೆ ಬರೆ ತಾ**
**ಮುನ್ನಿನನುಭವ ಕೆಡುವುದಂತದ**
**ನಿನ್ನು ಲಯವೆಂದೆಂಬರೈ ಯೋಗಾಂತರಾಯವನು ॥ ॥೮೨॥**

**ತಾತ್ಪರ್ಯ:** ತನ್ನಲ್ಲಿ ಪ್ರತ್ಯಕ್ಷಾನುಭವಗಳಿಂದ ಸಿದ್ಧಿಯಾದ ಸಮಾಧಿಯೆಂಬ ಅವಸ್ಥೆಯಲ್ಲಿ ಅನ್ಯ ವಿಚಾರವೇನೂ ತೋರದೆ ತಾನೇ (ಆತ್ಮ) ತೋರುತಿರುವಾಗ ಶೂನ್ಯ ಭಾವ ಉಂಟಾಗಿ ನಿದ್ದೆ (ಸುಷುಪ್ತಿ ಸ್ಥಿತಿ) ಉಂಟಾದರೆ ಮೊದಲು ಗಳಿಸಿದ ಅನುಭವವು ಕೆಡುತ್ತದೆ. ಹೀಗೆ ಯೋಗಸಾಧನೆಗೆ ಅಡ್ಡಿಯಾದ ವಿಘ್ನಕಾರಿ ಸ್ಥಿತಿಯನ್ನು ಲಯ ವೆನ್ನುತ್ತಾರೆ.

**ಶಬ್ದಾರ್ಥ: ಅಪರೋಕ್ಷಾನುಭವ**=ಪ್ರತ್ಯಕ್ಷಾನುಭವ; **ಸಂಪನ್ನವಾದ**=ಸಿದ್ಧವಾದ; **ಅನ್ಯ**=ಬೇರೆ ವಿಚಾರ; **ತಾ**=ತಾನು (ಆತ್ಮ); **ನಿದ್ರೆ**=ನಿದ್ದೆ (ಸುಷುಪ್ತಿ); **ಮುನ್ನಿನ**=ಮೊದಲಿನ; **ಯೋಗ+ಅಂತರಾಯ**= ಯೋಗಸಾಧನೆಗೆ ಅಡ್ಡಿಯಾದ ವಿಘ್ನ;

* **ಟಿಪ್ಪಣಿ-೧:** ಈ ಪದ್ಯಕ್ಕೆ ಹೊಸಕೆರೆ ಚಿದಂಬರಯ್ಯನವರು ಟೀಕೆ ಬರೆದಿಲ್ಲ, ಕೊಟ್ಟಿರುವ ಶಬ್ದಾರ್ಥ, ಟಿಪ್ಪಣಿಗಳು ಅನುವಾದಕನದು.

* **ಪಾಠಾಂತರ:** ಈ ಪದ್ಯದಲ್ಲಿ ಶೂನ್ಯಭಾವ, ಲನ್ಯವೇನೂ ಎಂಬ ರೂಪಗಳು ಎಲ್ಲ ೪ ಪ್ರತಿಗಳಲ್ಲೂ (ಅರಾಸೇ, ಕೊಮಾಂಡೂರು, ಅಜ್ಞಾತಪ್ರತಿ, ಬಿ.ಎಸ್.ಸಣ್ಣಯ್ಯ) ಇದೆ. ಆದರೆ ಇವು ಪ್ರಾಸ ತಪ್ಪಿದ್ದಕ್ಕೆ ನಿದರ್ಶನವಾಗಿದೆ. ಈ ಪದಗಳಿಗೆ **ಶೂನ್ಯಭಾವ**=ಸೊನ್ನೆಭಾವ, **ಅನ್ಯವೇನೂ**=ಭಿನ್ನವೇನೂ ಎಂಬ ಊಹಾಪಾಠಗಳನ್ನು ಸೂಚಿಸಬಹುದಾಗಿದೆ (ಅನುವಾದಕ).

---

## ವಿಕ್ಷೇಪ ಎಂದರೇನು? (೮೩)

**ಮನನವನು ಮಾಳ್ಪಾಗ ಚಿತ್ತದ**
**ನೆನಹು ಚಂಚಲವಾಗಿ, ಬ್ರಹ್ಮದ**
**ಲನುಭವವನುಳಿದನ್ಯವಿಷಯಾಪೇಕ್ಷೆಯಿಂದಿರ್ದು, ।**
**ಎನಿತು ಪರಿಯಲಿ ಮರಳಿಚಿದೊಡದು**
**ತನಯ, ಮರಳದೆ ತೋರ್ಪವಸ್ಥೆಯು**
**ಘನವೆನಿಪ ವಿಕ್ಷೇಪವೆನಿಸಿರ್ಪಂತರಾಯವದು ॥ ॥೮೩॥**

**ತಾತ್ಪರ್ಯ:** ಧ್ಯಾನಸ್ಥನಾಗಿ ಮನನ ಮಾಡುತ್ತಿರುವಾಗ ಮನಸ್ಸಿನ ಸ್ಥಿರತ್ವ ಹೋಗಿ ಚಂಚಲತೆ ಉಂಟಾಗಿ, ಬ್ರಹ್ಮಾನುಭವವನ್ನು ಬಿಟ್ಟು ಉಳಿದ ಬೇರೆ ವಿಷಯಾಸಕ್ತಿಗಳನ್ನು

ಹೊಂದಿರುತ್ತದೆ. ಆಗ ಮನಸ್ಸನ್ನು ಆ ವಿಷಯಾಸಕ್ತಿಗಳಿಂದ ಬ್ರಹ್ಮಾಸಕ್ತಿಗೆ ಹಿಂದಿರುಗಿಸಲು ಎಷ್ಟೇ ಪ್ರಯತ್ನಿಸಿದರೂ ಮನಸ್ಸು ಹಿಂತಿರುಗದೆ ಮತ್ತೆ ಮತ್ತೆ ಅತ್ತ ಕಡೆಗೇ ಹೋಗುವ ಅವಸ್ಥೆಯು ವಿಕ್ಷೇಪವೆನ್ನುವ ಅಂತರಾಯ (ವಿಘ್ನ) ವಾಗಿರುವುದು.

**ಶಬ್ದಾರ್ಥ:** * **ಮಾಳ್ವಾಗ**=ಮಾಡುತ್ತಿರುವಾಗ; * **ಚಿತ್ತದ ನೆನಹು**=ಮನಸ್ಸಿನ ಧ್ಯಾನ ಸ್ಥಿತಿ (ಸ್ಥಿರತ್ವ); * **ಅನ್ಯ**=ಬೇರೆ; * **ಎನಿತುಪರಿಯಲಿ**=ಎಷ್ಟೇ ರೀತಿ ಪ್ರಯತ್ನಿಸಿದರೂ; * **ಮರಳಿಚಿದೊಡೆ**= ಮನಸ್ಸನ್ನು ಬ್ರಹ್ಮಸತ್ತಿಯ ಕಡೆಗೆ ಹಿಂದಿರುಗಿಸಲು ಪ್ರಯತ್ನಿಸಿದರೂ; * **ಮರಳದೆ**=ಹಿಂದಿರುಗದೆ; * **ತೋರ್ಪ**= ತೋರುವ; * **ಘನ**=ಭಾರಿ;

**ಟಿಪ್ಪಣಿ:** ಈ ಪದ್ಯಕ್ಕೆ ಹೊಸಕೆರೆ ಚಿದಂಬರಯ್ಯನವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

**ಟಿಪ್ಪಣಿ–೧:** * **ವಿಕ್ಷೇಪ ವಿಘ್ನ**=ಹದ್ದು ಇಲ್ಲವೆ ಬೆಕ್ಕಿಗೆ ಭಯ ಪಟ್ಟು ಗುಬ್ಬಿ ಮೊದಲಾದ ಪಕ್ಷಿಗಳು ಗೃಹವನ್ನು ಪ್ರವೇಶ ಮಾಡುತ್ತವೆ. ಅವು ಭಯದಿಂದ ವ್ಯಾಕುಲವಾದುದರಿಂದ ಮನೆಯೊಳಗೂ ಸ್ಥಾನ ಸಿಗುವುದಿಲ್ಲ. ಆದುದರಿಂದ ಅವು ಅನೇಕ ಸಾರಿ ಒಳಗೂ ಹೊರಗೂ ಓಡಾಡಿ ನಂತರ ಹೊರಗೆ ಬಂದು ಸತ್ತು ಹೋಗುತ್ತವೆ. ಅದರಂತೆ ಅನಾತ್ಮಪದಾರ್ಥಗಳು ದುಃಖ ಹೇತುವೆಂದು ತಿಳಿದು ಅದ್ವೈತಾನಂದವನ್ನು ವಿಷಯೀಕರಿಸುವುದಕ್ಕಾಗಿ ಅಂತಃಕರಣ ವೃತ್ತಿಯು ಅಂತರ್ಮುಖವಾದರೂ ಅಲ್ಲಿಗೆ ವೃತ್ತಿಗೆ ವಿಷಯವಾದ ಚೈತನ್ಯವು ಅತಿ ಸೂಕ್ಷ್ಮವಾದದ್ದರಿಂದ ಅಲ್ಲಿ ನಿಲ್ಲಲಾರದಾದುದರಿಂದ ತತ್ಕಾಲದಲ್ಲಿಯೇ ಚೈತನ್ಯ ಸ್ವರೂಪದ ಆನಂದದ ಲಾಭ ಆಗುವುದಿಲ್ಲ. ಆದುದರಿಂದ ತೊಂದರೆಗೆ ಒಳಪಟ್ಟು ವೃತ್ತಿಯು ಬಹಿರ್ಮುಖ ವಾಗುತ್ತದೆ. ಈ ಬಹಿರ್ಮುಖ ವೃತ್ತಿಯನ್ನು ವಿಕ್ಷೇಪ ಎನ್ನುತ್ತಾರೆ. ಈ ರೀತಿಯಾಗಿ ವಿಕ್ಷೇಪ ರೂಪವಿಘ್ನಕ್ಕೆ ವಿರೋಧಿಯಾದ ಯೋಗಿಯ ಪ್ರಯತ್ನಕ್ಕೆ ಗೌಡಪಾದಾಚಾರ್ಯರು ಶಮ ಎನ್ನುತ್ತಾರೆ– ವಿಚಾರ ಸಾಗರ (ಅನು ಪುಟ ೨೧೮, ೭ನೇ ತರಂಗ)

---

## ಕಷಾಯ ವಿಘ್ನ ಎಂದರೇನು (೮೪)

**ಭಾವಶುದ್ಧಿಯನೊಂದಿ, ಚಿತ್ತವ**
**ಸಾವಧಾನವ ಮಾಡಿ, ಬ್ರಹ್ಮವ**
**ಭಾವಿಸುವ ಹೊತ್ತಿನಲಿ ಬುದ್ಧಿಯ ವೃತ್ತಿ ಜಡವಾಗಿ ।**
**ಆವುದನು ತೋರಿಸದೆ ಸ್ತಂಭೀ**
**ಭಾವವಾಗಿರಲಾ ಅವಸ್ಥೆಯ**
**ಭಾವಿಕರು ಹೇಳುವರು ಮಗನೆ ಕಷಾಯವೆಂದದನು ॥ ॥೮೪॥**

**ತಾತ್ಪರ್ಯ:** ಚಿತ್ತ ಶುದ್ಧಿಯನ್ನು ಹೊಂದಿ ಮನಸ್ಸನ್ನು ಸಮತ್ವಕ್ಕೆ ತಂದುಕೊಂಡು ಬ್ರಹ್ಮಾನಂದದಲ್ಲಿ ಮನಸ್ಸನ್ನು ನಿಲ್ಲಿಸುವ ಸಮಯಕ್ಕೆ ಬುದ್ಧಿಯ ವೃತ್ತಿ ಜಡವಾಗಿ ಮನಸ್ಸು ಒಳಮುಖವಾದರೂ ಬ್ರಹ್ಮಾಕಾರವಾಗದೆ ಏನೂ ತೋಚದ ಸ್ಥಿತಿಯಲ್ಲಿ ಮನಸ್ಸು ನಿಂತುಬಿಟ್ಟರೆ (ಸ್ತಂಭೀಭಾವ) ಆ ಅವಸ್ಥೆಗೆ ತಿಳಿದವರು ಕಷಾಯ ವಿಘ್ನವೆಂದು ಹೇಳುತ್ತಾರೆ.

**ಶಬ್ದಾರ್ಥ: ಭಾವಶುದ್ಧಿಯನು**=ಚಿತ್ತಶುದ್ಧಿಯನ್ನು; **ಸಾವಧಾನವ ಮಾಡಿ**=ಸಮತ್ವಕ್ಕೆ ತಂದುದು; **ಆವುದನು ತೋರಿಸದೆ**=ವಿಕ್ಷೇಪವೆಂಬ ದೋಷವನ್ನು ಕಳೆದುಕೊಂಡಿರುವುದರಿಂದ ವಿಷಯಾಕಾರ ವಾಗುವುದಂತು ಇಲ್ಲವಷ್ಟೇ; ಒಳಮುಖವಾದರೂ ಬ್ರಹ್ಮಾಕಾರವಾಗದೆ ಇರುವುದರಿಂದ ಯಾವುದನ್ನೂ ತೋರಿಸದೆ ಇದ್ದ ಹಾಗಾಯಿತು. * **ಸ್ತಂಭೀಭಾವ**=ಏನೂ ತೋಚದ ಸ್ಥಿತಿಯಲ್ಲಿ ಮನಸ್ಸು ಇರುವ ಅವಸ್ಥೆ; * **ಭಾವಿಕರು**=ತಿಳಿದವರು;

**ಟಿಪ್ಪಣಿ-೧: ಕಷಾಯ ವಿಘ್ನ**=ರಾಗಾದಿ ದೋಷವನ್ನು ಕಷಾಯವೆನ್ನುತ್ತಾರೆ. ರಾಗಾದಿಗಳು ಎರಡು ಬಗೆ, ಬಾಹ್ಯ ಅಂತರವೆಂದು. ಬಾಹ್ಯ ರಾಗಾದಿಗಳು ಎಂದರೆ ಪುತ್ರ, ಸ್ತ್ರೀ, ಧನಾದಿಗಳಾದ ಎಷ್ಟು ವಿಷಯಗಳು ವರ್ತಮಾನಗಳಾಗಿರುವುವು. ಅಂತರಂಗಾದಿಗಳು ಎಂದರೆ ಹಿಂದೆ ಆಗಿ ಹೋದ ವಿಷಯಗಳ (ಭೂತ) ಎಷ್ಟು ಮುಂದೆಬರುವ ವಿಷಯಗಳ (ಭವಿಷ್ಯತ್) ಚಿಂತನರೂಪವಾದ ಮನೋರಾಜ್ಯವು. ಈ ಎರಡು ಪ್ರಕಾರ ರಾಗಾದಿಕವು ಸಮಾಧಿಯಲ್ಲಿ ಪ್ರಮತ್ತನಾದ ಯೋಗಿಯಲ್ಲಿ ಸಂಭವಿಸಲಾರವು. (ಲೇ: ವಿಚಾರಸಾಗರ-ಶಂಕರಾನಂದ, ಅನುವಾದ, ಪುಟ-೨೧೯, ೭ನೇ ತರಂಗ)

---

**ಶ್ರವಣಮನನಂಗಳಲಿ ಚಿತ್ತವು**
**ಸವನಿಸಿಯೆ ಸತ್ಯಾದ್ವಯಾನಂ**
**ದವನು ಪಡೆದಿರಲಾ ಸಮಯದಲಿ ತತ್ಸುಖಕೆ ಮೆಚ್ಚಿ ।**
**ಸವಿಸವಿದು ಸುಸಮಾಧಿಯಳಿದಿ**
**ರ್ಪವಸರವ ಬಲ್ಲವರು ಹೇಳುವ**
**ರವಗತರಸಾಸ್ವಾದವೆಂದಾ ಅಂತರಾಯವನು ॥** ॥೮೫॥

**ತಾತ್ಪರ್ಯ:** ಮನಸ್ಸು ಶ್ರವಣ ಮನನಗಳಲ್ಲಿ ಸೇರಿಕೊಂಡು ನಿಜವಾದ ಅದ್ವೈತಾ ನಂದವನ್ನು ಹೊಂದಿದ ಸಮಯದಲ್ಲಿ ಆ ಹೊಸ ಪರಿಸ್ಥಿತಿಯ ಆನಂದದ ರುಚಿಯನ್ನು ನೋಡುತ್ತಾ ಅದೇ ಬ್ರಹ್ಮವನ್ನು ಮರೆಯುತ್ತ ಇರುವ ಅವಸ್ಥೆಯನ್ನೇ ತಿಳಿದವರು ಅವಗತರಸಾಸ್ವಾದವೆಂಬ ವಿಘ್ನವೆಂದು ಹೇಳುವರು.

**ಶಬ್ದಾರ್ಥ: ಸವನಿಸಿಯೆ**=ಒಳಗೊಂಡು; **ತತ್ಸುಖಕೆ ಮೆಚ್ಚಿ**=ಹೊಸಪರಿಸ್ಥಿತಿಯ ಆನಂದದ ರುಚಿಯನ್ನು ನೋಡುತ್ತಾ; **ಸುಸಮಾಧಿ ಅಳಿದಿರ್ಪ+ಅವಸರವ**=ಬ್ರಹ್ಮವನ್ನು ಮರೆಯುವ ಸ್ಥಿತಿಯೇ; **ಅವಗತ ರಸಾಸ್ವಾದ**=ಸಾರಹೀನವಾದ ರಸಾಸ್ವಾದವೆಂಬ ವಿಘ್ನ; **ಅಂತರಾಯ**=ವಿಘ್ನ;

**ಟಿಪ್ಪಣಿ-೧: ಅವಗತ ರಸಾಸ್ವಾದ**=ಮನಸ್ಸು ಬ್ರಹ್ಮಾಕಾರವಾಗುತ್ತಲೇ ಆ ಹೊಸ ಪರಿಸ್ಥಿತಿಯ ಆನಂದದ ರುಚಿಯನ್ನು ನೋಡುತ್ತಾ ಬ್ರಹ್ಮವನ್ನು ಮರೆಯುವ ಅವಸ್ಥೆಯನ್ನೇ ತಿಳಿದವರು ಅವಗತ ರಸಾಸ್ವಾದವೆಂದು ಗ್ರಂಥಕಾರನ ಅಭಿಪ್ರಾಯ.

**ಟಿಪ್ಪಣಿ-೨:** ಈ ಹೊಸಪರಿಸ್ಥಿತಿಯ ಸುಖವನ್ನು ಇತರ ಸುಖದ ಜತೆಗೆ ಹೋಲಿಸಿ ಅದರ ಹೆಚ್ಚುಗಾರಿಕೆಯಿಂದ ಹಿಗ್ಗಿ ಏಳಬೇಕೆಂಬ ಲವಲವಿಕೆಯನ್ನು ಪಡೆಯುವುದು ರಸಾಸ್ವಾದವೆಂದು ಜೀವನ್ಮುಕ್ತಿ ವಿವೇಕ ಗ್ರಂಥರಚನಾಕಾರರಾದ ವಿದ್ಯಾರಣ್ಯರ ಅಭಿಪ್ರಾಯ.

**ಟಿಪ್ಪಣಿ-೩:** ರಸಾಸ್ವಾದವೆಂದರೆ ಹರಿದಾಟದ ದುಃಖವಿಲ್ಲದ್ದರಿಂದ ತೋರುವ ಸುಖಕ್ಕೆ ಮರುಳಾಗುವುದೆಂದು ಅಥವಾ ಸವಿಕಲ್ಪ ಸಮಾಧಿಯು ಹೋಗಿ ನಿರ್ವಿಕಲ್ಪ ಸಮಾಧಿಯು

ಮೈಗೂಡುವದರ ನಡುವಣಕಾಲದ ಆನಂದದ ಕಡೆಗೆ ಲಕ್ಷ್ಯವನ್ನು ಕೊಡುವುದು ಎಂದು ವಿಚಾರಸಾಗರ ಲೇಖಕರಾದ ಸಾಧುನಿಶ್ಚಲದಾಸರ ಅಭಿಪ್ರಾಯ. (ವಿಚಾರಸಾಗರ ೭ನೇ ತರಂಗ, ಪುಟ-೨೨೪).

**ಟಿಪ್ಪಣಿ-೪:** * ಸಮಾಧಿಗೆ ರಸಾಸ್ವಾದವು ಅಂತರಾಯ (ವಿಘ್ನವು) ಹೇಗಾಗುತ್ತದೆ ಎಂಬುದಕ್ಕೆ ವಿಚಾರಸಾಗರ ಗ್ರಂಥದಲ್ಲಿ (೭ನೇ ತರಂಗದಲ್ಲಿ) ಸೊಗಸಾದ ದೃಷ್ಟಾಂತವನ್ನು ಕೊಡಲಾಗಿದೆ. (ಪುಟ ೨೨೪). ದುಃಖ ನಿವೃತ್ತಿಯುಂಟಾದ ಆನಂದಾನುಭವದಲ್ಲಿಯೇ ಯೋಗಿಯು ಅಲಂಬುದ್ಧಿಯನ್ನು ಮಾಡಿದರೆ ಸಕಲೋಪಾಧಿರಹಿತವಾದ ಬ್ರಹ್ಮಾನಂದಾಕಾರ ವೃತ್ತಿಯ ಅಭಾವದಿಂದ ಸಮಾಧಿಯಲ್ಲಿ ಅವನಿಗೆ ಬ್ರಹ್ಮಾನಂದವು ಲಭ್ಯವಾಗಲಾರದು. ಆದುದರಿಂದ ರಸಾಸ್ವಾದವು ಸಮಾಧಿಗೆ ವಿಘ್ನವೆಂದು ಹೇಳಲ್ಪಡುತ್ತದೆ.

**ಇದಕ್ಕೆ ದೃಷ್ಟಾಂತ ಇದು:** ಪೃಥ್ವಿಯಲ್ಲಿ ನಿಧಿ ಇದೆ ಎಂದು ಭಾವಿಸೋಣ. ಆ ನಿಧಿಯು ವಿಷಧರ ಸರ್ಪದಿಂದ ರಕ್ಷಿತವಾಗಿರುತ್ತದೆ ಎಂದೂ ಭಾವಿಸೋಣ. ಅಲ್ಲಿ ನಿಧಿ ಪ್ರಾಪ್ತಿಗಿಂತ ಮೊದಲೇ ಅದಕ್ಕೆ ವಿರೋಧಿಯಾದ ಸರ್ಪದ ನಿವೃತ್ತಿಯಿಂದ ಆನಂದವಾಗುತ್ತದೆ. ಆಗ ಸರ್ಪ ನಿವೃತ್ತಿಯಿಂದ ಉಂಟಾದ ಆನಂದದಲ್ಲಿ ಅಲಂಬುದ್ಧಿಯನ್ನು ಮಾಡಿದರೆ ಅನಂತರ ಮಾಡುವ ಉದ್ಯೋಗವನ್ನು ಮಾಡದಿದ್ದರೆ ನಿಧಿ ಪ್ರಾಪ್ತಿಯಿಂದ ಉಂಟಾಗುವ ಪರಮಾನಂದವು ಪ್ರಾಪ್ತಿ ಆಗಲಾರದು. ಇದರಂತೆ ಅದ್ವೈತ ಬ್ರಹ್ಮರೂಪನಿಧಿ ಇರುತ್ತದೆ. ಅದರ ಮೇಲೆ ದೇಹಾದಿ ಅನಾತ್ಮ ಪ್ರತೀತರೂಪ ವಿಕ್ಷೇಪವೆಂಬ ಸರ್ಪವಿರುತ್ತದೆ. ಆ ಸರ್ಪನಿವೃತ್ತಿಯಿಂದ ಉಂಟಾದ ಅವಾಂತರ ಆನಂದರೂಪರಸದ ಅನುಭವರೂಪರಸಾಸ್ವಾದವು ನಿಧಿರೂಪ ಬ್ರಹ್ಮಪ್ರಾಪ್ತಿಗೆ ಪ್ರತಿಬಂಧಕವಾಗುವುದರಿಂದ ಅದನ್ನು ವಿಘ್ನವೆನ್ನುತ್ತಾರೆ. ರಸಾಸ್ವಾದಕ್ಕೆ ಇನ್ನೊಂದು ಅರ್ಥವಿದೆ. ಸವಿಕಲ್ಪಸಮಾಧಿ ನಂತರ ನಿರ್ವಿಕಲ್ಪಸಮಾಧಿ ಆಗುತ್ತದೆ. ಸವಿಕಲ್ಪಸಮಾಧಿಯಲ್ಲಿ ಪ್ರಾಪ್ತವಾದ ಆನಂದವು ತ್ರಿಪುಟೀರೂಪ ಉಪಾಧಿಸಹಿತವಾದ್ದರಿಂದ ಅದನ್ನು ಸೋಪಾಧಿಕಾನಂದವೆನ್ನುತ್ತಾರೆ. ತ್ರಿಪುಟೀ ಪ್ರತೀತಿಯಿಲ್ಲದ ಆನಂದವನ್ನು ನಿರುಪಾಧಿಕ ಆನಂದವೆನ್ನುತ್ತಾರೆ. ಸವಿಕಲ್ಪಸಮಾಧಿಯ ಆನಂದವಾಗಲಿ ಅಥವಾ ವಿಕ್ಷೇಪವೃತ್ತಿಯಿಂದುಂಟಾದ ಆನಂದವಾಗಲಿ ನಿರ್ವಿಕಲ್ಪಸಮಾಧಿಯ ಪರಮಾನಂದಾನುಭವಕ್ಕೆ ಅಡ್ಡಿ (ವಿರೋಧಿ=ವಿಘ್ನ=ಅಂತರಾಯ) ಆದುದರಿಂದ ಅದನ್ನು ರಸಾಸ್ವಾದ ಅಂತರಾಯ ಎಂದು ಕರೆಯುತ್ತಾರೆ. ಯೋಗಿಯು ಈ ಎರಡು ಪ್ರಕಾರದ ಸವಿಕಲ್ಪ ಸಮಾಧಿಯ ಸೋಪಾಧಿಕಾರವನ್ನು ಬಿಡಬೇಕು. (ವಿಚಾರಸಾಗರ, ೩ನೇ ಭಾಗ, ೭ನೇ ತರಂಗ, ಪುಟ-೨೨೫, ಅನುವಾದಕ ಶಂಕರಾನಂದ)

---

**ನಿದ್ರೆಗಾದ್ಯಂತದಲಿ ಬ್ರಹ್ಮವು**
**ಸಿದ್ಧವಾಗಿಯೆ ತಿಳಿಯಲದರಿಂ**
**ಮಧ್ಯಕಾಲವ ಬ್ರಹ್ಮವೆಂಬುದು ಲಯಕೆ ಪರಿಹಾರ; ।**
**ಬುದ್ಧಿ ತಾನಾವಾವ ವಿಷಯವ**
**ಹೊದ್ದಿ ಚೇಷ್ಟಿಸಲಾ ವಿಷಯವೇ**
**ಶುದ್ಧಬ್ರಹ್ಮವದೆಂದರಿಯೆ ವಿಕ್ಷೇಪಪರಿಹಾರ ॥ ॥ ೮೬ ॥**

**ತಾತ್ಪರ್ಯ:** ಬ್ರಹ್ಮವನ್ನು ಮೊದಲು ತಿಳಿದುಕೊಂಡ ಮೇಲೆ ಯೋಗನಿದ್ರೆಯು ಅಂತಹವನಿಗೆ ಸಂಘಟಿಸುತ್ತದೆ. ಆ ನಿದ್ರೆಯ ಮೊದಲಿನಲ್ಲಿ, ಕೊನೆಯಲ್ಲಿಯೂ

ಬ್ರಹ್ಮವು ಸಿದ್ಧವಾಗಿಯೇ ತೋರುತ್ತಿರುವುದು. ಈ ಸ್ಥಿತಿಯು ನಿತ್ಯವಾದುದು ಎಂದು ತಿಳಿದರೆ ಮಧ್ಯಕಾಲದಲ್ಲಿ ಎಂದರೆ ಯೋಗನಿದ್ರೆಯಲ್ಲಿರುವಾಗಲೂ ಬ್ರಹ್ಮವೊಂದೇ ಹೊರತು ಅನ್ಯ ಪದಾರ್ಥಗಳೊಂದರಲ್ಲೂ ಇರುವುದಿಲ್ಲವೆಂದು ತಿಳಿದುಕೊಳ್ಳುವುದೇ ಲಯದ ಅಂತರಾಯಕ್ಕೆ (ವಿಘ್ನಕ್ಕೆ) ಪರಿಹಾರವೆಂದು ತಿಳಿಯಬೇಕು. ಬುದ್ಧಿಯು ಬೇರೆಬೇರೆ ವಿಧವಾದ ವಿಷಯಗಳನ್ನು ಹೊಂದಿ ಚೇಷ್ಟೆ ಮಾಡುತ್ತಿದ್ದರೆ ಆ ವಿಷಯವೇ ಶುದ್ಧಬ್ರಹ್ಮವೆಂದು ತಿಳಿಯುವುದೇ ವಿಕ್ಷೇಪವೆಂಬ ಅಂತರಾಯಕ್ಕೆ ಪರಿಹಾರವಾಗಿದೆ.

**ಶಬ್ದಾರ್ಥ:** * **ಲಯಕೆ ಪರಿಹಾರ**=ಲಯವೆಂಬ ವಿಘ್ನಕ್ಕೆ ಪರಿಹಾರ ಮಾರ್ಗ; * **ವಿಕ್ಷೇಪ ಪರಿಹಾರ**=ವಿಕ್ಷೇಪವೆಂಬ ವಿಘ್ನಕ್ಕೆ ಪರಿಹಾರ ಮಾರ್ಗ;

**ಟಿಪ್ಪಣಿ-೧: ಲಯಕೆ ಪರಿಹಾರ**=ಈ ಪದ್ಯದ ಪೂರ್ವಾರ್ಧದಲ್ಲಿ ಹೇಳಿರುವ ಈ ಲಯದ ಪರಿಹಾರವು ವಿಚಾರ ದೃಷ್ಟಿಯಿಂದ ಸರಿ. ಸಾಧನದ ದೃಷ್ಟಿಯಿಂದ ಮಾಂಡೂಕ್ಯಕಾರಿಕೆಯಲ್ಲಿ 'ಲಯೇಸಂಬೋಧಯೇಚ್ಚಿತ್ತಂ' ಎಂದಿದೆ. ಎಂದರೆ ಮನಸ್ಸು ನಿದ್ರೆಯನ್ನು ಪಡೆಯುವ ಹಾಗೆ ಕಂಡರೆ ಎಚ್ಚರಿಸಬೇಕು ಎಂದರ್ಥ.

**ಟಿಪ್ಪಣಿ-೨: ವಿಕ್ಷೇಪ ಪರಿಹಾರ**=ಈ ಪದ್ಯದ ಉತ್ತರಾರ್ಧದಲ್ಲಿ ಹೇಳಿರುವ ಈ ವಿಕ್ಷೇಪ ಪರಿಹಾರವು ವಿಚಾರದೃಷ್ಟಿಯಿಂದ ಸರಿ. ಸಾಧನದದೃಷ್ಟಿಯಿಂದ ಮಾಂಡೂಕ್ಯಕಾರಿಕೆಯಲ್ಲಿ "ವಿಕ್ಷಿಪ್ತಂ ಶಮಯೇತ್ಪುನಃ" ಎಂದಿದೆ. ಎಂದರೆ ಮನಸ್ಸು ಹೊರಕ್ಕೆ ಹರಿಯ ಹೋದರೆ ಅದನ್ನು ಮತ್ತೆ ತಿರುಗಿಸಿಕೊಂಡು ಬರಬೇಕೆಂದರ್ಥ.

---

**ಸಿದ್ಧವಾಗಿದಿರಿಟ್ಟು ತೋರುವ**
**ಬುದ್ಧಿ ದೃಶ್ಯವಿದೆಂದು ತಿಳಿಯು**
**ತ್ತಿದ್ದ ಸಾಕ್ಷಿಯನೊಳಗೆ ಕಾಣೆ ಕಷಾಯಪರಿಹಾರ; ।**
**ಬುದ್ಧಿಯನು ಮೀರಿರ್ದತೀಂದ್ರಿಯ**
**ಶುದ್ಧ ಸಂವಿನ್ಮಾತ್ರವಾಗಿರು**
**ತಿರ್ದೊಡೆ ರಸಾಸ್ವಾದಕದು ಪರಿಹಾರ ಕೇಳೆಂದ ॥ ॥ ೮೭ ॥**

**ತಾತ್ಪರ್ಯ:** ಸಿದ್ಧವಾಗಿ ಎದುರಿನಲ್ಲಿ ಪ್ರತ್ಯಕ್ಷವಾಗಿ ಕಾಣುವ ಬುದ್ಧಿಯನ್ನು ಇದು ದೃಶ್ಯ ಜಗವಿದು ಎಂದು ತಿಳಿಯುತ್ತಿರುವ ಸಾಕ್ಷೀಭೂತವಾದ ಅಂತಃಕರಣವನ್ನು ಕಂಡುಹಿಡಿಯುವುದೇ ಕಷಾಯವೆಂಬ ವಿಘ್ನಕ್ಕೆ ಪರಿಹಾರ ಎಂದರೆ ಆತ್ಮಾಕಾರವಾಗದೆ ಸ್ತಬ್ಧವಾಗಿದ್ದ ಮನಸ್ಸನ್ನು ಆತ್ಮಾಕಾರವಾಗಿ ಮಾಡುವುದು. ಬುದ್ಧಿಯನ್ನು ಮೀರಿದ ಇಂದ್ರಿಯಗಳನ್ನು ಅತಿಕ್ರಮಿಸಿ ಶುದ್ಧಜ್ಞಾನರೂಪಯಾಗಿಯೇ ಇದ್ದರೆ ಅದು ರಸಾಸ್ವಾದಕ್ಕೆ ಪರಿಹಾರವೆನಿಸುವುದು ಎಂದರೆ ಸಮಾಧಿಸ್ಥಿತಿಯನ್ನು ಬಿಟ್ಟು ಇಳಿಯದಿರುವುದು ರಸಾಸ್ವಾದ ವಿಘ್ನಕ್ಕೆ ಪರಿಹಾರ.

**ಶಬ್ದಾರ್ಥ: ಕಷಾಯ ಪರಿಹಾರ**=ಕಷಾಯವೆಂಬ ವಿಘ್ನಕ್ಕೆ ಪರಿಹಾರ; **ಸಾಕ್ಷಿಯನು**=ಸಾಕ್ಷೀಭೂತವಾದ ಅಂತಃಕರಣವನ್ನು; **ಅತೀಂದ್ರಿಯ**=ಇಂದ್ರಿಯಗಳನ್ನು ಮೀರಿದ; **ಶುದ್ಧ ಸಂವಿತ್ಮಾತ್ರ**=ಶುದ್ಧ ಜ್ಞಾನ, ಅರಿವು; **ದೃಶ್ಯ**=ದೃಶ್ಯ ಜಗತ್ತು; **ರಸಾಸ್ವಾದಕೆ**=ರಸಾಸ್ವಾದವೆಂಬ ವಿಘ್ನಕ್ಕೆ;

**ಟಿಪ್ಪಣಿ–೧:** ಆತ್ಮಾಕಾರವಾಗೆ ಸ್ತಬ್ಧವಾಗಿದ್ದ ಮನಸ್ಸನ್ನು ಆತ್ಮಾಕಾರವಾಗಿ ಮಾಡುವುದು ಕಷಾಯ ಪರಿಹಾರ. ಸಮಾಧಿ (ಸ್ಥಿತಿ)ಯನ್ನು ಬಿಟ್ಟು ಇಳಿಯದಿರುವುದು ರಸಾಸ್ವಾದಕ್ಕೆ (ವಿಘ್ನಕ್ಕೆ) ಪರಿಹಾರ.

---

## ಆಲಸ್ಯ ಮೊದಲಾದ ವಿಘ್ನಗಳು (೮೮–೮೯)

**ತನಯ, ಕೇಳಾಲಸ್ಯ, ರೋಗಗ**
**ಳನುಗತದ ದುಃಖತ್ರಯಂಗಳು,**
**ಮನದಲುದಿಸಿದ ಸಂಶಯಪ್ರಮಾದಗಳು, ಚಿತ್ತದಲಿ ।**
**ನೆನಹು ತೋರ್ಪನವಸ್ಥೆ, ತತ್ತ್ವವ**
**ದೆನುವುದೊಮ್ಮನವಿಷಯಚಿಂತನೆ**
**ಯನಘ, ದರುಶನಭ್ರಾಂತಿಯಶ್ರದ್ಧೆಗಳು ವಿಘ್ನಗಳು ॥ ೮೮ ॥**

**ತಾತ್ಪರ್ಯ:** ಪುಣ್ಯಜೀವಿ ಪುತ್ರನೇ ಕೇಳು–ನಿರ್ವಿಕಲ್ಪಸಮಾದಿಯನ್ನು ಹೊಂದಲು ಇರುವ ಪ್ರಮುಖವಾದ ನಾಲ್ಕು ವಿಘ್ನಗಳನ್ನು (ಲಯ, ವಿಕ್ಷೇಪ, ಕಷಾಯ, ರಸಾಸ್ವಾದ) ಹೇಳಿದ ಮೇಲೆ, ಉಳಿದ ಹತ್ತುವಿಘ್ನಗಳನ್ನು ತಿಳಿಸುತ್ತಿರುವೆ. ೧) ಆಲಸ್ಯ; ೨) ರೋಗ; ೩) ಬಿಡದೆ ಬೆನ್ನಟ್ಟಿದ ದುಃಖತಾಪತ್ರಯಗಳು ಎಂದರೆ ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾಗುವ ಆದಿಭೌತಿಕ, ಪಂಚಭೂತ ಗಳಿಂದಾದ ಅಧಿದೈವಿಕ ದುಃಖಗಳು. ೪) ಮನಸ್ಸಿನಲ್ಲಿ ಉಂಟಾದ ಸಂಶಯ; ೫) ಪ್ರಮಾದ (ತಪ್ಪು); ೬) ತತ್ತ್ವ (ಅದು ಎಂದರೆ ತನಗಿಂತ ಭಿನ್ನವಾದುದು); ೭) ಚಿತ್ತದಲ್ಲಿ ಉಂಟಾದ ಅನವಸ್ಥೆ (ದೃಢವಾಗಿಲ್ಲದಿರುವಿಕೆ); ೮) ಒಂದೇ ಮನಸ್ಸಿನಿಂದ ಮಾಡುವ ವಿಷಯಾ ಚಿಂತನೆ; ೯) ದರುಶನಭ್ರಾಂತಿ (ಭ್ರಾಂತಿದರುಶನ=ಬೇರೆಯಾಗಿ ತಿಳಿಯುವುದು), ೧೦) ಅಶ್ರದ್ಧೆ ಹೀಗೆ ಹತ್ತು ಬಗೆ ವಿಘ್ನಗಳು ಉಂಟಾಗುತ್ತವೆ.

**ಶಬ್ದಾರ್ಥ:** * **ಆಲಸ್ಯ**=ಜಡತ್ವ; * **ಅನುಗತದ**=ಬಿಡದೆ ಬೆನ್ನಟ್ಟುವ; * **ದುಃಖತ್ರಯಗಳು**=ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದ ಉಂಟಾಗುವ ಆದಿಭೌತಿಕ, ಪಂಚಭೂತಗಳಿಂದುಂ ಟಾಗುವ ಆಧಿದೈವಿಕ; * **ಸಂಶಯ**=ಸಂದೇಹ; **ಪ್ರಮಾದ**=ತಪ್ಪು; **ಅನವಸ್ಥೆ**=ದೃಢವಾಗಿಲ್ಲ ದಿರುವಿಕೆ ಅಥವಾ ಒಂದಕ್ಕೊಂದು ಕಾರಣವಾಗುತ್ತಾ ಕೊನೆ ಇಲ್ಲದಿರುವಿಕೆ; **ತತ್ತ್ವ**=ಅದು ಎಂದರೆ ತನಗಿಂತ ಭಿನ್ನವಾದುದು; **ವಿಷಯಚಿಂತನೆ**=ಇಂದ್ರಿಯ ಸುಖ ಚಿಂತನೆ; **ದರ್ಶನಭ್ರಾಂತಿ**=ಭ್ರಾಂತಿದರ್ಶನ ಅಂದರೆ ಬೇರೆ ತಿಳಿಯುವುದು; **ಅಶ್ರದ್ಧೆ**=ಶ್ರದ್ಧೆಯಿಲ್ಲದಿರುವುದು;

**ಟಿಪ್ಪಣಿ–೧:** ಪಾತಂಜಲಯೋಗಸೂತ್ರಗಳಲ್ಲಿ ಈ ಬಗ್ಗೆ ೯ ವಿಘ್ನಗಳನ್ನು ಹೇಳಲಾಗಿದೆ. ವ್ಯಾಧಿಸ್ತ್ಯಾನಸಂಶಯಪ್ರಮಾದಾಲಸ್ಯವಿರತಿಭ್ರಾಂತಿದರ್ಶನಾಲಬ್ಧ ಭೂಮಿಕತ್ವಾನವಸ್ಥಿತತ್ವಾನಿ ಚಿತ್ತವಿಕ್ಷೇಪಾಸ್ತೇಽಂತರಾಯಾಃ ॥ ೩೦ ॥ ೧. ವ್ಯಾಧಿ (ರೋಗ), ೨. ಸ್ತ್ಯಾನ (ಸಂಶಯ), ೩. ಪ್ರಮಾದ, ೪. ಆಲಸ್ಯ, ೫. ಅವಿರತಿ, ೬. ಭ್ರಾಂತಿ ದರ್ಶನ, ೭. ಅಲಬ್ಧಭೂಮಿಕತ್ವ, ೮. ಅನವಸ್ಥೇತತ್ವ, ೯. ಇವು ಚಿತ್ತದ ವಿಕ್ಷೇಪಗಳು, ಇವೇ ಯೋಗಕ್ಕೆ ಅಡಚಣೆಗಳು (ಪಾತಂಜಲಯೋಗದರ್ಶನ ಪುಟ ೩೫)

**ಟಿಪ್ಪಣಿ–೨: ೧) ವ್ಯಾಧಿ (ರೋಗ)**=ಧಾತುಗಳು, ರಸಗಳು, ಇಂದ್ರಿಯಗಳು ಇವು ವೈಷಮ್ಯವಾದಾಗ ವ್ಯಾಧಿ ಎನಿಸುತ್ತದೆ. ೨) **ಸ್ತ್ಯಾನ** (ಮನಸ್ಸಿನ ಬೇಸರ)=ಚಿತ್ತವು ಕೆಲಸ ಮಾಡದಿದ್ದಾಗ ಸ್ತ್ಯಾನ ಎನಿಸುತ್ತದೆ. ೩) **ಸಂಶಯ** (ಸಂದೇಹ)=ಇದು ಹೀಗಿರಬಹುದು, ಇದು ಹೀಗಿರದೆ ಇರಬಹುದು ಎಂದು ತೀರ ವಿರುದ್ಧವಾದುವುಗಳನ್ನು ಮುಟ್ಟುವ ಭಾವನೆಯು ಸಂಶಯ. ೪) **ಪ್ರಮಾದ** (ತಪ್ಪು)=ಸಮಾಧಿಯ ಸಾಧನಗಳನ್ನು ಚಿಂತಿಸದೆ ಇರುವುದು ಪ್ರಮಾದ; ೫) **ಅಲಸಿಕೆ** (ಉತ್ಸಾಹವಿಲ್ಲದಿರುವುದು)=ಕಫಾದಿಗಳ ಆಧಿಕ್ಯ, ಶರೀರಭಾರದಿಂದ ಶರೀರ ಮನಸ್ಸುಗಳು ಕೆಲಸ ಮಾಡದೆ ಇರುವುದು; ೬) **ಬಯಕೆ**=ವಿಷಯವಸ್ತುಗಳಿಗಾಗಿ ಮನಸ್ಸಿಗಿರುವ ತೃಷ್ಣೆ ಅವಿರತಿ; ೭) **ಸುಳ್ಳು ತಿಳಿವಳಿಕೆ**=ವಿಪರೀತ ಭಾವನೆಗಳು ಭ್ರಾಂತಿ ದರ್ಶನ; ೮) **(ಮಧುಮತೀ ಮೊದಲಾದ)** ಸಮಾಧಿಯ ಭೂಮಿಯನ್ನು ಪಡೆದರೂ ಚಿತ್ತವು ಅಲ್ಲಿ ನೆಲೆಸದೆ ಇರುವುದು, ಅನವಸ್ಥಿತತ್ವ ಇರುವುದು ಅಲಬ್ಧಾಭೂಮಿಕತ್ವ, ೯) **ಅನವಸ್ಥಿತ್ವ**=ಸಮಾಧಿಯ ಭೂಮಿಯನ್ನು ಪಡೆದರೂ ಚಿತ್ತವು ಅಲ್ಲಿ ನೆಲಸದೆ ಇರುವುದು. ಅನವಸ್ಥತತ್ವ ಸಮಾಧಿಯನ್ನು ನಿಜವಾಗಿ ಪಡೆದ ಮೇಲೆ ಮನಸ್ಸು ಸ್ಥಿರವಾಗುತ್ತದೆ. ಈ ಚಿತ್ತ ವಿಕ್ಷೇಪಗಳೆಲ್ಲ ಯೋಗದ ೯ ದೋಷಗಳು ಮತ್ತು ಯೋಗದ ೯ ಶತ್ರುಗಳು ಎನಿಸಿವೆ. ಪಾತಂಜಲಯೋಗದರ್ಶನ (ವ್ಯಾಸಭಾಷ್ಯಸಹಿತ) ಸ್ವಾಮಿ ಆದಿದೇವಾನಂದ, ಪುಟ–೩೫, ಅ–೧–೩೧; ಪ್ರ: ರಾಮಕೃಷ್ಣಾಶ್ರಮ, ಮೈಸೂರು.

**ಟಿಪ್ಪಣಿ–೩:** ಶ್ರೀಮನ್ನಿಜಗುಣಶಿವಯೋಗಿಗಳು ತಮ್ಮ **ಪರಮಾತ್ಮ ಪ್ರಕಾಶಿಕೆ**ಯಲ್ಲಿ ಈ ವಿಘ್ನಗಳನ್ನೆಲ್ಲ ಹೇಳಿರುತ್ತಾರೆ. ಇವುಗಳ ವಿವರವೇನೆಂದರೆ: ೧) **ಆಲಸ್ಯ**, ೨) **ರೋಗ** ೩) **ದುಃಖತ್ರಯಗಳು** (ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾದ ಆಧಿಭೌತಿಕ, ಪಂಚಭೂತಗಳಿಂದ ಉಂಟಾಗುವ ಆಧಿದೈವಿಕ); ೪) **ಸಂಶಯ**; ೫) **ಪ್ರಮಾದ** (ತಪ್ಪು), ೬) **ಅನವಸ್ಥೆ** (ದೃಢವಾಗಿಲ್ಲದಿರುವಿಕೆ ಅಥವಾ ಒಂದಕ್ಕೊಂದು ಕಾರಣವಾಗುತ್ತ ಕೊನೆ ಇಲ್ಲದಿರುವಿಕೆ; ೭) **ತತ್ವ** (ಅದು ಎಂದರೆ ತನಗಿಂತ ಭಿನ್ನವಾದದ್ದು ತತ್ವವೆನ್ನುವರು); ೮) **ವಿಷಯ ಚಿಂತನೆ** (ಒಂದೇ ಮನಸ್ಸಿನಿಂದ ವಿಷಯ ಚಿಂತನೆ; ೯) **ದರ್ಶನಭ್ರಾಂತಿ** (ಭ್ರಾಂತಿ ದರ್ಶನ ಎಂದರೆ ಬೇರೆ ತಿಳಿಯುವುದು); ೧೦) **ಅಶ್ರದ್ಧೆ**=ಹೀಗೆ ಆಗುವುವು; ಪರಮಾತ್ಮ ಪ್ರಕಾಶಿಕೆಯಲ್ಲಿ ತನಗಿಂತ ಭಿನ್ನವಾದದ್ದನ್ನು ತತ್ತ್ವವೆನ್ನುವ ಮಾತಿಲ್ಲ; **ಇಚ್ಛಾಭಂಗದಿಂದಾದ ಕದಡು** ಎಂದಿದೆ;

**ಟಿಪ್ಪಣಿ–೪:** * ನಿಜಗುಣಶಿವಯೋಗಿಗಳ ಪಾರಮಾರ್ಥಿಕ ಪ್ರಕಾಶಿಕೆ ಗ್ರಂಥದ ೩ನೇ ಪರಿಚ್ಛೇದ (ಪುಟ ೫೯, ಸಂ: ಉಮಾಪತಿಶಾಸ್ತ್ರಿ) ಹೇಳಿರುವ ಮೂಲ ಪಾಠ ಹೀಗಿದೆ: ಮತ್ತಮಾ ಯೋಗವಿಘ್ನಂಗಳಾದೊಡೆ=ದೇಹ ಮನಸ್ಸುಗಳಿಂದ ಪುಟ್ಟುವ **ಆಲಸ್ಯವು**; ೨) ಧಾತುಜ ಕರ್ಮಜವೆಂದೆರಡು ಪ್ರಕಾರವಾದ **ರೋಗವು**; ೩)ಯೋಗಸಾಧನಗಳಿಲ್ಲದಿಹತನವೆಂಬ **ಪ್ರಮಾದವು**; ೪) ಇದಹುದೋ ಇದಲ್ಲವೋ ಎಂಬ ಸ್ಥಾನ **ಸಂಶಯವು**; ೫) ಮನಸ್ಸಿಗೆ ದೃಢವಿಲ್ಲದಿರ್ಪ; ೬) ಯೋಗಮಾರ್ಗದಲ್ಲಿ ವಿಶ್ವಾಸವಿಲ್ಲದಿರ್ಪ **ಅಶ್ರದ್ಧೆಯು**; ೭) ಯೋಗಲಕ್ಷಣವು ಬೇರೊಂದು ಪ್ರಕಾರವಾಗಿ ತಿಳಿವ–**ಭ್ರಾಂತಿ ದರ್ಶನವು**; ೮) ಅಧ್ಯಾತ್ಮಿಕಾದಿ ತಾಪತ್ರಯ ರೂಪ ದುಃಖವು; ೯) ಇಚ್ಛಾಭಂಗದಿಂದಾದ ಮನದ **ಕದಡು**; ೧೦) ವನಿತಾದಿ **ವಿಷಯ ಲೋಲತ್ವ** ಎಂಬ ದಶವಿಧ ಯೋಗ ವಿಘ್ನಗಳು;

*** ಟಿಪ್ಪಣಿ–೫:** ನಿಜಗುಣ ಶಿವಯೋಗಿಗಳು ಪಾರಮಾರ್ಥ ಪ್ರಕಾಶಿಕೆಯಲ್ಲಿ ಮೇಲಿನ ೧೦ ಅಲ್ಲದೆ ಇತರ ೨೦ ಯೋಗ ವಿಘ್ನಗಳನ್ನು ಹೇಳುತ್ತಾರೆ. ೧) ಅತ್ಯುಷ್ಣ; ೨) ಅತಿಲವಣ;೩) ಅತ್ಯಾಮ್ಲ; ೪) ಅತಿಕಟು; ೫) ಅಪವಿತ್ರಾನ್ನ; ೬) ತೈಲ; ೭) ಪಿಣ್ಯಾಕ; ೮) ಸರ್ಷಪ; ೯) ಲಶುನ; ೧೦) ಮೂಲಕ; ೧೧) ಬದರೀಫಲ ಸೇವನೆಗಳು; ೧೨) ದುರ್ಜನ ಸಂಗ; ೧೩) ಸ್ತ್ರೀ ಸಂಗ; ೧೪) ವಹ್ನಿ ಸಂಗ; ೧೫) ಸ್ನಾನ; ೧೬) ಉಪವಾಸ; ೧೭) ದೇಶ

ಪರ್ಯಟನಾದಿಗಳು; ೧೮) ಬಹುಭಾಷೆ; ೧೯) ಬಹ್ವಾಹಾರ; ೨೦) ಬಹು ನಿದ್ರಾದಿಗಳು- ಯೋಗ ವಿಘ್ನಗಳು. ಇವೆಲ್ಲವನ್ನು ಸರ್ವದಾ ಬಿಡಬೇಕು. (ತೃತೀಯಪರಿಚ್ಛೇದ ಪುಟ ೫೫೯)

---

## ಪ್ರತಿಭಾಶ್ರವಣ ಮೊದಲಾದ ಸಿದ್ಧಿಗಳು (೮೯)

**ಮತಿಯುತನೆ ಪ್ರತಿಭಾ, ಶ್ರವಣ, ಮೇ**
**ಣತಿಶಯದ ವಾರ್ತಾ, ದರುಶನಗ**
**ಳತುಳವಪ್ಪಾಸ್ವಾದನವು ವೇದನೆಯುಮೆಂಬಾರು ।**
**ಗತಿಗೆ ವಿಗಡಗಳೆನಿಸುವೀ ಪ್ರಾ**
**ಕೃತಗಳಾದೈಶ್ವರ್ಯಗಳು ಕೇ**
**ಳ್ಸುತನೆ ಬ್ರಹ್ಮಾಭ್ಯಾಸಕಾಲದಲಂತರಾಯಗಳು ॥ ॥೮೯॥**

**ತಾತ್ಪರ್ಯ:** ಕುಶಾಗ್ರಮತಿಯೆ, ಪ್ರತಿಭೆ (ಪ್ರತಿಭೆಯೆಂಬ ಶಕ್ತಿಯಿಂದ ಎಲ್ಲಾ ತಿಳಿವಳಿಕೆ ಆಗುವುದು) ಶ್ರವಣ (ಇತರರಿಗೆ ಕೇಳದ್ದು ತನಗೆ ಕೇಳಬಹುದು); ಅತಿಶಯದವಾರ್ತಾ (ಮತ್ತೆ ಎಲ್ಲೆಲ್ಲಿ ಸುದ್ದಿಯಾದರೂ ತನಗೆ ತಿಳಿಯುವ ವಿಶೇಷ), ದರುಶನಗಳು (ತಲೆಯ ಮೇಲಿಂದ ಹೊರಡುತ್ತಿರುವ ಬೆಳಕಿನಲ್ಲಿ ಸಿದ್ಧರನ್ನು ಕಾಣುವುದು); ಅತುಳವಾದ ಆಸ್ವಾದನವು (ಇತರರಿಗೆ ದೊರೆಯದ ರುಚಿ) ವೇದನೆ (ಇತರರಿಗೆ ಅನುಭವಕ್ಕೆ ಬರದೆ ಇರುವುದು, ತನ್ನ ಅನುಭವಕ್ಕೆ ಬರುವುದು), ಇವು ವ್ಯಾಕುಲಕ್ಕೆ ಕಾರಣವಾದ ಸಾಮಾನ್ಯ ರೀತಿಯ ಆರು ಸಿದ್ಧಿಗಳಾಗಿದ್ದು ಇವು ಬ್ರಹ್ಮಾಭ್ಯಾಸ ಕಾಲದಲ್ಲಿ ಎಂದರೆ ನಿರ್ವಿಕಲ್ಪಸಮಾಧಿಸ್ಥಿತಿ ಹೊಂದಲು ಅಡ್ಡಿಯಾಗಿವೆ.

**ಟಿಪ್ಪಣಿಗಳು-೧:** ಪ್ರಾತಿಭಾದ್ವಾಸರ್ವಂ (ಪಾತಂಜಲಯೋಗ ಸೂತ್ರ ೩-೩೩); ಪ್ರತಿಭೆಯೆಂಬ ಶಕ್ತಿಯಿಂದ ಎಲ್ಲಾ ತಿಳಿವಳಿಕೆಯೂ ಆಗುವುದು (ಹೊಚಿ);

**ಭಾಷ್ಯ:** ಪ್ರತಿಭೆಯು ತಾರಕವು, ಉದಯಕಾಲದಲ್ಲಿ ಸೂರ್ಯೋದಯಕ್ಕೆ ಮುಂಚೆ ಬೆಳಕು ಹರಿಯುವ ಹಾಗೆ ಇದು ವಿವೇಕದಿಂದ ಹುಟ್ಟುವ ಜ್ಞಾನಕ್ಕೆ ಪೂರ್ವಭಾವಿ, ಪ್ರತಿಭಾಜ್ಞಾನದ ಉತ್ಪತ್ತಿಯಾದ ಮೇಲೆ ಯೋಗಿಯು ಎಲ್ಲವನ್ನೂ ತಿಳಿದುಕೊಳ್ಳುತ್ತಾನೆ. ಪಾತಂಜಲಯೋಗಶಾಸ್ತ್ರ- ಸ್ವಾಮಿ ಆದಿದೇವಾನಂದ, ಪುಟ ೧೫೬; ೩-೩೩)

**ಟಿಪ್ಪಣಿ-೨:** ದರುಶನಗಳ್: ಮೂರ್ಧಜ್ಯೋತಿಷಿ ಸಿದ್ಧ ದರ್ಶನಮ್ (ಪಾತಂಜಲಯೋಗಸೂತ್ರ ೩-೩೨) ಎಂಬ ಯೋಗಸೂತ್ರದಂತೆ ತಲೆಯ ಮೇಲಿಂದ ಹೊರಡುತ್ತಿರುವ ಬೆಳಕಿನಲ್ಲಿ ಸಿದ್ಧರನ್ನು ಕಾಣುವುದು. ಇಲ್ಲಿ ಸಿದ್ಧರೆಂದರೆ ದೆವ್ವಗಳಿಗಿಂತ ಸ್ವಲ್ಪ ಉತ್ತಮರಾದವರೆಂದು ಯೋಗಿಯ ತಲೆಯಮೇಲೆ ಮನಸ್ಸನ್ನು ಇಟ್ಟಾಗ ಅವರು ಕಾಣುವರೆಂದು ಶ್ರೀ ವಿವೇಕಾನಂದರು ತಮ್ಮ ರಾಜಯೋಗ ಗ್ರಂಥದಲ್ಲಿ ತಿಳಿಸಿದ್ದಾರೆ.

**ಶಬ್ದಾರ್ಥ:** ವೇದನೆ=ಇತರರಿಗೆ ಅನುಭವಕ್ಕೆ ಬರದೆ ಇರುವುದು. ತನ್ನ ಅನುಭವಕ್ಕೆ ಬರುವುದು; ಐಶ್ವರ್ಯಗಳು=ಸಿದ್ಧಿಗಳು; ಅಂತರಾಯಗಳು=ತೇ ಸಮಾಧಾವುಪಸರ್ಗಾ ವುತ್ಥಾನೇ ಸಿದ್ಧಯಃ ಎಂಬ ಯೋಗಸೂತ್ರದಂತೆ ಇವು ಸಮಾಧಿಗೆ ಅಡ್ಡಿಗಳು; ವ್ಯವಹಾರದಲ್ಲಿ ಸಿದ್ಧಿಗಳು. ಶ್ರವಣ=

ಇತರರಿಗೆ ಕೇಳದ್ದು ತನಗೆ ಕೇಳಿ ಬರುವುದು; ವಾರ್ತಾ=ಎಲ್ಲೆಲ್ಲಿಯೂ ಸುದ್ದಿಯಾದರೂ ತಿಳಿಯುವುದು; ಆಸ್ವಾದನೆ=ಇತರರಿಗೆ ದೊರೆಯದ ರುಚಿಯಾಗೋಣ

---

## ಉಪಸಂಹಾರ (೯೦-೯೧)

**ಈ ವಿಧದೊಳಭ್ಯಾಸವನು ಬಿಡ**
**ದಾವಗಲು ತಪ್ಪದಲೆ ನೆರೆ ತಾ**
**ನೋವಿ ಮಾಡುತ್ತಿರಲು ಚಂಚಲವಳಿದು ಚಿತ್ತಕ್ಕೆ ।**
**ಆವ ವೃತ್ತಿಯು ಹುಟ್ಟದೆಯೆ, ಮೇ**
**ಣಾವ ವಾಸನೆಯಿಲ್ಲದೆಯೆ, ಸ**
**ತ್ತ್ವಾವಲಂಬನೆಯಾಗಿ ಶಾಂತಿಯು ತೋರಿ ಸುಖವಹುದು ॥ ॥೯೦॥**

**ತಾತ್ಪರ್ಯ:** ಈ ರೀತಿಯಾಗಿ ಸದಾ ಎಡಬಿಡದೆ ಅಭ್ಯಾಸವನ್ನು ಶ್ರದ್ಧೆಯಿಂದ ಮಾಡುತ್ತಾ ಬಂದರೆ ಚಾಂಚಲ್ಯ ಪರಿಹಾರವಾಗಿ ಮನಸ್ಸಿನಲ್ಲಿ ಯಾವ ವೃತ್ತಿಯೂ ಹುಟ್ಟದೆಯೇ ಯಾವ ವಾಸನೆಯೂ ಇಲ್ಲದೆ, ಸತ್ತ್ವ ಗುಣವನ್ನು ಆಶ್ರಯಿಸಿದ ಮನಸ್ಸು ಶಾಂತಿಯನ್ನು ಹೊಂದಿ ನಿಜಾನುಭವದ ಸುಖವನ್ನು ಹೊಂದುತ್ತದೆ.

**ಶಬ್ದಾರ್ಥ:** ಸತ್ತ್ವಾವಲಂಬನೆ=ಸತ್ತ್ವಗುಣವನ್ನು ಆಶ್ರಯಿಸುವುದು; * **ಆವಗಲು**=ಸದಾ; * **ತಪ್ಪದಲೆ**=ಎಡಬಿಡದೆ; * **ಓವಿ**=ಶ್ರದ್ಧೆಯಿಂದ; * **ಚಿತ್ತಕ್ಕೆ**=ಮನಸ್ಸಿಗೆ; * **ವಾಸನೆ**=ಅನುಭವದಿಂದ ಉಂಟಾಗುವ ಸಂಸ್ಕಾರ (ಮಾಂಡೂಕ್ಯ) ಕನಸಿನಲ್ಲಿ ಬೇರೆಯ ವಸ್ತುವಿನಂತೆ ತಪ್ಪು ತಿಳಿವಳಿಕೆಯಿಂದ ಉಂಟಾಗುವ ಸಂಸ್ಕಾರ (ಬೃಹದಾರಣ್ಯಕ) ಎಚ್ಚರದ ಅನುಭವದಿಂದಾದ ಅಂತಃಕರಣ ಸಂಸ್ಕಾರ (ಪಾರಿಭಾಷಿಕ ಶಬ್ದಕೋಶ, ಪುಟ ೨೬೬) * **ವೃತ್ತಿ**=ಪ್ರಾಣದ ವ್ಯಾಪಾರ, ಅಂತಃಕರಣದ ವಿಕಾರ ವಿಶೇಷ, ಇಂದ್ರಿಯ ವ್ಯಾಪಾರ, ಶಬ್ದದ ವ್ಯಾಪಾರ; (ಪಾರಿಭಾಷಿಕ ಶಬ್ದಕೋಶ ಪುಟ=೨೭೬) * **ಸುಖ**=ನಿಜಾನುಭವ;

---

**ಲೇಸೆನುಸುವೀ ಭೂಮಿಕೆಗಳ**
**ಭ್ಯಾಸದಲಿ ಶ್ರವಣಾದಿಯಾದಿಂ**
**ತೀ ಸಮಸ್ತಸಮಾಧಿಯಳವಡುವಂತೆ ಯೋಗವನು ।**
**ಪೋಷಿಸುತಲೆಲೆ ಮಗನೆ, ಶಾಸ್ತ್ರದ**
**ವಾಸನೆಯ ನೆಲೆಗೊಳಿಸಿ, ಯೋಗಾ**
**ಭ್ಯಾಸ ಸಹಜಾನಂದಗುರುಪದವೊಂದಿ ಸುಖಿಯಾಗು ॥ ॥೯೧॥**

**ತಾತ್ಪರ್ಯ:** ಅತ್ಯುತ್ತಮವೆನಿಸಿಕೊಳ್ಳುವ ಸುಖೇಚ್ಛೆ, ಆತ್ಮವಿಚಾರ, ನಿಸ್ಸಂಗ, ವಾಸನಾಕ್ಷಯ, ಆನಂದಿನಿ, ತುರ್ಯ, ತುರ್ಯಾತೀತಗಳೆಂಬ ಸಪ್ತ ಭೂಮಿಕೆಗಳನ್ನು ಅಭ್ಯಾಸ ಮಾಡುತ್ತ ಶ್ರವಣ, ಮನನ, ನಿದಿಧ್ಯಾಸನ ಮೊದಲಾದ ಸಮಾಧಿಗಳು ಸಿದ್ಧಿಸುವ ಹಾಗೆ ಅಧ್ಯಾತ್ಮಯೋಗವನ್ನು ಅವಲಂಬಿಸಿ, ಜೀವಬ್ರಹ್ಮೈಕ್ಯವು ಮನಸ್ಸಿನಲ್ಲಿ ಚೆನ್ನಾಗಿ

ಬೇರೂರುವಂತೆ ಮಾಡುವ ಶಾಸ್ತ್ರ ವಾಸನೆಯನ್ನು ಮನಸ್ಸಿನಲ್ಲಿ ಸ್ಥಿರಗೊಳಿಸುತ್ತಾ ಯೋಗಾಭ್ಯಾಸದಿಂದ ಸಹಜಾನಂದ ಗುರುವಿನಪಾದದಲ್ಲಿ (ನಿಜಾನುಭವದಲ್ಲಿ ಲೀನವಾಗಿ) ಪರಮಸುಖಿಯಾಗಬೇಕು.

**ಶಬ್ದಾರ್ಥ:** * **ಭೂಮಿಕೆಗಳ**=ಸಪ್ತಭೂಮಿಕೆಗಳು ೧) ಸುಖೇಚ್ಛೆ, ೨) ಆತ್ಮವಿಚಾರ, ೩) ನಿಸ್ಸಂಗ, ೪) ವಾಸನಾಕ್ಷಯ, ೫) ಆನಂದಿನಿ, ೬) ತುರ್ಯ, ೭) ತುರ್ಯಾತೀತ (ಇದೇ ಗ್ರಂಥದ ೬-೪೧ ನೋಡಿ) * **ಶ್ರವಣಾದಿ+ಆದ**=ಶ್ರವಣ, ಮನನ, ನಿಧಿಧ್ಯಾಸನಗಳನ್ನು ಒಳಗೊಂಡ ಎಲ್ಲ ಬಗೆ ಸಮಾಧಿಗಳ ಯೋಗಾಭ್ಯಾಸ;

**ಟಿಪ್ಪಣಿ: ಶಾಸ್ತ್ರದವಾಸನೆಯ ಬಲಗೊಳಿಸಿ**=ಇಲ್ಲಿ ಶಾಸ್ತ್ರದ ವಾಸನೆಯೆಂದರೆ, ಹಿಂದೆ ದೇಹದವಾಸನೆ ಮೊದಲಾದವುಗಳೊಡನೆ ಸೇರಿದಂಥ ಅನೇಕ ಶಾಸ್ತ್ರಾರ್ಥಗಳ ಗಡಿಬಿಡಿಯಿಂದ ತೊಳಲುವ ಶಾಸ್ತ್ರವಾಸನೆಯಲ್ಲ. ಶಾಸ್ತ್ರವೆಂದರೆ ವೇದ. ವೇದವು ಹೇಳಿರುವಂಥ ಜೀವಬ್ರಹ್ಮೈಕ್ಯವು ಮನಸ್ಸಿನಲ್ಲಿ ಚೆನ್ನಾಗಿ ಬೇರೂರುವಂತೆ ಮಾಡುವುದೇ ಶಾಸ್ತ್ರವಾಸನೆ. ಈ ವಾಸನೆಯು ಅಗತ್ಯವಾದುದು. **ಸಹಜಾನಂದ ಗುರುಪಾದ**=ಇಲ್ಲಿ ಶ್ಲೇಷೆಯಿದೆ. ಸಹಜಾನಂದ ಗುರುಗಳ ಪಾದದಲ್ಲಿ ಶರಣಾಗಿರುವುದು ಒಂದರ್ಥ, ಶ್ರೇಷ್ಠವಾದ ನಿಜಾನುಭವದಲ್ಲಿ ಲೀನವಾಗಿ ಎಂದು ಇನ್ನೊಂದು ಅರ್ಥ.

---

## ಮಂಗಲ (೯೨)

**ಹರನೆ, ಗಂಗಾಧರನೆ, ಗೌರೀ**
**ವರನೆ, ಶಿತಿಕಂಧರನೆ, ಚರ್ಮಾಂ**
**ಬರನೆ, ಪುರಸಂಹರನೆ, ಪುಣ್ಯಾಕರನೆ, ಸುಖಕರನೆ ।**
**ತರಣಿಶಶಿಶೇಖರನೆ, ಭವಭಯ**
**ಹರನೆ, ಪರಶುಮೃಗಾಭಯಾಂಬುಜ**
**ಕರನೆ, ಸಲಹೈ ಭಕ್ತಜನರನು ಶ್ರೀಗಿರಿಶ್ವರನೆ ॥ ॥ ೯೨ ॥**

**ತಾತ್ಪರ್ಯ:** ಪಾಪ ಪರಿಹಾರ ಮಾಡುವವನೇ, ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿದವನೇ ಚರ್ಮವನ್ನೇ ವಸ್ತ್ರವಾಗಿ ಹೊದ್ದವನೇ, ಪಾರ್ವತೀಪತಿಯೇ, ವಿಷಕಂಠವುಳ್ಳವನೇ, ತ್ರಿಪುರಾಸುರನನ್ನು ಕೊಂದವನೇ, ಪುಣ್ಯಗಳ ಗಣಿಯೇ, ಸರ್ವರಿಗೂ ಸುಖದಾಯಕನೇ, ಬಾಲಚಂದ್ರನನ್ನು ಶಿರದಲ್ಲಿ ಧರಿಸಿದವನೇ, ಜನ್ಮಾಂತರ ಪಾಪಗಳ ಭಯವನ್ನು ನಿವಾರಿಸುವವನೇ, ಗಂಡುಕೊಡಲಿ, ಜಿಂಕೆ, ಅಭಯಹಸ್ತ, ಕಮಲಗಳನ್ನು ಕೈಗಳಲ್ಲಿ ಧರಿಸಿರುವವನೇ ಶ್ರೀಶೈಲಮಲ್ಲಿಕಾರ್ಜುನನೇ ಭಕ್ತ ಜನರನ್ನು ಕಾಪಾಡು.

**ಶಬ್ದಾರ್ಥ: ಪರಶುಮೃಗಾಭಯಾಂಬುಜಕರನೆ**=ಕೊಡಲಿಯನ್ನೂ, ಜಿಂಕೆಯನ್ನೂ, ಅಭಯಮುದ್ರೆಯನ್ನೂ ಕಮಲವನ್ನೂ ಕೈಯ್ಯಲ್ಲಿ ಧರಿಸಿದವನೇ; **ಶ್ರೀಗಿರೀಶ್ವರನೇ**= ಶ್ರೀಶೈಲಮಲ್ಲಿಕಾರ್ಜುನನೇ; * **ತರಣಿಶಶಿಶೇಖರನೆ**=ಬಾಲಚಂದ್ರನನ್ನು ಶಿರದಲ್ಲಿ ಧರಿಸಿದವನೆ; * **ಪುರಹರನೆ**=ತ್ರಿಪುರಗಳ ಒಡೆಯನಾದ ತ್ರಿಪುರಾಸುರನನ್ನು ಕೊಂದವನೆ; * **ಶಿತಿಕಂಧರನೇ**=ವಿಷಕಂಠನೆ; ***ಚರ್ಮಾಂಬರನೇ**= ವ್ಯಾಘ್ರಚರ್ಮವನ್ನು ವಸ್ತ್ರವನ್ನಾಗಿ ಹೊದ್ದವನೇ; * **ಹರನೇ**=ಪಾಪ ಪರಿಹಾರಕನೇ; * **ಗೌರೀವರನೆ**=ಪಾರ್ವತೀಪತಿಯೇ; * **ಭವಭಯಹರನೇ**=ಸಂಸಾರದಲ್ಲಿನ ಜನ್ಮಾಂತರಗಳ ಪಾಪಗಳ ಭಯಗಳನ್ನು ಪರಿಹರಿಸುವವನೇ;

# ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಸಪ್ತಭೂಮಿಕೆಗಳ ಅಭ್ಯಾಸವೆಂಬ ಆರನೆಯ ಅಧ್ಯಾಯವು ಮುಗಿದುದು.**

# ಸಾರಸಂಗ್ರಹ

## ಆರನೆಯ ಅಧ್ಯಾಯ - ಸಪ್ತಭೂಮಿಕೆಗಳ ಅಭ್ಯಾಸ

ಪೂರ್ವಿಕ ಸಂಪ್ರದಾಯಜ್ಞರು ಆ ಅಖಂಡವಸ್ತು ಜ್ಞಾನ ಸಿದ್ಧಿಗೆ ಸಪ್ತ ಭೂಮಿಕೆಗಳ ಅಭ್ಯಾಸವನ್ನು ಹೇಳಿರುವರು. ಒಂದನೆಯದು ಸುಖೇಚ್ಛೆ; ಎಂದರೆ ಈ ಲೋಕದ ಮತ್ತು ಪರಲೋಕದ ವಿಷಯಸುಖವನ್ನು ತುಚ್ಛವಾಗಿ ತಿಳಿದು ಸಹಜಾನಂದವನ್ನು ಬಯಸುವದು. ಎರಡನೆಯದು ಆತ್ಮ ವಿಚಾರ; ಎಂದರೆ, ತಾನು ಯಾರು, ತಾನು ಸಂಸಾರದಲ್ಲಿ ಬಿದ್ದದ್ದು ಹೇಗೆ? ಎಂದು ವಿಚಾರಪರನಾಗಿ ಗುರುಗಳನ್ನು ಸೇರಿ ಜೀವೇಶ್ವರರ ಸ್ವರೂಪವನ್ನು ತಿಳಿಯುವದು. ಮೂರನೆಯದು ನಿಸ್ಸಂಗ; ಎಂದರೆ ವಿಷಯಗಳ ನೆನಪನ್ನು ಮನಸ್ಸಿಗೆ ತಂದುಕೊಳ್ಳದೆ ವಿಷಯಾಸಕ್ತರೊಡನೆ ಬೆರೆಯದೆ ಕರ್ಮದ ಸೋಂಕು ದೇಹೇಂದ್ರಿಯಗಳಿಗೇ ಹೊರತು ತನಗಲ್ಲವೆಂದು ನಿಶ್ಚಯಿಸುವದು. ನಾಲ್ಕನೆಯದು ವಾಸನಾಕ್ಷಯ; ಎಂದರೆ ಕಾಣುವದೆಲ್ಲ ಸತ್ಯವೆಂದು ಭ್ರಮಿಸದೆ ತ್ರಿವಿಧ ವಾಸನೆಗಳನು ಬಿಟ್ಟು ಕಿಲುಬನ್ನೆಲ್ಲ ತಿಕ್ಕಿ ತೊಳೆದ ಕನ್ನಡಿಯಂತೆ ಇರುವದು. ಐದನೆಯದು ಆನಂದಿನಿ; ಎಂದರೆ, ಮನಸ್ಸು ಆತ್ಮ ಸ್ವರೂಪದಲ್ಲಿ ಮುಳುಗಿ ಸಹಜಾನಂದವನ್ನನುಭವಿಸುವ ಯೋಗ ನಿದ್ರಾಸ್ಥಿತಿ. ಆರನೆಯದು ಕೇವಲ ಸ್ವಭಾವಸ್ಥಿತಿಯಲ್ಲಿರುವ ತುರ್ಯಾವಸ್ಥೆ. ಏಳನೆಯದು ತುರ್ಯಾತೀತ; ಎಂದರೆ ವಿದೇಹಮುಕ್ತಿಯಂಥ ಸ್ಥಿತಿ. ಮೊದಲನೆಯ ಮೂರು ಭೂಮಿಕೆಗಳಿಗೆ ಸಾಧನವೆಂದು ಹೆಸರು. ಆಗ ಜ್ಞಾನವು ಉದಿಸಿರುವದಿಲ್ಲ. ನಾಲ್ಕನೆಯ ಭೂಮಿಕೆಯಲ್ಲಿ ಜ್ಞಾನವುಂಟಾಗಿರುವದು. ಕೊನೆಯ ಮೂರು ಭೂಮಿಕೆಗಳು ಜೀವನ್ಮುಕ್ತಿಯ ಅವಸ್ಥೆಗಳು.

ಈ ಭೂಮಿಕೆಗಳಂತೆಯೇ ಬೇರೆ ರೀತಿಯಾಗಿ ಸಾಧನಗಳ ಮೂರು ಬಗೆಗಳಿರುವವು. ಅವೇನೆಂದರೆ: ಆತ್ಮನ ಸ್ವರೂಪವನ್ನು ಶ್ರವಣಮಾಡಬೇಕು; ಆ ಮೇಲೆ ಅದನ್ನು ಶ್ರುತಿಯುಕ್ತ್ಯನುಭವಗಳಿಂದ ಮನನ ಮಾಡಬೇಕು; ಮತ್ತು ಆ ಬ್ರಹ್ಮವನ್ನೆ ಏಕಾಗ್ರಚಿತ್ತದಿಂದ ಧ್ಯಾನಿಸಬೇಕು. ಅದು ಬಲಿತು ಬ್ರಹ್ಮಸಾಕ್ಷಾತ್ಕಾರವಾದಾಗ ಆ ಬುದ್ಧಿಯು ಸಮಾಧಿ ಎನಿಸಿಕೊಳ್ಳುವದು. ಆಗ ಅವನು ಪ್ರಾರಬ್ಧದಿಂದ ಬಂದಿರುವ ದೇಹದಲ್ಲಿರುವಂತೆ ಕಂಡರೂ ಮುಂದೆ ಜನ್ಮ ಮರಣಗಳಿಲ್ಲದವನಾಗುವನು. ಮನಸ್ಸು ನಿರ್ವಿಕಲ್ಪ ಸಮಾಧಿಯನ್ನು ಪಡೆಯುವದಕ್ಕೆ ವಾಗ್ಭೂಮಿ ಮೊದಲಾದ ಬೇರೆ ಬಗೆಯ ನಾಲ್ಕು ಭೂಮಿಕೆಗಳೂ ರಾಜಯೋಗದ ಅಷ್ಟಾಂಗಗಳೂ ನೆರವಾಗುವವು. ಈ ಬಗೆಯ ಯೋಗಾಭ್ಯಾಸಕ್ಕೆ ಲಯ, ವಿಕ್ಷೇಪ-ಮೊದಲಾದ ನಾಲ್ಕು ಅಂತರಾಯಗಳೂ ಆಲಸ್ಯ ಮೊದಲಾದ ವಿಘ್ನಗಳೂ ಪ್ರತಿಭಾ, ಶ್ರವಣ-ಮೊದಲಾದ ಸಿದ್ಧಿಗಳೂ ಅಡ್ಡ ಬರುವವು. ಇವುಗಳನ್ನೆಲ್ಲ ಹಿಮ್ಮೆಟ್ಟಿಸಿ ಮುಂದುವರಿದ ಧೀರನು ಬ್ರಾಹ್ಮೀಸ್ಥಿತಿಯನ್ನು ಪಡೆಯುವನು.

*****

# ಏಳನೆಯ ಅಧ್ಯಾಯ

## ಪರಮಾತ್ಮಪದ ನಿರೂಪಣ

**ಸೂಚನೆ॥**

**ಸಕಲ ತತ್ತ್ವರಹಸ್ಯವನು ಬಹು**
**ಯುಕುತಿಯಿಂದಲಿ ತಿಳುಹಿ ಮುನಿಪತಿ**
**ಶುಕಮುನಿಗೆ ಪರಮಾತ್ಮಪದವ ನಿರೂಪಿಸಿದನೊಲಿದು ॥**

**ತಾತ್ಪರ್ಯ:** ವ್ಯಾಸ ಮುನೀಂದ್ರನು ಶುಕಮುನಿಗೆ ಪ್ರೀತಿಯಿಂದ ಎಲ್ಲಾ ರೀತಿಯ ತತ್ತ್ವ ರಹಸ್ಯಗಳನ್ನು ನಾನಾ ವಿಧಾನಗಳಿಂದ ತಿಳಿಸುತ್ತಾ ಪರಮಾತ್ಮಪದವನ್ನು (ಮೋಕ್ಷ ಮಾರ್ಗವನ್ನು) ವಿವರಿಸಿದನು.

**ಶಬ್ದಾರ್ಥ:** * ಪರಮಾತ್ಮಪದ=ಮೋಕ್ಷಮಾರ್ಗವನ್ನು; * ಒಲಿದು=ಪ್ರೀತಿಯಿಂದ; * ನಿರೂಪಿಸಿದನು =ವಿವರಿಸಿದನು; * ಬಹುಯುಕ್ತಿಯಿಂದಲಿ=ನಾನಾವಿಧಾನಗಳಿಂದ; * ಮುನಿಪತಿ=ವ್ಯಾಸಮುನೀಂದ್ರ

---

**ಸೃಷ್ಟಿಸುವ ಭವನಾಗಿ ಜಗವನು;**
**ನೆಟ್ಟನೇ ಮೃಡನಾಗಿ ಸಲಹುವ;**
**ಕಟ್ಟಕಡೆಯಲಿ ಸಂಹರಿಪ ಲೋಕವನು ಹರನಾಗಿ; ।**
**ಇಷ್ಟು ವಿಧವಾಗಿರ್ಪ; ಗುಣದಿಂ**
**ದಷ್ಟಮೂರುತಿ; ನಿರ್ಗುಣದಿ ಶಿವ;**
**ಭ್ರಷ್ಟರರಿವರದೆಂತು ಶ್ರೀಗಿರಿ ಮಲ್ಲಿಕಾರ್ಜುನನ ॥ ॥೧॥**

**ತಾತ್ಪರ್ಯ:** ಪರಮಾತ್ಮನು ಭವ ಎಂಬ ಹೆಸರುಳ್ಳವನಾಗಿ ಜಗತ್ತನ್ನು ಸೃಷ್ಟಿಸುತ್ತಾನೆ. ಮೃಡ ಎಂಬ ಹೆಸರುಳ್ಳವನಾಗಿ ಪ್ರಪಂಚವನ್ನು ನೇರವಾಗಿ ರಕ್ಷಿಸುತ್ತಾನೆ. ಹರ ಅಂತ್ಯದಲ್ಲಿ ಲೋಕವನ್ನು ನಾಶಮಾಡುತ್ತಾನೆ. ಈ ರೀತಿಯಾಗಿ ಸೃಷ್ಟಿಕರ್ತ, ರಕ್ಷಕ, ಲಯಕರ್ತನಾಗಿ ತ್ರಿಮೂರ್ತಿಯಾಗಿ ಇರುವವನು, ಸಗುಣದಿಂದ ಅಷ್ಟ ಮೂರ್ತಿಯಾಗಿಯೂ ನಿರ್ಗುಣದಿಂದ ಮೋಕ್ಷಸ್ವರೂಪನಾದ ಶಿವನಾಗಿಯೂ ಇರುವ ಶ್ರೀಗಿರಿ ಮಲ್ಲಿಕಾರ್ಜುನನನ್ನು ಭ್ರಷ್ಟರಾದವನು ಹೇಗೆ ತಾನೆ ತಿಳಿಯಬಲ್ಲರು? (ತಿಳಿಯಲಾರರು ಎಂದರ್ಥ)

**ಶಬ್ದಾರ್ಥ:** ಭವ=ಇರುವವನು. ಅದರಿಂದ ಭವ ಎಂಬ ಹೆಸರುಳ್ಳವವನಾಗಿ; ಮೃಡ=ಸುಖ ವನ್ನುಂಟುಮಾಡುವವನು ಎಂಬರ್ಥದ 'ಮೃಡ' ಎಂಬ ಹೆಸರುಳ್ಳವನಾಗಿ; ಹರ= ಕೊಲ್ಲುವವನೆಂಬರ್ಥದ 'ಹರ' ಎಂಬ ಹೆಸರುಳ್ಳವನಾಗಿ; * ಇಷ್ಟ ವಿಧವಾಗಿ+ಇರ್ಪ=ಹೀಗೆ ಸೃಷ್ಟಿಕರ್ತ–ಸ್ಥಿತಿಕರ್ತ–ಲಯಕರ್ತ ಎಂಬ ತ್ರಿಮೂರ್ತಿ ಸ್ವರೂಪನಾಗಿದ್ದಾನೆ. ಶಿವ=ಮೋಕ್ಷ ಸ್ವರೂಪನಾದ ಶಿವನಾಗಿ

**ಟಿಪ್ಪಣಿ-೧:** ಅಷ್ಟ ಮೂರ್ತಿ (ಅ೩-ಪದ್ಯ-೧ ನೋಡಿ) ೧) ಕ್ಷಿತಿಮೂರ್ತಿಶರ್ವ; ೨) ಜಲಮೂರ್ತಿ ಭವ; ೩) ಅಗ್ನಿಮೂರ್ತಿ ರುದ್ರ; ೪) ವಾಯುಮೂರ್ತಿ ಉಗ್ರ; ೫) ಆಕಾಶಮೂರ್ತಿ ಭೀಮ; ೬) ಯಜಮಾನಮೂರ್ತಿ ಪಶುಪತಿ; ೭) ಚಂದ್ರಮೂರ್ತಿ ಮಹಾದೇವ; ೮) ಸೂರ್ಯಮೂರ್ತಿ ಈಶಾನ;

**ಟಿಪ್ಪಣಿ-೨:** ಈ ಪದ್ಯ ಶಿವಮಹಿಮ್ನಾಸ್ತೋತ್ರದ (ಶ್ಲೋಕ) ಅನುವಾದವಾಗಿದೆ.

**ಬಹುಲರಜಸೇ ವಿಶ್ವೋತ್ಪತ್ತೌ ಭವಾಯ ನಮೋನಮಃ**
**ಪ್ರಬಲ ತಮಸೇ ತತ್ಸಂಹಾರೇ ಹರಾಯ ನಮೋನಮಃ**
**ಸತ್ವೋದ್ರಿಕ್ತೌ ಮೃಡಾಯ ನಮೋ ನಮಃ**
**ಪ್ರಮಹಸಿ ಪದೇ ನಿಸ್ತ್ರೈಗುಣ್ಯೇ ಶಿವಾಯ ನಮೋ ನಮಃ ॥**

---

**ಶುಂಠರಿಗೆ, ಶ್ರುತಿ ವಿಮುಖರಿಗೆ, ಜನ**
**ಕಂಟಕರಿಗೆ, ಕಠೋರ ವಚನದಿ**
**ಗಂಟು ಬಿಡದಾವಾಗ ವಿಷಯಾಸಕ್ತರಾದವರಿಗೆ, ।**
**ನಂಟರಿಷ್ಟರು ಗುರು ಹಿರಿಯರೊಳು**
**ಟೆಂಠಣಿಸಿ ಕಡುಮೂರ್ಖರಾಗಿಹ**
**ಗಂಟುಗಳ್ಳರಿಗರುಹದಿರು ಮರೆದನುಭವಾಮೃತವ ॥ ॥೨॥**

**ತಾತ್ಪರ್ಯ:** ಈ ಕಾವ್ಯ ಶ್ರವಣಕ್ಕೆ ಅಪಾತ್ರರು ಯಾರ್‍ಯಾರು ಎಂಬುದನ್ನು ಈ ಪದ್ಯದಲ್ಲಿ ಹೇಳಲಾಗಿದೆ. ಈ ಕಾವ್ಯವನ್ನು ಏನೂ ತಿಳಿಯದ ಶುಂಠರಿಗೆ, ವೇದಬಾಹಿರ ರಾದವರಿಗೆ, ಜನಹಿಂಸಕರಾದವರಿಗೆ, ಬಿರುನುಡಿಗಳಿಂದ ಹಠ ಬಿಡದವರಿಗೆ, ಸದಾಕಾಲ ಇಂದ್ರಿಯಸುಖದಲ್ಲಿ ನಿರತರಾದವರಿಗೆ, ನೆಂಟರು, ಇಷ್ಟರು, ಗುರುಗಳು, ಹಿರಿಯರು, ಮೊದಲಾದವರಿಗೆ ಎದುರು ನುಡಿಗಳಾಡುತ್ತಾ ನಿಂದಿಸುವ ಕಡುಮೂರ್ಖರಿಗೆ, ಗಂಟುಕಳ್ಳರಿಗೆ ಅಪ್ಪಿತಪ್ಪಿಯೂ ಹೇಳದಿರು.

**ಶಬ್ದಾರ್ಥ:** ಶುಂಠರಿಗೆ=ಏನೂ ತಿಳಿಯದವನು; * ಶ್ರುತಿವಿಮುಖರಿಗೆ=ವೇದಬಾಹಿರರಿಗೆ (ನಾಸ್ತಿಕರಿಗೆ); * ಜನಕಂಟಕರಿಗೆ=ಜನರನ್ನು ಹಿಂಸಿಸುವವರಿಗೆ; * ಕಠೋರವಚನದಿ= ಬಿರುನುಡಿಗಳಿಂದ; * ಗಂಟುಬಿಡದೆ=ಹಠಬಿಡದವರಿಗೆ; ವಿಷಯಾಸಕ್ತರಿಗೆ=ಇಂದ್ರಿಯ ಸುಖದಲ್ಲೇ ಮುಳುಗಿರುವವರಿಗೆ; ಟೆಂಠಣಿಸಿ=ಎದುರು ಬಿದ್ದು ನಿಂದಿಸುವವರಿಗೆ; ಮರೆದು=ಅಪ್ಪಿ ತಪ್ಪಿ; * ಅರುಹದಿರು=ತಿಳಿಸದಿರು;

**ಟಿಪ್ಪಣಿ:** * ಹಿಂದಿನ ಕವಿಗಳು ತಮ್ಮ ಕಾವ್ಯದಲ್ಲಿ ಜನರ ನಿಂದೆ, ಸುಜನರ ಸ್ತುತಿ ಎಂಬುದಾಗಿ ಕಾವ್ಯ ಪ್ರಾರಂಭದಲ್ಲಿ ದುರ್ಜನರನ್ನು ದೂಷಿಸುತ್ತಾರೆ, ಸುಜನರನ್ನು ಸ್ತುತಿಸುತ್ತಾರೆ, ಇದೊಂದು ಕಾವ್ಯ ಸಂಪ್ರದಾಯ, ಅದರಂತೆ ಕವಿ ಇಲ್ಲಿ ಕುಜನರ ನಿಂದೆ ಮಾಡಿದ್ದಾನೆ.

---

ಆದರದೊಳಧ್ಯಾತ್ಮವಿದ್ಯೆಯ
ಸಾಧಿಸುವ ಸತ್ಪುರುಷರಿಗೆ, ಮೈ
ತ್ರ್ಯಾದಿ ಸದ್ಗುಣಗಳನು ಪಡೆದ ಮಹಾನುಭಾವರಿಗೆ, ।
ಬೋಧೆನಿಲುವಂದದಲಿ ಸದ್ಗುರು
ಪಾದಪದ್ಮವ ಸೇವಿಸುತ್ತಿಹ
ಸಾಧಕರಿಗರುಹುವುದು ಬಿಡದೀ ಅನುಭವಾಮೃತವ ॥ ॥೩॥

ತಾತ್ಪರ್ಯ: ಬಹಳ ಆಸಕ್ತಿಯಿಂದ ವೇದಾಂತ ವಿದ್ಯೆಯನ್ನು ಸಾಧನೆ ಮಾಡುವಂಥ ಸಜ್ಜನರಿಗೆ, ಚಿತ್ತ ಶುದ್ಧಿಯ ಸಾಧನಗಳಾದ ಮೈತ್ರೀ ಕರುಣೆ ಮುದಿತ, ಉಪೇಕ್ಷೆ ಇವೇ ಮುಂತಾದ ಸದ್ಗುಣಗಳನ್ನು ಪಡೆದ ಮಹಾಜನರಿಗೆ ಗುರುವಿನ ಉಪದೇಶ ಜೀವನದಲ್ಲಿ ನೆಲೆಗೊಳ್ಳುವ ಹಾಗೆ ಸದ್ಗುರುವಿನ ಪಾದ ಕಮಲಗಳ ಸೇವನೆ ಮಾಡುವ ಅಭ್ಯಾಸ ಶೀಲರಿಗೆ, ಈ ಅನುಭವಾಮೃತವನ್ನು ನಿರಂತರವಾಗಿ ಉಪದೇಶಿಸತಕ್ಕದ್ದು.

ಶಬ್ದಾರ್ಥ: * ಆದರದೊಳು=ಬಹಳ ಆಸಕ್ತಿಯಿಂದ; * ಅಧ್ಯಾತ್ಮವಿದ್ಯೆ=ವೇದಾಂತವಿದ್ಯೆ; * ಬೋಧೆನಿಲುವಂದದಲಿ=ಗುರುವಿನ ಉಪದೇಶ ಜೀವನದಲ್ಲಿ ನೆಲೆಗೊಳ್ಳುವ ಹಾಗೆ; * ಸೇವಿಸುತ್ತಿಹ=ಆರಾಧಿಸುವ; * ಸಾಧಕರಿಗೆ=ಅಭ್ಯಾಸಶೀಲರಿಗೆ; * ಬಿಡದೆ=ನಿರಂತರವಾಗಿ; * ಅರುಹುವುದು=ಬೋಧಿಸತಕ್ಕದ್ದು;

ಟಿಪ್ಪಣಿ-೧: ಮೈತ್ರ್ಯಾದಿ ಸದ್ಗುಣಗಳು=ಪಾತಂಜಲಯೋಗಸೂತ್ರದಲ್ಲಿ ಬರುವ ಮೈತ್ರಿಕರುಣಾ-ಮುದಿತೋಪೇಕ್ಷಾಣಾ................ಎಂಬ ಮಾತಿನ ಅನುವಾದವಾಗಿದೆ.

ಮೈತ್ರಿ, ಕರುಣಾ, ಮುದಿತ, ಉಪೇಕ್ಷಾ ಈ ನಾಲ್ಕು ಗುಣಗಳು ಚಿತ್ತಶುದ್ಧಿಗೆ ಸಾಧನಗಳು. ಮೈತ್ರಿ ಎಂದರೆ ಸುಖಿಗಳೊಡನೆ ಸ್ನೇಹ; ಕರುಣೆಯೆಂದರೆ ದುಃಖಿಗಳ ವಿಷಯದಲ್ಲಿ ಮರುಕ; ಮುದಿತ ಎಂದರೆ ಒಳ್ಳೆಯ ವಿಷಯಗಳನ್ನು ಕಂಡರೆ ಸಂತೋಷ; ಉಪೇಕ್ಷೆ ಎಂದರೆ ಕೆಟ್ಟ ವಿಷಯಗಳಲ್ಲಿ ಉದಾಸೀನತೆ.

---

ಮುನಿವರನೆ ಚಿತ್ತಯಿಸು ತತ್ತ್ವದ
ಘನರಹಸ್ಯವನೆಲ್ಲವೆನ್ನಯ
ಮನಕೊಡಂಬಡುವಂತೆ ಶಾಸ್ತ್ರಾರ್ಥವನು ಬೋಧಿಸಿದೆ;
ಜನನಮರಣದ ಕೋಟಲೆಯ ಕಳೆ
ದೆನು; ಭವತ್ಕಾರುಣ್ಯದೃಷ್ಟಿಯೊ
ಳನುಪಮದ ಪರಮಾತ್ಮಪದವನು ತಿಳುಹಬೇಕೆಂದ ॥ ॥೪॥

ತಾತ್ಪರ್ಯ: ಶುಕಯೋಗಿ ವ್ಯಾಸಮಹರ್ಷಿಗಳನ್ನು ಹೀಗೆ ಕೇಳಿಕೊಂಡನು. "ಎಲೈ ತಂದೆಯೆ, ವೇದಾಂತ ಶಾಸ್ತ್ರದ ಸೂಕ್ಷ್ಮಾರ್ಥಗಳನ್ನೆಲ್ಲ ನನ್ನ ಮನಸ್ಸಿಗೆ ನಾಟುವಂತೆ ಶಾಸ್ತ್ರ ಪ್ರಮಾಣಗಳಿಂದ ವಿವರವಾಗಿ ಉಪದೇಶಿಸಿದೆ. ನಿನ್ನ ಕೃಪಾಕಟಾಕ್ಷದಿಂದ

ಜ್ಞಾನಬೋಧೆಯಿಂದ ಜನನ ಮರಣಗಳೆಂಬ ಕಷ್ಟ ಪರಂಪರೆಯನ್ನು ಪರಿಹರಿಸಿ ಕೊಂಡೆನು. ಇನ್ನು ನಿನ್ನ ಕಾರುಣ್ಯ ನೋಟದಿಂದ ನನಗೆ ಅನುಪಮ ಮೋಕ್ಷ ಮಾರ್ಗವನ್ನು ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

**ಶಬ್ದಾರ್ಥ:** * **ಚಿತ್ತಯಿಸು**=ಪರಾಂಬರಿಸು; * **ತತ್ತ್ವದ ಘನರಹಸ್ಯವನೆಲ್ಲ**=ವೇದಾಂತ ಶಾಸ್ತ್ರದ ಅಂತರಾರ್ಥಗಳನ್ನೆಲ್ಲ; * **ಮನಕೊಡಂಬಡುವಂತೆ**=ಮನಸ್ಸಿಗೆ ನಾಟುವಂತೆ; * **ಕೋಟಲೆ**=ಕಷ್ಟ ಪರಂಪರೆ; * **ಭವತ್ಕಾರುಣ್ಯ ದೃಷ್ಟಿಯೊಳು**=ನಿನ್ನ ದಯಾ ದೃಷ್ಟಿಯಿಂದ; * **ಪರಮಾತ್ಮಪದ**=ಮೋಕ್ಷ ಮಾರ್ಗ

**ಟಿಪ್ಪಣಿ–೧: ಪಾಠಾಂತರ:** ಮುನಿವರನೆ ಚಿತ್ತಯಿಸು ತತ್ತ್ವದ=ಇಲ್ಲಿರುವ ಚಿತ್ತಯಿಸು ಪಾಠಕ್ಕೆ ಬದಲಾಗಿ ಉಳಿದೆಲ್ಲ ಪ್ರತಿಗಳಲ್ಲಿ ಚಿತ್ತೈಸು ಎಂದಿದೆ ಇದು ಅಶುದ್ಧ ಪಾಠ. ಅರ್ಥವ್ಯತ್ಯಾಸವಿಲ್ಲದಿದ್ದರೂ ಛಂದೋದೃಷ್ಟಿಯಿಂದ ೧ ಮಾತ್ರೆ ಕಡಿಮೆ ಆಗುತ್ತದೆ. ಚಿತ್ತಯಿಸು ಶುದ್ಧ ಪಾಠ. ಚಿತ್ತೈಸು ಛಂದೋರೂಪ ಪಾಠ.

**ಟಿಪ್ಪಣಿ–೨:** ಹೊ.ಚಿದಂಬರಯ್ಯನವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ, ಪಾಠಾಂತರ ಅನುವಾದಕನದು.

---

**ಕೇಳು ಶುಕಯೋಗೀಂದ್ರ, ನಿಜಪದ**
**ಹೇಳಲಳವಲ್ಲಾದೊಡೆಯು ಸಂ**
**ಭಾಳಿಸುತಲರುಪುವೆನು ನಿಜನಿರ್ದ್ವಂದ್ವ ನಿರ್ಗುಣವ;**
**ತಾಳಿ ನೀನಪರೋಕ್ಷದನುಭವ**
**ಮೇಳವಿಸುವಂದದಲಿ ತಿಳಿವನು**
**ಕೂಲವನು ಮಾಡುವದು ಮನದಲಿ ಮಗನೆ ಕೇಳೆಂದ ॥ ॥ ೫ ॥**

**ತಾತ್ಪರ್ಯ:** ವ್ಯಾಸರು ಶುಕನಿಗೆ ಹೇಳಿದರು: ಪರಮಾತ್ಮಪದದ ಸತ್ಯ ಸ್ವರೂಪವನ್ನು ವಿವರಿಸುವುದು ಸಾಧ್ಯವಿಲ್ಲದಿದ್ದರೂ ಪ್ರಯತ್ನದಿಂದ ಅಳವಡಿಸಿಕೊಳ್ಳುತ್ತಾ (ಸಂಭಾಳಿಸುತ್ತಾ) ತಿಳಿಸುತ್ತೇನೆ. ನಿಶ್ಚಯವೂ ಏಕವೂ ಗುಣರಹಿತವೂ ಆದ ಮೋಕ್ಷ ಮಾರ್ಗವನ್ನು ಗ್ರಹಿಸಿ ಪ್ರತ್ಯಕ್ಷಾನುಭವವನ್ನು ಹೊಂದಿಸಿಕೊಂಡು ಮನಸ್ಸನ್ನು ಸತ್ಯಾನ್ವೇಷಣೆಗೆ ಸಿದ್ಧಮಾಡಿಕೋ ಎಂದನು.

**ಶಬ್ದಾರ್ಥ:** * **ನಿಜಪದ**=ಪರಮಾತ್ಮಪದ; **ತಾಳಿ**=ಗ್ರಹಿಸಿ; * **ಹೇಳಲು+ಅಳವಲ್ಲ+ಆದೊಡೆಯು**=ವಿವರಿಸಲು ಸಾಧ್ಯ ಇಲ್ಲದಿದ್ದರೂ; * **ನಿಜನಿರ್ದ್ವಂದ್ವ ನಿರ್ಗುಣವ**=ನಿಶ್ಚಯವೂ ಏಕವೂ ಗುಣರಹಿತವೂ ಆದ; **ಅಪರೋಕ್ಷಾನುಭವ**=ಪ್ರತ್ಯಕ್ಷಾನುಭವ; **ತಿಳಿವ ಮೇಳವಿಸುವಂದದಲಿ**=ಹೊಂದಿಕೊಳ್ಳುವ ಹಾಗೆ; **ಮನದಲಿ ಅನುಕೂಲವನು ಮಾಡುವುದು**=ಮನಸ್ಸನ್ನು ಸತ್ಯಾನ್ವೇಷಣೆಗೆ ಸಿದ್ಧ ಮಾಡಿಕೊ; **ಸಂಭಾಳಿಸುತಲಿ**=ಪ್ರಯತ್ನದಿಂದ ಹೊಂದಿಸಿಕೊಳ್ಳುತ್ತ

---

ದರ್ಪಣದವೊಲು ಶುದ್ಧವಾಗಿಯೆ
ತೋರ್ಪ ಬುದ್ಧಿಯ ವೃತ್ತಿ ನಿಜವಾ
ಗಿರ್ಪ ನಿತ್ಯಜ್ಯೋತಿ ರೂಪಿನೊಳೇಕರಸವಾಗಿ ।
ಕಪ್ಪುರವನುರಿಯಾವರಿಸಿದೋ
ಲ್ಬೇರ್ಪಡದೆ ನಿರ್ದ್ವಂದ್ವಪದವಾ
ಗಿರ್ಪುದದು ಪರಮಾತ್ಮಪದವೆಂದರಿತುಕೋ ಎಂದ ॥ ॥೬॥

ತಾತ್ಪರ್ಯ: ಕನ್ನಡಿಯ ಹಾಗೆ ನಿರ್ಮಲವಾಗಿ ಕಾಣುವ ಬುದ್ಧಿಯ ವ್ಯಾಪಾರವು ನಿಜವಾಗಿಯೂ ಶಾಶ್ವತ ಜ್ಯೋತಿ ಸ್ವರೂಪದಲ್ಲಿ ಏಕರಸವಾಗಿ ಉರಿಯು ಕರ್ಪೂರವನ್ನು ಆವರಿಸಿದಂತೆ ಸುಖದುಃಖಗಳಿಲ್ಲದೆ ನಿರ್ದ್ವಂದ್ವ ಸ್ಥಿತಿಯನ್ನು ಹೊಂದಿರುವುದೇ ಪರಮಾತ್ಮಪದ (ಮೋಕ್ಷ ಸ್ಥಿತಿ) ಎಂದು ತಿಳಿದುಕೋ ಎಂಬುದಾಗಿ ವ್ಯಾಸನು ಹೇಳಿದನು.

ಶಬ್ದಾರ್ಥ: * ದರ್ಪಣದವೊಲು=ಕನ್ನಡಿಯ ಹಾಗೆ; * ಶುದ್ಧವಾಗಿಯೇ ತೋರ್ಪ=ನಿರ್ಮಲವಾಗಿ ಕಾಣುವ; * ಬುದ್ಧಿಯ ವೃತ್ತಿ=ಬುದ್ಧಿಯ ವ್ಯಾಪಾರವು; * ಕಪ್ಪುರ=ಕರ್ಪೂರ; ಆವರಿಸಿದಂತೆ= ಹಬ್ಬಿಕೊಂಡಂತೆ; * ಬೇರ್ಪಡದೆ=ಪ್ರತ್ಯೇಕವಾಗದೆ, ದುಃಖಗಳಿಲ್ಲದೆ;

---

ನೆನಹಡಗಿ, ಮನವೇನು ತೋರದೆ,
ತನಗೆ ತಾನೆಂದೆಂಬ ಹಮ್ಮಿನ
ಬಿನುಗು ನೆರೆ ಬಯಲಾಗಿ, ಭಾವಭ್ರಾಂತಿಯಳಿದುಳಿದ ।
ಘನ ಪರಂಜ್ಯೋತಿ ಸ್ವರೂಪವು
ಮನದೊಳನುಭವವಿಲ್ಲದನುಪಮ
ವೆನಿಪುದೇ ಪರಮಾತ್ಮಪದವೆಂದರಿತುಕೋ ಎಂದ ॥ ॥೭॥

ತಾತ್ಪರ್ಯ: ನಿಶ್ಚಯ ಜ್ಞಾನವೆಂಬ ನೆನಪು ಮರೆಯಾಗಿ ಮನಸ್ಸಿಗೆ ಏನೂ ತೋಚದೆ ತನಗೆ ತಾನೇ ಎಂಬ ಅಹಂಕಾರದ ಮತ್ತು ಮಮಕಾರ ಭಾವ ವ್ಯರ್ಥವಾಗಿ ಭೇದಬುದ್ಧಿ ಅಳಿದುಹೋದ ಮೇಲೆ ಉಳಿಯುವ ಘನ ಪರಂಜ್ಯೋತಿ ಸ್ವರೂಪವು ತಾನೇ ತಾನಾಗಿ ಮನಸ್ಸು ಮೀರಿ ಇರುವ ಆತ್ಮಸ್ಥಿತಿಯೇ ಪರಮಾತ್ಮಪದ ಎಂದು ತಿಳಿ.

ಶಬ್ದಾರ್ಥ: * ನೆನಹು=ನಿಶ್ಚಯಜ್ಞಾನವೆಂಬ ನೆನಪು; * ತನಗೆ ತಾನೆಂದೆಂಬ ಹಮ್ಮಿನ ಬಿನುಗು=ಅಹಂಕಾರ, ಅಳಿದುಹೋದ ಮೇಲೆ ಉಳಿಯುವ; ಮನದೊಳು ಅನುಭವವಿಲ್ಲದ ಅನುಪಮವು=ಎಲ್ಲ ಸ್ಥಿತಿಗಳೂ ಮನಸ್ಸಿನಲ್ಲಿ ಅನುಭವಕ್ಕೆ ಬರತಕ್ಕವುಗಳಾಗಿರುವಾಗ ಆತ್ಮಸ್ಥಿತಿಯು ಮನಸ್ಸನ್ನು ಮೀರಿರುವುದರಿಂದ ಹೋಲಿಕೆ ಇಲ್ಲದ್ದು; ಪರಮಾತ್ಮಪದ=ಆತ್ಮಸ್ಥಿತಿ;

---

ಬುದ್ಧಿಯೆನಿಸುವ ಕರಣವನುಭವ
ಸಿದ್ಧವಾಗಿಹುದಾತ್ಮನಡಿಯೊಳ
ಗಿರ್ದು ತೋರುತ ಬಯಲೊಳೆಸೆಯುವ ಬಿಂಗದಂದದಲಿ; ।
ಬುದ್ಧಿಗಾದಾಕಾರವಡಗಿರ
ಲದ್ವಯಾನಂದಾಬ್ಧಿಯಾಗುತ
ಭೇದ್ಯವದು ಪರಮಾತ್ಮಪದವೆಂದರಿತುಕೋ ಎಂದ ॥ ॥೮॥

**ತಾತ್ಪರ್ಯ:** ಬುದ್ಧಿಯೆನಿಸುವ ಇಂದ್ರಿಯವು ಆತ್ಮನ ಹತ್ತಿರದಲ್ಲಿಯೇ ಇದ್ದು ಕಾಣುತ್ತ ಬಯಲಲ್ಲಿ ಕಾಗೆಯ ಬಂಗಾರವು ತಾನು ತೇಜೋಮಯವಾದ ವಸ್ತುವಲ್ಲದಿದ್ದರೂ ಸೂರ್ಯನ ತೇಜಸ್ಸನ್ನು ಪಡೆದು ಸೂರ್ಯನ ಹಾಗೆ ಬೆಳಗುವಂತೆ ಬುದ್ಧಿಯು ಜ್ಞಾನಸ್ವರೂಪವಲ್ಲದಿದ್ದರೂ ಆತ್ಮ ಸಾನ್ನಿಧ್ಯ ಬಲದಿಂದ ಆತ್ಮನ ಹಾಗೆ ಜ್ಞಾನ ಸ್ವರೂಪವಾಗಿ ಕಾಣಿಸಿಕೊಳ್ಳುತ್ತದೆ. ಸೂರ್ಯನನ್ನು ಅನುಕರಣ ಮಾಡುತ್ತಿದ್ದ ಎರಡನೆಯ ಪ್ರಕಾಶವಸ್ತುವಾಗಿ ಕಾಣಿಸುತ್ತಿದ್ದ ಕಾಗೆ ಬಂಗಾರವು ಹೋದರೆ ಸೂರ್ಯನೊಬ್ಬನೇ ಆಗುವಂತೆ, ಬುದ್ಧಿಯ ವೃತ್ತಿಗಳೆಲ್ಲಾ ಮರೆಯಾದರೆ ಅದ್ವಯನೂ, ಆನಂದಸಾಗರನೂ ಆದ ಅಭೇದ್ಯ ಅಖಂಡನಾದ ಆತ್ಮನೊಬ್ಬನೇ ಕಾಣಿಸಿಕೊಳ್ಳುತ್ತಾನೆ. ಅದೇ ಪರಮಾತ್ಮಪದ ಎಂದು ತಿಳಿ.

**ಶಬ್ದಾರ್ಥ:** * ಬುದ್ಧಿಯೆನಿಸುವ ಕರಣ=ಬುದ್ಧಿಯೆಂಬ ಇಂದ್ರಿಯ; * ಆತ್ಮನಡಿಯೊಳಗಿರ್ದು=ಆತ್ಮನ ಹತ್ತಿರದಲ್ಲಿಯೇ ಇದ್ದು ಕಾಣುತ್ತ; ಬಯಲೊಳೆಸೆಯುವ ಬಿಂಗದಂದದಲಿ=ಬಯಲಲ್ಲಿ ಕಾಗೆ ಬಂಗಾರವು ಥಳಥಳ ಹೊಳೆಯುತ್ತ ಎದ್ದು ಕಾಣುವಂತೆ; ಬುದ್ಧಿಗೆ ಅದು ಆಕಾರವಡಗಲು=ಬುದ್ಧಿಯ ವೃತ್ತಿಗಳೆಲ್ಲಾ ಹೋದರೆ ಆತ್ಮನೊಬ್ಬನೇ ಅಖಂಡವಾಗಿ ಕಾಣಿಸಿಕೊಳ್ಳುವನು.

**ಪಾಠಾಂತರ:** ಬುದ್ಧಿಯೆನಿಸುವ=ಬುದ್ಧಿಯೆನಿಸಿದ (ಕು); ಅಡಿಯೊಳಗಿರ್ದು=ಅಡಯೊಳಗಿದ್ದು (ಕು); ಬಯಲೊಳೆಸೆಯುವ=ಬಯಲೊಳೆತ್ತಿದ (ಕು); ಬುದ್ಧಿಗಾದಾಕಾರವಡಗಿರಲು=ಶುದ್ಧ ವಾದಾಕಾರವಡಗಿರಲು (ಕು).

---

ಅಚ್ಚಬೆಳದಿಂಗಳಿನ ಪ್ರಭೆಯಲಿ
ಸ್ವಚ್ಛವಾದಾ ಸ್ಫಟಿಕ ಮಣಿಯ ಶಿ
ಲೋಚ್ಚಯದ ನಿಜವೇನು ತೋರದಭೇದ್ಯವಾದಂತೆ ।
ಅಚ್ಚಬರಿಯರಿವಾಗಿ ತತ್ಸುಖ
ಪೆರ್ಚಿ ತನ್ನಯ ಬುದ್ಧಿಯೊಳು ಮಿಗೆ
ಬೆಚ್ಚಲದು ಪರಮಾತ್ಮಪದವೆಂದರಿತುಕೋ ಎಂದ ॥ ॥೯॥

**ತಾತ್ಪರ್ಯ:** ಸ್ವಚ್ಛವಾದ ಬೆಳದಿಂಗಳಿನ ಕಾಂತಿಯಲ್ಲಿ ನಿರ್ಮಲವಾದ ಸ್ಫಟಿಕ ಮಣಿಗಳಿಟ್ಟರೆ ಆ ಮಣಿಗಳ ಸ್ವಾಭಾವಿಕ ಕಾಂತಿ ಏನೂ ತೋರದೆ ಇದು ಚಂದ್ರನ ಬೆಳಕು, ಇದು ಸ್ಫಟಿಕಮಣಿಯ ಬೆಳಕು ಎಂದು ಬಿಡಿಸಿ ತಿಳಿಯುವುದಕ್ಕೆ ಹೇಗೆ

ಬರುವುದಿಲ್ಲವೋ ಹಾಗೆ ಶುದ್ಧ ಆತ್ಮ ಜ್ಞಾನದ ಆನಂದವು ಅಧಿಕವಾಗಿ ಬುದ್ಧಿಯಲ್ಲಿ ಚೆನ್ನಾಗಿ ಬೆಸುಗೆ ಹೊಂದಿಕೊಂಡರೆ ಅದೇ ಪರಮಾತ್ಮಪದ ಎಂದು ತಿಳಿ.

**ಶಬ್ದಾರ್ಥ: ಶಿಲೋಚ್ಚಯದ+ನಿಜವು**=ನಿರ್ಮಲವಾದ ಸ್ಫಟಿಕಮಣಿಗಳ ಸ್ವಾಭಾವಿಕ ಕಾಂತಿಯು; **ಅಭೇದ್ಯವಾದಂತೆ**=ಬೆಳದಿಂಗಳಲ್ಲಿ ಇದು ಚಂದ್ರನ ಬೆಳಕೆಂದೂ ಇದು ಸ್ಫಟಿಕಶಿಲೆ ಎಂದೂ ಬಿಡಿಸಿ ತಿಳಿಯುವುದಕ್ಕೆ ಬರದೆ ಇರುವ ಹಾಗೆ; **ಬೆಚ್ಚಲು**=ಚೆನ್ನಾಗಿ ಬೆಸುಗೆಯಿಂದ ಕೂಡಿಕೊಳ್ಳಲು; * **ಮಿಗೆ**=ಅತಿಶಯವಾಗಿ; **ತತ್‌ಸುಖ**=ಜ್ಞಾನರೂಪದ ಸುಖ, ಚಿದಾನಂದ;

---

**ಜೀವನೆನಿಸುವ ಸಂವಿದದ್ವಯ**
**ನಾವದೊಂದನು ಮನದಿ ವಿಷಯವ**
**ಭಾವಿಸದೆ ನಿರ್ವಿಷಯನಾಗಿಹನಾವ ಹೊತ್ತಿನಲಿ ।**
**ಕೇವಲ ಚಿದಾನಂದಮಯವಹ**
**ಭಾವವಿರಹಿತವಾದ ನಿರ್ಮಲ**
**ವಾವುದದು ಪರಮಾತ್ಮಪದವೆಂದರಿತುಕೋ ಎಂದ ॥ ॥೧೦॥**

**ತಾತ್ಪರ್ಯ:** ಜೀವನೆಂಬ ಅದ್ವಯನೂ ಜ್ಞಾನಸ್ವರೂಪನೂ ಆದ ಬ್ರಹ್ಮದ ಸ್ವರೂಪ ಆತ್ಮನು ಯಾವ ವಿಷಯವನ್ನೂ ಭ್ರಾಂತಿ ಬುದ್ಧಿಯಿಂದ ಮನಸ್ಸಿಗೆ ತಂದುಕೊಳ್ಳದೆ ನಿರ್ವಿಣ್ಣನಾಗಿರುತ್ತಾನೋ ಸದಾಕಾಲವೂ ಯಾವ ಕಲ್ಪನೆಯೂ ಇಲ್ಲದಂಥ ಭಾವದೂರನಾಗಿರುತ್ತಾನೋ ಅಂಥ ಹೊತ್ತಿನಲ್ಲಿ ಶುದ್ಧ ಚಿದಾನಂದ ಸ್ವರೂಪವಾಗಿರುವ ನಿಷ್ಕಲ್ಮಷ ವಸ್ತುವನ್ನೇ ಪರಮಾತ್ಮ ಪದವೆಂದು ತಿಳಿದುಕೊ.

**ಶಬ್ದಾರ್ಥ: ಸಂವಿದದ್ವಯನು**=(ಜೀವನೆಂಬ) ಅದ್ವಯವೂ, ಜ್ಞಾನಸ್ವರೂಪವೂ ಆದ ಬ್ರಹ್ಮಸ್ವರೂಪನು; **ನಿರ್ವಿಷಯನಾಗಿಹನು**=ಯಾವ ವಿಷಯವನ್ನೂ ಮನಸ್ಸಿಗೆ ತಂದುಕೊಳ್ಳದೇ ಇರುವನು; **ಭಾವವಿರಹಿತನಾದ**=ಯಾವ ಕಲ್ಪನೆಯೂ ಇಲ್ಲದಂಥ; **ಆವ ಹೊತ್ತಿನಲ್ಲಿ**=ಅಂಥ ಸ್ಥಿತಿಯಲ್ಲಿ; **ನಿರ್ಮಲ**=ನಿಷ್ಕಲ್ಮಶ;

**ಪಾಠಾಂತರ: ನಾವುದೊಂದನುಮನದಿ**=ನಾವುದಾನೊಂದಖಿಲ (ಕು) **ನಿರ್ವಿಷಯನಾಗಿಹನಾವ**=ನಿರ್ವಿಣ್ಣನಾಗಿಹನಾವ (ಕು)

---

**ತನ್ನ ನಿಜವನು ತಿಳಿದು, ತಾ ಸಂ**
**ಪನ್ನ ಸುಖಮಯನಾಗಿ, ತನ್ನಿಂ**
**ದನ್ಯವಹ ತನುಕರಣಗಳ ಪ್ರಾರಬ್ಧಕರ್ಮವನು ।**
**ಅನ್ಯರನುಭವದಂತೆ ಕಂಡವ**
**ಮುನ್ನಲೇ ಪರಿಹರಿಸಿ ನಿಂದ ನಿ**
**ಜೋನ್ನತಿಯೆ ಪರಮಾತ್ಮಪದವೆಂದರಿತುಕೋ ಎಂದ ॥ ॥೧೧॥**

**ತಾತ್ಪರ್ಯ:** ತನ್ನ ನಿಜ ಸ್ವರೂಪವನ್ನು ತಿಳಿದುಕೊಂಡು ತಾನು ಸಂಪೂರ್ಣ ಸುಖ ಸ್ವರೂಪನಾಗಿ ತಾನಲ್ಲದ ತನ್ನ ದೇಹ ಮತ್ತು ಪ್ರಾಣಾದಿಕರಣಗಳ ಪ್ರಾರಬ್ಧ ಕರ್ಮಗಳನ್ನು ಇತರರ ಅನುಭವದಂತೆ ತಿಳಿದು ಅವುಗಳನ್ನು ಮೊದಲೇ ಪರಿಹರಿಸಿಕೊಂಡ ಮೇಲೆ ಆದ ಸತ್ಯ ಸ್ವರೂಪದ ಉನ್ನತಿಯೇ ಪರಮಾತ್ಮಪದವೆಂದು ತಿಳಿ.

**ಶಬ್ದಾರ್ಥ:** ಕಂಡು+ಅವ (ಆ ಪ್ರಾರಬ್ಧ ಕರ್ಮಗಳನ್ನು); ಪರಿಹರಿಸಿ=ಕೈಬಿಟ್ಟು;* ಸಂಪನ್ನ ಸುಖಮಯನಾಗಿ=ಸಂಪೂರ್ಣ ಸುಖಸ್ವರೂಪನಾಗಿ;

**ಟಿಪ್ಪಣಿ:** ಪ್ರಾರಬ್ಧ ಕರ್ಮವನು=ಅನೇಕ ಸಂಚಿತ ಕರ್ಮಗಳ ಮಧ್ಯದಲ್ಲಿ ಪರಿಪಕ್ವವಾದ ಮತ್ತು ಈಶ್ವರೇಚ್ಛೆಯಿಂದ ಈ ವರ್ತಮಾನ ದೇಹದ ಆರಂಭಿಕವಾದ ಯಾವುದಾದರೊಂದು ಸಂಚಿತ ಕರ್ಮವೇ ಪ್ರಾರಬ್ಧ ಕರ್ಮವೆನಿಸುವುದು. (ಶೃತಿ ವಿಚಾರ ಚಂದ್ರೋದಯ; ಪುಟ:೧೭೮)

---

**ಬಗೆಯೆ ಸಕಲಾಕಾರವಾಗಿರ**
**ಲೊಗೆದು ತೋರ್ಪುದು; ತಿಳಿಯಲಂತಾ**
**ಬಗೆಯಳಿಯೆ ತಾನಾಗಿ ತೋರ್ಪುದಖಂಡ ವಸ್ತುವೆನೆ ।**
**ನಿಗಮನಿಕರಂಗಳಿಗೆ ನಿಲುಕದ,**
**ಸಗುಣನಿರ್ಗುಣವೆನಿಸದಾ ಚಿ**
**ದ್ಗಗನವದು ಪರಮಾತ್ಮಪದವೆಂದರಿತುಕೋ ಎಂದ ॥ ॥೧೨॥**

**ತಾತ್ಪರ್ಯ:** ಮನಸ್ಸೇ ಭೇದಜ್ಞಾನಾತ್ಮಕವಾದ ಭಾವನೆಯಿಂದ ನಾಮರೂಪವಾದ ಜಗತ್ತನ್ನು ನಾನಾ ಬಗೆಯ ಸ್ವರೂಪದಲ್ಲಿ ಕಾಣುತ್ತದೆ. ಈ ರೀತಿಯ ಮನಸ್ಸು ನಾಶವಾದರೆ ಆಗ ಅಖಂಡ ವಸ್ತುವಾದ ಪರಬ್ರಹ್ಮ ಸ್ವರೂಪ ಕಾಣಿಸುತ್ತದೆ. ಆದ್ದರಿಂದ ವೇದ ಸಮೂಹಗಳಿಗೂ ಸಿಗದ ಸಗುಣ ರೂಪದಲ್ಲಾಗಲಿ, ನಿರ್ಗುಣ ರೂಪದಲ್ಲಾಗಲಿ ತೋರದಿರುವ ಚಿದಾಕಾಶವೇ ಪರಮಾತ್ಮ ಪದವೆಂದು ತಿಳಿ.

**ಶಬ್ದಾರ್ಥ:** ಬಗೆಯೆ=ಮನಸ್ಸೆ; ಬಗೆಯಳಿಯೆ=ಮನಸ್ಸು ನಾಶವಾದರೆ; * ತೋರ್ಪುದು=ಕಾಣಿಸುತ್ತದೆ; * ಅಖಂಡವಸ್ತು=ಪರಬ್ರಹ್ಮಸ್ವರೂಪ; ಚಿದ್ಗಗನ=ಚಿದಾಕಾಶ.

---

**ತೋರಿಸುವುದೆಲ್ಲವನು ತನ್ನೊಳು;**
**ತೋರದಡಗಿದೊಡಡಗಿತೆಂಬ ವಿ**
**ಚಾರವೇನೂ ತೋರದೇ ಸ್ತಿಮಿತಾಂಬುಧಿಯವೋಲು ।**
**ಮೀರಿ ಮಿಕ್ಕಿಹ ಸತ್ಯಸಂವಿದ**
**ಪಾರಪರಮಾನಂದ ಸಹಜಾ**
**ಕಾರವದು ಪರಮಾತ್ಮಪದವೆಂದರಿತುಕೋ ಎಂದ ॥ ॥೧೩॥**

**ತಾತ್ಪರ್ಯ:** ಎಲ್ಲವನ್ನೂ ತನ್ನಲ್ಲಿ ತೋರಿಸುತ್ತ, ಆ ತೋರಿಕೆ ಅಡಗಿದೊಡೆ ಅದು ಮರೆಯಾಯಿತು ಎಂಬ ವಿಚಾರವೇನನ್ನೂ ಕಾಣಿಸದೆ, ಅಲುಗಾಡದ ಶಾಂತಸಾಗರದ ಹಾಗೆ, ಅದನ್ನೂ ಮೀರಿ ಮಿಕ್ಕು ಸತ್ಯ ಜ್ಞಾನ ಸಂಪನ್ನವಾದ ಅಪಾರ ಪರಮಾನಂದ ವೆನಿಸಿದ ಸಹಜಾಕಾರವಾಗಿ ತೋರುವುದೇ ಪರಮಾತ್ಮಪದವೆಂದು ತಿಳಿ.

**ಶಬ್ದಾರ್ಥ:** * **ತೋರಿಸುವುದು**=ಕಾಣಿಸುವುದು; * **ಅಡಗಿದೊಡೆ**=ಮರೆಯಾದರೆ; * **ಮೀರಿಮಿಕ್ಕು** =ಅದರಾಚೆಗೆ; * **ಸಂವಿದ**=ಸತ್ಯ, ಜ್ಞಾನ, ಸತ್ಯಾನುಭವ; **ಸ್ತಿಮಿತಾಂಬುಧಿಯವೋಲು**=ಅಲುಗಾಡದ ಸಮುದ್ರದಂತೆ;

**ಪಾಠಾಂತರ:** **ತೋರಿಸುವುದೆಲ್ಲವನು**=ತೋರಿಸುತ್ತಿಹುದೆಲ್ಲ (ಕು); **ತೋರದಡಗಿದೊಡಡಗಿತೆಂಬ**= ತೋರಲಡಗಿರಲಡಗಿತೆಂಬ (ಕು);

---

**ಜ್ಞೇಯವೆನಿಸಿಯೆ ಮರೆದು ತೋರುವ**
**ದೀಯಶೇಷವು; ಸಕಲಕರಣೋ**
**ಪಾಯವಿವು ಜ್ಞಾನಂಗಳೆನಿಪುವು; ನಿಜದೊಳವನರಿವ ।**
**ಆಯರಿವೆ ಜ್ಞಾತೃತ್ವವೆನಿಸುವ**
**ದೀಯಿನಿತು ತಿಳಿ ತ್ರಿಪುಟಯಿವನಳಿ**
**ದಾಯವಸ್ಥೆಯನರಿತುಕೋ ಪರಮಾತ್ಮಪದವೆಂದು ॥ ॥೧೪॥**

**ತಾತ್ಪರ್ಯ:** ಪ್ರಕಾಶಿಸಿ ತೋರುತ್ತಿರುವ ಸಮಸ್ತ ವಸ್ತುಗಳೂ ಜ್ಞೇಯವೆನಿಸಿಕೊಳ್ಳುತ್ತವೆ; ಎಲ್ಲ ಕರಣೋಪಾಯಗಳೂ ಜ್ಞಾನವೆನಿಸಿಕೊಳ್ಳುತ್ತವೆ. ಈ ಜ್ಞೇಯ, ಜ್ಞಾನಗಳನ್ನು ತಿಳಿದುಕೊಳ್ಳುವಂಥ ತಿಳಿವೇ ಜ್ಞಾತೃತ್ವ ಎನಿಸುತ್ತದೆ. ಈ ಜ್ಞಾನ, ಜ್ಞೇಯ, ಜ್ಞಾತೃತ್ವ ಎಂಬ ಈ ಮೂರೂ ಸೇರಿ ತ್ರಿಪುಟಿ ಎನ್ನಿಸಿಕೊಳ್ಳುತ್ತದೆ. ಇಂಥ ತ್ರಿಪುಟಿಯನ್ನು ಮೀರಿದ ಅವಸ್ಥೆ (ಸ್ಥಿತಿ) ಯಾವುದು ಇದೆಯೋ ಅದೇ ಪರಮಾತ್ಮ ಪದ ಎಂದು ತಿಳಿ.

**ಶಬ್ದಾರ್ಥ:** **ತ್ರಿಪುಟಿ**=ಮೂರುದಲಗಳುಳ್ಳದ್ದು (ಜ್ಞಾನ, ಜ್ಞೇಯ, ಜ್ಞಾತೃ);

**ಟಿಪ್ಪಣಿ:** **ಜ್ಞಾನ**=ಅರಿವು, ತಿಳಿವಳಿಕೆ, ಶಾಸ್ತ್ರ ಜ್ಞಾನ, ತಾನು ಬ್ರಹ್ಮವೆಂಬ ಅರಿವು; **ಜ್ಞೇಯ**= ತಿಳಿದುಕೊಳ್ಳಬೇಕಾದುದು ಪರಬ್ರಹ್ಮ. ಅದಕ್ಕೆ ಆದಿ ಅಂತ್ಯಗಳಿಲ್ಲ. ಇದೆ, ಇಲ್ಲ ಎಂಬೆರಡರಿಂದಲೂ ಅದನ್ನು ಹೇಳಲಾಗುವುದಿಲ್ಲ. ಇರುವುದು ಅದೊಂದೇ ಪರಬ್ರಹ್ಮ. **ಜ್ಞಾತೃ**=ದೇಹದಲ್ಲಿರುವಂತೆ ತೋರಿ, ಇಂದ್ರಿಯಗಳ ಮೂಲಕ ಹೊರವಸ್ತುಗಳನ್ನು ಅರಿಯುವವನು. **ಅಶೇಷವು**=ಸಮಸ್ತ ವಸ್ತುಗಳೂ; **ಕರಣೋಪಾಯಗಳು**=ಇಂದ್ರಿಯಸಾಧನಗಳು; (ಪರಮಾರ್ಥಪದಕೋಶ ಪುಟ ೧೬೧, ೧೬೪)

---

**ಒತ್ತರದ ನಿದ್ರೆಯೊಳು ನಿಜಸುಖ**
**ವ್ಯಕ್ತವಾಗಿಯೆ ತೋರುತಿರಲದ**
**ಮರ್ತ್ಯ "ಸುಖಮಸ್ವಾಪ್ಸಮಹ" ಮಿಂತೆಂದು ಪೇಳುವನು; ।**

ಪ್ರತ್ಯಭಿಜ್ಞೆಯನಿಪ್ಪುದಾ ಸುಖ;
ನಿತ್ಯ ನಿರುಪಾಧಿಕವದಾಗಿಹ
ಸತ್ಯಸಹಜಾನಂದವದು ಪರಮಾತ್ರ ಪದವೆಂದ ॥ ॥೧೫॥

**ತಾತ್ಪರ್ಯ:** ಗಾಢನಿದ್ರೆ (ಸಕ್ಕರೆ ನಿದ್ರೆ)ಯಲ್ಲಿ ನಿಜವಾದ ಸುಖವು ಸ್ಪಷ್ಟವಾಗಿಯೆ ಕಾಣಿಸಿಕೊಂಡಾಗ ಅದನ್ನು ಮಾನವನು "ನಾನು ಸುಖವಾಗಿ ನಿದ್ದೆಗೈದೆನು" ಎಂಬುದಾಗಿ ಹೇಳುತ್ತಾನೆ. ನಿದ್ರೆಯಲ್ಲಿ ಅನುಭವಕ್ಕೆ ಬಂದ ಆ ಸುಖದ ನೆನಪೇ ಪ್ರತ್ಯಭಿಜ್ಞೆ ಎಂದೆನ್ನಿಸಿಕೊಳ್ಳುತ್ತದೆ. ಆದರೆ ಪರಮಾತ್ಮ ಪದವಾದರೇ ಉಪಾಧಿರಾಹಿತ್ಯವೂ, ಶಾಶ್ವತವೂ, ನಿತ್ಯವೂ ಆದ ಸಹಜಾನಂದಮಯವಾಗಿರುತ್ತದೆ.

**ಶಬ್ದಾರ್ಥ:** ಸುಖಮಸ್ವಾಪ್ಸಮಹಂ=ನಾನು ಸುಖವಾಗಿ ನಿದ್ದೆಗೈದೆನು; ಪ್ರತ್ಯಭಿಜ್ಞೆ=ಹಿಂದೊಮ್ಮೆ ನೋಡಿದ್ದನ್ನು ನಡುವೆ ಮರೆತಿದ್ದು ಆಮೇಲೆ ಗುರುತಿಸುವುದಕ್ಕೆ ಪ್ರತ್ಯಭಿಜ್ಞೆ ಎಂದು ಹೆಸರು. (ಇಲ್ಲಿ ಕವಿಯು ನಿದ್ರೆಯಲ್ಲಿ ಅನುಭವಕ್ಕೆ ಬಂದ ಸುಖದ ನೆನಪನ್ನು ಪ್ರತ್ಯಭಿಜ್ಞೆ ಎಂದಿದ್ದಾನೆ.
* ನಿರುಪಾಧಿಕ=ಉಪಾಧಿರಹಿತ;

**ಟಿಪ್ಪಣಿ:** ಉಪಾಧಿ=ಒಂದು ವಸ್ತುವಿನ ಸುತ್ತಲಿರುವುದು ಆ ವಸ್ತುವನ್ನು ತಿಳಿಯಲು ಅಡ್ಡಿಯಾದರೆ ಅದು ಉಪಾಧಿ ಇದು ವಸ್ತುವಿನ ಸ್ವರೂಪಕ್ಕೆ ಸಂಬಂಧಿಸಿಲ್ಲ.

**ಉದಾ:** ಆತ್ಮನಿಗೆ ದೇಹವು ಉಪಾಧಿ, ಈ ಉಪಾಧಿ ಇಲ್ಲದ್ದೆ ನಿರುಪಾಧಿಕ, ಉಪಾಧಿರಹಿತ. (ಪರಮಾರ್ಥಿಕ ಪದಕೋಶ, ಪುಟ-೯೯)

---

ಕತ್ತಲೆಗೆ ಸೈರಿಸದೆ ತೇಜವ
ನರ್ಥಿಸುವ ನಯನಗಳ ತೇಜೋ
ಮೂರ್ತಿಯೆಂತಂತಖಿಳ ದುಃಖವ ಸೈರಿಸದೆ ಸುಖವ ।
ಪ್ರಾರ್ಥಿಸುವ ನಿಜವಾದ ನಿರುಪಮ
ವಸ್ತುವೇ ಸುಖಮಯವದೆನಲೇ
ಕತ್ವವದು ಪರಮಾತ್ಮ ಪದವೆಂದರಿತುಕೋ ಎಂದ ॥ ॥೧೬॥

**ತಾತ್ಪರ್ಯ:** ತೇಜೋಮೂರ್ತಿಗಳಾದ ಕಣ್ಣುಗಳು ಕತ್ತಲೆಯನ್ನು ಸಹಿಸದೆ ಬೆಳಕನ್ನು ಬಯಸುವಂತೆ, ಸುಖಮಯನಾದ ಆತ್ಮನು ಸಮಸ್ತ ದುಃಖವನ್ನು ಸಹಿಸದೆ ಸತ್ಯವೂ ಅಸಮಾನವೂ ಆದ ವಸ್ತುವೇ ಸುಖಮಯವೆಂದೂ ಭಾವಿಸಿ ಒಂದಾಗುವುದೇ (ಏಕತ್ವವೇ) ಪರಮಾತ್ಮ ಪದವೆಂದು ತಿಳಿ.

**ಶಬ್ದಾರ್ಥ:** ನಯನಗಳ=ಕಣ್ಣುಗಳ; ಅರ್ಥಿಸುವ=ಅಪೇಕ್ಷಿಸುವ; ಕತ್ತಲೆಗೆ ಸೈರಿಸದೆ ತೇಜವನರ್ಥಿಸುವ ನಯನಗಳ ತೇಜೋಮೂರ್ತಿಯೆಂತು ಅಂತು ಅಖಿಲ ದುಃಖವ ಸೈರಿಸದೆ ಸುಖವ ಪ್ರಾರ್ಥಿಸುವ=ತೇಜೋಮೂರ್ತಿಗಳಾದ ಕಣ್ಣುಗಳು ಕತ್ತಲೆಯನ್ನು ಸಹಿಸದೆ ಬೆಳಕನ್ನು ಬಯಸುವಂತೆ ಸುಖಮಯನಾದ ಆತ್ಮನು ದುಃಖವನ್ನು ಸೈರಿಸದೆ ಸುಖವನ್ನೇ ಪ್ರಾರ್ಥಿಸುವನು ಎಂದರ್ಥ. (ದೃಷ್ಟಾಂತಾಲಂಕಾರ).

---

ಸ್ಥಾಲಿಯೊಳಗಿದ್ದಗ್ನಿ ಪುರುಷನು
ತೈಲಸಿಕ್ತದ ಬತ್ತಿಯೊಳು ಸ
ಮ್ಮೇಳವಾಗಲು ಸಕಲವಸ್ತುವ ಬೆಳಗುವಂದದಲಿ ।
ಸ್ಥೂಲ ಸೂಕ್ಷ್ಮಗಳಾದ ತತ್ತ್ವಗ
ಳೋಳಿಯೊಳಗಿಹ ಸ್ವಪ್ರಕಾಶವ
ಹೇಳಲೇನದು ಪರಮಪದವೆಂದರಿತುಕೋ ಎಂದ ॥ ॥೧೭॥

**ತಾತ್ಪರ್ಯ:** ಹಣತೆಯೊಳಗಿರುವ ಅಗ್ನಿಯು (ಬೆಳಕು) ಎಣ್ಣೆಯೊಳಗೆ ಅದ್ದಿದ ಬತ್ತಿಯಲ್ಲಿ ಸಮ್ಮಿಳಿತವಾಗಿ ಬೆಳಗಿ ಎಲ್ಲ ವಸ್ತುಗಳನ್ನು ಕಾಣಿಸುವ ರೀತಿಯಲ್ಲಿ ಸ್ಥೂಲ ಸೂಕ್ಷ್ಮಗಳಾದ ಪಂಚವಿಂಶತಿ ತತ್ವಗಳೆಲ್ಲ 'ಭಾತಿ' ಎಂಬಂಶವಾಗಿ ತೋರುವ ಸ್ವಪ್ರಕಾಶವೇ ಪರಮಪದವೆಂದು ತಿಳಿ.

**ಶಬ್ದಾರ್ಥ:** ಸ್ಥಾಲಿಯೊಳಗಿದ್ದು=ಹಣತೆಯಲ್ಲಿದ್ದು; ತೈಲಸಿಕ್ತದ=ಎಣ್ಣೆಯೊಳಗದ್ದಿದ; ತತ್ತ್ವಗಳೋಳಿಯೊಳಗಿಹ ಸ್ವಪ್ರಕಾಶವು=ಪಂಚವಿಂಶತಿ ತತ್ತ್ವಗಳಲ್ಲಿರುವ ಐದು ಅಂಶಗಳ ಪೈಕಿ ಭಾತಿ ಎಂಬಂಶವಾಗಿ ತೋರುವ ಅಸ್ತಿಭಾತಿ ಪ್ರಿಯಗಳೇ ಸಚ್ಚಿದಾನಂದ ಸ್ವರೂಪವಾದ ಆತ್ಮನ ಅಂಶಗಳು. ಈ ಪೈಕಿ ಭಾತಿ (ತೋರುತ್ತದೆ) ಎಂಬ ಪರಮಾತ್ಮನ ಸ್ವಪ್ರಕಾಶವೇ ಆಗಿದೆ. ಪರಮಪದ=ಮೋಕ್ಷ=ಪರಮಾತ್ಮಪದ;

**ಟಿಪ್ಪಣಿ:** ಜಗತ್ತೆಂಬುದು ಅಸ್ತಿ (ಇದೆ) ಭಾತಿ (ತೋರುತ್ತದೆ) ಪ್ರಿಯ (ಬೇಕೆನಿಸುವುದು) ನಾಮ (ಹೆಸರು), ರೂಪ (ಆಕಾರ) ಎಂಬ ಐದಂಶಗಳಿಂದ ಕೂಡಿದೆ. ಇವುಗಳಲ್ಲಿ ನಾಮರೂಪಗಳೆರಡೂ ಮಾಯೆಯ ಅಂಶಗಳು ಅಸ್ತಿಭಾತಿ ಪ್ರಿಯಗಳು ಆ ಸಚ್ಚಿದಾನಂದ ಸ್ವರೂಪವಾದ ಆತ್ಮನ ಅಂಶಗಳು. ಈ ಪದ್ಯವು ಭಾತಿ (ತೋರುತ್ತದೆ) ಎಂಬಂಶದ ಆತ್ಮ ಸ್ವರೂಪವನ್ನು ತಿಳಿಸುತ್ತದೆ.

---

ಜ್ಞಾನವೆಂಬಭಿಮಾನವಿಲ್ಲ
ಜ್ಞಾನವೇನೂ ತೋರದಾವಗ
ಭಾನುವಿನವೋಲ್ಬೆಳಗುವನು ಪ್ರಜ್ಞಾನನೆಂದೆನಿಸಿ; ।
ಧ್ಯಾನ ಮೌನಸಮಾಧಿಯಳಿದುಳಿ
ದಾ ನಿಜಾನಂದೈಕ ವಸ್ತುವೆ
ತಾನು ತಾನಾಗಿಪ್ಪುದದು ಪರಮಾತ್ಮಪದವೆಂದ ॥ ॥೧೮॥

**ತಾತ್ಪರ್ಯ:** ಜ್ಞಾನವೆಂಬ ಅಭಿಮಾನವಿಲ್ಲದೆಯೂ ಅಜ್ಞಾನವೆಂಬುದು ತೋರದೆಯೂ ಸದಾ ಕಾಲದಲ್ಲೂ ಪ್ರಜ್ಞಾನಮಯನು (ಜ್ಞಾನರೂಪಿ) ಎನಿಸಿ ಸೂರ್ಯನಂತೆ ಆತ್ಮನು ಬೆಳಗುತ್ತಿರುವನು. ಧ್ಯಾನ, ಮೌನ, ಸಮಾಧಿ ಮೊದಲಾದವೆಲ್ಲ ಅಳಿದು ಹೋದ ಮೇಲೆ ಉಳಿಯುವ ಆ ನಿಜಾನಂದ ರೂಪವಾದ ಅದ್ವೈತ ವಸ್ತು ತಾನೇ ತಾನಾಗಿ ಇರುವುದೇ ಪರಮಾತ್ಮಪದವಾಗಿದೆ.

**ಶಬ್ದಾರ್ಥ:** ಜ್ಞಾನವೆಂಬ ಅಭಿಮಾನವಿಲ+ಅಜ್ಞಾನವೇನೂ ತೋರದು ಎಂದು ಪದವಿಭಾಗ.

**ಟಿಪ್ಪಣಿ-೧: * ತೋರದು+ಆವಗ**=ಇಲ್ಲಿ ಆವಗಂ ಎಂದಿರಬೇಕು. ಆದರೆ ಛಂದಸ್ಸಿಗನುಗುಣವಾಗಿ ಆವಗ ರೂಪ ಬಂದಿದೆ. ಕಾವ್ಯಗಳಲ್ಲಿ ಈ ರೂಪದ ಬಳಕೆ ಸಾಮಾನ್ಯ.

**ಟಿಪ್ಪಣಿ-೨: ಧ್ಯಾನ ಮೌನ ಸಮಾಧಿಯಳಿದು**=ಧ್ಯಾನ, ಮೌನ, ಸಮಾಧಿ ಮೊದಲಾದ ಸಾಧನ ಗಳನ್ನೆಲ್ಲ ಬಿಟ್ಟು (ಸಿದ್ಧನಾದ ಮೇಲೆ) ಅವನು ಈ ಸಾಧನಗಳಿಗಾಗಿ ಪ್ರಯತ್ನಿಸುವುದಿಲ್ಲ.

---

**ಕರಣ ಮೊದಲಾಗಿರ್ಪುಪಾಧಿಯ**
**ಬೆರೆದುಕೊಂಡಿಹ ಜೀವನೇ ಸ**
**ದ್ಗುರುಕಟಾಕ್ಷವ ಪಡೆದು ತನ್ನ ನಿಜಸ್ವರೂಪವನು ।**
**ಅರಿದೊಡಪರೋಕ್ಷಾನುಭವ ಸು**
**ಸ್ಥಿರವದಾಗಲು ತಾನೆ ಸಾಕ್ಷಾ**
**ತ್ಕರಿಸಿಹುದು ಪರಮಾತ್ಮಪದವೆಂದರಿತುಕೋ ಎಂದ ॥ ॥೧೯॥**

**ತಾತ್ಪರ್ಯ:** ಕರಣ ಮೊದಲಾದವುಗಳೇ ತನ್ನ ಆತ್ಮವೆಂದು ತಿಳಿದುಕೊಂಡಿರುವ ಜೀವನೇ ಸದ್ಗುರುವಿನ ಅನುಗ್ರಹವನ್ನು ಪಡೆದು ಸ್ವಸ್ವರೂಪಜ್ಞಾನವನ್ನು ತಿಳಿದು ಕೊಂಡಾಗ ಅಪರೋಕ್ಷಾನುಭವವು ಸ್ಥಿರವಾಗಿ ನೆಲೆಗೊಂಡು ಬ್ರಹ್ಮಾನಂದವು ತಾನೇ ತಾನಾಗಿರುವುದು ಅದೇ ಪರಮಾತ್ಮ ಪದವೆಂದು ತಿಳಿ.

**ಶಬ್ದಾರ್ಥ: * ಉಪಾಧಿ**=ದೀಪಕ್ಕೆ ಹಣತೆಯೂ, ಬತ್ತಿಯೂ ಹೇಗೆ ಉಪಾಧಿಗಳೋ ಹಾಗೆ ಆತ್ಮನಿಗೆ ಸ್ಥೂಲಸೂಕ್ಷ್ಮಗಳಾದ ತತ್ವಗಳು ಉಪಾಧಿಗಳು (ಹಿಂದಿನ ಪದ್ಯದ ಟಿಪ್ಪಣಿ ನೋಡಿ) **ಬೆರೆದುಕೊಂಡಿಹ**=ಕರಣ ಮೊದಲಾದವುಗಳೇ ತನ್ನ ಆತ್ಮವೆಂದು ತಿಳಿದುಕೊಂಡಿರುವ.

**ಟಿಪ್ಪಣಿ: ಕರಣ**=ಇಂದ್ರಿಯಗಳು, ಬುದ್ಧಿಗೆ ದ್ವಾರವಾಗಿರುವ ಇಂದ್ರಿಯಗಳು, ಬುದ್ಧೀಂದ್ರಿಯಗಳು ಐದು; ಕರ್ಮೇಂದ್ರಿಯಗಳು ಐದು; ಮನಸ್ಸು ಒಂದು-ಹೀಗೆ ಹನ್ನೊಂದು ಇಂದ್ರಿಯಗಳೂ ಆತ್ಮನಿಗೆ ಸಾಧನಗಳಾಗಿರುವುದರಿಂದ ಕರಣಗಳು ಎನ್ನಿಸುವುವು. (ಪಾರಿಭಾಷಿಕಶಬ್ದಕೋಶ ಪುಟ-೧೦೩)

**ಟಿಪ್ಪಣಿ-೨: ಅಪರೋಕ್ಷಾನುಭವ**=ಸಚ್ಚಿದಾನಂದ ಬ್ರಹ್ಮವೇ ನಾನು ಎಂಬ ಯಾವ ತಿಳಿವಳಿಕೆ ಉಂಟೋ ಅದು ಅಪರೋಕ್ಷವಾಗಿ ಇದೆ. (ವಿಚಾರಚಂದ್ರೋದಯ-ಪುಟ-೪; ಶಾಂತಾನಂದ ಸ್ವಾಮಿ ಅನುವಾದ)

**ಟಿಪ್ಪಣಿ-೩: ಉಪಾಧಿ**=ಯಾವ ಪದಾರ್ಥವು ಎಷ್ಟು ದೇಶದಲ್ಲಿ ಇರುತ್ತದೋ ಅಷ್ಟು ದೇಶದಲ್ಲಿರುವ ಪದಾರ್ಥವನ್ನು ತೋರಿಸಿ ನಾನು ಅದಕ್ಕಿಂತ ಬೇರೆಯಾಗಿ ಇರುವುದು ಉಪಾಧಿ (ವಿಚಾರಸಾಗರ)=ಪುಟ ೧೨೮, ಶಾಂತಾನಂದ ಸ್ವಾಮಿ ಅನುವಾದ.

---

**ತಾಪ ಮೂರರ ಘಸಣೆಯಿಲ್ಲದೆ,**
**ಪಾಪಪುಣ್ಯದ ಲೇಪವಿಲ್ಲದೆ,**
**ರೂಪರಸಗಂಧಾದಿ ವಿಷಯವ್ಯವಹರಣೆಯಳಿದ ।**

**ದೀಪದಂದದಿ, ಮೂರವಸ್ಥೆಯ**
**ದೀಪಿಸುತ್ತೇಕತ್ವವಾಗಿ**
**ರ್ಪಾ ಪರಂಜ್ಯೋತಿಯೆ ಕಣಾ ಪರಮಾತ್ಮಪದವೆಂದ ॥ ॥೨೦॥**

**ತಾತ್ಪರ್ಯ:** ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಈ ತಾಪತ್ರಯಗಳಲ್ಲದೆ, ಪಾಪ-ಪುಣ್ಯಗಳ ಸ್ಪರ್ಶವಿಲ್ಲದೆ, ರೂಪರಸ ಗಂಧಶಬ್ದಸ್ಪರ್ಶಗಳೆಂಬ ವಿಷಯಗಳ ವ್ಯವಹಾರವಿಲ್ಲದೆ ಜ್ಯೋತಿಸ್ವರೂಪನಾಗಿರುವ ಜಾಗ್ರತೆ, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನು ಮೀರಿ ಅವುಗಳಲ್ಲಿ ಸಾಕ್ಷಿಯಾಗಿ ನೋಡುತ್ತಿರುವ ಅದ್ವಯನಾದ ಆ ಪರಂಜ್ಯೋತಿಯೇ ಪರಮಾತ್ಮ ಪದವೆಂದು ತಿಳಿ.

**ಶಬ್ದಾರ್ಥ:** ಆಧ್ಯಾತ್ಮಿಕ=ಶರೀರದಲ್ಲಿ ಹುಟ್ಟಿದ ರೋಗ ಮೊದಲಾದವುಗಳ ತೊಂದರೆ; ಆಧಿಭೌತಿಕ=ಇತರೆ ಪ್ರಾಣಿಗಳಿಂದ ಆಗುವ ಹಾನಿ; ಆಧಿದೈವಿಕ=ಭೂತಪಂಚಕಗಳಿಂದ ಆಗುವ ಕೇಡು; * ಘಸಣಿ=ತೊಂದರೆ, ಕೇಡು, ಹಾನಿ; * ಲೇಪ=ಸ್ಪರ್ಶ; * ವಿಷಯವ್ಯವಹರಣೆಯಳಿದ= ವಿಷಯಗಳ ವ್ಯವಹಾರಗಳಿಲ್ಲದ; ದೀಪ=ಜ್ಯೋತಿ ಸ್ವರೂಪ, ಸಾಕ್ಷಿ; ಏಕತ್ವ=ಅದ್ವಯ; * ದೀಪಿಸುತ್ತ= ಮೀರುತ್ತ, ಬೆಳಗುತ್ತ;

**ಪಾಠಾಂತರ:** ದೀಪದಂದದಿ ಮೂರವಸ್ಥೆಯ ದೀಪಿಸುತ್ತೇಕತ್ವವಾಗಿರ್ಪಾ=ದೀಪದಂತೇಕತ್ವವಾಗಿಯೆ ದೀಪಿಸುವ ಜಾಗ್ರದವಸ್ಥೆಯನಾ (ಕು)

---

**ತೋರುತಡಗುವ ಸಕಲದೊಳು ತಾ**
**ತೋರದಡಗದೆ, ಸಹಜವಾಗಿಯೆ**
**ತೋರುತಿರುತಾವಾಗಲೊಂದೇ ಪರಿಯೊಳೆಲ್ಲವನು ।**
**ತೋರಿಸುವ ಸ್ವಪರಪ್ರಕಾಶನ**
**ಪಾರನಿತ್ಯಾನಂದ ಸಂವಿ**
**ತ್ಸಾರವೇ ಪರಮಾತ್ಮ ಪದವೆಂದರಿತುಕೋ ಎಂದ ॥ ॥೨೧॥**

**ತಾತ್ಪರ್ಯ:** ಎಲ್ಲದರಲ್ಲೂ ಕಾಣಿಸಿಕೊಂಡು ಮರೆಯಾಗುವ, ಹುಟ್ಟಿ ತೋರುವುದು ಮತ್ತು ನಾಶವಾಗಿ ತೋರದೆ ಹೋಗುವುದು ಎಂಬ ವಿಕಾರವಿಲ್ಲದಿರುವ, ಪರ್ವತವು ನಿಂತಿದೆ ಎಂಬ ಪ್ರಯೋಗದಂತೆ ನಿತ್ಯವೂ ಸ್ವಭಾವ ಧರ್ಮದಿಂದ ಕಾಣಿಸುತ್ತಿರುವ, ಸದಾ ಕಾಲವು ಒಂದೇ ರೀತಿಯಾಗಿ ಎಲ್ಲದರಲ್ಲೂ ಅಭಿವ್ಯಕ್ತವಾಗಿರುವ, ತಾನೂ ಬೆಳಗುತ್ತ, ಬೇರೆಯವುಗಳನ್ನು ಬೆಳಗಿಸುವ ಅಪಾರವೂ ನಿತ್ಯಾನಂದವೂ ಆದ ಸುಜ್ಞಾನಸಾರವೇ ಪರಮಾತ್ಮ ಪದವೆಂದು ತಿಳಿ.

**ಶಬ್ದಾರ್ಥ:** ತೋರದಡಗದೆ=ಹುಟ್ಟಿ ತೋರುವುದು ಮತ್ತು ನಾಶವಾಗಿ, ತೋರದೆ ಹೋಗುವುದು ಎಂಬ ವಿಕಾರವಿಲ್ಲದಿರುವ; ಸಹಜವಾಗಿಯೆ=ಪರ್ವತವು ನಿಂತಿದೆ ಎಂಬ ಪ್ರಯೋಗದಂತೆ ನಿತ್ಯವೂ ಸ್ವಭಾವದಿಂದ; ಸ್ವಪರಪ್ರಕಾಶನ=ತಾನೂ ಬೆಳಗುತ್ತ, ಬೇರೆಯವುಗಳನ್ನು ಬೆಳಗಿಸುವವನ; * ಸಂವಿತ್ಸಾರ=ಸುಜ್ಞಾನಸಾರ, ಚಿತ್ಸಾರ, ಜ್ಞಾನಸ್ವರೂಪವು

---

**ಮೂರುತನು, ಮೂರಾದವಸ್ಥೆಯ,**
**ಮೂರುಗುಣಗಳ, ಮೂರು ಹಮ್ಮಿನ,**
**ಮೂರೆನಿಪ ತ್ರಿಪುಟಿಯ, ತಿವರ್ಗವ, ತ್ರಿಕರಣಂಗಳನು, ।**
**ಮೂರು ಕಾಲವ, ಮೂರುಲೋಕವ,**
**ಮೂರುಶಕ್ತಿಯ, ಮೂರುಗತಿಗಳ,**
**ಮೀರಿತೋರುವ ತುರ್ಯವೇ ಪರಮಾತ್ಮ ಪದವೆಂದ ॥ ॥೨೨॥**

**ತಾತ್ಪರ್ಯ:** ಸ್ಥೂಲ, ಸೂಕ್ಷ್ಮ, ಕಾರಣ ತನು ಎಂಬ ಮೂರು ಬಗೆಯ ಶರೀರಗಳನ್ನು ಜಾಗ್ರತ, ಸ್ವಪ್ನ, ಸುಷುಪ್ತಿಗಳೆಂಬ ಮೂರು ಬಗೆಯ ಅವಸ್ಥೆಗಳನ್ನು ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ವಿಧವಾದ ಗುಣಗಳನ್ನು, ವ್ಯಾವಹಾರಿಕ, ಪಾರಿಭಾಷಿಕ, ಪಾರಮಾರ್ಥಿಕಗಳೆಂಬ ಮೂರು ಬಗೆ ಅಹಂಗಳನ್ನು, ಜ್ಞಾನ, ಜ್ಞೇಯ, ಜ್ಞಾತೃತ್ವಗಳೆಂಬ ತ್ರಿಪುಟಿಯೂ, ತಂದೆ-ತಾಯಿ, ಗುರು ಅಥವಾ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗವನ್ನು, ಶರೀರ, ವಾಕ್ಕು, ಮನಸ್ಸುಗಳೆಂಬ ತ್ರಿಕರಣಂಗಳೂ, ವರ್ತಮಾನ, ಭೂತ, ಭವಿತ್ತೆಂಬ ಕಾಲಗಳನ್ನು, ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನು, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳನ್ನು, ದೇವತೋಪಾಸಕರ ದೇವಯಾನ, ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃ ಯಾಣವನ್ನು, ಕ್ಷುದ್ರ ಜಂತುಗಳ ನರಕಯಾನವನ್ನು, ಇವೆಲ್ಲವನ್ನೂ ಮೀರಿ ತೋರುವ ನಾಲ್ಕನೇ ಅವಸ್ಥೆಯೇ (ತುರೀಯ ಗತಿ) ಪರಮಾತ್ಮ ಪದವೆಂದು ತಿಳಿ.

**ಟಿಪ್ಪಣಿ-೧: ಮೂರುತನು**=ಸ್ಥೂಲ, ಸೂಕ್ಷ್ಮ, ಕಾರಣ ತನುಗಳು, ಇಲ್ಲಿ ಮೂರನೆಯ ತನು ಎಂದರೆ ಅವಿದ್ಯೆ. ವಿವರಗಳಿಗೆ ಅಃ, ಪಟಲನ್ನು ನೋಡಿ. ಇಲ್ಲಿ ತನುಗಳು ಮೂರಾಗುವುದಕ್ಕೆ ಸ್ಥೂಲ, ಸೂಕ್ಷ್ಮ ತನುಗಳ ಜೊತೆಗೆ ಪರತನುವನ್ನು ಸೇರಿಸಬಾರದು. ಏಕೆಂದರೆ ಇಲ್ಲಿಯ ಬ್ರಹ್ಮ ವಸ್ತು ಮೂರನೆಯ ತನುವನ್ನು ಮೀರಿದ್ದು. ಆದ್ದರಿಂದ ಇಲ್ಲಿ ಮೂರನೆಯ ತನು ಅವಿದ್ಯೆ. ಸುಷುಪ್ತಿಯಲ್ಲಿ ನಿಜವಾಗಿ ಎಚ್ಚರ ಕನಸುಗಳಂಥ ತನುವಿಲ್ಲದಿದ್ದರೂ ಜೀವನಿಗೆ ತನ್ನ ನಿಜವಾದ ಸ್ವರೂಪ ಜ್ಞಾನವು ಇಲ್ಲದೆ ಇರುವುದರಿಂದ ನಿದ್ರೆಯಲ್ಲಿ ಅವನಿಗೆ ಆ ಅಜ್ಞಾನವೇ ಶರೀರವೆಂದು ಶಾಸ್ತ್ರ ಕಲ್ಪಿಸಿರುವುದು ಆ ಕಲ್ಪಿತ ಶರೀರವೇ ಇಲ್ಲಿಯ ಮೂರನೇ ತನು.

**ಟಿಪ್ಪಣಿ-೨: ಮೂರುಗತಿ**=ದೇವತೋಪಾಸಕರ ದೇವಯಾನ, (ಇದಕ್ಕೆ ಶುಕ್ಲ ಮಾರ್ಗವೆಂದೂ ಅರ್ಚಿರಾದಿ ಮಾರ್ಗವೆಂದೂ ಹೆಸರು). ಇಷ್ಟಾ ಪೂರ್ತಗಳನ್ನು ಮಾಡಿದವರ ಪಿತೃಯಾಣ (ಇದಕ್ಕೆ ಕೃಷ್ಣ ಮಾರ್ಗವೆಂದೂ, ಧೂಮ ಮಾರ್ಗವೆಂದೂ ಹೆಸರು) ಇವೆರಡಕ್ಕೂ ಅರ್ಹರಲ್ಲದ ಕ್ಷುದ್ರ ಜಂತುಗಳಂತವರ ಹುಟ್ಟು-ಸಾವು. (ಇದರಲ್ಲಿಯೇ ನರಕವೂ ಸೇರಿತೆಂದು "ಅನಿಷ್ಟಾಧಿಕಾರಿಣಾಮಪಿ ಚಶ್ರುತಂ" ಎಂಬ ಬ್ರಹ್ಮ ಸೂತ್ರದ ಮೇಲಿನ ಭಾಷ್ಯದ ಭಾಮತೀಟೀಕಿನಲ್ಲಿ ಶ್ರೀ ವಾಚಸ್ಪತಿಮಿಶ್ರರು ಅರ್ಥವನ್ನು ಹೊರಡಿಸಿದ್ದಾರೆ.)

**ಟಿಪ್ಪಣಿ-೩:** * ಈ ಪದ್ಯದ ಕೆಲವು ಸಂಖ್ಯಾ ಪದಗಳಿಗೆ ಇತರ ಟೀಕಾಕಾರರು ಬೇರೆ ಬೇರೆ ಅರ್ಥ ಕೊಟ್ಟಿದ್ದಾರೆ. ತ್ರಿವರ್ಗಗಳು: ತಂದೆ, ತಾಯಿ, ಗುರು, ಅಥವಾ ಧರ್ಮ, **ಅರ್ಥ, ಕಾಮಗಳು (ಹೊಚಿ)**=ಹುಟ್ಟುವುದು, ಇರುವುದು, ಸಾಯುವುದು (ಅಂಗಡಿ ಮುದ್ರಣ)

ತ್ರಿಕಾಲಗಳು=ವರ್ತಮಾನ, ಭೂತ, ಭವಿಷ್ಯತ್ (ಹೊಚಿ)=ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲಗಳು (ಅಂಗಡಿ ಮುದ್ರಣ) ಮೂರು ಶಕ್ತಿ=ಇಚ್ಛಾ ಶಕ್ತಿ, ಜ್ಞಾನ ಶಕ್ತಿ, ಕ್ರಿಯಾ ಶಕ್ತಿ (ಹೊಚಿ)=ಆವರಣ, ವಿಕ್ಷೇಪ, ಚಿತ್ತ (ಕು)ಮೂರು ಗತಿ=ದೇವಯಾನ, ಪಿತೃಯಾಣ, ನರಕಯಾನ (ಹೊಚಿ)=ಪ್ರಾಪ್ಯ, ಪ್ರಾಪಕ, ಪ್ರಾಪ್ತಿ (ಅಂಗಡಿ ಮುದ್ರಣ) (ಕು) * ವಿವರಗಳಿಗೆ ಈ ಆಕರಗಳನ್ನು ನೋಡಿ; ಮೂರು ತನು=ಅ೩ ಪ೬೭೮: ಮೂರಾದವಸ್ಥೆ=ಅ೩ ಪ೮೯; ಮೂರು ಲೋಕ=ಅ೬ ಪ೨೪; ಮೂರು ಗುಣ=ಅ೩ ಪದ್ಯ ೭೭; ಮೂರು ಹಮ್ಮು=ಅ೪ ಪ೧೧

---

ಈ ಪರಿಯ ಪರಮಾತ್ಮ ಪದವ ನಿ
ರೂಪಿಸಲು, ಶುಕಮುನಿಯು ಚಿತ್ತದ
ತಾಪವಡಗೆ, ಮನೋನುರಾಗದಲುಬ್ಬಿ ಮುನಿಪತಿಯ ।
ಶ್ರೀಪದಾಂಬುಜಕೆರಗಿ ಭಕ್ತಿರ
ಸೋಪಭೋಗದಿ ನುತಿಸಿದನು ಸ
ತ್ಯಾಪವರ್ಗಿಕವೆನಿಪ ಸಹಜಾನಂದ ಗುರುಪದವ ॥ ॥೨೩॥

ತಾತ್ಪರ್ಯ: ವ್ಯಾಸ ಮಹರ್ಷಿಗಳು ಈ ರೀತಿಯಲ್ಲಿ ಪರಮಾತ್ಮ ಪದ ಸ್ವರೂಪವನ್ನು ವಿವರಿಸಿದಾಗ ಶುಕಮುನಿಯ ಮನಸ್ಸಿನ ತಳಮಳವು (ತಾಪವು) ಶಮನವಾಯಿತು. ಆಗ ಅವನ ಮನಸ್ಸು ಅನುರಾಗದಿಂದ ಉಬ್ಬಿ ಆನಂದದಿಂದ ಮಹರ್ಷಿಯ ಪಾದಾರವಿಂದಗಳಿಗೆ ಭಕ್ತಿ ರಸಾನುಭವದಿಂದ ಸತ್ಯ ಸ್ವರೂಪನಾದ ಮೋಕ್ಷದ ಸಂಬಂಧಿಯೆನಿಸಿದ ಸಹಜಾನಂದ ಗುರುವಿನ ಪಾದಗಳ (ಪರಮಾತ್ಮ ಪದವನ್ನು) ಧ್ಯಾನಿಸಿ ನಮಿಸಿದನು.

ಶಬ್ದಾರ್ಥ: ಸತ್ಯಾಪವರ್ಗಿಕ=ಸತ್ಯಸ್ವರೂಪನಾದ ಮೋಕ್ಷದ ಸಂಬಂಧಿಯಾದ, ಸಹಜಾನಂದಗುರು; * ಸಹಜಾನಂದ ಗುರುಪದ=ಪರಮಾತ್ಮಪದ, ಮಹಲಿಂಗಕವಿಯ ಗುರುವಾದ ಸಹಜಾನಂದನ ಪಾದಗಳು; * ನುತಿಸಿದನು=ಧ್ಯಾನಿಸುತ್ತಾ ನಮಿಸಿದನು; ಭಕ್ತಿರಸೋಪಭೋಗದಿ=ಭಕ್ತಿ ರಸಾನುಭವದಿಂದ;

---

ವ್ಯೋಮಕೇಶ, ಮಹೇಶ, ಶಂಕರ,
ಮಾಮದೇವ, ವರೇಣ್ಯ, ವರಗುಣ
ಧಾಮ, ವಾಸುಕಿಭೂಷ, ವೃಷಭಾರೂಢ, ವಿಶ್ವೇಶ, ।
ಭೀಮ, ಭರ್ಗ, ಕಪರ್ದಿ, ಶಿವ, ಸು
ತ್ರಾಮನಮಿತ, ಪಿನಾಕಿ, ಗಿರಿಜಾಕಾ
ಮುಕ, ಶ್ರೀಮಲ್ಲಿಕಾರ್ಜುನ, ಸಲಹು ಮೂಜಗವ ॥ ॥೨೪॥

ತಾತ್ಪರ್ಯ: ಆಕಾಶವನ್ನೇ ತಲೆಗೂದಲನ್ನಾಗಿ ಉಳ್ಳವನು (ವ್ಯೋಮಕೇಶ) ಸರ್ವಕ್ಕೂ ಪ್ರಭುವಾದವನು (ಮಹೇಶ), ಸಕಲರಿಗೂ ಸುಖದಾಯಕನು (ಶಂಕರ) ಎಡಭಾಗದಲ್ಲಿ

ಪಾರ್ವತಿಯನ್ನು ಧರಿಸಿದ ಅರ್ಧನಾರೀಶ್ವರನು, ಸರ್ವಶ್ರೇಷ್ಠನು (ವರೇಣ್ಯ), ಶ್ರೇಷ್ಠ ಗುಣಗಳಿಗೆ ಆಶ್ರಯದಾತನು (ವರಗುಣಧಾಮ), ವಾಸುಕಿಯೆಂಬ ಸರ್ಪವನ್ನು ಧರಿಸಿದವನು (ವಾಸುಕಿಭೂಷ), ನಂದಿವಾಹನನು, ಲೋಕಕ್ಕೆ ಒಡೆಯನು (ವಿಶ್ವೇಶ), ರುದ್ರನು (ಭೀಮನು), ಭರ್ಗನು (ಪಾಪಗಳನ್ನು ಸುಟ್ಟು ಭಸ್ಮ ಮಾಡುವವನು), ಜಟಾಮುಕುಟಧಾರಿ (ಕಪರ್ದಿ), ಕಲ್ಯಾಣಕಾರಕನು (ಶಿವ), ಸುತ್ರಾಮನಮಿತ (ದೇವೇಂದ್ರನಿಂದ ನಮಸ್ಕಾರಗಳನ್ನು ಪಡೆಯುವವನು), ಪಿನಾಕವೆಂಬ ಬಿಲ್ಲನ್ನು ಧರಿಸಿದವನು (ಪಿನಾಕಿ), ಪಾರ್ವತಿಗೆ ಪತಿ ಆದವನು (ಗಿರಿಜಾಕಾಮುಕ) ಮೂರೂ ಲೋಕಗಳನ್ನು (ಮೂಜಗವ) ಶ್ರೀಮಲ್ಲಿಕಾರ್ಜುನನೇ ಕಾಪಾಡು.

**ಶಬ್ದಾರ್ಥ: ಸುತ್ರಾಮನಮಿತ**=ಇಂದ್ರನಿಂದ ನಮಸ್ಕಾರಗಳನ್ನು ಪಡೆಯುವ; * **ವೃಷಭಾರೂಢ**=ನಂದಿವಾಹನ; * **ವಾಮದೇವ**=ಅರ್ಧನಾರೀಶ್ವರ; **ಭೀಮ**=ಯಾವನಿಗೆ ಅಂಜಿ ಎಲ್ಲರೂ ತಮ್ಮ ತಮ್ಮ ಎಲ್ಲೆ ಕಟ್ಟಿನಲ್ಲಿರುವರೋ ಆತನೇ ಭೀಮ; * **ವರೇಣ್ಯ**=ಶ್ರೇಷ್ಠ **ವಾಸುಕಿಭೂಷ**=ಸರ್ಪಭೂಷಣ, **ಪಿನಾಕಿ**=ಪಿನಾಕವೆಂಬ ಬಿಲ್ಲನ್ನು ಧರಿಸಿದವನು; **ಗಿರಿಜಾಕಾಮುಕ**=ಪಾರ್ವತೀ ಪ್ರಿಯ; **ಕಪರ್ದಿ**=ಜಟಾಧಾರಿ; **ಶಂಕರ**=ಸುಖವುಂಟು ಮಾಡುವವನು; **ವರಗುಣಧಾಮ**=ಶ್ರೇಷ್ಠಗುಣ ನಿಲಯನು; **ಭರ್ಗ**=ಪಾಪಗಳನ್ನೆಲ್ಲ ಸುಟ್ಟಿರುವಾತನು;

**ಟಿಪ್ಪಣಿ-೧: ವ್ಯೋಮಕೇಶ**=ಆಕಾಶವೇ ಯಾವಾತನಿಗೆ ಕೇಶವೋ ಆ ಶಿವನು ಅಥವಾ ಗಂಗೆಯನ್ನು ಧರಿಸಿದ ಕಾಲದಲ್ಲಿ ಆಕಾಶದಂತೆ ವ್ಯಾಪಿಸಿಕೊಂಡ ಜಟೆಯುಳ್ಳನಾದ್ದರಿಂದ ಶಿವನಿಗೆ ಹೆಸರು. (ಶಿವನಾಮಾಷ್ಟೋತ್ತರ ಶತಕ-ಪುಟ-೨೦)

**ಟಿಪ್ಪಣಿ-೨: ಮಹೇಶ:** ಶಿವನೆಂಬುದು ಕಾರಣರೂಪನಾದ ಪರಮೇಶ್ವರನ ನಾಮ; ಮಹೇಶನೆಂಬುದು ಕಾರ್ಯರೂಪನಾದ ಪರಮೇಶ್ವರನ ನಾಮ. ಈಶನೆಂದರೆ ಆಳುವವನು, ಇಂದ್ರಾದಿಗಳು ಸ್ವರ್ಗಾದಿಗಳನ್ನು ಆಳುತ್ತಾರಾದರೂ ಅವರಿಗೆ ನಿರಂಕುಶವಾದ ಈಶಿತೃತ್ವ ಇರುವುದಿಲ್ಲ. ಆದರೆ ಶಿವನು ಈಶ್ವರರಾದ ಇಂದ್ರಾದಿಗಳಿಗೂ ಈಶ್ವರನು. ಎಲ್ಲರನ್ನೂ ಆಳುವವನು. ಆದ್ದರಿಂದ ಅವನಿಗೆ ಮಹೇಶ್ವರನೆಂದು ಹೆಸರು (ಶಿವನಾಮಾಷ್ಟೋತ್ತರ ಶತಕ-ಪುಟ-೫; ಟೀಕೆ-ವೈ. ಸುಬ್ಬರಾವ್)

**ಟಿಪ್ಪಣಿ: ವೃಷಭಾರೂಢ**=ಧರ್ಮ ರೂಪದಿಂದ ಸರ್ವಕಾಮಗಳನ್ನು ಅನುಗ್ರಹಿಸುತ್ತಿರುವುದರಿಂದ ವೃಷಭನೆಂಬ ಹೆಸರು ಬಂದಿದೆ. ಶಿವನು ಪೂರ್ವಕಾಲದಲ್ಲಿ ಲೋಕಾನುಗ್ರಹಕ್ಕಾಗಿ ತಪಸ್ಸು ಮಾಡುತ್ತಿದ್ದಾಗ ಅಡ್ಡಿ ಮಾಡಿದ ಕೆಲವು ಗೋವುಗಳನ್ನು ರೋಷದಿಂದ ಸುಟ್ಟುಹಾಕಿದನು. ಆಗ ಒಂದು ಗೋವು ಶಿವನನ್ನು ಬಹುವಾಗಿ ಪ್ರಾರ್ಥಿಸಿ ಶಿವನ ಮನಸ್ಸನ್ನು ಒಲಿಸಿಕೊಂಡಿತು. ಅಂದಿನಿಂದ ಗೋವುಗಳು ಸಾಧುವಾದವು. ಅವುಗಳ ಬಣ್ಣ ಬದಲಿಸಿತು. ಶಿವನು ಆ ಎತ್ತನ್ನು ಧ್ವಜವನ್ನಾಗಿಯೂ ವಾಹನವನ್ನಾಗಿಯೂ ಮಾಡಿಕೊಂಡನು. (ಶಿವನಾಮಾಷ್ಟೋತ್ತರ ಶತಕ ಟೀಕೆ-ಪುಟ-೧೪)

## ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಪರಮಾತ್ಮಪದ ನಿರೂಪಣವೆಂಬ ಏಳನೆಯ ಅಧ್ಯಾಯವು ಮುಗಿದುದು.**

## ಸಾರಸಂಗ್ರಹ

### ಏಳನೆಯ ಅಧ್ಯಾಯ – ಪರಮಾತ್ಮಪದ ನಿರೂಪಣ

ಆ ಬ್ರಾಹ್ಮೀಸ್ಥಿತಿಯು ಹೇಳುವದಕ್ಕೆ ಆಳವಲ್ಲ. ಆದರೂ ಕೆಲವು ದೃಷ್ಟಾಂತರಗಳಿಂದ ಅದರ ಛಾಯೆಯನ್ನು ಮಾತ್ರ ಕೊಡಬಹುದು. ಶುದ್ಧವಾದ ಬುದ್ಧಿವೃತ್ತಿಯು ಆತ್ಮ ಜ್ಯೋತಿಯಲ್ಲಿ ಏಕರಸವಾದಾಗ ಕರ್ಪೂರವನ್ನು ಉರಿಯು ಆವರಿಸಿಕೊಂಡಂತೆ ಇರುವದು ಮತ್ತು ಬೆಳದಿಂಗಳಲ್ಲಿ ಸ್ಫಟಿಕದ ಪರ್ವತದ ಪ್ರಕಾಶವು ಬೇರೆಯಾಗಿ ತೋರದಂತೆ ಶುದ್ಧ ಮನಸ್ಸು ಪರಮಾತ್ಮನಲ್ಲಿ ಬೆರೆತಿರುವದು. ಆ ಜ್ಞಾನಿಯು ತನ್ನ ತನು ಕರಣಗಳ ಕರ್ಮಾನುಭವವನ್ನು ಅನ್ಯರ ಅನುಭವದಂತೆ ನೋಡುತ್ತಿರುವನು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ–ಆ ಸ್ಥಿತಿಯು ಮೂರು ತನುಗಳು, ಮೂರವಸ್ಥೆಗಳು, ಮೂರು ಗುಣಗಳು, ಮೂರು ಹಮ್ಮುಗಳು, ತ್ರಿಪುಟಿ, ತ್ರಿವರ್ಗ, ಮೂರು ಕರಣಗಳು, ಮೂರು ಕಾಲಗಳು, ಮೂರು ಲೋಕಗಳು, ಮೂರು ಶಕ್ತಿಗಳು, ಮೂರು ಗತಿಗಳು– ಇವುಗಳನ್ನೆಲ್ಲ ಮೀರಿದ್ದಾಗಿರುವದು.

*****

# ಎಂಟನೆಯ ಅಧ್ಯಾಯ

## ಮಾಯಾಮಿಥ್ಯಾತ್ವ ಪ್ರಕರಣ

**ಸೂಚನೆ॥**

ಸತ್ಯವಾದದ್ವೈತದಲಿ ತೋ
ರಿತ್ತು ಪುಸಿಯಹ ಮಾಯೆಯೆಂದೇ
ಕತ್ವವನು ಶುಕಮುನಿಗೆ ಸಾತ್ಯವತೇಯ ಬೋಧಿಸಿದ ॥

ತಾತ್ಪರ್ಯ: ಸತ್ಯವಾದ ಅದ್ವೈತ ವಸ್ತುವಿನಲ್ಲಿ ಮಿಥ್ಯೆಯಾದ ಮಾಯೆಯೆನ್ನುವುದು ಕಾಣಿಸಿತ್ತು ಎಂದು ಅದ್ವೈತದ ವಿಚಾರವನ್ನು ಸತ್ಯವತೀ ಪುತ್ರನಾದ ವ್ಯಾಸನು ಶುಕಮುನಿಗೆ ಉಪದೇಶಿಸಿದನು.

ಶಬ್ದಾರ್ಥ: * ಪುಸಿ=ಸುಳ್ಳು, ಮಿಥ್ಯೆ; * ಏಕತ್ವ=ಅದ್ವೈತ; * ಸಾತ್ಯವತೇಯ=ಸತ್ಯವತೀಯ ಪುತ್ರನಾದ; * ಬೋಧಿಸಿದನು=ಉಪದೇಶಿಸಿದನು;

---

ಬರಿದೆ ನಿಂದಿಸಿ ದಕ್ಷ ಹರನನು
ಕೊರೆಸಿಕೊಂಡನು ಕೊರಳ; ಮನ್ಮಥ
ದುರುಳತನದಲಿ ಸರಳತೊಟ್ಟವನುರಿದನಾಕ್ಷಣಕೆ; ।
ಮರುಳುಮಾನವಪಶುಗಳರಿಯದೆ
ಜರಿವರೀ ಶ್ರೀಶೈಲಪತಿಯನು;
ಪರಮಪಾತಕರುರುಳ್ವರಂಧತಮಿಸ್ರ ನರಕದಲಿ ॥ ॥೧॥

ತಾತ್ಪರ್ಯ: ದಕ್ಷ ಬ್ರಹ್ಮನು ನಿಷ್ಕಾರಣವಾಗಿ ಶಿವನನ್ನು ನಿಂದಿಸಿ ಶಿವನಿಂದ ಕತ್ತನ್ನ ಕೊಯಿಸಿಕೊಂಡನು (ಸಾವನ್ನಪ್ಪಿದನು) ದುರಹಂಕಾರದಿಂದ ಮನ್ಮಥನು ಶಿವನ ಮೇಲೆ ಬಾಣ ಹೂಡಿ ನೇತ್ರಾಗ್ನಿಯಿಂದ ಕೂಡಲೇ ಭಸ್ಮವಾದನು, ಅವಿವೇಕಿಗಳಾದ ಮಾನವಪಶುಗಳು (ಅಜ್ಞಾನದಿಂದ) ಶ್ರೀಶೈಲಮಲ್ಲಿಕಾರ್ಜುನನನ್ನು ನಿಂದಿಸಿ ಘೋರಪಾಪಿಗಳಾಗಿ ಏನೂ ಕಾಣದ ಕತ್ತಲೆಯ ಕೂಪವಾದ ಅಂಧತಮಿಸ್ರವೆಂಬ ನರಕದಲಿ ಹೊರಳಾಡುತ್ತಾರೆ.

ಶಬ್ದಾರ್ಥ: * ಬರಿದೆ=ನಿಷ್ಕಾರಣವಾಗಿ; ದಕ್ಷ=ದಕ್ಷಬ್ರಹ್ಮನು, ಪಾರ್ವತಿಯ ತಂದೆ, ಶಿವನ ಮಾವ; * ಕೊರಳ ಕೊರೆಸಿಕೊಂಡನು=ಸಾವನ್ನಪ್ಪಿದನು; ದುರುಳತನದಲಿ=ದುರಹಂಕಾರದಿಂದ; * ಸರಳತೊಟ್ಟು=ಬಾಣ ಹೂಡಿ; * ಉರಿದನು=ಭಸ್ಮವಾದನು; * ಆ ಕ್ಷಣಕೆ=ಕೂಡಲೆ; * ಮರುಳು =ಅಜ್ಞಾನಿ; * ಪರಮಪಾತಕರು=ಘೋರಪಾಪಿಗಳು; * ಉರುಳುವರು= ಹೊರಳಾಡುವರು;

**ಟಿಪ್ಪಣಿ-೧:** ದಕ್ಷ ಬ್ರಹ್ಮನ ಕಥೆಗೆ ಅಧ್ಯಾಯ-೨, ಪದ್ಯ ೫೮೮ರ ಟಿಪ್ಪಣಿ ನೋಡಿ;

**ಟಿಪ್ಪಣಿ-೨:** ಮನ್ಮಥನ ಕಥೆಗೆ ಅಧ್ಯಾಯ-೨, ಪದ್ಯ ೫೯೯ರ ಟಿಪ್ಪಣಿ ನೋಡಿ;

**ಟಿಪ್ಪಣಿ-೩:** ಅಂಧತಮಿಸ್ರ=ಏನೂ ಕಾಣದಷ್ಟು ಕತ್ತಲೆಯ ಅಂಧತಮಿಶ್ರ ಎಂಬ ನರಕ; ೩೨ ನರಕಗಳು. ಅವುಗಳಲ್ಲಿ ನರಕ, ಮಹಾನರಕ, ರಾಜನರಕ, ರಾಜರಾಜೇಶ್ವರ ನರಕ ಎಂದು ನಾಲ್ಕು ಬಗೆ ಇವೆ. ರಾಜರಾಜೇಶ್ವರ ನರಕಗಳು ೮ ಬಗೆ. ಅದರಲ್ಲಿ ೫ನೇ ನರಕ ಅಂಧತಮಿಶ್ರನರಕ (ವಿವೇಕಚೂಡಾಮಣಿ-ಪುಟ ೧೫೨, ತೃತೀಯಪರಿಚ್ಛೇದ)

---

## ದುರ್ಜನ ನಿಂದೆ

**ಕ್ರೂರರಿಗೆ, ಕುಪಥರಿಗೆ, ದುರ್ವ್ಯಾ**
**ಪಾರರಿಗೆ, ದುಷ್ಟರಿಗೆ, ಪಾಪಾ**
**ಚಾರರಿಗೆ, ಪರರತಿಶಯವ ಸೈರಿಸದ ಪಿಸುಣರಿಗೆ, ।**
**ಘೋರದುಃಖಾಗಾರವಹ ಸಂ**
**ಸಾರಸಾಗರ ಮಗ್ನರಿಂಗವಿ**
**ಚಾರಿಗಳಿಗುಸುರದಿರು ಮರೆದೀ ಅನುಭವಾಮೃತವ ॥** ॥೨॥

**ತಾತ್ಪರ್ಯ:** ಕಠಿಣಾತ್ಮರಿಗೆ, ದುರ್ಮಾರ್ಗಿಗಳಿಗೆ, ದುಷ್ಟಕೃತ್ಯ ಪ್ರವರ್ತಕರಿಗೆ, ನೀಚರಿಗೆ, ಪಾಪಾತ್ಮರಿಗೆ, ಪರರ ಶ್ರೇಯಸ್ಸನ್ನು ಸಹಿಸದ ಚಾಡಿಕೋರರಿಗೆ, ಭಯಂಕರವಾದ ದುಃಖಕ್ಕೆ ಮನೆಯಂತಿರುವ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವವರಿಗೆ, ವಿಚಾರ ಹೀನರಿಗೆ, ಅಪ್ಪಿ ತಪ್ಪಿಯೂ ಈ ಅನುಭವಾಮೃತವನ್ನು ಉಪದೇಶಿಸಬೇಡ.

**ಶಬ್ದಾರ್ಥ:** **ಕ್ರೂರರಿಗೆ**=ಕಠಿಣಾತ್ಮರಿಗೆ; * **ಕುಪಥರಿಗೆ**=ದುರ್ಮಾರ್ಗಿಗಳಿಗೆ; * **ದುಷ್ಟರಿಗೆ** =ನೀಚರಿಗೆ; * **ಪಾಪಾಚಾರರಿಗೆ**=ಪಾಪಕೃತ್ಯಗಳಲ್ಲಿ ನಿರತರಾಗಿರುವವರಿಗೆ; **ಪರರತಿಶಯವಸೈರಿಸದ**=ಅನ್ಯರ ಶ್ರೇಯಸ್ಸನ್ನು ಸಹಿಸದ; * **ಪಿಶುಣರಿಗೆ**=ಚಾಡಿಕೋರರಿಗೆ; **ಘೋರದುಃಖ+ಆಗಾರ+ಅಹ**= ಭಯಂಕರವಾದ ದುಃಖಕ್ಕೆ ಮನೆಯಂತಿರುವ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವವರಿಗೆ; * **ಅವಿಚಾರಿಗಳಿಗೆ**=ವಿಚಾರ ಹೀನರಿಗೆ; **ಮರೆತೂ**=ಅಪ್ಪಿತಪ್ಪಿಯೂ; **ಉಸುರದಿರು**= ಉಪದೇಶಿಸಬೇಡ;

**ಪಾಠಾಂತರ:** ಅವಿಚಾರಿಗಳಿಗುಸುರದಿರು=ಅವಿಚಾರವಂತರಿಗುಸುರಬ್ಯಾಡೀ (ಕು)

---

## ಸುಜನಸ್ತುತಿ

**ಶ್ರುತಿಗುರುಗಳುಪದೇಶವಾಕ್ಯದೊ**
**ಳತಿಶಯದ ವಿಶ್ವಾಸವುಳ್ಳರಿ**
**ಗಿತರ ಮತದಾಚರಣೆಗೆಳಸದ ಶುದ್ಧಮತಿಗಳಿಗೆ, ।**

**ಮಿತವಿಹಾರಾಹಾರಪರಿಭಾ**
**ಷಿತರಿಗಂತರ್ಮುಖದ ಬುದ್ಧಿಯ**
**ಗತಿಯನುಳ್ಳರಿಗೊಲಿದು ಪೇಳೀ ಅನುಭವಾಮೃತವ ॥ ॥೩॥**

**ತಾತ್ಪರ್ಯ:** ವೇದದಲ್ಲಿಯೂ ಗುರುಗಳು ಉಪದೇಶಿಸಿದ ವಾಕ್ಯಗಳಲ್ಲಿಯೂ ಅಪಾರವಾದ ನಂಬಿಕೆಯಿರುವವರಿಗೆ, ಅದ್ವೈತ ಬಿಟ್ಟು ಇತರ ಸಿದ್ಧಾಂತಗಳನ್ನು ಅನುಸರಿಸಲು ಇಚ್ಛಿಸದ ನಿರ್ಮಲ ವಿಚಾರಿಗಳಿಗೆ ಆಹಾರ, ವಿಹಾರ ಮಾತುಕತೆಗಳಲ್ಲಿ ಮಿತವಾಗಿರುವವರಿಗೆ ಅಂತರ್ಮುಖಿಗಳಾಗಿ ವಿಚಾರಶೀಲರಾದವರಿಗೆ ಈ ಅನುಭವಾಮೃತವನ್ನು ಪ್ರೀತಿಯಿಂದ ಹೇಳು.

**ಶಬ್ದಾರ್ಥ:** * **ಶ್ರುತಿ**=ವೇದ; * **ಅತಿಶಯ**=ಅಪಾರ; * **ಇತರಮತದಾಚರಣೆಗೆ**=ಅದ್ವೈತ ಬಿಟ್ಟು ಇತರ ಸಿದ್ಧಾಂತಗಳನ್ನು ಅನುಸರಿಸಲು ಇಚ್ಛಿಸದ; **ಪರಿಭಾಷಿತರು**=ಮಾತುಕತೆಗಳನ್ನು ಆಡುವವನು; **ಗತಿಯನು**=ಪ್ರವೃತ್ತಿಯನ್ನು, ಒಲವನ್ನು;

---

## ಪ್ರಶ್ನೆ (೪–೫)

**ಬೆಸಸೆನಗೆ ಗುರುರಾಯ, ಮಾಯೆಯ**
**ದೆಸೆಯೊಳೀ ಮಹದಾದಿ ತತ್ತ್ವ**
**ಪ್ರಸರದಿಂ ಬ್ರಹ್ಮಾಂಡತಂಡಗಳುದಿಸಿ ತೋರುತಿರೆ ।**
**ಉಸುರಬಾರದತರ್ಕ್ಯಮಾಗಿ**
**ರ್ಪಸಮತೇಜೋರಾಶಿಯದರೊಳು**
**ಪಸರಿಸಿರುತಿಹುದೆಂಬುದಿದು ಹೊಸಪರಿಯಲಾ! ಎಂದ ॥ ॥೪॥**

**ತಾತ್ಪರ್ಯ:** ಮಾಯೆಯ ದೆಸೆಯಿಂದ ಮತತ್ತತ್ವ ಮೊದಲಾದ ಬ್ರಹ್ಮಾಂಡ ತಂಡಗಳು ಉದಿಸಿ ಪ್ರಕಾಶಿಸುತ್ತಿರುವಾಗ ಮಾತನ್ನು ಮೀರಿದ ಮನಸ್ಸಿಗೆ ನಿಲುಕದ ಅಸಮಾನ ತೇಜಸ್ವರೂಪನಾದ ಆತ್ಮನು ಅದರಲ್ಲಿ ವ್ಯಾಪಿಸಿರುವನೆಂಬುದು ವಿನೂತನ ಸಂಗತಿಯಾಗಿದೆಯಲ್ಲವೇ! ಈ ವಿಚಾರವನ್ನು ಎನಗೆ ವಿವರಿಸು ಗುರುವೆ ಎಂದು ಶುಕನು ಕೇಳಿದನು.

**ಶಬ್ದಾರ್ಥ:** **ಮಾಯೆಯ ದೆಸೆಯೊಳು**=ಮಾಯೆಯ ದೆಸೆಯಿಂದ; **ಉಸುರಬಾರದ**=ಹೇಳಲಿಕ್ಕಾಗದಂಥ (ವಾಕ್ಕಿಗೆ ನಿಲುಕದಂಥ); **ಅತರ್ಕ್ಯಮಾಗಿರ್ಪ**=ಊಹಿಸುವುದಕ್ಕೆ ಆಗದಿರುವ (ಮನಸ್ಸಿಗೆ ನಿಲುಕದಂಥ); * **ಹೊಸಪರಿ**=ವಿನೂತನ ಸಂಗತಿ; **ಪ್ರಸರದಿಂ**=ಪ್ರಕಾಶಿಸುತ್ತಿರುವಾಗ;

**ಟಿಪ್ಪಣಿ:** * **ಮಹದಾದಿತತ್ತ್ವ**=ಆ ಪ್ರಕೃತಿಯೇ ಭೋಗ್ಯಾತ್ಮಕತ್ವದಿಂ ಪಾಶಪದಾರ್ಥವೆನಿಸಿಕೊಂಡು ಗುಣತ್ರಯ ಸಮಾನಾವಸ್ಥೆಯಿಂದಿರ್ದು ಬಳಿಕ ಅವಿದ್ಯೆಯೊಳ್ ಪ್ರತಿಬಿಂಬಿಸಿರ್ದ ಜೀವರ ಭೋಗಾರ್ಥ ಮಾಗಿ ಸಕಲ ಕಾರ್ಯಮಾಗಲೊಸುಗಂ ಈಶ್ವರ ಸನ್ನಿಧಾನ ಲಕ್ಷಣ ನೋಟ ಮಾತ್ರದಿಂ ವಿಕರಿಸಿ ಮೊದಲು ಕಾಲತತ್ತ್ವವಂ ಪಡೆದು ಮೇಲಾ ಕಾಲವಶದಿಂ ಪರಿಣಮಿಸಿ ಮಹತ್ತತ್ವವೆನಿಸುವುದು. **ಮಹದಾದಿ ತತ್ವಪ್ರಸರ**=ಇದರ ವಿವರಣೆಗೆ ನಿಜಗುಣ ಶಿವಯೋಗಿಗಳ

ವಿವೇಕಚಿಂತಾಮಣಿ ಪ್ರಥಮಪರಿಚ್ಛೇದ ನೋಡಿ. (ವಿವೇಕ ಚಿಂತಾಮಣಿ ಪರಿಚ್ಛೇದ ಪುಟ–೩೩, ಸಂ: ಉಮಾಪತಿ ಶಾಸ್ತ್ರಿ)

ಟಿಪ್ಪಣಿ–೨: * ಮಹದಾದಿತತ್ತ್ವ=ಆತ್ಮ ಮೂರು ವಿಧ; ಜ್ಞಾನಾತ್ಮ=ಬುದ್ಧಿ; ಮಹಾನಾತ್ಮ=ಮಹತ್ತತ್ವ; ಶಾಂತಾತ್ಮ=ಶುದ್ಧ ಬ್ರಹ್ಮ. ಇದರಲ್ಲಿ ಜ್ಞಾನಾತ್ಮ ಎಂದರೆ ಅಂತಃಕರಣರೂಪದ ಬುದ್ಧಿ; ಒಬ್ಬ ಆತ್ಮನಿಗೆ ಮಾತ್ರ ಪ್ರಕಾಶ. ಉಪಾಧಿಯಿಂದ ಬೇರೆ ವೃತ್ತಿ ಇರುವಾಗಲೆ; ಮಹಾನಾತ್ಮ ಎಂದರೆ ಜ್ಞಾನಾತ್ಮನ ಮೇಲಿನ ಸ್ಥಿತಿ; ಈಶ್ವರ ಮಾತ್ರ ಎಲ್ಲಾ ಆತ್ಮಗಳಿಗೂ ಪ್ರಕಾಶ ಸಮಷ್ಟಿ ಬುದ್ಧಿ; ಶಾಂತಾತ್ಮ ಎಂದರೆ ಅಂತಃಕರಣದ ಸ್ಥಿತಿ, ಸಪ್ತ ಭೂಮಿಕೆಯಲ್ಲಿ ಏಳನೇ ಭೂಮಿಕೆ. ತನ್ನಲ್ಲಿಯೂ ಎಲ್ಲರಲ್ಲಿಯೂ ತಿಳಿಯತಕ್ಕದ್ದು.

(ವಿಚಾರ ಚಂದ್ರೋದಯಗ್ರಂಥ; ವೇದಾಂತಸಿದ್ಧಾರ್ಥ ಸಂಜ್ಞಾ ವರ್ಣನ=ಪುಟ–೧೬; ಭಕ್ತರೊಬ್ಬರ ಟಿಪ್ಪಣಿಯಿಂದ.)

---

ಮಂಜಮೊಟ್ಟೆಯ ಕಟ್ಟುತದರೊಳು
ಪಂಜಿನುರಿಯನು ಪಿಡಿದ ತೆರದಲಿ,
ಸಂಜೆಗತ್ತಲೆಯೆನಿಪ ವಸನವನುಡಿಗೆಗಳವಡಿಸಿ ।
ರಂಜಿಸುವ ರವಿಯಂತೆ ತೇಜಃ
ಪುಂಜಮಾಗಿಹ ಬೊಮ್ಮ ಮಾಯಾ
ಪಂಜರದೊಳಡಗಿರ್ಪುದಿದು ಬೆರಗಾದುದೆನಗೆಂದ ॥ ॥೫॥

ತಾತ್ಪರ್ಯ: ಮಂಜನ್ನು ಮೂಟೆಯನ್ನಾಗಿ ಕಟ್ಟಿ ಅದಕ್ಕೆ ದೀವಟಿಗೆ ಉರಿಯನ್ನು ಹಿಡಿದುಕೊಂಡ ರೀತಿಯಲ್ಲಿ, ಸಂಜೆಯ ಕತ್ತಲೆ ಎಂಬ ವಸ್ತ್ರವನ್ನು ಉಡುಪಾಗಿ ಧರಿಸಿಕೊಂಡು ಪ್ರಕಾಶಿಸುವ ಸೂರ್ಯನಂತೆ ತೇಜೋಮಯನಾದ ಬ್ರಹ್ಮನು ಮಾಯೆಯೆಂಬ ಪಂಜರದೊಳಗೆ ಸೇರಿರುವನು ಎಂಬ ಸಂಗತಿ ನನಗೆ ಅಚ್ಚರಿ ಉಂಟು ಮಾಡುತ್ತಿದೆ ಎಂದು ಶುಕನು ಹೇಳಿದನು.

ಶಬ್ದಾರ್ಥ: ಮಂಜ=ಮಂಜನ್ನು, ಇಬ್ಬನಿಯನ್ನು; * ಮೊಟ್ಟೆಯ ಕಟ್ಟುತ=ಮೂಟೆಯಾಗಿ ಕಟ್ಟಿ; * ಪಂಜಿನುರಿಯನು=ದೀವಟಿಗೆಯ ಉರಿಯನ್ನು; * ಪಿಡಿದರೀತಿಯಲಿ=ಹಿಡಿದುಕೊಂಡಂತೆ; * ವಸನ=ವಸ್ತ್ರ; ಉಡಿಗೆಗೆ+ಅಳವಡಿಸಿ=ಉಡುಪಾಗಿ ಮಾಡಿ ಕೊಂಡು; * ತೇಜಃಪುಂಜ=ಬೆಳಕಿನ ರಾಶಿ, ತೇಜೋಮಯ; ಬೊಮ್ಮ=ಬ್ರಹ್ಮ;

---

ಬ್ರಹ್ಮಮಾಯೆಗಳೆರಡು ತಮ್ಮೊಳ
ಗೊಮ್ಮೆಯೂ ಬೇರೆನಿಸದಾವಗ
ನೆಮ್ಮಿಕೊಂಡಿಹವವರ ಪರಿಯನು ತಿಳುಹಬೇಕೆನಲು ।
ಬ್ರಹ್ಮವೆತ್ತಲೊ! ಮಾಯೆಯೆತ್ತಲೊ!
ಚರ್ಮದೃಷ್ಟಿಗೆ ಮಾಯೆ ತಥ್ಯವು;
ನಿರ್ಮಲಾತ್ಮಜ್ಞಾನ ದೃಷ್ಟಿಗೆ ಮಿಥ್ಯೆನೋಡೆಂದ ॥ ॥೬॥

**ತಾತ್ಪರ್ಯ:** ಬ್ರಹ್ಮ ವಸ್ತು ಮಾಯೆಗಳೆರಡೂ ಬೇರೆಯಾದರೂ ಒಮ್ಮೆಯೂ ಭಿನ್ನವೆನಿಸದೆ ಒಂದನ್ನೊಂದು ಸದಾ ಆಶ್ರಯಿಸಿಕೊಂಡಿರುವ ರೀತಿ ಹೇಗೆ ಎಂಬುದನ್ನು ತಿಳಿಸಬೇಕೆಂದು ಶುಕನು ವ್ಯಾಸನನ್ನು ಕೇಳಿದನು. ಆಗ ವ್ಯಾಸನು ಹೇಳಿದನು ಬ್ರಹ್ಮಕ್ಕೂ, ಮಾಯೆಗೂ ಎತ್ತಣದ ಸಂಬಂಧ? (ಸಂಬಂಧವಿಲ್ಲ) ಅದೆಲ್ಲೊ! ಇದೆಲ್ಲೊ! ನಮ್ಮ ಚರ್ಮದೃಷ್ಟಿಗೆ (ದೃಷ್ಟಿಗೆ) ಮಾಯೆ ಸತ್ಯವಷ್ಟೆ ಆದರೆ ನಿರ್ಮಲವಾದ ಜ್ಞಾನವನ್ನು ಪಡೆದವರ ವಿಚಾರದೃಷ್ಟಿಗೆ ಅದು ಸುಳ್ಳು ಎಂದು ತಿಳಿ.

**ಶಬ್ದಾರ್ಥ:** * ಆವಗ=ಸದಾ; ನೆಮ್ಮಿಕೊಂಡಿಹವು=ಆಶ್ರಯಿಸಿಕೊಂಡಿರುವುವು; * ಪರಿ=ರೀತಿ; ಚರ್ಮ ದೃಷ್ಟಿಗೆ=ಸ್ಥೂಲ ದೃಷ್ಟಿಗೆ, ವಿಚಾರವಿಲ್ಲದ ದೃಷ್ಟಿಗೆ; ಮಾಯೆ ತಥ್ಯವು=ಮಾಯೆ ನಿಜವು; ನಿರ್ಮಲಾತ್ಮಕ ಜ್ಞಾನ ದೃಷ್ಟಿಗೆ=ನಿರ್ಮಲವಾದ ಜ್ಞಾನವನ್ನು ಪಡೆದವರ ವಿಚಾರದೃಷ್ಟಿಗೆ; ಮಿಥ್ಯೆ=ಸುಳ್ಳು;

---

**ಮಗನೆ ಮಾಯೆಯ ಪರಿಯ ತಿಳಿಯಲು**
**ನಗೆಯಲಾ! ನಾಟಕದ ಬೊಂಬೆಯ**
**ಬಗೆಯೊಳಡಗುತ ತೋರುತಿರ್ಪುದು ಮಿಂಚಿನಂದದಲಿ; ।**
**ಬೆಗಡ ಬೀರುತ ನಾಮರೂಪಿನ**
**ಲೊಗೆದ ಬಹುಭೇದಾವಲಂಬನ**
**ಜಗದುದಯವದರಿಂದಲಾದುದು ತ್ರಿಗುಣಮಯವಾಗಿ ॥ ॥೭॥**

**ತಾತ್ಪರ್ಯ:** ಶುಕನೇ ಕೇಳು, ಮಾಯೆಯ ರೀತಿಯನ್ನು ತಿಳಿಯಲಿಕ್ಕೆ ಯತ್ನಿಸುವುದು ನಗೆಪಾಟಲಿನ ಸಂಗತಿಯಾಗಿದೆ. ಸೂತ್ರದ ಗೊಂಬೆಯ ನಾಟಕದಲ್ಲಿ ಬೊಂಬೆಗಳು ರಂಗದಿಂದ ಅಚ್ಚರಿಯಿಂದ ಮರೆಯಾಗುತ್ತ ಮತ್ತೆ ಮಿಂಚಿನಂತೆ ಕಾಣಿಸಿಕೊಂಡು ಬೆರಗನ್ನುಂಟು ಮಾಡುತ್ತವೆ. ಹಾಗೆ ಮಾಯೆಯು ಹಲವು ನಾಮರೂಪಗಳ ಮೂಲಕ ಹತ್ತಾರು ಭೇದಗಳನ್ನು ಅವಲಂಬಿಸಿಕೊಂಡು ಸತ್ತ್ವ, ರಜ, ತಮ ಗುಣ ಗಳಿಂದ ಜಗತ್ತಾಗಿ ಕಾಣಿಸಿಕೊಳ್ಳುತ್ತದೆ. ಅದರಿಂದಲೇ ಉತ್ಪತ್ತಿ ಸ್ಥಿತಿಲಯಗಳಾಗುತ್ತವೆ.

**ಶಬ್ದಾರ್ಥ:** ಬಗೆಯೊಳ್=ರೀತಿಯಿಂದ; ಬೆಗಡಬೀರುತ=ಬೆಡಗನ್ನು (ಬೆರಗನ್ನು) ತೋರುತ್ತ; ಬಹುಭೇದಾವಲಂಬನ ಜಗದ=ಬಹಳ ಭೇದಗಳನ್ನು ಅವಲಂಬಿಸಿಕೊಂಡಿರುವ ಜಗತ್ತಿನ; * ತ್ರಿಗುಣಮಯವಾಗಿ=ಸತ್ತ್ವ, ರಜ, ತಮ ಗುಣಗಳನ್ನು ಒಳಗೊಂಡು;

**ಟಿಪ್ಪಣಿ:** * ಪ್ರಕೃತಿಯು ಮಾಯಾ, ಅವಿದ್ಯಾ, ತಮಃಪ್ರಧಾನ ಎಂದು ರೂಪಾಂತರಗಳಿಂದ ವಿಭಾಗವನ್ನು ಹೊಂದಿರುತ್ತದೆ. ಇದರಲ್ಲಿ ಯಾವುದು ಶುದ್ಧ ಸತ್ತ್ವ ಗುಣವೋ ಅದು ಮಾಯೆ (ಶುದ್ಧ ಸತ್ತ್ವ ಗುಣವೆಂದರೆ ರಜ, ತಮಗಳನ್ನು ತಾನು ಅಡಗಿಸಿಕೊಂಡಿರುವ ಸತ್ತ್ವಗುಣ). ಯಾವುದು ಮಲಿನ ಸತ್ತ್ವ ಗುಣಯುಕ್ತವೋ ಅದು ಅವಿದ್ಯೆಯಾಗಿದೆ (ರಜ ತಮಗಳಿಂದ ತಾನು ಅಡಗಿಕೊಂಡಿರುವ ಸತ್ತ್ವ ಗುಣ, ಮಲಿನ ಸತ್ತ್ವಗುಣ ಯಾವುದು ತಮೋ ಗುಣದ ಮುಖ್ಯತ್ವದಿಂದ ಯುಕ್ತವಾಗಿದೆಯೋ ಅದು ತಮಃ ಪ್ರಧಾನ ಕೃತಿ ಆಗಿದೆ. (ವಿಚಾರಚಂದ್ರೋದಯ, ಪುಟ ೨೩, ದ್ವಿತೀಯ ಪ್ರತಿ, ಅನು: ಸುಬ್ಬಣ್ಣ)

---

ಶುದ್ಧವಾದದ್ವೈತಬ್ರಹ್ಮವ
ದಿದ್ದುದಿದ್ದಂತಿದ್ದುದಪ್ರತಿ
ಬದ್ಧ ತೇಜಃಪುಂಜ; ತಾನೇ ಸ್ವಪ್ರಕಾಶವದು; ।
ಸಿದ್ಧವಾಗಿದಿರಿಟ್ಟು ತೋರು
ತ್ತಿದ್ದಪರಿಯಲಿ ತನಗೆ ತಾನೇ
ವೇದ್ಯವೆಂಬಭಿಸಂಧಿಯಲಿ ಪುಟ್ಟಿದುದು ಪುಸಿಮಾಯೆ ॥ ॥೮॥

ತಾತ್ಪರ್ಯ: ಶುದ್ಧವಾದ ಅದ್ವೈತವಾದ ಬ್ರಹ್ಮವು ಇದ್ದುದ್ದು ಇದ್ದಂತೆಯೇ ಎಂದರೆ ಸ್ವಭಾವಸಿದ್ಧವಾಗಿದೆ. ಯಾವುದರಿಂದಲೂ ತಿರಸ್ಕರಿಸಲಾಗದಂಥ ಪ್ರಕಾಶದ ಸಮೂಹ ವಾಗಿದೆ. ಸ್ವಯಂ ಪ್ರಕಾಶವಾಗಿದೆ. ಅದು ತನ್ನನ್ನು ತಾನೇ ಇದಿರಿಟ್ಟಂತೆ ನೋಡಬೇಕೆಂದು ಮನಸ್ಸು ಮಾಡಿದ ಕಾಲದಲ್ಲಿ ಹಾಗೆ ಕಾಣುವುದು. ಸುಳ್ಳಾದ ರೂಪವೇ ಆಗಿರುತ್ತದೆ. ಏಕೆಂದರೆ ನೋಡುವವನಾದವನು ಇದ್ದಂತೆ ಇರಲೇ ಬೇಕಾದುದರಿಂದ ಕಾಣುವುದೆಲ್ಲ ಮಾಯಿಕವೆಂದು ಅರಿಯಬೇಕು. ಹೀಗಾಗಿ ಮಾಯೆ ಎನಿಸಿತು.

ಶಬ್ದಾರ್ಥ: ಅಪ್ರತಿಬದ್ಧತೇಜಃಪುಂಜ=ಯಾವುದರಿಂದಲೂ ತಿರಸ್ಕರಿಸಲಾಗುವುದಕ್ಕಾಗದಂಥ ಪ್ರಕಾಶದ ಸಮೂಹ; ತನಗೆ ತಾನೇ ವೇದ್ಯವೆಂಬ ಅಭಿಸಂಧಿಯಲಿ=ತನ್ನನ್ನು ತಾನೇ ಇದಿರಿಟ್ಟಂತೆ ನೋಡಬೇಕೆಂದು ಮನಸ್ಸು ಮಾಡಿದ ಕಾಲದಲ್ಲಿ; * ಪುಸಿಮಾಯೆ=ಸುಳ್ಳಾದ ಮಾಯೆ; * ಅಭಿಸಂಧಿಯಲ್ಲಿ=ಪ್ರಯತ್ನದಲ್ಲಿ;

ಟಿಪ್ಪಣಿ–೧: ಪುಸಿ ಮಾಯೆ=ತನಗೆ ತಾನು ವೇದ್ಯವಾಗುವುದು ಆಗದ ಮಾತು. ಆದರೂ ವೇದ್ಯವಾಗುವುದಕ್ಕೆ ಇದಿರಾಗಿ ಕಾಣುವುದಕ್ಕೆ ಪ್ರಯತ್ನ ಪಟ್ಟರೆ ಹಾಗೆ ಕಾಣುವುದು ಸುಳ್ಳಾದ ರೂಪವೇ ಆಗಿರಬೇಕು. ನೋಡುವವನಾದ ತಾನು ಇದ್ದಂತೆ ಇರಲೇಬೇಕಾದುದರಿಂದ ಕಾಣುವುದೆಲ್ಲ ಮಾಯಿಕವೆಂದು ಅರಿಯಬೇಕು.

---

ಕೋಟಿಸೂರ್ಯಪ್ರಭೆಯ ಮೀರಿದ
ಸಾಟಿಯಲ್ಲದ ಬ್ರಹ್ಮತೇಜಃ
ಕೂಟದ ಮಹಾಲಹರಿ; ಮಾಯಾ ನಾಟಕಿಯ ಹೊಳಹು ।
ಪಾಟಿಯಲ್ಲದ ನೋಡಿ ತಿಳಿದರೆ
ಬೂಟಕವು ಭ್ರಮಿತರಿಗೆ ಖಡ್ಗದ
ನೀಟವಹ ಹೊಗರಂತೆ; ಚಿಜ್ಜ್ಯೋತಿಯ ವಿಲಾಸವದು ॥ ॥೯॥

ತಾತ್ಪರ್ಯ: ಕೋಟಿ ಸೂರ್ಯರ ಕಾಂತಿಯನ್ನು ಮೀರಿರುವ ಅಸಮಾನ ಅದ್ವಯ ಬ್ರಹ್ಮತೇಜಃಪುಂಜವಾದ ಮಹಾ ಪ್ರವಾಹವಾಗಿದೆ. ವಿಚಾರ ಮಾಡಿದರೆ ಮಾಯೆಯೆಂಬ ನಾಟಕಿಯ (ನಟಿಯ) ಹೊಳಪು ಬ್ರಹ್ಮಕ್ಕೆ ಸಮಾನವಲ್ಲ. ಆದರೆ ಭ್ರಮಿತರಿಗೆ ಮಾಯೆ ಕತ್ತಿಯನ್ನು ಝಳಪಿಸಿದಾಗ ಅದರ ಹೊಳಪೇ ಒಂದು ಕತ್ತಿಯಂತೆ ಕಾಣುತ್ತದೆ, ಆದರೆ ಅದು ಸುಳ್ಳು. ಜ್ಞಾನದೃಷ್ಟಿಯಿಂದ ನೋಡಿದರೆ ಮಾಯೆ ಚಿಜ್ಜ್ಯೋತಿಯ ವಿಲಾಸವಾಗಿದೆ.

**ಶಬ್ದಾರ್ಥ: * ಕೋಟಿ ಸೂರ್ಯಪ್ರಭೆ**=ಕೋಟಿ ಸೂರ್ಯರ ಕಾಂತಿ; * **ಸಾಟಿಯಿಲ್ಲದ**=ಅಸಮಾನ; **ಬ್ರಹ್ಮತೇಜಃಪುಂಜ**=ಬ್ರಹ್ಮತೇಜಸ್ಸುಗಳ ಕೂಟವಾದ; **ಅದನೋಡಿತಿಳಿದರೆ**=ವಿಚಾರ ಮಾಡಿದರೆ; **ಹೊಗರಂತೆ ಬೂಟಕವು**=ಕತ್ತಿಯನ್ನು ಝಳಪಿಸಿದಾಗ ಅದರ ಹೊಳಪೇ ಒಂದು ಕತ್ತಿಯಂತೆ ಕಾಣುವುದಷ್ಟೆ; **ಭ್ರಮಿತರಿಗೆ**=ಭ್ರಾಂತರಿಗೆ (ಮಾಯೆಗೆ ಒಳಗಾದವರಿಗೆ); **ಚಿಜ್ಜ್ಯೋತಿಯ ವಿಳಾಸವೆ ಅದು**=ಆದರೆ ಜ್ಞಾನದೃಷ್ಟಿಯಿಂದ ನೋಡಿದರೆ ಮಾಯೆಯ ಹೊಳಪು ಕೂಡ ಚಿಜ್ಜ್ಯೋತಿಯ ವಿಳಾಸವೇ ಆಗಿದೆ.

---

**ನೆಲ್ಲ ಬೀಜದೊಳೊಗೆದು ತೋರುವ**
**ಜಳ್ಳಿನಂದದಿ ತಿಳಿಯೆ ನಿಜವಾ**
**ಗುಳ್ಳಬ್ರಹ್ಮದೊಳಿಲ್ಲವೆನಿಸುವ ಸುಳ್ಳಿನೀ ಮಾಯೆ ।**
**ಹೊಳ್ಳು ತನ್ನೊಳಗೆಲ್ಲ ನೋಡಲು**
**ಗುಳ್ಳೆಯುದಕದೊಳುದಿಸಿದಂದದಿ,**
**ಸಿಳ್ಳುಗಣ್ಣಿಗೆ ಹಗಲು ಮಂಜಾಗೆಸೆದು ತೋರ್ಪಂತೆ ॥ ॥೧೦॥**

**ತಾತ್ಪರ್ಯ:** ಬತ್ತದ ಕಾಳಿನಲ್ಲಿ ಹುಟ್ಟಿ ಕಾಣುತ್ತಿರುವ ಜಳ್ಳಿನ ಹಾಗೆ ನಿಜವಾದ ಶುದ್ಧ ಬ್ರಹ್ಮದಲ್ಲಿ ಇರದ ಮಿಥ್ಯೆಯಾದ ಈ ಮಾಯೆ ಒಳಗೆ ತಿರುಳಿಲ್ಲದ ಹೊಳ್ಳಾಗಿ (ಟೊಳ್ಳಾಗಿ)ರುತ್ತದೆ. ವಿಚಾರ ಮಾಡಿ ನೋಡಿದರೆ, ನೀರಿನಲ್ಲಿ ಗುಳ್ಳೆ ಹುಟ್ಟುವ ರೀತಿಯಲ್ಲಿ ಪರೆ ಬಂದ ಕಣ್ಣಿಗೆ (ಸಿಳ್ಳುಗಣ್ಣಿಗೆ) ಹಗಲು ಮಬ್ಬು ಮಬ್ಬಾಗಿ (ಮಂಜು ಮಂಜಾಗಿ) ಕಾಣಿಸುವ ಹಾಗೆ ಮಾಯೆ ನಿಜವಾದ ಬ್ರಹ್ಮದಲ್ಲಿ ಇರುವುದಿಲ್ಲ.

**ಶಬ್ದಾರ್ಥ: ಹೊಳ್ಳು**=ಒಳಗೆ ತಿರುಳಿಲ್ಲದ್ದು; **ಜಳ್ಳು**=ಟೊಳ್ಳು; * **ನೆಲ್ಲ ಬೀಜ**=ಬತ್ತದ ಕಾಳು; * **ಗುಳ್ಳೆ**=ಬುದ್ಬುದ, ಬೊಬ್ಬಳ್ಳಿ; **ಮಂಜಾಗಿ**=ಮಬ್ಬಾಗಿ, ಮಂಕಾಗಿ; * **ಸಿಳ್ಳುಗಣ್ಣಿಗೆ**=ಪರೆ ಬಂದ ಕಣ್ಣಿಗೆ, ಪಿಸುರುಕಣ್ಣಿಗೆ; * **ಸಿಳ್ಳು**=ಕಣ್ಣಿನ ಪಿಸುರು, ಗೀಜು, ಜಿಬುರು;

---

**ಪುಸಿಯೆನಿಪ ಮಾಯಾಪ್ರಪಂಚವ**
**ದೆಸೆವ ಬ್ರಹ್ಮದಿ ತೋರಿತೆಂತೆನೆ**
**ಬಿಸಿಲದೊರೆ ಸೂರ್ಯನ ಮರೀಚಿಯೊಳುದಿಸಿ ತೋರ್ಪಂತೆ, ।**
**ಮುಸುಕಿಕೊಂಡಿಹ ಧೂಮವಗ್ನಿಯೊ**
**ಳೆಸೆದು ತೋರ್ಪಂತುಷ್ಣ ನದಿಯೊಳು**
**ಪಸರಿಸಿರ್ಪಂದದಲಿ ರಂಜಿಸಿತಸಮತೇಜದಲಿ ॥ ॥೧೧॥**

**ತಾತ್ಪರ್ಯ:** ಬರಿಯ ಸುಳ್ಳಾದ ಅಸಹಜ ಮಾಯೆ ಸಹಜವೂ ಸತ್ಯವೂ ಆದ ಬ್ರಹ್ಮದಲ್ಲಿ ಹೇಗೆ ತೋರಿತು ಎಂದರೆ ಸೂರ್ಯನ ಕಿರಣಗಳಿಂದ ಮೃಗಜಲ (ಬಿಸಿಲುಕುದುರೆ) ಹುಟ್ಟಿ ಕಾಣಿಸಿಕೊಳ್ಳುವ ಹಾಗೆ, ಅಗ್ನಿಯಲ್ಲಿ ಹೊಗೆ ಹುಟ್ಟಿ ಕಾಣಿಸಿಕೊಳ್ಳುವಂತೆಯೂ, ನದಿ ನೀರಿನಲ್ಲಿ ಶಾಖವು (ಉಷ್ಣವು) ಹರಡುವಂತೆಯೂ,

ಅಸಮಾನ ತೇಜೋಮಯನಾದ ಬ್ರಹ್ಮದಲ್ಲಿ ಮಿಥ್ಯಾಕಲ್ಪಿತವೆಂಬ ಭ್ರಾಂತಿ ಭಾವದಿಂದ ಹುಟ್ಟಿದ ಮಾಯೆಯು ಕಂಗೊಳಿಸುತ್ತದೆ.

**ಶಬ್ದಾರ್ಥ:** ಮರೀಚಿ=ಕಿರಣ; ಅಸಮತೇಜದಲಿ=ಬಹಳ ತೇಜೋಮಯವಾದ ಬ್ರಹ್ಮದಲ್ಲಿ; * ಬಿಸಿಲದೊರೆ=ಬಿಸಿಲಮರೀಚಿಕೆ, ಬಿಸಿಲಕುದುರೆ, ಮೃಗಜಲ; * ಧೂಮ=ಹೊಗೆ; * ಅಗ್ನಿ=ಬೆಂಕಿ; * ಉಷ್ಣ=ಬಿಸಿ, ಶಾಖ, ರಂಜಿಸಿತು=ಕಂಗೊಳಿಸುತ್ತಿದೆ.

---

**ಜಗದೊಳುತ್ಪಾತಗಳು ನಾನಾ**
**ಬಗೆಯೊಳುದಿಸುವ ತೆರದಿ, ನೋಡಲು**
**ಗಗನದಲಿ ಗಂಧರ್ವನಗರಗಳೆಸೆದು ತೋರ್ಪಂತೆ, ।**
**ಅಗಣಿತದ ಬ್ರಹ್ಮಾಂಡತಂಡಗ**
**ಳೊಗೆದು ಬ್ರಹ್ಮದೊಳಾದ ಪರಿಯೊಳೆ**
**ಮಗನೆ ತೋರ್ಪುವು ದಿಟಗಳಂದದಿ ಸಟೆಯ ಮಾಯೆಗಳು ॥ ॥೧೨॥**

**ತಾತ್ಪರ್ಯ:** ಜಗತ್ತಿನಲ್ಲಿ ಉಲ್ಕಾಪಾತ (ಪರಕೆಯ ಚುಕ್ಕೆ) ಮೊದಲಾದ ಅಪಶಕುನದ ಸೂಚನೆಗಳು ನಾನಾ ರೀತಿಗಳಲ್ಲಿ ಕಾಣಿಸಿಕೊಳ್ಳುವ ಹಾಗೆ, ಆಕಾಶದಲ್ಲಿ ಗಂಧರ್ವ ನಗರಗಳು ಕಾರಣವಿಲ್ಲದೆ ತೋರುವಂತೆ, ಅಸಂಖ್ಯಾತ ಬ್ರಹ್ಮಾಂಡಗಳು ಬ್ರಹ್ಮದಿಂದ ಹುಟ್ಟಿತು ಎಂಬಂತೆಯೇ (ಬ್ರಹ್ಮದಿಂದ ಹುಟ್ಟಿಲ್ಲದಿದ್ದರೂ) ಕಾಣುವ ಹಾಗೆ, ನಿಜದ ರೂಪದಂತೆ ತೋರಿಕೆಯಲ್ಲಿ ಮಿಥ್ಯೆಯಾದ ಮಾಯೆ ಕಾಣಿಸಿಕೊಳ್ಳುತ್ತದೆ.

**ಶಬ್ದಾರ್ಥ:** * ಬಗೆಯೊಳು=ರೀತಿಯಲ್ಲಿ; **ಉತ್ಪಾತಗಳು**=ಭೂಕಂಪ, ಉಲ್ಕಾಪಾತ ಮುಂತಾದ ಆಕಸ್ಮಿಕ ಘಟನೆಗಳು, ಅಪಶಕುನಗಳು, ಪರಕೆಯ ಚುಕ್ಕೆ ಮೊದಲಾದ ಅಪಶಕುನದ ಸೂಚನೆಗಳು; ಒಗೆದು=ಹುಟ್ಟಿ; * ಗಂಧರ್ವ ನಗರ=ಮಾಯಾನಗರ; **ಅಗಣಿತ**=ಹುಟ್ಟಿ; * ಬ್ರಹ್ಮಾಂಡ **ತಂಡಗಳು**=ಬ್ರಹ್ಮಾಂಡ ಸಮೂಹಗಳು; ದಿಟ=ನಿಜ; **ಸಟೆ**=ಸುಳ್ಳು; **ಬ್ರಹ್ಮದೊಳಾದ ಪರಿ**=ಬ್ರಹ್ಮದಿಂದ ಹುಟ್ಟಿತೆಂಬಂತೆಯೇ (ಅಂದರೆ ಬ್ರಹ್ಮದಿಂದ ಹುಟ್ಟಿಲ್ಲ ಎಂದರ್ಥ);

**ಟಿಪ್ಪಣಿ: ಉತ್ಪಾತಗಳು**– ಪರಕೆಯ ಚುಕ್ಕೆ (ಉಲ್ಕಾಪಾತ) ಮೊದಲಾದ ಅಪಶಕುನದ ಸೂಚನೆಗಳು, ಇಲ್ಲಿ ಮಾಯೆಗೆ ಉತ್ಪಾತದ ಹೋಲಿಕೆಯನ್ನು ಕೊಟ್ಟಿರುವುದರಿಂದ ಮಾಯೆಗೆ ಒಳಗಾಗುವುದು. ಅಮಂಗಲಕರವೆಂದು ಹೇಳಿದಂತೆ ಆಯಿತು ಮತ್ತು ಉತ್ಪಾತಗಳು ಗಂಧರ್ವ ನಗರಗಳೂ ಕಾರಣವಿಲ್ಲದೆ ತೋರುವಂತೆ ಮಾಯೆಯ ಕಾರ್ಯವು ಕಾರಣವಿಲ್ಲದೆ ತೋರುವುದೆಂದು ತಾತ್ಪರ್ಯ.

---

## ನಿಜವಾಗಿರುವುದು ಬ್ರಹ್ಮವೆ (೧೩–೨೫)

**ದಾರು ದಂತಿವಿಕಾರದಂದದಿ**
**ತೋರಿತಲ್ಲದೆ ದಂತಿಯುಳಿದಾ**
**ದಾರುವನು ತಾ ಬೇರೆ ತೋರಿತೆ? ನಾಮರೂಪಗಳ ।**

**ತೋರಿಕೆಯ ಕಲ್ಪಿತವು ನಿಜವೇ?**
**ದಾರುವಿನ ಪರಿ ಬ್ರಹ್ಮ ಜಗದಾ**
**ಕಾರವಾಗಿಯೆ ತೋರಿತಲ್ಲದೆ ಬೇರೆ ಜಗವಿಲ್ಲ ॥** ॥೧೩॥

**ತಾತ್ಪರ್ಯ:** ಮರದಿಂದ ಮಾಡಿದ ಆನೆಯು ಮರದ ಇನ್ನೊಂದು ರೂಪವಾಗಿ ಕಾಣುತ್ತದೆ ಅಷ್ಟೆ. ಆನೆಯನ್ನು ಬಿಟ್ಟು ಆ ಮರವನ್ನು ಬೇರೆಯಾಗಿ ಕಾಣಲಾದೀತೆ? ಮರ, ಆನೆ ಎಂಬೆರಡು ನಾಮರೂಪಗಳಲ್ಲಿ ವ್ಯತ್ಯಾಸವಷ್ಟೆ. ಮರವೇ ನಿಶ್ಚಯರೂಪ ಆನೆ ರೂಪ ಭೇದ. ಜಗದಾಕಾರವಾಗಿ ಬ್ರಹ್ಮ ಕಾಣಿಸಿಕೊಂಡಿದ್ದಾನೆ. ಜಗತ್ತು ಆನೆಯಂತೆ ಕಲ್ಪಿತ ರೂಪವೇ ಹೊರತು ಬೇರೆಯಲ್ಲ. ಜಗತ್ತು ಸ್ವತಂತ್ರವಲ್ಲ.

**ಶಬ್ದಾರ್ಥ:** ದಾರು=ಕಟ್ಟಿಗೆಯ, ಮರ; ದಂತಿವಿಕಾರದಂದದಿ=ಆನೆಯ ಆಕಾರದ ಹಾಗೆ; ದಂತಿಯುಳಿದು=ಆನೆಯನ್ನು ಬಿಟ್ಟು;

**ಟಿಪ್ಪಣಿ:** ದಾರು, ದಂತಿವಿಕಾರದಂದದಿ ಎಂಬ ಉದಾಹರಣೆಯನ್ನು ಉಪಯೋಗಿಸಿ ಶ್ರೀ ಸದಾಶಿವ ಬ್ರಹ್ಮರು ಅದ್ವೈತ ತಾರಾವಳಿ ಗ್ರಂಥದಲ್ಲಿ ಹೇಳಿರುವುದೇನೆಂದರೆ:

ದಂತಿನಿ ದಾರುವಿಕಾರೇ ।
ದಾರು ತಿರೋಭವತಿ ಸೋಽಪಿ ತತ್ರೈವ ॥
ಜಗತಿ ತಥಾ ಪರಮಾತ್ಮಾ ।
ಪರಮಾತ್ಮನ್ಯಪಿ ಜಗತ್ತಿರೋಧತ್ತೆ ॥

**ಪಾಠಾಂತರ:** ದಂತಿಯುಳಿದಾ=ದಂತಿ ಬಿಟ್ಟಾ (ಕು); ನಾಮರೂಪಗಳ=ನಾಮರೂಪುಗಳ (ಕು); ದಾರುವಾಪರಿ=ದಾರುವಿನ ಪರಿ (ಕು);

---

**ಲೋಹಮಯವಹ ಪ್ರತಿಮೆಯಾಸನ,**
**ವಾಹನವು, ವಸ್ತ್ರಾಭರಣ, ಸ**
**ಮ್ಮೋಹವಾಗಿರ್ಪಂತೆ ತೋರ್ಪ ಸಮಸ್ತ ವಸ್ತುಗಳ ।**
**ರೂಹುನಾಮಗಳೆಲ್ಲ ಮಾಯಾ**
**ಮೋಹ ಮಾತ್ರಗಳೆಂದು ತಿಳಿಯವ**
**ನೂಹಿಸಲು ಬೇರಿಲ್ಲ; ಸರ್ವವು ಬ್ರಹ್ಮಮಯವೆಂದ ॥** ॥೧೪॥

**ತಾತ್ಪರ್ಯ:** ಪಂಚಲೋಹಗಳಿಂದ ಎರಕ ಹೊಯ್ದು ಸಿದ್ಧಪಡಿಸಿದ ವಿಗ್ರಹ, ಪೀಠ, ಆಭರಣಗಳೆಲ್ಲ ಮತ್ತು ವಾಹನ, ವಸ್ತ್ರಗಳೆಲ್ಲ ನೋಟಕ್ಕೆ ಅಂದವಾಗಿ ಆಕರ್ಷಕವಾಗಿ ತೋರುವಂತೆ, ದೃಶ್ಯಗಳಾಗಿರುವ (ಕಾಣಿಸಿಕೊಳ್ಳುವ) ಸಮಸ್ತ ವಸ್ತುಗಳ ನಾಮಗಳೂ ರೂಪುಗಳೆಲ್ಲವೂ ಮಾಯೆಯೆಂಬ ಆಕರ್ಷಣೆಯಿಂದ ಕೂಡಿರುತ್ತದೆ ಎಂದು ತಿಳಿದರೆ. ಅವು ಬ್ರಹ್ಮಕ್ಕಿಂತ ಬೇರೆಯಲ್ಲ ಎಂದರಿವಾಗುತ್ತದೆ. ಆದ್ದರಿಂದ ಈ ಜಗತ್ತೆಲ್ಲವೂ ಬ್ರಹ್ಮವೇ ಆಗಿದೆ (ಸರ್ವಂ ಖಲ್ವಿದಂ ಬ್ರಹ್ಮ) ಎಂದು ತಿಳಿಯಬೇಕು.

**ಪಾಠಾಂತರ:** * ರೂಹು=ರೂಪು (ಕು); * ತಿಳಿಯವನೂಹಿಸಲು=ತಿಳಿದವನೂಹಿಸಲು (ಕು); * ಸರ್ವವು ಬ್ರಹ್ಮಮಯ=ಸರ್ವಂ ಬ್ರಹ್ಮ ಮಯ (ಕು) ಅನುಭವಾಮೃತ ಟೀಕೆ ಪುಟ-೨೨೦;

**ಶಬ್ದಾರ್ಥ:** ರೂಹು ನಾಮಗಳೆಲ್ಲ=ಪ್ರತಿಮೆ, ಆಸನ ಮೊದಲಾದವುಗಳ ರೂಪಗಳೂ ಹೆಸರುಗಳೂ ಎಲ್ಲ; ಅವನು ಊಹಿಸಲು ಬೇರಿಲ್ಲ=ಆ ಪ್ರತಿಮೆ, ಆಸನ, ಮೊದಲಾದವನ್ನು ಕುರಿತು ವಿಚಾರ ಮಾಡಿದರೆ ಲೋಹಕ್ಕಿಂತ ಬೇರೆ ಅಲ್ಲ (ಲೋಹವೇ ಆಗಿದೆ); ಸರ್ವವೂ ಬ್ರಹ್ಮಮಯವೆಂದ=ಸರ್ವಂ ಖಲ್ವಿದಂ ಬ್ರಹ್ಮ;

---

**ಬೆಲ್ಲದಲಿ ಬಹುವಿಧದ ಮಾಟದ**
**ಬಿಲ್ವ, ಪಸನ, ರಸಾಲ, ದಾಡಿಮ,**
**ನೆಲ್ಲಿ ಮೊದಲಾದ ಖಿಲಫಲಗಳ ನಾಮರೂಪಗಳು ।**
**ಸೊಲ್ಲು ಮಾತ್ರಗಳೈಸೆ! ಸವಿಯಲ**
**ವೆಲ್ಲ ಮಾಧುರ್ಯಂಗಳಾ ಪರಿ**
**ಯೆಲ್ಲವಿವು ಪರಬೊಮ್ಮವಲ್ಲದೆ ಬೇರೆ ಜಗವಿಲ್ಲ ॥ ॥ ೧೫ ॥**

**ತಾತ್ಪರ್ಯ:** ನಾನಾ ವಿಧಗಳಲ್ಲಿ ರೂಪುಗೊಂಡ ಘನವಸ್ತುಗಳಲ್ಲಿ ಬಿಲ್ವ, ಹಲಸು, ಮಾವು, ದಾಳಿಂಬೆ, ನೆಲ್ಲಿ ಮೊದಲಾದ ಎಲ್ಲ ಹಣ್ಣುಗಳ ನಾನಾ ಬಗೆಯ ಹೆಸರು ಆಕಾರಗಳು ಕೇವಲ ಮಾತಿನಲ್ಲಿ ವ್ಯತ್ಯಾಸ ಕಾಣುವಂತಹವು ಅಷ್ಟೆ ಅವೆಲ್ಲ ರುಚಿಯಲ್ಲಿ ಸಿಹಿಯಾದವು (ಮಧುರವಾದವು). ಅದೇ ರೀತಿಯಲ್ಲಿ ಈ ಜಗತ್ತಿನ ಬಗೆ ಬಗೆಯ ಭೇದಗಳೆಲ್ಲವು ಪರಬ್ರಹ್ಮವಲ್ಲದೆ ಬೇರೆ ಅಲ್ಲ.

**ಶಬ್ದಾರ್ಥ:** ಪಸನ=ಪನಸ; ಹಲಸು, ರಸಾಲ=ಮಾವು; ದಾಡಿಮ=ದಾಳಿಂಬೆ; ಸೊಲ್ಲು ಮಾತ್ರಗಳು=ಮಾತು ಮಾತ್ರದವು; ಎಲ್ಲವು=ಈ ಜಗತ್ತಿನ ಬಗೆ ಬಗೆಯ ಭೇದಗಳೆಲ್ಲ; ಐಸೆ=ಆಗೆದೆಯಲ್ಲವೆ (ಆಗಿದೆ)

**ಟಿಪ್ಪಣಿ:** * ಪಸನ=ಪನಸ ಅಕ್ಷರಪಲ್ಲಟವಾಗಿದೆ (ಸ>ನ) ಅಸಗ=ಅಗಸ ಎಂಬಂತೆ ಕನ್ನಡದಲ್ಲಿ ಈ ಬಗೆಯ ಪದಗಳು ಹಲವುಂಟು.

**ಶಬ್ದಾರ್ಥ:** ಬಹು ವಿಧದ ಮಾಟದ ಬೆಲ್ಲದಲಿ=ನಾನಾ ವಿಧಗಳಲ್ಲಿ ರೂಪುಗೊಂಡ ಸಿಹಿ ವಸ್ತುಗಳಲ್ಲಿ.

---

**ತಂತುವೇ ಪಟ; ಮೃತ್ತಿಕೆಯೆ ಘಟ**
**ವಂತು ಜಲವೆ ತರಂಗವಾ ಪರಿ**
**ಯಂತೆ ಸ್ವರ್ಣವೆ ವಿವಿಧ ಭೂಷಣವಾಗಿ ತೋರ್ಪಂತೆ ।**
**ಅಂತವಿಲ್ಲದಪಾರ ಬ್ರಹ್ಮದೊ**
**ಳಿಂತು ಕಾರಣಕಾರ್ಯವೆಂಬುದು**
**ಭ್ರಾಂತಿಯಲ್ಲದೆ ಬೇರೆ ತೋರ್ಪ ಪ್ರಪಂಚವಿಲ್ಲೆಂದ ॥ ೧೬ ॥**

**ತಾತ್ಪರ್ಯ:** ದಾರವೇ ಬಟ್ಟೆಯಾಗಿ, ಮಣ್ಣೇ ಗಡಿಗೆಯಾಗಿ ಅದೇ ರೀತಿ ನೀರೇ ಅಲೆಗಳಾಗಿ ಅದರಂತೆಯೆ ಚಿನ್ನವೇ ಬಗೆ ಬಗೆಯ ಆಭರಣಗಳಾಗಿ ತೋರುತ್ತಿರುವಂತೆ, ಕೊನೆಯೆಂಬುದೇ ಇಲ್ಲದೆ ಅಪಾರ ಬ್ರಹ್ಮನಲ್ಲಿ ಜಗತ್ತು ಕಾರ್ಯವೆಂದೂ ಬ್ರಹ್ಮವೇ ಕಾರಣವೆಂದೂ ಹೇಳುವುದು ಮನೋಭ್ರಮೆಯಲ್ಲದೆ ಬೇರೆಯಾಗಿ ತೋರುವ ಪ್ರಪಂಚವೇ ಇಲ್ಲವೆಂದು ವ್ಯಾಸನು ಹೇಳಿದನು.

**ಶಬ್ದಾರ್ಥ:** ತಂತು=ದಾರ (ನೂಲು); ಪಟ=ಬಟ್ಟೆ; ಮೃತ್ತಿಕೆ=ಮಣ್ಣು; ಘಟ=ಗಡಿಗೆ; ಅಂತವಿಲ್ಲದ+ಅಪಾರ ಬ್ರಹ್ಮ=ಕೊನೆಯಿಲ್ಲದ ಅಪಾರಬ್ರಹ್ಮ; ಕಾರಣಕಾರ್ಯವೆಂಬುದು=ಜಗತ್ತು ಕಾರ್ಯವೆಂದೂ ಬ್ರಹ್ಮ ಕಾರಣವೆಂದು ಹೇಳುವರು; * ಭ್ರಾಂತಿ=ಮನೋಭ್ರಮೆ; * ತೋರ್ಪ=ಕಾಣುವ;

---

ಬಣ್ಣವದು ಚಿನ್ನದಲಿ, ಪರಿಮಳ
ದುನ್ನತಿಕೆ ಪುಷ್ಪದಲಿ, ಮಧುರತೆ
ನಿರ್ಣಯಿಸೆ ಕಬ್ಬಿನಲಿಯೆಂತಿಹುದಂತೆ ಸರ್ವದಲಿ ।
ಪೂರ್ಣವಾಗಿಯೆ ತೋರುತಿಹ ಚೈ
ತನ್ಯವಹ ಪರಬೊಮ್ಮದಲ್ಲಿಯೆ
ಭಿನ್ನವೆಲ್ಲವು ಚಿತ್ರಿತಲತಾಪತ್ರದಂತಿಹವು ॥ ॥೧೭॥

**ತಾತ್ಪರ್ಯ:** ಚಿನ್ನದಲ್ಲಿ ಬಣ್ಣವೂ, ಹೂವಿನಲ್ಲಿ ಶ್ರೇಷ್ಠವಾದ ಪರಿಮಳವೂ, ಕಬ್ಬಿನ ಜಲ್ಲೆಯಲ್ಲಿ ಸಿಹಿಯೂ ಹೇಗೆ ಅಡಗಿರುವುದೋ ಹಾಗೆಯೇ ಸಮಸ್ತ ವಸ್ತುಗಳಲ್ಲಿ ತೋರುತ್ತಿರುವ ಪರಿಪೂರ್ಣವಾಗಿಯೇ ಕಾಣುವ ಪರಬ್ರಹ್ಮ ಚೈತನ್ಯವು ವೈವಿಧ್ಯವು ಬಳ್ಳಿಯಲ್ಲಿಯ ಚಿಗುರುಗಳಂತೆ ಕಾಣುತ್ತಿರುವುವು.

**ಶಬ್ದಾರ್ಥ:** * ಉನ್ನತಿಕೆ=ಶ್ರೇಷ್ಠತೆ; ಚಿತ್ರಿತ=ಕಾಣಿಸಿಕೊಳ್ಳುವ; * ಲತಾಪತ್ರ=ಬಳ್ಳಿಯಲ್ಲಿಯ ಚಿಗುರುಗಳಂತೆ;

**ಟಿಪ್ಪಣಿ:** ಈ ಪದ್ಯಕ್ಕೆ ಚಿದಂಬರಯ್ಯನವರು ಟೀಕೆ ರಚಿಸಿಲ್ಲ, ಅನುವಾದ, ಶಬ್ದಾರ್ಥ ಅನುವಾದಕನದು.

---

ಬೀಜಪಂಚಕದಿಂದಲೀ ಜಗ
ಭೂಜದಂದದಲಾಗಲಾ ನಿಜ
ಬೀಜವಹ ಬ್ರಹ್ಮದಲ್ಲಿ ಜನಿಸಿತು ಬೀಜ ಪಂಚಕವು; ।
ಸೋಜಿಗವೆ? "ಯದ್ಬೀಜ ತತ್ಫಲ"
ನೈಜವಾಗಿರೆ ಜೀವಲೋಕವು
ತೇಜಿಸುವ ಪರಮಾತ್ಮನಲ್ಲದೆ ಬೇರೆ ಜಗವಿಲ್ಲ ॥ ॥೧೮॥

**ತಾತ್ಪರ್ಯ:** ಈ ಜಗತ್ತಿನಲ್ಲಿ ಮರದ ಹುಟ್ಟಿಗೆ ಬೀಜ ಹೇಗೆ ಕಾರಣವೋ ಹಾಗೆ ಪೃಥ್ವಿ, ಜಲ, ವಾಯು, ಅಗ್ನಿ, ಆಕಾಶಗಳೆಂಬ ಈ ಐದು ಭೂತಗಳ ಸೂಕ್ಷ್ಮ ತನ್ಮಾತ್ರೆಗಳು, ನಿಜವಾದ ಬೀಜ ಸ್ವರೂಪವಾದ ಬ್ರಹ್ಮದಿಂದ ಹುಟ್ಟಿತು. ಬೀಜವು ಎಂಥದ್ದೋ ಫಲವು ಅಂತಹುದೇ ಆಗಿರುತ್ತದೆ. ಹಾಗೆಯೇ ಪರಮಾತ್ಮನು ಬೀಜವಾಗಿಯೂ ಜಗತ್ತು ಮರದಂತೆ ವಿಸ್ತಾರವಾಗಿ ಅದರ ಫಲವಾಗಿಯೂ ಸಹಜವಾಗಿ ಇರುವುದರಿಂದ ಜಗತ್ತನ್ನು ಬೆಳಗಿಸುವವ ಪರಮಾತ್ಮನೇ ಹೊರತು ಬೇರೆ ಅಲ್ಲ.

**ಶಬ್ದಾರ್ಥ:** **ಬೀಜಪಂಚಕ**=ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಈ ಐದು ಭೂತಗಳ ಸೂಕ್ಷ್ಮ ತನ್ಮಾತ್ರೆಗಳು; **ಭೂಜದಂದದಲಿ**=ಮರದಂತೆ ವಿಸ್ತಾರವಾಗಿ; **ನಿಜ ಬೀಜವಹ ಬ್ರಹ್ಮದಲಿ**=ನಿಜವಾದ ಬೀಜಸ್ವರೂಪವಾದ ಬ್ರಹ್ಮದಿಂದ; **ಯದ್ಬೀಜತತ್ಫಲ**=ಬೀಜವು ಎಂಥದ್ದೋ ಫಲ ಅಂಥದ್ದೇ; **ತೇಜಿಸುವ**=ಬೆಳಗಿಸುವ, ಹೊಳೆಯುವ; **ಪರಮಾತ್ರನಲ್ಲದೆ ಬೇರೆ ಜಗವಿಲ್ಲ**=ಜಗತ್ತು ಪರಮಾತ್ಮನೇ ಹೊರತು ಬೇರೆ ಅಲ್ಲ.

**ಟಿಪ್ಪಣಿ:** ನಿಜಬೀಜವಹಬ್ರಹ್ಮದಲಿ=ನಿಜವಾದ ಬೀಜಸ್ವರೂಪವಾದ ಬ್ರಹ್ಮ ಜಗತ್ತಿನಲ್ಲಿ ಅಡಗಿದೆ ಎಂಬ ಮಾತು ಗೀತೆಯಲ್ಲಿ ಬರುತ್ತದೆ. ಯಚ್ಚಾಪಿ ಸರ್ವ ಭೂತಾನಾಂ ಬೀಜಂ ತದಹಂ ಅರ್ಜುನ (ಗೀತೆ=೧೦-೩೯) (ಎಲ್ಲ ಭೂತಗಳಿಗೂ ಯಾವುದು ಕಾರಣವೋ ಆ ಮಾಯೋಪಾಧಿಯಿಂದ ಕೂಡಿದ ಚೈತನ್ಯವೆಂಬ ಬೀಜವು ನಾನು).

---

**ಕಟ್ಟುಗೂಳನು ಹೊತ್ತು, ಮಾನವ**
**ಬಟ್ಟೆಯಲಿ ಕಡುಬಳಲಿ, ಕಡೆಯಲಿ**
**ಹೊಟ್ಟೆಯೊಳಗದನಿಟ್ಟು, ಶ್ರಮವನು ಬಿಟ್ಟುಕಳೆವಂತೆ ।**
**ನೆಟ್ಟನಿದು ತಾನೆಂಬ ಭೇದದ**
**ದೃಷ್ಟಿಯಳಿದೇಕತ್ವವಾಗಲು**
**ಕಷ್ಟಿಯಲ್ಲದೆ ಸುಖಿಯೆ ಆಗಿಹನೆಂದ ನಾಮುನಿಪ ॥ ॥೧೯॥**

**ತಾತ್ಪರ್ಯ:** ಮನುಷ್ಯನು ಪ್ರಯಾಣಕಾಲದಲ್ಲಿ ಅನ್ನದ ಬುತ್ತಿಯ ಗಂಟನ್ನು (ಕಟ್ಟುಗೂಳು) ಹೊತ್ತುಕೊಂಡು ಬಹುದೂರ ದಾರಿ ಸವೆಸಿ ಅಧಿಕ ಆಯಾಸದಿಂದ ತಾನು ತಂದಿದ್ದ ಬುತ್ತಿ ಅನ್ನವನ್ನು ಹೊಟ್ಟೆಗೆ ಸೇರಿಸಿಕೊಂಡು (ತಿಂದು) ಹೊತ್ತ ಭಾರದ ಆಯಾಸವನ್ನು ಪರಿಹರಿಸಿಕೊಳ್ಳುವಂತೆ, ನೇರವಾಗಿ ಇದು ಬೇರೆ (ಈ ಜಗತ್ತು) ತಾನು (ಆತ್ಮ ಬೇರೆ ಎಂಬ ಭೇದಭಾವನ್ನು ಹೋಗಲಾಡಿಸಿಕೊಂಡು ಏಕೀಭಾವವನ್ನು ಇರುವುದೊಂದೇ ಎಂಬ ಅನುಭವವನ್ನು) ಹೊಂದಿದಾಗ ದುಃಖಿಯಾಗಿರದೆ ಸುಖಿಯಾಗಿರುತ್ತಾನೆ ಎಂದು ವ್ಯಾಸನು ಶುಕನಿಗೆ ಹೇಳಿದನು.

**ಶಬ್ದಾರ್ಥ:** ಕಟ್ಟುಗೂಳನು=(ಕಟ್ಟು+ಕೂಳನು)=ಅನ್ನದ ಬುತ್ತಿಯ ಗಂಟು; * **ಹೊತ್ತು**= ಹೆಗಲಿಗೇರಿಸಿಕೊಂಡು, ಹೊತ್ತುಕೊಂಡು; **ಬಟ್ಟೆಯಲಿ**=ದಾರಿಯಲ್ಲಿ; * **ಕಡುಬಳಲಿ**=ವಿಪರೀತ ಆಯಾಸಗೊಂಡು; * **ಹೊಟ್ಟೆಯೊಳಗೆ+ಅದನಿಟ್ಟುಕೊಂಡು**=ಹೊಟ್ಟೆಗೆ ಸೇರಿಸಿಕೊಂಡು (ತಿಂದು);

ಏಕತ್ವವಾಗಲು=ಏಕೀಭಾವ ಹೊಂದಲು; ಇದು ತಾನೆಂಬ=ಇದು ಬೇರೆ ತಾನು ಬೇರೆ ಎಂಬ ಭೇದದ; ಕಷ್ಟಿಯಲ್ಲದೆ=ದುಃಖಿ ಆಗಿರದೆ, ಕಷ್ಟವಿಲ್ಲದೆ.

---

ಮಿಥ್ಯವಹಮಾಯಾ ಪ್ರಪಂಚವೆ
ತಥ್ಯವಾಗಿಯೆ ತೋರಿ ದೃಶ್ಯವೆ
ನುತ್ತಹೇಳಿಸಿಕೊಂಬುದದಕಾಶ್ರಯವೆನಿಪ ಸಾಕ್ಷಿ ।
ಉತ್ತಮನೆ, ದೃಕ್ಕೆನಿಸಿಕೊಂಬುದಿ
ವಿತ್ತೆರನು ಪುಸಿ ದೃಕ್ಕುದೃಶ್ಯಗ
ಳೆತ್ತಣವು! ಸತ್ಯಾದ್ವಯಾನಂದ್ಯೈಕ ಬ್ರಹ್ಮದಲಿ ॥ ॥೨೦॥

ತಾತ್ಪರ್ಯ: ಹುಸಿಯಾಗಿರುವ ಮಾಯಾ ಪ್ರಪಂಚವೇ ಸತ್ಯವಾಗಿರುವಂತೆ ತೋರಿ ದೃಶ್ಯ ಜಗವೆಂದು ಎನ್ನಿಸಿಕೊಳ್ಳುತ್ತದೆ. ಅದಕ್ಕೆ ಆಧಾರವಾಗಿರುವ ಸಾಕ್ಷಿಯು (ಬ್ರಹ್ಮ) ದೃಕ್ ಎನ್ನಸಿಕೊಳ್ಳುತ್ತದೆ. ಇವೆರಡು ರೀತಿಗಳೂ ಸುಳ್ಳು. ಸತ್ಯವಾಗಿಯೂ ಅದ್ವಯ ವಾಗಿಯೂ ಅನಂತವಾಗಿಯೂ ಇರುವ ಏಕ ಬ್ರಹ್ಮದಲ್ಲಿ ಈ ರೀತಿ ದೃಕ್–ದೃಶ್ಯ ಗಳೆಂಬ ಭೇದಗಳು ಬರಲು ಎಲ್ಲಿ ಸಾಧ್ಯ?

ಶಬ್ದಾರ್ಥ: * ಮಿಥ್ಯವಹ=ಸುಳ್ಳಾಗಿಹ; * ತಥ್ಯ=ನಿಜ; ಇವು+ಇತ್ತೆರನು=ಇವೆರಡು ರೀತಿಗಳೂ; ಪುಸಿ=ಸುಳ್ಳು; ದೃಕ್=ಬ್ರಹ್ಮ; ದೃಶ್ಯ=ಜಗತ್ತು;

ಪದವಿಭಾಗ: ಸತ್ಯ+ಅದ್ವಯ+ಆನಂದ+ಏಕ+ಬ್ರಹ್ಮದಲಿ=ಸತ್ಯದ್ವಯಾನಂದ್ಯೈಕಬ್ರಹ್ಮದಲಿ;

---

ತನ್ನ ನೆಳಲನು ಕಂಡ ಬಾಲಕ
ನನ್ಯರಕ್ಕಸಿಯೆಂದು ಬೆದರುವ
ನಿರ್ಣಯದಿ ತನ್ನಲ್ಲಿ ಕಲ್ಪಿತವಾದ ಮಾಯೆಯಲಿ ।
ಭಿನ್ನವೆಂಬುದು ಭ್ರಮೆಯ ಹೊರತಿ
ನ್ನನ್ಯವಹುದೇನುಂಟು ತಿಳಿಯಲು
ಪೂರ್ಣವಹ ಪರಬ್ರಹ್ಮವಲ್ಲದೆ ಬೇರೆ ಜಗವಿಲ್ಲ ॥೨೧॥

ತಾತ್ಪರ್ಯ: ಅರಿಯದ ಹುಡುಗ ತನ್ನ ನೆರಳನ್ನು ಕಂಡು ಇದು ಬೇರೆ ಒಬ್ಬ ರಾಕ್ಷಸಿ ಎಂದು ಭಾವಿಸಿ ಹೆದರಿಕೊಳ್ಳುವಂತೆ ತನ್ನಲ್ಲಿ ಕಲ್ಪಿಸಿಕೊಂಡ ಮಾಯೆಯಲ್ಲಿ ಬೇರೆ ಬೇರೆ ಏನೇನೋ ಇರುವುದೆಂದು ತಿಳಿಯುವುದು ಭ್ರಮೆಯೇ ಹೊರತು ಮತ್ತೇನಿದೆ? (ಬೇರೇನೂ ಇಲ್ಲ). ವಿಚಾರ ಮಾಡಿದರೆ ಪೂರ್ಣವಾದ ಪರಬ್ರಹ್ಮವೊಂದೇ ಹೊರತು ಬೇರೆ ಜಗತ್ತೆಂಬುದು ಇಲ್ಲ.

ಶಬ್ದಾರ್ಥ: ಭಿನ್ನವೆಂಬುದು=ಬೇರೆ ಬೇರೆ ಏನೇನೋ ಇರುವುದೆಂಬುದು; * ಕಲ್ಪಿತವಾದ= ಊಹಿಸಿಕೊಂಡ; * ಭ್ರಮೆ=ಭ್ರಾಂತಿ; ನಿರ್ಣಯದಿ=ತೀರ್ಮಾನಿಸುವಂತೆ; ನೆಳಲು=ನೆರಳು; ಏನುಂಟು?=ಯಾವುದೂ ಇಲ್ಲ.

**ಟಿಪ್ಪಣಿ:** ತನ್ನನೆಳಲನು ಕಂಡು ಬಾಲಕನು+ಅನ್ಯರಕ್ಕಸಿಯೆಂದು ಬೆದರುವ ನಿರ್ಣಯದಿ=ಬಾಲಕನು ತನ್ನ ನೆರಳನ್ನು ನೋಡಿ ರಕ್ಕಸಿಯೆಂದು ಬೆದರುವ ಉದಾಹರಣೆಯನ್ನು ಯೋಗ ವಾಸಿಷ್ಠಕಾರರು ಬಹುಕಡೆ ಉಪಯೋಗಿಸಿದ್ದಾರೆ.

**ಪಾಠಾಂತರ:** * ಬೇರೆ ಕೆಲವು ಪ್ರತಿಗಳಲ್ಲಿ (ಉದಾ: ಅರಾಸೇ ಪ್ರತಿ) ಪರಬ್ರಹ್ಮವಲ್ಲದೆ ಎಂಬ ಪಾಠವಿದೆ. ಇದು ಅಶುದ್ಧ ಪಾಠ ಛಂದೋಭಂಗವಾಗುತ್ತದೆ. ಈ ಪದದಿಂದ ಪರಬೊಮ್ಮ ಶುದ್ಧ ಪಾಠ.

ಪೂರ್ಣವಹ ಪರಬೊಮ್ಮವಲ್ಲದೆ ಬೇರೆ ಜಗವಿಲ್ಲ

ಪೂರ್ಣವಹ ಪರಬ್ರಹ್ಮವಲ್ಲದೆ ಬೇರೆ ಜಗವಿಲ್ಲ (ಅರಾಸೇ)

---

ವಿದ್ಯೆಯೆಂಬುದವಿದ್ಯೆಯೆಂಬುದು
ಸಿದ್ಧವಹ ಸುಜ್ಞಾನವೆಂತೆನೆ
ಬುದ್ಧಿವಂತನೆ ಶುಕ್ತಿರಜತಜ್ಞಾನದಂದದಲಿ ।
ಅದ್ವಯವು ದೃಗ್ವೃತ್ತಿ ರೂಪದ
ಲಿದ್ದುತೋರುವ ಭ್ರಾಂತಿಯಲ್ಲದೆ
ನಿರ್ಧರಿಸಲೆರಡುಂಟೆ? ನಿಜದೊಳಗೊಂದೆ ಕೇಳೆಂದ ॥೨೨॥

**ತಾತ್ಪರ್ಯ:** ಬುದ್ಧಿವಂತನಾದ ಶುಕನೇ ಕೇಳು, ವಿದ್ಯೆಯೆಂಬುದು ಅವಿದ್ಯೆಯೆಂಬುದೂ ಎರಡೂ ಜ್ಞಾನಗಳೇ. ಹೇಗೆಂದರೆ, ಕಪ್ಪೇ ಚಿಪ್ಪಿನ ಬೆಳ್ಳಿಯಂತೆ ಎರಡಾಗಿ ಕಾಣಿಸುವುದೇ ಹೊರತು ನಿಜವಾಗಿರುವುದು ಒಂದೇ. ದೃಷ್ಟಿಯ ವೃತ್ತಿಯ ರೂಪದಿಂದ ಕಾಣಿಸುವುದು ಭ್ರಾಂತಿ (ಮಾಯೆ) ಯಲ್ಲದೆ ಬೇರೇನಿಲ್ಲ. ನಿಜವಾಗಿರುವುದು ಪರಬ್ರಹ್ಮವೊಂದೇ.

**ಶಬ್ದಾರ್ಥ:** ವಿದ್ಯೆಯೆಂಬುದು+ಅವಿದ್ಯೆಯೆಂಬುದು ಸಿದ್ಧವಹ ಸುಜ್ಞಾನವು=ವಿದ್ಯೆಯೂ ಅವಿದ್ಯೆಯೂ ಜ್ಞಾನಗಳೆ; ಅದ್ವಯವು=ಎರಡನೆಯದಿಲ್ಲದ ಬ್ರಹ್ಮವು; ದೃಗ್ವೃತ್ತಿರೂಪದಲಿ=ದೃಷ್ಟಿಯ ವೃತ್ತಿಯ ರೂಪದಲ್ಲಿ; ಶುಕ್ತರಜತಜ್ಞಾನದಂದದಲಿ ಅದ್ವಯವು=ಕಪ್ಪೇ ಚಿಪ್ಪಿನ ಬೆಳ್ಳಿಯಂತೆ ಎರಡಾಗಿ ತೋರುವುದೇ ಹೊರತು ನಿಜವಾಗಿರುವುದು ಒಂದೇ; ನಿಜದೊಳಗೊಂದೆ=ನಿಜವಾಗಿರುವುದು ಒಂದೇ.

ಮಗನೆ ವಿದ್ಯಾವಿದ್ಯೆಯೆಂಬೀ
ಬಗೆಯೆ ಮಾಯಾರೂಪು; ಮಾಯೆಯು
ನಗೆಯಲಾ! ಅವಿಚಾರಸಿದ್ಧ; ವಿಚಾರಿಸಿದೊಡಿಲ್ಲ; ।
ವಿಗಡವೆನಿಪಾ ಮಾಯೆ ತತ್ಕಾ
ರ್ಯಗಳ ಸಹಿತಲವೆಲ್ಲ ತಿಳಿವುದು
ನಿಗಮವಿದ, ಸುಜ್ಞಾನವದು ತಾನೇ ಪರಬ್ರಹ್ಮ ॥ ॥೨೩॥

**ತಾತ್ಪರ್ಯ:** ಶುಕನೇ ಕೇಳು, ವಿದ್ಯೆ ಮತ್ತು ಅವಿದ್ಯೆ ಎಂಬುದನ್ನು ಕುರಿತು ಯೋಚಿಸಿದರೆ ಅದರ ರೀತಿಯೇ ಬರಿಯ ಮಾಯಾ ರೂಪವಾಗಿದೆ. ಈ ಮಾಯೆಯೆಂಬುದು ಹಾಸ್ಯಾಸ್ಪದ ಸಂಗತಿಯಾಗಿದೆ. ವಿಚಾರ ಮಾಡದೆ ಇದ್ದರೆ ನಿಜವಾಗಿರುವಂತೆ ತೋರುತ್ತದೆ. ಆತ್ಮಜ್ಞಾನದ ಅರಿವಿನಿಂದ ನೋಡಿದರೆ ಅದು ಮಿಥ್ಯೆ ಎನಿಸುತ್ತದೆ. ಹೀಗೆ ಪ್ರಬಲವಾದ ಈ ಮಾಯೆಯನ್ನು ಅದರ ಕಾರ್ಯವಾದ ಜಗತ್ತನ್ನು ತಿಳಿಯುವುದೇ ಸುಜ್ಞಾನವು. ಹಾಗೆ ಶ್ರುತಿ ಸಮ್ಮತವಾದ ಜ್ಞಾನವೇ ಪರಬ್ರಹ್ಮನೆಂದು ವೇದಾರ್ಥವನ್ನು ತಿಳಿದ (ನಿಗಮವಿದ) ಶುಕನೇ ಅರ್ಥ ಮಾಡಿಕೊ.

**ಶಬ್ದಾರ್ಥ:** * **ಈ ಬಗೆಯೆ**=ಈ ರೀತಿಯೆ; * **ನಗೆಯಲಾ!**=ಹಾಸ್ಯಾಸ್ಪದ ಸಂಗತಿಯಾಗಿದೆ; * **ಅವಿಚಾರ ಸಿದ್ಧ**=ವಿಚಾರ ಮಾಡದೆ ಇದ್ದಾಗ ನಿಜವಾಗಿರುವಂತೆ ಕಾಣುತ್ತದೆ; * **ವಿಚಾರಿಸಿದೊಡಿಲ್ಲ**= ಆತ್ಮಜ್ಞಾನ ಅರಿವಿನಿಂದ ನೋಡಿದರೆ ಅದು ಮಿಥ್ಯೆ ಎನಿಸುತ್ತದೆ. **ಮಾಯೆ ತತ್ಕಾರ್ಯಗಳು ಸಹಿತಲವೆಲ್ಲ**=ಹೀಗೆ ಮಾಯೆಯನ್ನು ಅದರ ಕಾರ್ಯವಾದ ಜಗತ್ತನ್ನು ತಿಳಿಯುವುದೇ ಸುಜ್ಞಾನವು; **ನಿಗಮವಿದ**=ವೇದಾರ್ಥವನ್ನು ತಿಳಿದ ಶುಕನೆ;

**ಪಾಠಾಂತರ:** ತತ್ಕಾರ್ಯಗಳ ಸಹಿತಲವೆಲ್ಲ=ತತ್ಕಾರ್ಯಗಳನೆಲ್ಲವತಾನು (ಅರಾಸೇ)

---

**ಕಾಮಿನೀಮಯವಾಗಿಹುದು ಜಗ**
**ಕಾಮುಕಗೆ ಮಿಗಿಲಾಗಿ; ಲುಬ್ಧಗೆ**
**ಪ್ರೇಮದಿಂ ಧನಮಯವು ಸರ್ವವು; ತಿಳಿಯೆ ಬ್ರಹ್ಮವನು ।**
**ಸಾಮರಸ್ಯವು ಸಕಲವೆಲ್ಲವು;**
**ನಾಮರೂಪಿನ ಭ್ರಮೆಯಳಿದ ನಿ**
**ಸ್ಸೀಮ ನಿಜಸುಖಧಾಮ ನಿರುಪಾಧಿಕ ಪರಬ್ರಹ್ಮ ॥ ॥ ೨೪ ॥**

**ತಾತ್ಪರ್ಯ:** ಸ್ತ್ರೀಲೋಲನಿಗೆ ಈ ಜಗತ್ತೆಲ್ಲವೂ ಅತಿಶಯವಾಗಿ ನಾರೀಮಯವಾಗಿ ಕಾಣುತ್ತದೆ. ಜಿಪುಣನಿಗೆ ಈ ಜಗತ್ತೆಲ್ಲವೂ ಪ್ರೀತಿಪಾತ್ರವಾದ ಧನದಿಂದ ಕೂಡಿರುವ ಹಾಗೆ ಕಾಣಿಸುತ್ತದೆ. ಬ್ರಹ್ಮಜ್ಞಾನಿ ಆದವನಿಗೆ ಜಗತ್ತೆಲ್ಲ ಎಲ್ಲವೂ ಸಮಾನವಾಗಿ ಎಲ್ಲವೂ ಕಾಣುತ್ತದೆ. ನಾಮ ರೂಪಗಳ ಭ್ರಾಂತಿ ಅಳಿದು ಹೋದ ಮೇಲೆ ಜಗತ್ತೆಲ್ಲವೂ ನಿಸ್ಸೀಮವಾದ ಶಾಶ್ವತ ಸುಖ ಸ್ಥಾನವಾಗಿ ಉಪಾಧಿಗಳಿಲ್ಲದ ಪರಬ್ರಹ್ಮ ಸ್ವರೂಪವಾಗಿ ಕಾಣುತ್ತದೆ.

**ಶಬ್ದಾರ್ಥ:** * **ಕಾಮುಕಗೆ**=ಸ್ತ್ರೀಲೋಲನಿಗೆ; * **ಮಿಗಿಲಾಗಿ**=ಅತಿಶಯವಾಗಿ; * **ಲುಬ್ಧಗೆ**= ಜಿಪುಣನಿಗೆ; * **ಪ್ರೇಮದಿಂ**=ಪ್ರೀತಿಪಾತ್ರವಾದ; **ಸಾಮರಸ್ಯವು**=ಎಲ್ಲವೂ ಒಂದಾಗಿ ಕಾಣುವುದು; * **ಭ್ರಮೆಯಳಿದ** =ನಾಮರೂಪಗಳ ಭ್ರಾಂತಿ ಹೋದಮೇಲೆ; * **ನಿರುಪಾಧಿಕ**= ಉಪಾಧಿಯಿಲ್ಲದಿರುವುದು ನಿರುಪಾಧಿಕನೆಂದರೆ ಪರಬ್ರಹ್ಮ; **ನಿಸ್ಸೀಮ**=ಮೇರೆಯಿಲ್ಲದ;

**ಟಿಪ್ಪಣಿ:** **ಉಪಾಧಿ**=ಒಂದು ವಸ್ತುವಿನ ಸುತ್ತಲಿರುವುದು. ಆ ವಸ್ತುವನ್ನು ತಿಳಿಯಲು ಅಡ್ಡಿಯಾಗಿರುತ್ತದೆ. ಅದೇ ಉಪಾಧಿ ಇದು ವಸ್ತುವಿಗೆ ಸಂಬಂಧಿಸಿರುವುದಿಲ್ಲ. ಉದಾ: ಆತ್ಮನಿಗೆ ದೇಹವು

ಉಪಾಧಿ ನಾಮರೂಪಗಳು, ಉಪಾಧಿಗಳು ಬ್ರಹ್ಮಸ್ವರೂಪ ತಿಳಿಯಲು ಅಡ್ಡಿಯಾಗಿರುತ್ತದೆ. (ಪರಮಾರ್ಥಪದಕೋಶ: ಪುಟ-೯೯)

---

**ಒಂದು ಲೆಕ್ಕದ ಮುಂದೆ ಬಿಂದುವ**
**ನೊಂದನಿಡೆ ಹತ್ತಾದುದಂತಹ**
**ಬಿಂದು ಹತ್ತರಲರ್ಬುದವೆನಿಪುದೊಂದೆ ಸಂಖ್ಯೆಯದು; ।**
**ಬಿಂದು ವೃದ್ಧಿಯೊಳೊಂದನಂತವು**
**ಬಿಂದುವೆನಲವ್ಯಕ್ತವದು ಕೆಡ**
**ಲೊಂದು ನಿಲುವುದದ್ವಯಾಮೃತಸಿಂಧು ಕೇಳೆಂದ ॥ ॥ ೨೫ ॥**

**ತಾತ್ಪರ್ಯ:** ಒಂದು ಎಂಬ ಅಂಕಿಯ ಮುಂದೆ ಒಂದು ಸೊನ್ನೆ ಇಟ್ಟರೆ ಹತ್ತು ಎಂಬ ಸಂಖ್ಯೆ ಆಗುತ್ತದೆ. ಹಾಗೆಯೇ ಒಂದರ ಮುಂದೆ ಹತ್ತು ಸೊನ್ನೆಗಳನ್ನು ಇಟ್ಟರೆ ಆ ಸಂಖ್ಯೆಯನ್ನು ಅರ್ಬುದ ಎಂದು ಕರೆಯುವರು. ಸಂಖ್ಯೆ ಮಾತ್ರ ಒಂದೇ ಆಗಿರುತ್ತದೆ (ಸಾವಿರಕೊಂದು). ಸೊನ್ನೆಗಳನ್ನು ಸೇರಿಸುತ್ತಾ ಹೋದ ಹಾಗೆಲ್ಲಾ ಸಂಖ್ಯೆಯ ಬೆಲೆ ವೃದ್ಧಿಸುತ್ತಾ ಹೋಗುತ್ತದೆ. ಒಂದನ್ನು ತೆಗೆದರೆ ಬರಿಯ ಸೊನ್ನೆಗಳಿಗೆ ಬೆಲೆಯು ಇರುವುದಿಲ್ಲ. ಸೊನ್ನೆಗಳನ್ನು ತೆಗೆದರೆ ಒಂದು ಉಳಿಯುತ್ತದೆ. ಅದೇ ಅದ್ವಯವಾದ ಅಮೃತಸಾಗರವೆನಿಸಿದ ಬ್ರಹ್ಮವು. ಇದರರ್ಥ ಸೊನ್ನೆಯ ಸಂಬಂಧದಿಂದ ಒಂದೆಂಬುದು ಅನಂತವಾಗುವಂತೆ ಮಾಯೆಯ (ಸೊನ್ನೆ) ಸಂಬಂಧದಿಂದ ಬ್ರಹ್ಮವು ಅನಂತವಾಗುವುದೆಂದೂ ಸೊನ್ನೆಯನ್ನು ತೆಗೆದರೆ ಒಂದೇ ಉಳಿಯುವಂತೆ ಮಾಯಾ ಸಂಬಂಧವನ್ನು ಬಿಟ್ಟರೆ ಬ್ರಹ್ಮವು ಅದ್ವೈತವಾಗಿರುವುದೆಂದು ಹೇಳಿದಂತಾಯಿತು.

**ಶಬ್ದಾರ್ಥ:** ಬಿಂದು ವೃದ್ಧಿಯೊಳು ಒಂದು **ಅನಂತವು**=ಸೊನ್ನೆ ಹಚ್ಚಿದರೆ ಒಂದು ಎಂಬ ಸಂಖ್ಯೆಯು ಲೆಕ್ಕವಿಲ್ಲದಷ್ಟಾಗುವುದು; **ಅವ್ಯಕ್ತ**=ಬೆಲೆಯು ಕಾಣಬರದೆ ಇರುವುದು; **ಅವ್ಯಕ್ತ**=ಮಾಯೆ; **ವೃದ್ಧಿಯೊಳು**=ಹೆಚ್ಚಿಸುತ್ತಾ ಹೋದರೆ;

**ಟಿಪ್ಪಣಿ-೧: * ಅರ್ಬುದ=೧೧ ಅಂಕಿಗಳ ಸಂಖ್ಯೆ=ಸಾವಿರಕೋಟಿ;**

**ಕಸಾಪ ಸಂಕ್ಷಿಪ್ತ ಕನ್ನಡ ನಿಘಂಟಿನಲ್ಲಿ ಹತ್ತು ಕೋಟಿ**=ಅರ್ಬುದ ಎಂದಿದೆ. ಅಮರಕೋಶದಲ್ಲೂ ಹತ್ತು ಕೋಟಿ ಎಂದು ಅರ್ಥ ಕೊಟ್ಟಿದೆ. ಆದರೆ ಭಾಸ್ಕರಾಚಾರ್ಯರ ಲೀಲಾವತಿ ಗಣಿತ ಗ್ರಂಥದಲ್ಲಿ (ಅಧ್ಯಾಯ ೧ ಶ್ಲೋಕ ೧೨ರಲ್ಲಿ ಅರ್ಬುದ ೧೦೮=೧೦೦೦೦೦೦೦೦೦ (ಒಂದು ಅಂಕಿ ೯ ಸೊನ್ನೆಗಳು) ಕೊಟ್ಟಿದ್ದಾರೆ. ೧ಕ್ಕೆ ೧೦ ಸೊನ್ನೆ ಇಟ್ಟರೆ ಅದಕ್ಕೆ ಖರ್ವ ಎಂದು ಕರೆದಿದ್ದಾರೆ. ಹೀಗಾಗಿ ಅರ್ಬುದ ಸಂಖ್ಯೆಯ ಮೌಲ್ಯ ಎಷ್ಟೆಂಬುದು ಖಚಿತವಿಲ್ಲ. ಇಲ್ಲಿ ಕವಿ ಬಿಂದು ಹತ್ತರಲಿ ಅರ್ಬುದವೆನಿಪುದು ಒಂದೇ ಸಂಖ್ಯೆಯದು ಎಂಬ ಮಾತಿನಲ್ಲಿ ಸಾವಿರಕೋಟಿಯನ್ನು ಅಥವಾ ಖರ್ವವನ್ನು ಹೇಳಿದ್ದಾನೆ.

**ಟಿಪ್ಪಣಿ-೨:** ಬಿಂದುವೆನಲು **ಅವ್ಯಕ್ತವದು**=ಅವ್ಯಕ್ತ (ಬೆಲೆಯು ಕಾಣಬರದೆ ಇರುವುದು, ಈ ಮಾತಿನ ಪ್ರಯೋಗದಿಂದ ಅ-೪, ಪ-೧೦ರಲ್ಲಿರುವ ಅವ್ಯಕ್ತದ ಉತ್ಪತ್ತಿಯ ವಿಚಾರವು

ಸೂಚಿತವಾಗುವುದು. ಅವ್ಯಕ್ತವೆಂದರೆ ಮಾಯೆ. ಸೊನ್ನೆಯ ಸಂಬಂಧದಿಂದ ಒಂದೆಂಬುದು ಅನಂತವಾಗುವಂತೆ ಮಾಯೆಯ ಸಂಬಂಧದಿಂದ ಬ್ರಹ್ಮವು ಅನಂತವಾಗುವುದೆಂದು ಸೊನ್ನೆಯನ್ನು ತೆಗೆದರೆ ಒಂದೇ ಉಳಿಯುವಂತೆ ಮಾಯಾ ಸಂಬಂಧವನ್ನು ಬಿಟ್ಟರೆ ಬ್ರಹ್ಮವು ಅದ್ವೈತವಾಗಿರುವುದು ಎಂದು ಹೇಳಿದಂತಾಯಿತು.

**ಟಿಪ್ಪಣಿ-೩:** ಬಿಂದು ಎಂಬುದಕ್ಕೆ ಮಾಧವಾಚಾರ್ಯರು ಸೂತಸಂಹಿತೆಯ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ. (ಪುಟ-೯೩, ಅ-೪, ಪದ್ಯ-೧೦) ಪ್ರಾಣಿಗಳಿಗೆ ಕರ್ಮಫಲವನ್ನು ಕೊಡುವುದಕ್ಕಾಗಿ ಸೃಷ್ಟಿಯನ್ನು ಮಾಡಬೇಕೆಂದು ಈಶ್ವರನಿಗೆ ಇಚ್ಛೆಯಾಗುವುದು. ಮಾಯೆಯು ಪ್ರಾಣಿಗಳ ಕರ್ಮದ ಪರಿಪಕ್ವಾವಸ್ಥೆಯಾಗಿ ಪರಿಣಮಿಸಿದಾಗ ಈಶ್ವರನು ಅದರೊಡನೆ ಕೂಡಿಕೊಳ್ಳುವನು. ಈ ಸ್ಥಿತಿಗೆ ಬಿಂದುವೆಂದು ಹೆಸರು.

---

## ಜಗತ್ತು ಮನಸ್ಸಿನ ಪರಿಣಾಮ (೨೬-೨೮)

**ಬಾಯ ಮಾತಡಗಿದರೆ ಮಾಯೆಗ**
**ಪಾಯವಹುದಾ ಮಾಯೆಯಳಿಯಲು**
**ಬೀಯವಹುದ್ಯೆ ಮನ; ಮನಸ್ಸಿನ ನೆನಹು ಕೆಟ್ಟಾಗ ।**
**ಈಯಶೇಷವದಡಗೆ ನಿಜ ನಿ**
**ರ್ಮಾಯ ನಿತ್ಯಾನಂದ ಸಚ್ಚಿ**
**ತ್ಕಾಯವಹ ಪರಬೊಮ್ಮವದ್ವಯವಾಗಿ ಮೆರೆದಿಹುದು ॥ ॥೨೬॥**

**ತಾತ್ಪರ್ಯ:** ಮಾತಾಡುವುದನ್ನು ನಿಲ್ಲಿಸಿಬಿಟ್ಟರೆ ಮಾತಿನ ಮೂಲಕವಾಗಿ ಬೆಳೆಯುವಂಥ ಮಾಯೆಗೆ ಹಾನಿಯಾಗುವುದು. ಆ ಮಾಯೆ ನಾಶವಾದರೆ ಮನಸ್ಸಿನ ಚಿಂತನೆ, ಸ್ಮರಣೆಗಳೆಲ್ಲ ಕೆಟ್ಟು ಮನೋಭಾವನೆ ಲಯವಾಗುತ್ತದೆ. ಮನಸ್ಸಿನ ನೆನಪು ಚಿಂತನೆ ಕೆಟ್ಟ ಕೂಡಲೇ ಕಾಣುತ್ತಿರುವ ದೃಶ್ಯಗಳೆಲ್ಲಾ ಅಡಗಿ ಹೋಗುತ್ತವೆ ಎಂದರೆ ಮಿಥ್ಯಾರೋಪ ಜ್ಞಾನ ಪರಿಹಾರವಾಗಿ ಇಷ್ಟಾರ್ಥಗಳೆಲ್ಲಾ ನಿಂತು ಹೋಗುತ್ತವೆ. ಆಗ ನಿಜವಾದ ನಿರ್ಮಾಯವೆನಿಸಿದ ನಿತ್ಯಾನಂದವಾದ ಚಿತ್ಸುರೂಪವಾಗಿರುವ ಪರಬ್ರಹ್ಮವೊಂದೇ ಅದ್ವಿತೀಯವಾಗಿ ವಿರಾಜಿಸುತ್ತದೆ.

**ಶಬ್ದಾರ್ಥ: ಬಾಯಮಾತಡಗಿದರೆ ಮಾಯೆಗಪಾಯವಹುದು**=ಮಾತಾಡುವುದನ್ನು ನಿಲ್ಲಿಸಿಬಿಟ್ಟರೆ ಮಾತಿನ ಮೂಲಕವಾಗಿ ಬೆಳೆಯುವಂಥ ಮಾಯೆಗೆ ಹಾನಿಯಾಗುವುದು. **ಮನ ಬೀಯವಹುದ್ಯೆ**= ಮನಸ್ಸು ನಾಶವಾಗುವುದು; **ಮನಸ್ಸಿನ ನೆನಹು**=ಮನಸ್ಸಿನ ಚಿಂತನೆ, ಸ್ಮರಣೆ;

---

**ಪುಸಿಯ ಮಾಯಾಕಾರ್ಯವೆನಿಸಿಹ**
**ವಿಷಮವಹ ಮನಸಿನ ವಿಕಲ್ಪದ**
**ಲೆಸೆದು ತೋರುವ ನಾಮರೂಪಿನ ವಿಸರವಹ ಭೇದ ।**

ಸಸಿನೆ ಗುರುಮುಖದಿಂದ ತಿಳಿಯಲು
ನಸಿದು ಪೋಪುದು ಸ್ವಪ್ನದಂದದಿ;
ಮಿಸುಪ ತೇಜೋರಾಶಿಯಿರ್ದಪುದೇಕರೂಪಿನಲಿ ॥ ॥೨೭॥

**ತಾತ್ಪರ್ಯ:** ಮಿಥ್ಯಾರೂಪವಾದ ಮಾಯಾಕಾರ್ಯವು ವಿಕೃತ ಮನಸ್ಸಿನ ಭ್ರಾಂತಿ ಕಲ್ಪನೆಗಳಿಂದ ಕೂಡಿದ ನಾಮರೂಪಗಳೆಂಬ ಸಮೂಹ ಭೇದಗಳಾಗಿ ತೋರುವುದು. ಅದು ಗುರು ಬೋಧೆಯಿಂದ ನೇರವಾಗಿ ಆತ್ಮ ಸ್ವರೂಪವನ್ನು ತಿಳಿದಾಗ ಮಾಯೆಯು ಸ್ವಪ್ನದಂತೆ ನಾಶವಾಗಿ ಹೋಗುತ್ತದೆ. ಆಗ ಬ್ರಹ್ಮವು ಏಕರೂಪವಾದ ತೇಜೋರಾಶಿಯಾಗಿ ಕಾಣ ಬರುವುದು.

**ಶಬ್ದಾರ್ಥ:** ವಿಷಮವಹ=ವಿಕಾರವಾಗುವ ಸ್ವಭಾವದ; ವಿಸರ=ಸಮೂಹ; ಭೇದ=ಈ ಕರ್ತೃಪದವನ್ನು ವಸಿದು ಪೋಪುದು ಎಂಬ ಕ್ರಿಯಾಪದಕ್ಕೆ ಅನ್ವಯಿಸಿಕೊಳ್ಳಬೇಕು; ಸಸಿನೆ=ನೆಟ್ಟಗೆ;

---

ನಿದ್ರೆಯಲಿ ಮನವಿಲ್ಲದಿರುತಿರೆ
ಶುದ್ಧವಾದಾನಂದ ತೋರ್ಪುದು;
ನಿದ್ರೆಯಳಿಯಲು ಮರಳಿ ಮನ ಸಂಸಾರಿಯಾಗಿಹುದು; ।
ನಿರ್ಧರಿಸಲಾ ಮನದಿ ತೋರು
ತ್ತಿರ್ದ ಸುಖದುಃಖಗಳು ಮನವಳಿ
ದಿರ್ದ ವೇಳೆಯೊಳಿಲ್ಲ; ಮನ ಕೆಡಲದ್ವಯಾನಂದ ॥ ॥೨೮॥

**ತಾತ್ಪರ್ಯ:** ನಿದ್ದೆಯಲ್ಲಿ ಮನಸ್ಸು ಲಯವಾಗಿ ಹೋಗುವುದರಿಂದ ಶುದ್ಧವಾದ ಆನಂದವೇ ದೊರೆಯುತ್ತದೆ. ನಿದ್ರೆಯಿಂದ ಎದ್ದ ಮೇಲೆ ಮತ್ತೆ ಮನಸ್ಸು ಸಂಸಾರದ ಚಿಂತೆಯಲ್ಲಿ ತೊಡಗುತ್ತದೆ. ವಿಚಾರ ಮಾಡಿದರೆ, ಈ ಮನಸ್ಸಿನಲ್ಲಿ ಮೂಡುವ ಸುಖದುಃಖಗಳು ಮನಸ್ಸು ಇಲ್ಲದಾಗ ತೋರಿ ಬರುವುದಿಲ್ಲ ಮನಸ್ಸು ನಾಶವಾದರೆ ಅದ್ವಯಾನಂದ ಸ್ವರೂಪವಾದ ಪರಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ.

**ಶಬ್ದಾರ್ಥ:** ಮನಕೆಡಲು=ಮನಸ್ಸು ನಾಶವಾದರೆ;

**ಟಿಪ್ಪಣಿ:** ಮನಸ್ಸು ನಾಶವಾದರೆ ಎರಡನೆಯದಿರುವುದಿಲ್ಲವೆಂಬರ್ಥದಲ್ಲಿ ಮಾಂಡೂಕ್ಯಕಾರಿಕೆಯು "ಮನಸೋಹ್ಯಮನೀಭಾವೇದ್ವೈತ್ಯಂನ್ಯೆವೋಪಲಭ್ಯತೇ" ಎಂದು ಹೇಳಿದೆ.

---

## ಜ್ಞಾನದಿಂದ ಮಾಯೆ ನಾಶ (೨೯-೩೧)

ಕೃತ್ರಿಮದ ಸರ್ಪವನು ತೊಲಗಿಸ
ಲುತ್ತಮದ ಮಂತ್ರೌಷಧಂಗಳ
ಬಿತ್ತರಿಸಲದರಿಂದಲಡಗದವೋಲು ಪುಸಿಮಾಯೆ ।

**ಸತ್ಯವಹ ಸುಜ್ಞಾನದಿಂದಲಿ**
**ಮಿಥ್ಯವಾಗುತ ಕೆಡುವುದಲ್ಲದೆ**
**ಮತ್ತೆ ಕೋಟಿವುಪಾಯದಿಂದಲಿ ಕೆಡುವುದಿಲ್ಲೆಂದ ॥ ॥೨೯॥**

**ತಾತ್ಪರ್ಯ:** ಮಿಥ್ಯಾರೂಪವಾದ ಮಾಯೆಯೆಂಬ ಕೃತ್ರಿಮವಾದ (ಬರೀ ತೋರಿಕೆಯ) ಹಾವನ್ನು ಉತ್ತಮವಾದ ಮಂತ್ರ ಔಷಧಗಳನ್ನು ಹರಡಿ ಬಳಸುವುದರಿಂದ ಹೋಗಲಾಡಿಸಲಾಗದು. ನಿಜವಾದ ಸುಜ್ಞಾನದಿಂದ ಮಾಯೆ ನಾಶವಾಗುವುದೇ ಹೊರತು ಮತ್ತಾವ ಕೋಟಿ ಉಪಾಯಗಳಿಂದ ನಾಶವಾಗುವುದಿಲ್ಲ.

**ಶಬ್ದಾರ್ಥ:** ಕೃತ್ರಿಮದ=ಬರೀ ತೋರಿಕೆಯ; * **ಹುಸಿಮಾಯೆ**=ಮಿಥ್ಯಾರೂಪದ ಮಾಯೆ; * ಕೆಡುವುದಿಲ್ಲ=ನಾಶವಾಗುವುದಿಲ್ಲ; ಬಿತ್ತರಿಸಲು=ವಿಸ್ತರಿಸಲು;

---

**ಕೆಂಡ ಮನೆಯೊಳಗಿರಲು ಕತ್ತಲೆ**
**ಯಂಡಲೆವುದಕ್ಷಿಗಳನಂತಾ**
**ಕೆಂಡದಲಿ ದೀವಿಗೆಯ ಬೆಳಗಲು ತಿಮಿರವಳಿವಂತೆ ।**
**ಪಂಡಿತನೆ, ಪರಬೊಮ್ಮವಿದ್ದೂ**
**ಚಂಡಮಾಯೆ ವಿಜೃಂಭಿಸುತ್ತಲ**
**ಖಂಡವಹ ಸುಜ್ಞಾನದೀಪವ ಬೆಳಗೆ ಲಯವಹುದು ॥ ॥೩೦॥**

**ತಾತ್ಪರ್ಯ:** ಬೆಂಕಿಯ ಕೆಂಡವು ಮನೆಯೊಳಗಿದ್ದರೂ ಅದರಿಂದ ಮನೆಯ ಕತ್ತಲೆಯು ನಮ್ಮ ಕಣ್ಣುಗಳಿಗೆ ಆವರಿಸಿರುತ್ತದೆ. ಆದರೆ ಆ ಕೆಂಡದಿಂದ ದೀವಟಿಗೆಯನ್ನು ಹತ್ತಿಸಿದರೆ ಬೆಳಕಾಗಿ ಕತ್ತಲೆಯು ನಾಶವಾಗುತ್ತದೆ. ಅದರಂತೆಯೇ ಪಂಡಿತನೆ ಕೇಳು, ಅಂತರ್ಮುಖವಾಗಿ ಪರಬ್ರಹ್ಮನಿದ್ದರೂ ಕ್ರೂರವಾದ ಮಾಯೆ ತನ್ನ ಪ್ರತಾಪವನ್ನು ತೋರಿಸುತ್ತಲೇ ಇರುತ್ತದೆ. ಆದರೆ ಅವಿಚ್ಛಿನ್ನವಾಗಿ ಸಮ್ಯಕ್‌ಜ್ಞಾನ (ಸುಜ್ಞಾನ)ವೆಂಬ ಬೆಳಕು ಪಸರಿಸಲು ಆ ಮಾಯೆ ನಾಶವಾಗುತ್ತದೆ.

**ಶಬ್ದಾರ್ಥ: ಅಂಡಲೆವುದು**=ಆವರಿಸುವುದು; ಸುತ್ತಿಕೊಳ್ಳುವುದು; * **ಅಕ್ಷಿಗಳನು**=ಕಣ್ಣುಗಳನ್ನು; * **ಬೆಳಗಲು**=ಬೆಳಕನ್ನುಂಟುಮಾಡಲು; * **ತಿಮಿರ**=ಕತ್ತಲೆ; * **ಚಂಡಮಾಯೆ**=ಕ್ರೂರವಾದ ಮಾಯೆ; * **ವಿಜೃಂಭಿಸುತ್ತಲಿ**=ತನ್ನ ಪ್ರತಾಪವನ್ನು ತೋರಿಸುತ್ತಿರಲು; * **ಸುಜ್ಞಾನ**=ಸಮ್ಯಕ್ ಜ್ಞಾನ; * **ಅಖಂಡ**=ಅವಿಚ್ಛಿನ್ನ; * **ಲಯ**=ನಾಶ;

**ಟಿಪ್ಪಣಿ: ಈ ಪದ್ಯದ ಅಂತರಾರ್ಥ ಹೀಗಿದೆ:** "ಮಾಯೆಯು ಬ್ರಹ್ಮವನ್ನು ನಿಜವಾಗಿ ಆವರಿಸಿಲ್ಲ 'ಅದು ಇದೆ' ಎಂಬ ತಪ್ಪು ತಿಳಿವಳಿಕೆಯನ್ನು ಅದು ಇಲ್ಲ ಎಂಬ ಸುಜ್ಞಾನ ದೀಪವು ಎಂದರೆ ಸರಿಯಾದ ತಿಳಿವಳಿಕೆಯು ಹೋಗಲಾಡಿಸಿತೇ ಹೊರತು ನಿಜವಾಗಿರುವ ಬ್ರಹ್ಮಕ್ಕೂ ಇಲ್ಲದ ಮಾಯೆಗೂ ಯಾವ ಸಂಬಂಧವೂ ಇಲ್ಲವೆಂಬ ಭಾವ. ಮಿಥ್ಯಾವಸ್ತು ಸತ್ಯವಸ್ತುವಿಗೆ ವಿರೋಧವಲ್ಲ; ಮಿಥ್ಯಾವಸ್ತುವಿನ ತೋರಿಕೆಯು ಸತ್ಯವಸ್ತುವಿನ ಜ್ಞಾನಕ್ಕೆ ವಿರೋಧ.

---

**ಮಣ್ಣ ಬೆನಕಗೆ ಮಜ್ಜನದೊಳೇ**
**ತನ್ನ ಮರಣವದೆಂಬ ಗಾದೆಯ**
**ಲಿನ್ನು ಮಾಯೆಗೆ ತನ್ನ ಮೂಲವನರಿಯೆ ಲಯವಹುದು ।**
**ಮುನ್ನಲಿಲ್ಲವದಾತ್ಮನಿಂ; ತಾ**
**ತನ್ನ ತಿಳಿಯಲು ಮೇಲೆ ತೋರದು;**
**ನನ್ನಿ ನಡುವಿದು ಗುಣಫಣೆಯವೊಲು ಭ್ರಾಂತಿಜನ್ಯಕವು ॥ ॥೩೧॥**

**ತಾತ್ಪರ್ಯ:** ಮಣ್ಣಿನಲ್ಲಿ ಮಾಡಿದ ಗಣಪತಿಯನ್ನು ನೀರಿನಲ್ಲಿ ತೋಯಿಸಿದರೆ (ಸ್ನಾನ ಮಾಡಿಸಿದರೆ) ಅದು ಕರಗಿ ನಾಶವಾಗುತ್ತದೆ ಎಂಬ ಗಾದೆಯಂತೆ ಮಾಯೆಯ ಮೂಲವಾದ ಬ್ರಹ್ಮವನ್ನು ತಿಳಿದುಕೊಂಡರೆ ಮಾಯೆ ಲಯವಾಗಿ ಹೋಗುತ್ತದೆ. ಮಾಯೆ ಆತ್ಮಕ್ಕಿಂತ ಮುಂಚೆ ಇರಲಿಲ್ಲ ಆತ್ಮ ಸಾಕ್ಷಾತ್ಕಾರವಾದ ಮೇಲೆ (ಮನುಷ್ಯನು ತನ್ನ ನಿಜಸ್ವರೂಪವನ್ನು ತಿಳಿದುಕೊಂಡ ಮೇಲೆ) ತಾನೇ ಬ್ರಹ್ಮವಾಗಿ ಮಾಯೆ ಇಲ್ಲವಾಗುವುದು. ಈ ಮಾತು ಸತ್ಯ, ಏಕೆಂದರೆ ಮೊದಲಲ್ಲಿ ಮತ್ತು ಕೊನೆಯಲ್ಲಿ ಇಲ್ಲದೆ ಕೇವಲ ಮಧ್ಯಕಾಲದಲ್ಲಿ ಹುಟ್ಟುವ ಮಾಯೆಯೆಂಬ ಮೋಹಾಭಿಮಾನವು ಹಗ್ಗವು ಹಾವಾಗಿ ತೋರುವಂತೆ ಭ್ರಮಾತ್ಮಕವಾಗಿದೆ.

**ಶಬ್ದಾರ್ಥ: ಮೂಲವನು**=ಹಾವಾಗಿ ತೋರುತ್ತಿರುವುದಕ್ಕೆ ಹೇಗೆ ಹಗ್ಗವೇ ಮೂಲವೋ ಹಾಗೆ ಮಾಯೆಯ ಮೂಲವಾದ ಬ್ರಹ್ಮವನ್ನು; **ಮುನ್ನಲಿಲ್ಲವದಾತ್ಮನಿಂ**=(ಆತ್ಮನಿಂ+ಮುನ್ನಲಿ+ಅದು+ಇಲ್ಲವು)=ಅದೂ ಆತ್ಮಕ್ಕಿಂತ ಮುಂಚೆ ಇರಲಿಲ್ಲ; **ತಾ ತನ್ನ ತಿಳಿಯಲು**=ಮನುಷ್ಯನು ತನ್ನ ಸ್ವರೂಪವನ್ನು ತಾನು ತಿಳಿದುಕೊಂಡರೆ; **ನನ್ನಿ**=ಇದು ಸತ್ಯ; **ನಡುವೆ ಇದು**=ಮೊದಲು ಇರಲಿಲ್ಲ, ಅಂತ್ಯದಲ್ಲೂ ಇಲ್ಲ, ಮಧ್ಯಕಾಲದಲ್ಲಿ ಕಾಣಿಸಿಕೊಳ್ಳುವ ಮೋಹಾಭಿಮಾನವಿದು; **ಗುಣ ಫಣೆಯವೊಲು**=ಹಗ್ಗವು ಹಾವಾಗಿ ತೋರುವ ಹಾಗೆ;

---

**'ಮಾ'ಎನೆ ನಿಷೇಧಾರ್ಥವಪ್ಪುದು;**
**'ಯೆ' ಯೆನಲದಿಂತಾವಳೊಬ್ಬಳು;**
**ಯಿ ಎರಡು ವರ್ಣದಲಿ ಮಾಯೆಯದಿಲ್ಲವೆಂದರ್ಥ; ।**
**ಮಾಯೆಯೆಂಬೀ ಶಬ್ದತಾನೇ**
**ಮಾಯೆಯದು ಪುಸಿಯೆಂದು ನುಡಿಯಲು**
**ಮಾಯೆಗೆಂತು ಪ್ರತಿಷ್ಠೆ? ಸರ್ವವು ಬ್ರಹ್ಮಮಯವೆಂದ ॥ ॥೩೨॥**

**ತಾತ್ಪರ್ಯ:** ಸಂಸ್ಕೃತದ 'ಮಾ' ಎಂಬ ಶಬ್ದಕ್ಕೆ ಇಲ್ಲ ಎಂದರ್ಥ, 'ಯೆ' ಯೆಂಬುದು 'ಯಾ' ಮಾತಿನ ತದ್ಭವ, ಯಾ ಎಂದರೆ ಇಂಥ ಯಾವಳೊಬ್ಬಳು ಎಂದರ್ಥ (ಮಾಯಾ ಎಂದರೆ ಯಾವಳು ಇಲ್ಲವೋ ಅವಳು ಎಂದರ್ಥ) ಎಂದ ಮೇಲೆ ಮಾಯಾ ಎಂಬ ಶಬ್ದವೇ ಸುಳ್ಳು ಎಂದಾಗ ಇಲ್ಲದ ಮಾಯೆಗೆ ಪ್ರಾಶಸ್ತ್ಯ ಎಲ್ಲಿದೆ? ಆದ್ದರಿಂದ ಸಮಸ್ತವೂ ಬ್ರಹ್ಮಮಯವಾಗಿದೆ (ಸರ್ವಂ ಖಲ್ವಿದಂ ಬ್ರಹ್ಮ) ಎಂದು ತಿಳಿ.

**ಶಬ್ದಾರ್ಥ:** 'ಮಾ' ಎನೆ ನಿಷೇಧಾರ್ಥವಪ್ಪುದು=ಸಂಸ್ಕೃತದ 'ಮಾ' ಎಂಬ ಮಾತಿಗೆ 'ಇಲ್ಲ' ಎಂದರ್ಥ. 'ಯೆ'ಯೆನಲದಿಂತಾವಳೊಬ್ಬಳು='ಯೆ' ಯೆಂಬುದು ಸಂಸ್ಕೃತದ 'ಯಾ' ಎಂಬ ಮಾತಿನ ತದ್ಭವ. 'ಯಾ' ಎಂದರೆ ಇಂಥ ಯಾವಳೊಬ್ಬಳು ಎಂದರ್ಥ (ಮಾಯಾ ಎಂದರೆ ಯಾವಳು ಇಲ್ಲವೋ ಅವಳು ಎಂದರ್ಥ, ಎಂದರೆ ಮಾಯೆ ಎಂಬುದು ಇಲ್ಲವೆಂದು ತಾತ್ಪರ್ಯ). **ಸರ್ವವು ಬ್ರಹ್ಮಮಯ**=ಸರ್ವಂ ಖಲ್ವಿದಂ ಬ್ರಹ್ಮ (ಶ್ರುತಿ)

**ಪಾಠಾಂತರ:** **'ಮಾ' ಎನೆ**=ಮಾಯೆನೆ (ಕು); **'ಯೆ' ಯೆನಲದಿಂತಾವಳೊಬ್ಬಳು**=ಮಾಯೆಯನಿಸಿಂತಾವಳೊಬ್ಬಳು (ಕು); **ಯೀಯೆರಡು**=ಈ ಎರಡು (ಕು);

---

**ಎಲೆಲೆ ಮಾಯಾದೇವಿ, ಎನ್ನನು**
**ಬಳಲಿಸುವೆ ಹೋಗೆನಲು ಬ್ರಹ್ಮವ**
**ದೆಲೆ ವಿಭುವೆ, ನೀ ಪೂರ್ಣನಾಗಿರೆ ಹೋಗಲೆಡೆಯೆಲ್ಲಿ? ।**
**ತಿಳಿದು ನೋಡಲು ರಜ್ಜು ಭುಜಗನ**
**ವೊಲು ಕಣಾ ನಿನ್ನಲ್ಲಿ ಕಲ್ಪಿತ;**
**ಹೊಳೆವುತಳಿವುತಲಿರ್ಪುದೆನಗದು ಸಹಜವಾಗಿಹುದು ॥೩೩॥**

**ತಾತ್ಪರ್ಯ:** ಮಾಯೆ–ಪರಬ್ರಹ್ಮರ ಸಂವಾದ ಇಲ್ಲಿದೆ: ಪರಬ್ರಹ್ಮನು 'ಎಲೈ ಮಾಯಾ ದೇವಿಯೇ ನೀನು ವೃಥಾ ನನ್ನನು ಏಕೆ ಕಾಡುವೆ? ದೂರ ಸರಿ' ಎಂದು ಹೇಳಿದನು. ಆಗ ಮಾಯೆ ಹೇಳಿದಳು, "ಎಲೈ ಪ್ರಭುವೆ, ನೀನು ಎಲ್ಲೆಡೆ ಆವರಿಸಿರುವಾಗ (ಪೂರ್ಣನಾಗಿರಲು) ನಾನು (ನಿನ್ನಲ್ಲಿ) ಹುಟ್ಟುಗಟ್ಟಿದವಳು ಆಗಿರುವೆ. ನಾನೊಬ್ಬಳೇ ಇರುವ ಹಾಗೆ ಕಾಣಿಸಿಕೊಳ್ಳುತ್ತಲೋ ಮತ್ತು ತೋರಿ ಹಾರುತ್ತಲೋ ಇರುವುದು ನನಗೆ ಸಹಜ ಸ್ವಭಾವವಾಗಿದೆ" ಎಂದಳು.

**ಶಬ್ದಾರ್ಥ:** * **ಬಳಲಿಸುವೆ**=ಕಾಡುವೆ; * **ಹೋಗೆನಲು**=ದೂರ ಸರಿ ಎನ್ನಲು; **ವಿಭು**=ಪ್ರಭು; * **ಪೂರ್ಣನಾಗಿರೆ**=ಎಲ್ಲ ಕಡೆ ಆವರಿಸಿರಲು; * **ರಜ್ಜು**=ಹಗ್ಗ; * **ಭುಜಗ**=ಹಾವು; **ಕಲ್ಪಿತ**=ನಾನು (ನಿನ್ನಲ್ಲಿ) ಹುಟ್ಟುಗಟ್ಟಿದವಳು ಆಗಿರುವಳು; **ಹೊಳೆವುತಳಿವುತಲಿರ್ಪುದು**=ತಾನೊಬ್ಬಳೇ ಇರುವ ಹಾಗೆ ಕಾಣಿಸಿಕೊಳ್ಳುತ್ತಲೂ ಮತ್ತು ತೋರಿ ಹಾರುತ್ತಲೂ ಇರುವವಳು.

---

**ಏನನೆಂಬೆನು ಮಗನೆ, ಮಾಯಾ**
**ಮಾನಿನಿಯ ಮಹಿಮೆಯನು; ತನ್ನನು**
**ತಾನರಿಯದಂದದಲಿ ಮರವೆಯ ತೆರೆಯೊಳಡಗಿಸಿತು; ।**
**ಜ್ಞಾನವೆಂಬೀ ಲೋಚನವನ**
**ಜ್ಞಾನವೆಂಬೀ ತೆರೆಮುಸುಕಿ ಚಿ**
**ದ್ಭಾನುವಹೆ ತಾನೆಂಬ ತನು ಕಾಣಿಸದಲಾ! ಎಂದ ॥ ॥೩೪॥**

**ತಾತ್ಪರ್ಯ:** ಶುಕನೆ, ಮಾಯಾ ದೇವಿಯ ಮಹಿಮೆಯನ್ನು ಏನೆಂದು ವರ್ಣಿಸಲಿ? ನಾನು ಯಾರೆಂದು ತಿಳಿದುಕೊಳ್ಳದಂತೆ ಅಜ್ಞಾನವೆಂಬ ವಿಸ್ಮೃತಿಯ ತೆರೆಯಲ್ಲಿ

ನನ್ನನ್ನು ಅಡಗಿಸಿಕೊಂಡಿದ್ದಾಳೆ. ಜ್ಞಾನವೆಂಬ ಕಣ್ಣನ್ನು ತೆರೆದು ಆವರಿಸಿರುವ ಅಜ್ಞಾನವೆಂಬ ಪರದೆಯನ್ನು ಸರಿಸಲಾರದೆ ತಾನು ಜ್ಞಾನಸ್ವರೂಪನಾದ ಸೂರ್ಯನಾಗಿದ್ದೇನೆ ಎಂಬ ಸ್ವರೂಪವನ್ನು ಕಾಣಲಾರದಂತೆ ಆಗಿದೆಯಲ್ಲಾ! ಎಂದನು.

**ಶಬ್ದಾರ್ಥ:** * ಮಗನೆ=ಶುಕನೆ; * ಏನನೆಂಬೆನು=ಏನೆಂದು ವರ್ಣಿಸಲಿ!; * ಮರೆವೆಯ ತೆರೆಯೊಳಡಗಿಸಿತು=ಅಜ್ಞಾನವೆಂಬ ಪರದೆಯಲ್ಲಿ ನನ್ನನ್ನು ಅಡಗಿಸಿಕೊಂಡಿದ್ದಾಳೆ; * ಲೋಚನ=ಕಣ್ಣು; ಚಿದ್ಭಾನುವಹೆತಾನೆಂಬತನು=ತಾನು ಜ್ಞಾನ ಸ್ವರೂಪನಾದ ಸೂರ್ಯನಾಗಿದ್ದೇನೆ ಎಂಬ ತನ್ನ ಸ್ವರೂಪವನ್ನು ತಿಳಿಯಾಗದಲ್ಲಾ!

---

**ಕೆಲರು ಮೂಲಪ್ರಕೃತಿಯೆಂಬರು;**
**ಕೆಲರು ವೈಷ್ಣವಮಾಯೆಯೆಂಬರು;**
**ಕೆಲರು ಪೇಳ್ವರು ಯೋಗನಿದ್ರಾರೂಪಿಣಿಯದೆಂದು; ।**
**ಕೆಲಬರೀಶ್ವರಶಕ್ತಿಯೆಂಬರು;**
**ಕೆಲರು ಕಾರಣಳೆಂದು ಮಾಯೆಯ**
**ಹಲವು ಪರಿಯಹ ಹೋಲಿಕೆಯೊಳದ ಹೇಳುತಿಹರೆಂದ ॥ ॥೩೫॥**

**ತಾತ್ಪರ್ಯ:** ಮಾಯೆಯನ್ನು ನಾನಾ ಜನರು ನಾನಾ ರೀತಿ ಬಣ್ಣಿಸುತ್ತಿದ್ದಾರೆ. ಕೆಲವರು ಮೂಲ ಪ್ರಕೃತಿ ಎನ್ನುತ್ತಾರೆ. ಕೆಲವರು ವೈಷ್ಣವ ಮಾಯೆ ಎಂದೂ ಮತ್ತೆ ಕೆಲವರು ಯೋಗನಿದ್ರಾ ರೂಪಿಣಿ ಎಂಬುದಾಗಿಯೂ ಇನ್ನು ಹಲವರು ಎಲ್ಲ ಆಗು ಹೋಗುಗಳಿಗೆ ಕಾರಣಕರ್ತಳೆಂದೂ ನಾನಾ ರೀತಿಯ ಹೋಲಿಕೆಗಳಿಂದ ಮಾಯೆಯನ್ನು ವರ್ಣಿಸುತ್ತಾರೆ.

**ಶಬ್ದಾರ್ಥ:** * ಎಂಬರು=ಎಂದು ಹೇಳುತ್ತಾರೆ; * ಹಲವು ಪರಿಯಹ=ನಾನಾ ರೀತಿಯ; * ಹೋಲಿಕೆ= ನಿದರ್ಶನಗಳಿಗೆ ಹೋಲಿಸಿ; * ಅದ=ಮಾಯೆಯನ್ನು; * ವೈಷ್ಣವ ಮಾಯೆ=ವಿಷ್ಣುವಿನ ಮಾಯೆ;

---

## ಮಾಯೆಯ ಅಸಾಂಗತ್ಯ (೩೬)

**ಮಾಯೆಯನು ಕೊಂಡೇನು ಕೆಲಸ? ತ**
**ದೀಯ ಗುಣಸಂಬಂಧ ತತ್ತ್ವನಿ**
**ಕಾಯಸರ್ಗಸ್ಥಿತಿಲಯಂಗಳ ಕೊಂಡು ಫಲವೇನು? ।**
**ಈಯಶೇಷವ ನೇತಿಗಳೆದುಳಿ**
**ದಾ ಯಥಾರ್ಥ ಸ್ವಪ್ರಕಾಶವೆ**
**ಕಾಯವಾದರೆ ಸಾಲದೇ? ಮಿಕ್ಕುದರೊಳಿನ್ನೇನು ॥ ॥೩೬॥**

**ತಾತ್ಪರ್ಯ:** ಮಾಯೆಯ ವಿಚಾರವಾಗಿ ಚರ್ಚಿಸಿದರೆ ನಮಗೇನೂ ಪ್ರಯೋಜನವಿಲ್ಲ ಅದರ ಸತ್ಯ ಸ್ವರೂಪವನ್ನು ತಿಳಿಯಬೇಕು ಅಷ್ಟೇ. ಮಾಯೆ ತ್ರಿಗುಣಗಳನ್ನು

ಪಂಚವಿಂಶತಿ ತತ್ವಗಳನ್ನು ಹುಟ್ಟು ಬಾಳು ಸಾವುಗಳನ್ನು ತಿಳಿದುಕೊಂಡೆ ಏನೂ ಪ್ರಯೋಜನವಿಲ್ಲ. ಇವೆಲ್ಲವನ್ನು ಇದು ಆತ್ಮವಲ್ಲ, ಇದೂ ಆತ್ಮವಲ್ಲ ಎಂದು ತೊರೆದಾಗ ಉಳಿಯುವ ಸತ್ಯಸ್ವರೂಪವಾದ ಆತ್ಮಜ್ಞಾನವೇ ತನ್ನ ನಿಜರೂಪವೆಂದು ತಿಳಿದರೆ ಸಾಕು. ಉಳಿದುದರಿಂದ ಆಗುವ ಪ್ರಯೋಜನವೇನೂ ಇಲ್ಲ.

**ಶಬ್ದಾರ್ಥ: ಮಾಯೆಯನು ಕೊಂಡೇನು ಕೆಲಸ**=ಮಾಯೆಯ ವಿಚಾರವಾಗಿ ಚರ್ಚಿಸುವುದರಿಂದ ನಮಗೇನು ಪ್ರಯೋಜನವಿಲ್ಲ; * **ಗುಣ ಸಂಬಂಧ**=ತ್ರಿಗುಣಗಳನ್ನು; **ತತ್ವನಿಕಾಯ**=ಪಂಚವಿಂಶತಿ ತತ್ವಗಳನ್ನು; ಸರ್ಗ, **ಸ್ಥಿತಿ ಲಯಂಗಳ**=ಹುಟ್ಟು, ಬಾಳು, ಸಾವುಗಳನ್ನು; * **ಕೊಂಡು ಫಲವೇನು?**=ತಿಳಿದುಕೊಂಡು ಆಗುವುದಾದರೂ ಏನು? * **ಈ ಅಶೇಷವ**=ಇವೆಲ್ಲವನ್ನೂ; **ನೇತಿಗಳೆದು**=ಇದೂ ಆತ್ಮವಲ್ಲ, ಇದೂ ಆತ್ಮವಲ್ಲ ಎಂದು ಬಿಟ್ಟು; **ಕಾಯವಾದರೆ**=ತನ್ನ ಸ್ವರೂಪವಾದರೆ; **ಯಥಾರ್ಥ ಸ್ವಪ್ರಕಾಶವೆ**=ಸತ್ಯ ಸ್ವರೂಪವಾದ ಆತ್ಮಜ್ಞಾನವೆ

---

## ಉಪಸಂಹಾರ

**ಇಂತು ಮಾಯೆಯ ಪರಿಯನೆಲ್ಲವ**
**ಭ್ರಾಂತಿಯೆಂದೇ ತಿಳುಹಿ ಮುನಿಪತಿ**
**ಯಂತವಿಲ್ಲದ ಸುಖವದದ್ವಯವೆಂದು ಶುಕಮುನಿಗೆ ।**
**ಸಂತಸದಿ ಬೋಧಿಸಲು ಚಿತ್ತದ**
**ಚಿಂತೆಯಳಿದು ಸದಾನುಭವವಿ**
**ಶ್ರಾಂತ ಸಹಜಾನಂದ ಗುರುಪದ ಹೊಂದಿ ಸುಖಿಯಾದ ॥ ॥೩೭॥**

**ತಾತ್ಪರ್ಯ:** ಈ ರೀತಿಯಾಗಿ ಮಾಯೆಯ ನಾನಾ ವ್ಯಾಪಾರಗಳೆಲ್ಲ ಭ್ರಾಂತಿಯೆಂದೇ ವ್ಯಾಸನು ಶುಕಮುನಿಗೆ ತಿಳಿಸಿದನು. ಅನಂತರ, ಪರಬ್ರಹ್ಮವೊಂದೇ ಅನಂತಸುಖ ರೂಪವಾಗಿದ್ದು ಎರಡನೆಯದಾಗಿ ಕಾಣುವವುಗಳೆಲ್ಲ ಭ್ರಾಂತಿಯಾದುದರಿಂದ ಆತ್ಮವು ತನಗೆರಡನೆಯದಿಲ್ಲವೆಂದು ಸಂತಸದಿಂದ ಬೋಧಿಸಿದಾಗ ಶುಕನ ಮನಸ್ಸಿನ ಸಂಶಯಗಳೆಲ್ಲ ದೂರವಾಯಿತು. ಸದಾನುಭವ ನಿರತವಾದ ಸಹಜಾನಂದ ಗುರುಗಳ ಪಾದವನ್ನು ಸೇವಿಸಿ ಸುಖಿಯಾದನು.

**ಶಬ್ದಾರ್ಥ:** * **ಮಾಯೆಯ ಪರಿ**=ಮಾಯೆಯ ವ್ಯಾಪಾರಗಳೆಲ್ಲ; * **ಅಂತವಿಲ್ಲದ ಸುಖ**=ಅನಂತ ಸುಖ; **ಅದ್ವಯ**=ಎರಡನೆಯದಾಗಿ ಕಾಣುವವುಗಳೆಲ್ಲ ಭ್ರಾಂತಿಯಾದ್ದರಿಂದ ಆತ್ಮವು ತನಗೆ ಎರಡನೆಯದಿಲ್ಲದ್ದೆಂದು; **ಗುರುಪದ**=ಗುರುಗಳ ಪಾದವನ್ನು; ಸದಾನುಭವ ವಿಶ್ರಾಂತ= ಸದಾನುಭವನಿರತ;

---

## ಮಂಗಲ

**ಚಂಡತರದೋರ್ದಂಡ ಮಂಡಲ**
**ಮಂಡಿತಾಯುಧಷಂಡ ಬಹಳೋ**
**ದ್ದಂಡರಾಕ್ಷಸಖಂಡನೋಚಿತಖಂಡಪರಶುಧರ, ।**

**ಮಂಡಲೀಕೃತಕುಂಡಲೀಂದ್ರ ಪ್ರ**
**ಚಂಡಕುಂಡಲ ಗಂಡಮಂಡಲ**
**ಚಂಡಿಕೇಶ್ವರ, ಮಲ್ಲಿಕಾರ್ಜುನ ಸಲಹು ಮೂಜಗವ ॥ ॥೩೮॥**

**ತಾತ್ಪರ್ಯ:** ಪ್ರಬಲವಾದ ಭುಜದಂಡಗಳನ್ನು ಅಲಂಕರಿಸಿರುವ, ದಿವ್ಯಾಯುಧಗಳನ್ನು ಧರಿಸಿದವನೂ, ಅನೇಕ ಪ್ರಬಲ ರಾಕ್ಷಸರನ್ನು ಮರ್ದಿಸತಕ್ಕ ಗಂಡುಗೊಡಲಿಯನ್ನು ಧರಿಸಿದವನೂ ಗುಂಡಾಗಿ ಸುತ್ತಿಕೊಂಡಿರುವ ಹಾವುಗಳೆಂಬ ಕರ್ಣಕುಂಡಲಗಳಿಂದ ಅಲಂಕೃತನಾದವನೂ ಚಂಡಿಕಾ (ದುರ್ಗಾ)ಪತಿ ಶ್ರೀಶೈಲಮಲ್ಲಿಕಾರ್ಜುನ ಸ್ವಾಮಿಯೇ ಮೂರು ಲೋಕಗಳನ್ನು ಕಾಪಾಡು ಎಂದು ಕವಿ ಪ್ರಾರ್ಥಿಸುತ್ತಾನೆ. ಈ ಪದ್ಯ ಈ ಅಧ್ಯಾಯಕ್ಕೆ ಮಂಗಳ ಪದ್ಯ.

**ಶಬ್ದಾರ್ಥ:** * **ಚಂಡತರ**=ಪ್ರಬಲವಾದ, ಶಕ್ತಿಯುತವಾದ; **ದೋರ್ದಂಡ**=ಎರಡು ಭುಜದಂಡಗಳು; **ಷಂಡ**=ಸಮೂಹ; **ಉದ್ದಂಡ**=ಘೋರ; **ಖಂಡಪರಶು**=ಗಂಡುಗೊಡಲಿ (ತ್ರಿಶೂಲ); **ಮಂಡಲೀಕೃತ**=ಗುಂಡಾಗಿರುವ; **ಗಂಡಮಂಡಲ**=ಕೆನ್ನೆ; **ಮೂಜಗ**=ಮೂರುಲೋಕ.

## ಮುಕ್ತಾಯ

**ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಮಾಯಾಮಿಥ್ಯಾತ್ವ ಪ್ರಕರಣವೆಂಬ ಎಂಟನೆಯ ಅಧ್ಯಾಯವು ಮುಗಿದುದು.**

# ಸಾರಸಂಗ್ರಹ

## ಎಂಟನೆಯ ಅಧ್ಯಾಯ – ಮಾಯಾಮಿಥ್ಯಾತ್ವ ಪ್ರಕರಣ

ಮಾಯೆಯಿಂದ ಜಗತ್ತಾಗಿರುವದೆಂದೂ ಆ ಜಗತ್ತಿನಲ್ಲೆಲ್ಲ ಬ್ರಹ್ಮವು ವ್ಯಾಪಿಸಿರುವದೆಂದೂ ಹೇಳಿದ ಮಾತ್ರದಿಂದ ಮಾಯೆಯೂ ಬ್ರಹ್ಮವೂ ಯಾವಾಗಲೂ ಜೋಡಿಯಾಗಿರತಕ್ಕವುಗಳೆಂದು ತಿಳಿಯಬಾರದು. ಮಾಯೆಯು ಚರ್ಮದೃಷ್ಟಿಗೆ ಕಾಣುವದೇ ಹೊರತು ಜ್ಞಾನದೃಷ್ಟಿಗೆ ಸೊನ್ನೆಯೇ. ಬ್ರಹ್ಮವು ತನ್ನನ್ನು ತಾನು ವಿಷಯವಾಗಿ ಮಾಡಿಕೊಳ್ಳಬೇಕೆಂದು ಯೋಚಿಸಿದ ಸಂಧಿಕಾಲದಲ್ಲಿ ಆ ಮಾಯೆ ತಲೇ ಎತ್ತಿತು. ಒಂದಂಕೆಯ ಮುಂದೆ ಬಿಂದುಗಳನ್ನು ಸೇರಿಸಿದಷ್ಟೂ ಅದರ ಬೆಲೆ ವೃದ್ಧಿಯಾಗುವಂತೆ ಮಾಯಾ ಸಂಬಂಧದಿಂದ ಬ್ರಹ್ಮವೇ ವೃದ್ಧಿಯಾದಂತೆ ತೋರುವದು. ಅಂಕೆಯ ಸಂಬಂಧವನ್ನು ಬಿಟ್ಟ ಬಿಂದು ಹೇಗೆ ನಿಸ್ಸತ್ವವೋ ಬ್ರಹ್ಮವನ್ನು ಬಿಟ್ಟ ಮಾಯೆಯೂ ಹಾಗೆ ನಿಸ್ಸತ್ತ್ವವು. ನಿಸ್ಸತ್ತ್ವವೆಂದು ಬಿಂದುವನ್ನು ಅಳಿಸಿಬಿಟ್ಟರೆ ಕೊನೆಗೆ ಅಂಕೆಯೊಂದೇ ಸತ್ತ್ವವಾಗಿ ಉಳಿದುಕೊಳ್ಳುವಂತೆ ಮಾಯೆಯನ್ನು ಮಿಥ್ಯೆವೆಂದು ಬೇರೆ ಮಾಡಿದರೆ ಬ್ರಹ್ಮವೇ ತಥ್ಯವಾಗಿ ಉಳಿಯುವದು. ಮಾಯೆಯಿಂದ ಜಗತ್ತಾಗಿದ್ದರೂ–ಮರದಾನೆಯಲ್ಲಿ ಆನೆಯಾಗಿ ತೋರುವದು ಮರವೇ ಹೊರತು ಬೇರೆ ಹೇಗಿಲ್ಲವೊ ಹಾಗೆ–ಜಗತ್ತಾಗಿ ಕಾಣುತ್ತಿರುವದೂ ಬ್ರಹ್ಮವೇ ಹೊರತು ಬೇರೆ ಅಲ್ಲ.

ಮಾಯೆಯ ಕೆಲಸವು ನಾಮರೂಪಗಳ ಕಲ್ಪನೆ ಮಾತ್ರ, ಆ ಮಾಯೆಯೆಂಬುದು ನಮ್ಮಲ್ಲಿ ಮನಸ್ಸಿನ ರೂಪದಿಂದಿರುವದು. ಆದ್ದರಿಂದಲೇ ಮನಸ್ಸಿರುವ ಎಚ್ಚರ ಕನಸುಗಳಲ್ಲೆಲ್ಲ ಜಗದ್ಭ್ರಾಂತಿ ಇದ್ದೇ ಇರುವದು. ಈ ಮಾಯೆಯು ಆತ್ಮ ಜ್ಞಾನವಿಲ್ಲದ್ದರಿಂದ ಮಾತ್ರ ತೋರುವದೆಂದರಿತು ಆತ್ಮ ಜ್ಞಾನದಿಂದದನ್ನು ಹೋಗಲಾಡಿಸಿಕೊಳ್ಳಬೇಕು.

*****

# ಒಂಬತ್ತನೆಯ ಅಧ್ಯಾಯ

## ಜೀವತ್ರಯ ವಿಚಾರ

**ಸೂಚನೆ॥**

**ಸಾದರದಿ ಜೀವತ್ರಯಂಗಳ**
**ಭೇದವನು ತಿಳಿವಂತೆ ಕರುಣದಿ**
**ಬೋಧಿಸಿದನಾ ಬಾದರಾಯಣ ಶುಕಮುನೀಶ್ವರಗೆ ॥**

**ತಾತ್ಪರ್ಯ:** ಶ್ರದ್ಧಾಪೂರ್ವಕವಾಗಿ, ವ್ಯಾವಹಾರಿಕ, ಪ್ರಾತಿಭಾಸಿಕ, ಪಾರಮಾರ್ಥಿಕಗಳೆಂಬ ಜೀವದ ವಿವಿಧ ಗತಿಗಳನ್ನು ಕೃಪೆಮಾಡಿ ವೇದವ್ಯಾಸನು ಶುಕಮುನಿಗೆ ಸರಳವಾಗಿ ತಿಳಿಯುವಂತೆ ಉಪದೇಶಿಸಿದನು.

**ಶಬ್ದಾರ್ಥ:** * ಸಾದರದಿ=ಲಕ್ಷ್ಯಪೂರ್ವಕವಾಗಿ, ಶ್ರದ್ಧಾಪೂರ್ವಕವಾಗಿ; * ಜೀವತ್ರಯಂಗಳು= ಜೀವದ ಮೂರು ಗತಿಗಳು; * ಕರುಣದಿ =ಕೃಪೆಯಿಟ್ಟು; * ಬೋಧಿಸಿದನು=ಉಪದೇಶಿಸಿದನು; * ಬಾದರಾಯಣ=ವೇದವ್ಯಾಸ.

**ಟಿಪ್ಪಣಿ:** ಜೀವಗಳು ಮೂರು ವಿಧ. ಪಾರಮಾರ್ಥಿಕ (=ಸಾಕ್ಷಿ, ಕೂಟಸ್ಥ, ಚೇತನ), ೨ ವ್ಯಾವಹಾರಿಕ (=ಸಾಭಾಸ ಅಂತಃಕರಣರೂಪ ಜೀವ), ೩ ಪ್ರಾತಿಭಾಸಿಕ (=ಸಾಭಾಸ ಅಂತಃಕರಣರೂಪ ವ್ಯಾವಹಾರಿಕ ಜೀವನದಲ್ಲಿ ಸ್ವಪ್ನದಲ್ಲಿ ಅಧ್ಯಸ್ಥನಾಗಿ ತೋರುವ ಜೀವ.) ವಿಚಾರ ಚಂದ್ರೋದಯ ಅನು: ಶಾಂತಾನಂದ ಸ್ವಾಮಿ, ಪುಟ-೨೨೩.

**ಪಾಠಾಂತರ:** * ಕರುಣದಿ=ಹರುಷದಿ (ಕು)

---

### ಇಷ್ಟದೇವತಾಸ್ತುತಿ

**ಜಡೆಯೊಳಗೆ ಜಾಹ್ನವಿಯ, ಮಕುಟ**
**ದೊಳುಡುಪತಿಯ, ಕೊರಳಲ್ಲಿ ಗರಳವ,**
**ತೊಡೆಯ ಮೇಲೆ ಮೃಡಾಣಿಯನು, ಕಟಿತಟದಿ ಕೃತ್ತಿಯನು, ।**
**ಒಡಲೊಳುರಗನ ತೊಡವ, ಕರದಲಿ**
**ಜಡಿವ ಶೂಲಕಪಾಲಗಳ, ಜಗ**
**ದೊಡೆಯ ಶ್ರೀಗಿರಿಮಲ್ಲಿಕಾರ್ಜುನ ಬಿಡದೆ ಧರಿಸಿಹನು ॥ ॥೧॥**

**ತಾತ್ಪರ್ಯ:** ಜಟೆಯೊಳಗೆ ದೇವಗಂಗೆಯನ್ನೂ, ಕಿರೀಟದಲ್ಲಿ ಚಂದ್ರನನ್ನೂ, ಕಂಠದಲ್ಲಿ ವಿಷವನ್ನೂ, ತೊಡೆಯಮೇಲೆ ಗೌರೀದೇವಿಯನ್ನೂ, ನಡುವಿನಲ್ಲಿ ಗಜಾಸುರನ ಚರ್ಮದ ಉಡುಗೆಯನ್ನೂ, ಮೈತುಂಬ ಸರ್ಪಾಭರಣವನ್ನೂ, ಕೈಗಳಲ್ಲಿ ಪ್ರಕಾಶಿಸುವ ತ್ರಿಶೂಲ ಮತ್ತು ಬ್ರಹ್ಮಕಪಾಲವನ್ನೂ ಶ್ರೀಗಿರಿಮಲ್ಲಿಕಾರ್ಜುನನು ಸತತ ಧರಿಸಿದ್ದಾನೆ. ಅವನಿಗೆ ವಂದಿಸುತ್ತೇನೆ.

**ಶಬ್ದಾರ್ಥ:** * ಜಡೆ=ಜಟೆ; * ಜಾಹ್ನವಿ=ದೇವಗಂಗೆ; * ಮಕುಟ=ಕಿರೀಟ, ಉಡುಪತಿ=ಚಂದ್ರ; * ಕೊರಳು=ಕಂಠ; * ಗರಳ=ವಿಷ; ಮೃಡಾಣಿ=ಗೌರಿ; ಕಟಿತಟ=ನಡು(ಸೊಂಟ); ಕೃತ್ತಿ=ಚರ್ಮ; * ಉರಗ=ಹಾವು; ತೊಡವು=ಆಭರಣ; * ಕರ=ಕೈ; * ಜಡಿವ=ಪ್ರಕಾಶಿಸುವ; ಕಪಾಲ=ತಲೆ ಬುರುಡೆ

---

## ದುರ್ಜನ ನಿಂದೆ

ಶಠರಿಗನ್ನೃತರಿಗಪ್ರಮಾಣರಿ
ಗಟಮುಟರಿಗಪಕೀರ್ತಿಗಂಜದ
ವಿಟಚರಿತ್ರರಿಗಲಸರಿಂಗನ್ಯಾಯಶೀಲರಿಗೆ, ।
ನಟನೆಯಲಿ ನಾಟಕವ ನಟಿಸುವ
ಚಟುಲತರಚಿತ್ತರಿಗೆ, ಬೇಳ್ವೆಯ
ಸಟೆಪಟೆಯ ಸದನರಿಗೆ ಪೇಳದಿರನುಭವಾಮೃತವ ॥ ॥೨॥

**ತಾತ್ಪರ್ಯ:** ಮೂರ್ಖರಿಗೆ, ಸುಳ್ಳುಗಾರರಿಗೆ, ಯಾವ ಪ್ರಮಾಣವನ್ನೂ ಒಪ್ಪದೆ ಇರುವವರಿಗೆ, ಅಪಖ್ಯಾತಿಗೆ ಹೆದರದ ಮೋಸಗಾರರಿಗೆ, ಕಾಮಾಂಧರಿಗೆ, ಅಧರ್ಮಾಚರಣೆಯಲ್ಲಿರುವವರಿಗೆ, ಸೋಮಾರಿಗಳಿಗೆ, ತೋರ್ಪಡಿಕೆಯಲ್ಲಿ ಸಜ್ಜನರಾಗಿ ಕಾಣಿಸಿಕೊಳ್ಳುತ್ತಾ ಮೋಸಮಾಡುವ ಜಾಣರಿಗೆ, ಅನ್ಯಾಯಮಾಡುವವರಿಗೆ, ಕಪಟಿಗಳಿಗೆ, ವಂಚಿಸುವವರಿಗೆ, ಮರುಳುಮಾಡುವ ನಯವಂಚನೆಯ ಮಾತುಗಳನ್ನಾಡುವವರಿಗೆ ಈ ಅದ್ವೈತ ವೇದಾಂತ ಗ್ರಂಥವಾದ ಅನುಭವಾಮೃತವನ್ನು ಬೋಧಿಸಬೇಡ.

**ಶಬ್ದಾರ್ಥ:** * ಶಠರಿಗೆ=ಧೂರ್ತ, ಹಟಮಾರಿ; * ಅನ್ನೃತರಿಗೆ=ಸುಳ್ಳುಗಾರರಿಗೆ; * ಅಪ್ರಮಾಣರಿಗೆ= * ಅಪ್ರಾಮಾಣಿಕರಿಗೆ (ಅಸತ್ಯವಂತರಿಗೆ); * ಅಪಕೀರ್ತಿಗೆ ಅಂಜದ= ಅಪಖ್ಯಾತಿಗೆ ಹೆದರದ; * ಅಟಮುಟರಿಗೆ=ಮೋಸಗಾರರಿಗೆ; ವಿಟಚರಿತ್ರರಿಗೆ=ಕಾಮಾಂಧರಿಗೆ; * ಅನ್ಯಾಯಶೀಲರಿಗೆ =ಅಧರ್ಮಾಚರಣೆಯಲ್ಲಿರುವವರಿಗೆ; * ಅಲಸರಿಗೆ=ಸೋಮಾರಿಗಳಿಗೆ; * ನಟನೆಯಲಿ ನಾಟಕವ ನಟಿಸುವ ಚಟುಲತರ ಚಿತ್ತರಿಗೆ=ತೋರ್ಪಡಿಕೆಯಲ್ಲಿ ಸಜ್ಜನರಾಗಿ ಕಾಣಿಸಿಕೊಳ್ಳುವ ಕುಶಾಗ್ರವಂತರಿಗೆ; * ಬೇಳ್ವಯ ಸಟೆಪಟೆಯ ಸದನರಿಗೆ=ಮರುಳುಮಾಡುವ ನಯವಂಚಕರಿಗೆ; ಪೇಳದಿರು =ಬೋಧಿಸಬೇಡ.

---

## ಸುಜನ ಸ್ತುತಿ

ಪರಹಿತವ ಮಾಳ್ಪರಿಗೆ, ಪುಣ್ಯಸು
ಚರಿತರಿಗೆ, ಪುರುಷಾರ್ಥಪರರಿಗೆ,
ತರಹರದ ತಾಳಿಕೆಯ ಬುದ್ಧಿಯ ತಳೆದ ವೃದ್ಧರಿಗೆ, ।

ಪರಮಶಾಂತಿಯ ತಳೆದ ಚಿತ್ತದ
ಪರಿಯನುಳ್ಳವರಿಂಗೆ, ಪ್ರಾಪ್ತರಿ
ಗರುಹುವುದು ಗುರುಭಕ್ತರಿಂಗೀ ಅನುಭವಾಮೃತವ ॥ ॥೩॥

ತಾತ್ಪರ್ಯ: ಪರೋಪಕಾರ ಮಾಡುವವರಿಗೆ, ಪುಣ್ಯಕಾರ್ಯಮಾಡುವ ಸಜ್ಜನರಿಗೆ, ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಧರ್ಮಗಳನ್ನು ಆಚರಿಸುವವರಿಗೆ, ಸೈರಿಸಿಕೊಂಡು ಸಮಾಧಾನದಿಂದ ಇರುವ ಸ್ವಭಾವದ ಹಿರಿಯರಿಗೆ, ಶಾಂತಗುಣ ಹೊಂದಿದವರಿಗೆ ತತ್ತ್ವವಿಚಾರವಾಗಿ ತಾವಾಗಿ ಕೇಳಬಂದವರಿಗೆ, ಗುರುಸೇವಾತತ್ಪರರಿಗೆ ಈ ಅನುಭವಾಮೃತವನ್ನು ಬೋಧಿಸಬೇಕು.

ಶಬ್ದಾರ್ಥ: ತರಹರದ ತಾಳಿಕೆಯ ಬುದ್ಧಿಯ ತಳೆದ ವೃದ್ಧರಿಗೆ=ಸೈರಿಸಿಕೊಂಡು ಸಮಾಧಾನದಿಂದ ಇರುವ ಸ್ವಭಾವದ ಹಿರಿಯರಿಗೆ, *ಪ್ರಾಪ್ತರಿಗೆ =ತಾವಾಗಿ ತತ್ತ್ವವಿಚಾರ ತಿಳಿಯಬಂದವರಿಗೆ; * ಗುರುಭಕ್ತರಿಗೆ=ಗುರುಸೇವಾಪರಾಯಣರಿಗೆ.

---

ಎಂತು ಹಮ್ಮಿನ ರೂಪು? ಜೀವರ
ದೆಂತು ದೇಹದೊಳಿರ್ಪ್ಪರವರಿಗ
ದೆಂತು ಬಂದುದು ಜೀವತನದಾರೋಪವದು ಬರಿದೆ? ।
ಎಂತು ಜೀವನ್ಮುಕ್ತಿಯಾಗುವ
ದೆಂತು ಜಗದೇಕತ್ವ? ಮೋಕ್ಷವ
ದೆಂತದನು ತಿಳುಹೆಂದು ಬಿನ್ನಯಿಸಿದನು ಶುಕಯೋಗಿ ॥ ॥೪॥

ತಾತ್ಪರ್ಯ: ಅಹಂಕಾರದಸ್ವರೂಪ ಎಂತಹುದು? ಹಮ್ಮಿನರೂಪಿಗಳಾದ ಜೀವರು ಈ ದೇಹದೊಳಗೆ ಇರುವ ಪರಿ ಹೇಗೆ? ಅವರಿಗೆ ವ್ಯರ್ಥವಾದ ಜೀವತ್ವದ ಆರೋಪವು ಹೇಗೆ ಬಂದಿತು? ಬದುಕಿರುವಾಗಲೇ ಮುಕ್ತಿ ಅವರಿಗೆ ಹೇಗಾಗುವುದು? ಬೇರೆಬೇರೆಯಾಗಿ ಕಾಣುವುದನ್ನೆಲ್ಲಾ ಒಂದೇ ದೃಷ್ಟಿಯಿಂದ ನೋಡುವ ಅದ್ವೈತಭಾವ (ಜಗದೇಕತ್ವ) ಹೇಗೆ ಬರುತ್ತದೆ? ಇವನ್ನೆಲ್ಲ ವಿವರಿಸಬೇಕು ಎಂದು ಶುಕಮುನಿ ವ್ಯಾಸರಲ್ಲಿ ಪ್ರಾರ್ಥಿಸಿದನು.

ಶಬ್ದಾರ್ಥ: * ಹಮ್ಮು=ಅಹಂಕಾರ; ಜಗದೇಕತ್ವ=ಬೇರೆಬೇರೆಯಾಗಿ ಕಾಣುವುದನ್ನೆಲ್ಲಾ ಒಂದೇ ದೃಷ್ಟಿಯಿಂದ ನೋಡುವ ಅದ್ವೈತಭಾವ; * ಮೋಕ್ಷ=ಮುಕ್ತಿ, ಬಿಡುಗಡೆ; ತಿಳುಹು=ಬೋಧಿಸು; ಬಿನ್ನವಿಸು=ಪ್ರಾರ್ಥಿಸು.

---

ತನ್ನ ನಿಜವನು ಮರೆದ ಕತದಿಂ
ದನ್ಯದೊಳು ತಾನೆಂಬ ಹಮ್ಮಿದು
ನನ್ನಿಯಾತುಮಧರ್ಮವಲ್ಲದು, ದೇಹಗುಣವಲ್ಲ; ।

**ಭಿನ್ನವಾಗಿಹುದೀಯಹಮ್ಮೆಂ**
**ಬುನ್ನತಿಕೆಯಭಿಮಾನರೂಪದು;**
**ತನ್ನೊಳಗೆ ಚೈತನ್ಯಬೆರೆಯಲು ಚೇಷ್ಟೆವಡೆದಿಹುದು ॥ ॥೫॥**

**ತಾತ್ಪರ್ಯ:** ತನ್ನ ಸತ್ಯಸ್ವರೂಪವನ್ನು ಮರೆತ ಕಾರಣ ಆ ಮಾಯೆಯ ಸಂಬಂಧವಿಲ್ಲದ ಶುದ್ಧಬ್ರಹ್ಮನೇ ತಾನೆಂದು ಅರಿಯದಿರುವುದರಿಂದಲೇ ದೇಹ ಮೊದಲಾದವುಗಳಲ್ಲಿ ಆ ಮಾಯೆಯಿಂದ ಎದ್ದುಕೊಂಡಿರುವ ನಾನು ನಾನೆಂಬ ಅಹಂಕಾರವು ನಮ್ಮಲ್ಲಿ ತಾಂಡವವಾಡುತ್ತಿರುವುದು ನಿಜ. ಆದರೆ ಈ ನಾನು ಎಂಬ ಅಹಂಕಾರಗುಣ ನಿಜಕ್ಕೂ ಆತ್ಮಗುಣವೂ ಅಲ್ಲ; ದೇಹಧರ್ಮವೂ ಅಲ್ಲ. ಈ ಅಹಂ ಎಂಬ ದೊಡ್ಡಸ್ತಿಕೆಯ ಅಭಿಮಾನವು ಭಿನ್ನವಾಗಿದೆ. ಅದಕ್ಕೆ ಸ್ವತಂತ್ರಶಕ್ತಿಯಿಲ್ಲ. ಅದರಲ್ಲಿ ಚೈತನ್ಯ ಬೆರೆಯಲು ತಾನೇ ಚೈತನ್ಯವೆಂಬಂತಾಗಿ ಚೇತನಸಂಬಂಧವಾದ ನಾನಾ ಚೇಷ್ಟೆಗಳಿಗೆ ಕಾರಣವಾಗಿದೆ.

**ಶಬ್ದಾರ್ಥ:** * **ತನ್ನನಿಜವನು**=ತನ್ನ ಸತ್ಯಸ್ವರೂಪವನ್ನು; * **ಮರೆದ**=ಮರೆತ; * **ಕತದಿಂ**=ಕಾರಣದಿಂದ; **ಅನ್ಯದೊಳು**=ದೇಹ ಮೊದಲಾದವುಗಳಲ್ಲಿ; * **ನನ್ನಿ**=ನಿಜ; **ಭಿನ್ನವಾಗಿಹುದು**=ಆತ್ಮಧರ್ಮಕ್ಕಿಂತ, ದೇಹಗುಣಕ್ಕಿಂತ ಬೇರೆಯಾಗಿರುವುದು; **ತನ್ನೊಳಗೆ ಚೈತನ್ಯ ಬೆರೆಯಲು**=ತಾನೇ ಚೈತನ್ಯವೆಂಬಂತಾಗಿ; * **ಚೇಷ್ಟೆ ಪಡೆದಿಹುದು**=ನಾನಾ ವ್ಯಾಪಾರಗಳಿಗೆ ಕಾರಣವಾಗಿದೆ.

---

**ಹಮ್ಮುತನುವಿನ ಧರ್ಮವಾದೊಡ**
**ದೊಮ್ಮೆಯೂ ಧರ್ಮಿಯನು ಬಿಡದೇ**
**ನೆಮ್ಮಿಕೊಂಡಿರಬೇಕು ಪೃಥ್ವಿಯಗಂಧ ಬಿಡದಂತೆ; ।**
**ನೆಮ್ಮಿರಲು ತನು ಮರಣದುರಿಯೊಳು**
**ಹಮ್ಮು ತಾ ನೆರೆ ಹುಯ್ಯಲಿಡದೇ**
**ಕೊಮ್ಮೆಯದರಿಂ ಹಮ್ಮು ತನುವಿನ ಧರ್ಮವಲ್ಲೆಂದ ॥ ॥೬॥**

**ತಾತ್ಪರ್ಯ:** ಹಮ್ಮು ಎಂಬುದಕ್ಕೂ ದೇಹಸಂಬಂಧವಾದ ವ್ಯಾಪಾರಾದಿಗಳಿಗೂ ಏನೂ ಸಂಬಂಧವಿಲ್ಲವು. ಹಾಗೇನಾದರೂ ದೇಹಧರ್ಮವೇ ಹಮ್ಮೆಂಬುದಾಗಿದ್ದರೆ ಗಂಧವು ಭೂಮಿಯನ್ನು ಆವರಿಸಿದಂತೆ ಹಮ್ಮು ಸದಾ ದೇಹವನ್ನೇ ಆಶ್ರಯಿಸಿರಬೇಕಾಗಿತ್ತು. ಹಾಗೆ ಶರೀರಸಂಬಂಧವನ್ನು ಹಮ್ಮು ಹೊಂದಿದ್ದರೆ ಸಾವು ಬಂದಾಗ ಉರಿಯಲ್ಲಿ ಶರೀರ ಬೇಯುತ್ತಿರುವಾಗ ಹಮ್ಮು ಒಮ್ಮೆಯಾದರೂ ಏಕೆ ಗೋಳಿಡುವುದಿಲ್ಲ? ಆದಕಾರಣ ಹಮ್ಮು ದೇಹಧರ್ಮ ಅಲ್ಲ ಎಂದು ತಿಳಿಯಬೇಕು.

**ಶಬ್ದಾರ್ಥ:** **ಧರ್ಮಿಯನು**=ತನಗಾಶ್ರಯವಾದ ದೇಹವನ್ನು; * **ನೆಮ್ಮಿರಲು**=ಆಶ್ರಯಿಸಿರುವಂತೆ; **ತನುಮರಣದುರಿಯೊಳು ನೆಮ್ಮಿರಲು**=ಸಾವಾದಾಗ ಉರಿಯಲ್ಲಿ ಶರೀರವು ಬೇಯುತ್ತಿರಲು; **ಹುಯ್ಯಲಿಡದೇಕೆ?**=ಗೋಳಾಡುವುದಿಲ್ಲವೇಕೆ?; * **ತನುವಿನ**=ದೇಹದ

---

**ಆದೊಡಾತ್ಮನ ಧರ್ಮವೆಂದೆನೆ**
**ಭೇದವಿಲ್ಲದೆ ಚಂದ್ರಚಂದ್ರಿಕೆ**
**ಯಾದತೆರದಲಿ ನಿತ್ಯವಾಗಿರಬೇಹುದಾತ್ಮನಲಿ; ।**
**ಬೋಧೆವಡೆದಿಹ ಯೋಗಿಗಳಿಗೆ ಸ**
**ಮಾಧಿಯಾಗಲು ಹಮ್ಮಳಿದು ನಿರು**
**ಪಾಧಿನಿಜಸುಖ ತೋರ್ಪುದದರಿಂದಾತ್ಮಗುಣವಲ್ಲ ॥ ॥೭॥**

**ತಾತ್ಪರ್ಯ:** ಅದು ಹೋಗಲಿ, ಹಮ್ಮು ಶರೀರಧರ್ಮ ಅಲ್ಲ ಎಂದಮೇಲೆ ಆತ್ಮನ ಧರ್ಮ ಎಂದು ಹೇಳಬಹುದಲ್ಲ? ಹಾಗೆಂದು ಹೇಳಲಾಗದು. ಏಕೆಂದರೆ ಆತ್ಮನಲ್ಲಿ ಹಮ್ಮು ಭೇದವಾಗದೆ ಚಂದ್ರನೂ ಬೆಳದಿಂಗಳೂ ಆಗಿರುವ ರೀತಿಯಲ್ಲಿ ನಿತ್ಯವಾಗಿರಬೇಕು. ಆದರೆ ಶುದ್ಧಬ್ರಹ್ಮಸ್ವರೂಪಜ್ಞಾನವನ್ನು ಗಳಿಸಿರುವ ಯೋಗಿಗಳಿಗೆ ಸಮಾಧಿಸ್ಥಿತಿಯು ಪ್ರಾಪ್ತವಾದಾಗ ಹಮ್ಮು ನಾಶವಾಗಿ ನಿರುಪಾಧಿಕವಾಗಿಯೂ, ನಿಜವಾಗಿಯೂ ಇರುವ ಆತ್ಮಸುಖಮಾತ್ರ ಕಾಣುವುದು; ಆದಕಾರಣ ಹಮ್ಮು ಆತ್ಮನ ಗುಣವೂ ಅಲ್ಲ.

**ಶಬ್ದಾರ್ಥ:** * **ಆದೊಡೆ**=ಅದು ಹಾಗಿರಲಿ; * **ಭೇದವಿಲ್ಲದೆ**=ಭಿನ್ನವಿಲ್ಲದೆ; **ಚಂದ್ರಿಕೆ**=ಬೆಳದಿಂಗಳು; * **ಬೋಧೆವಡೆದಿಹ**=ಶುದ್ಧಬ್ರಹ್ಮಸ್ವರೂಪಜ್ಞಾನವನ್ನು ಗಳಿಸಿರುವ; * **ಸಮಾಧಿಯಾಗಲು**=ಸಮಾಧಿಸ್ಥಿತಿ ಉಂಟಾಗಲು; * **ತೋರ್ಪುದು**=ಕಾಣಿಸಿಕೊಳ್ಳುವುದು.

**ಪಾಠಾಂತರ:** ಹಮ್ಮುಳಿದು (ಚಿ) ಹಮ್ಮಳಿದು (ಅ)

---

**ಬ್ರಹ್ಮದಲ್ಲಿದು ರಜ್ಜುಭುಜಗನ**
**ಧರ್ಮದಂದದಿ ಭ್ರಾಂತಿ ಕಲ್ಪಿತ;**
**ಹಮ್ಮುತ್ರಿಪುಟಿಯ ರೂಪುದಳೆದು ಪ್ರವರ್ತಿಸುತ್ತಿಹುದು; ।**
**ಹೆಮ್ಮಯಲಿ ಹಿರಿದಾಗವಸ್ಥಾ**
**ಧರ್ಮದೊಳಗಹಮಹಮೆನುತ್ತಲಿ**
**ಸುಮ್ಮನೇ ತನ್ನೊಳಗೆ ತಾನೇ ವ್ಯವಹರಿಸುತಿಹುದು ॥ ॥೮॥**

**ತಾತ್ಪರ್ಯ:** ಹಗ್ಗದಲಿ ಹಾವಿನಭ್ರಾಂತಿ ತೋರುವಂತೆ ಈ ಅಹಂ ಬ್ರಹ್ಮನಲ್ಲಿ ಭ್ರಾಂತಿಯಿಂದ ಕಲ್ಪಿತವಾದುದು; ಇದು ನೋಡುವುದು ಕಾಣುವುದು, ನೋಟ ಎಂಬ ತ್ರಿಪುಟಿಯ ರೂಪನ್ನು ತಳೆದು ವ್ಯವಹರಿಸುತ್ತಿದೆ. ಇದು ಬಹಳ ಹೆಮ್ಮೆಯಿಂದ ತಾನೇ ದೊಡ್ಡವನೆಂದು ಜಾಗ್ರತ, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲೂ ನಾನು, ನಾನು ಎನ್ನುತ್ತಾ ಪ್ರಬಲಿಸಿಕೊಂಡು ವ್ಯವಹಾರವನ್ನು ನಡೆಸುತ್ತಿರುವುದು.

**ಶಬ್ದಾರ್ಥ:** **ತ್ರಿಪುಟಿ**=ನೋಡುವವನು, ಕಾಣುವವುಗಳು, ನೋಟ; **ಹಿರಿದಾಗಿ+ಅವಸ್ಥಾಧರ್ಮದಲಿ**=ಬಹಳ ಹೆಮ್ಮೆಯಿಂದ ಜಾಗ್ರತ, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ; **ಅಹಮಹಂ**

ಎನ್ನುತಲಿ=ನಾನು ನಾನು ಎನ್ನುತಲಿ; * ಪ್ರವರ್ತಿಸುತ್ತಿರುವುದು=ವ್ಯವಹಾರದೊಳಗೆ ತೊಡಗಿರುವುದು.

**ಟಿಪ್ಪಣಿ:** ತ್ರಿಪುಟಿ=ಜ್ಞಾನದ (ಅರಿವಿನ) ಮೂರು ಅಂಗಗಳು. ಜ್ಞಾನ=ಅರಿವು; ಜ್ಞಾತೃ=ಅರಿಯುವವನು, ಜ್ಞೇಯ=ಅರಿಯಬೇಕಾದ್ದು. ಹೀಗೆಯೇ ಧ್ಯಾನ, ಧ್ಯಾತೃ, ಧ್ಯೇಯ ಎಂಬುದನ್ನು ತಿಳಿಯಬೇಕು. ಬ್ರಹ್ಮವು ಈ ತ್ರಿಪುಟಿಯಿಲ್ಲದ ಶುದ್ಧ ಅರಿವು ತ್ರಿಪುಟಿಯು ವ್ಯವಹಾರದಲ್ಲಿದೆ.

---

## ಮೂರು ಅವಸ್ಥೆಗಳು (೯-೧೬)

**ತೋರುವೀ ಹಮ್ಮೀ ಅವಿದ್ಯಾ**
**ಕಾರಿಯವು; ಜಾಗರವು ಮೊದಲಹ**
**ಮೂರುತನು ತಾನೆಂದು ಬಗೆದಭಿಮಾನಿಸುತ್ತಿಹುದು, ।**
**ಸಾರವಹ ಚೈತನ್ಯ ಹೊಳೆಯಲು**
**ಮೂರುಜೀವರು ತೋರ್ಪರಂಬರ**
**ನೀರೊಳಗೆ ತೋರ್ಪಂತೆ ಹಮ್ಮಿನ ತಾರತಮ್ಯದಲಿ ॥ ॥೯॥**

**ತಾತ್ಪರ್ಯ:** ಹೊರಗೆ ತೋರುತ್ತಲಿರುವ ಈ ಅಹಂ ಅವಿದ್ಯಾಕಾರಿಯ ಸ್ವರೂಪದ್ದಾಗಿದೆ. ಜಾಗ್ರತ್, ಸ್ವಪ್ನ, ಸುಷುಪ್ತಿ ಅವಸ್ಥೆಗಳಲ್ಲಿ ಸ್ಥೂಲ, ಸೂಕ್ಷ, ವ್ಯವಹಾರತನುಗಳೆಂಬ ಮೂರು ರೂಪಗಳೂ ತಾನೇ ಎಂದು ಅಭಿಮಾನಿಸಿದಾಗ ಅಹಂ ಎನಿಸುತ್ತದೆ. ಆಕಾಶವು ಎಂದರೆ ಬ್ರಹ್ಮವು ನೀರಿನಲ್ಲಿ ಪ್ರತಿಬಿಂಬಿಸಿದಾಗ ಆ ಪ್ರತಿಬಿಂಬ ಸುಳ್ಳಾದಹಾಗೆ ಆಹಂಕಾರದ ತಾರತಮ್ಯದಲ್ಲಿ ಮೂರು ಅವಸ್ಥೆಗಳಲ್ಲಿ ಅಭಿಮಾನವನ್ನು ವಹಿಸುವ ಜೀವತ್ವವು ಸುಳ್ಳಾಗಿ ತೋರುತ್ತದೆ.

**ಶಬ್ದಾರ್ಥ:** * ಅವಿದ್ಯಾಕಾರಿ=ಅವಿದ್ಯಾಸ್ವರೂಪವಾದ; ಜಾಗರ=ಜಾಗ್ರತಾವಸ್ಥೇ; ಮೂರುತನು =ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳು; ಸಾರವಹ ಚೈತನ್ಯ=ಜೀವತ್ವ; ಅಂಬರ, ಆಕಾಶ; ಅಂಬರವು ನೀರೊಳಗೆ ಹೊಳೆವಂತೆ=ಇಲ್ಲಿ ಅಂಬರವು ಬ್ರಹ್ಮಕ್ಕೆ ಹೋಲಿಕೆ. ನೀರಿನಲ್ಲಿ ಪ್ರತಿಬಿಂಬಿಸಿದ ಆಕಾಶವು ಹೇಗೆ ಸುಳ್ಳೋ ಹಾಗೆ ಮೂರು ಅವಸ್ಥೆಗಳಲ್ಲಿ ಅಭಿಮಾನವನ್ನು ವಹಿಸುವ ಜೀವತ್ವವು ಸುಳ್ಳೆಂದು ತಿಳಿಯಬೇಕು; ಹಮ್ಮಿನ=ಅಹಂಕಾರದ.

---

**ಗೋಚರಿಸುವೀ ಹಮ್ಮು ಮಿಗೆ ಸಂ**
**ಕೋಚಿಸಲು ತನುವಿನಲಿ ಸುಪ್ತಿ; ಯ**
**ಥೋಚಿತದ ನಾಡಿಗಳ ಮಧ್ಯದಿ ಪಸರಿಸಲು ಸ್ವಪ್ನ; ।**
**ಈ ಚತುರ್ವಿಂಶತಿಗಳಹ ತ**
**ತ್ತ್ವೋಚಿತದಲಾಪಾದಮಸ್ತಕ**
**ಸೂಚಕವು ಜಾಗರಣೆಯೆನಿಪುದು ಮಗನೆ ಕೇಳೆಂದ ॥ ॥೧೦॥**

**ತಾತ್ಪರ್ಯ:** ಶರೀರದಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುವ ಈ ಅಹಂಕಾರ ಅವ್ಯಕ್ತರೂಪಕ್ಕೆ ಬರಲು ಅದು ಯಾವ ವಿಷಯದ ರೂಪದಲ್ಲೂ ಇರುವುದಿಲ್ಲ. ಈ ರೀತಿ ಹಮ್ಮು ಸಂಕೋಚವಾಗಿ ಸೂಕ್ಷ್ಮಾವಸ್ಥೆಯನ್ನು ಹೊಂದಿದ್ದರೆ ಅದು ಸುಪ್ತಾವಸ್ಥೆ. ಯಥೋಚಿತವಾಗಿ ಪ್ರಾಣಾದಿ ನಾಡಿಗಳ ಮಧ್ಯೆ ಅಹಂ ವ್ಯಾಪಿಸಿದರೆ ಸ್ವಪ್ನಾವಸ್ಥೆ ಎನಿಸುತ್ತದೆ. ಇಪ್ಪತ್ತನಾಲ್ಕು ತತ್ತ್ವಗಳಲ್ಲಿ ಉಚಿತವಾದ ರೀತಿಯಲ್ಲಿ ಆಪಾದಮಸ್ತಕವಾಗಿ ಅಹಂಕಾರವು ಕಾಣಿಸಿಕೊಂಡಾಗ ಜಾಗ್ರತಾವಸ್ಥೆ ಎನ್ನಿಸುವುದು. ಹೀಗೆ ಅಹಂಕಾರವು ಅವಸ್ಥಾತ್ರಯಗಳಾಗಿ ಶರೀರದಲ್ಲಿ ವ್ಯಾಪಿಸಿರುತ್ತದೆ.

**ಶಬ್ದಾರ್ಥ:** * **ಹಮ್ಮು**=ಅಹಂಕಾರ; **ಸಂಕೋಚಿಸಲು**=ಅವ್ಯಕ್ತರೂಪಕ್ಕೆ ಬರಲು; **ಚತುರ್ವಿಂಶತಿಗಳು** =೨೪ ತತ್ತ್ವಗಳು; * **ಆಪಾದಮಸ್ತಕ**=ಕಾಲಿನಿಂದ ಹಿಡಿದು ತಲೆಯವರೆಗೆ, ಶರೀರಾದ್ಯಂತ; **ಸೂಚಕವು**=ಕಾಣಿಸಿಕೊಂಡಾಗ; **ಸುಪ್ತಿ**=(ನಿದ್ರಾವಸ್ಥೆ ಸ್ವಪ್ನಾ ಕನಸಿನಸ್ಥಿತಿ/ಸ್ವಪ್ನಾವಸ್ಥೆ); **ಜಾಗರಣೆ** =ಜಾಗ್ರತಾವಸ್ಥೆ (ಎಚ್ಚರದಸ್ಥಿತಿ); **ನಾಡಿಗಳು**=ಪ್ರಾಣಾದಿನಾಡಿಗಳು

**ಪಾಠಾಂತರ:** **ಯಥೋಚಿತದ ನಾಡಿಗಳ ಮಧ್ಯದಿ**=ಶಕ್ತ್ಯೋಚಿತದ ನಾಡಿಗಳಲ್ಲಿ ಪಸರಿಸಲು; **ಸ್ವಪ್ನ**=ಕಿಂಚಿತ್ ಪಸರಿಸಲು ಸ್ವಪ್ನ (ಕು)

**ಟಿಪ್ಪಣಿ:** **ಸಂಕೋಚಿಸಲು**=ಅವ್ಯಕ್ತರೂಪಕ್ಕೆ ಅಹಂ ಬಂದಾಗ ಸುಷುಪ್ತಿಯಲ್ಲಿ ಅಹಂಕಾರವು ಯಾವ ವಿಷಯದ ರೂಪದಲ್ಲಿಯೂ ಇರುವುದಿಲ್ಲ. ಆಗ ಜೀವನು ಬ್ರಹ್ಮದಲ್ಲಿ ಒಂದಾಗಿರುವನು. ಆದರೆ ಅದು ಅವನಿಗೆ ತಿಳಿದಿರುವುದಿಲ್ಲ. ಆದ್ದರಿಂದ ಆ ಅಜ್ಞಾನದಿಂದ ಅವನು ತನ್ನ ಅಹಂಭಾವವು ನಿದ್ರೆಯಲ್ಲಿ ಯಾವ ಕೆಲಸವನ್ನು ಮಾಡದಿದ್ದರೂ ತಾನು ಎಚ್ಚರ ಕನಸುಗಳಲ್ಲಿ ಇದ್ದಂತೆಯೇ ಇರುವವನೆಂದು ಅಭಿಪ್ರಾಯಪಡುತ್ತಾನೆ.

**ಚತುರ್ವಿಂಶತಿಗಳು**=ಅಧ್ಯಾಯ ೩ ಪದ್ಯ ೧೫೦ರ ಟಿಪ್ಪಣಿಯಂತೆ (೧) ಪ್ರಧಾನ (೧) ಮಹತ್ತತ್ತ್ವ (೧) ಅಹಂಕಾರ ತತ್ತ್ವ (೫) ಪಂಚತನ್ಮಾತ್ರೆಗಳು (೫) ಪಂಚಮಹಾಭೂತಗಳು (೧೧) ಏಕಾದಶೇಂದ್ರಿಯಗಳು (೧) ಪುರುಷ ಈ ೨೫ ಸಾಂಖ್ಯರ ಎಣಿಕೆ. ಈ ೨೫ ತತ್ತ್ವಗಳಲ್ಲಿ ಆತ್ಮನನ್ನು ಹೊರತುಪಡಿಸಿ ಉಳಿದ ೨೪ ತತ್ತ್ವಗಳೇ ಚತುರ್ವಿಂಶತಿಗಳು (ಇವುಗಳಿಂದಲೇ ಸ್ಥೂಲಸೂಕ್ಷ್ಮಶರೀರಗಳಾಗಿರುತ್ತವೆ.)

**ಚತುರ್ವಿಂಶತಿಗಳು ಅಹ ತತ್ತ್ವೋಚಿತದಲಿ ಆಪಾದಮಸ್ತಕ ಸೂಚಕವು**=ಜೂಜು ಬೇಟೆ ಮೊದಲಾದ ಸಪ್ತ ವ್ಯಸನಗಳನ್ನು ಹೊಂದದೆ ಸೂಕ್ಷ್ಮದೇಹಿಯಾದವನಲ್ಲಿಯೂ ಸ್ಥೂಲಸೂಕ್ಷ್ಮಜಾಗರವೆಂಬ ದೇಹಗಳಲ್ಲಿಯೂ ಒಂದರಹಿಂದೆ ಮತ್ತೊಂದು ಅವಸ್ಥೆಗಳು ಬಿಡದೆ ಸಂಘಟಿಸುತ್ತಿರುವುದು. (ಕು)

---

**ನಿರುತ ಹಮ್ಮಿದು ತಾಮಸದಲುರೆ**
**ಬೆರೆಯೆ ಸುಪ್ತಿ; ರಜೋಗುಣದಿ ಸಂ**
**ಚರಿಸೆ ಸ್ವಪ್ನವು; ತೀವಿ ಸತ್ತ್ವವ ಧರಿಸೆ ಜಾಗರಣ; ।**
**ಹಿರಿದವಿದ್ಯೆಯ ತನುವಿನೊಳು ಬೆರೆ**
**ದಿರೆ ಸುಷುಪ್ತಿಯದೇಳು ಹತ್ತರ**
**ಕಿರಿಯ ದೇಹದಿ ಸ್ವಪ್ನ; ಜಾಗರ ಸ್ಥೂಲತನುವಿನಲಿ ॥ ॥೧೧॥**

**ತಾತ್ಪರ್ಯ:** ಈ ಅಹಂಕಾರವು ಸದಾಕಾಲವೂ ತಮೋಗುಣದಲ್ಲಿ ಬೆರೆತಾಗ ಸುಷುಪ್ತಿ ಉಂಟಾಗುತ್ತದೆ. ರಜೋಗುಣದಿಂದ ಅಹಂ ಸಂಚರಿಸಿದಾಗ ದೇಹದಲ್ಲಿ ಸ್ವಪ್ನಾವಸ್ಥೆ ಉಂಟಾಗುತ್ತದೆ. ಸತ್ತ್ವಗುಣಭರಿತವಾಗಿದ್ದರೆ ಜಾಗರಣ (ಜಾಗ್ರತಾವಸ್ಥೆ) ಉಂಟಾಗುತ್ತದೆ. ಹೆಚ್ಚಿನ ಅವಿದ್ಯೆಯೆಂಬ ಕಾರಣಶರೀರದಲ್ಲಿ ಅಹಂ ಆವರಿಸಿದಾಗ ಅದು ಸುಷುಪ್ತಾವಸ್ಥೆ ಎನ್ನಿಸುತ್ತದೆ. ಹದಿನೇಳು ತತ್ತ್ವಗಳು ಸೂಕ್ಷ್ಮ ಶರೀರದಲ್ಲಿ ಆವರಿಸಿದಾಗ ಸ್ವಪ್ನಾವಸ್ಥೆಯೆನಿಸುತ್ತದೆ. ಸ್ಥೂಲತನುವಿನಲ್ಲಿ ಸತ್ತ್ವಗುಣವು ಆವರಿಸಿದಾಗ ಜಾಗರ (ಜಾಗ್ರತಾವಸ್ಥೆ) ಎನಿಸುತ್ತದೆ.

**ಶಬ್ದಾರ್ಥ:** **ಹಿರಿದವಿದ್ಯೆಯ ತನು**=ಹೆಚ್ಚಿನ ಅವಿದ್ಯೆಯೆಂಬ ಕಾರಣಶರೀರ; **ಸತ್ತ್ವಧರಿಸೆ ಜಾಗರಣ**=ಬರೀ ಮನಸ್ಸಿನ ಚಾಂಚಲ್ಯದಿಂದಲೇ ಅಲ್ಲದೆ ವಸ್ತುಗಳ ಜ್ಞಾನವು ನಿಜವಾಗಿ ಅವುಗಳ ಸ್ಪರ್ಶದಿಂದಲೇ ಆಗುವ ಜಾಗರವು ಸತ್ತ್ವಗುಣದ ಕಾರ್ಯ; **ರಜೋಗುಣಾದಿಸ್ವಪ್ನವು**=ವಸ್ತುಗಳ ಸಂಸ್ಪರ್ಶವಿಲ್ಲದೆ ಅವುಗಳ ಸಂಸ್ಕಾರವುಳ್ಳ ಮನಸ್ಸಿನ ಚಾಂಚಲ್ಯದಿಂದ ಅನೇಕಕಾರ್ಯಗಳನ್ನು ತಾನು ಮಾಡುವಂತೆ ಅನುಭವವಾಗುವ ಸ್ವಪ್ನವು ರಜೋಗುಣದಕಾರ್ಯ; **ಏಳುಹತ್ತರ**=ಹದಿನೇಳು ತತ್ತ್ವಗಳ (ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಪ್ರಾಣಗಳು, ಮನಸ್ಸು, ಬುದ್ಧಿ); **ಕಿರಿಯದೇಹ**=ಸೂಕ್ಷ್ಮದೇಹ.

---

**ಈ ವಿಧದವಸ್ಥೆಯಲಿ ಹೊಳೆಯುವ**
**ಜೀವನೆನಿಸುತ ವಿಶ್ವ ತೈಜಸ**
**ನೋವಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋರುವನು; ।**
**ಭಾವಿಸಲು ಮೂರಾದವಸ್ಥೆಗ**
**ಳಾವಗೊಂದಳಿದೊಂದು ತೋರ್ಪವ**
**ವೇ ವಿಚಾರಿಸೆ ಚಕ್ರನೇಮಿಕ್ರಮದಿ ತಿಳಿಯೆಂದ ॥ ॥೧೨॥**

**ತಾತ್ಪರ್ಯ:** ಜಾಗ್ರದವಸ್ಥೆಯಲ್ಲಿ ಜೀವನು ವಿಶ್ವನೆಂದೂ, ಸ್ವಪ್ನಾವಸ್ಥೆಯವನಿಗೆ ತೈಜಸನೆಂದೂ, ಸುಪ್ತಾವಸ್ಥೆಯ ಜೀವನಿಗೆ ಪ್ರಾಜ್ಞನೆಂದು ಹೆಸರನ್ನು ಹೊಂದಿ ಈ ಅವಸ್ಥೆಗಳಲ್ಲಿ ಜೀವರೂಪಿ ಬ್ರಹ್ಮನು ಕಾಣಿಸಿಕೊಳ್ಳುತ್ತಾನೆ. ವಿಚಾರಮಾಡಿ ನೋಡಿದರೆ ಈ ಮೂರು ಅವಸ್ಥೆಗಳು ಯಾವಾಗಲೂ ಒಂದು ಅವಸ್ಥೆಯು ಹೋದಮೇಲೆಯೇ ಇನ್ನೊಂದು ಅವಸ್ಥೆ ತೋರುವುದು. ಬಿಡಿಯ ಚಕ್ರಗಳ ಹಳಿಯು ಮೇಲಿಂದ ಕೆಳಗೆ ಕೆಳಗಿನಿಂದ ಮೇಲೆ ಒಂದರಹಿಂದೆ ಮತ್ತೊಂದು ಸುತ್ತುವಂತೆ ಈ ಅವಸ್ಥೆಗಳು ತೋರುವುದು.

**ಶಬ್ದಾರ್ಥ:** **ಆವಗ+ಒಂದಳಿದು+ಒಂದು ತೋರ್ಪವು**=ಯಾವಾಗಲೂ ಒಂದವಸ್ಥೆಯು ಹೋದಮೇಲೆಯೇ ಇನ್ನೊಂದು ಅವಸ್ಥೆಯು ತೋರುವುದು (ಆದ್ದರಿಂದಲೇ ಯಾವ ಅವಸ್ಥೆಯೂ ನಿಜವಾದದ್ದು ಅಲ್ಲವೆಂಬುದನ್ನು ಮರೆಯಬಾರದು); **ಚಕ್ರನೇಮಿಕ್ರಮದಿ**=ಚಕ್ರದ ಹಳಿಯು ಸುತ್ತುವಹಾಗೆ; **ಭಾವಿಸಲು**=ವಿಚಾರಿಸಲು; **ಓವಿ**=ಹೊಂದಿ.

**ಪಾಠಾಂತರ: ಜೀವನೆನಿಸುತ=ಜೀವರೂಪನು (ಅರಾಸೇ); ತಿಳಿಯೆಂದ=ತಿರುಗುವುವು (ಅರಾಸೇ)**

**ಟಿಪ್ಪಣಿ: ಪೆಸರನು ತಳೆದು:**
**"ಬಹಿಃ ಪ್ರಜ್ಞೋ ವಿಭುರ್ವಿಶ್ವೋಹ್ಯಂತಃ ಪ್ರಜ್ಞಸ್ತು ತೈಜಸಃ ।**
**ಘನಪ್ರಜ್ಞಸ್ತಥಾ ಪ್ರಾಜ್ಞ ಏಕ ಏವ ತ್ರಿಧಾಸ್ಮೃತಃ॥" – ಗೌಡಪಾದೀಯಕಾರಿಕೆ**
ಜಾಗ್ರದವಸ್ಥೆಯ ಜೀವನಿಗೆ ವಿಶ್ವನೆಂದೂ, ಸ್ವಪ್ನಾವಸ್ಥೆಯ ಜೀವನಿಗೆ ತೈಜಸನೆಂದೂ, ಸುಪ್ತಾವಸ್ಥೆಯ ಜೀವನಿಗೆ ಪ್ರಾಜ್ಞನೆಂದೂ ಹೆಸರು.

---

**ಒಂದವಸ್ಥೆಯನನುಭವಿಸುವೀ**
**ಚಂದದಿಂದಿಹ ಜೀವ ಬೇರಾ**
**ದೊಂದವಸ್ಥೆಯನರಿಯನದರಿಂ ಭಿನ್ನ; ಜೀವರನು ।**
**ಎಂದಿಗೊಂದೇಪರಿಯ ರೂಪಿನೊ**
**ಳೊಂದಿಯರಿವನವಸ್ಥೆಗಳ ತಾ**
**ಹೊಂದದವರನುಭವವನರಿಯಲು ಸಾಕ್ಷಿಯಾಗಿಹನು ॥ ॥೧೩॥**

ತಾತ್ಪರ್ಯ: ಅವಸ್ಥಾತ್ರಯದಲ್ಲಿ ಒಂದು ಅವಸ್ಥೆಯನ್ನು ಅನುಭವಿಸುವ ರೀತಿಯಲ್ಲಿ ಇರುವ ಜೀವನು ಬೇರೆಯ ಇನ್ನೊಂದು ಅವಸ್ಥೆಯನ್ನು ತಿಳಿಯಲಾರನು. ಆದಕಾರಣ ಅವಸ್ಥಾತ್ರಯದಲ್ಲಿ ಕಾಣದ ಭಿನ್ನ ಜೀವರನ್ನು ಎಂದರೆ ಎಚ್ಚರದ ವಿಶ್ವನನ್ನೂ ಕನಸಿನ ತೈಜಸನನ್ನೂ ನಿದ್ರೆಯ ಪ್ರಾಜ್ಞನನ್ನೂ ಯಾವಾಗಲೂ ಒಂದೇ ರೀತಿಯಲ್ಲಿ ಕಾಣುವ ಚೈತನ್ಯರೂಪಿ ತಾನು ಅನುಭವಿಸದೆ ಆ ವಿಶ್ವ ತೇಜಸ ಪ್ರಾಜ್ಞ ಅನುಭವಗಳಿಗೆ ನಿರ್ಲಿಪ್ತನಾಗಿ ಸಾಕ್ಷೀಭೂತನಾಗಿ ಇರುತ್ತಾನೆ.

---

**ನಿದ್ರೆಯೊಳಗನುಭವಿಸಿದರ್ಥವ**
**ನೆದ್ದು ಸ್ಮರಿಸುತ ಪೇಳ್ವನದರಿಂ**
**ಬುದ್ಧಿವಂತನೆ, ಸ್ಮರಣೆಯನುಭವಸಿದ್ಧವಾಗಿಹುದು; ।**
**ಬುದ್ಧಿ ಸಾಧನವಾಗಲದರಿಂ**
**ದೆದ್ದು ಪೇಳ್ವನು; ನಿದ್ರೆಯೊಳಗಾ**
**ಬುದ್ಧಿಯಿಲ್ಲದ ಕಾರಣದಿ ತಾ ಸುಮ್ಮನಿರುತಿಹನು ॥ ॥೧೪॥**

ತಾತ್ಪರ್ಯ: ನಿದ್ದೆಯೊಳಗೆ ಅನುಭವಿಸಿದ ವಿಷಯಗಳನ್ನು ಎದ್ದಮೇಲೆ ಎಚ್ಚರದಲ್ಲಿ ಬುದ್ಧಿಯೆಂಬ ಸಾಧನವಿರುವುದರಿಂದ ನೆನಪಿಸಿಕೊಂಡು ತಿಳಿಸುತ್ತಾನೆ. ಆದ್ದರಿಂದ ಬುದ್ಧಿವಂತನಾದ ಶುಕನೇ ಕೇಳು, ಈ ಸ್ಮರಣೆಯು ಅನುಭವಸಿದ್ಧವಾಗಿರುವುದು. ಹೀಗೆ ಬುದ್ಧಿ ಸಾಧನವಾಗಿರುವುದರಿಂದ ಎಚ್ಚೆತ್ತಮೇಲೆ ಹೇಳತಕ್ಕವನಾಗಿರುತ್ತಾನೆ. ನಿದ್ರಾವಸ್ಥೆಯಲ್ಲಿ ಬುದ್ಧಿ ಇಲ್ಲದಿದ್ದಲ್ಲಿ ಅವನು ಸುಮ್ಮನಿರುತ್ತಾನೆಯೇ ಹೊರತು ಏನನ್ನೂ ಹೇಳುವುದಿಲ್ಲ.

**ಶಬ್ದಾರ್ಥ:** ಬುದ್ಧಿಸಾಧನವಾಗಲದರಿಂ=ಎಚ್ಚರದಲ್ಲಿ ಬುದ್ಧಿಯೆಂಬ ಸಾಧನವಿರುವುದರಿಂದ; * ಪೇಳ್ವನು=ತಿಳಿಸುತ್ತಾ; * ಸುಮ್ಮನಿರುತಿಹನು=ಮೌನ ತಾಳುತ್ತಾನೆ.

---

**ಅಹಮಿಗೆಯು ಚಿಚ್ಛಾಯೆಗೆಯು ತಿಳಿ**
**ಸಹಜತಾದಾತ್ಮ್ಯವು; ಶರೀರ**
**ಕ್ಕಹಮಿಗೆಯು ತಾದಾತ್ಮ್ಯ ಕರ್ಮಜ; ಸಾಕ್ಷಿಹಮ್ಮಿಂಗೆ ।**
**ವಿಹಿತವಲ್ಲದ ಭ್ರಾಂತಿಜನ್ಯಕ**
**ವಹುದು; ತಾದಾತ್ಮ್ಯವು ಸದಾಸ**
**ನ್ನಿಹಿತದಿಂ ಬೇರ್ಪಡದು ಚಿಚ್ಛಾಯಕ್ಕಹಂಕೃತಿಗೆ ॥** ॥೧೫॥

**ತಾತ್ಪರ್ಯ:** ಅಹಂ ಮತ್ತು ಚಿಚ್ಛಾಯೆಗೆ ಇರುವ ತಾದಾತ್ಮ್ಯದ ಸ್ವರೂಪವನ್ನು ಈ ಪದ್ಯದಲ್ಲಿ ಹೇಳಿದೆ: ಅಹಂಕಾರವೂ ಚಿಚ್ಛಾಯೆಯೂ ಒಂದಕ್ಕೂ ಇನ್ನೊಂದಕ್ಕೂ ಸಂಬಂಧವಿಲ್ಲದಿದ್ದರೂ ಒಂದು ಇನ್ನೊಂದಾಗಿ ಕಾಣುವುದರಿಂದ ಇವೆರಡಕ್ಕೂ ತಾದಾತ್ಮ್ಯವು ಸಹಜವಾಗಿರುವಂತೆ ಕಾಣುತ್ತದೆ. ತಾನಲ್ಲದ ಶರೀರವನ್ನು ನಾನು ನಾನೆಂಬ ಅಹಂ ಎಂಬ ವಸ್ತುವನ್ನಾಗಿ ತಿಳಿಯುವುದಕ್ಕೆ ಕರ್ಮಜ ತಾದಾತ್ಮ್ಯ ಎನ್ನುತ್ತಾರೆ. ಏಕೆಂದರೆ ಶರೀರಕ್ಕೂ ಅಹಂಕಾರಕ್ಕೂ ಕರ್ಮದ ಸಂಬಂಧವಿರುವುದು. ಇನ್ನು ಸಾಕ್ಷಿಯಾದ ಚೈತನ್ಯವನ್ನು ಅಹಂಕಾರವೆಂಬ ವಸ್ತುವೆಂದು ತಿಳಿಯುವುದು ಸರಿಯಲ್ಲ. ಏಕೆಂದರೆ ಅದು ಭ್ರಾಂತಿಯಿಂದ ಉಂಟಾದುದು (ಭ್ರಾಂತಿ ಜನ್ಯಕ) ಚಿಚ್ಛಾಯೆಯೂ, ಅಹಂಕಾರವೂ ಯಾವಾಗಲೂ ಒಂದಕ್ಕೊಂದು ಸಮೀಪದಲ್ಲಿರುವುದರಿಂದ ಬೇರೆಬೇರೆಯಾಗುವುದಿಲ್ಲ.

**ಶಬ್ದಾರ್ಥ:** * **ಅಹಮ್ಮಿಗೆ**=ಅಹಂಕಾರ; * **ಕರ್ಮಜ**=ಕರ್ಮದಿಂದ ಬಂದದ್ದು; * **ಸಾಕ್ಷಿ**=ಸಾಕ್ಷಿಯಿಂದ ಚೈತನ್ಯ; * **ಸದಾ ಸನ್ನಿಹಿತದಿಂ**=ಯಾವಾಗಲೂ ಒಂದಕ್ಕೊಂದು ಸಮೀಪದಲ್ಲಿರುವುದರಿಂದ; * **ಬೇರ್ಪಡದು**=ಅಹಂಕಾರ ಚಿಚ್ಛಾಯೆ ಬೇರೆಬೇರೆಯಾಗಿರುವುದಿಲ್ಲ; **ವಿಹಿತವಲ್ಲದ**=ಸಂಬಂಧವಿಲ್ಲದ; **ಚಿಚ್ಛಾಯೆ**=ಚಿತ್‌ಸ್ವರೂಪವಲ್ಲದ್ದು, ಚಿತ್ಸ್ವರೂಪದಂತೆ ಕಾಣುವುದು.

**ಟಿಪ್ಪಣಿ-೧: ಸಹಜತಾದಾತ್ಮ್ಯವು**=ಇನ್ನೊಂದರ ಸಂಬಂಧವಿಲ್ಲದೆ ಒಂದು ಇನ್ನೊಂದಾಗಿ ಕಾಣುವುದು (ನಾನು ನಾನೆಂಬ ಅಹಂಕಾರವನ್ನೇ ಚಿತ್ಸ್ವರೂಪವನ್ನಾಗಿ ತಿಳಿಯುವುದು. ಇದಕ್ಕೆ ಉದಾಹರಣೆ: ಈ ಅಹಂಕಾರವು ಎಲ್ಲಕ್ಕೂ ಒಳಗಣ ವೃತ್ತಿ ಆದುದರಿಂದ ಇದಕ್ಕೂ ಚಿತ್ಸ್ವರೂಪಕ್ಕೂ ಇನ್ನೊಂದರಿಂದ ಸಂಬಂಧವಿಲ್ಲ.)

**ಟಿಪ್ಪಣಿ-೨: ಕರ್ಮಜತಾದಾತ್ಮ್ಯವು**=ಶರೀರವನ್ನು ತನ್ನದೆನ್ನಬಹುದೇ ಹೊರತು ತಾನೇ ಅಲ್ಲವಷ್ಟೇ. ಹೀಗೆ ತಾನಲ್ಲದ ಶರೀರವನ್ನು ನಾನು ನಾನೆಂದು, ಅಹಂ ಎಂಬ ವಸ್ತುವಾಗಿ ತಿಳಿಯುವುದು ಕರ್ಮಜ ತಾದಾತ್ಮ್ಯ. ಏಕೆಂದರೆ ಶರೀರವು ತಾನು ಮಾಡಿದ ಕರ್ಮದಿಂದ ಬಂದದ್ದಾಗಿದೆ. ಅಹಂಕಾರಕ್ಕೂ ಶರೀರಕ್ಕೂ ಕರ್ಮದ ಸಂಬಂಧವಿರುವುದು.

**ಟಿಪ್ಪಣಿ-೩: ಭ್ರಾಂತಿಜನ್ಯಕವಹುದು**=ಸಾಕ್ಷಿಯಾದ ಚೈತನ್ಯವನ್ನು ಅಹಂ ಎಂಬ ವಸ್ತುವೆಂದು ತಿಳಿಯುವುದು ಭ್ರಾಂತಿಯಿಂದ ಆದದ್ದು.

ತಾದಾತ್ಮ್ಯವು ಸದಾ ಸಹಿತದಿಂ ಚಿಚ್ಛಾಯಕ್ಕೆ ಅಹಂಕೃತಿಗೆ ಬೇರ್ಪಡದು=ಅಹಂಕಾರವನ್ನು ಚಿತ್‌ಸ್ವರೂಪವೆಂದು ತಿಳಿಯುವ ಸಹಜ ತಾದಾತ್ಮ್ಯವು ಮಾತ್ರ ಯಾವಾಗಲೂ ಒಂದಕ್ಕೊಂದು ಸಮೀಪದಲ್ಲಿರುವುದರಿಂದ ಬೇರೆಬೇರೆಯಾಗಿರುವುದಿಲ್ಲ. ಹೀಗೆ ಚಿಚ್ಛಾಯೆಗೆ ಅಹಂಕಾರಕ್ಕೆ, ಅಹಂಕಾರಕ್ಕೆ ಶರೀರಕ್ಕೆ ಇರುವ ಸಂಬಂಧ (ತಾದಾತ್ಮ್ಯ ಸ್ವರೂಪವನ್ನು) ಈ ಪದ್ಯದಲ್ಲಿ ವಿವರಿಸಿದೆ.

---

ಸುಪ್ತಿಮೂರ್ಛಾಮರಣಕಾಲದಿ
ಕ್ಲುಪ್ತವಹ ನಿಜಕರ್ಮಶಾಂತಿಯ
ಲುತ್ತಮನೆ ತಾದಾತ್ಮ್ಯ ಬೇರ್ಪಡುವದು ಶರೀರಕ್ಕೆ ।
ಸತ್ಯವಹ ಸಾಕ್ಷಿಗೆಯು ನಿತ್ಯದಿ
ಬಿತ್ತರಿಪ ಹಮ್ಮಿಗೆಯು ಭ್ರಾಂತಿಯ
ಮೊತ್ತವಳಿಯಲು ತೊಲಗುವದು ತಾದಾತ್ಮ್ಯ ಕೇಳೆಂದ ॥ ॥೧೬॥

ತಾತ್ಪರ್ಯ: ನಿದ್ರೆ, ಮೂರ್ಛೆ, ಸಾವು ಮೊದಲಾದ ಗೊತ್ತಾದ ಕಾಲಗಳಲ್ಲಿ ನಿಜಕರ್ಮಗಳು ನಡೆಯದೆ ಇರುವುದರಿಂದ ದೇಹಾದಿಗಳೇ ತಾನೆನ್ನುವ ಬುದ್ಧಿಗೂ, ಶರೀರಕ್ಕೂ ಇರುವ ತಾದಾತ್ಮ್ಯ ಹೋಗುವುದು. ಸತ್ಯವನ್ನೇ ಸಾರುವ ಚೈತನ್ಯಕ್ಕೂ ಸದಾಕಾಲ ಕಾಣಿಸಿಕೊಳ್ಳುವ ಅಹಂಕಾರಕ್ಕೂ ಇರುವ ಭ್ರಾಂತಿಸಂಬಂಧವು ನಾಶವಾಗುತ್ತಲೇ ತಾದಾತ್ಮ್ಯವು ಹೋಗುವುದು.

ಶಬ್ದಾರ್ಥ: ತಾದಾತ್ಮ್ಯ=ದೇಹಾದಿಗಳೇ ತಾನೆನ್ನುವ ಬುದ್ಧಿ; ಬೇರ್ಪಡುವುದು ಶರೀರಕ್ಕೆ=ನಿದ್ರೆ ಮೊದಲಾದ ಕರ್ಮಗಳು ನಡೆಯದೆ ಇರುವುದರಿಂದ ಶರೀರಕ್ಕೂ, ಅಹಂಕಾರಕ್ಕೂ ಇರುವ ತಾದಾತ್ಮ್ಯವು ಹೋಗುವುದು; ಭ್ರಾಂತಿ ಮೊತ್ತವಳಿಯಲು=ಅಹಂಕಾರಕ್ಕೂ, ಸಾಕ್ಷಿಗೂ ಇರುವ ತಾದಾತ್ಮ್ಯವು ಭ್ರಾಂತಿಜನ್ಯಕವಾದ್ದರಿಂದ ಭ್ರಾಂತಿ ಹೋಗುತ್ತಲೇ ಹೋಗುವುದು; * ನಿಜಕರ್ಮ ಶಾಂತಿಯಲ್ಲಿ=ನಿಜಕರ್ಮಗಳು ನಡೆಯದೆ ಇರುವುದರಿಂದ.

---

## ಆವರಣ ವಿಕ್ಷೇಪಶಕ್ತಿಗಳು (೧೭-೨೧)

ಆವರಣವಿಕ್ಷೇಪಶಕ್ತಿಗ
ಳಾ ವಿಗಡಮಾಯಾವಿಲಾಸಗ
ಳೋವಿ ಲಿಂಗಶರೀರ ತೊಡಗಿ ಸಮಸ್ತ ಸೃಷ್ಟಿಯನು ।
ತೀವಿ ಸೃಜಿಸುತ್ತಬುಧಿಯಲಿ ಸಂ
ಭಾವಿಸುವ ತೆರೆನೊರೆಗಳವೊಲಿ
ಪೀ ವಿಧವು ವಿಕ್ಷೇಪಶಕ್ತಿಯ ಕೃತ್ಯ ಕೇಳೆಂದ ॥ ॥೧೭॥

ತಾತ್ಪರ್ಯ: ಆವರಣಶಕ್ತಿ, ವಿಕ್ಷೇಪಶಕ್ತಿಗಳು ಪ್ರಬಲವಾದ ಮಾಯಾವಿಲಾಸಗಳಾಗಿವೆ. ಇವು ಲಿಂಗಶರೀರದಿಂದ (ಸ್ಥೂಲದೇಹದಿಂದ) ಮೊದಲ್ಗೊಂಡು ಸೃಷ್ಟಿಯಲ್ಲಿ ಎಲ್ಲವನ್ನೂ ಉತ್ಪತ್ತಿ ಮಾಡುತ್ತದೆ. ಸಮುದ್ರವು ತೆರೆನೊರೆಗಳನ್ನು ಹೊರಚೆಲ್ಲಿಸುವಂತೆ ಬುದ್ಧಿಶಕ್ತಿಯಿಂದ

ಬ್ರಹ್ಮವು ಜಗದ್ರೂಪವನ್ನು ಹೊರಚೆಲ್ಲಿಸುವುದು. ಇದು ಮಾಯಾ ವಿಲಾಸದಲ್ಲಿಯ ವಿಕ್ಷೇಪಶಕ್ತಿಯ ಕೃತ್ಯವಾಗಿದೆ.

**ಶಬ್ದಾರ್ಥ:** ಆವರಣ=ಮುಸುಕು; ವಿಕ್ಷೇಪ=ಹೊರಚೆಲ್ಲುವುದು; **ಈ** ವಿಧವು=ಸಮುದ್ರವು ತೆರೆನೊರೆಗಳ ರೂಪದಲ್ಲಿ ಹೊರಚೆಲ್ಲಿರುವಂತೆ ಬ್ರಹ್ಮವು ಜಗದ್ರೂಪವನ್ನು ಹೊರಚೆಲ್ಲಿದೆ; *** ಸಂಭವಿಸುವ**=ಉಂಟಾಗುವ; *** ಲಿಂಗಶರೀರ**=ಸ್ಥೂಲಶರೀರ; ವಿಗಡ=ಪ್ರಬಲವಾದ

*** ಟಿಪ್ಪಣಿ:** ಅಜ್ಞಾನದ ಸಾಮರ್ಥ್ಯ ಎರಡು ವಿಧ. ೧. ಆವರಣ, ೨. ವಿಕ್ಷೇಪ; –ಆವರಣ= ಅಧಿಷ್ಠಾನವನ್ನು ಮುಚ್ಚುವಂಥ ಯಾವ ಅಜ್ಞಾನ ಸಾಮರ್ಥ್ಯವೇ ಆಗಲಿ ಅದು ಆವರಣ ಎನಿಸುತ್ತದೆ; ವಿಕ್ಷೇಪ=ಪ್ರಪಂಚ ಮತ್ತು ಅದರ ಜ್ಞಾನವೆಂಬ ಭೇದವನ್ನು ಹುಟ್ಟಿಸುವಂಥ ಅಜ್ಞಾನದ ಸಾಮರ್ಥ್ಯ(ವಿಚಂ, ಪುಟ–೨೧೫); **ಮಾಯೆ**=ಮಾಯೆಗೆ ಆವರಣ, ವಿಕ್ಷೇಪಗಳೆಂಬ ಶಕ್ತಿ ಜಗತ್ತನ್ನೂ, ಜೀವರನ್ನೂ ಕಾಣುವಂತೆ ಮಾಡುತ್ತದೆ. (ಪಪ, ಪು–೩೦೯)

---

**ಒಳಗೆ ದೃಗ್ದೃಶ್ಯಗಳ ಭೇದವ**
**ಬಳಸಿ, ಬ್ರಹ್ಮನ ಸೃಷ್ಟಿಗಳ ಹೊರ**
**ವಳಯದೊಳಗಾವರಿಸಿಕೊಂಡಿಹುದಾವರಣ ಶಕ್ತಿ; ।**
**ತಿಳಿಯಲೆರಡಾವರಣವಿರುತಿರ**
**ಲೆಲೆ ಮಗನೆ ಕೆಡೆದಿರ್ಪುವಿಂತೀ**
**ಬಲುಮೆಯಹ ಸಂಸಾರ ಧರ್ಮಾಧರ್ಮಚಿಂತೆಗಳು ॥ ॥೧೮॥**

**ತಾತ್ಪರ್ಯ:** ಆವರಣಶಕ್ತಿ, ಅಂತರಾವರಣ, ಬಹಿರಾವರಣ ಎಂದು ಎರಡು ವಿಧಗಳಾಗಿರುವುವು. ಅಂತಃಕರಣವನ್ನು ಮುಸುಕಿರುವ ಆವರಣ ಒಂದು; ಇನ್ನೊಂದು ಹೊರಗಣ ಜಗತ್ತನ್ನು ಆವರಿಸಿರುವುದು. ಒಳ ಆವರಣದಲ್ಲಿ ದೃಕ್‌ದೃಶ್ಯಗಳೆಂಬ ಭೇದಗಳನ್ನು ವ್ಯವಹಾರದಿಂದ ಒಳಗೊಂಡಿದ್ದರೆ, ಹೊರಾವರದಲ್ಲಿ ಬಲವತ್ತರವಾದ ಸಂಸಾರವು ಧರ್ಮಾಧರ್ಮಗಳೆಂಬ ಚಿಂತೆಗಳನ್ನು ಒಳಗೊಂಡಿವೆ ಎಂಬುದಾಗಿ ಶುಕನೆ ತಿಳಿ ಎಂದರು ವ್ಯಾಸರು. (ಎಂದರೆ ಈ ಆವರಣಶಕ್ತಿಯು ಸಂಸಾರವು ನಿತ್ಯವಾದುದು, ಧರ್ಮಾಧರ್ಮಗಳು ನಿಜವೆಂದು ಭಾವಿಸುವ ಹಾಗೆ ಮಾಡುತ್ತವೆ.)

**ಶಬ್ದಾರ್ಥ: ಎರಡಾವರಣವು**=ಅಂತಃಕರಣವನ್ನು ಮುಸುಕಿರುವ ಆವರಣವೊಂದು, ಹೊರಗಣ ಜಗತ್ತನ್ನು ಮುಸುಕಿರುವ ಆವರಣವೊಂದು; **ಕೆಡೆದಿರ್ಪುವು (ಕೆಡೆದು+ಇರ್ಪುವು)**=(ಸಂಸಾರದ ಚಿಂತೆಗಳು) ಅದರಲ್ಲಿ ಬಿದ್ದಿರುವುವು; *** ಬಲುಮೆಅಹ**=ಬಲವತ್ತರವಾದ; *** ತಿಳಿಯಲು** =ವಿಚಾರಮಾಡಿ ನೋಡಿದರೆ.

**ಪಾಠಾಂತರ:** **'ಕೆಡೆದಿರ್ಪುವು'** ಎಂಬುದಕ್ಕೆ ಕೆಲವು ಪ್ರತಿಗಳಲ್ಲಿ ಕೆಡದಿರ್ಪುವು ಎಂದು ಪಾಠಾಂತರವಿದೆ. (ಕೆಡೆದೆ+ಇರ್ಪು)

---

ಆವರಣವೆಂದೆನಿಪ ನಿದ್ರೆಯ
ದಾವರಿಸಿಕೊಡಿರಲು ವಸ್ತುವ,
ಭಾವಭೇದಭ್ರಾಂತಿರೂಪಿನ ಕನಸು ತೋರಿಸಲು ।
ದೇವತಿರ್ಯಙ್ಮರ್ತ್ಯ ಲೋಕಗ
ಳೀವಿಧದ ಸಚರಾಚರಂಗಳು
ವ್ಯಾವಹಾರಿಕಜೀವಗವು ದಿಟವಂತೆ ತೋರುವುವು ॥ ॥೧೯॥

ತಾತ್ಪರ್ಯ: ಅಖಂಡವಸ್ತುವಾದ ಬ್ರಹ್ಮವನ್ನು ಆವರಣಶಕ್ತಿಯೆಂಬ ನಿದ್ರೆ ಆವರಿಸಿಕೊಂಡಿದ್ದರೆ ಆ ವಸ್ತುವಿನ ಭಾವ-ಭೇದಗಳೆಂಬ ಚಿತ್ರಭ್ರಾಂತಿಗಳು ಸ್ವಪ್ನದಲ್ಲಿ ಕಾಣಿಸುತ್ತವೆ. ಹೀಗೆಯೇ ದೇವತೆಗಳು, ತಿರ್ಯಕ್‌ಜಂತುಗಳು, ಮನುಷ್ಯರು ಇವರಿರುವ ಸ್ವರ್ಗ ಮರ್ತ್ಯ ಪಾತಾಳಲೋಕಗಳೂ, ಸಚರಾಚರಗಳಾದ ಈ ವ್ಯಾವಹಾರಿಕವಾದ ಜಗತ್ತೂ ಮಿಥ್ಯೆ ಆಗಿದ್ದರೂ ಸತ್ಯವಾದುದು ಎಂಬಂತೆ ತೋರುತ್ತದೆ.

ಶಬ್ದಾರ್ಥ: *ಆವರಣ=ಒಳಗೆ ದೃಕ್‌ದೃಶ್ಯಗಳೆಂಬ ಭೇದಗಳ ವ್ಯವಹಾರದಿಂದ ಬ್ರಹ್ಮಸೃಷ್ಟಿಯ ಒಳಗೆ ಆವರಿಸಿಕೊಂಡಿರುವುದೇ ಆವರಣಶಕ್ತಿ; ವ್ಯಾವಹಾರಿಕಜೀವಗೆ=ಎಚ್ಚರದ ಜೀವನಿಗೆ; * ತಿರ್ಯಕ್=ಪಶುಪಕ್ಷಿಗಳಾದಿ ಜೀವಜಂತುಗಳು; ದೇವ=ದೇವತೆಗಳು; ಮರ್ತ್ಯ=ಮನುಷ್ಯರು; ಸಚರಾಚರಗಳು=ಸ್ಥಾವರಜಂಗಮಗಳು; * ದಿಟ=ನಿಜ

ಟಿಪ್ಪಣಿ: ಈ ಪದ್ಯವು
"ಯಥಾ ಸ್ವಪ್ನಮಯೋ ಜೀವೋ ಜಾಯತೇ ಮ್ರಿಯತೇऽಪಿ ಚ ।
ತಥಾ ಜೀವಾ ಅಮೀ ಸರ್ವೇ ಭವಂತಿ ನ ಭವಂತಿ ಚ ॥"
ಎಂಬ ಮಾಂಡೂಕ್ಯಕಾರಿಕೆಯ ತಾತ್ಪರ್ಯವಾಗಿದೆ.

---

ಕನಸಿನನುಭವದೊಳಗೆ ತೋರ್ಪೀ
ಘನತರದ ಸುಖದುಃಖಸಂಕುಲ
ಕನಸಕಾಂಬವಗೆಂತು ನಿಜವೆಂಬಂತೆ ತೋರುವವೊ ।
ತನಯ, ಜಾಗ್ರದಿ ತೋರ್ಪ ಸಂಸೃತಿ
ಯನುಭವವು ವ್ಯವಹಾರಿಜೀವಗೆ
ಮನದ ಭ್ರಮೆಯಲಿ ತೋರುವುದು ದಿಟವೆಂಬ ರೀತಿಯಲಿ ॥॥೨೦॥

ತಾತ್ಪರ್ಯ: ಕನಸಿನ ಅನುಭವದಲ್ಲಿ ಕಡುಬರುವ ನಾನಾಬಗೆಯ ಸುಖದುಃಖಗಳ ಸಮೂಹವು ಕನಸುಗಾರನಿಗೆ ಹೇಗೆ ನಿಜವೆಂದು ಕಾಣಿಸುತ್ತದೋ ಹಾಗೆಯೇ ಈ ಜಾಗ್ರದವಸ್ಥೆಯಲ್ಲಿ ಕಂಡುಬರುವ ಸಂಸಾರದ ಸುಖದುಃಖಗಳ ಅನುಭವವು ವ್ಯಾವಹಾರಿಕಜೀವನಿಗೆ ಮನದ ಭ್ರಮೆಯ ಕಾರಣದಿಂದ ನಿಜವೆಂಬಂತೆಯೇ ಕಾಣುತ್ತದೆ. ಈ ಸತ್ಯವನ್ನು ಮಗನೇ (ಶುಕ) ತಿಳಿದುಕೋ ಎಂದು ವ್ಯಾಸನು ಹೇಳಿದನು.

**ಶಬ್ದಾರ್ಥ:** * **ಸಂಕುಲ**=ಸಮೂಹ, **ತನಯ**=ವ್ಯಾಸನ ಮಗನಾದ ಶುಕ; * **ಜಾಗ್ರದಿ**=ಎಚ್ಚರದ ಅವಸ್ಥೆ, * **ಸಂಸ್ಕೃತಿ**=ಸಂಸಾರ; **ಭ್ರಮೆ**=ಭ್ರಾಂತಿ; **ದಿಟ**=ನಿಜ.

**ಟಿಪ್ಪಣಿ:** ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

**ಕನಸು ಕಾಂಬುದು ನಿಮಿಷ; ಕನಸಿನ**
**ಲನುಭವವು ಬಹುವತ್ಸರಗಳೆಂ**
**ದೆನಿಸಿ ತೋರ್ಪುದು ಕನಸಿನೊಳಗಣ ಮನದ ಭ್ರಮೆಯಿಂದ; ।**
**ವನಜಭವ ಮೊದಲಾದವರ ಬದು**
**ಕನಘ, ತಿಳಿಯಲು ನಿಮಿಷ; ಸಂಸ್ಕೃತಿ**
**ಯನುಭವವು ಬಹುಕಾಲದಂತಿಹುದಾವರಣದಿಂದ ॥ ॥೨೧॥**

**ತಾತ್ಪರ್ಯ:** ಕನಸನ್ನು ಕಾಣುವುದು ಎಚ್ಚರದ ಒಂದು ನಿಮಿಷದ ಅವಧಿ ಆದರೂ (ಅತ್ಯಲ್ಪಕಾಲವಾದರೂ) ಕನಸಿನ ಅನುಭವವು ಮನಸ್ಸಿನ ಭ್ರಮೆಯಿಂದ ಬಹುವರ್ಷಗಳ ಅನುಭವದಂತೆ ಕಂಡುಬರುತ್ತದೆ. ಹೀಗೆಯೇ ಬ್ರಹ್ಮ ಮೊದಲಾದವರ ಜೀವಿತಕಾಲದ ಪರಿಮಾಣವೂ ಕೂಡ ಅಲ್ಪವೇ. ಅದೇ ರೀತಿಯಾಗಿ ಸಂಸಾರದ ಅನುಭವವೂ ದೀರ್ಘಕಾಲವೆಂಬಂತೆ ಆವರಣರೂಪವಾದ ಮಾಯಾಶಕ್ತಿಯ ದೆಸೆಯಿಂದ ಕಾಣುತ್ತದೆ. ನಿಜವಾಗಿ ಒಂದು ನಿಮಿಷವೂ ಭ್ರಾಂತಿಯೇ ಆದ್ದರಿಂದ ಬಹುಕಾಲ ತೋರುವ ಅನುಭವವೂ ನಿಜವಾಗಿ ಸುಳ್ಳೇ ಎಂದು ತಾತ್ಪರ್ಯ.

**ಶಬ್ದಾರ್ಥ:** **ಕನಸುಕಾಂಬುದು ನಿಮಿಷ**=ಕನಸು ಕಾಣುವುದು ಎಚ್ಚರದ ಒಂದು ನಿಮಿಷದಷ್ಟು; **ತಿಳಿಯಲು ನಿಮಿಷ**=ಬ್ರಹ್ಮ ಮೊದಲಾದವರ ಜೀವಿತಕಾಲದ ಅನುಭವವೂ ಕೂಡ ಅಲ್ಪವೇ. ಎಂದರೆ ನಿಜವಾಗಿ ನಿಮಿಷವೂ ಭ್ರಾಂತಿಯೇ. ಆದ್ದರಿಂದ ಬಹುಕಾಲ ತೋರುವ ಅನುಭವವೂ ನಿಜವಾಗಿ ಸುಳ್ಳೇ ಎಂದು ತಾತ್ಪರ್ಯ; * **ಅನಘ**=ಪಾಪರಹಿತನಾದ ಶುಕ; * **ವನಜಭವ**=ಬ್ರಹ್ಮ; * **ಸಂಸ್ಕೃತಿ**=ಸಂಸಾರ; **ಬಹುವತ್ಸರಗಳು**=ಅನೇಕವರ್ಷಗಳು; * **ನಿಮಿಷ**=ಅತ್ಯಲ್ಪಕಾಲ

---

**ಬಾಲಕನೆ, ಚಿದಚಿತ್ಸಮೇಳವ**
**ಕೇಳು ಹೃದಯಗ್ರಂಥಿಯೆಂದದ**
**ಹೇಳುವರು; ಕಾದಿರ್ದಕಬ್ಬಿಣದಂತದನ್ಯೋನ್ಯ; ।**
**ಸ್ಥೂಲಜಡತೆಯ ಚಿತ್ತಿನಲ್ಲಿ ನಿ**
**ರಾಳನಿಜವಸ್ಥೂಲಚಿತ್ತದು**
**ತಾಳೆ ಹಮ್ಮನು ವ್ಯಾವಹಾರಿಕಜೀವನೆನಿಸುವನು ॥ ॥೨೨॥**

**ತಾತ್ಪರ್ಯ:** ಎಲೈ ಶುಕನೇ ಕೇಳು, ಚಿತ್ತು ಮತ್ತು ಅಚಿತ್ತು ಇವುಗಳ ಸಮ್ಮೇಳನವನ್ನು ಹೇಳುತ್ತೇನೆ. ಇದನ್ನು ಹೃದಯಗ್ರಂಥಿ ಎಂದರೆ ಮನಸ್ಸಿನ ಸಂಶಯಜಾಲ ಎನ್ನುತ್ತಾರೆ. ಇದು ಕಾದಕಬ್ಬಿಣದಲ್ಲಿ ಅಗ್ನಿಯಧರ್ಮವು ಕಬ್ಬಿಣದಲ್ಲಿ ಆರೋಪಿತವಾದಂತೆ ಸ್ಥೂಲವೂ

ಜಡವೂ ಆದ ಅನಾತ್ಮವಸ್ತುಗಳಲ್ಲಿ (ಸ್ಥೂಲದೇಹ ಮುಂತಾದವುಗಳಲ್ಲಿ) ಮತ್ತು ನಿರಾಳವೂ, ನಿಜವೂ, ಅಸ್ಥೂಲವೂ ಆದ ಆ ಆತ್ಮವು ಸೇರಿ ಅಭಿಮಾನವನ್ನು ಹೊಂದಿ ವ್ಯಾವಹಾರಿಕಜೀವ (ಎಚ್ಚರದ ಜೀವ) ಎನಿಸುತ್ತಾನೆ.

**ಶಬ್ದಾರ್ಥ:** ಅಚಿತ್ತು=ಅನಾತ್ಮವಸ್ತು; ಚಿತ್ತು=ಆತ್ಮ; ವ್ಯಾವಹಾರಿಕ=ಎಚ್ಚರದ; ಹೃದಯದ ಗ್ರಂಥಿ =ಮನಸ್ಸಿನ ಗಂಟು (ಮನಸ್ಸಿನ ಸಂಶಯ); *ಅನ್ಯೋನ್ಯ=ಒಂದಕ್ಕೊಂದು ಹೊಂದಿ ಕೊಂಡಿರುವುದು, ಬೆಸೆದುಕೊಂಡಿರುವುದು; ಹಮ್ಮನು=ಅಭಿಮಾನವನ್ನು.

**ಟಿಪ್ಪಣಿ:** ಕಾದಿರ್ದ ಕಬ್ಬಿಣದಂತದನ್ಯೋನ್ಯ-ಒಂದಕ್ಕೊಂದು ಕಾವು, ಕಬ್ಬಿಣ ಇವುಗಳಲ್ಲಿ ಒಂದರ ಧರ್ಮವು ಮತ್ತೊಂದರಲ್ಲಿ ಏಕಕಾಲದಲ್ಲಿ ತೋರುವ ಹಾಗಿರುವ ಕಾದಕಬ್ಬಿಣದಂತೆ ಚಿತ್ತೂ ಮತ್ತು ಅಚಿತ್ತೂ ಒಂದಕ್ಕೊಂದು ಅಭಿಮಾನದ ಮೂಲಕವಾಗಿ ಬೆಸೆದುಕೊಂಡಿರುವುದು.

---

**ಇದರಲಿಹುದೀ ಹಮ್ಮು ನಿಜವಾ**
**ಗೊದವಿಕೊಂಡಿಹ ಸಾಕ್ಷಿಚೈತ**
**ನ್ಯದ ಬೆಳಕ ತನ್ನೊಳಗೆ ಧರಿಸುತಲಿಹಪರಂಗಳಲಿ ।**
**ಕುದಿದು ಕೋಟಲೆಗೊಂಡು ವ್ಯವಹಾ**
**ರದಲಿ ವಿಹರಿಸುತಿಪ್ಪುದದರಿಂ**
**ದದನು ಪೇಳ್ವರು ವ್ಯಾವಹಾರಿಕಜೀವನವನೆಂದು ॥ ॥೨೩॥**

**ತಾತ್ಪರ್ಯ:** ಇದರಲಿ ಹಮ್ಮು ನಿಜವಾಗಿ ಒದವಿಕೊಂಡಿಹ ಸಾಕ್ಷಿಚೈತನ್ಯದ ಬೆಳಕ ತನ್ನೊಳಗೆ ಧರಿಸುತಲಿ ಇಹುದು, ಇಹಪರಂಗಳಲಿ ಕುದಿದು, ಕೋಟಲೆಗೊಂಡು ವ್ಯವಹಾರದಲಿ ವಿಹರಿಸುತಿಪ್ಪುದು. ಆದ್ದರಿಂದ ಅದನು ವ್ಯಾವಹಾರಿಕ ಜೀವನು ಅವನು ಎಂದು ಪೇಳ್ವರು. ಬೆಳಕನ್ನು ಕೊಡುವ ಸ್ಥೂಲವಲ್ಲ, ಚೈತನ್ಯವೆಂಬ ಬೆಳಕನ್ನು ಹಮ್ಮು ಪ್ರತಿಬಿಂಬವನ್ನಾಗಿ ಹಿಡಿದುಕೊಳ್ಳುವಂಥ ಸ್ಥೂಲವಲ್ಲ. ಆದ್ದರಿಂದ ಚೈತನ್ಯದ ಬೆಳಕನ್ನು ಹಮ್ಮು ಪ್ರತಿಬಿಂಬಿಸುವುದಿಲ್ಲ. ಆದರೂ ಚೈತನ್ಯದ ಬೆಳಕಿನಂತೆ ತೋರಿಕೊಳ್ಳುತ್ತಾ ಇಹ ಪರಂಗಳಲ್ಲಿ ಕಷ್ಟಕೋಟಲೆಗಳನ್ನು ಅನುಭವಿಸುತ್ತ ವ್ಯವಹಾರಗಳನ್ನು ನಡೆಸಿಕೊಂಡು ಕ್ರೀಡಿಸುತ್ತದೆ. ಆದ್ದರಿಂದ ಇದನ್ನೇ ವ್ಯಾವಹಾರಿಕ ಜೀವನು ಎಂದು ಹೇಳುತ್ತಿರುವರು.

---

**ಒಂದು ಹಮ್ಮೇ ಜೀವಭೇದದ**
**ಲೊಂದಿ ತೋರ್ಪುದು ಹಲವುವಿಧದಲಿ**
**ಕಂದ, ಕೇಳಾವರಿಸಿಕೊಂಡಿರಲಾವರಣಶಕ್ತಿ; ।**
**ಒಂದೆ ಜಾಗ್ರದಿ ವ್ಯಾವಹಾರಿಕ**
**ನೆಂದು, ಸ್ವಪ್ನದಿ ಪ್ರಾತಿಭಾಸಿಕ**
**ನೆಂದು, ಸುಪ್ತಿಯ ಪಾರಮಾರ್ಥಿಕನೆಂದು ಪೆಸರದಕೆ ॥ ॥೨೪॥**

**ತಾತ್ಪರ್ಯ:** ಶುಕನೇ ಕೇಳು, ಆವರಣಶಕ್ತಿಯಿಂದ ಆವರಿಸಲ್ಪಟ್ಟಿರುವ ಈ ಹಮ್ಮು ಎಂಬುದೊಂದೇ. ಆದರೂ ಜೀವಭೇದಗಳಲ್ಲಿ ಹೊಂದಿಕೊಂಡು, ಮೂರು ಭೇದ ಗಳಲ್ಲಿ ಕಾಣಿಸಿಕೊಳ್ಳುತ್ತಿದೆ. ಜಾಗ್ರತಾವಸ್ಥೆಯಲ್ಲಿ ವ್ಯಾವಹಾರಿಕಜೀವನೆಂದೂ ಸ್ವಪ್ನಾವಸ್ಥೆಯಲ್ಲಿ ಪ್ರಾತಿಭಾಸಿಕಜೀವನೆಂದೂ, ಸುಷುಪ್ತಿಯಲ್ಲಿ ಪಾರಮಾರ್ಥಿಕ ಜೀವನೆಂದೂ ಹೆಸರು ಪಡೆದಿದ್ದಾನೆ.

**ಶಬ್ದಾರ್ಥ:** * **ಹಮ್ಮು**=ಅಹಂಕಾರ, * **ತೋರ್ಪುದು**=ಕಾಣಿಸಿಕೊಳ್ಳುತ್ತಿದೆ; * **ಜಾಗ್ರದಿ**=ಜಾಗ್ರತಾವಸ್ಥೆ; * **ಪಾರಮಾರ್ಥಿಕನೆಂಬ**=ಬ್ರಹ್ಮವಾದಂತೆ ಇರುವನು.

**ಟಿಪ್ಪಣಿ-೧: ಪಾರಮಾರ್ಥಿಕನೆಂದು**-ಆತ ಪತ್ಯಕ್ಷಹಾನಿಯನ್ನು ಮಾಡುವ ಸ್ಥೂಲಸೂಕ್ಷ್ಮಶರೀರಗಳ ಸೋಂಕಿಲ್ಲದ್ದರಿಂದ ಜೀವನು ನಿಜಸ್ವರೂಪವಾದ ಬ್ರಹ್ಮದಲ್ಲಿ ಸೇರಿಕೊಂಡವನಾಗಿರುವುದರಿಂದ ಪಾರಮಾರ್ಥಿಕನೆನಿಸಿಕೊಳ್ಳುವನು. (೩-೩೮ನೇ ಪದ್ಯ ನೋಡಿ). ಆದರೆ ಆಗ ಅವನು ತನ್ನನ್ನು ತಾನು ಅರಿತಿರುವುದಿಲ್ಲವಾದ್ದರಿಂದ ಬಹುಮಟ್ಟಿಗೆ ಮಾತ್ರ ಜೀವತ್ವವನ್ನು ಕಳೆದುಕೊಂಡವನಾಗಿ ಬ್ರಹ್ಮವಾದಂತೆ ಇರುವನು ಎಂದು ತಾತ್ಪರ್ಯ.

**ಟಿಪ್ಪಣಿ-೨:** * **ಪ್ರಾತಿಭಾಸಿಕನೆಂದು**-ತೈಜಸ, ನಿದ್ರೆಯ ಆವರಣದಲ್ಲಿ ಹೊಸಜಗತ್ತನ್ನು ಜೀವನವನ್ನು ಕಲ್ಪಿಸಿತೋರಿಸಿ ಅಡಗುವಂತೆ ಮಾಡುತ್ತಾನೆ. ಎಚ್ಚರದಲ್ಲಿರುವ ವ್ಯಾವಹಾರಿಕನಿಗೆ ಇರುವ ಸತ್ ಚಿತ್ ಆನಂದಗಳೇ ಸ್ವಪ್ನದಲ್ಲಿರುವ ಪ್ರಾತಿಭಾಸಿಕನಿಗೂ ತೋರುತ್ತವೆ. (ಪರಮಾರ್ಥ ಪದಕೋಶ, ಪು ೨೫೪)

**ಟಿಪ್ಪಣಿ-೩:** * **ವ್ಯಾವಹಾರಿಕ ಜೀವನೆಂದು**-ಎಚ್ಚರದಲ್ಲಿದ್ದಾಗ ಜೀವನನ್ನು ವ್ಯಾವಹಾರಿಕ ಜೀವನೆನ್ನುತ್ತಾರೆ. ಇವನಿಗೆ ಬುದ್ಧಿ ಸುಖ ದುಃಖ ಇಚ್ಛೆ ಧರ್ಮ ಅಧರ್ಮ ದ್ವೇಷ ಪ್ರಯತ್ನ ಎಂಬ ಭಾವನೆಗಳಿವೆ ಎಂದು ತಾರ್ಕಿಕರು ಹೇಳುತ್ತಾರೆ. (ಪರಮಾರ್ಥ ಪದಕೋಶ, ಪುಟ-೩೫೧)

---

**ಬುದ್ಧಿ ಸುಖದುಃಖೇಚ್ಛೆ, ಯತ್ನ ನಿ**
**ಬದ್ಧಧರ್ಮಾಧರ್ಮಭಾವನೆ**
**ನಿರ್ಧರಿಸಲಾದ್ವೇಷವೆಂಬೀ ನವಗುಣಂಗಳನು**
**ಹೊದ್ದಿ ಗುಣಿಯೆಂದೆನಿಸಿ ತೋರಿಸು**
**ತಿರ್ದ ತಾರ್ಕಿಕಸಮ್ಮತನು ಪರಿ**
**ಶುದ್ಧಮತಿ, ಕೇಳ್ ವ್ಯಾವಹಾರಿಕಜೀವನೆನಿಸುವನು ॥ ॥೨೫॥**

**ತಾತ್ಪರ್ಯ:** ಶುದ್ಧಯತಿಯಾದ ಶುಕನೇ ಕೇಳು, ವೈಶೇಷಿಕರು ಹೇಳುವ ಆತ್ಮನ ಒಂಬತ್ತು ಗುಣಗಳನ್ನು ಹೊಂದಿದವನು ಗುಣಿಯೆಂದೆನಿಸಿ ತೋರುವನು. ಈ ತಾರ್ಕಿಕಸಮ್ಮತವಾದ ಜೀವಿಯೇ ವ್ಯಾವಹಾರಿಕ ಜೀವನು ಎನಿಸಿಕೊಳ್ಳುತ್ತಾನೆ.

**ಟಿಪ್ಪಣಿ-೧: ತಾರ್ಕಿಕಸಮ್ಮತನು**=ಕವಿ ಮಹಲಿಂಗರಂಗನು ಅ-೩, ಪು-೪೯ರಲ್ಲಿ ವೈಶೇಷಿಕರ ೯ ಗುಣಗಳನ್ನು ವಿವರಿಸಿದ್ದಾನೆ.

**ಟಿಪ್ಪಣಿ-೨: ನವಗುಣಂಗಳು**-೧. ಬುದ್ಧಿ, ೨. ಸುಖ, ೩. ದುಃಖ, ೪. ಇಚ್ಛೆ, ೫. ಯತ್ನ, ೬. ನಿಬದ್ಧಧರ್ಮ, ೭. ಅಧರ್ಮ, ೮. ಭಾವನೆ(ಸಂಸ್ಕಾರ), ೯. ದ್ವೇಷ ಇವುಗಳನ್ನು ಬ್ರಹ್ಮಸೂತ್ರಭಾಷ್ಯದಲ್ಲಿ ಹೇಳಿದೆ.

ಟಿಪ್ಪಣಿ-೩: * ನವಗುಣಂಗಳು-ಗುಣಗಳನ್ನು ೯ ಎಂದು ವಿವೇಕ ಚಿಂತಾಮಣಿ ಭಗವದ್ಗೀತೆ ಮೊದಲಾದ ಗ್ರಂಥಗಳಲ್ಲಿ ಹೇಳಿದೆ. ಆದರೆ ಗುಣಗಳು ೩, ೪, ೫, ೬, ೭, ೮, ೧೦, ೧೨, ೧೩, ೧೬, ೧೮, ೨೪, ೨೮ ,೩೦, ೪೦, ೪೬ ಎಂದು ಬೇರೆ ಶಾಸ್ತ್ರಗ್ರಂಥಗಳಲ್ಲಿ ಹೇಳಿದೆ. (ವಿವರಗಳಿಗೆ ಶ್ರೀವತ್ಸ ನಿಘಂಟು, ಪುಟ-೧೦೨-೧೦೫ ನೋಡಿ)

ಟಿಪ್ಪಣಿ-೪: ವ್ಯಾವಹಾರಿಕಜೀವನೆನಿಸುವವನು (ಕು) * ಕೇಳೀ ವ್ಯಾವಹಾರಿಕಜೀವನೆನಿಸುವವನು =ಛಂದಸ್ಸಿನ ದೃಷ್ಟಿಯಿಂದ ಕೇಳ್ ಪಾಠಾಂತರವೇ ಶುದ್ಧವಾಗಿದೆ(ಅನು).

---

ಕೇಳವಿದ್ಯಾಭಾಸದಿಂದಲಿ
ತಾಳಿ ಕರ್ತೃತ್ವವನು, ಸೂಕ್ಷ್ಮ
ಸ್ಥೂಲದೇಹಂಗಳಲಿ ತಾನಿಹೆನೆಂದಹಂಕರಿಸಿ, ।
ಕೀಳುಮೇಲಹ ಕರ್ಮಫಲದಲಿ
ಮೇಲುಕೆಳಗೆಂದೆಂಬ ಲೋಕದೊ
ಳಾಳುತೇಳುತ ಸಂಚರಿಸುತಿಹ ವ್ಯಾವಹಾರಿಕನು ॥ ॥೨೬॥

ತಾತ್ಪರ್ಯ: ಶುಕನೆ ಕೇಳು, ಜೀವನೆಂಬುವನು ಅವಿದ್ಯಾಭಾಸದಿಂದ (ಆತ್ಮನ ನಿಜಸ್ವರೂಪದ ಜ್ಞಾನವಿಲ್ಲದ್ದರಿಂದ ಅನಾತ್ಮಗಳು ಆತ್ಮದಂತೆ ತೋರುವುದು) ಕರ್ತೃತ್ವಭಾವ ತಾಳಿ, ಸ್ಥೂಲಸೂಕ್ಷ್ಮದೇಹಗಳಲ್ಲಿ ತಾನೇ ಇದ್ದೇನೆಂದು ಅಹಂಭಾವದಿಂದ ಕೂಡಿರುತ್ತಾನೆ. ಈ ಕಾರಣದಿಂದ ಈ ವ್ಯಾವಹಾರಿಕಜೀವನು ಶುಭಾಶುಭಕರ್ಮಗಳ ಫಲವಾಗಿ ಸಪ್ತ ಊರ್ಧ್ವಲೋಕಗಳಿಗೆ ಏರುತ್ತಲೂ ಸಪ್ತ ಅಧೋಲೋಕಗಳಿಗೆ ಇಳಿಯುತ್ತಲೂ ಇರುತ್ತಾನೆಂದು ತಿಳಿ.

ಶಬ್ದಾರ್ಥ: ಅವಿದ್ಯಾಭಾಸ=ಆತ್ಮನ ನಿಜಸ್ವರೂಪದ ಜ್ಞಾನವಿಲ್ಲದ್ದರಿಂದ ಅನಾತ್ಮಗಳು ಆತ್ಮದಂತೆ ತೋರುವುದು; * ಕರ್ಮಫಲದಲ್ಲಿ=ಪಾಪಪುಣ್ಯಗಳ ಕರ್ಮದಿಂದ; * ಸ್ಥೂಲಶರೀರ=ಕಣ್ಣಿಗೆ ಕಾಣಿಸುವ ದೇಹ, ಪಂಚೇಂದ್ರಿಯಗಳ ಶರೀರ.

ಟಿಪ್ಪಣಿ: ಮೇಲುಕೆಳಗೆಂದೆಂಬ ಲೋಕದೊಳು ಮೇಲಿರುವ ಸಪ್ತಲೋಕಗಳು-೧. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ; ಕೆಳಗಿರುವ ಸಪ್ತಲೋಕಗಳು-ಅತಲ ವಿತಲ ಸುತಲ ತಲಾತಲ ಮಹಾತಲ ರಸಾತಲ ಪಾತಾಲ (ಅ-೫, ಪದ್ಯ ೨೫ರ ಟಿಪ್ಪಣಿಗಳಲ್ಲಿ ಇವುಗಳನ್ನು ಕವಿ ಪ್ರಸ್ತಾಪಿಸಿದ್ದಾನೆ)

ಟಿಪ್ಪಣಿ-೨: * ಸೂಕ್ಷ್ಮದೇಹ=೧೦ ಇಂದ್ರಿಯಗಳು, ೫ ಪ್ರಾಣಗಳು-ಮನಸ್ಸು ಬುದ್ಧಿ ಇವು ೧೭ ಸೇರಿ ಸೂಕ್ಷ್ಮಶರೀರವೆನ್ನುತ್ತಾರೆ. ಸುಖದುಃಖಗಳು ಈ ಶರೀರಕ್ಕೆ ಹೊರತು ಜೀವನಿಗಲ್ಲ.

---

ವ್ಯಾವಹಾರಿಕ ಜೀವನಿಂತೀ
ವ್ಯಾವಹಾರಿಕವಾದ ಜಗವನು
ವೋವಿ ದಿಟವೆಂದೆಂಬ ಮಾಯಾವರಣವೆಡೆಗೊಂಡು; ।

**ಭಾವಿಸುತ್ತಿರೆ ವ್ಯಾವಹಾರಿಕ**
**ಜೀವನಲ್ಲಿಯ ನಿದ್ರೆಯೆಂಬೀ**
**ಆವರಣದಲಿ ಪ್ರಾತಿಭಾಸಿಕಜೀವ ಜಗವಾಯ್ತು ॥ ॥೨೭॥**

**ತಾತ್ಪರ್ಯ:** ವ್ಯಾವಹಾರಿಕ ಜೀವನು ಮಾಯಾವರಣಕ್ಕೆ ಸಿಲುಕಿಕೊಂಡು ನಶ್ವರದ ಜಗತ್ತನ್ನು ನಂಬಿ ನಿಜವೆಂದು ಭಾವಿಸುತ್ತಾನೆ. ವಿಚಾರಮಾಡಲಾಗಿ ವ್ಯಾವಹಾರಿಕ ಜೀವನೆಂಬುವನಿಗೆ ನಿದ್ರೆಯೆಂಬ ಆವರಣವು ಆವರಿಸಿರುವಾಗ ಜೀವ-ಜಗತ್ತು ಪ್ರಾತಿಭಾಸಿಕವಾಗಿ ಇಲ್ಲದಿದ್ದರೂ ಇದ್ದಹಾಗೆ ಕಾಣುವ (ಕನಸಾಗಿ) ಕಾಣುತ್ತದೆ.

**ಶಬ್ದಾರ್ಥ:** * ಓವಿ=ನಂಬಿ; ದಿಟ=ನಿಜ; ಪ್ರಾತಿಭಾಸಿಕ=ಇಲ್ಲದಿದ್ದರೂ ಇದ್ದಹಾಗೆ ಕಾಣುವ (ಕನಸಿನ); ಸಾಭಾಸ ಅಂತಃಕರಣರೂಪ=ವ್ಯಾವಹಾರಿಕ ಜೀವನದಲ್ಲಿ ಸ್ವಪ್ನದಲ್ಲಿ ಅಧ್ಯಸ್ಥನಾಗಿ ತೋರುವ ಜೀವ (ಶೃತಿ ವಿಚಾರ ಚಂದ್ರೋದಯ, ಪುಟ-೨೨೩); * ವ್ಯಾವಹಾರಿಕ=ಸಾಭಾಸ ಅಂತಃಕರಣರೂಪ ಜೀವ ಜಾಗ್ರತ್ತಿನಲ್ಲಿ ದೇಹತ್ರಯದ ಅಭಿಮಾನಿಯಾದ ಜೀವ (ವಿಶ್ವ); * ಮಾಯಾವರಣ=ತನ್ನ ಸ್ವರೂಪವನ್ನು ತಿಳಿಯಗೊಳಿಸದ ತೆರೆಮರೆ ದೋಷ (ಪುಟ-೯, ಶೃತಿ ವಿಚಾರ ಚಂದ್ರೋದಯ); * ಭಾವಿಸುತ್ತಿರೆ=ವಿಚಾರಮಾಡಲಾಗಿ.

---

**ನೂತನದ ಜಗಜೀವರನು ತಾ**
**ನೋತು ಕಲ್ಪಿಸಿ ನಿದ್ರೆಯಿಂದದ**
**ನಾ ತತುಕ್ಷಣದಲ್ಲಿ ತೋರುತ್ತಳಿಸುತಿಹನಾಗಿ ।**
**ಪ್ರಾತಿಭಾಸಿಕನೆನಿಸುವನು; ಸ್ವ**
**ಪ್ನಾತಿಶಯದಲಿ ಕಾಣುವದನಾ**
**ಪ್ರಾತಿಭಾಸಿಕಜೀವ ದಿಟವೆಂದಾಗ ಬಗೆದಿಹನು ॥ ॥೨೮॥**

**ತಾತ್ಪರ್ಯ:** ಜೀವನು ನೂತನವಾದ ಜಗತ್ತನ್ನು ಜೀವರುಗಳನ್ನೂ ಪ್ರೀತಿಯಿಂದ ನಿರ್ಮಾಣಮಾಡಿ ನಿದ್ರಾವಸ್ಥೆಯಲ್ಲಿ ಅವನಿಗೆ ಇವು ಆ ಕ್ಷಣವೇ ಕಾಣುತ್ತಾ, ಮರೆಯಾಗುತ್ತಾ ಸ್ವಪ್ನವಾಗಿ ಪರಿಣಮಿಸುತ್ತಿರುತ್ತದೆ. ಆ ಅವಸ್ಥೆಯಲ್ಲಿ ಪ್ರಾತಿಭಾಸಿಕನೆನಿಸುತ್ತಾನೆ. ಜೀವ ಜಗತ್ತನ್ನು ಸ್ವಪ್ನದಲ್ಲಿ ಕಾಣುವಾಗ ಅದನ್ನು ನಿಜವೆಂದೇ ನಂಬಿರುತ್ತಾನೆ. ಎಚ್ಚರದ ದೃಷ್ಟಿಯಲ್ಲಿ ಆ ಕನಸಿನ ಜಗತ್ತು ರಜ್ಜು ಸರ್ಪ ನ್ಯಾಯದಂತೆ ಸುಳ್ಳಾಗಿರುತ್ತದೆ.

**ಶಬ್ದಾರ್ಥ:** * ಓತು ಕಲ್ಪಿಸಿ=ಪ್ರೀತಿಯಿಂದ ನಿರ್ಮಾಣಮಾಡಿ; * ತತುಕ್ಷಣದಲಿ=ಆ ಕ್ಷಣದಲ್ಲಿ; * ದಿಟ=ನಿಜ; * ಬಗೆದಿಹನು=ತಿಳಿದಿರುತ್ತಾನೆ.

**ಟಿಪ್ಪಣಿ:** ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ತೋರುವೀ ಹಮ್ಮಿದು ಪರಾತ್ಮನ**
**ಸೇರಿ ತಾನಿರಲಾಗಳದರಿಂ**
**ಪಾರಮಾರ್ಥಿಕ ಜೀವನೆಂದಾರೋಪವಾಯ್ತೈಸೆ ।**

ಧೀರ, ತಿಳಿ ಮಾಯಾಂಶವಲ್ಲದು;
ಸಾರತರವಾತ್ಮಾಂಶವದರಿಂ
ಪಾರಮಾರ್ಥಿಕ ಜೀವ ತಾನೇ ಪರಮನಾಗಿಹನು ॥ ॥೨೯॥

ತಾತ್ಪರ್ಯ: ಈ ರೀತಿ ತೋರುತ್ತಿರುವ ಅಹಂಕಾರವು ಆತ್ಮನ ಸಮೀಪದಲ್ಲಿರುವಾಗ ಆತ್ಮನಿಗೆ ಪಾರಮಾರ್ಥಿಕಜೀವನೆಂಬ ಆರೋಪಣೆ ಹುಟ್ಟುವುದು, ಸಹಜ ಕಣೋ. ಎಲೈ, ಧೀರ ಶುಕನೇ, ತಿಳಿದಿಕೋ. ಆ ಮಾಯೆಯ ಅಂಶವೇನೂ ಇಲ್ಲದೆ ಸಂಪೂರ್ಣವಾದ ಆತ್ಮಾಂಶವನ್ನು ಒಳಗೊಂಡಾಗ ಆ ಪಾರಮಾರ್ಥಿಕಜೀವನೇ ತನ್ನನ್ನೇ ಪರಮಾತ್ಮ ಸ್ವರೂಪನೆಂದು ತಿಳಿಯುತ್ತಾನೆ.

ಶಬ್ದಾರ್ಥ: ಪರಾತ್ಮ=ಶ್ರೇಷ್ಠ ಆತ್ಮ; ಐಸೇ=ಕಣೋ, ಅಲ್ಲವೇ?; ಧೀರ =ಧೀರನಾದ ಶುಕನೇ; ಪರಮನಾಗಿಹನು=ಪರಮಾತ್ಮಸ್ವರೂಪನಾಗಿರುವನು.

ಟಿಪ್ಪಣಿ: ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಭಾವಿಸಲು ಪರಮಾರ್ಥಜೀವನು
ವ್ಯಾವಹಾರಿಕಜೀವಜಗವನು
ವೋವಿ ಪುಸಿಯೆಂದೆಂಬನವಗದು ತೋರದುದರಿಂದ; ।
ವ್ಯಾವಹಾರಿಕಜೀವನಾದರೊ
ತೀವಿ ತೋರುವ ಪ್ರಾತಿಭಾಸಿಕ
ಜೀವಜಗವನು ಪುಸಿಯೆನುತ ಬಗೆದಿಹನು ಕೇಳೆಂದ ॥ ॥೩೦॥

ತಾತ್ಪರ್ಯ: ಅಯ್ಯಾ ಶುಕಮುನಿಯೇ ಕೇಳು, ಪಾರಮಾರ್ಥಿಕ ಜೀವನು ಎಚ್ಚರದ ದೃಷ್ಟಿಯಿಂದ ನೋಡಿದರೆ ಕನಸಿನ ಜಗತ್ತು ರಜ್ಜು ಸರ್ಪದಂತೆ ಕಾಣುವ ವ್ಯಾವಹಾರಿಕವಾದ ಮಾಯೆಯಿಂದ ಕೂಡಿದ ಈ ಜೀವಜಗತ್ತನ್ನು ಸತ್ಯಸ್ವರೂಪ ಕಾಣದುದರಿಂದ-ಸುಳ್ಳೆಂದು ತಿಳಿಯುವನು. ಹಾಗೆಯೇ ವ್ಯಾವಹಾರಿಕ ಜೀವನಾದರೋ ನಿದ್ರೆಯ ದೃಷ್ಟಿಯಿಂದ ನೋಡಿದರೆ ಎಚ್ಚರದ ಜಗತ್ತು ಎಷ್ಟು ಮಾತ್ರವೂ ಇಲ್ಲದ್ದರಿಂದ ಅದನ್ನು ಅಸತ್ಯವೆಂದು ತಿಳಿದಿರುತ್ತಾನೆ ಎಂದು ಹೇಳಿದನು.

ಶಬ್ದಾರ್ಥ: * ಭಾವಿಸಲು=ವಿಚಾರಮಾಡಿದರೆ; * ಓವಿ=ಅಧಿಕವಾಗಿ ನಂಬಿ; * ಪುಸಿಎಂದೆಂಬನು =ಸುಳ್ಳು ಎಂದು ತಿಳಿಯುವನು; * ವ್ಯಾವಹಾರಿಕಜೀವಜಗ=ನಿದ್ರೆಯ ದೃಷ್ಟಿಯಿಂದ ನೋಡಿದಹಾಗೆ ಕಾಣುವ ಎಚ್ಚರದ ಜೀವಜಗತ್ತು; * ಪ್ರಾತಿಭಾಸಿಕ ಜೀವಜಗ=ಎಚ್ಚರದ ದೃಷ್ಟಿಯಿಂದ ನೋಡಿದರೆ ಕಾಣುವ ಕನಸಿನಜಗತ್ತು; ಬಗೆದಿಹನು=ತಿಳಿದಿದ್ದಾನೆ.

---

## ಆವರಣನಾಶದ ಅಗತ್ಯ (೩೧–೩೭)

ಈ ವಿಧದಿ ಹಮ್ಮಿನಲಿ ಭೇದವ
ಭಾವಿಸಲು ಮಿಗೆ ತೋರ್ಪರೀ ಪರಿ
ಜೀವರುಗಳೆಲೆ ಮೂರುಭೇದದಿ ದೇಹದೊಳಗವರು; ।
ಆವರಣದಿಂದಾದ ಹಮ್ಮಿಗೆ
ಜೀವನತನವಳಿವಂದವೆಂತೆನ
ಲಾವರಣವಳಿದಲ್ಲದಳಿಯದು ಜೀವತನವೆಂದ ॥ ॥೩೧॥

**ತಾತ್ಪರ್ಯ:** ಈ ರೀತಿಯಲ್ಲಿ ನಡೆಯುತ್ತಿರುವ ಜೀವದಲ್ಲಿ ಅಂತಸ್ಥಿತವಾದ ಅಹಂಕಾರದ ಭೇದಗಳನ್ನು ವಿಚಾರಮಾಡಿ ನೋಡಿದರೆ, ಜೀವನು ದೇಹದೊಳಗೆ ಪಾರಮಾರ್ಥಿಕ (ವಿಶ್ವ), ವ್ಯಾವಹಾರಿಕ (ತೈಜಸ), ಪ್ರಾತಿಭಾಸಿಕ (ಪ್ರಾಜ್ಞ) ಎಂಬ ಮೂರುವಿಧವಾದ ಜೀವರಾಗಿ ಕಾಣಿಸಿಕೊಳ್ಳುತ್ತಾರೆ. ಏಕೆಂದರೆ ಒಂದೇ ಎನಿಸಿಕೊಳ್ಳುವ ಜೀವನು ದೇಹದಲ್ಲಿ ಭೇದವನ್ನು ಭಾವಿಸುವುದರಲ್ಲೇ ಜೀವತ್ರಯನಾಗಿ ತೋರಿದನು. ಹೀಗೆ ಆವರಣದಿಂದಾದ ಅಹಂಕಾರಕ್ಕೆ ಮಾಯಾರೂಪವಾದ ಆ ಆವರಣವು ಲಯವಾದಾಗ ಆ ಮೂರು ಜೀವರುಗಳೆಂಬ ಭ್ರಾಂತಿಯೂ ಅಳಿಯುವುದು.

**ಶಬ್ದಾರ್ಥ:** ಹಮ್ಮಿನಲಿ=ಅಹಂಕಾರದಲ್ಲಿ; ಭೇದನ=ಭಿನ್ನರೂಪಗಳನ್ನು; ಮೂರುಭೇದದಿ =ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಸಿಕ ಎಂಬ ಮೂರುವಿಧವಾದ ಜೀವರುಗಳು; ಆವರಣ=ಆವರಣಶಕ್ತಿ. ಅಧಿಷ್ಠಾನವನ್ನು ಮುಚ್ಚುವಂತಹ ಯಾವ ಅಜ್ಞಾನದ ಸಾಮರ್ಥ್ಯವಾದರೂ ಆವರಣವೆನಿಸುತ್ತದೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಸ್ಥೂಲಸೂಕ್ಷಶರೀರವಲ್ಲ; ನಿ
ರಾಳ ನಿಜತಾನೆಂದು ಸಂಶಯ
ಜಾಲವನು ಹರಿದರಿಯೆ ನಿಶ್ಚಯವಾಗಿ ತನ್ನೊಳಗೆ ।
ಕೋಳವನು ಕಡಿದಂತೆ, ಸಂಕಲೆ
ಕಾಲಿನುಗಿದಂದದಲಿ, ಬಹುಭವ
ಮಾಲೆಯನು ಕಳೆದಾಗ ಜೀವನ್ಮುಕ್ತನಾಗಿಹನು ॥ ॥೩೨॥

**ತಾತ್ಪರ್ಯ:** ಆತ್ಮನು ತಾನು ಸ್ಥೂಲಶರೀರನಾಗಲಿ, ಸೂಕ್ಷ್ಮಶರೀರನಾಗಲಿ ಅಲ್ಲವೆಂದು ನಿರಾಳವಾದ ಸತ್ಯ ವಸ್ತುವೇ ತಾನೆಂದು ತನ್ನಲ್ಲಿ ನಿಶ್ಚಯಿಸಿಕೊಂಡು ಮನಸ್ಸಿನ ಸಂಶಯಗಳೆಂಬ ಬಲೆಯನ್ನು ಛಿದ್ರಗೊಳಿಸಿದಾಗ ಕೈಬೇಡಿಯನ್ನು ಕತ್ತರಿಸಿ ಹಾಕಿದಂತೆಯೂ, ಕಾಲಿನ ಬೇಡಿಯನ್ನು ಕಾಲಿನಿಂದ ಕಳಚಿಹಾಕಿದ ರೀತಿಯಲ್ಲಿ ಅನೇಕ ಜನ್ಮಗಳ ಹುಟ್ಟುಸಾವುಗಳ ಸಾಲನ್ನು ಕಳಚಿಕೊಂಡಕೂಡಲೇ ಜೀವನ್ಮುಕ್ತ ಎನಿಸುತ್ತಾನೆ.

**ಶಬ್ದಾರ್ಥ:** **ಸ್ಥೂಲಸೂಕ್ಷ್ಮಶರೀರನಲ್ಲ**=ಎರಡು ಶರೀರಗಳನ್ನು ಕಳೆಯುತ್ತಲೇ ಆತ್ಮನು ಸಿಗುವನು. ಆದ್ದರಿಂದ ಆತ್ಮನು ಸ್ಥೂಲಶರೀರಿಯೂ ಅಲ್ಲ, ಸೂಕ್ಷ್ಮಶರೀರಿಯೂ ಅಲ್ಲ; * **ಜಾಲ**=ಬಲೆ; * **ಹರಿದರಿಯೆ**=ಛಿದ್ರಗೊಳಿಸಿದಾಗ; * **ಕೋಳವನು ಕಡಿದಂತೆ**=ಕೈಬೇಡಿಯನ್ನು ಕತ್ತರಿಸಿಹಾಕಿದಂತೆ.

**ಪದ ವಿಭಾಗ:** **ಕಾಲಿನುಗಿದಂದದಲಿ** (ಕಾಲಿಂ+ಉಗಿದಂದದಲಿ); **ಸಂಕಲೆ**=ಕಾಲಿನಬೇಡಿ (ಸಾಮಾನ್ಯವಾಗಿ ಕೋಳ, ಸಂಕಲೆ ಎರಡೂ ಪದಗಳನ್ನು ಬೇಡಿ ಎಂಬರ್ಥದಲ್ಲಿಯೇ ಬಳಸುತ್ತಾರೆ. ಅರ್ಥವ್ಯತ್ಯಾಸ ಮಾಡುವುದಿಲ್ಲ. ಆದರೆ ಅವೆರಡೂ ಬೇರೆಬೇರೆ–ಅನು); **ಬಹುಭವಮಾಲೆ**=ಅನೇಕ ಜನ್ಮಗಳ ಹುಟ್ಟುಸಾವುಗಳ ಸಾಲು.

**ಟಿಪ್ಪಣಿ:** **ಸ್ಥೂಲಸೂಕ್ಷ್ಮಶರೀರವಲ್ಲ**–ಎರಡು ಶರೀರಗಳನ್ನು ಕಳೆಯುತ್ತಲೆ ಆತ್ಮನು ಸಿಕ್ಕುವನೆಂಬುದಕ್ಕೆ ಅ–೩, ೭೮–ಪದ್ಯ ನೋಡಿ. ಆದರೂ ಇಲ್ಲಿ ಕಾರಣ ಶರೀರವನ್ನು ಕಳೆಯುವುದು ಇರುವದೆಂದು ೯–೩೫ರಲ್ಲಿ ಹೇಳಿದೆ.

---

**ಜಗದೊಳುದಿಸಿದ ಶಕ್ತಿ ತೆರೆನೊರೆ**
**ಗಳನು ಮಾಡಲ್ಕವರೊಳಗೆ ತ**
**ಜ್ಜಲದ ಮಧುರ, ದ್ರವತ್ವ, ಶೀತಲ ಕೂಡಿತೋರುವವು; ।**
**ಉಳಿಯೆ ನೊರೆಯಾ ಗುಣಗಳಾ ತೆರೆ**
**ಯೊಳಗೆ ತೋರ್ಪುವು; ತೆರೆಯಡಗಲವು**
**ಬಳಿಕ ಜಲದಲಿ ಮುನ್ನಿನಂದದೊಳಿಹವು ಕೇಳೆಂದ ॥ ॥೩೩॥**

**ತಾತ್ಪರ್ಯ:** ಜಲಶಕ್ತಿ ನೀರಿನಲ್ಲಿ ಎದ್ದ ತೆರೆಯ ನೊರೆಯಲ್ಲಿ ಕಾಣಿಸಿಕೊಂಡು ನೀರಿನ ಮಾಧುರ್ಯ, ದ್ರವತ್ವ, ಶೈತ್ಯ ಮೊದಲಾದ ಗುಣಗಳನ್ನು ತೋರುತ್ತದೆ; ಅವು ನೊರೆಯಿಂದ ಮರೆಯಾಗಿ ತೆರೆಯಲ್ಲಿ ಕಾಣಿಸುತ್ತ ಅದೂ ಅಡಗುತ್ತಲೇ ಆ ಗುಣಗಳು ನೀರಿನಲ್ಲಿಯೇ ಮೊದಲಿನ ಹಾಗೆ ಅಡಗಿರುತ್ತದೆ. ಅದರಂತೆಯೇ ಆತ್ಮನಲ್ಲಿ ಎದ್ದು ಕಾಣುವ ಮೂರು ಅವಸ್ಥೆಗಳಲ್ಲಿ ಆತ್ಮನ ಸಚ್ಚಿದಾನಂದಗಳು ಎಚ್ಚರದಲ್ಲಿ ತೋರುತ್ತಿದ್ದು ಅದು ಅಡಗುತ್ತಲೇ ಕನಸಿನಲ್ಲಿ ಕಾಣಿಸಿಕೊಂಡು, ಅದೂ ಇಲ್ಲವಾಗುತ್ತಲೆ ಅವು ನಿದ್ರೆಯಲ್ಲಿ ತೋರಿಕೊಂಡು, ಅದೂ ಕಳೆದಮೇಲೆ ಆತನಲ್ಲಿಯೇ ಇರುವವು ಎಂಬ ಅರ್ಥಕ್ಕೆ ಹೋಲಿಕೆಯಾಗಿದೆ.

**ಶಬ್ದಾರ್ಥ:** * **ಜಲದೊಳು ಉದಿಸಿದ ಶಕ್ತಿ**=ಜಲಶಕ್ತಿ; * **ಮಾಡಲ್ಕೆ**=ಉಂಟುಮಾಡಲು; * **ಮಧುರ**=ಸಿಹಿ; * **ದ್ರವತ್ವ**=ಹರಿಯುವ ಗುಣ; * **ಶೀತಲ**=ತಂಪು; * **ಅಳಿಯೆ**=ಮರೆಯಾಗಲು; * **ತೋರ್ಪುವು**=ಕಾಣಿಸಿಕೊಳ್ಳುತ್ತವೆ; * **ಮುನ್ನಿನಂದದಲಿ**=ಮೊದಲಿನಹಾಗೆ ನೀರಿನಶಕ್ತಿಯಾಗಿಯೇ ಇರುತ್ತದೆ.

**ಟಿಪ್ಪಣಿ–೧:** **ತೆರೆನೊರೆಗಳನು ಮಾಡಲ್ಕೆ**=ನೀರಿನಲ್ಲಿ ಎದ್ದ ತೆರೆಯನೊರೆಯಲ್ಲಿರುವ ಜಲಶಕ್ತಿಯು ನೀರಿನ ಮಾಧುರ್ಯ, ದ್ರವತ್ವ, ಶೈತ್ಯ ಮೊದಲಾದ (ಗುಣಗಳನ್ನು) ತೋರುತ್ತ ನೊರೆ ಅಡಗುತ್ತಲೆ ಅವು ತೆರೆಯಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಅದೂ ಅಡಗುತ್ತಲೇ ಆ ಗುಣಗಳು ನೀರಿನಲ್ಲಿಯೇ ಇರುತ್ತವೆ ಎಂಬುದನ್ನು (ಆತ್ಮನು ಮೂರವಸ್ಥೆಗಳಲ್ಲಿ ಕಾಣುವ ರೀತಿಗೆ ದೃಷ್ಟಾಂತವಾಗಿದೆ)

**ಟಿಪ್ಪಣಿ-೨:** ಅದೇ ರೀತಿಯಾಗಿ ಆತ್ಮನಲ್ಲಿ ಎದ್ದುಕಾಣುವ ಮೂರು ಅವಸ್ಥೆಗಳಲ್ಲಿ (ಜಾಗೃತಿ, ಸ್ವಪ್ನ, ಸುಷುಪ್ತಿ) ಆತ್ಮನ ಸಚ್ಚಿದಾನಂದ (ಸತ್+ಚಿತ್+ಆನಂದ) ಗುಣಗಳು ಎಚ್ಚರದಲ್ಲಿ ತೋರುತ್ತಿದ್ದು, ಅದು ಅಡಗುತ್ತಲೇ ಕನಸಿನಲ್ಲಿ ಕಾಣಿಸಿಕೊಂಡು ಅದೂ ಇಲ್ಲವಾಗುತ್ತಲೇ ಅವು ನಿದ್ದೆಯಲ್ಲಿ ತೋರಿಕೊಂಡು ಅದೂ ಕಳೆದಮೇಲೆ ಆತನಲ್ಲಿಯೇ ಇರುವವು ಎಂಬರ್ಥಕ್ಕೆ ಹೋಲಿಕೆಯಾಗಿದೆ. ಆ ಅರ್ಥವು ಮುಂದಿನ ಎರಡು ಪದ್ಯಗಳಲ್ಲೂ (೯-೩೪, ೯-೩೫) ಹೊರಡುವುದು.

**ಪಾಠಾಂತರ:** ೧. ಶಕ್ತಿ (ಪಾಠಾಂತರ-ಅರಾಸೇ) (ಸ) ಪ್ರತಿಗಳಲ್ಲಿಯೂ ಇದೆ. ಆದರೆ (ಕು) ಪ್ರತಿ (ಅಂ) ಪ್ರತಿಯಲ್ಲಿ ಶುಕ್ತಿ ಎಂಬ ಅಶುದ್ಧ ಪಾಠವಿದೆ. ೨. ಅಳಿಯೆ=ಉಳಿಯೆ (ಕು).

---

**ಸತ್ಯವಹ ಸಾಕ್ಷಿಸ್ವರೂಪದ**
**ಸತ್ತುಚಿತ್ತಾನಂದಗಳು ಬಿಡ**
**ದತ್ತಲಾ ವ್ಯವಹಾರ ಜಗಜೀವನೊಳು ತೋರುವುವು; ।**
**ಮತ್ತೆ ಕೇಳೀ ವ್ಯಾವಹಾರಿಕ**
**ನತ್ತಲಿಹ ಸಚ್ಚಿತ್ಸುಖಂಗಳು**
**ಬಿತ್ತರಿಸಿ ಮಿಗೆ ಪ್ರಾತಿಭಾಸಿಕನಲ್ಲಿ ತೋರುವವು ॥ ॥೩೪॥**

**ತಾತ್ಪರ್ಯ:** ಎಚ್ಚರದ ಅವಸ್ಥೆಯಲ್ಲಿ ಸತ್ಯವಾಗಿ ಸಾಕ್ಷಿಸ್ವರೂಪವಾಗಿರುವ ಸತ್, ಚಿತ್, ಆನಂದ ಸುಖಗಳು ವ್ಯವಹಾರದ ಜಗತ್ತಿನ ಜೀವನಲ್ಲಿ ಎಡಬಿಡದೆ ಕಾಣಿಸಿಕೊಳ್ಳುತ್ತದೆ. ಆದರೆ ವ್ಯಾವಹಾರಿಕ ಜಗತ್ತಿನಲ್ಲಿ ಜೀವನಲ್ಲಿ ಕಾಣಿಸಿಕೊಳ್ಳುವ ಸಚ್ಚಿದಾನಂದ ಸುಖಗಳು ವ್ಯಾವಹಾರಿಕವಲ್ಲದ ಸ್ವಪ್ನಾವಸ್ಥೆಯ ಪ್ರಾತಿಭಾಸಿಕದಲ್ಲಿ ಇನ್ನೂ ವಿಸ್ತಾರವಾಗಿ ಕಾಣಿಸಿಕೊಳ್ಳುತ್ತದೆ.

**ಶಬ್ದಾರ್ಥ:** * ವ್ಯಾವಹಾರಿಕನತ್ತಲಿಹ=ವ್ಯಾವಹಾರಿಕವಲ್ಲದ ಪ್ರಾತಿಭಾಸಿಕನಲ್ಲಿ; * ಬಿತ್ತರಿಸಿ =ವಿಸ್ತಾರಗೊಂಡು; * ಬಿಡದೆ=ಸದಾ, ಎಡಬಿಡದೆ.

**ಟಿಪ್ಪಣಿ:** ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಪ್ರಾತಿಭಾಸಿಕನಾವರಣವಳಿ**
**ದಾತನಲ್ಲಿಹ ಸಚ್ಚಿದಾನಂ**
**ದಾತಿಶಯವೇ ಪಾರಮಾರ್ಥಿಕನಲ್ಲಿ ತೋರುವದು; ।**
**ಮಾತದೇನ್ಸೈ ! ಪಾರಮಾರ್ಥಿಕ**
**ಗಾತನಲ್ಲಿಪ್ಪಾವರಣ ಕೆಡ**
**ಲೋತು ಮುನ್ನಿದ್ದಂತೆ ಸಾಕ್ಷಿಯಲಿಹನು ಕೇಳೆಂದ ॥ ॥೩೫॥**

**ತಾತ್ಪರ್ಯ:** ಕನಸುಕಾಣುವ ಪ್ರಾತಿಭಾಸಿಕನೆಂಬ ಜೀವನು ಎಚ್ಚರದ ವ್ಯಾವಹಾರಿಕ ಜೀವನಂತೆ ಮಾಯೆಯೆಂಬ ಮುಸುಕಿನೊಳಗೆ ಸೇರಿದವನಾಗಿರುವ ನಷ್ಟ

ಹೇಳುವುದೇನಿದೆ, ಪಾರಮಾರ್ಥಿಕನಿಗೆ ಅವನಲ್ಲಿರುವ ಆವರಣ ಹೋದಮೇಲೆ ಎಂದರೆ ನಿದ್ರೆಯಲ್ಲಿರುವ ಜೀವನಿಗೆ ಅವನಲ್ಲಿರುವ ಅವಿದ್ಯೆಯೆಂಬ ಮುಸುಕು ಹೋಗುತ್ತಲೇ (ಆ ಆವರಣವು ಅಳಿದರೆ ಅವನಲ್ಲಿ ಅತಿಶಯವಾದ ಸಚ್ಚಿದಾನಂದಗಳೇ ವ್ಯವಹಾರದಲ್ಲಿ ತೋರುವುದು)ಜೀವನು ಮೊದಲಿನ ಹಾಗೆ ಸಚ್ಚಿದಾನಂದಗಳು ಸತ್ಯವಾದ ಸಾಕ್ಷಿಸ್ವರೂಪನಾಗಿ ಇರುತ್ತಾನೆ.

**ಶಬ್ದಾರ್ಥ:** ಪ್ರಾತಿಭಾಸಿಕನಾವರಣವಳಿದು=ಕನಸುಕಾಣುವ ಪ್ರಾತಿಭಾಸಿಕನೆಂಬ ಜೀವನು ಎಚ್ಚರದ ವ್ಯಾವಹಾರಿಕಜೀವನಂತೆ ಮಾಯೆಯೆಂಬ ಮುಸುಕಿನೊಳಗೆ ಸೇರಿದವನಾಗಿಯೇ ಇರುವನಷ್ಟೆ ಆ ಮುಸುಕು ಹೋದಮೇಲೆ; ಪಾರಮಾರ್ಥಿಕಗಾತನಲ್ಲಿಪ್ಪಾವರಣ=ನಿದ್ರೆಯಲ್ಲಿರುವ ಜೀವನಿಗೆ ಅವನಲ್ಲಿರುವ ಅವಿದ್ಯೆಯೆಂಬ (ತನ್ನನ್ನು ತಾನು ತಿಳಿಯದಿರುವುದೇ) ಮುಸುಕು; * ಮಾತದೇನ್ನೈ! =ಹೆಚ್ಚಿಗೆ ಹೇಳುವುದೇನಿದೆ !; * ಮುನ್ನಿದ್ದಂತೆ=ಮೊದಲಿನಹಾಗೆ.

**ಪಾಠಾಂತರ:** * ಪಾರಮಾರ್ಥಿಕನಲ್ಲಿ ತೋರುವುದು=ವ್ಯಾವಹಾರಿಕನಲ್ಲಿ ತೋರುವವು (ಕು); * ಪಾರಮಾರ್ಥಿಕಗಾತನಲ್ಲಿಪ್ಪಾವರಣ=ವ್ಯಾವಹಾರಿಕನಾತನಲ್ಲಿಪ್ಪಾವರಣ (ಕು).

---

**ಸ್ವಾನುಭವ ಶ್ರುತಿಗುರುಕರಣದಿಂ**
**ದೇನು ಸಂಶಯವಿಲ್ಲದೆಯೆ ನಿಜ**
**ತಾನೆನುತ ಪರಮಾರ್ಥವನೆ ತಾ ತಿಳಿದು ನಿಶ್ಚಯಿಸಿ, ।**
**ತಾನೆನಿಸುವನು ಪಾರಮಾರ್ಥಿಕ;**
**ಸಾನುರಾಗದಿ ಸಾಕ್ಷಿಯೊಡನೆಯ**
**ನೂನ ಸಾಯುಜ್ಯವನು ಪಡೆವನು ಮಗನೆ ಕೇಳೆಂದ ॥ ॥೩೬॥**

**ತಾತ್ಪರ್ಯ:** ಎಲೈ ಮಗನೆ ಕೇಳು, ತನ್ನ ಅನುಭವದಿಂದಲೂ, ವೇದಪುರಾಣಗಳ ಅಧ್ಯಯನದಿಂದಲೂ ಗುರುವಿನ ಅನುಗ್ರಹದಿಂದಲೂ ಮನಸ್ಸಿನ ಸಂದೇಹಗಳನ್ನೆಲ್ಲ ಪರಿಹರಿಸಿಕೊಂಡು ತಾನು ಆತ್ಮಸ್ವರೂಪನು ಎಂದು ನಿರ್ಧರಿಸಿ ಯಥಾರ್ಥಜ್ಞಾನ ಪಡೆದು ಬ್ರಹ್ಮನೆನಿಸಿಕೊಳ್ಳುತ್ತಾನೆ ಮತ್ತು ಸಾನುರಾಗದಿಂದ ನಿಜಸಾಕ್ಷಿಯೊಂದಿಗೆ ದೋಷರಹಿತ ಸಾಯುಜ್ಯಪದವಿಯನ್ನು ಪಡೆಯುತ್ತಾನೆ.

**ಶಬ್ದಾರ್ಥ:** * ಅನೂನ=ದೋಷರಹಿತ.

**ಟಿಪ್ಪಣಿ:** * ಸಾಯುಜ್ಯ-ಪರಬ್ರಹ್ಮನಲ್ಲಿ ಲೀನವಾಗುವುದು. ಶುದ್ಧ ಅರಿವೊಂದೇ ಉಳಿಯವುದು, ಇಷ್ಟದೇವತೆಯೊಡನೆ ಒಂದಾಗುವುದು ಒಂದು ವಿಧವಾದ ಮುಕ್ತಿ (ಪರಮಾರ್ಥ ಪದಕೋಶ, ಪುಟ-೪೧೨)

---

**ಪಾರಮಾರ್ಥಿಕ ಜೀವ ಗುರುವಿನಪಾರ**
**ಕರುಣವ ಪಡೆದು, ಘನಮಾ**
**ಯಾರಹಿತನೆಂದೆನಿಸಿ, ಸಂಸೃತಿ ಶರಧಿಯನುದಾಟಿ, ।**

**ಸಾರಜೀವೇಶೈಕ್ಯಪರಮೋ**
**ದಾರಸುಖಸಾಮ್ರಾಜ್ಯಸುಖ ಕೈ**
**ಸೇರಿ ಪರಮಾನಂದ ಪದದಲಿ ನಿಂದು ಸುಖಿಯಹನು ॥ ॥೩೭॥**

**ತಾತ್ಪರ್ಯ:** ಸ್ಥೂಲಸೂಕ್ಷ್ಮಶರೀರಗಳ ಸೋಂಕಿಲ್ಲದ ಪಾರಮಾರ್ಥಿಕನೆಂಬ ಜೀವನು ನಿತ್ಯಾನಂದಸುಖವನ್ನು ಪಡೆಯಲು ಸದ್ಗುರುವಿನ ಅಪರಿಮಿತವಾದ ಅನುಗ್ರಹವನ್ನು ಪಡೆಯಬೇಕು. ಆಗ ಅಧಿಕವಾದ ಮಾಯೆಯಿಂದ ಬಿಡಲ್ಪಟ್ಟವನಾಗಿ ಸಂಸಾರ ಸಾಗರವನ್ನು ದಾಟುತ್ತಾನೆ. ಇದರಿಂದ ಸಾರತರವಾದ ಜೀವೇಶ್ವರ ಐಕ್ಯರೂಪವಾಗಿ ಬಹುಶ್ರೇಷ್ಠವಾದ ಸುಖಸಾಮ್ರಾಜ್ಯದ ಸಹಜಾನಂದಪದವಿಯಲ್ಲಿ ಲೀನನಾಗಿ ಆನಂದಮಯವಾಗಿ ಸುಖಿಯಾಗುತ್ತಾನೆ.

**ಶಬ್ದಾರ್ಥ:** * ಅಪಾರ=ಅಪರಿಮಿತ; * ಕರುಣ=ಅನುಗ್ರಹ; * ಘನ=ಅಧಿಕವಾದ; ಸಂಸೃತಿಶರಧಿ =ಸಂಸಾರಸಾಗರ; ಸಾರ=ಘನತರವಾದ; * ಜೀವೇಶೈಕ್ಯ=ಜೀವಾತ್ಮ ಪರಮಾತ್ಮನಾಗುವುದು; * ಪರಮೋದಾರ=ಅತಿಶ್ರೇಷ್ಠವಾದ; * ಪರಮಾನಂದಪದ=ಸಹಜನಂದಪದವಿಯಲ್ಲಿ;

**ಟಿಪ್ಪಣಿ:** ಪಾರಮಾರ್ಥೀಕಜೀವ-ಪ್ರತ್ಯಕ್ಷ ಹಾನಿಯನ್ನು ಮಾಡುವ ಸ್ಥೂಲಸೂಕ್ಷ್ಮಶರೀರಗಳ ಸೋಂಕಿಲ್ಲದ್ದರಿಂದ ಜೀವನು ನಿಜಸ್ವರೂಪನಾದ ಬ್ರಹ್ಮದಲ್ಲಿ ಸೇರಿಕೊಂಡಿರುವನಾಗಿರುವದರಿಂದ ಪಾರಮಾರ್ಥಿಕ ಜೀವನೆನಿಸುವನು. (೯-೨೪ನೇ ಪದ್ಯದಲ್ಲಿ ಈ ವಿವರಣೆಯನ್ನು ಹೊ.ಚಿ. ಅವರು ಕೊಟ್ಟಿದ್ದಾರೆ).

---

## ಸಹಜಾನಂದದ ಉಪಾಯ (೩೮-೪೨)

**ನಿದ್ರೆಯಳಿದರೆ ಕನಸ ಕಾಣುತ**
**ಲಿದ್ದ ಬಗೆ ಪುಸಿಯಾದ ತೆರದಲಿ**
**ಬದ್ಧನಹ ವ್ಯವಹಾರಜೀವನು ಶಮೆದಮೆಗಳಿಂದ ।**
**ಶುದ್ಧವಾಗಿಯೆ ಶ್ರುತಿಗುರುಗಳಿಂ**
**ದದ್ವಯಾನಂದೈಕ್ಯನಾಗಲ**
**ಬದ್ಧವಹುದೈ ಜೀವಭಾವವು ಮಗನೆ ಕೇಳೆಂದ ॥ ॥೩೮॥**

**ತಾತ್ಪರ್ಯ:** ನಿದ್ರೆಯಲ್ಲಿ ಕನಸು ಕಾಣುತ್ತಿರುವನು ತನ್ನ ನಿದ್ರೆಯಿಂದ ಎಚ್ಚರಗೊಂಡ ಕೂಡಲೇ ಅದುವರೆಗೆ ಕಂಡದ್ದೆಲ್ಲ ಸುಳ್ಳೆಂದು ತಿಳಿಯುವಹಾಗೆ ಸಂಸಾರಬದ್ಧನಾದ ವ್ಯಾವಹಾರಿಕ ಜೀವನು ಮನೋನಿಗ್ರಹ, ಇಂದ್ರಿಯನಿಗ್ರಹಗಳಿಂದಲೂ, ವೇದಾಧ್ಯಯನ ಮತ್ತು ಗುರೂಪದೇಶದಿಂದಲೂ ನಿರ್ಮಲನಾಗಿ ಅಖಂಡಾನಂದಸ್ವರೂಪದ ಸಹಜಾನಂದದಲ್ಲಿ, ಬ್ರಹ್ಮನಲ್ಲಿ ಐಕ್ಯನಾದಾಗ ಆತನಿಗೆ ಜೀವಭಾವ ಅರ್ಥಹೀನವಾಗಿ ಕಾಣುತ್ತದೆ.

**ಶಬ್ದಾರ್ಥ:** * ಪುಸಿಯಾದ=ಸುಳ್ಳಾದ; * ತೆರದಲಿ=ರೀತಿಯಲ್ಲಿ; * ಶಮೆ=ಮನೋನಿಗ್ರಹ; * ದಮೆ=ಇಂದ್ರಿಯನಿಗ್ರಹ; * ಶುದ್ಧವಾಗಿಯೆ=ನಿರ್ಮಲನಾಗಿ; * ಶ್ರುತಿಗುರುಗಳಿಂ=ವೇದಾಭ್ಯಾಸ, ಗುರೂಪದೇಶಗಳಿಂದ; * ಅದ್ವಯಾನಂದ=ಅಖಂಡಾನಂದ; * ಅಬದ್ಧ=ಅರ್ಥಹೀನ.

ಟಿಪ್ಪಣಿ: ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಕನಸಿನಂದದಿ ತೋರ್ಪುದೆಲ್ಲವು
ಮನದ ವಿಕೃತಿಯದೈಸೆ; ನೋಡಲು
ಘನಪರಂಜ್ಯೋತಿಪ್ರಕಾಶವು ಸಚ್ಚಿದದ್ವಯವು; ।
ಅನುಭವದಲರಿದೀ ಪ್ರಕಾರದಿ
ನೆನಹಡಗಿ ನಿಶ್ಚಿಂತನಾದೊಡೆ
ನಿನಗೆ ಸಹಜಾನಂದ ತೋರುವದೆಂದನಾ ಮುನಿಪ ॥ ॥೩೯॥

ತಾತ್ಪರ್ಯ: ಕನಸಿನಲ್ಲಿ ತೋರತಕ್ಕ ವಿಷಯಗಳೆಲ್ಲವೂ ಮನೋವಿಕಾರಗಳೇ ಆಗಿವೆಯಲ್ಲವೆ ! ವಿಚಾರಮಾಡಿ ನೋಡಿದರೆ ಶ್ರೇಷ್ಠವಾದ ಪರಂಜ್ಯೋತಿಪ್ರಕಾಶವು (ಪರಬ್ರಹ್ಮವು) ಸದ್ವಸ್ತುವೂ ಚಿತ್‌ಸ್ವರೂಪವೂ, ಅಖಂಡವೂ ಆಗಿದೆ; ಅನುಭವದಿಂದ (ಆತ್ಮಾನುಸಂಧಾನದಿಂದ), ಇದನ್ನು ತಿಳಿದಾಗ ಕನಸಿನ ಅರಿವು ಅಡಗಿಹೋಗಿ ಮನಸ್ಸಿನ ಚಿಂತೆ ಅಳಿದು, ಸ್ಥಿರಚಿತ್ತನಾದರೆ ನಿನಗೆ ಸಹಜಾನಂದವು ತೋರುತ್ತದೆ ಎಂದು ವೇದವ್ಯಾಸರು ಶುಕನಿಗೆ ಹೇಳಿದರು.

ಶಬ್ದಾರ್ಥ: * ಮನದ ವಿಕೃತಿ=ಮನೋವಿಕಾರ; * ಐಸೆ=ಅಲ್ಲವೇ !; ಸಚ್ಚಿದದ್ವಯವು (ಸತ್+ ಚಿತ್+ಅದ್ವಯವು)=ಸದ್ವಸ್ತುವೂ ಚಿತ್ಸ್ವರೂಪವೂ, ಅಖಂಡವೂ ಆದ ಪರಬ್ರಹ್ಮ; * ನೆನಹು ಅಡಗಿ=ಕನಸಿನ ಅರಿವು ಅಡಗಿಹೋಗಿ; * ನಿಶ್ಚಿಂತನಾದೊಡೆ=ಸ್ಥಿರಚಿತ್ತನಾದರೆ.

ಟಿಪ್ಪಣಿ: ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಮೂರವಸ್ಥೆಗಳಲ್ಲಿ ಬಹುಸಂ
ಚಾರದಿಂ ವಿಕರಿಪುದಹಂಕೃತಿ;
ನೀರ, ನಿಜವಾದರಿವದಕೆ ತಾ ಸಾಕ್ಷಿಯಾಗಿಹುದು; ।
ಸಾರತರಚಿದ್ಗಗನ ಹಮ್ಮಿನ
ತಾರತಮ್ಯದಿ ಹೊಳೆಯುತಿರಲದು
ಧೀರರಿಗೆ ಕುರುಹಿಟ್ಟು ನೋಡಲು ಸಹಜವಾಗಿಹುದು ॥ ॥೪೦॥

ತಾತ್ಪರ್ಯ: ಸುಂದರ ಶುಕನೇ ಕೇಳು (ನೀರ), ಅಹಂಕಾರವು ಜಾಗ್ರತೆ, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿ ವಿವಿಧ ನಡೆವಳಿಕೆಗಳಿಂದ ಸಂಚರಿಸುತ್ತಿವುದು; ಇದಕ್ಕೆ ನಿಜವಾದ ತಿಳಿವಳಿಕೆ ಸಾಕ್ಷಿಯಾಗಿದೆ. ಸಾರಭೂತವಾದ ಚಿದಾಕಾಶವು ಅಹಂಕಾರದ ತಾರತಮ್ಯದಿಂದ ಹೊಳೆಯುತ್ತಿದೆ. ಅದನ್ನು ಧೀರರಾದವರು ಅವಸ್ಥಾತ್ರಯಕ್ಕೆ ಸಾಕ್ಷಿಯಾಗಿರುವ ಸ್ವರೂಪವನ್ನೇ ಲಕ್ಷ್ಯವಾಗಿಟ್ಟುಕೊಂಡು ನೋಡಿದರೆ ಆ ಆಧಾರಸ್ವರೂಪವಾದ ಸಹಜಾನಂದವು ವ್ಯಕ್ತವಾಗುವುದು.

**ಶಬ್ದಾರ್ಥ:** ಕುರುಹಿಟ್ಟು ನೋಡಲು ಸಹಜವಾಗಿಹುದು=ಅವಸ್ಥಾತ್ರಯಕ್ಕೆ ಸಾಕ್ಷಿಯಾಗಿರುವ ಸ್ವರೂಪವನ್ನೇ ಲಕ್ಷ್ಯವಾಗಿಟ್ಟುಕೊಂಡು ನೋಡಿದರೆ ಆ ಆಧಾರಸ್ವರೂಪವಾದ ಸಹಜಾನಂದವು ವ್ಯಕ್ತವಾಗುವುದು.

---

**ತೆರೆಹೊಡೆಯ ಹುಯಿಲಿಂದ ಹುಟ್ಟಿದ**
**ನೊರೆ ಮರಳಿ ತಾ ತೆರೆಯೊಳಡಗಲು,**
**ತೆರೆ ಜಲದಿ ಮಿಗೆ ಲೀನವಾಗಲು ನಿಸ್ತರಂಗಾಬ್ಧಿ; ।**
**ಕರಣಗೋಚರವಿಷಯತತಿಯದು**
**ಕರಣದೊಳಗಿರ್ದಂತಡಗಲಾ**
**ಕರಣವರಿವಿನೊಳಡಗೆ ಸಹಜಾನಂದವಾಗಿಹುದು ॥ ॥೪೧॥**

**ತಾತ್ಪರ್ಯ:** ಸಮುದ್ರದಲ್ಲಿ ಹುಟ್ಟಿದ ಅಲೆಗಳ ಹೊಡೆತದಿಂದ ವಿಷಯಗಳೆಂಬ ನೊರೆ ಹುಟ್ಟುತ್ತದೆ. ಆ ವಿಷಯಗಳೆಂಬ ನೊರೆ ಕರ್ಮಗಳೆಂಬ ಅಲೆಗಳಲ್ಲಿಯೇ ಅಡಗಿಹೋದಾಗ ಆ ಅಲೆಗಳು ಸಮುದ್ರದಲ್ಲಿಯೇ ಲೀನವಾಗುತ್ತವೆ. ಹಾಗೆ ಲೀನವಾದ ಅಲೆಗಳಿಲ್ಲದ ಪ್ರಶಾಂತಸಮುದ್ರವೇ ಆತ್ಮಸ್ವರೂಪ. ಅದರಂತೆಯೇ ಇಂದ್ರಿಯ ಗೋಚರ ಗಳಾದ ವಿಷಯಸಮೂಹವು ಕರಣಗಳಲ್ಲಿ ಇದ್ದಂತೆಯೇ ಇದ್ದು ಆ ಕರಣಗಳ ಅರಿವಿನಿಂದ ಅಡಗಿಹೋದರೆ ಪ್ರಶಾಂತಸಮುದ್ರದಂಥ ಸಹಜವಾದ ಆನಂದವುಂಟಾಗುತ್ತದೆ

**ಶಬ್ದಾರ್ಥ:** * ಹುಯಿಲು=ಹೊಡೆತದ ದನಿ; * ನಿಸ್ತರಂಗಾಬ್ಧಿ=ತೆರೆಗಳಿಲ್ಲದ ಸಮುದ್ರ; ಕರಣ=ಇಂದ್ರಿಯಗಳು; ವಿಷಯ ತತಿ=ವಿಷಯಗಳ ಸಮೂಹ; ಲೀನ=ಲಯ, ಅಡಗು.

**ಟಿಪ್ಪಣಿ:** ಈ ಪದ್ಯದಲ್ಲಿ ಕವಿಯು ಆತ್ಮನಿಗೆ ನಿಸ್ತರಂಗಾಬ್ಧಿಯನ್ನು ಕರಣಗಳಿಗೆ ತೆರೆಗಳನ್ನು ವಿಷಯಗಳಿಗೆ ನೊರೆಯನ್ನು ಹೋಲಿಸಿದ್ದಾನೆ.

**ಪಾಠಾಂತರ:** * ತೆರೆಹೊಡೆಯ=ತೆರೆಹೊಡೆಯೆ (ಅರಾಸೆ) (ಕು)

---

**ಮಿಥ್ಯವಹ ಕರಣದಲಿ ತೋರ್ಪ ಸ**
**ಮಸ್ತಸಚರಾಚರವು ಕರಣದ**
**ವೃತ್ತಿಯಳಿಯಲು ಸ್ವಪ್ನವಳಿದಂತಳಿಯುತಿರಲಾಗ ।**
**ನಿತ್ಯ ನಿರುಪಾಧಿಕವೆನಿಸುವೇ**
**ಕತ್ವವಾಗಿಯೆ ತೋರ್ಪುದೈ; ತಿಳಿ**
**ಮುಕ್ತಿಪದ, ಕೈವಲ್ಯ, ಸಹಜಾನಂದವೆಂದದನು ॥ ॥೪೨॥**

**ತಾತ್ಪರ್ಯ:** ಅಸತ್ಯವೆನಿಸಿರುವ ಇಂದ್ರಿಯಗಳಲ್ಲಿ ಕಂಡುಬರುವ ಎಲ್ಲಾ ಜಡಚೇತನ ವಸ್ತುಗಳೂ ಆಯಾ ಇಂದ್ರಿಯಗಳ ವ್ಯಾಪಾರನಶಿಸಿದಾಗ ಅವು ಸ್ವಪ್ನದಲ್ಲಿ ಕಂಡದ್ದು

ಮಾಯವಾದಂತೆ ಅಳಿದುಹೋಗುವುವು. ಆಗ ನಿತ್ಯವೂ ನಿರುಪಾಧಿಕವೂ ಎನಿಸಿದ ಸರ್ವವ್ಯಾಪಿಯಾಗಿ ಏಕರೂಪಿಯಾದ ಬ್ರಹ್ಮವೇ ಕಾಣಿಸಿಕೊಳ್ಳುವುದು. ಅದೇ ಮುಕ್ತಿಪದ, ಕೈವಲ್ಯ, ಸಹಜಾನಂದ (ಮೋಕ್ಷ, ಸಾಯುಜ್ಯ, ಬ್ರಹ್ಮಾನಂದ)ವೆಂದು ತಿಳಿ.

**ಶಬ್ದಾರ್ಥ:** * ಮಿಥ್ಯವಹ=ಅಸತ್ಯವಾಗಿರುವ; * ಕರಣದಲಿ=ಇಂದ್ರಿಯಗಳಲ್ಲಿ; * ತೋರ್ಪ =ಕಾಣಿಸಿಕೊಳ್ಳುವ; * ಸಮಸ್ತ ಚರ+ಅಚರವು=ಎಲ್ಲಾ ಜಡಚೇತನವಸ್ತುಗಳೂ; * ಕರಣದ ವೃತ್ತಿ=ಇಂದ್ರಿಯ ವ್ಯಾಪಾರ; * ನಿರುಪಾಧಿಕ=ಒಂದು ವಸ್ತುವನ್ನು ತಿಳಿಯಲು ಅಡ್ಡಿಯಾಗಿರುವದೇ ಉಪಾಧಿ, ಪರಬ್ರಹ್ಮನನ್ನು ತಿಳಿಯಲು ಮಾಯೆ ಉಪಾಧಿ; * ಮುಕ್ತಿಪದ=ಮೋಕ್ಷ; * ಕೈವಲ್ಯ=ಸಾಯುಜ್ಯ; * ಸಹಜವಾದ=ಬ್ರಹ್ಮಾನಂದ.

---

**ಒಂದು ದೀವಿಗೆ ವರ್ತಿಭೇದಗ**
**ಳಿಂದ ಹಲವಾದಂತೆ, ನೋಡಲ**
**ದೊಂದು ಬೀಜವ ಬಿತ್ತೆ ಬಹುತರ ಬೀಜವಾದಂತೆ**
**ಒಂದು ವಸ್ತುವುಪಾಧಿಭೇದಗ**
**ಳಿಂದ ನಾನಾ ಭೇದವಾದುದು;**
**ಕಂದ, ಕೇಳ್ವುದುಪಾಧಿಯಳಿಯಲದೇಕವಾಗಿಹುದು ॥ ॥೪೩॥**

**ತಾತ್ಪರ್ಯ:** ಒಂದು ದೀಪವು ಹಲವು ಬತ್ತಿಗಳ ಭೇದದಿಂದ ಹಲವು ದೀಪಗಳಾಗಿ ತೋರಿಬರುವಹಾಗೆ, ಒಂದು ಬೀಜನನ್ನು ಬಿತ್ತಿದರೆ ಅದು ಗಿಡವಾಗಿ, ಮರವಾಗಿ ಹಲವು ಬೀಜಗಳಾಗುವಂತೆ ಒಂದು ವಸ್ತು ಉಪಾಧಿಗಳ ಕಾರಣದಿಂದ ನಾನಾ ಭೇದಗಳಾಗುವುವು. ಆ ನಾನಾ ಭೇದಗಳು ಅಳಿದಾಗ ಆ ವಸ್ತು ಮೂಲಸ್ವರೂಪದಲ್ಲಿ ಒಂದೇ ಆಗಿರುತ್ತದೆ.

**ಶಬ್ದಾರ್ಥ:** * ದೀವಿಗೆ=ದೀಪ (ದೀವಟಿಗೆ), ದೀಪಿಕಾ ಪದದ ತದ್ಭವ; ವರ್ತಿಭೇದಗಳಿಂದ=ಬೇರೆಬೇರೆ ಬತ್ತಿಗಳಿಂದ; * ಬಹುತರ ಬೀಜವಾದಂತೆ=ಅನೇಕ ಬೀಜಗಳಾದಂತೆ.

**ಟಿಪ್ಪಣಿ:** ಉಪಾಧಿ–ಅವಿದ್ಯೆಯಿಂದಾದ ನಾಮರೂಪಗಳು ಸ್ವಸ್ವರೂಪವನ್ನು ತಿಳಿಯಲು ಅಡ್ಡಿಯಾದವು. ಒಂದು ವಸ್ತುವನ್ನು ತಿಳಿಯಲು ಅಡ್ಡಿಯಾಗಿ ಅದರ ಸುತ್ತ ಆವರಿಸಿರುವುದು, ಬೇರೆ ರೂಪಗಳಿಗೆ ತಾಳಿರುವುದು ಉಪಾಧಿ.

---

**ತನ್ನ ಸಂಸೃತಿಯಾದವಸ್ಥೆಯೊ**
**ಳನ್ಯರೆನಿಪಾಭಾಸಜೀವರಿ**
**ಗುನ್ನಯಿಸಿ ಸಂಸಾರ ತನ್ನೀ ಭ್ರಾಂತಿಯಿಂದಹುದು; ।**
**ತನ್ನವಿದ್ಯಾನಾಶವಾಗಲು**
**ತನ್ನ ಮುಕ್ತಿಯದೆಂತು ತನಗಹು**
**ದನ್ಯರಿಗೆ ತನ್ನಂತೆ ಮುಕ್ತಿ ಯಥಾರ್ಥವಹುದೆಂದ ॥ ॥೪೪॥**

**ತಾತ್ಪರ್ಯ:** ತನ್ನ ಸಂಸಾರಕ್ಕೆ ಅನುಗುಣವಾಗಿ ಆಗುವ ಎಚ್ಚರ ಅಥವಾ ಕನಸಿನ ಅವಸ್ಥೆಯೊಳು ತನ್ನಿಂದ ಬೇರಾಗಿ ತೋರುತ್ತಿರುವ ಆಭಾಸ ಜೀವರಿಗೆ ಸಂಸಾರವಿದೆ ಎಂದು ಭಾವಿಸಿದಾಗ ಅದು ಭ್ರಾಂತಿಯಿಂದ ನಿಜವೆನ್ನಿಸುತ್ತದೆ. ಆದರೆ ತನ್ನ ಅಜ್ಞಾನ ನಾಶವಾದಾಗ ತನಗೆ ಹೇಗೆ ಮುಕ್ತಿ ಉಂಟಾಗುತ್ತದೋ ಹಾಗೆಯೇ ಅನ್ಯಜೀವರಿಗೂ ಅವಿದ್ಯಾನಾಶದಿಂದ ಮುಕ್ತಿಯಾಗುವುದು ಸಹಜವೆಂದು ತಿಳಿ.

**ಶಬ್ದಾರ್ಥ: ಆಭಾಸಜೀವರಿಗೆ**=ಜೀವರಂತೆ ತೋರುತ್ತಿರು ವವರಿಗೆ (ಕನಸಿನಲ್ಲಿ ಎಷ್ಟೋ ಜೀವರು ಸಂಸಾರಿಗಳಾಗಿ ಹುಟ್ಟಿ ಸಾಯುವವರಾಗಿ ತೋರುವರಷ್ಟೆ, ಅವರಿಗೆ ಈ ಸಂಸಾರಬಂಧವು ನಮ್ಮ ಕನಸೆಂಬ ಭ್ರಾಂತಿಯಿಂದಲೇ ಉಂಟಾಗುತ್ತದೆ) * **ಉನ್ನಯಿಸಿ**=ಭಾವಿಸಿದಾಗ; * **ಭ್ರಾಂತಿಯಿಂದ**=ಮಿಥ್ಯಾರೋಪಣದಿಂದ.

**ಟಿಪ್ಪಣಿ: ಅವಿದ್ಯಾನಾಶ**–ಆತ್ಮ ಅನಾತ್ಮಗಳನ್ನು ತಿಳಿಯುವುದು ಅವಿದ್ಯೆ. ಉದಾ: ದೇಹವನ್ನು ಆತ್ಮವೆಂದು ತಿಳಿಯುವುದು ಸ್ವರೂಪಜ್ಞಾನವಿಲ್ಲದಿರುವುದೇ ಅವಿದ್ಯೆ (ಪರಮಾರ್ಥ ಪದಕೋಶ, ಪುಟ–೫೨) ಇವುಗಳ ನಿವಾರಣೆಯೇ ಅವಿದ್ಯಾನಾಶ.

---

**ಜೀವನೊಬ್ಬನವಿದ್ಯೆಯಿಂದಲಿ**
**ಭಾವಿಸಲು ಬಹುಜೀವರಾಗಿಯೆ**
**ತೀವಿ ತೋರುತ್ತಿಹರು ಸ್ವಪ್ನಪದಾರ್ಥದಂದದಲಿ; ।**
**ಈ ವಿಧದವಿದ್ಯೆಯನು ಗುರುವಿನ**
**ಪಾವನಾಂಘ್ರಿಯ ಪಿಡಿದು ಕೆಡಿಸಲು**
**ಜೀವತನವಳಿದಾಗ ಜಗವೇಕತ್ವವಾಗಿಹುದು ॥ ॥೪೫॥**

**ತಾತ್ಪರ್ಯ:** ವಿಚಾರಮಾಡಲಾಗಿ ಜೀವನು ಒಬ್ಬನೇ ಸ್ವಪ್ನದಲ್ಲಿ ಕಂಡ ಪದಾರ್ಥಗಳ ಹಾಗೆ ಬಹುಜೀವಿಯಾಗಿ ತೋರುತ್ತಾನೆ. ಇದು ಅವಿದ್ಯೆಯಸ್ವರೂಪ, ಗುರುವಿನ ಪವಿತ್ರಚರಣಗಳನ್ನು ಆಶ್ರಯಿಸಿ ಈ ಅವಿದ್ಯೆಯನ್ನು ಹೋಗಲಾಡಿಸಿಕೊಂಡು ಸತ್ಯವನ್ನು ತಿಳಿದಾಗ ಜೀವತ್ವವೂ ಹಲವು ಭೇದಗಳಿಂದ ಉಂಟಾಗುವ ಜಗತ್ತೂ ಇಲ್ಲದಂತಾಗಿ ಒಂದೇ ಜಗತ್ತಿನ ಎಂದರೆ ಅದ್ವೈತ ಭಾವವುಂಟಾಗುತ್ತದೆ.

**ಶಬ್ದಾರ್ಥ:** * **ಜೀವನೊಬ್ಬನು**=ಜೀವತ್ವ; * **ಅವಿದ್ಯೆ**=ಅಸತ್ಯಜ್ಞಾನ; * **ತೀವಿ**=ಆವರಿಸಿ, ಎಲ್ಲೆಡೆ; * **ಪಾವನಾಂಘ್ರಿ**=ಪವಿತ್ರಚರಣ; **ಕೆಡಿಸಲು**=ಅವಿದ್ಯೆಯನ್ನು ಹೋಗಲಾಡಿಸಲು; * **ಜಗವೇಕತ್ವ**=ಅದ್ವೈತಭಾವ

---

**ಸಕಲಜೀವರ ಕರಣಸಾಕ್ಷಿಯ**
**ಯುಕುತಿಯಿಂದರಿವಂದವೆಂತೆನೆ**
**ವಿಕರಿಸುವ ಬುದ್ಧಿಯನು ತನ್ನೊಳು ಕಂಡ ಸಾಕ್ಷಿಯನೆ ।**

ನಿಖಿಲದೊಳಗೊಂದೇ ಪರಿಯೊಳೇ
ಪ್ರಕಟವಾಗಿಪ್ಪರಿವೆನುತ್ತದ
ನಕಟ ! ತಿಳಿವುದು ಚೋದ್ಯವೇ ? ತನ್ನಂತೆ ಸರ್ವದಲಿ ॥ ॥೪೬॥

**ತಾತ್ಪರ್ಯ:** ವ್ಯಾವಹಾರಿಕ, ಪ್ರಾತಿಭಾಸಿಕ, ಪಾರಮಾರ್ಥಿಕರೆಂಬ ಜೀವರನ್ನು ಅಂತಃಕರಣಸಾಕ್ಷಿಯಿಂದ ಉಪಾಯವಾಗಿ ತಿಳಿಯುವ ಬಗೆ ಹೇಗೆಂದರೆ: ತನ್ನಲ್ಲಿರುವ ಅಂತಃಸಾಕ್ಷಿಯಿಂದ ವಿಕಾರಹೊಂದುವ ಬುದ್ಧಿಯನ್ನು ಅರ್ಥಮಾಡಿಕೊಳ್ಳುವಂತೆ ಸಮಸ್ತ ವಸ್ತುಗಳಲ್ಲೂ ಏಕರೀತಿಯಾಗಿ ಪ್ರಕಟಗೊಂಡ ಜ್ಞಾನವೊಂದೇ ಎಂದರೆ ಆತ್ಮಸ್ವರೂಪ ಒಂದೇ ಎಂದು ತಿಳಿಯುತ್ತಾ ಅದನ್ನೇ ಎಲ್ಲದರಲ್ಲೂ ಕಾಣುವುದು ಅಚ್ಚರಿಯ ಸಂಗತಿ ಏನೂ ಅಲ್ಲ.

**ಶಬ್ದಾರ್ಥ:** * ಕರಣಸಾಕ್ಷಿ=ಅಂತಃಕರಣಸಾಕ್ಷಿ; * ಅರಿವು=ಆತ್ಮಸ್ವರೂಪ; * **ಚೋದ್ಯವೇ?**= ಅಚ್ಚರಿಯೆನಿಸುತ್ತದೆಯೇ? ಇಲ್ಲ; * **ತನ್ನಂತೆ ಸರ್ವದಲಿ ತಿಳಿವುದು**=ತನ್ನಲ್ಲಿರುವ ಆತ್ಮವೇ ಎಲ್ಲರಲ್ಲೂ ಇದೆ ಎಂದು ಅರಿಯುವುದು ಎಂದರೆ ಜ್ಞಾನಸ್ವರೂಪ ಆತ್ಮ ಎಲ್ಲರಲ್ಲೂ ಒಂದೇ.

**ಟಿಪ್ಪಣಿ:** ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಒಂದು ಹಳ್ಳಿಯ ಮೇಲೆ ತೋರಿದ
ಚಂದವಾದಾಕಾಶ ಗಿರಿ, ಪುರ,
ಸಿಂಧು ಮೊದಲಾದಖಿಲದೇಶಂಗಳಲಿ ಕಂಡಂತೆ ।
ಕುಂದು ಹೆಚ್ಚುಗಳಿಲ್ಲದಮಲಾ
ನಂದಸಂವಿದ್ಗಗನವೇ ತಾ
ನೊಂದೆಪರಿಯಲಿ ಸಕಲಬುದ್ಧಿಗೆ ಸಾಕ್ಷಿಯಾಗಿಹುದು ॥ ॥೪೭॥

**ತಾತ್ಪರ್ಯ:** ಆಕಾಶವು ಒಂದು ಹಳ್ಳಿಯ ಮೇಲೆ ಕಾಣುವಂತೆಯೇ ಬೆಟ್ಟ, ನಗರ, ಸಾಗರ ಇತ್ಯಾದಿ ಎಲ್ಲ ಕಡೆಗಳಲ್ಲಿಯೂ ಹೇಗೆ ಒಂದೇ ಆಕಾಶ ಇರುತ್ತದೋ ಹಾಗೆಯೇ ಬೇರೆ ಬೇರೆ ಪ್ರಾಣಿಗಳ ಬುದ್ಧಿಗಳಲ್ಲಿ ಬೇರೆಬೇರೆ ಸಾಕ್ಷಿ ಇರುವಂತೆ ಕಂಡರೂ ಸರ್ವರಲ್ಲೂ ಹೆಚ್ಚು ಕಡಿಮೆಗಳಿಲ್ಲದೆ ಇರುವ ನಿರ್ಮಲವಾದ ಆನಂದಮಯವಾದ ಚಿದಾಕಾಶವೇ ಒಂದೇ ಪರಿಯಲ್ಲಿ ಸಕಲರ ಬುದ್ಧಿಗೆ ಸಾಕ್ಷಿಯಾಗಿರುತ್ತದೆ.

**ಶಬ್ದಾರ್ಥ:** * ಕುಂದು ಹೆಚ್ಚುಗಳಿಲ್ಲದ =ಹೆಚ್ಚುಕಡಿಮೆಗಳಿಲ್ಲದ; * ಅಮಲ ಆನಂದ=ನಿರ್ಮಲವಾದ ಆನಂದಸ್ವರೂಪವು; * ಸಂವಿತ್ ಗಗನ=ಚಿದಾಕಾಶ;

---

## ಉಪಸಂಹಾರ (೪೮)

**ಈ ಪರಿಯ ಜೀವತ್ರಯಂಗಳ**
**ರೂಪಭೇದವನೊಲಿದು ಶುಕಗೆ ನಿ**
**ರೂಪಿಸಿದ ಕರುಣದಲಿ ದ್ವೈಪಾಯನಮುನೀಶ್ವರನು; ।**
**ಚಾಪಲತೆಯಳಿದಂತರಂಗದ**
**ತಾಪವಡಗಲು ಶುಕನು ಪ್ರೇಮದಿ**
**ದೀಪವನು ಬೆಳಗಿದನು ಸಹಜಾನಂದಗುರುಪದಕೆ ॥ ॥೪೮॥**

**ತಾತ್ಪರ್ಯ:** ಈ ರೀತಿಯಾಗಿ ಶುಕನಿಗೆ ವೇದವ್ಯಾಸಮುನಿಯು ಪ್ರೀತಿಯಿಂದಲೂ, ಕರುಣೆಯಿಂದಲೂ, ವ್ಯಾವಹಾರಿಕ, ಪ್ರಾತಿಭಾಷಿಕ, ಪಾರಮಾರ್ಥಿಕರೆಂಬ ಮೂರು ಬಗೆಯ ಜೀವರಸ್ವರೂಪಭೇದವನ್ನು ವಿವರಿಸಿ ಹೇಳಿದನು. ಆಗ ಅದನ್ನು ಕೇಳಿದ ಶುಕನಿಗೆ ಮನಸ್ಸಿನಲ್ಲಿದ್ದ ಸಂದೇಹದ ಪ್ರಶ್ನೆಗಳಿಗೆಲ್ಲಾ ಉತ್ತರ ದೊರಕಿ, ಅಂತರಂಗದ ಕ್ಷೋಭೆ ಕೊನೆಗಂಡು ನಿವಾರಣೆಯಾಗಲು ಅನುರಾಗಪೂರ್ವಕವಾಗಿ ಶುಕನು ಗುರುಸಹಜಾನಂದರ ಪಾದಪದ್ಮಗಳಿಗೆ ಆರತಿಯನ್ನು ಬೆಳಗಿದನು.

**ಶಬ್ದಾರ್ಥ:** **ದ್ವೈಪಾಯನಮುನೀಶ್ವರನು**=ವ್ಯಾಸರು (ಯಮುನಾ ನದಿಯಲ್ಲಿದ್ದ ಒಂದು ದ್ವೀಪದಲ್ಲಿ ಹುಟ್ಟಿದವರು); * **ಚಾಪಲತೆಯಳಿದು**=ಮನಸ್ಸಿನಲ್ಲಿದ್ದ ಪ್ರಶ್ನೆಗಳಿಗೆಲ್ಲಾ ಉತ್ತರ ದೊರಕಿ; **ಅಂತರಂಗದ ತಾಪ** =ಅಂತರಂಗದ ಕ್ಷೋಭೆ; * **ಅಡಗಲು**=ನಿವಾರಣೆಯಾಗಲು; * **ದೀಪವನು ಬೆಳಗಿದನು**=ಆರತಿ ಮಾಡಿದನು

---

## ಮಂಗಲ (೪೯)

**ಭೂತಪತಿ, ಭುವನೇಶ, ಭೈರವ,**
**ಮಾತರಿಶ್ವಾಶನವಿಭೂಷಣ,**
**ವೀತಿಹೋತ್ರವಿವಸ್ವದಮೃತಮರೀಚಿಲೋಚನನೆ, ।**
**ಪ್ರೇತನಿಲಯನಿವಾಸ, ನಿಗಮಾ**
**ತೀತ, ನಿತ್ಯಾನಂದ, ಗಿರಿಜಾ**
**ಪ್ರೀತ, ಶ್ರೀಗಿರಿನಾಥ ರಕ್ಷಿಸು ಜಗವನಗಚಾಪ ॥ ॥೪೯॥**

**ತಾತ್ಪರ್ಯ:** ಭೂತಗಳಿಗೆ ಒಡೆಯನೆ, ಹದಿನಾಲ್ಕುಲೋಕಗಳಿಗೆ ಒಡೆಯನೆ, ಉಗ್ರನೆ, ಸೂರ್ಯಚಂದ್ರ ಅಗ್ನಿವರ್ಯನೆ, ಶ್ಮಶಾನವಾಸಿಯೆ, ವೇದಾತೀತನೇ, ನಿತ್ಯಾನಂದ ಸ್ವರೂಪನೇ, ಪಾರ್ವತೀಪ್ರಿಯನೇ, ಮೇರುಪರ್ವತವನ್ನೇ ಧನುಸ್ಸಾಗಿ ಉಳ್ಳವನೇ, ಶ್ರೀಶೈಲ ಮಲ್ಲಿಕಾರ್ಜುನನೆ ಮೂರುಲೋಕಗಳನ್ನು ಕಾಪಾಡು.

**ಶಬ್ದಾರ್ಥ:** * **ಭೂತಪತಿ**=ಭೂತಗಳಿಗೆ ಒಡೆಯ, * **ಭುವನೇಶ**=೧೪ ಲೋಕಗಳಿಗೆ ಒಡೆಯ; **ಮಾತರಿಶ್ವಾಶನವಿಭೂಷಣ**=ಹಾವುಗಳನ್ನು ಆಭರಣವಾಗಿ ಉಳ್ಳವನು; **ವೀತಿಹೋತ್ರ ವಿವಸ್ವತ್**

ಅಮೃತಮದೀಚಿಲೋಚನ=ಅಗ್ನಿ, ಸೂರ್ಯ, ಚಂದ್ರ ಇವರನ್ನು ಕಣ್ಣಾಗಿ ಉಳ್ಳವನು; ಪ್ರೇತನಿಲಯ ನಿವಾಸ=ಸ್ಮಶಾನದಲ್ಲಿ ವಾಸಮಾಡುವವನು; ಗಿರಿಜಾಪ್ರೀತ=ಪಾರ್ವತಿಪ್ರಿಯ; * ವೀತಹೋತ್ರಿ=ಅಗ್ನಿ; * ವಿವಸ್ವತ್=ಸೂರ್ಯ; ಅಮೃತಮರೀಚಿ=ಚಂದ್ರ

ಪದವಿಭಾಗ: ಜಗವನಗಚಾಪ=(ಜಗವ+ನಗಚಾಪ ಅಥವಾ ಜಗವನು+ಅಗಚಾಪ=ಮೇರು ಪರ್ವತವನ್ನು ಧನುಸ್ಸಾಗಿ ಉಳ್ಳವನು.

## ಮುಕ್ತಾಯ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಜೀವತ್ರಯ ವಿಚಾರವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು.

## ಸಾರಸಂಗ್ರಹ

### ಒಂಬತ್ತನೆಯ ಅಧ್ಯಾಯ – ಜೀವತ್ರಯ ವಿಚಾರ

ಆ ಮಾಯೆಯ ಸಂಬಂಧವಿಲ್ಲದ ಶುದ್ಧಬ್ರಹ್ಮವೇ ತಾನೆಂದರಿಯದಿರುವದರಿಂದಲೇ ಆ ಮಾಯೆಯಿಂದ ಎದ್ದುಕೊಂಡಿರುವ ನಾನುನಾನೆಂಬ ಅಹಂಕಾರವು ನಮ್ಮಲ್ಲಿ ತಾಂಡವ ವಾಡುತ್ತಿರುವದು. ಈ ಅಹಂಕಾರವೇ ಜೀವವು. ಈ ಜೀವವು ಸ್ಥೂಲದೇಹದಲ್ಲೆಲ್ಲ ವ್ಯಾಪಿಸಿಕೊಂಡು ಸತ್ತ್ವಗುಣವನ್ನು ಧರಿಸಿದಾಗ ಎಚ್ಚರವೆಂದೂ, ಸ್ಥೂಲಶರೀರದೊಳಗಣ ನಾಡಿಗಳಲ್ಲಿ ಮಾತ್ರ ಹರಡಿಕೊಂಡು ರಜೋಗುಣವನ್ನು ಧರಿಸಿದಾಗ ಕನಸೆಂದೂ ತಮೋಗುಣದಿಂದ ಅದಿಲ್ಲವೆಂಬಷ್ಟು ಸಂಕುಚಿತವಾದಾಗ ನಿದ್ರೆಯೆಂದೂ ಮೂರವಸ್ಥೆಗಳು ಪ್ರಾಣಿಗಳಿಗೆಲ್ಲ ಇರುವವು. ಈ ಮೂರವಸ್ಥೆಗಳ ಅಭಿಮಾನ ದೃಷ್ಟಿಯಿಂದ ಜೀವನಿಗೆ ಕ್ರಮವಾಗಿ ವ್ಯಾವಹಾರಿಕ, ಪ್ರಾತಿಭಾಸಿಕ, ಪಾರಮಾರ್ಥಿಕ ಎಂದು ಹೆಸರುಗಳಾಗಿರುವವು. ಇದೇ ಜೀವತ್ರಯ. ಅಭಿಮಾನವನ್ನು ತಳೆದ ಜೀವವು ಚೈತನ್ಯಕ್ಕೆ ಹತ್ತಿರದಲ್ಲಿರುವದರಿಂದ ಸ್ವಭಾವವಾಗಿ ನಮಗೆ ಜೀವವೇ ಆತ್ಮವೆನಿಸುವದು. ಜೀವವು ಮಾಯೆಯಿಂದ ಎದ್ದುಕಾಣುವಂಥದ್ದೆಂದು ತಿಳಿಯುತ್ತಲೇ ಆ ಜೀವಭಾವವು ಹಾರಿಹೋಗುವದು. ಜೀವನು ಮಾಯೆಯ ಆವರಣವೆಂಬ ನಿದ್ರೆಯಿಂದ ಜಗತ್ತೆಂಬ ಕನಸನ್ನು ಕಾಣುತ್ತ ಅವುಗಳನ್ನು ನಿಜವೆಂದು ತಿಳಿಯುತ್ತ ಅವಸ್ಥೆಗಳಲ್ಲಿ ಅಭಿಮಾನವನ್ನು ತಳೆಯುತ್ತ ಕಷ್ಟಪಡುತ್ತಿರುವನು. ಆವರಣವಳಿದು ಅವಸ್ಥಾತ್ರಯದ ಅಭಿಮಾನವು ತೊಲಗಿದ ಹೊರತು ಈ ಕಷ್ಟಕ್ಕೆ ಬಿಡುಗಡೆ ಇಲ್ಲ. ಒಂದರ ಹಿಂದೊಂದು ಆಳುತ್ತ ಹೋಗುತ್ತಿರುವ ಆ ಅವಸ್ಥೆಗಳು ಒಂದಿರುವಾಗ ಒಂದಿಲ್ಲದ ಕಾರಣ ಯಾವ ಅವಸ್ಥೆಯ ಜೀವನೂ ನಮ್ಮ ಆತ್ಮನಲ್ಲ. ಮೂರವಸ್ಥೆಗಳನುಭವಕ್ಕೂ ಸಾಕ್ಷಿಯಾಗಿರುವ ಚೈತನ್ಯವೇ ನಮ್ಮ ಆತ್ಮವು.

*****

# ಹತ್ತನೆಯ ಅಧ್ಯಾಯ

## ಜೀವನ್ಮುಕ್ತಿ ನಿರೂಪಣ

## (ಯೋಗೀಶ್ವರ ಚರಿತ್ರೆ)

**ಸೂಚನೆ॥**

**ಸತ್ಯಸಹಜಾನಂದವಹ ನಿಜ**
**ಮುಕ್ತಿಯನುಭವಗೊಳ್ವ ಯೋಗಿ ಚ**
**ರಿತ್ರವನು ಶುಕಮುನಿಗೆ ಸಾತ್ಯವತೇಯ ಬೋಧಿಸಿದ ॥**

**ತಾತ್ಪರ್ಯ:** ಸಹಜಾನಂದವಾಗಿಯೂ ನಿಜವಾದ ಮುಕ್ತಿಯ ಅನುಭವವನ್ನು ಹೊಂದುವ ಯೋಗೀಶ್ವರ ಚರಿತ್ರೆಯನ್ನು ಶುಕನಿಗೆ ವೇದವ್ಯಾಸರು ತಿಳಿಸಿದರು.

**ಶಬ್ದಾರ್ಥ:** * **ಸಾತ್ಯವತೇಯ**=ಸತ್ಯವತೀಪುತ್ರ, ವೇದವ್ಯಾಸ; **ಬೋಧಿಸಿದ**=ತಿಳಿಸಿದರು

---

### ಇಷ್ಟದೇವತಾ ಸ್ತುತಿ ಮೊದಲಾದದ್ದು (೧-೩)

**ಪ್ರೇತಭೂಮಿಯೊಳಾಡುತಸ್ಥಿ**
**ವ್ರಾತಮಾಲೆಯ ಸೂಡುತಾವಗ**
**ಭೂತವೇತಾಳಾದಿಗಳ ಕೂಡೊಲಿದು ನರ್ತಿಸುವ ॥**
**ಈ ತೆರದ ಮಂಗಲಚರಿತ್ರನು**
**ಪ್ರೀತಿಯಿಂದಲಿ ತನ್ನ ನೆನೆವರಿ**
**ಗೋತು ಜಯಮಂಗಲವನೀವನು ಶ್ರೀಗಿರೀಶ್ವರನು ॥ ॥೧॥**

**ತಾತ್ಪರ್ಯ:** ಶ್ಮಶಾನ ಭೂಮಿಯಲ್ಲಿ ಸದಾ ವಿಹರಿಸುತ್ತಾ, ಎಲುಬುಗಳ ಮಾಲೆಯನ್ನು ಅಲಂಕರಿಸಿಕೊಂಡು, ಭೂತಪ್ರೇತಭೇತಾಳ ಪಿಶಾಚಾದಿಗಳೊಂದಿಗೆ ನಲಿದು ನರ್ತಿಸುತ್ತಾ, ಅಂತರಂಗದಲ್ಲಿ ಮಂಗಳಕರನಾಗಿ ಬಹಿರಂಗದಲ್ಲಿ ಹೊರನೋಟಕ್ಕೆ ಅಶುಭಚರಿತ್ರನಾಗಿ ಕಾಣುವ ಶ್ರೀಶೈಲ ಮಲ್ಲಿಕಾರ್ಜುನನು ತನ್ನನ್ನು ಪ್ರೀತಿಯಿಂದ ಸ್ಮರಿಸುವವರಿಗೆ ಒಲಿದು, ಜಯವನ್ನು, ನಿತ್ಯಮಂಗಳವನ್ನು ಅನುಗ್ರಹಿಸುತ್ತಾನೆ.

**ಶಬ್ದಾರ್ಥ:** * **ಸೂಡುತ**=ಅಲಂಕರಿಸಿಕೊಳ್ಳುತ್ತ; * **ಅಮಂಗಲಚರಿತ್ರನು**=ಅಶುಭಸ್ವರೂಪನು; * **ಆವಗ**=ಸದಾಕಾಲವೂ; * **ಭೂತವೇತಾಳಾದಿಗಳ**=ಭೂತಪ್ರೇತಬೇತಾಳಪಿಶಾಚಾದಿ ಪ್ರಮಥಗಣಗಳನ್ನು ಒಳಗೊಂಡು; * **ಕೂಡಿ**=ಒಳಗೊಂಡು; ಒಲಿದು=ಪ್ರೀತಿಯಿಂದ ವಶನಾಗಿ; * **ನೆನೆವರಿಗೆ**=ಸ್ಮರಿಸುವವರಿಗೆ; * **ಓದು**=ಒಲಿದು; * **ಜಯಮಂಗಲವನು**=ಯಶಸ್ಸನ್ನು, ಶುಭವನ್ನು; * **ಈವನು**=ಉಂಟುಮಾಡುವನು, ಅನುಗ್ರಹಿಸುವನು; * **ಶ್ರೀಗಿರೀಶ್ವರನು**=ಶ್ರೀಶೈಲಮಲ್ಲಿಕಾರ್ಜುನನು.

**ಟಿಪ್ಪಣಿ:** ಅಮಂಗಲಚರಿತ್ರನು=ಈಶ್ವರನು ವ್ಯವಹಾರದೃಷ್ಟಿಯಿಂದ ಅಮಂಗಲಚರಿತ್ರನಾದರೂ, ಪರಮಾರ್ಥದೃಷ್ಟಿಯಿಂದ ಯಾವ ಅಮಂಗಲದ ಲೇಪವೂ ತನಗೆ ಹತ್ತುವುದಿಲ್ಲವೆಂದು ಉದಾಹರಣೆಯಾಗಿರುವಷ್ಟು ಮಂಗಲಕರನಾಗಿರುವ ಅಂತಃಸ್ವರೂಪವುಳ್ಳವನು.

---

**ಢಾಳಕರಿಗರ್ಥಾರ್ಥಿಗಳಿಗೆ, ಕ**
**ರಾಳಕಾಮುಕರಿಂಗೆ, ಕಲಹಕೆ**
**ಕಾಲಕೆರೆವ ಕಠೋರರರಿಗೆ, ಕಡುಕೋಪಶೀಲರಿಗೆ, ॥**
**ಕಾಳುಗೂಳರಿಗಾತ್ಮನಿಷ್ಠರ**
**ಕಾಳುಗೆಡಿಪ ಕುತರ್ಕಿಗಳಿಗೆಲೆ**
**ಜಾಳುಬೋಳುಗಳಿಂಗೆ ಪೇಳದಿರನುಭವಾಮೃತವ ॥ ॥೨॥**

**ತಾತ್ಪರ್ಯ:** ಎಲೈ ಶುಕಮುನಿಯೆ, ದಂಭಗಾರರಿಗೆ, ಹಣದಾಸೆಯುಳ್ಳವರಿಗೆ, ಕ್ರೂರ ಮೋಹಾಂಧರಿಗೆ, ಜಗಳಕ್ಕೆ ಕಾಲುಕೆರೆಯುವ ಕಠಿಣಾತ್ಮರಿಗೆ, ಬಹಳವಾಗಿ ಮುಂಗೋಪವುಳ್ಳವರಿಗೆ, ಕೀಳಾದ ಕೂಳನ್ನು ತಿನ್ನುವವರಿಗೆ, ಆತ್ಮಜ್ಞಾನಶೀಲರನ್ನು ಹೀಯಾಳಿಸುವ ವಿತಂಡವಾದಿಗಳಿಗೆ, ಒಳಗೇನು ಹುರುಳಿಲ್ಲದೆ ಒಣಮಾತಾಡುವವರಿಗೆ ಈ ಅನುಭವಾಮೃತವನ್ನು ಹೇಳಬೇಡ.

**ಶಬ್ದಾರ್ಥ:** **ಢಾಳಕರಿಗೆ**=ದಂಭಗಾರರಿಗೆ, **ಕಾಳುಗೂಳರಿಗೆ**=ಕಾಡಾದ ಅಂದರೆ ಕೀಳಾದ ಕೂಳನ್ನು ತಿನ್ನುವವರಿಗೆ (ತಿನ್ನಬಾರದನ್ನು ತಿನ್ನುವವರಿಗೆ ಎಂದರ್ಥ); **ಕಾಳುಗೆಡಿಪ**=ಹೀನವಾಗಿ ಮಾಡುವ; **ಜಾಳು ಬೋಳುಗಳಿಂಗೆ**=ಒಳಗೇನೂ ಹುರುಳಿಲ್ಲದೆ ಒಳಮಾತನಾಡುವವರಿಗೆ.

---

**ಶಿಕ್ಷಿತರಿಗೆ, ಶಿವಾಗಮಂಗಳ**
**ಪೇಕ್ಷೆಯುಳ್ಳವರಿಂಗೆ, ಶಿವಪಂ**
**ಚಾಕ್ಷರಿಯ ಮಂತ್ರೋಕ್ತ ವಿಧಿಯಲಿ ದೀಕ್ಷೆ ಪಡೆದರಿಗೆ, ॥**
**ಮೋಕ್ಷಕಾಂಕ್ಷಕರಿಂಗೆ, ಮೌನದ**
**ಲಕ್ಷರಬ್ರಹ್ಮವನು ತಿಳಿದು ನಿ**
**ರೀಕ್ಷಿಸುವ ನಿಪುಣರಿಗೆ ಪೇಳೀ ಅನುಭವಾಮೃತವ ॥ ॥೩॥**

**ತಾತ್ಪರ್ಯ:** ಗುರುಹಿರಿಯರಿಗೆ ವಿಧೇಯರಾಗಿ ಸಚ್ಛಾಸ್ತ್ರಗಳಾದ ಶಿವಾಗಮಗಳನ್ನು ತಿಳಿಯಲು ಅಪೇಕ್ಷಿಗಳಾದವರಿಗೆ ನಮಶ್ಶಿವಾಯವೆಂಬ ಶಿವಪಂಚಾಕ್ಷರಿ ಮಂತ್ರವನ್ನು ಕ್ರಮಬದ್ಧ ವಿಧಿಯಲ್ಲಿ ದೀಕ್ಷೆ ಪಡೆದವರಿಗೆ, ಮೋಕ್ಷಾಪೇಕ್ಷಿಗಳಿಗೆ ಮನನದಿಂದ ಪರಬ್ರಹ್ಮನನ್ನು ಅನುಸಂಧಾನಮಾಡಿ ತಿಳಿಯಲು ಅಪೇಕ್ಷಿಸುವ ಸಮರ್ಥರಿಗೆ ಈ ಅನುಭವಾಮೃತವನ್ನು ತಿಳಿಸು.

**ಶಬ್ದಾರ್ಥ:** **ಶಿಕ್ಷಿತರಿಗೆ**=ಗುರುಹಿರಿಯರ ಅಧೀನರಾಗಿ ಬೆಳೆದವರಿಗೆ; **ಮೌನದಲ್ಲಿ**=ಶ್ರವಣಮಾಡಿದ ಅರ್ಥವನ್ನು ಮನಸ್ಸಿನಲ್ಲಿ ಯುಕ್ತಿಯಿಂದ ಹೊಂದಿಸಿಕೊಳ್ಳುತ್ತ (ಮನನದಿಂದ);

**ಟಿಪ್ಪಣಿ: ಶಿವಾಗಮಂಗಳಪೇಕ್ಷೆಯುಳ್ಳವರಿಂಗೆ**=ಇಲ್ಲಿ ಕವಿಯು ಶಿವಾಗಮಕ್ಕೂ ಪ್ರಾಧಾನ್ಯವನ್ನು ಕೊಟ್ಟಿರುವುದು ಅವುಗಳಲ್ಲಿ ಅವನ ಪ್ರೇಮವಿಶೇಷವನ್ನು ತೋರಿಸುವದೆಂದು ಮಾತ್ರ ಗ್ರಹಿಸಬೇಕು. ಹಾಗಲ್ಲದಿದ್ದರೆ ಉಳಿದ ದೇವತೆಗಳ ಉಪಾಸಕರು ಮುಕ್ತಿಗೆ ಅರ್ಹರೇ ಅಲ್ಲವೆಂದು ಹೇಳಿದಂತಾಗುವದು. ಜ್ಞಾನಿಗಳೆಂದಿಗೂ ಹಾಗೆ ಹೇಳುವುದಿಲ್ಲ. ಮುಖ್ಯವಾಗಿ ಸಚ್ಛಾಸ್ತ್ರಗಳ ಮೇಲೆಯೂ ಸನ್ಮಂತ್ರಗಳ ಮೇಲೆಯೂ ಆದರವುಳ್ಳವರಾದರಾಯಿತು.

---

**ತನು ಕರಣ ಮೊದಲಾದುವನಿತನು**
**ಘನವಿವೇಕದಿ ನೇತಿಗಳೆಂದುಳಿ**
**ದನುಪಮದ ಶೇಷಿತ ನಿರಾಕಲಿಸಲ್ಕಶಕ್ಯವಲಾ ! ॥**
**ಎನುತ ನನ್ನೊಳು ನಾನೆ ನನ್ನನು**
**ನೆನೆದು ಚಿನ್ಮಯನಾದೆನೆನಗೇ**
**ಕನಘ, ಸಹಜಾನಂದ ತೋರದದೇನು? ಹೇಳೆಂದ ॥ ॥೪॥**

**ತಾತ್ಪರ್ಯ:** ಶರೀರ, ಕರಣ ಮುಂತಾದವುಗಳನ್ನೆಲ್ಲ ಶ್ರೇಷ್ಠವೆನಿಸಿದ ವಿವೇಕದಿಂದ ತಿರಸ್ಕರಿಸಿ, ಉಳಿದ ಅನುಪಮವಾದ ಶೇಷವನ್ನು ನಿರಾಕರಿಸಲು ಅಶಕ್ಯವಲ್ಲವೇ? ಎಂಬುದಾಗಿ ತನ್ನಲ್ಲಿ ತಾನು ತನ್ನನ್ನು (ಆತ್ಮವನ್ನು) ನೆನೆದು, ಜ್ಞಾನಸ್ವರೂಪಿ (ಚಿನ್ಮಯ) ಆದೆನೆಂದು ತಿಳಿದೆನು. ಆದರೂ ಇನ್ನೂ ನನಗೆ ಪಾಪರಹಿತವಾದ ಸಹಜಾನಂದ ಏಕೆ ತೋರುತ್ತಿಲ್ಲ? ವ್ಯಾಸನೇ, ದಯಮಾಡಿ ತಿಳಿಸು ಎಂದು ಶುಕನು ಕೇಳಿದನು.

**ಶಬ್ದಾರ್ಥ: ತನು=ಶರೀರ; ಕರಣ=ಅಂತಃಕರಣ; * ಘನ=ಶ್ರೇಷ್ಠ; * ನೇತಿಗಳೆಂದು ಉಳಿದ= ಅಲ್ಲಗಳೆದು; * ಶೇಷಿತ=ಉಳಿದ; ಅನಘ=ಪರಿಶುದ್ಧನಾದ; ಸಹಜಾನಂದ=ಗುರುವು; ತೋರದು= ಕಾಣಿಸುತ್ತಿಲ್ಲ ಏಕೆ?**

---

### ಕ್ಲೇಶಪಂಚಕದ ಪ್ರತಿಬಂಧಕತ್ವ (೫-೮)

**ತನಯ ತತ್ತ್ವವ ತಿಳಿದ ಮಾತ್ರದಿ**
**ತನುವು ತಾನೆಂದೆಂಬ ವಾಸನೆ**
**ಮನಕೆ ಬಿಡದದರಿಂದ ಭೂಮಿಕೆಗಳನು ದೃಢವಾಗಿ ॥**
**ಅನವರತವಭ್ಯಾಸದಿಂದಲಿ**
**ಮನನವನು ಮಾಡುತ್ತಲಿರುತಿರ**
**ಲನಘ, ಪರಮಾನಂದವಹುದೈ ಕ್ಲೇಶವಳಿದಾಗ ॥ ॥೫॥**

**ತಾತ್ಪರ್ಯ:** ಶುಕನು ಕೇಳಿದ ಪ್ರಶ್ನೆಗೆ ವ್ಯಾಸರು ಉತ್ತರಿಸಿದರು. ಅನಘನಾದ ಶುಕನೇ ಕೇಳು, ತತ್ತ್ವವನ್ನು ತಿಳಿದುಕೊಂಡ ಮಾತ್ರದಿಂದಲೇ ಈ ಶರೀರವು ನಾನೇ ಎಂಬ ವಾಸನೆಯು ಮನಸ್ಸಿನಿಂದ ಬಿಟ್ಟುಹೋಗುವುದಿಲ್ಲ. ಆದಕಾರಣ, ಈ ಹಿಂದೆ ತಿಳಿಸಿದ ಸಪ್ತಭೂಮಿಕೆಗಳನ್ನು ಶ್ರದ್ಧೆಯಿಂದ ನಿರಂತರವಾಗಿ ಅಭ್ಯಾಸಮಾಡುತ್ತಾ ಅದನ್ನೇ

ಮನನಮಾಡಿದರೆ ಆಗ ಪಂಚಕ್ಲೇಶಗಳು ನಶಿಸಿ ಸ್ಥಿರವಾದ ಪರಮಾನಂದ ಉಂಟಾಗುತ್ತದೆ.

**ಶಬ್ದಾರ್ಥ:** * **ತತ್ತ್ವ**=ಆತ್ಮವಿಚಾರ, ಬ್ರಹ್ಮಸ್ವರೂಪವಿಚಾರ; **ಭೂಮಿಕೆ**=ಸಪ್ತಭೂಮಿಕೆಗಳು (ವಿವರಗಳಿಗೆ ಅ-೬, ಪ-೬ ನೋಡಿ) ೧. ಸುಖೇಚ್ಛೆ, ೨. ವಿಚಾರಣ, ೩. ತನುಮಾನಸ, ೪. ಸತ್ತ್ವಾಪತ್ತಿ, ೫. ಅಸಂಸತ್ತಿ, ೬. ಪದಾರ್ಥಾಭಾವಿನೀ, ೭. ತುರ್ಯಗಾ; * **ಅನವರತ**=ನಿರಂತರ; * **ಕ್ಲೇಶ**=ಪಂಚಕ್ಲೇಶಗಳು ಯಾವುವೆಂದರೆ- ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

**ಕ್ಲೇಶಪಂಚಕವೆನಲವಿದ್ಯಾ**
**ಕ್ಲೇಶವೊಂದಸ್ಮಿತೆಯೆರಡು; ಕೇ**
**ಳಾಸೆವಡೆದಿಹರಾಗ ಮೂರಾದ್ವೇಷವದು ನಾಲ್ಕು; ॥**
**ಈಸರಲಿ ಬಿಡದಭಿನಿವೇಶದಿ**
**ಸೂಸಿ ಸುಳಿಯುತ ತೊಡರಿ ಸುಖದ ವಿ**
**ನಾಶವೈದನೆಯಾದ ಕಡೆಯಾಕ್ಲೇಶವೆನಿಸುವುದು ॥ ॥೬॥**

**ತಾತ್ಪರ್ಯ:** ಪಂಚಕ್ಲೇಶಗಳೆಂದರೆ ಇವು: ೧. ಅವಿದ್ಯಾಕ್ಲೇಶ, ೨. ಅಸ್ಮಿತೆ, ೩. ಆಶಾಭಾವ ಹೊಂದಿರುವ ರಾಗ, ೪. ದ್ವೇಷ, ಈ ನಾಲ್ಕರಲ್ಲಿ ಸೇರಿಕೊಂಡು ಕಾಣಿಸಿಕೊಳ್ಳುತ್ತಾ ಆತ್ಮಸುಖಕ್ಕೆ ಭಂಗಕಾರಿಯಾದ ಕಡೆಯ ಕ್ಲೇಶ ಐದನೆಯದು ಅಭಿನಿವೇಶ.

**ಶಬ್ದಾರ್ಥ:** **ಈಸರಲಿ**=ಇವೆಲ್ಲವುಗಳಲ್ಲಿಯೂ, ಈ ನಾಲ್ಕರಲ್ಲಿಯೂ ಐದು ಕ್ಲೇಶಗಳನ್ನು ಮುಂದಿನಪದ್ಯದಲ್ಲಿ ಕವಿ ವಿವರಿಸಿದ್ದಾನೆ; * **ಸುಳಿಯುತ**=ಕಾಣಿಸಿಕೊಳ್ಳುತ್ತಾ; * **ತೊಡರಿ** =ಆತ್ಮಸುಖಕ್ಕೆ ಭಂಗಕಾರಿಯಾದ

---

**ತನ್ನನರಿಯದುದೇ ಅವಿದ್ಯೆಯ**
**ದನ್ಯದೊಳು ತಾನೆಂಬುದಸ್ಮಿತೆ**
**ಯುನ್ನತದ ಭೋಗಾಭಿಲಾಷೆಯೆ ರಾಗವೆನಿಸುವದು; ॥**
**ಮುನ್ನಲದು ಪ್ರತಿಕೂಲಮಾದೊಡೆ**
**ನನ್ನಿಯದರಿಂ ದ್ವೇಷವಿದರೊಳು**
**ಗನ್ನಗತಕದಿ ತೊಡರಿ ಬಿಡದಿಹುದಭಿನಿವೇಶವದು ॥ ॥೭॥**

**ತಾತ್ಪರ್ಯ:** ತನ್ನನ್ನು ತಾನು ತಿಳಿಯದಿರುವುದೇ ಅವಿದ್ಯೆ; ಅನ್ಯದೊಳಗೆ ತಾನು ಎಂಬುದೇ ಅಸ್ಮಿತೆ; ಅಧಿಕವಾದ ಭೋಗಗಳನ್ನು ಅನುಭವಿಸಬೇಕೆಂಬ ಬಯಕೆಯೇ ರಾಗ; ಈ ರಾಗವೆಂಬುದು ಅನುಕೂಲವಾಗದೆ ಪ್ರತಿಕೂಲವೆನಿಸಿದರೆ ಉಂಟಾಗುವುದೇ

ದ್ವೇಷ ಎಂಬುದು ನಿಜ. ಈ ನಾಲ್ಕರಲ್ಲಿ ಮೋಸದಿಂದ ಸೇರಿಕೊಂಡು ಭ್ರಾಂತಿಯಿಂದ ಸುಳಿದಾಡುವುದೇ ಅಭಿನಿವೇಶ ಎನಿಸುತ್ತದೆ.

**ಶಬ್ದಾರ್ಥ:** * ತನ್ನನರಿಯದುದೇ=ಆತ್ಮಜ್ಞಾನ ಹೊಂದದಿರುವುದು; * ಉನ್ನತದ=ಅಧಿಕವಾದ; * ನನ್ನಿ=ನಿಜ; * ಗನ್ನಗತಕ=ಮೋಸ; *ತೊಡರಿ=ಸೇರಿಕೊಂಡು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

**ಕ್ಲೇಶಪಂಚಕದಿಂದ ಜೀವನು**
**ಮೋಸದಿಂದಜ್ಞಾನವೆಡೆಗೊಳ**
**ಲಾಸೆಬಟ್ಟನ್ಯದೊಳು ಭೋಗಾಪೇಕ್ಷೆಯನು ಮಾಡಿ ।**
**ದ್ವೇಷದಿಂದುರಿದುರಿದು ಬೇವುತ**
**ಗಾಸಿಯಾಗಲು ಮತ್ಸರದಿ, ಬಹು**
**ವಾಸಿಪಂಥಗಳಿಂದ ಸುಖಮೈದೋರದಿಹುದೆಂದ ॥ ॥೮॥**

**ತಾತ್ಪರ್ಯ:** ಹಿಂದಿನಪದ್ಯದಲ್ಲಿ ಹೇಳಿದ ಐದುಬಗೆಯ ಕ್ಲೇಶಗಳಿಂದ ಜೀವನು ಮೋಸಹೋಗಿ ಅಜ್ಞಾನವು ಆವರಿಸಿಕೊಳ್ಳಲು ವಿಷಯಾಸಕ್ತನಾಗಿ ಬ್ರಹ್ಮೇತರ ವಸ್ತುಗಳಲ್ಲಿ ಮೋಹಗೊಂಡು ಭೋಗದಲ್ಲಿ ಅತ್ಯಾಸಕ್ತಿಹೊಂದಿ ಆ ಸುಖ ದೊರೆಯ ಲಿಲ್ಲವೆಂಬ ದ್ವೇಷದಿಂದ ಕೆರಳಿಕೆಂಡವಾಗಿ ಅಸೂಯೆಯಿಂದ ಆಘಾತಹೊಂದಿ ಅನೇಕ ಬಗೆಯ ಹಠಗಳಿಂದ ಸುಖಹೊಂದಲಾರದೆ ದುಃಖಿತನಾಗಿರುತ್ತಾನೆ.

**ಶಬ್ದಾರ್ಥ:** * ಕ್ಲೇಶಪಂಚಕದಿಂದ=ಹಿಂದಿನಪದ್ಯದಲ್ಲಿ ವಿವರಿಸಿದೆ; * ಅಜ್ಞಾನವಡೆಗೊಳಲು=ಅವಿದ್ಯೆ ಆವರಿಸಿಲು; ಉರಿದುರಿದುಬೇವುತ=ಕೆರಳಿಕೆಂಡವಾಗಿ ಉರಿದು; ಬೇವುತ=ಬೇಯುತ್ತ; * ಗಾಸಿಯಾಗಲು=ಆಘಾತಹೊಂದಿ; * ಮತ್ಸರ=ಅಸೂಯೆ; * ಬಹುವಾಸಿಪಂಥಗಳಿಂದ=ನಾನಾ ಬಗೆಯ ಹಠಗಳಿಂದ; * ಮೈದೋರದೆ=ಹೊಂದಲಾರದೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

## ಜೀವನ್ಮುಕ್ತಿಯ ವಿವಿಧ ಪ್ರತಿಬಂಧಕಗಳು (೯-೧೬)

**ಭೋಗಲೋಭರಿಗಹುದು ಹೆಂಗಳ**
**ಮೇಗೆ, ಧನಗೃಹಗಳಲಿ ಕೇಳ್ವೈ**
**ರಾಗದ ವಿಕಾರಗಳು- ಕಾಮಕ್ರೋಧ ಲೋಭಗಳು; ।**
**ಅಗಲವರುರೆ ಸಿಲುಕಿ, ದುಃಖದ**
**ಸಾಗರದೊಳೋಲಾಡಿ, ಸೌಖ್ಯವ**
**ನೀಗಿ ಕಳೆವರು ಮೋಹಮದ ಮತ್ಸರದ ಬೇಗೆಯಲಿ ॥ ॥೯॥**

**ತಾತ್ಪರ್ಯ:** ಎಲೈ ಶುಕನೆ ಕೇಳು, ಭೋಗದಲ್ಲಿ ಅತ್ಯಾಸಕ್ತಿ ಉಳ್ಳವರಿಗೆ ಸ್ತ್ರೀಯರು, ದ್ರವ್ಯ, ಮನೆಗಳ ಬಗ್ಗೆ ಅನುರಾಗ ಜನಿಸುವುದು. ಆ ಅನುರಾಗದ ಹಲವು ರೂಪಗಳಾದ ಕಾಮ, ಕ್ರೋಧ, ಲೋಭಗಳಿಗೆ ಒಳಗಾಗಿ ಸಿಲುಕಿಕೊಂಡು ಒದ್ದಾಡುತ್ತಾರೆ; ದುಃಖಸಾಗರದಲ್ಲಿ ಮುಳುಗೇಳುತ್ತಾ ಮೋಹ, ಮದ, ಮತ್ಸರದ ಅಗ್ನಿಕುಂಡದಲ್ಲಿ ಬಿದ್ದು ಬೇಯುತ್ತಾ ಆತ್ಮಸುಖಹೀನರಾಗಿ ಬಾಳ ಸವೆಸುವರು.

**ಶಬ್ದಾರ್ಥ:** **ಭೋಗಲೋಭರಿಗೆ**=ಭೋಗದಲ್ಲಿ ಅತ್ಯಾಸಕ್ತಿಉಳ್ಳವರಿಗೆ; * **ಹೆಂಗಳಮೇಗೆ**=ಸ್ತ್ರೀಯರ ಬಗ್ಗೆ; * **ಧನಗೃಹಗಳಲಿ**=ಹಣ, ಮನೆಗಳ ಬಗ್ಗೆ; * **ರಾಗದವಿಕಾರಗಳು**=ಅನುರಾಗದ ಹಲವು ರೂಪಗಳು; **ಉರೆಸಿಲುಕಿ**=ಚೆನ್ನಾಗಿ ಸಿಕ್ಕಿಕೊಂಡು; * **ಅಗಲವರು**=ಒದ್ದಾಡುತ್ತಾರೆ; **ಸೌಖ್ಯವನೀಗಿ** =ಆತ್ಮಸುಖಹೀನರಾಗಿ; ***ಕಳೆವರು**=ಬಾಳ ಸವೆಸುವರು.

---

**ಅಷ್ಟಮದ ತಲೆಗೇರಿ, ಹೆಮ್ಮೆಯ**
**ಬಟ್ಟೆಯಲಿ ತಾ ಬೆರೆತು, ತಟ್ಟನೆ**
**ಕೆಟ್ಟನುಡಿಯಲಿ ಗುರುಹಿರಿಯರೆಂದೆಂಬುವರ ಜರಿದು, ।**
**ದುಷ್ಟಸಂಗವ ಮಾಡಿ, ದುರಿತದ**
**ಬಟ್ಟೆಯನು ಹತ್ತಿರ್ದ ಮನುಜನು**
**ಕಟ್ಟಳಿಲ್ಲದ ದುಃಖದೊಳಗೋಲಾಡುತಿಹನೆಂದ ॥ ॥೧೦॥**

**ತಾತ್ಪರ್ಯ:** ಕುಲ, ಬಲ, ರೂಪು, ಯೌವನ, ಸುದತಿ, ಸಂಪತ್ತು, ವಿದ್ಯೆ, ತಪಗಳೆಂಬ ಎಂಟು ಮದಗಳು ತಲೆಗೇರಿ ಸೊಕ್ಕಿ, ಅಹಂಕಾರದ ದಾರಿಯಲ್ಲಿ ಸಾಗಿ, ಶೀಘ್ರ ಕೋಪಿಯಾಗಿ ಕೆಟ್ಟನುಡಿಗಳಿಂದ ಗುರುಹಿರಿಯರನ್ನು ದೂಷಿಸುತ್ತಾ, ದುರ್ಜನರ ಸಹವಾಸಮಾಡುತ್ತಾ, ಪಾಪಮಾರ್ಗದಲ್ಲಿ ನಡೆಯುತ್ತಾ, ಮಾನವನು ಅಪಾರದುಃಖ ಸಾಗರದಲ್ಲಿ ತೊಳಲಾಡುತ್ತಾನೆ.

**ಶಬ್ದಾರ್ಥ:** **ಕಟ್ಟಳಲ್ಲದ**=ಮಿತಿಯಿಲ್ಲದ, ಅಪಾರ; * **ಬಟ್ಟೆಯಲಿ**=ಮಾರ್ಗದಲ್ಲಿ; * **ಬೆರೆತು** =ನಿರತನಾಗಿ; * **ಜರಿದು**=ದೂಷಿಸುತ್ತಾ; * **ದುರಿತದ ಬಟ್ಟೆಯನು**=ಪಾಪದ ಹಾದಿಯನ್ನು; * **ಓಲಾಡುತಿಹನು**=ತೊಳಲಾಡುತ್ತಾನೆ, ಮುಳಗೇಳುತ್ತಾನೆ.

**ಟಿಪ್ಪಣಿ–೧:** **ಅಷ್ಟಮದ**–ಕುಲ, ಬಲ, ರೂಪು, ಯೌವನ, ಸುದತಿ, ಸಂಪತ್ತು, ವಿದ್ಯೆ, ತಪ, (ಅ–೨, ಪ–೪೯ ನೋಡಿ)

**ಟಿಪ್ಪಣಿ–೨:** * **ಅಷ್ಟಮದಗಳು** ಯಾವುವು ಎಂಬುದನ್ನು ಹೇಳುವಲ್ಲಿ ಬೇರೆಬೇರೆ ಗ್ರಂಥಗಳಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬರುತ್ತದೆ. ಉದಾಹರಣೆಗೆ ವಿವೇಕ ಚಿಂತಾಮಣಿಯಲ್ಲಿ ಸುದತಿ ಬದಲಾಗಿ ರಾಜ್ಯ ಹೇಳಲಾಗಿದೆ. ಕಿಟಲ್ ಕೋಶದಲ್ಲಿ "ಅನ್ನ ಅರ್ಥ ಸ್ತ್ರೀ ವಿದ್ಯಾ ಕುಲ ರೂಪ, ಉದ್ಯೋಗ, ಅಧಿಕಾರ ಎಂದು ಹೇಳಿದೆ (ವಿವರಗಳಿಗೆ ಶ್ರೀವತ್ಸ ನಿಘಂಟು, ಪುಟ–೨೨೦ ನೋಡಿ).

---

**ಕರುಣ, ಭಯ, ಶಂಕಾ, ಜುಗುಪ್ಸೆಗ**
**ಳುರುತರದ ಕುಲ ಜಾತಿ, ಶೀಲ,**
**ಸ್ಫುರಿತ ಲಜ್ಜೆಗಳೆಂಬ ಬಲುಹುರಿಯಷ್ಟಪಾಶದಲಿ ।**
**ಬರಿಯ ಭ್ರಮೆಯಲಿ ಬದ್ಧರಾದರು**
**ಸುರನರೋರಗರವರಿಗೊಮ್ಮೆಯು**
**ದೊರಕಲರಿವುದೆ ಸೌಖ್ಯ? ದುಃಖದಿ ಬೇಯುತಿಹರೆಂದ ॥ ॥೧೧॥**

**ತಾತ್ಪರ್ಯ:** ಕರುಣೆ, ಭಯ, ಸಂಶಯ, ಅಸಹ್ಯತೆ, ಶ್ರೇಷ್ಠಕಾಲ, ಉತ್ತಮಜಾತಿ, ಸದಾಚಾರ, ನಾಚಿಕೆ ಎಂಬ ಎಂಟು ಬಲವಾಗಿ ಹುರಿಗೊಂಡ ಬಂಧನಗಳಿವೆ. ವ್ಯರ್ಥವೆನಿಸಿದ ಈ ಅಷ್ಟಪಾಶಗಳಲ್ಲಿ ದೇವತೆಗಳು, ರಾಕ್ಷಸರು, ಮಾನವರು ಸಿಕ್ಕಿಕೊಂಡಿದ್ದಾರೆ. ಆದಕಾರಣ ಅವರಿಗೆ ಒಮ್ಮೆಯಾದರೂ ಸುಖ ಸಿಗಲು ಸಾಧ್ಯವಿಲ್ಲ. ಹಾಗಾಗಿ ಅವರೆಲ್ಲ ದುಃಖಾಗ್ನಿಯಲ್ಲಿ ಬೇಯುತ್ತಿದ್ದಾರೆ. (ಕಷ್ಟಕೋಟಲೆಗಳಿಗೆ ಸಿಕ್ಕಿ ನರಳುತ್ತಿದ್ದಾರೆ).

**ಶಬ್ದಾರ್ಥ: * ಜುಗುಪ್ಸೆ**=ಅಸಹ್ಯತೆ; *** ಉರುತರದಕುಲ**=ಶ್ರೇಷ್ಠಕುಲ; **ಸ್ಫುರಿತ ಲಜ್ಜೆ**=ಉಂಟಾದ ನಾಚಿಕೆ; **ಹುರಿ**=ಹೆಣೆದ ಹಗ್ಗ; **ಅಷ್ಟಪಾಶ**=ಎಂಟು ಬಂಧನಗಳು; **ಬರಿಯಭ್ರಮೆ**=ವ್ಯರ್ಥವೆನಿಸಿದ, ನಿರರ್ಥವಾದ; **ಬದ್ಧರಾದವರು**=ಸಿಲುಕಿದವರು; **ಸುರನರೋರಗ**=ದೇವಲೋಕದ ದೇವತೆಗಳು, ಭೂಲೋಕದ ನರರು, ಪಾತಾಳಲೋಕದ ನಾಗರು (ರಾಕ್ಷಸರು).

**ಟಿಪ್ಪಣಿ-೧: ಅಷ್ಟಪಾಶ-** ೧. ಕರುಣೆ, ೨. ಭಯ, ೩. ಸಂಶಯ, ೪. ಅಸಹ್ಯತೆ, ೫. ಶ್ರೇಷ್ಠಕುಲ, ೬. ಉತ್ತಮಜಾತಿ, ೭. ಶೀಲ, ೮. ಲಜ್ಜೆ (ಅ-೧, ಪ-೨೨ರಲ್ಲೂ ಇದನ್ನು ವಿವರಿಸಿದೆ).

**ಟಿಪ್ಪಣಿ-೨: * ಅಷ್ಟಪಾಶಗಳಪಟ್ಟಿ** ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯಾಗಿದೆ. ಉದಾಹರಣೆಗೆ: ಪಶು, ಭವ, ಬಂಧ, ಮೋಹ, ಆಶಾ, ಕರ್ಮ, ದುಃಖ, ಕ್ಲೇಶ (ವಿದ್ಯಾ ಕಲ್ಪತರವು ಗ್ರಂಥ) ವಿವರಗಳಿಗೆ ಶ್ರೀವತ್ಸ ನಿಘಂಟು ಪುಟ-೧೭೯ ನೋಡಿ).

---

**ಹಸಿವು ತೃಷೆಗಳು ಪ್ರಾಣವನು ಬಾ**
**ಧಿಸುವವಂತಾ ಶೋಕ ಮೋಹಗ**
**ಳೆಸೆದು ಮನವನು; ತಿಳಿ ಜರಾಮರಣಗಳು ದೇಹವನು; ।**
**ಬಸವಳಿದು ಬಹುದುಃಖದುಬ್ಬೆಯ**
**ವಶಕೆ ಸಿಕ್ಕಿ ಷಡೂರ್ಮಿಗಳಲು**
**ಬ್ಬಸದೊಳೊಮ್ಮೆಯು ಕಾಣದಳಲುವರೇನ ಹೇಳುವೆನು ॥ ॥೧೨॥**

**ತಾತ್ಪರ್ಯ:** ಹಸಿವು, ಬಾಯಾರಿಕೆಗಳು ಪ್ರಾಣವನ್ನು ಗೋಳಾಡಿಸುತ್ತದೆ; ಹಾಗೆಯೇ ದುಃಖ, ಮೋಹಗಳು ಮನಸ್ಸನ್ನು ಆವರಿಸಿ ಬಾಧಿಸುತ್ತವೆ; ಮುಪ್ಪು ಸಾವುಗಳು ದೇಹವನ್ನು ಒದ್ದಾಡಿಸುತ್ತವೆ. ಹೀಗೆ ಹಸಿವು, ಬಾಯಾರಿಕೆ, ಶೋಕ, ಮೋಹ,

ಮುಪ್ಪು, ಸಾವುಗಳೆಂಬ ಆರ ಅಲೆಗಳ ಹೊಡೆತಕ್ಕೆ ಸಿಲುಕಿ ತೊಳಲಿ ಬಹುದುಃಖವೆಂಬ ಸೆಕೆಯ ಬೇಗೆಗೆ ಬಲಿಯಾಗಿ ಗಾಸಿಯೊಂದುತ್ತಾ ಜೀವನದಲ್ಲಿ ಎಂದಿಗೂ ಆತ್ಮ ಸುಖವನ್ನೇ ಕಾಣದೆ ಮಾನವರು ದುಃಖಿಸುತ್ತಿದ್ದಾರೆ. ಇವರ ಅವಿವೇಕ ಏನೆಂದು ಹೇಳೋಣ!

**ಶಬ್ದಾರ್ಥ:** ಉಬ್ಬೆ=ಸೆಕೆಯ ಬೇಗೆ; * ತೃಷೆ=ಬಾಯಾರಿಕೆ; * ಬಾಧಿಸುವವು=ಗೋಳಾಡಿಸುವವು; * ಶೋಕ=ದುಃಖ; * ಎಸೆದು=ಕಂಗೊಳಿಸಿ, ಮೆರೆದು; * ಬಸವಳಿದು=ಗಾಸಿ ಹೊಂದಿ, ಆಯಾಸಗೊಂಡು, ತೊಳಲಿ; * ಒಮ್ಮೆಯು=ಒಂದು ಸಲವಾದರೂ; * ಅಳಲುವರು=ದುಃಖಿಸುವರು; ಷಡೂರ್ಮಿಗಳು =ಆರು ಅಲೆಗಳು.

**ಟಿಪ್ಪಣಿ–೧:** ಷಡೂರ್ಮಿಗಳು–ಮುಪ್ಪು, ಸಾವು, ಹಸಿವು, ಬಾಯಾರಿಕೆ, ಶೋಕ, ಮೋಹ ಎಂಬ ಆರು ಅಲೆಗಳು.

**ಟಿಪ್ಪಣಿ–೨:** ಬೃಹದಾರಣ್ಯಕ ಉಪನಿಷತ್ತಿನಲ್ಲಿ (II – ೩–೫–೧) ಅಶನಾಯೆ (ಹಸಿವು) ಪಿಪಾಸೆ (ನೀರಡಿಕೆ); ಶೋಕ (ಕಾಮ), ಮೋಹ (ಅವಿದ್ಯೆ), ಜರೆ (ಮುಪ್ಪು, ಮೃತ್ಯು (ಸಾವು) ಎಂದು ಹೇಳಿದೆ. (ಶ್ರೀವತ್ಸ ನಿಘಂಟು ಪುಟ–೫೩ ನೋಡಿ)

---

**ಪುತ್ರ, ವಿತ್ತ, ಕಳತ್ರವೆನಿಸುವ**
**ವೀ ತ್ರಿತಯವಪ್ಪೀಷಣಂಗಳ**
**ಚಿತ್ರವೆನಿಸುವ ಲೋಭಮೋಹಮಮತ್ವದಲಿ ಸಿಲುಕಿ ।**
**ಅತ್ಯಧಿಕ ದುಃಖಾರ್ಣವದ ತಾ**
**ಪತ್ರಯಗಳಲಿ ಬೆಂದು, ಕರ್ಮದ**
**ಮೊತ್ತದಲಿ ಜಳ್ಕಾಗೆ ಸುಖಮೈದೋರದಿಹುದೆಂದ ॥ ॥೧೩॥**

**ತಾತ್ಪರ್ಯ:** ಮಕ್ಕಳ ಆಸೆ, ಹಣದ ಅಪೇಕ್ಷೆ, ಹೆಣ್ಣಿನ ಅಭಿಲಾಷೆ ಈ ಮೂರು ಆಸೆಗಳಿಗೆ ಅಜ್ಞಾನಿ ಮಾನವರು ಒಳಗಾಗಿ ಮನಸೆಳೆವ ಧನದ ಲೋಭ, ಪುತ್ರಮೋಹ, ಸತಿ ಮಮತ್ವಗಳಿಗೆ ಸಿಲುಕಿಕೊಂಡು ಅಪಾರವಾದ ದುಃಖಸಾಗರದಲ್ಲಿ ಮುಳುಗಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ತಾಪತ್ರಯಗಳಲ್ಲಿ ಬೆಂದು ಬೆಂಡಾಗುತ್ತ ಅಸಂಖ್ಯಾತ ಕರ್ಮಗಳಿಗೆ ಒಳಗಾಗಿ ಜರ್ಝರಿತರಾಗಿ ಸ್ವಲ್ಪವಾದರೂ ಸುಖವನ್ನೇ ಕಾಣದೆ ಇದ್ದಾರೆ.

**ಶಬ್ದಾರ್ಥ:** ತ್ರಿತಯವಪ್ಪ+ಈಷಣಂಗಳ=ಮಕ್ಕಳ ಅಪೇಕ್ಷೆ, ಹಣದ ಅಪೇಕ್ಷೆ, ಹೆಂಡತಿ ಅಪೇಕ್ಷೆ ಎಂಬ ಮೂರು ಆಸೆಗಳು; * ಚಿತ್ರವೆನಿಸುವ=ಮನಸೆಳೆವ, ಆಕರ್ಷಕ; ಮಮತ್ವ=ನನ್ನದೆಂಬ ಭಾವ; * ದುಃಖಾರ್ಣವ=ದುಃಖಸಾಗರ; * ಜಳಕಿಗೆ=ಕೃಶವಾಗಲು, ಬಳಲಿ ಬೆಂಡಾಗಿ.

**ಟಿಪ್ಪಣಿ:** ತಾಪತ್ರಯ=ಮೂರು ತಾಪಗಳು; ಆಧ್ಯಾತ್ಮಿಕ (ಶರೀರದಲ್ಲಿ ಹುಟ್ಟಿದ ರೋಗ ಮೊದಲಾದದ್ದು); ಆಧಿಭೌತಿಕ (ಇತರ ಪ್ರಾಣಿಗಳಿಂದ ಆದ ಹಾನಿ); ಆಧಿದೈವಿಕ (ಭೂತಪಂಚಕಗಳಿದ) ಆಗುವ ಕೇಡು.

---

**ಲೋಕವಾಸನೆ, ದೇಹವಾಸನೆ,**
**ಬೇಕೆನಿಪ ಬಹುಶಾಸ್ತ್ರವಾಸನೆ,**
**ಸಾಕೆನಿಸದಿಹ ಪುತ್ರಮಿತ್ರರ ಬಯಕೆಯೆಂದೆಂಬ ।**
**ಆ ಕುವಾಸನೆಗಳೊಳು ಮಿಗೆ ಮನ**
**ತಾಕಿಕೊಂಡಿರುತಿರಲು ಬಳಿಕದ**
**ನೇಕ ಗಾಸಿಗಳಾಗಿ ಸುಖ ಮೈದೋರದಿಹುದೆಂದ ॥** ॥೧೪॥

**ತಾತ್ಪರ್ಯ:** ಲೋಕದವಾಸನೆ, ದೇಹದವಾಸನೆ, ಇಷ್ಟಪಡುವ ನಾನಾಶಾಸ್ತ್ರವಾಸನೆ, ಇಷ್ಟು ಸಿಕ್ಕರೆ ಮತ್ತಷ್ಟು ಬೇಕೆನಿಸುವ ಪುತ್ರಮಿತ್ರವಾಸನೆ ಎಂಬ ದುಷ್ಟವಾಸನೆಗಳಲ್ಲಿ ಮನಸ್ಸು ಅತಿಯಾಗಿ ಸಿಲುಕಿಕೊಂಡಿರುವಾಗ ಪರಿಣಾಮದಲ್ಲಿ ನಾನಾ ತೊಂದರೆಗಳಿಗೆ ಒಳಗಾಗುವ ಮಾನವರಿಗೆ ಎಂದಿಗಾದರೂ ಸರಿ ಸುಖದೊರಕಲಾರದು ಎಂದು ತಿಳಿ.

**ಶಬ್ದಾರ್ಥ:** * **ಲೋಕವಾಸನೆ**=ಲೋಕದ ಆಗುಹೋಗುಗಳು; * **ದೇಹವಾಸನೆ**=ದೇಹದ ಮೋಹ; * **ಶಾಸ್ತ್ರವಾಸನೆ**=ನಾನಾತತ್ತ್ವವಿಚಾರಗಳ ಸಂಸರ್ಗ; * **ಪುತ್ರಮಿತ್ರವಾಸನೆ**=ಮಕ್ಕಳು, ಸ್ನೇಹಿತರ ಬಗ್ಗೆ ಅಭಿಮಾನ; * **ಕುವಾಸನೆಗಳಲಿ**= ಈ ನಾಲ್ಕು ದುಷ್ಟ ಸಂಸ್ಕಾರಗಳಲ್ಲಿ; * **ಗಾಸಿ**=ತೊಂದರೆ, ಕಾಟ; * **ಮೈದೋರದು**=ದೊರಕುವುದಿಲ್ಲ.

**ಟಿಪ್ಪಣಿ–೧:** ವಾಸನೆ–ಅನುಭವದಿಂದ ಉಂಟಾಗುವ ಸ್ಮೃತಿಗೆ ಕಾರಣವಾಗಿರುವ ಸಂಸ್ಕಾರಗಳು. (ಬೃಹದಾರಣ್ಯಕ ೧, ೧೬೧, ೧೯೪)

**ಟಿಪ್ಪಣಿ–೨:** ಹೊ.ಚಿ. ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ. ಶಬ್ದಾರ್ಥ, ಟಿಪ್ಪಣಿ ಅನುವಾದಕರದು.

**ಪಾಠಾಂತರ:** ೧. ಮನ **ತಾಕಿಕೊಂಡಿರುತಿರಲು**=ಮನದಾಸಕತಿ ಬಿಡದಿರಲು (ಕು) ೨. **ಬಳಿಕದನೇಕ**=ಬಳಿಕಲನೇಕ (ಕು) ೩. **ಸಾಕೆನಿಸದಿಹ ಪುತ್ರಮಿತ್ರರ ಬಯಕೆಯೆಂಬ**=ಮೀಕರಿಸದಿಹುದಾ ಶ್ರುತಿದ್ವಯವೆಂದೆನಿಸಿಕೊಂಬ [ಅರಸೇ (ಅ)]

---

**ವೇದ, ಶಾಸ್ತ್ರ, ಪುರಾಣ, ಸಂಹಿತೆ**
**ಯಾದಿಯಾದವನೋದಲದರಿಂ**
**ದಾದ ಫಲವೇನದರ ಸಾರವನರಿಯದೇ ಬರಿದೆ? ।**
**ಬೂದಿಯೊಳಗಣ ಹೋಮದಂದದಿ**
**ವಾದದಲಿ ಹೊಡೆದಾಡಿ ಹೊಟ್ಟೆಯ**
**ಕಾದ ಕಿಚ್ಚಿಗೆ ಕಲಿಯೆ ಸುಖಮೈದೋರದಿಹುದೆಂದ ॥** ॥೧೫॥

**ತಾತ್ಪರ್ಯ:** ನಾಲ್ಕು ವೇದಗಳು, ೧೮ ಪುರಾಣಗಳು, ೬ ಶಾಸ್ತ್ರಗಳು, ೬ ಸಂಹಿತೆಗಳು ಮೊದಲಾದ ಶಾಸ್ತ್ರ ಸಾಹಿತ್ಯಗಳನ್ನು ಅಭ್ಯಾಸಮಾಡಿದರೆ ಅವುಗಳಿಂದ ಆಗುವ ಪ್ರಯೋಜನ ಏನೂ ಇಲ್ಲ. ಅದರ ಅಂತರಾರ್ಥ ತಿಳಿದು ಮನಮಾಡಿದರೆ ವ್ಯರ್ಥವೇ ಸರಿ. ಹಾಗೇ ಅರ್ಥವಿಲ್ಲದ ಅಧ್ಯಯನ ಹೊಟ್ಟೆಪಾಡಿಗಾಗಿ, ಉದರಾಗ್ನಿಗಾಗಿ ವಾದದಲ್ಲಿ

ಹೊಡೆದಾಡಿ ಕಲಿತ ವಿದ್ಯೆಗಾಗಿ ಬೂದಿಯೊಳಗೆ ಹೋಮಮಾಡಿದಂತೆ ಆಗುತ್ತದೆ. ಅದರಿಂದ ಯಾವ ಸುಖವೂ ಲಭ್ಯವಾಗುವುದಿಲ್ಲ.

**ಶಬ್ದಾರ್ಥ:** * **ವೇದ**=ನಾಲ್ಕು ವೇದಗಳು; * **ಪುರಾಣ**=ಹದಿನೆಂಟು ಪುರಾಣಗಳು; * **ಶಾಸ್ತ್ರ**=ಆರುಶಾಸ್ತ್ರಗಳು; * **ಸಂಹಿತೆ**=ಆರು ಸಂಹಿತೆಗಳು (ವಿವರಗಳಿಗೆ ಶ್ರೀವತ್ಸ ನಿಘಂಟು ....ವೆಂಕಟಾಚಲಶಾಸ್ತ್ರಿ ನೋಡಿ); * **ಆದಿ ಆದ**=ಮೊದಲಾದ; * **ಅವನು**=ಅವುಗಳನ್ನು; * **ಓದಲು**=ಸುಮ್ಮನೆ ಓದಿದರೆ; * **ಸಾರವನು ಅರಿಯದೆ**=ಅಂತರಾರ್ಥವನು ತಿಳಿಯದೆ; **ಹೊಡೆದಾಡಿ**=ವಾದದಲ್ಲಿ ಕಿತ್ತಾಡಿ, ಶಾಸ್ತ್ರಾರ್ಥದಲ್ಲಿ ಉಗ್ರಚರ್ಚೆಮಾಡಿ; **ಹೊಟ್ಟೆಕಾದಕಿಚ್ಚಿಗೆ**=ಉದರಾಗ್ನಿಗೆ, ಹೊಟ್ಟೆಪಾಡಿಗೆ, ಉದರಭರಣಕ್ಕೆ; * **ಕಲಿಯೆ**=ಅಭ್ಯಾಸಮಾಡಿದರೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

**ಪಾಠಾಂತರ:** ಕಲಿತು=ಕಲಿಯೆ (ಕು)

---

**ಕ್ಷೀರದೊಳು ಹುಳಿಗಲಸಿದಂದದಿ,**
**ಸಾರಸುಧೆ ವಿಷವೆರಸಿದಂದದಿ,**
**ತೋರವಹ ಬೆಲ್ಲದಲಿ ಬೇವೆಡೆಗೊಂಡ ತೆರನಂತೆ, ।**
**ಪಾರಮಾರ್ಥಿಕವಪ್ಪ ಸುಖಸಾ**
**ಕಾರಸಾಗರದೊಳಗೆ ಮಿಶ್ರಿತ**
**ಘೋರತರ ಸಂಸಾರದುಃಖವಿದೆಂದನಾ ಮುನಿಪ ॥ ॥೧೬॥**

**ತಾತ್ಪರ್ಯ:** ಹಾಲಿನಲ್ಲಿ ಹುಳಿಹಿಂಡಿದ ಹಾಗೆ, ಶ್ರೇಷ್ಠವಾದ ಅಮೃತದಲ್ಲಿ ವಿಷವನ್ನು ಬೆರಕೆಮಾಡಿದ ರೀತಿಯಲ್ಲಿ, ದೊಡ್ಡದಾದ ಬೆಲ್ಲದರಾಶಿಯಲ್ಲಿ ಬೇವಿನಕಾಯಿ ಸೇರಿಸಿದಂತೆ, ಪಾರಮಾರ್ಥಿಕವೆನಿಸಿದ ನಿತ್ಯಸುಖವೆಂಬ ಸಮುದ್ರವು ಭಯಂಕರವಾದ ಸಂಸಾರವೆಂಬ ದುಃಖ ಸೇರಿಕೊಂಡಿದೆ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * **ಸಾರಸುಧೆ**=ಶ್ರೇಷ್ಠವಾದ ಅಮೃತ; **ತೋರವಹ**=ದೊಡ್ಡದಾದ; * **ಬೇವೆಡೆಗೊಂಡ ತೆರನಂತೆ**=ಬೇವಿನಕಾಯಿ/ಸೊಪ್ಪು ಸೇರಿದಂತೆ; * **ಸುಖಸಾಕಾರಸಾಗರ**=ಆತ್ಮಸುಖನೆಂಬ ಸಮುದ್ರದಲ್ಲಿ; * **ಮಿಶ್ರಿತ**=ಸೇರಿಕೊಂಡಿರುವ; * **ಘೋರತರ**=ಭಯಂಕರವಾದ

---

## ಅಭ್ಯಾಸದ ಅಗತ್ಯ (೧೭–೨೧)

**ಇಂತು ನಿಜಸುಖ ಸಕಲದುಃಖಾ**
**ಕ್ರಾಂತವಾಗಿರೆ ಮಗನೆ, ನಿನಗಿ**
**ನ್ನೆಂತು ನಿತ್ಯಾನಂದ ತೋರ್ಪುದು ಚಪಲಚಿತ್ತದಲಿ? ।**
**ಸಂತತವು ಸಚ್ಛಾಸ್ತ್ರ ಗುರು ಪೇ**
**ಳ್ದಂತರಿಯಲೇಕಾಗ್ರ ಚಿತ್ತದ**
**ಲಂತವಿಲ್ಲದ ಸೌಖ್ಯ ತೋರುವದೆಂದನಾ ಮುನಿಪ ॥ ॥೧೭॥**

**ತಾತ್ಪರ್ಯ:** ಈ ರೀತಿಯಾಗಿ ಆತ್ಮಸುಖವು ಸಮಸ್ತದುಃಖಗಳಿಂದ ಆವರಿಸಿರುವಾಗ ಚಪಲಚಿತ್ತನಾದ ನಿನಗೆ ನಿತ್ಯವಾದ ಆನಂದವು ಹೇಗೆ ತಾನೆ ದೊರಕಲು ಸಾಧ್ಯ? ಆದಕಾರಣ ಸದಾಕಾಲ ಎಡೆಬಿಡದೆ ಏಕಾಗ್ರಚಿತ್ತದಿಂದ ಸಚ್ಛಾಸ್ತ್ರಗಳನ್ನು ಸದ್ಗುರು ಬೋಧೆಯಿಂದ ಕಲಿತಾಗ ಮಾತ್ರ ಅನಂತಸುಖವು ದೊರಕುವುದು ಎಂದು ವ್ಯಾಸರು ಶುಕನಿಗೆ ತಿಳಿಸಿದರು.

**ಶಬ್ದಾರ್ಥ:** * ನಿಜಸುಖ=ಆತ್ಮಸುಖ; * ಆಕ್ರಾಂತವಾಗಿರೆ=ಆವರಿಸಿರಲು; * ಚಪಲಚಿತ್ತ=ಚಂಚಲ ಮನಸ್ಸಿನವನು; * ತೋರ್ಪುದು=ದೊರಕುವುದು; * ಸಂತತವು=ಎಡಬಿಡದೆ; * ಅಂತವಿಲ್ಲದ ಸೌಖ್ಯ=ಅನಂತಸುಖ; * ಸಚ್ಛಾಸ್ತ್ರ=ಶ್ರೇಷ್ಠ ವೇದಾಂತವಿದ್ಯೆ; * ಮುನಿಪ=ವೇದವ್ಯಾಸರು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಸತ್ಯ ಸಹಜಾನಂದಸಾಗರ**
**ವೆತ್ತನೋಡಿದಡತ್ತ ತುಂಬಿರ**
**ಲತ್ತಲಿತ್ತಲು ತುಳುಕಿಸೂಸುವ ತುಂತುರಿನ ತೆರದಿ ।**
**ಸತ್ಯಲೋಕಾರಭ್ಯವಪ್ಪೀ**
**ಸಪ್ತಲೋಕಂಗಳಲಿ ವಿಷಯಸು**
**ಖಿತ್ವವೀಪರಿ ತೋರುತಿಹುದೀ ನಿತ್ಯಮುಕ್ತನಲಿ ॥ ॥೧೮॥**

**ತಾತ್ಪರ್ಯ:** ಸತ್ಯವಾಗಿಯೂ, ಸಹಜವಾಗಿಯೂ ಇರುವ ಆನಂದವೆಂಬ ಸಾಗರವು ಎತ್ತನೋಡಿದರೆ ಅತ್ತ ತುಂಬಿರುತ್ತ ತುಂತುರುಗಳನ್ನು ತುಳುಕಿಸಿ ಹೊರಚೆಲ್ಲುವ ರೀತಿಯಲ್ಲಿ ಸತ್ಯಲೋಕನೇ ಮೊದಲಾಗಿ ಏಳುಲೋಕಗಳ ಸಹಜಾನಂದದ ತುಂತುರಿನಂತೆ ವಿಷಯಸುಖಿತ್ವವು ನಿತ್ಯಮುಕ್ತವಾದ ಬ್ರಹ್ಮದಲ್ಲಿ ಏಕಾಕಾರವಾಗಿ ತುಂಬಿ ತುಳುಕಿರುತ್ತದೆ.

**ಶಬ್ದಾರ್ಥ:** ಸಪ್ತಲೋಕಗಳು=ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ (ಶ್ರೀವತ್ಸ ನಿಘಂಟು, ಪುಟ-೨೬೭ ನೋಡಿ ವಿವರಗಳಿಗೆ); * ಆರಭ್ಯ=ಮೊದಲ್ಗೊಂಡು; * ವಿಷಯಸುಖಿತ್ವ=ವಿಷಯಸೌಖ್ಯವು; * ಅಪ್ಪ=ಇರುವ.

**ಟಿಪ್ಪಣಿ:** ನಿತ್ಯಮುಕ್ತನಲಿ–ನಿತ್ಯಮುಕ್ತವಾದ ಬ್ರಹ್ಮದಲ್ಲಿ ಸಪ್ತಲೋಕಂಗಳು ತೋರಿ ಅದರಲ್ಲಿ ವಿಷಯಸುಖಿತ್ವವು ಸಹಜಾನಂದದ ತುಂತುರಿನಂತೆ ತೋರುತ್ತಿರುವದೆಂದು ತಾತ್ಪರ್ಯ.

**ಪಾಠಾಂತರ:** * ಸತ್ಯಲೋಕಾರಭ್ಯವಪ್ಪೀ=ಸತ್ಯಲೋಕಾರವಹಯೀ (ಕು)(ಅರಸೇ); * ವಿಷಯಸುಖಿತ್ವ=ವಿಷಯಸುಖತ್ವ (ಕು)

---

**ಯಮ, ನಿಯಮ ಮೊದಲಾದ ಯೋಗ**
**ಕ್ರಮದೊಳಭ್ಯಾಸವನು ಮಾಡಲು**
**ಶಮೆದಮಗಳಳವಟ್ಟು, ಚಿತ್ತದ ವೃತ್ತಿಗಳು ಕೆಟ್ಟು, ।**

ಭ್ರಮೆಯಡಗಿ, ವಿಷಯೇಚ್ಛೆಯಲಿ ನಿ
ರ್ಮಮತೆಯಾಗಿ, ಸಮಸ್ತದಲಿ ಮನ
ವಿಮಲವಾಗಿರೆ ನಿತ್ಯಸುಖಪ್ರತಿಫಲಿಸಿ ತೋರುವುದು ॥ ॥೧೯॥

ತಾತ್ಪರ್ಯ: ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂದು ಪ್ರಸಿದ್ಧವಾಗಿರುವ ಅಷ್ಟಾಂಗಯೋಗವನ್ನು ಕ್ರಮಬದ್ಧನಾಗಿ ಅಭ್ಯಾಸಮಾಡಿದರೆ ಚಿತ್ತದವೃತ್ತಿಗಳು ಕೆಟ್ಟು, ಮನೋನಿಗ್ರಹ ಮತ್ತು ಇಂದ್ರಿಯನಿಗ್ರಹ ಗುಣಗಳು ನೆಲೆಗೊಳ್ಳುವವು. ಆಗ ವಿಷಯಸುಖಾಭಿಲಾಷೆಯ ಭ್ರಾಂತಿಯು ಮರೆಯಾಗಿ ಅಹಂಕಾರ, ಮಮಕಾರ ಭಾವಗಳು ನಶಿಸಿ, ನಿರ್ಮೋಹಿಯಾಗುತ್ತಾನೆ. ಆಗ ಮನಸ್ಸು ನಿರ್ಮಲವಾಗಿ ನಿತ್ಯಸುಖ ಪ್ರತಿಫಲಿಸುತ್ತದೆ.

ಶಬ್ದಾರ್ಥ: * ವಿಮಲವಾಗಿ=ಪರಿಶುದ್ಧವಾಗಿ.

ಟಿಪ್ಪಣಿ: ಯಮ, ನಿಯಮ ಮೊದಲಾದ ಯೋಗ–ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂದು ಪ್ರಸಿದ್ಧವಾಗಿರುವ ಅಷ್ಟಾಂಗಯೋಗ (ವಿವರಗಳಿಗೆ ಅಧ್ಯಾಯ–೨, ಪದ್ಯ–೩೬ ನೋಡಿ)

---

ಚಿಂತೆಯಿಲ್ಲದ ಹೊತ್ತಿನಲಿ ಕೇ
ಳಂತರಂಗದ ವೃತ್ತಿಗಳನುಳಿ
ದಂತಿದಿಂತಿಂತೆನ್ನದೇ ಏಕಾಂತಮಾಗಿರಲು
ಅಂತವಿಲ್ಲದ ಸುಖವು ತೋರ್ಪುದ
ದೆಂತೆನಲು ನಿಶ್ಚಲದಲಿಪ್ಪ ಜ
ಲಾಂತದಲಿ ಬಿಂಬಿಸುವ ಛಾಯಾಕಾಂತನಂದದಲಿ ॥ ॥೨೦॥

ತಾತ್ಪರ್ಯ: ಎಲೈ ಶುಕನೇ ಕೇಳು, ಚಿಂತೆಯಿಲ್ಲದ ವೇಳೆಯಲ್ಲಿ ಎಂದರೆ ಅಷ್ಟಾಂಗ ಯೋಗಸಾಧನೆಮಾಡಿದಾಗ ಅಂತರಂಗದಲ್ಲಿ ಅದು ಹಾಗೆ ಇದು ಹೀಗೆ ಎಂಬ ಚಿತ್ತವೃತ್ತಿಗಳು ದೂರಸರಿದು ಮನಸ್ಸು ತದೇಕಚಿತ್ತವಾಗುತ್ತದೆ. ಆಗ ಕದಲದೆ ಇರುವ ನೀರಿನಲ್ಲಿ ಸೂರ್ಯನಬಿಂಬ ಕಾಣಿಸುವ ರೀತಿಯಲ್ಲಿ ಅನಂತಸುಖವು ಕಂಡುಬರುತ್ತದೆ.

ಶಬ್ದಾರ್ಥ: * ಚಿಂತೆಯಿಲ್ಲದ ಹೊತ್ತಿನಲಿ=ನೆಮ್ಮದಿಯ ಸಮಯದಲ್ಲಿ; * ವೃತ್ತಿಗಳು ಉಳಿದು =ಚಿತ್ತವೃತ್ತಿಗಳು ನಶಿಸಿ; ಅಂತವಿಲ್ಲದ ಸುಖ=ಅನಂತಸುಖ, ಶಾಶ್ವತಾನಂದ; ನಿಶ್ಚಲದಲಿಪ್ಪ ಜಲಾಂತದಲಿ =ಕದಡದೇ ಇರುವ ನೀರಿನಲ್ಲಿ; ಛಾಯಾಕಾಂತ=ಛಾಯಾದೇವಿಯ ಗಂಡನಾದ ಸೂರ್ಯ.

---

ಬೇಸರಿಕೆಯಿಲ್ಲದೆ, ಸಮಸ್ತ
ದೊಳಾಸೆಯೇನಂಕುರಿಸಿ ತೋರದೆ,
ವಾಸನೆಯ ತೊಡಕೇನು ಹೊದ್ದದೆ, ದುಃಖಸುಖವೆಂಬ ।

**ಲೇಶಮಾತ್ರವು ಪೊಳೆಯದಿಹ ವಿಷ**
**ಯಾಸಕತಿಯಳಿದಿರಲು ನಿಜಸುಖ**
**ಸೂಸಿ ಸಂತತ ತೋರುತಿಹುದೈ ಮಗನೆ ಕೇಳೆಂದ ॥ ॥೨೧॥**

**ತಾತ್ಪರ್ಯ:** ಸ್ವಲ್ಪವೂ ಬೇಸರವಿಲ್ಲದೆ, ಯಾವುದೇ ವಸ್ತುವಿನ ಮೇಲೆ ಸ್ವಲ್ಪವೂ ಆಸೆಯಿಟ್ಟುಕೊಳ್ಳದೆ ಸುಖದುಃಖಗಳೆಂಬ ವಾಸನೆಗಳೆಂಬ ಸಂಸ್ಕಾರಗಳನ್ನು ದೂರಮಾಡಿ ವಿಷಯಾಸಕ್ತಿಗಳನ್ನು ಕಿಂಚಿತ್ತೂ ಇಲ್ಲದಹಾಗೆ ಪರಿತ್ಯಾಗಮಾಡಿದಾಗ ನಿತ್ಯಸಹಜಾನಂದ ಲಭಿಸುತ್ತದೆ ಎಂದು ಶುಕನಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * **ಅಂಕುರಿಸಿ**=ಉಂಟಾಗೆ; * **ತೊಡಕು**=ತೊಂದರೆ; * **ಹೊದ್ದದೆ** =ಆವರಿಸಿಕೊಳ್ಳದೆ; * **ಲೇಶಮಾತ್ರವು**=ಕಿಂಚಿತ್ತಾದರೂ; **ಆಸಕತಿ**=ಆಸಕ್ತಿ; **ನಿಜಸುಖ**=ನಿತ್ಯ ಸಹಜಾನಂದ; **ಸೂಸಿ**=ಹೊರಹೊಮ್ಮೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

## ನಿತ್ಯಸುಖದ ಕುರುಹು (೨೨-೨೮)

**ಸುಳಿದು ಜಾಗ್ರತ್ಸ್ವಪ್ನಗಳಲತಿ**
**ಬಳಲಿ ದುಃಖಿಪ ಬುದ್ಧಿ ಪುಣ್ಯದ**
**ಬೆಳವಿಗೆಯಲೊಮ್ಮೊಮ್ಮೆ ಸುಪ್ತಾವಸ್ಥೆಯಾದಾಗ ।**
**ಬೆಳಗುತಿಹ ನಿಜಸುಖದೊಳಗೆ ತಾ**
**ಮುಳುಗಿ ಸುಖಿಸುತ್ತಿರ್ಪುದದರಿಂ**
**ತಿಳಿಯೆ ಸಹಜಾನಂದವಂತಿಂತೆಂಬುದರಿದೆಂದ ॥ ॥೨೨॥**

**ತಾತ್ಪರ್ಯ:** ಎಚ್ಚರ, ಕನಸುಗಳೆಂಬ ಅವಸ್ಥೆಗಳಲ್ಲಿ ಅತಿಯಾಗಿ ಬಳಲುತ್ತಾ ದುಃಖಿಸುವ ಬುದ್ಧಿಯು ಎಲ್ಲಿಯೋ ಒಂದೊಂದು ಸಲ ಸುಷುಪ್ತಿಯ ಅವಸ್ಥೆಗೆ ಯಾವುದೋ ಪುಣ್ಯವಿಶೇಷದಿಂದ ಬಂದಾಗ ನಿಜಾನಂದದಲ್ಲಿ ಮುಳುಗಿಸುಖಿಸುತ್ತದೆ. ಅದರಿಂದ ಸಹಜಾನಂದದ ಸ್ವರೂಪವನ್ನು ಹೀಗೆ ಹಾಗೆ ಎಂದು ನಿರ್ದಿಷ್ಟವಾಗಿ ತಿಳಿಯ ಲಾಗುವುದಿಲ್ಲ.

**ಶಬ್ದಾರ್ಥ:** * **ಜಾಗ್ರತ್**=ಎಚ್ಚರ ಅವಸ್ಥೆ; * **ಸುಪ್ತಾವಸ್ಥೆ**=ನಿದ್ರಾವಸ್ಥೆ; * **ಸ್ವಪ್ನ**=ಕನಸಿನ ಅವಸ್ಥೆ; **ನಿಜಸುಖ**=ಆತ್ಮಾನಂದ; * **ತಿಳಿಯೆ ಅರಿದು**=ತಿಳಿಯಲಾಗುವುದಿಲ್ಲ; * **ಅಂತಿಂತು**=ಹಾಗೆ ಹೀಗೆ; * **ಪುಣ್ಯದ ಬೆಳವಿಗೆ**=ಪುಣ್ಯ ವಿಶೇಷ, ಪುಣ್ಯದ ಬೆಳಕು.

**ಟಿಪ್ಪಣಿ-೧:** ಎಚ್ಚರದಲ್ಲಿ ಸ್ಥೂಲಸೂಕ್ಷ್ಮ ಕಾರಣ ಶರೀರಗಳಿರುತ್ತದೆ. (ಸ್ವಪ್ನ) ಕನಸಿನಲ್ಲಿ ಸ್ಥೂಲಶರೀರದ ಹೊರತು ಇರುತ್ತದೆ (ಸುಷುಪ್ತಿ) ನಿದ್ರೆಯಲ್ಲಿ ಅವಿದ್ಯೆಯೆಂಬ ಸೂಕ್ಷ್ಮಕಾರಣಶರೀರ ಒಂದೇ ಇರುತ್ತದೆ (ವಿವರಗಳಿಗೆ ಅ-೩, ಪ-೬೭ರನ್ನು ನೋಡಿ).

ಟಿಪ್ಪಣಿ-೨: ಜಾಗ್ರತ್ ಅವಸ್ಥೆ=ಜಾಗ್ರತ್ತಿನಲ್ಲಿ ಆಗುವ ಸ್ವರೂಪದ ಸಾಕ್ಷಾತ್ಕಾರ; ಸ್ವಪ್ನಾವಸ್ಥೆ =ಭೂತಕಾಲದ ವಿಷಯವೆಂಬ ಮನೋರಜ್ಯ; ಸುಷುಪ್ತಿ ಅವಸ್ಥೆ=ಭ್ರಮೆಯಿಂದ ಆಗುವ ಜಡರೂಪವಾದ ವೃತ್ತಿ (ಶ್ರುತಿವಿಚಾರ ಚಂದ್ರೋದಯ, ಪುಟ-೨೨೨)

---

**ರಾಗವುದಿಸದೆ ಮನಕೆ, ತನುವಿಗೆ**
**ರೋಗವೆಂಬುದು ಹೊದ್ದದೇ, ಉ**
**ದ್ವೇಗವೆಂಬೀ ತೊಡಕು ತೋರದೆ, ಹಸಿವುತೃಷೆಯೆಂಬ ।**
**ಬೇಗೆಯಸುವನು ಬಾಧಿಸದೆ, ದೃಢ**
**ವಾಗಿ ವಾಸನೆಯಡಗಲಾ ಸುಖ**
**ಸಾಗರದೊಳುಲುಹಡಗಿದಂತಿಹುದೆಂದನಾ ಮುನಿಪ ॥ ॥೨೩॥**

**ತಾತ್ಪರ್ಯ:** ಮನಸ್ಸಿನಲ್ಲಿ ಆಸೆಆಕಾಂಕ್ಷೆಗಳು ಹುಟ್ಟದೆ, ಶರೀರಕ್ಕೆ ರೋಗಗಳು ಅಂಟದಂತೆ, ಯಾವುದೇ ಕಾರಣದಲ್ಲಿ ಭಾವಾವೇಶದ ಜಂಜಾಟದಲ್ಲಿ ತೊಡಗದೆ ಹಸಿವು, ಬಾಯಾರಿಕೆಗಳೆಂಬ ತಾಪಗಳಿಂದ ಜೀವವನ್ನು ಬಳಲಿಸದೆ, ವಿಷಯ ವಾಸನೆಗಳು ಸ್ಥಿರವಾಗಿ ನಶಿಸಿದಾಗ ಸಹಜಾನಂದವೆಂಬ ಸುಖಸಾಗರದಲ್ಲಿ ಯಾವುದೇ ವಿಕಾರಗಳೆಂಬ ಅಲೆಗಳ ಸದ್ದು ಮರೆಯಾಗಿ ಪ್ರಶಾಂತತೆ ನೆಲಸಿರುವುದು.

**ಶಬ್ದಾರ್ಥ:** ಉಲುಹು=ಸದ್ದು; * ರಾಗ=ಅನುರಕ್ತಿ, ಆಸೆಆಕಾಂಕ್ಷೆಗಳು; ತನುವಿಗೆ=ಶರೀರಕ್ಕೆ; ರೋಗ=ಜಾಡ್ಯ; * ಹೊದ್ದದೆ=ಅಂಟದೆ; * ಉದ್ದೇಶ=ಭಾವಾವೇಶ; ತೃಷೆ=ಬಾಯಾರಿಕೆ; * ಬೇಗೆ=ತಾಪ; ಬಾಧಿಸದೆ=ತೊಳಲಿಸದೆ; ದೃಢವಾಗಿ=ಬಲವಾಗಿ, ಸ್ಥಿರವಾಗಿ; ವಾಸನೆ=ವಿಷಯವಾಸನೆ, ಅಡಗಿದಂತೆ=ಮರೆಯಾದಂತೆ.

* ಪಾಠಾಂತರ: * ಉದ್ವೇಗವೆಂಬೀ=ಉದ್ಯೋಗವೆಂಬೀ (ಕು); * ವಾಸನೆಯಡಗಲಾ =ವ್ಯಸನವಮರತಡಾ (ಕು)

---

**ಕತ್ತಲೆಯ ಕಾಲಾಟವಡಗಿರ**
**ಲೆತ್ತ ನೋಡಿದೊಡತ್ತ ಬೆಳಕಿನ**
**ಮೊತ್ತವೆಡೆಗೊಂಡಿಪ್ಪ ತೆರದಲಿ ಸಂಸೃತಿಯ ದುಃಖ ।**
**ಉತ್ತರಿಸಿ ಹೋದಾಗ ನಿಜಸುಖ**
**ವೊತ್ತರಿಸಿ ಹೊರಹೊಮ್ಮಿ ತೋರುವ**
**ದುತ್ತಮನೆ, ಇದು ನಿತ್ಯಸುಖವೆಂದರಿತುಕೊ ಎಂದ ॥ ॥೨೪॥**

**ತಾತ್ಪರ್ಯ:** ಕತ್ತಲೆಯ ಸಂಚಾರನಿಂತಾಗ ಎಲ್ಲಿ ನೋಡಿದರಲ್ಲಿ ಬೆಳಕಿನರಾಶಿ ತುಂಬಿಕೊಂಡಿರುವುದಷ್ಟೇ. ಅದೇರೀತಿಯಲ್ಲಿ ಸಂಸಾರದುಃಖವೆಂಬ ಕತ್ತಲೆಯು ತೊಲಗಿಹೋದಾಗ ಆತ್ಮಾನಂದವೆಂಬ ಬೆಳಕು ದಟ್ಟವಾಗಿ ಹೊರಹೊಮ್ಮಿ ಕಾಣಿಸಿಕೊಳ್ಳುತ್ತದೆ. ಅದೇ ಸ್ಥಿರಸುಖವೆಂದು ತಿಳಿ.

**ಶಬ್ದಾರ್ಥ:** ಉತ್ತರಿಸಿ=ದಾಟಿ, ಕಳೆದು; * ಕಾಲಾಟ=ಸಂಚಾರ; * ಎತ್ತ=ಎಲ್ಲಿ; * ಅತ್ತ=ಅಲ್ಲಿ; * ಬೆಳಕಿನ ಮೊತ್ತ=ಬೆಳಕಿನರಾಶಿ; * ಸಂಸ್ಕೃತಿ=ಸಂಸಾರ; ನಿಜಸುಖ=ಆತ್ಮಾನಂದ, ಸಹಜಾನಂದ; ನಿತ್ಯಸುಖ=ಸ್ಥಿರಸುಖ, ಶಾಶ್ವತಾನಂದ, ಸಹಜಾನಂದ.

---

ಉಮ್ಮಳಿಸುತಡಿಗಡಿಗೆ ಸಂಸ್ಕೃತಿ
ಬಿಮ್ಮನಿಂದೊಳಗೊಳಗೆ ತೋರುವ
ಹಮ್ಮಳಿಯೆ ಪರಿವೇಷವಡಗಿದ ಸೂರ್ಯನಂದದಲಿ ।
ಬ್ರಹ್ಮಸುಖವೊತ್ತರಿಸಿ ಪೊಳೆವುದು
ನಿರ್ಮಲ ನಿರಾತಂಕ ನಿಶ್ಚಲ
ಧರ್ಮವಾದಪರೋಕ್ಷದನುಭವ ಬುದ್ಧಿಯೊಳಗೆಂದ ॥ ॥೨೫॥

**ತಾತ್ಪರ್ಯ:** ಮತ್ತೆ ಮತ್ತೆ ತಾಪತ್ರಯಗಳು ಸಂಸಾರದಲ್ಲಿ ಉಕ್ಕಿಬಂದಾಗ ಬಿಗುಮಾನದಿಂದ ಮೆರೆಯುವವನ ಅಹಂ ಅಳಿದಾಗ ಆವರಿಸಿದ ಬೆಳಕಿನವಲಯ ಇಲ್ಲದಂತಾದ ಸೂರ್ಯನಹಾಗೆ ಬ್ರಹ್ಮಾನಂದವು ಉಕ್ಕುಕ್ಕಿ ಬರುತ್ತದೆ. ಆಗ ಪರಿಶುದ್ಧವಾದ ಅಬಾಧಿತವಾದ ಸ್ಥಿರಧರ್ಮವೆನಿಸಿದ ಅಪರೋಕ್ಷಾನುಭವವು (ಬ್ರಹ್ಮಾನಂದವು) ಬುದ್ಧಿಗೆ ಹೊಳೆಯುತ್ತದೆ.

**ಶಬ್ದಾರ್ಥ:** * ಹಮ್ಮಿ=ಅಹಂಕಾರ; * ಬಿಮ್ಮು=ಬಿಗುಮಾನ; ಉಮ್ಮಳಿಸುತ್ತ=ಉಕ್ಕುತ್ತ; ಪರಿವೇಷ =ದುಂಡಗೆ ಸುತ್ತಲೂ ಮೂಡಿದ ರೇಖೆ, ಬೆಳಕಿನ ವಲಯ; * ನಿರ್ಮಲ=ಪರಿಶುದ್ಧ; * ನಿರಾತಂಕ =ಅಬಾಧಿತ; ನಿಶ್ಚಲ=ಸ್ಥಿರ; ಅಪರೋಕ್ಷಾನುಭವ=ಪ್ರತ್ಯಕ್ಷಾನುಭವ, ಬ್ರಹ್ಮಾನುಭವ ......; ಒತ್ತರಿಸಿ=ಉಕ್ಕುತ್ತ

---

ಸುರತಕಾಲದಿ ಪುರುಷ ಮಾಡುವ
ಹಿರಿದು ಸಂಕ್ಲೇಶವನು ಕಾಮಿನಿ
ಯರಿಗೆ ಹಿತವಾಗದನವರು ಸುಖವೆಂದು ಕಾಂಬಂತೆ ।
ಭರಿತ ಪರಮಾನಂದದೊಳು ತಾ
ಬೆರೆದು ತನ್ಮಯನಾಗಿರಲು ಸಂ
ಸರಣದುಃಖವದೆಲ್ಲ ಸುಖಮಯವಾಗಿ ತೋರುವುದು ॥ ॥೨೬॥

**ತಾತ್ಪರ್ಯ:** ರತಿಕ್ರೀಡೆಯ ಸಮಯದಲ್ಲಿ ಪುರುಷರು ಮಾಡುವ ಹಿಂಸೆಯನ್ನು ಕಾಮಿನಿಯು ಹಿತವೆಂದು ತಿಳಿದು, ಅವರು ಅದೇ ಸುಖವೆಂದು ಭಾವಿಸುವ ಹಾಗೆ, ಪರಿಪೂರ್ಣವೆನಿಸಿದ ಅದ್ವೈತವಾದದಲ್ಲಿ ತಲ್ಲೀನನಾದ ಯೋಗಿಗೆ ಸಂಸಾರದ ದುಃಖದುಮ್ಮಾನಗಳೆಂಬ ಕ್ಲೇಶಗಳೆಲ್ಲವನ್ನೂ ಸುಖಕರವೆಂದೇ ಭಾವಿಸುತ್ತಾನೆ.

---

ಸುರತ ಸುಖದಲಿ ದೇಹಭಾವವ
ಮರೆದು ತನ್ಮಯವಾಗಿ ತೋರುವ
ತೆರದಲಪರೋಕ್ಷಾನುಭವವಾದದ್ವಯಾನಂದ ।
ಭರಿತವಾಗಿಹ ಯೋಗಿಯನ್ಯವ
ಮರೆದು ತಾದಾತ್ಮ್ಯದಲಿ ಸತ್ತಾ
ಸ್ಫುರಣಮಾತ್ರವೆ ಆಗಿ ನಿಶ್ಚೇಷ್ಟೆಯಲಿ ನಿಂದಿಹನು ॥ ॥೨೭॥

ತಾತ್ಪರ್ಯ: ಮದನಕೇಳಿ ಕಾಲದ ಸುಖಾನುಭವದಲ್ಲಿ ದೇಹದ ಅಸ್ತಿತ್ವವನ್ನೇ ಮರೆತು ತಲ್ಲೀನಚಿತ್ತರಾಗುವ ರೀತಿಯಲ್ಲಿ ಪ್ರತ್ಯಕ್ಷಾನುಭವಸಿದ್ಧವಾದ ಬ್ರಹ್ಮಾನಂದದಲ್ಲಿ ಮುಳುಗಿದ ಯೋಗಿಯು ಉಳಿದೆಲ್ಲವನ್ನು ಮರೆತು ಬ್ರಹ್ಮತಲ್ಲೀನತೆಯಲ್ಲಿ ತಾನೇತಾನಾಗಿ ನಿಶ್ಚಲತೆಯಿಂದಿರುತ್ತಾನೆ.

ಶಬ್ದಾರ್ಥ: * ಸುರತಸುಖ=ರತಿಕ್ರೀಡೆಯಸುಖ, ಮದನಕೇಳಿ; * ತನ್ಮಯ=ತಲ್ಲೀನ; * ಅದ್ವಯಾನಂದ =ಬ್ರಹ್ಮಾನಂದ; ತಾದಾತ್ಮ್ಯ=ತಲ್ಲೀನತೆ; ಸತ್ತಾಸ್ಫುರಣಮಾತ್ರವೇ ಆಗಿ=ನಾನೊಬ್ಬನೇ ಇದ್ದೇನೆಂಬ ಅರಿವು; * ನಿಶ್ಚೇಷ್ಟೆ=ನಿಶ್ಚಲತೆ; * ನಿಂದಿಹನು=ನಿರತನಾಗಿಹನು.

ಟಿಪ್ಪಣಿ: ಈ ಪದ್ಯವು ಬೃಹದಾರಣ್ಯ ಶ್ರುತಿಯ ಕೆಳಗಿನ ಶ್ಲೋಕದ ಅನುವಾದವಾಗಿದೆ.

ತದ್ಯಥಾ ಪ್ರಿಯಯಾ ಸಂಪರಿಷ್ವಕ್ತೋ ನ ಬಾಹ್ಯಂ
ಕಿಂಚನ ವೇದನಾಂತರಮೇವಮೇವಾಯಂ ಪುರುಷಃ
ಪ್ರಾಜ್ಞೇನಾತ್ಮನಾ ಸಂಪರಿಷಾಕ್ತೋನ ಬಾಹ್ಯಂ
ಕಿಂಚನ ವೇದನಾಂತರಂ ॥ (ಬೃಹದಾರಣ್ಯಕೋಪನಿಷತ್ತು)

---

ಸುಖದ ಸೋನೆಯೆನಿಪ್ಪ ತಾನೇ
ನಿಖಿಲವಾದಿಂದ್ರಿಯಗಳಲಿ ವ್ಯಾ
ಪಕನೆನಿಸುತಿಹ; ಪುಣ್ಯಫಲದಿಂದೆತ್ತಲಾನೊಮ್ಮೆ ।
ಸಕಲ ತನುಕರಣಗಳು 'ಹಾ!' ಎಂ
ದಕಟ ತನ್ಮಯವಾಗೆ ಸುಖದೊಳು
ವಿಕಲಮತಿಗಳು ವಿಷಯಸುಖವೆಂದೆಂಬರದನೆಂದ ॥ ॥೨೮॥

ತಾತ್ಪರ್ಯ: ಆತ್ಮನು ಸುಖದಸುಪ್ಪತ್ತಿಗೆ ಎನ್ನಿಸಿಕೊಂಡು, ಆನಂದಸ್ವರೂಪನಾಗಿ, ತಾನೇತಾನಾಗಿ ಸಮಸ್ತ ಇಂದ್ರಿಯಗಳಲ್ಲಿ ವ್ಯಾಪಕನಾಗಿದ್ದಾನೆ. ಆದರೆ ಯಾವಾಗಲೋ ಒಮ್ಮೆ ಯಾವುದೋ ಪುಣ್ಯವಿಶೇಷದಿಂದ ಶರೀರವೂ, ಕರಣಗಳೂ ನಶ್ವರ ಸುಖಾನುಭವಹೊಂದಿ, ಆಹಾ! ಎಂದು ಆನಂದಪರವಶತೆಹೊಂದಿದಾಗ ಬುದ್ಧಿಹೀನರು ಆ ನಶ್ವರ ಇಂದ್ರಿಯಸುಖವನ್ನೇ ನಿಜವಾದ ಸಾಂಸಾರಿಕಸುಖವೆಂದು ತಿಳಿಯುವರು, ನಿಜವಾದ ಆತ್ಮಾನಂದಸುಖವನ್ನು ತಿಳಿಯುವುದಿಲ್ಲ.

**ಶಬ್ದಾರ್ಥ:** ಸೋನೆ=ತುಂತುರುಮಳೆ; ನಿಖಿಲವಾದ=ಸಮಸ್ತ; ವ್ಯಾಪಕ=ಹರಡಿದನು; ಪುಣ್ಯಫಲದಿಂದ=ಪುಣ್ಯವಿಶೇಷದಿಂದ; ತನು=ಶರೀರ; ವಿಕಲನೇತಿಗಳು=ಬುದ್ಧಿಹೀನರು; ವಿಷಯಸುಖ=ಸಂಸಾರಸುಖ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಎತ್ತಲಾನೊಮ್ಮೊಮ್ಮೆ ದುಃಖದಿ**
**ಸುತ್ತಿಸುಳಿದಾಡುತ್ತ ಬಳಲಿದ**
**ಚಿತ್ತ ನಿದ್ರೆಯ ಹೊಂದಿ ಮೈಮರೆದಿದ್ದ ಕಾಲದಲಿ ।**
**ನಿತ್ಯಸುಖವುಚ್ಚಳಿಸಿ ಹೊಳೆಯಲು**
**ಮತ್ತದನು ನಿದ್ರೆಯೊಳಗನುಭವಿ**
**ಸುತ್ತ ನಿದ್ರಾನಂದವೆಂಬರು ಮರುಳರೆಲೆ ಕೇಳಾ ॥ ॥೨೯॥**

**ತಾತ್ಪರ್ಯ:** ಯಾವಾಗಲೋ ಒಮ್ಮೊಮ್ಮೆ ಅತೀವದುಃಖದಿಂದ ತೊಳಲಿಬಳಲಿದ ಮನಸ್ಸು ನಿದ್ರಾವಸ್ಥೆಯಲ್ಲಿ ಮೈಮರೆತಿದ್ದಾಗ ಆತ್ಮಸುಖ ಹೊರಹೊಮ್ಮಿ ಪ್ರಕಾಶಿಸಿದರೆ ಅದನ್ನು ನಿದ್ರಾವಸ್ಥೆಯಲ್ಲಿ ಅನುಭವಿಸಿ ಅದನ್ನೇ ನಿದ್ರಾನಂದವೆಂದು ಸುಖಿಸುತ್ತಾರೆ. ಅಂಥವರು ಹುಚ್ಚರೇ ಸರಿ. (ಸಹಜಾನಂದಸ್ವರೂಪ ತಿಳಿಯದ್ದರಿಂದ ಅವರು ಮರುಳರು).

**ಶಬ್ದಾರ್ಥ:** ಎತ್ತಲಾನು=ಎಂದೋ ಒಂದೊಂದು ಸಲ, ಯಾವಾಗಲೋ; ಸುತ್ತಿಸುಳಿದಾಡುತ್ತಾ =ತೊಳಲಿಬಳಲುತ್ತ; ಉಚ್ಚಳಿಸಿ=ಹೊರಹೊಮ್ಮಿ; ಮೂಳರು=ಹುಚ್ಚರು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಅದು ನಿಮಿತ್ತದಲಾತ್ಮಸುಖ ತನ**
**ಗುದಿಸುವುದು ನಿಸ್ಸಂಗವಳವಡೆ**
**ವಿದಿತವಾದೈದನೆಯ ಭೂಮಿಕೆಯಲ್ಲಿ ಸಾಧಕಗೆ; ।**
**ಪುದಿದ ಚಿದಚಿತ್ತುಗಳ ಭೇದವ**
**ವಿಧಿಸಿ ತಿಳಿಯಲು ಮೋಕ್ಷವೆರಡರ**
**ಲೊದವಿಕೊಂಡಿರೆ ಬಂಧವದು; ಶುಕಯೋಗಿ ಕೇಳೆಂದ ॥ ॥೩೦॥**

**ತಾತ್ಪರ್ಯ:** ಆಕಾರಣದಿಂದ ಅಭ್ಯಾಸಶೀಲನಿಗೆ (ಸಾಧಕನಿಗೆ) ನಿಸ್ಸಂಗವೆಂಬ ಮೂರನೆಯ ಭೂಮಿಕೆ ಆದಮೇಲೆ ನಾಲ್ಕನೆಯದಾದ ವಾಸನಾಕ್ಷಯದಲ್ಲಿ ಜ್ಞಾನೋದಯವಾಗಿ ಐದನೆಯ ಭೂಮಿಕೆಯಾದ ಆನಂದಿನಿಯಲ್ಲಿ ಆತ್ಮಸುಖವು ಅರಿವಾಗುತ್ತದೆ. ಆಗ ಈ ಐದನೆಯ ಭೂಮಿಯಲ್ಲಿ ಚಿತ್ತು ಅಚಿತ್ತುಗಳ ಭೇದವನ್ನು ನಿರ್ಣಯಿಸಿ ತಿಳಿದುಕೊಳ್ಳಲು ಶಕ್ತನಾಗುತ್ತಾನೆ. ಅಚಿತ್ತನ್ನು ಬಿಟ್ಟು ಚಿತ್ತನ್ನು

ಹಿಡಿಯುವುದೇ ಮೋಕ್ಷ; ಚಿತ್ತು ಅಚಿತ್ತುಗಳ ಭೇದವರಿಯದೆ ಒಂದನ್ನು ಇನ್ನೊಂದನ್ನಾಗಿ ತಿಳಿದು ವ್ಯವಹರಿಸುವುದೇ ಬಂಧ ಎಂದು ಅರಿಯುತ್ತಾನೆ ಎಂದು ಶುಕಯೋಗಿಗೆ ವ್ಯಾಸರು ಹೇಳಿದರು.

**ಶಬ್ದಾರ್ಥ:** * ನಿಸ್ಸಂಗ=ಮೂರನೆಯ ಭೂಮಿಕೆ; * ವಿದಿತವು=ವ್ಯಕ್ತವು; * ಐದನೆಯ ಭೂಮಿಕೆ =ಆನಂದಿನಿ ಎಂಬುದು; * ಪುದಿದ=ಒಳಗೊಂಡ; * ವಿಧಿಸಿ=ನಿರ್ಣಯಿಸಿ; ಎರಡರಲಿ ಒದವಿಕೊಂಡಿರೆ ಬಂಧವದು=ಚಿತ್ತು ಅಚಿತ್ತುಗಳ ಇವೆರಡರ ಭೇದವನ್ನರಿಯದೆ ಒಂದನ್ನು ಇನ್ನೊಂದನ್ನಾಗಿ ಅರಿತು ವ್ಯವಹರಿಸುವುದು; ಪುದಿದ ಚಿದಚಿತ್ತುಗಳ ಭೇದವ ವಿಧಿಸಿ ತಿಳಿಯಲು ಮೋಕ್ಷ=ಚಿತ್ತು ಅಚಿತ್ತು (ಜಡ) ಇವೆರಡರ ಭೇದವನ್ನು ತಿಳಿದು ಅಚಿತ್ತನ್ನು ಬಿಟ್ಟು ಚಿತ್ತನ್ನು ನಿರ್ಣಯಬುದ್ಧಿಯಿಂದ ಹಿಡಿಯುವುದೇ ಮೋಕ್ಷ.

**ಟಿಪ್ಪಣಿ:** ಇಲ್ಲಿ ೩-೩೮ನೇ ಪದ್ಯದ ವಿವರವನ್ನು ನೆನಪಿಸಿಕೊಳ್ಳಬೇಕು.

---

**ಅನ್ನಮಯ ಮೊದಲಾದ ಕೋಶಗ**
**ಳನ್ಯವಲ್ಲೆಂಬಾತ್ಮಬುದ್ಧಿಯೆ**
**ಬನ್ನಬಡಿಸುವ ಬಂಧನವು; ತಾನಲ್ಲವೆಂದೆಂಬ ।**
**ಭಿನ್ನಬುದ್ಧಿಯೆ ಮೋಕ್ಷ; ನಿಜ ಚೈ**
**ತನ್ಯರೂಪಗೆ ನಿತ್ಯಮುಕ್ತಗ**
**ನನ್ಯನಾತ್ಮಂಗಿಲ್ಲ; ಬುದ್ಧಿಗೆ ಬಂಧಮೋಕ್ಷಗಳು ॥** ॥೩೧॥

**ತಾತ್ಪರ್ಯ:** ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶ, ವಿಜ್ಞಾನಮಯಕೋಶ, ಆನಂದಮಯಕೋಶ ಎಂಬ ಪಂಚಕೋಶಗಳು ತನ್ನಿಂದ ಬೇರೆಯಿಲ್ಲ, ತಾನೇ ಅವುಗಳು ಎಂದು ತಿಳಿಯದೆ ಅವುಗಳಿಂದ ಕೋಟಲೆಗೊಳ್ಳುವ ಆತ್ಮಬುದ್ಧಿಯೇ ಮೋಕ್ಷಕ್ಕೆ ಅಡ್ಡಿಬಡಿಸುವ ಬಂಧನ. ಆ ಪಂಚಕೋಶಗಳು ತಾನಲ್ಲ ಎಂದರೆ ಆ ಬಂಧಮೋಕ್ಷಗಳು ಬುದ್ಧಿಗೆ ಸಂಬಂಧಪಟ್ಟವು ಎಂದು ತಿಳಿಯುವ ಪ್ರತ್ಯಕ್‌ಬುದ್ಧಿಯೇ ಮೋಕ್ಷ. ಆದಕಾರಣ ಚೈತನ್ಯಸ್ವರೂಪನಾದ ನಿತ್ಯಮುಕ್ತನಿಗೆ ಬಂಧಮೋಕ್ಷಗಳಿಲ್ಲ. ಅವು ಬುದ್ಧಿಗೆ ಸಂಬಂಧಪಟ್ಟವು.

**ಶಬ್ದಾರ್ಥ:** ಭಿನ್ನಬುದ್ಧಿಯೆ=ಪಂಚಕೋಶಗಳಿಂದ ತಾನು ಬೇರೆ ಎಂದ ಬುದ್ಧಿ; ಬನ್ನಬಡಿಸುವ= ಕೋಟಲೆಗೊಳಿಸುವ

---

**ದೇಹವೇ ತಾನೆಂದು ಮಾಯಾ**
**ಮೋಹಪಾಶದಿ ಬದ್ಧನಾಗಿಹ;**
**ದೇಹವದು ಘಟದಂತೆ ಭೌತಿಕವಂತು ತಾನಲ್ಲ; ।**

**ದೇಹಧರ್ಮವನರಿವ ಸಾಕ್ಷಿಯೆ**
**ಸೋಹಮೆನಿಪಾ ಪ್ರತ್ಯಗಾತ್ಮನು**
**ಮೋಹರಹಿತನು, ನಿತ್ಯಮುಕ್ತನು ಮಗನೆ ಕೇಳೆಂದ ॥ ॥೩೨॥**

**ತಾತ್ಪರ್ಯ:** ದೇಹವೇ ತಾನೆಂಬ ಮಾಯೆಯೆಯನ್ನುವ ಮೋಹದ ಬಲೆಯಲ್ಲಿ ಸಿಲುಕಿಕೊಂಡಿದ್ದಾನೆ. ಆದರೆ ತಾನು ಎಂದರೆ ಆತ್ಮನು ಜೀವನು ದೇಹವನ್ನು ಮಡಕೆಯಂತೆ ಭೌತಿಕವಾದುದೆಂದು ತಿಳಿದಿದ್ದಾನೆಯೇ ಹೊರತು ದೇಹವೇ ತಾನೆಂದು ತಿಳಿದಿಲ್ಲ. ದೇಹಧರ್ಮವನ್ನು ತಿಳಿಯತಕ್ಕ ಸಾಕ್ಷೀಭೂತನಾದ ಆತ್ಮನೇ (ಆ ಪರಬ್ರಹ್ಮನೇ ನಾನೆಂಬುವವನು) ಪ್ರತ್ಯಗಾತ್ಮನೂ, ಮೋಹವಿಲ್ಲದವನೂ, ನಿತ್ಯಮುಕ್ತನೂ ಆಗಿದ್ದಾನೆ ಕೇಳು.

**ಶಬ್ದಾರ್ಥ: ಮಾಯಾಮೋಹಪಾಶದಿ**=ಮಾಯೆಯೆಂಬ ಮೋಹದ ಬಲೆಯಲ್ಲಿ; **ಅಂತು ತಾನಲ್ಲ**=ತಾನು ಎಂದರೆ ಆತ್ಮವು; **ಘಟದಂತೆ ಭೌತಿಕವಲ್ಲ**=ವಾಡಿಕೆಯಂತೆ ಶಾರೀರಿಕವಲ್ಲ; **ಸೋಹಂ ಎನಿಪಾ**=ಆ ಪರಬ್ರಹ್ಮನೇ ತಾನೆನ್ನುವ.

---

**ದೇಹವದು ಜಡನಾತ್ಮನಜಡನು;**
**ದೇಹವದು ಸಾವಯವವಾತ್ಮನ**
**ನೂಹಿಸಲು ನಿರವಯವ; ದೇಹವಪಾತ್ರವಧ್ರುವವು, ।**
**ಓಹೋ! ಪಾವನನಾತ್ಮ ನಿತ್ಯನು;**
**ದೇಹ ಕರ್ಮದಿ ಬದ್ಧನಾತ್ಮನು**
**ಮೋಹರಹಿತನು ನಿತ್ಯಮುಕ್ತನು; ಮಗನೆ ಕೇಳೆಂದ ॥ ॥೩೩॥**

**ತಾತ್ಪರ್ಯ:** ದೇಹಧರ್ಮ ಮತ್ತು ಆತ್ಮಧರ್ಮಗಳಿಗಿರುವ ವ್ಯತ್ಯಾಸವನ್ನು ಈ ಪದ್ಯದಲ್ಲಿ ಹೇಳಲಾಗಿದೆ: ಈ ದೇಹವಾದರೋ ಜಡಸ್ವರೂಪದ್ದು, ಆತ್ಮವಾದರೋ ಚೈತನ್ಯಸ್ವರೂಪದ್ದು ದೇಹವು ಅಂಗಾಂಗಸಹಿತವಾದುದು; ಆತ್ಮನನ್ನು ಕಲ್ಪಿಸಿಕೊಂಡಾಗ ನಿಜಕ್ಕೂ ಅಂಗಾಂಗರಹಿತನಾಗಿದ್ದಾನೆ; ದೇಹವು (ಅಪಾತ್ರವೂ, ಅಧ್ರುವವೂ ಆಗಿದೆ); ಸ್ವೀಕಾರಯೋಗ್ಯವಲ್ಲದ್ದೂ, ನಶ್ವರವೂ ಆಗಿದೆ. ಆಹಾ! ಆತ್ಮನಾದರೋ ಪರಿಶುದ್ಧನೂ, ಶಾಶ್ವತನೂ ಆಗಿದ್ದಾನೆ; ದೇಹವು ಪಾಪ-ಪುಣ್ಯಕರ್ಮಗಳಿಗೆ ಒಳಗಾದುದು. ಆತ್ಮನು ಮೋಹಾತೀತನೂ, ನಿತ್ಯಮುಕ್ತನೂ ಆಗಿದ್ದಾನೆ.

**ಶಬ್ದಾರ್ಥ:** * **ಜಡನು**=ಚೈತನ್ಯರಹಿತನು; * **ಅಜಡನು**=ಚೈತನ್ಯರೂಪಿ; * **ಸಾವಯವವು**=ದೇಹವು ಅಂಗಾಂಗ ಮುಕ್ತವಾದುದು; * **ನಿರವಯವ**=ಅಂಗಾಂಗರಹಿತನು ಆತ್ಮನು; * **ಕರ್ಮಾದಿಬದ್ಧನು**=ಪಾಪ-ಪುಣ್ಯಕರ್ಮಗಳಿಗೆ ಬದ್ಧವು ದೇಹವು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಅರಿಯದಜ್ಞರು ತನುವು ತಾವೆಂ
ದರಿವರಾ ಅಸು ಸಹಿತಲಾತ್ಮನು
ಹೊರವಡಲು ಹೆಣನೆನಿಸಿ ಹೇಳಿಸಿಕೊಂಬುದಾಕ್ಷಣಕೆ; ।
ಪರಮಚೈತನ್ಯಾತ್ಮ ನಾನೆಂ
ದರಿಯೆ ಮುಕ್ತನು; ತಿಳಿಯದೀ ತನು
ಕರಣಗಳು ತಾನೆಂದು ಬಗೆಯಲು ಬದ್ಧನಾಗಿಹನು ॥ ॥೩೪॥

ತಾತ್ಪರ್ಯ: ಆತ್ಮಜ್ಞಾನವನ್ನು ಅರಿಯದ ಮೂಢರು ಈ ಶರೀರವೇ ತಾನೆಂದು ಭಾವಿಸುವರು. ಆದರೆ ಜೀವಾತ್ಮನು ಶರೀರದಿಂದ ಹೊರಹೊರಟಾಗ ಆ ಕೂಡಲೇ ಶರೀರಿಯು ಹೆಣವೆನಿಸಿಕೊಳ್ಳುವುದು. ಆದ್ದರಿಂದ ತಾನು ಎಂದರೆ ದೇಹವಲ್ಲ, ಚೈತನ್ಯರೂಪಿ; ಆತ್ಮನು ಎಂದು ತಿಳಿದರೆ ಅವನೇ ಮುಕ್ತನು ಎನಿಸಿ ಕೊಳ್ಳುತ್ತಾನೆ. ಅದುಬಿಟ್ಟು ಈ ಶರೀರ ಮತ್ತು ಕರಣಗಳೇ ತಾನು ಎಂದು ತಿಳಿದರೆ ಅವನು ಬದ್ಧಜೀವಿ ಆಗುತ್ತಾನೆ.

ಶಬ್ದಾರ್ಥ: * ಅಜ್ಞರು=ಮೂಢರು; * ಅಸುಸಹಿತಲಿ ಆತ್ಮನು=ಜೀವನಿಹಿತ ಆತ್ಮನು; * ಅರಿಯೆ= ತಿಳಿಯಲು.

ಪಾಠಾಂತರ: ತಿಳಿಯದೀ=ಅರಿಯದೀ (ಕು)

---

ನಿತ್ಯಮುಕ್ತನಿಗೆ ಬಂಧ ಮೋಕ್ಷಗ
ಳೆತ್ತಣದು? 'ಜಗಭರಿತ ಬಂದಪ
ನಿತ್ತ, ಮುಚ್ಚಿಹ ಕದವತೆಗೆ'ಯೆಂದೆಂಬ ಕಥೆಯಂತೆ ।
ಸತ್ಯಸಹಜಾನಂದನದ್ವಯ
ಪ್ರತ್ಯಗಾತ್ಮನೆನಿಪ್ಪ ಪರಮಗೆ
ಮಿಥ್ಯವಹ ಮಾಯಾಪ್ರಬಂಧವದಿಲ್ಲ ನೋಡೆಂದ ॥ ॥೩೫॥

ತಾತ್ಪರ್ಯ: ನಿತ್ಯಮುಕ್ತನಾದ ಆತ್ಮನಿಗೆ ಬಂಧಮೋಕ್ಷಗಳು ಎಲ್ಲಿರುತ್ತದೆ? "ಎಲ್ಲೆಲ್ಲಿಯೂ ತುಂಬಿಕೊಂಡಿರುವವನು ಬಂಧನು, ಮುಚ್ಚಿರುವ ಕದವನು ತೆಗೆ" ಎಂಬ ಮಾತುಗಳು ಒಂದಕ್ಕೊಂದು ಹೊಂದುವುದಿಲ್ಲ. ಏಕೆಂದರೆ ಅವನು ಎಲ್ಲೆಲ್ಲಿಯೂ ತುಂಬಿಕೊಂಡಿರುವುದರಿಂದ ಕದವನ್ನು ತೆಗೆದುಕೊಂಡು ಒಳಕ್ಕೆ ಹೋಗಬೇಕಾಗಿಲ್ಲ. ಆದ್ದರಿಂದ ಸತ್ಯಸ್ವರೂಪಿಯೂ, ಸಹಜಾನಂದನೂ, ಅದ್ವಯನೂ, ಪ್ರತ್ಯಗಾತ್ಮನಾಗಿಯೂ ಇರುವ ಶ್ರೇಷ್ಠ ವಸ್ತುವಾಗಿರುವುದರಿಂದ ಕೂಡಿರುವ ಮಾಯಾಬಂಧನವು ಇರುವುದಿಲ್ಲ ಎಂದು ತಿಳಿ.

ಶಬ್ದಾರ್ಥ: * ಎತ್ತಣದು?=ಎಲ್ಲಿರುತ್ತದೆ?; * ಜಗಭರಿತ=ಎಲ್ಲಕಡೆಯೂ ತುಂಬಿರುವವನು; * ಬಂದಪನು=ಬರುತ್ತಿದ್ದಾನೆ; * ಮಿಥ್ಯವಹ=ಸುಳ್ಳಾಗಿರುವ.

---

**ಬುದ್ಧಿಯಳಿದೊಡನಳಿದವೋಲಿಹ;**
**ಬುದ್ಧಿ ತೋರಲು ತೋರಿದಂತಿಹ;**
**ಬುದ್ಧಿ ಜಡವಾಗಿರಲು ಜಡವಾದಂತೆ ತಾನಿಹನು; ।**
**ಬುದ್ಧಿಗಾತ್ಮವಿವೇಕವಳಿದರೆ**
**ಬದ್ಧನಾಗಿಹನರಿಯೆ ಮುಕ್ತನು;**
**ಬುದ್ಧಿಯದು ಸವಿಕಾರಿಯಾತ್ಮನು ತಿಳಿಯಲವಿಕಾರಿ ॥ ॥೩೬॥**

**ತಾತ್ಪರ್ಯ:** ಆತ್ಮನು ಹೇಗಿರುವನೆಂದರೆ ಬುದ್ಧಿಯು ವಿಕಾರಗಳನ್ನು ಹೊಂದಿದಂತೆಲ್ಲಾ ಇವನು ಅದೇರೀತಿ ಇದ್ದಂತೆ ಕಾಣುತ್ತಾನೆ. ಅಬುದ್ಧಿಯು ಲಯವಾದರೆ ಇವನು ಲಯವಾದಂತೆ ಇರುವನು. ಬುದ್ಧಿಯು ಜಡವಾದರೆ ತಾನೂ ಜಡವಾದಂತೆ ತೋರುತ್ತಾನೆ. ಬುದ್ಧಿಯು ಆತ್ಮವಿವೇಕವನ್ನು ಕಳೆದುಕೊಂಡರೆ ತಾನೂ ಹಾಗೆಯೇ ಕಾಣಿಸಿಕೊಳ್ಳುತ್ತಾನೆ; ಬುದ್ಧಿಗೆ ಜ್ಞಾನೋದಯವಾದರೆ ಆತ್ಮನೂ ತಾನು ಮುಕ್ತನಾದಂತೆ ಕಾಣುತ್ತಾನೆ. ಆದಕಾರಣ ವಿಚಾರಮಾಡಿನೋಡಿದರೆ ಬುದ್ಧಿಗೆ ವಿಕಾರಗಳು ಇವೆಯೇ ಹೊರತು ಆತ್ಮನಿಗೆ ವಿಕಾರಗಳಿಲ್ಲ ಎಂದು ತಿಳಿಯಬೇಕು.

**ಶಬ್ದಾರ್ಥ:** **ಅರಿಯೆ**=ಆತ್ಮಸ್ವರೂಪವನ್ನು ತಿಳಿದರೆ; **ತಿಳಿಯಲು**=ವಿಚಾರಮಾಡಿನೋಡಿದರೆ; * **ಅಳಿದೊಡೆ**=ಲಯವಾದರೆ; * **ಜಡವಾದಂತೆ**=ಸ್ತಬ್ಧ, ಮಂದವಾದಂತೆ;

---

**ಬುದ್ಧಿಮಾಡಿದ ಸುಕೃತದಷ್ಕೃತ**
**ಹೊದ್ದದಾತ್ಮನನೆಂತೆನಲು ಕದ**
**ಡಿದ್ದ ನೀರೊಳು ಹೊಳೆವ ಸೂರ್ಯಗೆ ಕಂಪಕಲುಷಗಳು ।**
**ಹೊದ್ದಿದಂತಿಹುದೈಸೆ; ನಿಜವಾ**
**ಗಿದ್ದ ಸೂರ್ಯನಿಗುಂಟೆ? ಆ ಪರಿ**
**ಬುದ್ಧಿಸಾಕ್ಷಿಯು ಬುದ್ಧಿಕೃತದಿಂ ಬದ್ಧನಲ್ಲೆಂದ ॥ ॥೩೭॥**

**ತಾತ್ಪರ್ಯ:** ಬುದ್ಧಿಯು ಮಾಡುವ ಪುಣ್ಯ–ಪಾಪಗಳೊಂದೂ ಆತ್ಮವನ್ನು ಹೊಂದಲಾರವು. ಅದು ಹೇಗೆಂದರೆ: ಕಲಕಿದ ನೀರಿನಲ್ಲಿ ಇರುವ ಕೆಸರು ಮತ್ತು ಚಲನೆಗಳು (ಅಲೆಗಳು) ಆ ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನಿಗೆ ಇರುವಂತೆ ಕಂಡರೂ ಅದು ನಿಜವಾದ ಸೂರ್ಯನಿಗೆ ಅಂಟಿರುವುದಿಲ್ಲ ಅಲ್ಲವೇ? ಅದೇ ರೀತಿ ಬುದ್ಧಿಗೆ ಸಾಕ್ಷಿರೂಪನಾದ ಆತ್ಮನಿಗೆ ಬುದ್ಧಿಕಲ್ಪಿತವಾದ ವಿಕಾರಗಳು ಹೊದ್ದುವುದಿಲ್ಲ; ಆತ್ಮನು ಬುದ್ಧಿಯಿಂದ ಬೇರೆಯೇ ಆಗಿರುತ್ತಾನೆ.

**ಶಬ್ದಾರ್ಥ:** **ಸುಕೃತದುಷ್ಕೃತ**=ಪುಣ್ಯಪಾಪ; **ಕಂಪಕಲುಷಗಳು**=ನಡುಗುವಿಕೆ ಮತ್ತು ಹೊಲಸು, ಅಲೆಗಳು ಮತ್ತು ಕೆಸರು; * **ಕಲುಷ**=ರಾಡಿ, ಕೆಸರು; * **ಹೊದ್ದಿದಂತೆ ಇಹುದು**=ಹೊಂದಿದಂತೆ, ಆವರಿಸಿದಂತೆ ಇರುವುದು; * **ಬುದ್ಧಿಸಾಕ್ಷಿಯು**=ಬುದ್ಧಿಯಲ್ಲಿ ಸಾಕ್ಷಿರೂಪನಾಗಿರುವ ಆತ್ಮನು; * **ಬುದ್ಧಿಕೃತದಿಂ**=ಬುದ್ಧಿಯವಿಕಾರಗಳಿಗೆ; * **ಐಸೆ?**=ಅಲ್ಲವೇ?

---

**ಆದೊಡೀ ಆತ್ಮಂಗೆ ಗುರುಮುಖ**
**ಬೋಧೆಯೇಕೆಂದೆನಲವಿದ್ಯೋ**
**ಪಾಧಿಯಿಂದಾತ್ಮಂಗೆ ಮಿಥ್ಯಾರೂಪ ಸಂಸಾರ ।**
**ಆದ ಕತದಿಂದದನಳಿಪೊಡೀ**
**ಬೋಧೆಯಲ್ಲದೆ ನಿತ್ಯಮುಕ್ತಗೆ**
**ಬೋಧೆಯೇತಕೆ? ಸ್ವಪ್ರಕಾಶಾನಂದ ವಿಗ್ರಹಗೆ ॥ ॥೩೮॥**

**ತಾತ್ಪರ್ಯ:** ಹಾಗಿದ್ದಪಕ್ಷದಲ್ಲಿ ಆತ್ಮನಿಗೆ ಗುರುವಿನಿಂದ ಉಪದೇಶ ಏಕೆಬೇಕು? ಎಂದು ಕೇಳಬಹುದು. ಅದಕ್ಕೆ ಕಾರಣವಿದೆ: ಅವಿದ್ಯೆಯೆಂಬ ಉಪಾಧಿಯಿಂದ ಜೀವಿಗೆ ನಿನ್ನ ಮಾಯೆಯಿಂದ ಕೂಡಿದ ಸಂಸಾರಬಂಧವು ಉಂಟಾಗುತ್ತದೆ. ಆದಕಾರಣ ಆ ಮಾಯೆಯನ್ನು ಹೋಗಲಾಡಿಸಲು ಗುರುಬೋಧೆ ಅಗತ್ಯವೇ ಹೊರತು ನಿತ್ಯಮುಕ್ತನಾಗಿರುವ ಜೀವನಿಗೆ, ಆತ್ಮನಿಗೆ ಬೇಕಿಲ್ಲ. ಆತ್ಮನು ಸ್ವಯಂಜ್ಯೋತಿ ಆದವನು; ಆನಂದಸ್ವರೂಪನಾದವನು.

**ಶಬ್ದಾರ್ಥ:** * **ಕತದಿಂದ**=ಕಾರಣದಿಂದ; **ಅಳಿಪೊಡೆ**=ಹೋಗಲಾಡಿಸಲು; * **ಬೋಧೆ**= ಜ್ಞಾನೋಪದೇಶ; * **ಸ್ವಪ್ರಕಾಶಾನಂದ ವಿಗ್ರಹಗೆ**=ಸ್ವಯಂಜ್ಯೋತಿ ಆದವನು ಮತ್ತು ಆನಂದಸ್ವರೂಪನಾದವನು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಅದುನಿಮಿತ್ತದಿ ಬುದ್ಧಿ ಮಾಡಿದ**
**ವಿಧಿಗಳೆಲ್ಲವು ಬುದ್ಧಿಗಲ್ಲದೆ**
**ಸದಮಲಾನಂದಾತ್ಮಗಿಲ್ಲೆಲೆ ನಿರಭಿಮಾನಂಗೆ; ।**
**ಬುಧರು ಬುದ್ಧಿಯ ಯೋಗದಭ್ಯಾ**
**ಸದಲಿ ಸಹಜಾನಂದ ಸಂವಿ**
**ತ್ಪದದೊಳೈಕ್ಯವ ಮಾಡಿ ಮುಕ್ತಿಯ ಪಡೆದು ಸುಖಿಸುವರು ॥ ॥೩೯॥**

**ತಾತ್ಪರ್ಯ:** ಆದಕಾರಣ ಬುದ್ಧಿಯು ಮಾಡಿದ ಕಾರ್ಯಗಳೆಲ್ಲ ಆ ಬುದ್ಧಿಗೆ ಸಂಬಂಧಿಸಿದವೇ ಹೊರತು ಪರಿಶುದ್ಧನಾಗಿಯೂ, ಶ್ರೇಷ್ಠನೂ, ಅಭಿಮಾನರಹಿತ ನಾಗಿಯೂ ಇರುವ ಆನಂದರೂಪಿ ಆತ್ಮನಿಗೆ ಸಂಬಂಧಿಸುವುದಿಲ್ಲ. ಪ್ರಾಜ್ಞರಾದವರು ಯೋಗದಭ್ಯಾಸದಿಂದ ಆ ಬುದ್ಧಿಯನ್ನು ಸಹಜಾನಂದರೂಪವಾದ ಬ್ರಹ್ಮಜ್ಞಾನದಲ್ಲಿ ತಲ್ಲೀನಗೊಳಿಸಿ, ಮುಕ್ತಿಪಡೆದು ಸುಖಿಸುತ್ತಾರೆ.

**ಶಬ್ದಾರ್ಥ:** ***ವಿಧಿಗಳು**=ಕಾರ್ಯಗಳು; * **ಸದಮಲಾನಂದಾತ್ಮ** =ಪರಿಶುದ್ಧನೂ, ಶ್ರೇಷ್ಠನೂ ಆದ ಆನಂದರೂಪಿ; * **ಬುಧರು**=ಪ್ರಾಜ್ಞರು, ತಿಳಿದವರು; * **ಸಂವಿತ್‌ಪದದೊಳು**=ಬ್ರಹ್ಮಜ್ಞಾನದಲ್ಲಿ; **ಐಕ್ಯವಮಾಡಿ**=ಲೀನಗೊಳಿಸಿ.

---

**ಜಲದೊಳಗೆ ಜಲರುಹ, ಪರಾಗಾ**
**ವಳಿಯೊಳಗೆ ಪವಮಾನ, ಘನಸಂ**
**ಕುಲದೊಳಗೆ ನಭ, ದ್ರವ್ಯನಿಕರದಿ ಪಾದರಸದಂತೆ ।**
**ಹೊಳೆಯುತಿಹ ಮಹದಾದಿ ತತ್ತ್ವಗ**
**ಳೊಳಗೆ ಹೊರಗೆಂದೆಂಬುದೆಲ್ಲವ**
**ಬಳಸಿ ತಾ ನಿರ್ಲೇಪನಾಗಿಹನಾತ್ಮ ನೋಡೆಂದ ॥ ॥೪೦॥**

**ತಾತ್ಪರ್ಯ:** ನೀರಿನಲ್ಲಿ ತಾವರೆ, ಗಾಳಿ ಮಕರಂದದಲ್ಲಿ, ಸಮೂಹಗಳಲ್ಲಿ ಆಕಾಶ, ದ್ರವ್ಯಗಳಲ್ಲಿ ಪಾದರಸ ಬೆಳಗುತ್ತ ಇರುವಂತೆ; ಮಹದಾದಿ ತತ್ತ್ವಗಳಲ್ಲಿ ಒಳಗೆ ಹೊರಗೆ ಎಲ್ಲಕಡೆಯೂ ಆವರಿಸಿದ್ದರೂ ಅವುಗಳಿಗೆ ಅಂಟದಂತೆ ಇದ್ದು, ನಿರ್ಲೇಪನಾಗಿ ಆತ್ಮನಿದ್ದಾನೆ ತಿಳಿ ಎಂದರು ವ್ಯಾಸರು.

**ಶಬ್ದಾರ್ಥ:** * ಜಲರುಹ=ತಾವರೆ; * ಪರಾಗಾವಳಿ=ಮಕರಂದ ಸಮೂಹ; * ಪವಮಾನ=ಗಾಳಿ; ಘನಸಂಕುಲ=ಮೇಘಗಳ ಗುಂಪಿನಲ್ಲಿ; ಮಹದಾದಿತತ್ತ್ವಗಳು=ಆತ್ಮ ಮೂರುವಿಧ. ಜ್ಞಾನಾತ್ಮ ಅದರಲ್ಲಿ ಮಾಯೆಯಿಂದ ಕೂಡಿದ ಆತ್ಮದ ಮಹತ್ತತ್ತ್ವರೂಪ ಒಂದು; ಜ್ಞಾನಾತ್ಮ=ಬುದ್ಧಿ; ಶಾಂತಾತ್ಮ=ಶುದ್ಧಬ್ರಹ್ಮ; ಆತ್ಮನ ಉಳಿದ ರೂಪಗಳು (ಶ್ರುತಿವಿಚಾರ ಚಂದ್ರೋದಯ, ಪುಟ=೨೧೯); ನಿರ್ಲೇಪ=ಅಂಟದಂತೆ ಇರುವವನು.

**ಟಿಪ್ಪಣಿ–೧:** ಜ್ಞಾನಾತ್ಮಾ–ಅಂತಃಕರಣರೂಪದ ಬುದ್ಧಿ; ಉಪಾಧಿಯಿಂದ ಬೇರೆ ವೃತ್ತಿ ಇರುವಂತೆ; ಒಬ್ಬ ಆತ್ಮನಿಗೆ ಮಾತ್ರ ಪ್ರಕಾಶ (ವಿಚಾರ ಚಂದ್ರೋದಯ, ಪುಟ–೧೪೯)

**ಟಿಪ್ಪಣಿ–೨:** ವಾಹನಾತ್ಮ (ಮಹತ್ತತ್ತ್ವ)=ಜ್ಞಾನಾತ್ಮನ ಮೇಲಿನ ಸ್ಥಿತಿ. ಈಶ್ವರಮಾತ್ರ ಎಲ್ಲ ಆತ್ಮಗಳಿಗೂ ಪ್ರಕಾಶ, ಸಮಷ್ಟಿಬುದ್ಧಿ

**ಟಿಪ್ಪಣಿ–೩:** ಶಾಂತಾತ್ಮ=ಅಂತಃಕರಣದಲ್ಲಿ ಲಯ. ಸಪ್ತಮ ಭೂಮಿಕೆಯ ಸ್ಥಿತಿ, ತನ್ನಲ್ಲಿಯ ಎಲ್ಲರಲ್ಲಿಯೂ ತಿಳಿಯತಕ್ಕ ಆತ್ಮ.

---

**ಋಷಿಯೆ ಕೇಳವಿಕಾರಿಯಾತ್ಮನು**
**ಘಸಣೆಯವಗಿನ್ನಿಲ್ಲ; ಜೀವನು**
**ಹುಸಿಯೆನಿಪನದರಿಂದಲವಗದು ಮುನ್ನಲೇ ಇಲ್ಲ; ।**
**ಎಸೆವಹಂಕೃತಿ ಘಟದವೊಲು ಜಡ**
**ವುಸುರಬಾರದದಕ್ಕೆ ಕಷ್ಟವ;**
**ವಿಷಮವಹ ಸಂಸಾರವಿವರೊಳಗಾರಿಗಹುದೆಂದ? ॥ ॥೪೧॥**

**ತಾತ್ಪರ್ಯ:** ಘೋರಸಂಸಾರದ ತಾಪತ್ರಯದ ತಿಕ್ಕಾಟವು ಆತ್ಮನು ಅವಿಕಾರಿ ಆದ್ದರಿಂದ ಅವನಿಗಿಲ್ಲ; ಇನ್ನು ಜೀವನು ಮಿಥ್ಯಾರೋಪಿತನಾದವನು. ಆದ್ದರಿಂದ ಅವನಿಗೂ ಸಂಸಾರತಾಪತ್ರಯ ಮೊದಲೇ ಇಲ್ಲ. ಮತ್ತೆ ಅಹಂಕಾರ ಘಟದ ಹಾಗೆ ಜಡವಾದ್ದರಿಂದ

ಅದಕ್ಕೂ ಸಂಸಾರತಾಪತ್ರಯವಿದೆ ಎಂದು ಹೇಳಲಿಕ್ಕಾಗದು; ಹೀಗಿರುವಾಗ ಈ ಘೋರಸಂಸಾರತಾಪತ್ರಯ, ಆತ್ಮ, ಜೀವ, ಅಹಂಕಾರಗಳಲ್ಲಿ ಯಾರಿಗೆ ಇದೆ ಎಂದು ಹೇಳಲು ಸಾಧ್ಯ? ಎಂದು ಶುಕಮುನಿಗೆ ಕೇಳಿದನು.

**ಶಬ್ದಾರ್ಥ: ಘಸಣೆ**=ಸಂಸಾರತಾಪತ್ರಯದ ತಿಕ್ಕಾಟ; **ಋಷಿಯೆ ಕೇಳು**=ಶುಕಮುನಿಯೆ ಕೇಳು; * **ಹುಸಿ**=ಮಿಥ್ಯಾರೋಪಿತನಾದವನು; * **ಘಟ**=ಮಡಿಕೆ; * **ಉಸುರಬಾರದು**=ಹೇಳಲಿಕ್ಕೆ ಆಗದು; **ವಿಷಮವಹ**=ಘೋರವೆನಿಸಿದ; * **ಅಹಂಕೃತಿ**=ಅಹಂಕಾರ; * **ಮುನ್ನಲೇ**=ಮೊದಲೇ

**ಟಿಪ್ಪಣಿ: * ವಿಷಮವಹ ಸಂಸಾರ ಇವರೊಳಗೆ ಆರಿಗೆ ಅಹುದೆಂದ?**=ಜೀವ ಮೂರು ಬಗೆ: ೧. ಸುಷುಪ್ತಿಯಲ್ಲಿ ಸಾಕ್ಷಿಚೇತನನಾಗಿರುವವನು (ಪಾರಮಾರ್ಥಿಕ); ೨. ಜಾಗ್ರತಾವಸ್ಥೆಯಲ್ಲಿ ಚಿದಾಭಾಸನಾದ ಅಂತಃಕರಣರೂಪ ಜೀವನಾದವನು (ವ್ಯಾವಹಾರಿಕ); ೩. ಸ್ವಪ್ನಾವಸ್ಥೆಯಲ್ಲಿ ಕಲ್ಪಿತಜೀವನಾದವನು (ಪ್ರಾತಿಭಾಸಿಕ); ಜೀವನಿಗೆ ಈ ಬಗೆಗಳಲ್ಲಿ ಸಂಸಾರತಾಪತ್ರಯದ ತಿಕ್ಕಾಟವಿಲ್ಲ.

---

## ಸಂಸಾರ ಬರಿ ತೋರಿಕೆ (೪೨-೪೬)

**ಆದೊಡೀ ಸಂಸಾರವಾರಿಗೆ**
**ಬಾಧಕವದಾಯ್ತೆನಲು ಪುಸಿಯ ವಿ**
**ವಾದವೆಲ್ಲಿಯ ಮಾಯೆ? ಅದರಿಂ ಸಂಸೃತಿಯೆ ಮಿಥ್ಯ; ।**
**ಕಾದಿ ಬೂದಿಯ ಹೊಯ್ದುಕೊಂಬರು**
**ವಾದದಲಿ ಶಾಸ್ತ್ರಿಗಳು ಬರಿದೇ**
**ಓದಿ ಮರುಳಹ ಕೂಸಿಭಟ್ಟನ ಗಾದೆಯಂದದಲಿ ॥ ॥೪೨॥**

**ತಾತ್ಪರ್ಯ:** ಹಾಗಾದರೆ ಈ ಸಂಸಾರವು ಆತ್ಮ, ಜೀವ, ಅಹಂಕಾರಗಳಲ್ಲಿ ಯಾರಿಗೆ ಅಡ್ಡಿಯಾಗಿದೆ? ಇನ್ನು ಮಾಯೆ ಎಂಬುದು ಸುಳ್ಳಾಧ್ದರಿಂದ ಅದರಬಗ್ಗೆ ವಿವಾದವೆಲ್ಲಿ ಬಂತು? ಆದಕಾರಣ ಸಂಸಾರ ಎಂಬುದೇ ಸುಳ್ಳು. ಆದರೆ ಈ ಬಗ್ಗೆ ವ್ಯರ್ಥವಾಗಿ ವಾದವಿವಾದಗಳನ್ನು ಮಾಡುತ್ತಾ ಶಾಸ್ತ್ರಿಗಳು, ಪಂಡಿತರು ತಲೆಮೇಲೆ ಬೂದಿ ಹೊಯ್ದುಕೊಂಡಿದ್ದಾರೆ. ಅವರ ಕಥೆ 'ಓದಿಓದಿ ಮರುಳಾದ ಕೂಸಿಭಟ್ಟ' ಎಂಬ ಗಾದೆಯಂತಾಗಿದೆ, ವ್ಯರ್ಥಸಾಹಸವಾಗಿದೆ.

**ಶಬ್ದಾರ್ಥ:** * **ಆದೊಡೆ**=ಹಾಗಾದರೆ; * **ಬಾಧಕ**=ಅಡ್ಡಿ; * **ಪುಸಿ**=ಸುಳ್ಳು; **ಸಂಸೃತಿ**=ಸಂಸಾರ; **ಮಿಥ್ಯ**=ಸುಳ್ಳು; * **ಬರಿದೇ**=ವ್ಯರ್ಥವಾಗಿ; **"ಕಾದಿಬೂದಿಯ ಹೊಯ್ದುಕೊಂಬರು"**=ವ್ಯರ್ಥವಾಗಿ ವಾದಮಾಡುವರು (ನುಡಿಗಟ್ಟು ಇದು).

**ಟಿಪ್ಪಣಿ-೧: ಓದಿ ಮರುಳಹ ಕೂಸಿಭಟ್ಟ**-ಈ ಗಾದೆಗೆ 'ಓದಿ ಓದಿ ಮರುಳಾದ ಕೂಚಂಭಟ್ಟ' ಎಂದು ಪಾಠಾಂತರ ಜನರೂಢಿಯಲ್ಲಿದೆ.

**ಟಿಪ್ಪಣಿ-೨:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಟಿಪ್ಪಣಿ ಅನುವಾದಕನದು.

---

**ಕೇಳು ಬಂಜೆಗೆ ಮಕ್ಕಳಿಪ್ಪ**
**ತ್ತೇಳು ಮಂದಿಗಳೆಂಬ ತೆರದಲಿ**
**ಕಾಳಲಾ ಸಂಸಾರವಕಟಾ! ಗಗನಲತೆಯಲ್ಲಿ ।**
**ಹೇಳಲರಿಯದ ಕುಸುಮದಂದದಿ**
**ಲೀಲೆ ದಿಟವಿದು; ಶಶಿವಿಷಾಣದ**
**ವೋಲು ಭಾವಿಸೆ ಮಿಥ್ಯ; ವಾದಿಗಭೇದ್ಯವಹುದೆಂದ ॥ ॥೪೩॥**

**ತಾತ್ಪರ್ಯ:** ಶುಕಮುನಿಯೆ ಕೇಳು, ಬಂಜೆಗೆ ಮಕ್ಕಳೆಷ್ಟು ಎಂದು ಕೇಳಿದರೆ ಇಪ್ಪತ್ತೇಳು ಮಂದಿ ಎಂದು ಉತ್ತರ ಹೇಳಿದರೆ ಎಷ್ಟು ಸುಳ್ಳೋ ಅದೇರೀತಿ ಸಂಸಾರವು ನಿಜವೆಂದರೆ ಸುಳ್ಳಾಗುತ್ತದೆ. ಆಕಾಶವೆಂಬ ಬಳ್ಳಿಯಲ್ಲಿ ಹೂವಿದೆ ಎಂದರೆ ಅದನ್ನು ಬಣ್ಣಿಸಲು ಆಗದಸಂಗತಿ. ಹಾಗೆಯೇ ಮೊಲಕ್ಕೆ ಕೊಂಬುಗಳಿವೆ ಎಂದು ತಿಳಿದರೆ ಅದು ಸುಳ್ಳು, ಆದಕಾರಣ ಸಂಸಾರವೆಂಬುದೇ ಇಲ್ಲವೆಂದು ತಿಳಿಯಬೇಕೇ ಹೊರತು ಅದು ಆತ್ಮನಿಗೋ, ಅಹಂಕಾರಕ್ಕೋ, ಜೀವಕ್ಕೋ ಮುಂತಾಗಿ ವಾದಿಸುತ್ತಾ ಹೋದರೆ ಕೊನೆಮುಟ್ಟುವುದಿಲ್ಲ.

**ಶಬ್ದಾರ್ಥ: * ಬಂಜೆ**=ಮಕ್ಕಳಾಗದವಳು; *** ಗಗನಲತೆ**=ಆಕಾಶಬಳ್ಳಿ; **ಕುಸುಮ**=ಹೂ; **ದಿಟ**=ನಿಜ; *** ಶಶಿವಿಷಾಣ**=ಮೊಲದಕೊಂಬು, **ಅಭೇದ್ಯ**=ಕೊನೆಮುಟ್ಟದು.

**ಟಿಪ್ಪಣಿ–೧:** ಈ ಪದ್ಯದಲ್ಲಿ ಕವಿಯು ಸಂಸಾರವನ್ನು ಬಂಜೆಯ ಮಕ್ಕಳಿಗೂ, ಆಕಾಶದ ಹೂವಿಗೂ, ಮೊಲದಕೋಡಿಗೂ ಹೋಲಿಸಿರುವುದರಿಂದ ಅದು ಎಷ್ಟು ಮಾತ್ರವೂ ಇಲ್ಲವೇ ಇಲ್ಲವೆಂದು ಹೇಳಿದಂತಾಯಿತು. "ಜಗತ್ತು ಕಾಣುವುದಿಲ್ಲ" ಎಂದರೆ ಅದು ಎಚ್ಚರದ ವಾಸನೆ. ಎಚ್ಚರ ಮತ್ತು ಕನಸಿನ ಜಗತ್ತಿಗೆ ರಜ್ಜುಸರ್ಪವೂ, ಶುಕ್ತಿರಜತವೂ ಹೋಲುವುವು; ಜಗತ್ತು ಇಲ್ಲವೇ ಇಲ್ಲವೆಂಬ ಈ ಪದ್ಯದ ಹೋಲಿಕೆಗಳ ಸುಷುಪ್ತಿಯ ಅನುಭವವನ್ನು ಲಕ್ಷ್ಯದಲ್ಲಿಟ್ಟುಕೊಂಡು ಕವಿ ಹೇಳಿದ್ದಾನೆ. ಸುಷುಪ್ತಿಯ ಜೀವನು ಎಚ್ಚರದ ಜಗತ್ತನ್ನು ಸುಳ್ಳೆನ್ನುವನೆಂಬ ಈ ಅರ್ಥವನ್ನು ಈ ಕವಿಯು ಅಧ್ಯಾಯ–೯, ಪದ್ಯ–೩೦ರಲ್ಲಿ ಸೂಚಿಸಿದ್ದಾನೆ.

**ಟಿಪ್ಪಣಿ–೨: ವಾದಿಗಭೇದ್ಯವಹುದು**=ಸಂಸಾರವೇ ಇಲ್ಲವೆಂದು ತಿಳಿಯಬೇಕೇ ಹೊರತು ಸಂಸಾರವು ಆತ್ಮನಿಗೋ, ಅಹಂಕಾರಕ್ಕೋ ಎಂದು ಮುಂತಾಗಿ ವಾದಿಸುತ್ತಾ ಹೋದರೆ ಕೊನೆಮುಟ್ಟುವುದಿಲ್ಲವೆಂದರ್ಥ.

---

**ತನ್ನನರಿಯದವಿದ್ಯೆಯಿಂದು**
**ತ್ಪನ್ನವಾದೀ ಮನದ ಕಲ್ಪನೆ**
**ಭಿನ್ನ ಭೂತವ್ರಾತರೂಪವ ತೋರಿಸುತ್ತಿಹುದು; ।**
**ತನ್ನನರಿಯದವಿದ್ಯೆಯಿಂದಿಹ**
**ಭಿನ್ನಕಲ್ಪನೆಯಳಿಯೆ ಸಂಸೃತಿ**
**ನಿರ್ಣಯಿಸಲಿನ್ನಾರಿಗದ್ವಯಪೂರ್ಣ ಬ್ರಹ್ಮದಲಿ? ॥ ॥೪೪॥**

**ತಾತ್ಪರ್ಯ:** ತನ್ನನ್ನು ತಾನು ತಿಳಿಯಲಾರದ ಅವಿದ್ಯೆ (ಮಾಯೆ)ಯಿಂದ ಉಂಟಾದ ಮನಸ್ಸಿನ ಕಲ್ಪನೆಗಳು ಬೇರೆಬೇರೆಯಾಗಿರುವ ನೆಲಜಲ ಮೊದಲಾದ ಪಂಚಭೂತಗಳ ಸಮೂಹರೂಪವನ್ನು ಪಡೆಯುವುದು. ತನ್ನನ್ನು ತಾನು ಅರಿಯಲಾಗದ ಅವಿದ್ಯೆಯಿಂದ ಉಂಟಾಗುವ ಈ ಭಿನ್ನಕಲ್ಪನೆಗಳು ಅಳಿದುಹೋದರೆ ಪೂರ್ಣಬ್ರಹ್ಮವು ಅದ್ವಯವಾಗಿ ಉಳಿದುಕೊಳ್ಳುವುದರಿಂದ ಸಂಸಾರವಿದೆಯೆಂದು ನಿರ್ಧರಿಸಲು ಯಾರಿಗೂ ಆಗದು ಎಂದರೆ ಮನಸ್ಸಿನಲ್ಲಾಗಲಿ, ಆತ್ಮನಿಗಾಗಲಿ ಸಂಸಾರವೇ ಇರುವುದಿಲ್ಲ.

**ಶಬ್ದಾರ್ಥ:** * ತನ್ನನರಿಯದವಿದ್ಯೆ (ತನ್ನನ್ನು+ಅರಿಯದ+ಅವಿದ್ಯೆ)=ತನ್ನನ್ನು ತಾನು ತಿಳಿಯಲಾಗದ ವಿದ್ಯೆ, ಆತ್ಮವಿದ್ಯೆ; ಭಿನ್ನಭೂತವ್ರಾತರೂಪವ=ಬೇರೆಬೇರೆಯಾಗಿರುವ ನೆಲ, ಜಲ ಮೊದಲಾದ ಪಂಚಭೂತಗಳ ಸಮೂಹರೂಪವನ್ನು; ಸಂಸೃತಿ ನಿರ್ಣಯಿಸಲಿನ್ನಾರಿಗದ್ವಯ ಪೂರ್ಣಬ್ರಹ್ಮದಲಿ =ಪೂರ್ಣಬ್ರಹ್ಮವು ಅದ್ವಯವಾಗಿ ಉಳಿದುಕೊಳ್ಳುವುದರಿಂದ ಸಂಸಾರವು ಯಾರಿಗೂ ಇಲ್ಲವೆಂದರ್ಥ.

**ಪಾಠಾಂತರ:** ಪೂರ್ಣಬ್ರಹ್ಮದಲಿ=ಪೂರ್ಣಭಾವದಲಿ (ಕು)

---

**ಉನ್ನತಸ್ತನ ನಿಮ್ನನಾಭಿಯ**
**ಕನ್ಯೆಯನು ಚಿತ್ರಿಸಲು ಹಲಿಗೆಯ**
**ಲುನ್ನತಸ್ತನ ನಿಮ್ನನಾಭಿ ಸಮತ್ವವೆಂಬಂತೆ ।**
**ಇನ್ನು ಪೂರ್ಣಬ್ರಹ್ಮದಲಿ ಹೀ**
**ನೋನ್ನಯದೆಲ್ಲಿಯದು? ಸಕಲವು**
**ನಿರ್ಣಯಿಸೆ ಪುಸಿ; ನಾಮರೂಪಿನ ಶಬ್ದಮಾತ್ರವದು ॥ ॥೪೫॥**

**ತಾತ್ಪರ್ಯ:** ಉಬ್ಬಿದೆದೆ ಆಳದ ಹೊಕ್ಕುಳು ಉಳ್ಳ ವಧುವನ್ನು ಹಲಗೆಯ ಮೇಲೆ ಚಿತ್ರಿಸಿದಾಗ ಆ ಚಿತ್ರದಲ್ಲಿ ಆ ವಧುವಿನ ಎದೆಯ ಉಬ್ಬು, ಹೊಕ್ಕುಳಿನ ತಗ್ಗು ಕಾಣದೆ ಸಮತಲದಲ್ಲಿಯೇ ಕಾಣುವ ಹಾಗೆ ಎಲ್ಲೆಲ್ಲಿಯೂ ಇರುವ ಪೂರ್ಣಬ್ರಹ್ಮನಲ್ಲಿ ಮೇಲು-ಕೀಳುಗಳು ಕಂಡುಬರುವುದಿಲ್ಲ. ಆದಕಾರಣ ವಿಚಾರಮಾಡಿದರೆ ಹೊರಗೆ ತೋರುವ ಎಲ್ಲ ಜಗತ್ತಿನ, ಜೀವದ ವ್ಯತ್ಯಾಸಗಳು ಸುಳ್ಳು ಅವು ನಾಮರೂಪಿನ ಶಬ್ದಮಾತ್ರ ಆಗಿದೆ.

**ಶಬ್ದಾರ್ಥ:** * ಉನ್ನತ=ಉಬ್ಬು; * ನಿಮ್ನ=ತಗ್ಗು; * ನಾಭಿ=ಹೊಕ್ಕುಳು; * ಹಲಿಗೆ=ಚಿತ್ರ ಬರೆಯುವ ಹಲಗೆ; * ಸಮತ್ವ=ಸಮತಲ; * ಹೀನೋನ್ನಯ=ಉಬ್ಬುತಗ್ಗು; * ನಿರ್ಣಯಿಸೆ =ವಿಚಾರಮಾಡಿದರೆ; ಪುಸಿ=ಸುಳ್ಳು

**ಟಿಪ್ಪಣಿ-೧:** * ನಾಮರೂಪಿನ ಶಬ್ದಮಾತ್ರವದು-ಸರ್ವಪದಾರ್ಥಗಳಲ್ಲಿ ಪಂಚಅಂಶಗಳಿವೆ. ಅಸ್ತಿ ಭಾತಿ ಪ್ರಿಯ ನಾಮರೂಪ. ಅಸ್ತಿ ಎಂದರೆ ನಾನಿದ್ದೇನೆ; ಭಾತಿ ಎಂದರೆ ನಾನು ತಿಳಿಯುತ್ತಾ ಇದ್ದೇನೆ; ಪ್ರಿಯ ಎಂದರೆ ನಾನು ಪ್ರಿಯನಾಗಿದ್ದೇನೆ; ನಾಮ ಎಂದರೆ ದೇಹ, ಇಂದ್ರಿಯ, ಪ್ರಾಣ, ಮನ, ಬುದ್ಧಿ, ಚಿತ್ತ, ಅಹಂಕಾರ, ಅಜ್ಞಾನ ಇವುಗಳ ಧರ್ಮ; ರೂಪ ಎಂದರೆ ಇವುಗಳ ಯಥಾಯೋಗ್ಯವಾದ ಆಕಾರ" (ಶ್ರುತಿವಿಚಾರ ಚಂದ್ರೋದಯ, ಪುಟ-೧೨೮); ದಶಮಕಲಾ=ಸಾಮಾನ್ಯಚೈತನ್ಯ ವರ್ಣನೆ.

**ಟಿಪ್ಪಣಿ-೨:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಟಿಪ್ಪಣಿ ಅನುವಾದಕನದು.

**ಪಾಠಾಂತರ:** * ಇನ್ನು ಪೂರ್ಣಬ್ರಹ್ಮದಲಿ ಹೀ=ಪೂರ್ಣವಾದ ಬ್ರಹ್ಮದಲಿ ಹೀ (ಕು)

---

ಇಲ್ಲದುದನುಂಟೆಂದು ಮತ್ತಿ
ನ್ನಿಲ್ಲವೆಂದನಲೇಕೆ? ಮಗುಳದ
ನುಳ್ಳದುದನುಂಟೆಂದು ಸಾಧಿಸಿ ಬರಿದೆ ಬಳಲಿಸುವ ।
ಜಳ್ಳುನುಡಿಗಳ ನುಡಿಯಲೇತಕೆ?
ಇಲ್ಲವಿದು ನಾನಾತ್ವವಿದು ದಿಟ
ವುಳ್ಳ"ದೇಕೋದೇವ"ನೆಂದೊರಲುವವು ಶ್ರುತಿನಿಕರ ॥ ॥೪೬॥

**ತಾತ್ಪರ್ಯ:** ನಾಮರೂಪವಾದ ಜಗತ್ತು ಇಲ್ಲವೆಂದು ಹೇಳಿದಮೇಲೆ ಅದು ಹಾಗೆ, ಹೀಗೆ ಸೃಷ್ಟಿಯಾಯಿತು ಎಂದು ಹೇಳಿ ಆಮೇಲೆ ಅದನ್ನು ನೇತಿಮಾರ್ಗದಲ್ಲಿ ಅಲ್ಲಗಳೆಯುವುದು ಏಕೆ? ಬ್ರಹ್ಮವೊಂದೇ ಇರುವುದು ಎಂದು ಹೇಳುವುದೇಕೆ? ಮತ್ತೆ ಉಳ್ಳುದುದನ್ನು ಉಂಟೆಂದು ಸಾಧಿಸಬಯಸಿ ಸುಮ್ಮನೆ ಆಯಾಸಗೊಳಿಸುವ ಜೊಳ್ಳುನುಡಿಗಳನ್ನು ಹೇಳುವುದೇಕೆ? ದಿಟವಾಗಿ ಇರುವುದು ಬ್ರಹ್ಮವೊಂದೇ. ಅದನ್ನೇ ಏಕೋದೇವಃ ಎಂದು ಉಪನಿಷತ್ತುಗಳು ಸಾರುತ್ತಿವೆ. ಆದ್ದರಿಂದ ನಾಮರೂಪ ಗಳಿಂದ ಅದಕ್ಕೆ ನಾನಾತ್ವವುಂಟು ಎಂದು ಸಾಧಿಸುವುದು ಅಜ್ಞಾನವೇ ಸರಿ.

**ಶಬ್ದಾರ್ಥ:** ಇಲ್ಲದುದನುಂಟೆಂದು ಮತ್ತಿನ್ನಿಲ್ಲವೆಂದೆನಲೇಕೆ?=ಜಗತ್ತು ಮಿಥ್ಯವೆಂದಾದಮೇಲೆ ಅದು ಹೀಗೆ ಹಾಗೆ ಸೃಷ್ಟಿಯಾಯಿತೆಂದು ಮುಂತಾಗಿ ಇರುವುದರ ಹಾಗೆ ವರ್ಣಿಸಿ, ಆಮೇಲೆ ನೇತಿ ನೇತಿಯೆಂದು ಅದನ್ನು ಅಲ್ಲಗಳೆಯುವುದೇಕೆ?; * ಜಳ್ಳುನುಡಿ=ಅರ್ಥವಿಲ್ಲದ ವ್ಯರ್ಥಮಾತುಗಳು; ಮಗಳೆ=ಮತ್ತೆ; * ಶ್ರುತಿನಿಕರ=ವೇದಸಮೂಹ; * ನಾನಾತ್ವ=ನಾಮರೂಪ; 'ಏಕೋದೇವ'=ಈ ಶ್ರುತಿಯ ಬಗ್ಗೆ 'ಚಿತ್ತಿ' ಉಪನಿಷತ್ತಿನಲ್ಲಿ ಏಕೋದೇವೋ ಬಹುಧಾನಿವಿಷ್ಟಃ ಎಂದು ಹೇಳಿದೆ. (ಅ-೩, ಪ-೧೪೭ ನೋಡಿ)

---

## ಬ್ರಹ್ಮವು ತಿಳಿವಿಗೆ ವಿಷಯವಲ್ಲ (೪೭-೫೨)

ಈ ವಿಧದಲಿದಿರಿಟ್ಟು ತೋರುವ
ದಾವುದದು ತಾನಲ್ಲ; ತೂಷ್ಣೀಂ
ಭಾವವೇ ಪರಮಾತ್ಮಪದವದು ತಮ್ಮ ನಿಜವೆಂದು ।
ಭಾವವಳಿದುಳಿದುಳಿಮೆಯಹ ನಿಜ
ತಾವು ತಾವಾಗಿರ್ದ ಯೋಗಿಗ
ಳಾವವಸ್ಥೆಯೊಳಿರ್ದರೋ ತಿಳಿಯಲ್ಕಸಾಧ್ಯವಲಾ! ॥ ॥೪೭॥

**ತಾತ್ಪರ್ಯ:** ಈ ರೀತಿಯಾಗಿ ಎದುರಿನಲ್ಲಿ ಕಾಣುವುದು ಯಾವುದು ಇದೆಯೋ ಅದು ಪರಬ್ರಹ್ಮವಲ್ಲ (ತಾನಲ್ಲ); ಮೌನವಾಗಿರುವುದೇ ಪರಮಾತ್ಮವೆಂದೂ, ಅದೇ ತಮ್ಮ ಸತ್ಯಸ್ವರೂಪವೆಂದು ತಿಳಿದು ಭಿನ್ನಭಾವವನ್ನು ಅಳಿದು ಉಳಿದಿರುವ ಬ್ರಹ್ಮ ರೂಪವೇ ತಾನಾಗಿ ಜ್ಞಾನದ ನೆಲೆಯಾದ ಯೋಗಿಗಳು ಯಾವ ಅವಸ್ಥೆಯೊಳಿದ್ದಾರೋ ತಿಳಿದುಕೊಳ್ಳುವುದು ಅಸಾಧ್ಯವೆಂದು ತಿಳಿ.

**ಶಬ್ದಾರ್ಥ:** * ಈ ವಿಧದಲಿ=ಈ ರೀತಿಯಾಗಿ; ತೂಷ್ಣೀಂಭಾವ=ಮೌನಭಾವ; * ಉಳಿಮೆ ಅಹ=ಉಳಿದಿರುವ; * ತಿಳಿಯಲ್ಕೆ=ತಿಳಿಯಲು; * ಅಸಾಧ್ಯವಲಾ=ಸಾಧ್ಯವಿಲ್ಲವಲ್ಲಾ!; * ನಿಜ ತಾವುತಾವಾಗಿ=ಸತ್ಯಸ್ವರೂಪರು, ಜ್ಞಾನದ ನೆಲೆ ತಾವಾಗಿ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಬ್ರಹ್ಮವಿದು ನೋಡೆಂದು ತೋರಲು
ಬ್ರಹ್ಮಮೊದಲಾದವರಿಗಳವೇ?
ಹಮ್ಮುಮೊದಲಾದಖಿಳವಲ್ಲದುದೆಂದು ಪೇಳುವರು; ।
ತಮ್ಮ ನಿಜವದು ಬೇರೆ ವಸ್ತುವೆ?
ತಮ್ಮ ತಮ್ಮನುಭವಕೆ ಗೋಚರ;
ತಮ್ಮ ಹೆಗಲೇರುತ್ತ ತಾವೇ ನಡೆಯಲಳವಹುದೆ? ॥ ॥೪೮॥

**ತಾತ್ಪರ್ಯ:** 'ಇದು ಪರಬ್ರಹ್ಮ ನೋಡು' ಎಂದು ತೋರಿಸಲು (ಸಗುಣಬ್ರಹ್ಮರಾದ) ಚತುರ್ಮುಖ ಬ್ರಹ್ಮ ಮೊದಲಾದವರಿಗೆ ತೋರಿಸಲು ಶಕ್ಯವಿಲ್ಲ; ಅಹಂಕಾರ ಮೊದಲಾದವು ಅಲ್ಲದುದನ್ನು ಬ್ರಹ್ಮವೆಂದು ಹೇಳುವರು. ತಾವೇನು ಎಂಬ ಸತ್ಯವು ತಮ್ಮಲ್ಲೇ ಇರತಕ್ಕದ್ದು ಬೇರೆ ವಸ್ತುವಲ್ಲ. ಅದು ಅವರವರ ಅನುಭವಕ್ಕೆ (ಸ್ವಾನುಭವಕ್ಕೆ) ವೇದ್ಯವಾಗುವಂತಹುದು; ತಮ್ಮ ಹೆಗಲನ್ನು ತಾವೇ ಏರಿನಡೆಯಲು ಯಾರಿಗೆ ಸಾಧ್ಯ? (ಬ್ರಹ್ಮವನ್ನು ತಿಳಿಯತಕ್ಕ ಜ್ಞಾನವೂ ತಾನೂ ಬೇರೆಯಲ್ಲ ಎಂದು ತಿಳಿಯಬೇಕು ಎಂದರ್ಥ).

**ಶಬ್ದಾರ್ಥ:** ಬ್ರಹ್ಮವಿದು=ಇದಿರಲ್ಲಿರುವುದು ಬ್ರಹ್ಮವು (ಪರಬ್ರಹ್ಮ; ನಿರ್ಗುಣಬ್ರಹ್ಮ); ಬ್ರಹ್ಮ= ಚತುರ್ಮುಖಬ್ರಹ್ಮ (ಸಗುಣಬ್ರಹ್ಮ); * ಅಳವೇ?=ಶಕ್ಯವೇ, ಸಾಧ್ಯವೇ?; ಹಮ್ಮು=ಅಹಂಕಾರ, ತಮ್ಮ ತಮ್ಮ ಅನುಭವಕೆ ಸ್ವಾನುಭವಕ್ಕೆ ವೇದ್ಯ.

---

ಬುದ್ಧಿಯಿಂ ಪರವಸ್ತುವಹೆಯೆಂ
ದುದ್ಧರಿಸಿ ಗೀತೆಯಲಿ ಪಾರ್ಥಗೆ
ಸಿದ್ಧವತ್ಕರಿಸಿದನು ತಿಳಿ ನೀನೆಂದು ಶ್ರೀಕೃಷ್ಣ; ।

**ನಿರ್ಧರಿಸಲಿದು ಬ್ರಹ್ಮವೆಂದೆಲೆ**
**ಬುದ್ಧಿವಂತನೆ ತೋರಿದನೆ? ತಾ**
**ನದ್ವಯಸ್ವಾತ್ಮೈಕವೇದ್ಯವೆನಿಪ್ಪ ವಸ್ತುವನು ॥ ॥೪೯॥**

**ತಾತ್ಪರ್ಯ:** ಜ್ಞಾನವನ್ನು ಬುದ್ಧಿ, ಮನಸ್ಸು, ಜ್ಞಾನೇಂದ್ರಿಯಗಳು ಆವರಿಸಿದೆ. "ಬುದ್ಧಿಗೆ ಆತ್ಮವು ಪರವಸ್ತು ಆಗಿದೆ" ಎಂದು ಗೀತೆಯಲ್ಲಿ (೩-೪೨) ಕೃಷ್ಣನು ಅರ್ಜುನನಿಗೆ ತಿಳಿ ಎಂದು ಬೋಧಿಸಿದ್ದಾನೆ. ಇದನ್ನು ಸಾಬೀತುಗೊಳಿಸಲು ಇದೇ ಬ್ರಹ್ಮವಸ್ತು ಎಂದು ತಂದು ತೋರಿದನೇ? ಇಲ್ಲ, ಏಕೆಂದರೆ ಆತ್ಮವು ಅದ್ವಯವೂ, ಸ್ವಾತ್ಮೈಕವೇದ್ಯವಸ್ತುವೂ ಆಗಿರುವುದರಿಂದ ತನ್ನಲ್ಲಿ ತಾನೇ ತಿಳಿಯಬೇಕಾದ ವಸ್ತುವಾಗಿದೆ.

**ಶಬ್ದಾರ್ಥ:** * ಸಿದ್ಧವತ್ಕರಿಸಿದನು=ಸ್ಪಷ್ಟಪಡಿಸಿದನು, ಬೋಧಿಸಿದನು; * ನಿರ್ಧರಿಸಲು=ಪ್ರತ್ಯಕ್ಷ ತೋರಿಸಲು; * ಅದ್ವಯ=ಎರಡಲ್ಲದವನು, ಪ್ರತ್ಯಕ್ಷ, ಪರೋಕ್ಷಗಳೆಂಬ ಎರಡು ರೀತಿಯಲ್ಲಿಲ್ಲ, ಒಂದೇ ಶುದ್ಧರೂಪದಲ್ಲಿರುವವನು; * ಸ್ವಾತ್ಮೈಕವೇದ್ಯನು=ತನ್ನಲ್ಲಿ ತಾನೇ ತಿಳಿಯಬೇಕಾದವನು.

**ಟಿಪ್ಪಣಿ:** ಬುದ್ಧಿಯಿಂ ಪರವಸ್ತುವಹೆ-(ಗೀತೆ, ಅ-೩, ಶ್ಲೋ-೪೨ ನೋಡಿ)

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇ ಪರತಸ್ತುಸಃ ॥** (ಗೀತೆ, ೩-೪೨)

(ಇಂದ್ರಿಯಗಳು ಇಂದ್ರಿಯಗಳಿಗಿಂತ ಹೆಚ್ಚಿನದು; ಮನಸ್ಸು ಇಂದ್ರಿಯಗಳಿಗಿಂತಲೂ ಭಿನ್ನವಾದುದು, ಶ್ರೇಷ್ಠವಾದುದು, ಪರವಸ್ತುವಾದುದು ಆತ್ಮನು.)

---

**ಶ್ರುತಿಗುರುಗಳಿಂ ಮಥಿಸಿ ನೆರೆ ನಿ**
**ಶ್ಚಿತಮಿದೆಂಬನುಭವ ಪ್ರಮಾಣವೆ**
**ಮತಿಯಧೀನವದೆನಿಸಿಕೊಂಡೇ ತೋರುತಿರ್ಪಾಗ ।**
**ಇತರಮೆನಿಪ ಪ್ರಮಾಣವೆಂತೋ!**
**ಮತಿಗವಿಷಯನು; ವಾಗಗೋಚರ;**
**ಸುತನೆ, ಆತ್ಮವಿದೆಂದು ತೋರಿಸಲಳವೆ ಪೇಳೆಂದ ॥ ॥೫೦॥**

**ತಾತ್ಪರ್ಯ:** ವೇದಗಳಿಂದಲೂ, ಗುರೂಪದೇಶದಿಂದಲೂ ಚೆನ್ನಾಗಿ ಕಡೆದಂತೆ ನಿರ್ಣಯಿಸಲ್ಪಟ್ಟ ಅನುಭವಪ್ರಮಾಣವೇ ಬುದ್ಧಿಗೆ ಅಧೀನವೆಂದು ತೋರಿಕೆಯಲ್ಲಿ ಕಾಣುತ್ತದೆ ಎಂದಮೇಲೆ ಬುದ್ಧಿಗೆ ಇತರ ಪ್ರಮಾಣಗಳ ವಿಚಾರ ಏನೆಂದು ಹೇಳೋಣ. ವಾಸ್ತವವಾಗಿ ಬುದ್ಧಿಗೆ ಆತ್ಮನು ಎಟುಕುವ ವಿಷಯವಲ್ಲ, ಮಾತಿಗೆ ಆತ್ಮನು ಎಟುಕಲಾರನು. ಆದಕಾರಣ ಇದು ಆತ್ಮ ಎಂದು ಪ್ರತ್ಯಕ್ಷ ತೋರಿಸಲು ಸಾಧ್ಯವೇ? ಹೇಳು ಶುಕನೇ ಎಂದನು. ಆತ್ಮನು ಬುದ್ಧಿಗೆ ಎಟುಕದ ಪರವಸ್ತು ಎಂಬುದನ್ನು ಈ ಪದ್ಯದಲ್ಲಿ ಮತ್ತಷ್ಟು ವಿವರಿಸಿದ್ದಾನೆ.

**ಶಬ್ದಾರ್ಥ:** ಮಥಿಸಿ=ಕಡೆದಹಾಗೆ ವಿಚಾರಮಾಡಿ, ನಿರ್ಣಯಿಸಲ್ಪಟ್ಟು; * **ತೋರುತಿರ್ಪಾಗ**= ತೋರಿಕೆಯಲ್ಲಿ ಕಾಣುತ್ತಿರುವ; * **ಮತಿಗೆ+ಅವಿಷಯನು**=ಬುದ್ಧಿಗೆ ಎಟುಕುವ ವಸ್ತುವಲ್ಲ; * **ವಾಗಗೋಚರ** =ಮಾತಿಗೆ ಸಿಲುಕದವನು.

---

**ಮತಿಗಗೋಚರವಾದ ವಸ್ತುವ**
**ನಿತರವೆನಿಪ ಪ್ರಮಾಣಗಳು ನಿ**
**ಶ್ಚಿತವ ಮಾಡೆ ಸಮರ್ಥವಲ್ಲವತೀಂದ್ರಿಯವದಾಗಿ; ।**
**ಶ್ರುತಿಗಳರುಪಿದ ತೆರದಿ, ಸದ್ಗುರು**
**ಕೃತಮಹಾನುಗ್ರಹದಿ, ತಿಳಿಯ**
**ಲ್ಕತುಲವಾದಪರೋಕ್ಷದನುಭವದಿಂದಲದು ವೇದ್ಯ ॥ ॥೫೧॥**

**ತಾತ್ಪರ್ಯ:** ಬುದ್ಧಿಗೆ ಅಗೋಚರವಾದ ವಸ್ತುವನ್ನು ಇತರವೆನಿಸುವ (ಅನ್ಯ) ಪ್ರಮಾಣಗಳು ಆತ್ಮಸ್ವರೂಪವನ್ನು ನಿಶ್ಚಯಿಸಲು ಶಕ್ತವಲ್ಲ; ಏಕೆಂದರೆ ಆತ್ಮವು ಇಂದ್ರಿಯಾತೀತವಾದುದು. ಅದನ್ನು ನಿಶ್ಚಯಿಸಲು ವೇದಗಳು ಬೋಧಿಸಿದ ಪ್ರಕಾರ, ಸದ್ಗುರು ಮಾಡುವ ಉಪದೇಶಾನುಗ್ರಹದಿಂದ ಉಂಟಾಗುವ ಅಸಮಾನವಾದ ಅಪರೋಕ್ಷಾನುಭವದಿಂದ (ಸ್ವಾನುಭವದಿಂದ) ತಿಳಿಯಲು ಶಕ್ಯ.

**ಶಬ್ದಾರ್ಥ:** * **ಅತೀಂದ್ರಿಯವು**=ಇಂದ್ರಿಯಗಳಿಂದ ಕಾಣಲಾಗದ; * **ಶ್ರುತಿಗಳು ಅರುಪಿದ ತೆರದಿ**=ವೇದಗಳು ತಿಳಿಸಿದ ಪ್ರಕಾರ; * **ಅತುಲವಾದ**=ಅಸಮಾನವಾದ;

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಜ್ಞಾನದಾಶ್ರಯದಿಂದ ಪ್ರತ್ಯ**
**ಕ್ಷಾನುಮಾನಾದಿಪ್ರಮಾಣವು;**
**ಜ್ಞಾನವನು ನೆರೆ ಬಿಟ್ಟವಕ್ಕೆ ಸ್ವತಂತ್ರವಿಲ್ಲವೆನೆ ।**
**ಜ್ಞಾನದಾಧೀನಂಗಳದರಿಂ**
**ಜ್ಞಾನದಿಂದಧಿಕ ಪ್ರಮಾಣಗ**
**ಳೇನುಮಿಲ್ಲಾ! ಜ್ಞಾನ ತಾನೇ ಸ್ವಾನುಭವವೇದ್ಯ ॥ ॥೫೨॥**

**ತಾತ್ಪರ್ಯ:** ಪ್ರತ್ಯಕ್ಷ, ಅನುಮಾನ ಮೊದಲಾದ ಪ್ರಮಾಣಗಳು ಜ್ಞಾನದಿಂದ ಮಾತ್ರ ಸಿದ್ಧವಾಗುತ್ತವೆ. ಆದ್ದರಿಂದ ಜ್ಞಾನವನ್ನು ಬಿಟ್ಟುಬಿಟ್ಟು ಬೇರೆರೀತಿಯಲ್ಲಿ ಅವುಗಳಿಗೆ ಸ್ವತಂತ್ರ ಅಸ್ತಿತ್ವವು ಇಲ್ಲದೇ ಹೋಗುತ್ತವೆ. ಆದಕಾರಣ ಎಲ್ಲವೂ ಜ್ಞಾನಕ್ಕೆ ಆಧೀನವಾಗಿವೆ. ಆದ್ದರಿಂದ ಜ್ಞಾನಕ್ಕಿಂತ ಶ್ರೇಷ್ಠಪ್ರಮಾಣ ಬೇರಾವುದೂ ಇಲ್ಲ. ಆದರೆ ಜ್ಞಾನವನ್ನು ಸ್ವಾನುಭವದಿಂದ ಮಾತ್ರ ಪಡೆಯಲು ಸಾಧ್ಯ.

---

## ವಾದದ ಅನವಶ್ಯಕತೆ (೫೩-೫೪)

ಅದ್ವಯಾನಂದಾಮೃತಾಬ್ಧಿಯೊ
ಳದ್ದಿ ತಾನಾಗಿದ್ದು ತೋರುವ
ಸಿದ್ಧ ಸುಮ್ಮನೆಯಿದ್ದು ಪೋಪನು ಮೂಕನಂದದಲಿ; ।
ಉದ್ಧರಿಸಿ ಶ್ರುತಿಶಿರಗಳಾತ್ಮನ
ಹೊದ್ದಲರಿಯದೆ ತಾವೆ ತಮ್ಮೊಳು
ಬದ್ಧಮೌನದಲಿರ್ಪುವದರಿಂ ವಾದವೇಕೆಂದ ॥ ॥೫೩॥

**ತಾತ್ಪರ್ಯ:** ಅಭಿನ್ನಭಾವನಾಗಿ ಆನಂದಾಮೃತ ಸಾಗರದಲ್ಲಿ ಮುಳುಗಿ ತಾನೇ ತಾನಾಗಿರುವ ಸಿದ್ಧಿಯನ್ನು ಪಡೆದ ಸಿದ್ಧನು ಮೂಗನಹಾಗೆ ಮೌನದಲ್ಲಿ ಆತ್ಮರೂಪಿಯಾಗಿಬಿಡುವನು. ಆತ್ಮರೂಪಿಯಾದ ಅವನು ಆತ್ಮದ ವಿಷಯವಾಗಿರುವ ಗೊಂದಲಗಳ ಆಚೆಗೆ ತಲದಲ್ಲಿರುತ್ತಾನೆ. ಅವನನ್ನು ವೇದಗಳು ಕೂಡ ಮೇಲಕ್ಕೆತ್ತಿ, ತಂದು ತೋರಿಸಲಾರದೆ ಮೌನವ್ರತವನ್ನು ತಾಳುತ್ತವೆ, ಎಂದಮೇಲೆ ಅಂಥಯೋಗಿಗೆ ವೇದಪ್ರಮಾಣಗಳೂ, ವಾದಗಳೂ ವ್ಯರ್ಥವಾಗಿದೆ.

**ಶಬ್ದಾರ್ಥ:** **ಅದ್ದಿ**=ಮುಳುಗಿ; **ತಾನಾಗಿದ್ದು**=ತಾನೇ ತಾನಾಗಿದ್ದು; **ಉದ್ಧರಿಸಿ**=ಮೇಲಕ್ಕೆತ್ತಿ (ಆತ್ಮನ ವಿಷಯಗಳ ಗಡಿಬಿಡಿಯಲ್ಲಿ ತಲವನ್ನು ಹಿಡಿದಿರುವನು ಅವನನ್ನು ಮೇಲಕ್ಕೆತ್ತಲು); **ಶ್ರುತಿಶಿರಗಳು ಆತ್ಮನ ಹೊದ್ದಲರಿಯದೆ**=ವೇದಗಳು ಕೂಡ ಅವನನ್ನು ಮೇಲಕ್ಕೆತ್ತಿ ತೋರಿಸಲಾರದೆ ಹೋದವು ಎಂದರ್ಥ; **ಬದ್ಧಮೌನದಲಿ**=ಮಾತನಾಡದೆ ಇರುವ ವ್ರತವನ್ನು ಹಿಡಿದುಕೊಂಡು.

---

ಕೂಗಿದರೆ ತನ್ನಂತೆ ಮಾರ್ದನಿ
ಯಾಗೆ ಕೂಗುತಲಿಹುದು ಪರ್ವತ
ವಾಗಲದು ತಾ ಸುಮ್ಮನಿರ್ದೊಡೆ ಸುಮ್ಮನಿಪ್ಪಂತೆ ।
ಆಗಹೋಗದ ಬಯಲ ಬಳಲಿಕೆ
ಯಾಗೆ ಹೋರುವ ವಾದಿಯೊಡನೆಲೆ
ಮೂಗನಾಗಿಹುದೊಳ್ಳಿತೈ ಶುಕಯೋಗಿ ಕೇಳೆಂದ ॥ ॥೫೪॥

**ತಾತ್ಪರ್ಯ:** ನಾವು ಪರ್ವತದ ಬಳಿ ನಿಂತು ಕೂಗಿದರೆ ಆ ಪರ್ವತವು ಗುಹಾದನಿಯಂತೆ ನಾವು ಕೂಗಿದಂತೆಯೇ ಮರುಧ್ವನಿ ಮಾಡುತ್ತದೆ. ನಾವು ಮೌನವಾಗಿದ್ದರೆ ಆ ಪರ್ವತವೂ ಸುಮ್ಮನಿರುತ್ತದೆ. ಅದರಂತೆ ಆಗದ ಹೋಗದ ವಾದಿಯೊಡನೆ ತರ್ಕಮಾಡಿದರೆ ವೃಥಾಶ್ರಮವಾಗುತ್ತದೆ ಅಷ್ಟೆ. ಆದಕಾರಣ ಏನೂ ಪ್ರಯೋಜನವಿಲ್ಲದ ವಾದಿಗಳೊಡನೆ ಚರ್ಚಿಸದೆ ಸುಮ್ಮನಿರುವುದು ಒಳ್ಳೆಯದು ಎಂದು ವ್ಯಾಸರು ಶುಕನಿಗೆ ಹೇಳಿದರು.

**ಶಬ್ದಾರ್ಥ:** * ಬಯಲಬಳಲಿಕೆ=ವ್ಯರ್ಥವಾದ ಆಯಾಸ, ವ್ಯಥಾಶ್ರಮ, ಏನೂ ಪ್ರಯೋಜನವಿಲ್ಲದ ವಾದ; * ಹೋರುವ=ತರ್ಕಮಾಡುವ; * ಮೂಗ=ಮೂಕ, ಮೌನಿ; * ಒಳ್ಳಿತ್ತೈ=ಒಳ್ಳೆಯದು.

**ಪಾಠಾಂತರ:** * ಸುಮ್ಮನಿರ್ದೊಡೆ=ಸುಮ್ಮನಿದ್ದಡೆ (ಕು)

---

ಪ್ರಬಲದುರ್ಬಲವೆಂಬ ಶ್ರುತಿಶಿರ
ವಭಿನಯಿಸುವೀ ವಾಕ್ಯದೊಳಗೆಲೆ
ಪ್ರಬಲವೇ ಸಿದ್ಧಾಂತ; ದುರ್ಬಲವದು; ಸಾಧುವಾದವದು ।
ಪ್ರಬಲವದು ಮೂರ್ಖರಿಗಸಾಧ್ಯವ
ದಬಲರಾ ದುರ್ಬಲದ ಶ್ರುತಿಗಳ
ನಿಬಿಡವಾಗಿಯೆ ಸಾಧಿಸುವರ್ಕೈ ಮಗನೆ ಕೇಳೆಂದ ॥ ॥೫೫॥

**ತಾತ್ಪರ್ಯ:** ವೇದಾಂತವಾಕ್ಯಗಳಲ್ಲಿ ಪ್ರಬಲ ಆಧಾರವಾಕ್ಯಗಳು, ದುರ್ಬಲ ಆಧಾರ ವಾಕ್ಯಗಳು ಎಂದು ಎರಡು ಬಗೆಯ ವಾಕ್ಯಗಳಿವೆ. ಈ ವಾಕ್ಯಗಳಲ್ಲಿ ಅದ್ವೈತ ಸಿದ್ಧಾಂತವನ್ನು ಹೇಳುವ ಶ್ರುತಿವಾಕ್ಯಗಳೇ ಪ್ರಬಲವಾದವು. ವಾದಮಾಡಬಹುದಾದ್ದೆಂದು ಮಾತ್ರ ಹೇಳುವ (ಅನುಭವರಹಿತ ಕೇವಲ ತರ್ಕದ) ಮಾತುಗಳು ದುರ್ಬಲವಾದವು; ಪ್ರಬಲವಾದ ಶ್ರುತಿಯ ಅರ್ಥವು ಮೂಢರಿಗೆ ತಿಳಿಯಲು ಅಸಾಧ್ಯವು. ಆದ್ದರಿಂದ ಅಶಕ್ತರು ದುರ್ಬಲವಾದ ಶ್ರುತಿ ವಾಕ್ಯಗಳನ್ನು ಬಿಡದೆ ವಿಪುಲವಾಗಿ ಬಳಸಿ ವಾದಿಸುತ್ತಾರೆ.

**ಶಬ್ದಾರ್ಥ:** ಅಭಿನಯಿಸುವ=ವಾಕ್ಯದಿಂದ ತಿಳಿಯಪಡಿಸುವ; * ಶ್ರುತಿಶಿರವು=ಉಪನಿಷತ್‌ವಾಕ್ಯಗಳು, ವೇದಾಂತವಾಕ್ಯಗಳು; * ಪ್ರಬಲವೇ ಸಿದ್ಧಾಂತ=ಅದ್ವೈತಸಿದ್ಧಾಂತ ಪ್ರತಿಪಾದಿಸುವ ವಾಕ್ಯಗಳೇ ಪ್ರಬಲವಾದ ಶ್ರುತಿವಾಕ್ಯಗಳು; * ಮೂರ್ಖರಿಗೆ=ಮೂಢರಿಗೆ; * ದುರ್ಬಲದ ಶ್ರುತಿಗಳ=ಅನುಭವ ವೇದ್ಯವಲ್ಲದ ಶುಷ್ಕತರ್ಕದ ಶ್ರುತಿವಾಕ್ಯಗಳನ್ನು ಆಧರಿಸಿ ವಾದಮಾಡುವುದು; * ಸಾಧುವಾದ =ಮಾಡಬಹುದಾದ್ದೆಂದು ಮಾತ್ರ ಹೇಳುವ ಮಾತು; * ಪ್ರಬಲವು=ಪ್ರಬಲಶ್ರುತಿಯ ಅರ್ಥವನ್ನು ಅನುಭವಿಸುವುದು; * ನಿಬಿಡವಾಗಿ=ದಟ್ಟವಾಗಿ, ಸಾಂದ್ರವಾಗಿ, ಅಧಿಕವಾಗಿ, ವಿಪುಲವಾಗಿ.

---

ಪುತ್ರರನು ಪಡೆಯಲ್ಕೆ ಯಾಗವ
ನುಕ್ತವಿಧಿಯೊಳು ಮಾಡಬೇಕೆಂ
ದತ್ಯಧಮರಿಗೆ ಪೇಳ್ದುದಾ ದುರ್ಬಲದ ಶ್ರುತಿವಾಕ್ಯ ।
ಉತ್ತಮರುಗಳ ಕುರಿತು ನುಡಿದವು
ಸತ್ಯವಿಜ್ಞಾನವನೆ ಸಾಧಿಸಿ
ಮುಕ್ತಿಯನು ಪಡೆಯೆಂದು ಪ್ರಬಲ ಶ್ರುತಿಶಿರಗಳೊಲಿದು ॥ ॥೫೬॥

**ತಾತ್ಪರ್ಯ:** ದುರ್ಬಲವಾದ ಶ್ರುತಿವಾಕ್ಯಗಳು ಪುತ್ರಾಪೇಕ್ಷಿಯಾದವನು ಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ “ಪುತ್ರಕಾಮೋೕಯಜೇತ” ಎಂದು ಯಾಗಮಾಡಬೇಕೆಂದು ಆತ್ಮಜ್ಞಾನವನ್ನು ಪಡೆಯುವ ವಿಷಯದಲ್ಲಿ ಬಹಳ ಕಡಿಮೆಯ ಸಾಮರ್ಥ್ಯವುಳ್ಳ

ಅತ್ಯಧಮರಿಗೆ ಹೇಳಿದ್ದೇ ಹೊರತು ಉತ್ತಮರಿಗಲ್ಲ. "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಮೊದಲಾದ ಸಿದ್ಧಾಂತ ಪ್ರಮಾಣಗಳನ್ನು ತಿಳಿದು ಸಾಧಿಸಿ ಮುಕ್ತಿಯನ್ನು ಪಡೆಯತಕ್ಕದ್ದು ಎಂದು ಪ್ರಬಲಶ್ರುತಿಗಳು ಉತ್ತಮರಿಗೆ ಹೇಳಿದೆ.

**ಶಬ್ದಾರ್ಥ: ಉಕ್ತವಿಧಿಯೊಳು**=ಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ; **ಅತ್ಯಧಮರಿಗೆ**=ಆತ್ಮಜ್ಞಾನವನ್ನು ಪಡೆಯುವ ವಿಷಯದಲ್ಲಿ ಬಹಳ ಕಡಿಮೆಯ ಸಾಮರ್ಥ್ಯವುಳ್ಳವರಿಗೆ; **ಅತ್ಯಧಮರಿಗೆ ಪೇಳ್ವುದು**=ಅತ್ಯಧಿಕ ನೀಚರಿಗೆ ದುರ್ಬಲ ಶ್ರುತಿಗಳು ಹೇಳುವಮಾತು.

**ಟಿಪ್ಪಣಿ-೧: * ದುರ್ಬಲದ ಶ್ರುತಿವಾಕ್ಯ**=ಪುತ್ರ ಕಾಮೋಯಜೇತ, ಸ್ವರ್ಗಕಾಮೋಯಜೇತ, ಪಶುಕಾಮೋಯಜೇತ, ಪುತ್ರಾಪೇಕ್ಷಿಯಾದವನು, ಸ್ವರ್ಗಾಪೇಕ್ಷಿಯಾದವನು, ಪಶುಗಳನ್ನು ಆಶಿಸುವವನು ಮಾಡಬೇಕಾದ ಯಾಗಗಳನ್ನು ಹೇಳುವ ಶ್ರುತಿವಾಕ್ಯಗಳನ್ನು ಅನುಸರಿಸುವುದು.

**ಟಿಪ್ಪಣಿ-೨: * ಸತ್ಯವಿಜ್ಞಾನವನೆ ಸಾಧಿಸಿ ಮುಕ್ತಿಯನು ಪಡೆ**=ಸತ್ಯಂಜ್ಞಾನಮನಂತಂ ಬ್ರಹ್ಮ, ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ ಬ್ರಹ್ಮವಿದಾಪ್ನೋತಿಪರಂ ಇತ್ಯಾದಿ ಸಿದ್ಧಾಂತ ಪ್ರಮಾಣಗಳು.

---

**ಅಪ್ರಮೇಯನಸಂಗನದ್ವಯ**
**ನಪ್ರತರ್ಕ್ಯನನಾಮರೂಪನು**
**ಮಪ್ರತಿಮನವ್ಯಯನತೀಂದ್ರಿಯ ವಾಙ್ಮನೋದೂರ ।**
**ಸ್ವಪ್ರಕಾಶವು ಬ್ರಹ್ಮವೆಂದದ**
**ನೀಪ್ರಕಾರದಿ ಹೇಳುತಿರುತಿಹ**
**ವಾ ಪ್ರಬಲ ಶ್ರುತಿಶಿರಗಳಾ ನಿರುಪಾಧಿರೂಪವನು ॥ ॥೫೭॥**

**ತಾತ್ಪರ್ಯ:** ಅಪ್ರಮೇಯನು, ಅಸಂಗನು, ಅದ್ವಯನು, ಅತರ್ಕ್ಯನು, ಅನಾಮರೂಪನು, ಅಪ್ರತಿಮನು, ಅವ್ಯಯನು, ಅತೀಂದ್ರಿಯ ವಾಙ್ಮನೋದೂರ, ಸ್ವಪ್ರಕಾಶವು ಬ್ರಹ್ಮವು ಸ್ವಯಂಜ್ಯೋತಿಯಾದ ನಿರುಪಾದಿಕರೂಪವಾದ ಪರಬ್ರಹ್ಮನು ಎಂಬುದಾಗಿ ಪ್ರಬಲಶ್ರುತಿವಾಕ್ಯಗಳು ಸಾರುತ್ತಿವೆ.

**ಶಬ್ದಾರ್ಥ: ಅಪ್ರಮೇಯನು** (ಯಾವ ಪ್ರಮಾಣದಿಂದಲೂ ತಿಳಿಯುವುದಕ್ಕೆ ಆಗದವನು); * **ಅಸಂಗನು** (ಯಾವುದೇ ಸಂಬಂಧ ಹೊಂದದಿರುವನು); * **ಅತರ್ಕ್ಯನು** (ವಾದದಿಂದ ಸಾಧಿಸಲಾಗದವನು); * **ಅನಾಮರೂಪನು**=ನಾಮರೂಪಗಳಿಲ್ಲದವನು; **ಅಪ್ರತಿಮನು**= ಸಮಾನರಿಲ್ಲದವನು; **ಅಪ್ರಕರ್ತ್ಯನು**=ತರ್ಕದಿಂದ ಸಾಧಿಸಲು ದಕ್ಕದವನು; * **ಸ್ವಪ್ರಕಾಶ**= ಸ್ವಯಂಜ್ಯೋತಿ; * **ಬ್ರಹ್ಮ**=ನಿರ್ಗುಣಬ್ರಹ್ಮನು.

---

## ಪ್ರಶ್ನೆ (೫೮)

**ನಾಮರೂಪವಿಕಾರವಿಲ್ಲದ**
**ನಾಮಯಗೆ ನಾಮಗಳ ಕಲ್ಪನೆ**
**ನೇಮದಿಂದಿರಲಾದುದೆಂತೈ ತಂದೆ? ಹೇಳೆನಲು ।**

ಪ್ರೇಮದಿಂ ಪೇಳಿದನು ಮುನಿಪತಿ
ಯೀ ಮಹಾಮಾಯೆಯೊಳು ಸಂಗವ
ದಾ ಮಹಿಮಗಿಲ್ಲೆಂದು ಪೇಳುತ್ತಿರ್ಪ ಶ್ರುತಿಮತವ ॥ ॥೫೮॥

**ತಾತ್ಪರ್ಯ:** ನಾಮರೂಪಗಳೆಂಬ ವಿಕಾರಗಳಿಲ್ಲದ ಅನಾಮಯನಿಗೆ ನಾಮಗಳನ್ನು ಕಲ್ಪಿಸಿ ನಿಯಮಮಾಡಿರುವುದು ಹೇಗೆ? ಎಂದು ಶುಕನು ಕೇಳಲು ಈ ಮಹಾಮಾಯೆಯ ಸಹವಾಸದಿಂದ ಅನಾಮರೂಪಗಳು ಉಂಟಾಗಿರುವುವೇ ಹೊರತು ಆ ಮಹಾ ಮಹಿಮನಾದ ಆತ್ಮನಿಗೆ ಆ ನಾಮವಿಕಾರಗಳು ಇಲ್ಲೆಂದು ಶ್ರುತಿಗಳು ಸಾರುತ್ತಿವೆ ಎಂಬುದಾಗಿ ವ್ಯಾಸನು ಶುಕನಿಗೆ ಹೇಳಿದನು.

**ಪದವಿಭಾಗ:** ವಿಕಾರವಿಲ್ಲದನಾಮಯಗೆ=ವಿಕಾರವಿಲ್ಲದ+ಅನಾಮಯಗೆ; ನೇಮದಿಂದಿರಲಾದುದೆಂತೈ=ನೇಮದಿಂದ+ಇರಲು+ಆದುದು+ಎಂತೈ?.

**ಶಬ್ದಾರ್ಥ:** ಅನಾಮಯಗೆ=ನಿರ್ದೋಷನಿಗೆ; * ನೇಮದಿಂದ=ನಿಯಮದಿಂದ; * ಸಂಗ= ಸಹವಾಸ; * ಆ ಮಹಿಮಗೆ=ಆ ಶುದ್ಧಾತ್ಮನಿಗೆ; ತಂದೆ ಹೇಳೆನಲು=ಶುಕನು ತಂದೆಯಾದ ವ್ಯಾಸನನ್ನು ಕೇಲು; ಮುನಿಪತಿ=ವ್ಯಾಸನು; ಶ್ರುತಿಮತವ=ಶ್ರುತಿಗಳು ಸಾರುತ್ತಿವೆ.

---

## ಮಹಾವಾಕ್ಯಗಳು (೫೯–೬೦)

ಸ್ವಾನುಭವ ಮೊದಲಾದ ಬುದ್ಧಿ
ಜ್ಞಾನಗಳಿಗಿಂದಧಿಕವದು ಪ್ರ
ಜ್ಞಾನವೇ ಪರಬೊಮ್ಮವೆನೆ ಋಗ್ವೇದಗತವಾಕ್ಯ ।
ಈ ನಿಖಿಲದೊಳಹೊರಗೆ ಸತ್ಯ
ಜ್ಞಾನಸುಖಮಯವಪ್ಪ ಬ್ರಹ್ಮವೆ
ತಾನೆನಲಥರ್ವಣಶಿರೋಗತವಾಕ್ಯದರ್ಥವದು ॥ ॥೫೯॥

**ತಾತ್ಪರ್ಯ:** ಸ್ವಾನುಭವವೇ ಮೊದಲಾದ ಬುದ್ಧಿಯಿಂದ ತಿಳಿಯುವ ಜ್ಞಾನವನ್ನು ಮೀರಿದ ಸತ್ಯ "ಪ್ರಜ್ಞಾನವೇ ಪರಬೊಮ್ಮ" (ಪ್ರಜ್ಞಾನಂ ಬ್ರಹ್ಮ) ಎಂಬ ಮಾತು ಋಗ್ವೇದದ್ದಾಗಿದೆ. ಇನ್ನು ಈ ಸಮಸ್ತವಸ್ತುಗಳ ಒಳಗೂ ಹೊರಗೂ ಸತ್ಯವಾಗಿಯೂ ಜ್ಞಾನಮಯವಾಗಿಯೂ ಆನಂದಮಯವಾಗಿಯೂ ಇರುವ ಪರಬ್ರಹ್ಮವೇ ತಾನು (ಅಹಂ ಬ್ರಹ್ಮಾಸ್ಮಿ) ಎಂದು ಅಥರ್ವಣ ವೇದವು ಪ್ರಸಿದ್ಧವಾಕ್ಯ ಹೇಳುತ್ತಿದೆ.

**ಶಬ್ದಾರ್ಥ:** ಬುದ್ಧಿಜ್ಞಾನಗಳಿಗಿಂತ=ಬುದ್ಧಿಯಿಂದ ತಿಳಿಯುವ ಜ್ಞಾನಗಳಿಗಿಂತ; * ನಿಖಿಲದೊಳು=ಈ ಸಮಸ್ತವಸ್ತುಗಳಲ್ಲಿ; * ಸುಖಮಯ=ಆನಂದಸ್ವರೂಪ; * ಅಥರ್ವಣ ಶಿರೋಗತವಾಕ್ಯ= ಅಥರ್ವಣ ವೇದದ ಪ್ರಸಿದ್ಧ ವಾಕ್ಯ.

---

ಕಳೆದು ಪದಗಳ ವಾಚ್ಯವೆರಡನು
ಮುಳಿದಲಕ್ಷ್ಯವೆ ನೀನೆನುತ ಗುರು
ತಿಳುಹಲಂತದು ಸಾಮಶಿರಗತ ತತ್ತ್ವಮಸಿವಾಕ್ಯ; ।
ಒಳಗೆ ಬುದ್ಧಿಗೆ ಸಾಕ್ಷಿಯಾಗಿಯೆ
ಬೆಳಗುತಿರ್ಪ ಆತ್ಮನೇ ಕೇ
ಳೆಲೆ ಯಜುರ್ಗತವಾಕ್ಯದಲಿ ಪರಬೊಮ್ಮನೆನಿಸುವನು ॥ ॥೬೦॥

ತಾತ್ಪರ್ಯ: ತತ್+ತ್ವಂ+ಅಸಿ ಎಂಬ ಮೂರು ಪದಗಳಲ್ಲಿ ತತ್, ತ್ವಂ ಎರಡು ಪದಗಳು ವಾಚ್ಯಾರ್ಥಪದಗಳಾಗಿವೆ. ಅದನ್ನು ಬಿಟ್ಟು ಉಳಿದ 'ಅಸಿ' ಪದವು ಲಕ್ಷ್ಯಾರ್ಥದ ಪದವಾಗಿದೆ ಎಂದರೆ ಈ ಆತ್ಮನೇ ಪರಬ್ರಹ್ಮ (ಅಯ ಮಾತ್ಮಾಬ್ರಹ್ಮ) ಎಂದು ಸಾಮವೇದವು ಹೇಳುತ್ತದೆ. ಇನ್ನು ಪರಬ್ರಹ್ಮನೆಂಬುವನು ಒಳಗೆ ಬುದ್ಧಿಗೆ ಸಾಕ್ಷಿಯಾಗಿಯೇ ಪ್ರಕಾಸಿಸುತ್ತಿರುತ್ತಾನೆ (ಅಂತರ್ ಬಹಿತ್ವ ತತ್ಸರ್ವಂ ವ್ಯಾಪ್ಯನಾರಾಯಣ ಸ್ಥಿತಃ) ಎಂಬುದಾಗಿ ಯಜುರ್ವೇದದಲ್ಲಿ ಹೇಳಲಾಗಿದೆ.

---

ದೇಶಕಾಲ ಸಮಸ್ತವಸ್ತುಗ
ಳೈಸರಲಿ ಪರಿಪೂರ್ಣ ಪರಮಾ
ಕಾಶನನವಚ್ಛಿನ್ನನಪ್ಪುದರಿಂದನಂತಾಖ್ಯ; ।
ಭಾಸಿಸುತ್ತಿಹುದಖಿಲ ತೇಜೋ
ರಾಶಿಗಳನದರಿಂ ಪರಂಜ್ಯೋ
ತಿಸ್ವರೂಪವು; ಸಕಲಕಾತ್ಮವಿದೆಂದು ಸರ್ವಾತ್ಮ ॥ ॥೬೧॥

ತಾತ್ಪರ್ಯ: ದೇಶ, ಕಾಲ, ಸಮಸ್ತ ವಸ್ತುಗಳಷ್ಟರಲ್ಲೂ ಪರಿಪೂರ್ಣವಾಗಿ ಆವರಿಸಿರುವುದರಿಂದ ಪರಮಾಕಾಶವೆನಿಸಿಕೊಂಡಿದ್ದಾನೆ. ಆ ಆತ್ಮನೇ ಆಕಾಶಕ್ಕಿಂತ ಮಿಗಿಲಾದವನಾದ್ದರಿಂದ ಅನಂತನೆನಿಸಿಕೊಂಡಿದ್ದಾನೆ. ಅಖಿಲತೇಜೋರಾಶಿಗಳಿಂದ ಪ್ರಕಾಶಿಸುತ್ತಿರುವುದರಿಂದ ಪರಜ್ಯೋತಿಸ್ವರೂಪನೆನಿಸಿಕೊಂಡಿದ್ದಾನೆ, ಸಕಲವಸ್ತುಗಳಲ್ಲೂ ಆತ್ಮಸ್ವರೂಪನಾಗಿರುವುದರಿಂದ ಸರ್ವಾತ್ಮನೆನಿಸಿಕೊಂಡಿದ್ದಾನೆ.

---

ನಳಿನಸಖನೊಲು ತನ್ನ ತಾನೇ
ಬೆಳಗುತಿಹ ಕತದಿಂ ಸ್ವಯಂಪ್ರಭ;
ತಿಳಿಯಲನ್ಯವ ತನ್ನನುಭಯವ ಬೆಳಗುವದರಿಂದ ।
ಅಲಘುಮತಿ, ಸ್ವಪರಪ್ರಕಾಶನು;
ಪೊಳೆಯುತಿರ್ಪನ್ಯಪ್ರಕಾಶವ
ಬೆಳಗುವದರಿಂ ಸುಪ್ರಕಾಶನು ಮಗನೆ ಕೇಳೆಂದ ॥ ॥೬೨॥

**ತಾತ್ಪರ್ಯ:** ಚಿತ್ಸ್ವರೂಪನಾದ ಪರಮಾತ್ಮನು ಕಮಲಮಿತ್ರನಾದ ಸೂರ್ಯನ ಹಾಗೆ ತನ್ನನ್ನು ತಾನೇ ಬೆಳಗುತ್ತಿರುವುದರಿಂದ **ಸ್ವಯಂಪ್ರಭ** ಎನಿಸಿದ್ದಾನೆ. ತಾನು ಬೆಳಗುವುದರ ಜತೆಗೆ ಅನ್ಯವಸ್ತುಗಳನ್ನು ಬೆಳಗಿಸುವ ಕಾರಣದಿಂದ **ಸ್ವಪರಪ್ರಕಾಶನೆನಿಸಿದ್ದಾನೆ**. ಎಲೈ ತೀಕ್ಷ್ಣಮತಿಯಾದ ಶುಕನೇ ಕೇಳು, ಹೊಳೆಯುವ ಸೂರ್ಯ ಮೊದಲಾದ ಅನ್ಯವಸ್ತುಗಳ ಪ್ರಕಾಶವನ್ನು ಬೆಳಗುವುದರಿಂದ **ಸುಪ್ರಕಾಶನು** ಎನಿಸಿದ್ದಾನೆ.

**ಶಬ್ದಾರ್ಥ:** * **ಸ್ವಯಂಪ್ರಭ**=ಸೂರ್ಯನಂತೆ ತನ್ನನ್ನು ತಾನೇ ಬೆಳಗುತ್ತಿರುವವನು; * **ನಳಿನಸಖ**=ಕಮಲಮಿತ್ರ, ಸೂರ್ಯ; * **ಕತದಿಂ**=ಕಾರಣದಿಂದ; **ಸುಪ್ರಕಾಶನು**=ಶ್ರೇಷ್ಠ ಪ್ರಕಾಶನು.

**ಪಾಠಾಂತರ:** **ಸುಪ್ರಕಾಶನು (ಹೊ) ಎಂಬಲ್ಲಿ ಬಹುಕಡೆ (ಇತರಪ್ರತಿಗಳಲ್ಲಿ) ಸ್ವಪ್ರಕಾಶನು ಎಂದಿದೆ (ಕು).**

---

**ಬುದ್ಧಿಮೊದಲಾದಿಂದ್ರಿಯಗಳಿಗೆ**
**ವೇದ್ಯನಲ್ಲದರಿಂದತೀಂದ್ರಿಯ;**
**ಶುದ್ಧಸಂವಿತ್ತಾಗಿ ಶುದ್ಧನು ಜ್ಞಾನಮಯನೆನಿಸಿ; ।**
**ಬದ್ಧಮಾಯಾವರಣವಾವನ**
**ಹೊದ್ದದದರಿಂ ನಿತ್ಯಮುಕ್ತನು;**
**ವೇದ್ಯನಲ್ಲವನೇತರಿಂದಲು, ಬೋಧ್ಯನಲ್ಲೆಂದ ॥ ॥೬೩॥**

**ತಾತ್ಪರ್ಯ:** ಎಲೈ ಶುಕನೇ ಕೇಳು, ಆ ಆತ್ಮನು ಬುದ್ಧಿಯೇ ಮೊದಲಾದ ಇಂದ್ರಿಯಗಳಿಗೆ ಗೋಚರಿಸದೆ ಇರುವುದರಿಂದ **ಅತೀಂದ್ರಿಯನೆನಿಸಿದ್ದಾನೆ**. ಶುದ್ಧಸಂವಿತ್ತಾಗಿ ಜ್ಞಾನಮಯನಾದ್ದರಿಂದ **ಶುದ್ಧನೆನಿಸಿದ್ದಾನೆ**. ಬದ್ಧವಾದ ಮಾಯಾ ಆವರಣವನ್ನು ಹೊಂದದವನು ಆಗಿರುವುದರಿಂದ **ನಿತ್ಯಮುಕ್ತ** ಎನಿಸಿದ್ದಾನೆ. ಆದಕಾರಣ ಯಾವುದರಿಂದಲೂ ಇತರರಿಗೆ ಬ್ರಹ್ಮಸ್ವರೂಪವನ್ನು ತಿಳಿಸಲು ಶಕ್ಯವಲ್ಲ. ಏಕೆಂದರೆ ಬ್ರಹ್ಮಸ್ವರೂಪವು ತನಗಿಂತ ಅನ್ಯವಲ್ಲವಾದ್ದರಿಂದ ತಿಳಿಸುವುದಕ್ಕೆ ಆಗದು. ಆದ್ದರಿಂದ ಅವನು **ಬೋಧ್ಯನಲ್ಲ**.

**ಶಬ್ದಾರ್ಥ:** **ಸಂವಿತ್ತನು**=ಜ್ಞಾನರೂಪಿ; * **ವೇದ್ಯವಲ್ಲ**=ತಿಳಿಯಲು ಶಕ್ಯನಲ್ಲ; * **ಬೋಧ್ಯನಲ್ಲ**=ಇತರರಿಗೆ ತಿಳಿಸಲು ಸಾಧ್ಯವಿಲ್ಲ.

**ಟಿಪ್ಪಣಿ:** **ಬೋಧ್ಯನಲ್ಲ**=ಇತರರಿಗೆ ಬ್ರಹ್ಮಸ್ವರೂಪವನ್ನು ತಿಳಿಸುವುದು ಸಾಧ್ಯವಿಲ್ಲ. (ಬ್ರಹ್ಮಸ್ವರೂಪವು ತನಗಿಂತ ಅನ್ಯವಲ್ಲವಾದ್ದರಿಂದ ತಿಳಿಸುವುದಕ್ಕಾಗುವುದಿಲ್ಲವೆಂದು ತಾತ್ಪರ್ಯ. ಹಾಗಾದರೆ ಉಪದೇಶದ ಕಾರ್ಯವೇನೆಂದರೆ, ಬ್ರಹ್ಮಜ್ಞಾನಕ್ಕೆ ದಾರಿಯನ್ನು ಕೊಡದೆ ತುಂಬಿಕೊಂಡಿರುವ ವಿಷಯಜ್ಞಾನವನ್ನು ತುಚ್ಛವೆಂದು ಹಿಮ್ಮೆಟ್ಟಿಸುವುದಿಷ್ಟೆ.)

---

**ಪರಿಪರಿಯ ಜಡದೃಶ್ಯಸಾಧನ**
**ದಿರವ ನೋಳ್ಪುದೆ ದೃಕ್ಕಚೇತನ**
**ಕರಣಗಳ ಚೇಷ್ಟಿಸುತಲಿರೆ ಚೈತನ್ಯವೆನಿಸುವದು; ।**
**ಕರಣವಿಡಿದೀ ಬಾಹ್ಯಗಳನರಿ**
**ವರಿವೆ ಕೇಳ್ಪೈ ಜ್ಞಾತೃ; ಮೇಣೆ**
**ಚ್ಚರಕನಸುನಿದ್ದೆಗಳ ಹೊದ್ದದೆ ತೋರ್ಪುದೇ ಸಾಕ್ಷಿ ॥ ॥೬೪॥**

**ತಾತ್ಪರ್ಯ:** ಆತ್ಮವು ಬಗೆಬಗೆಯ ಜಡ-ದೃಶ್ಯ ಸಾಧನಗಳನ್ನು ನೋಡುವುದೇ ದೃಕ್ ಎನಿಸುತ್ತದೆ. ಅಚೇತನವಾದ ಇಂದ್ರಿಯಗಳಿಂದ ಕೆಲಸಮಾಡಿಸಿದರೆ ಚೈತನ್ಯವೆನಿಸುತ್ತದೆ. ಇಂದ್ರಿಯಗಳ ನೆರವಿನಿಂದ ಬಾಹ್ಯವಸ್ತುಗಳನ್ನು ತಿಳಿದುಕೊಳ್ಳುವ ಅರಿವೇ ಜ್ಞಾತೃ ಎನಿಸಿಕೊಳ್ಳುತ್ತದೆ; ಮತ್ತೆ ಎಚ್ಚರಕನಸುನಿದ್ದೆಗಳು ಇಂದ್ರಿಯಗಳಿಗೇ ಹೊರತು ಆತ್ಮಕ್ಕಲ್ಲ. ಆದ್ದರಿಂದ ಆ ಅವಸ್ಥಾತ್ರಯುಗಳನ್ನು ಆವರಿಸದೆ ಕಾಣಿಸಿಕೊಳ್ಳುವುದೇ ಸಾಕ್ಷಿ ಎನಿಸುತ್ತದೆ.

---

**ಕೋಶಪಂಚಕಗಳ ವಿವೇಕದ**
**ಶೇಷಿತವೆ ಪ್ರತ್ಯಕ್ಕು; ತಿಳಿಯಲ**
**ಶೇಷತತ್ತ್ವಾಧಾರವೇ ಕೂಟಸ್ಥನೆನಿಸುವದು; ।**
**ನಾಶವಿರಹಿತವವ್ಯಯವು; ನಿ**
**ರ್ವಾಸನೆಯೆ ನಿಜ; ನಿಶ್ಚಲತ್ವದಿ**
**ಸೂಸದಿಹುದೇ ಸ್ಥಾಣುಃ ನಿರುಪಾಧಿಯೆ ನಿರಾಲಂಬ ॥ ॥೬೫॥**

**ತಾತ್ಪರ್ಯ:** ಅನ್ನಮಯಕೋಶಾದಿ ಪಂಚಕೋಶಗಳನ್ನು ವಿಂಗಡಿಸಿದ ಮೇಲೆ ಉಳಿಯುವುದೇ ಪ್ರತ್ಯಕ್ಕು; ವಿಚಾರಮಾಡಿದಾಗ, ಎಲ್ಲ ತತ್ತ್ವಗಳಿಗೂ (ಪಂಚಭೂತಗಳಿಗೂ) ಆಧಾರವಾದುದ್ದೇ ವಿಕಾರವಿಲ್ಲದೆ ಏಕರೂಪವಾಗಿರುವ ಬ್ರಹ್ಮವು (ಕೂಟಸ್ಥ). ನಾಶವಿಲ್ಲದಿರುವುದರಿಂದ ಅವ್ಯಯವು ವಾಸನೆಯಿಲ್ಲದಿರುವುದು ನಿಜ; ನಿಶ್ಚಲತ್ವದಿಂದ ಹೊರಗೆ ಹರಿದುಹೋಗದಿರುವುದೇ ಸ್ಥಾಣು; ಯಾವುದೇ ಉಪಾಧಿಯಿಲ್ಲದಿರುವುದೇ ನಿರಾಲಂಬ.

**ಶಬ್ದಾರ್ಥ:** * ಕೋಶಪಂಚಕಗಳ=೧. ಅನ್ನಮಯಕೋಶ, ೨. ಪ್ರಾಣಮಯಕೋಶ, ೩. ಮನೋಮಯಕೋಶ, ೪. ವಿಜ್ಞಾನಮಯಕೋಶ, ೫. ಆನಂದಮಯಕೋಶ; * ವಿವೇಕ ಶೇಷಿತವೆ ಪ್ರತ್ಯಕ್ಕು=ವಿವೇಕದಿಂದ ವಿಂಗಡಿಸಿದಮೇಲೆ ಉಳಿದದ್ದು ಪ್ರತ್ಯಕ್ಕು; ಅಶೇಷತತ್ತ್ವಾಧಾರವೆ=ಎಲ್ಲ ತತ್ತ್ವಗಳಿಗೂ (ಪಂಚಭೂತಗಳಿಗೂ) ಆಧಾರವಾದದ್ದೇ; ಸೂಸದಿಹುದೇ=ಹೊರಗೆ ಹರಿದು ಹೋಗದಿರುವುದೇ.

**ಪಾಠಾಂತರ:** ಪ್ರತ್ಯಕ್ಕು=ತಾದೃಕ್ಕು (ಕು)

---

ತಮದೊಳಗೆ ಬೆರೆದಿರಲು ಜೀವನು;
ವಿಮಲಸತ್ತ್ವದಲೀಶ್ವರನು; ಸಂ
ಕ್ರಮಿಸದುಭಯತ್ಯಾಗದಿಂ ಪರಮಾತ್ಮನೆನಿಸುವನು; ।
ಅಮಮ! ಕ್ಷರವಕ್ಷರವೆನಿಸುವೀ
ಕ್ರಮದ ಪುರುಷದ್ವಯವ ಮೀರ್ದು
ತ್ತಮಪುರುಷನೆನಿಪುನ್ನತವೆ ಕೇಳ್ವೈ ಪರಬ್ರಹ್ಮ ॥ ॥೬೬॥

ತಾತ್ಪರ್ಯ: ತಮೋಗುಣದಲ್ಲಿ ಆತ್ಮನು ಬೆರೆತುಕೊಂಡಿದ್ದರೆ ಜೀವನು ಎನಿಸುತ್ತಾನೆ; ಶ್ರೇಷ್ಠವಾದ ಸತ್ತ್ವಗುಣದಿಂದ ಕೂಡಿದಾಗ ಈಶ್ವರನು (ಸಗುಣಬ್ರಹ್ಮ) ಎನಿಸಿಕೊಳ್ಳುತ್ತಾನೆ. ಈ ಉಭಯ ಗುಣಗಳೊಡನೆ ಸೇರದೆ ಜೀವತ್ವವನ್ನು ಮತ್ತು ಈಶ್ವರತ್ವವನ್ನು ಕಳೆಯುವುದರಿಂದ ಪರಮಾತ್ಮ (ಪರಬ್ರಹ್ಮ) ಎನಿಸಿಕೊಳ್ಳುತ್ತಾನೆ. ಅರೆರೆ! ಕಾರ್ಯ ಪ್ರಪಂಚವೇ ಕ್ಷರ, ಇದಕ್ಕೆ ಕಾರಣವಾದ ಮಾಯೆಯೇ ಅಕ್ಷರ ಈ ಕ್ಷರ–ಅಕ್ಷರಗಳೆನಿಸುವ ಉಪಾಧಿಗಳಿಗೆ ಪುರುಷ ಎಂದು ಹೆಸರು. ಅನಾತ್ಮಗಳಲ್ಲಿರುವ ಕ್ಷರ ಮತ್ತು ಅಕ್ಷರಗಳೆಬ ಈ ಪುರುಷದ್ವಯವನ್ನು ಮೀರಿದ ಆತ್ಮವೇ ಪುರುಷೋತ್ತಮನೆಂಬ ಪರಮಾತ್ಮನು (ಪರಬ್ರಹ್ಮ).

**ಟಿಪ್ಪಣಿ–೧: ಈ ಪದ್ಯಕ್ಕೆ ಆಧಾರ ಗೀತೆಯ ೧೫ ಅಧ್ಯಾಯದ ೧ನೇ ಶ್ಲೋಕ:**

**ದ್ವಾವಿಮೌ ಪುರುಷೌ ಲೋಕೇ ಕ್ಷರಾಕ್ಷರ ಏವಚ**
**ಕ್ಷರಃ ಸರ್ವಾಣಿ ಭೂತಾನಿ ಕೂಟಸೋಽಕ್ಷರ ಉಚ್ಯತೇ ॥** **(ಗೀತೆ, ೧೫–೧೬)**

[(ಲೋಕೇ) ಜಗದ್ರೂಪವಾದ ಸಂಸಾರದಲ್ಲಿ (ಕ್ಷರಶ್ಚ) ನಾಶವಾಗುವಂಥದ್ದೆಂಬ ಒಂದು ಗುಂಪು (ಅಕ್ಷರ ಏವಚ) ನಾಶವಾದವುಗಳ ಉತ್ಪತ್ತಿಗೆ ಕಾರಣವಾಗಿ ನಾಶವಾಗದಿರುವ ಮಾಯಾಶಕ್ತಿಯೆಂಬ ಒಂದು ಗುಂಪು (ಇಮೌ) ಈ (ದೌ) ಇಬ್ಬರು (ಪುರುಷೌ) ಪುರುಷರು: ಈ ಇಬ್ಬರು ಪುರುಷರು ಯಾರೆಂದರೆ (ಸರ್ವಾಣಿ) ಎಲ್ಲ. ಭೂತಾನಿ (ಸ್ಥಾವಲ ಜಂಗಮಗಳು) ಕ್ಷರಃ ನಾಶವಾಗುವಂಥದ್ದೆಂಬ ಗುಂಪು; (ಕೂಟಸ್ಥ) ಎಷ್ಟು ದಿನವಾದರೂ ಮುಗಿಯದ ಸಂಸಾರಕ್ಕೆ ಕಾರಣವಾಗಿ ಯಾವಾಗಲೂ ವಂಚನಾರೂಪದಿಂದಿರುವ ಮಾಯಾಶಕ್ತಿಯು (ಅಕ್ಷರಃ) ನಾಶವಿಲ್ಲದ್ದೆಂದು (ಉಚ್ಯತೇ) ಹೇಳಲ್ಪಡುತ್ತದೆ. (ಹೊ.ಚಿ. ಅನುವಾದ ಗೀತಾರ್ಥ ಚಂದ್ರಿಕೆ, ಪುಟ–೩೦೮–೩೦೯)]

**ಟಿಪ್ಪಣಿ–೨: ಶಂಕರಭಾಷ್ಯದ ಅರ್ಥ: (ಅನುವಾದ ಹೊ.ಚಿ)**

"ಅನಾತ್ಮಗಳಲ್ಲಿ ಕ್ಷರ ಮತ್ತು ಅಕ್ಷರ ಎಂಬೆರಡು ರಾಶಿಗಳಿವೆ. ಈ ರಾಶಿಗಳಿಗೆ ಪುರುಷ ಎಂದು ಹೆಸರು. ಕಾರ್ಯಪ್ರಪಂಚವೇ ಕ್ಷರ. ಕ್ಷರವೆಂದರೆ ನಾಶವಾಗುವಂಥದ್ದು. ಇದಕ್ಕೆ ಕಾರಣವಾಗಿರುವ ಮಾಯೆಯೇ ಅಕ್ಷರ. (ನಾಶವಿಲ್ಲದ್ದು) ಜ್ಞಾನದ ಹೊರತು ಬೇರೆ ಏತರಿಂದಲೂ ನಾಶವಾಗತಕ್ಕದ್ದಲ್ಲ ವಾದ್ದರಿಂದ ಅದು ಅಕ್ಷರ. ಕ್ಷರ ಮತ್ತು ಅಕ್ಷರ ಎಂಬ ಯಾವ ಉಪಾಧಿಯ ಸಂಬಂಧವೂ ಇಲ್ಲದ ಶುದ್ಧವಾದ ಆತ್ಮವೇ ಪುರುಷೋತ್ತಮನೆಂಬ ಪರಮಾತ್ಮನು. ಇಲ್ಲಿ ಕವಿಯು ಕ್ಷರವೆಂಬ ಮತ್ತು ಅಕ್ಷರವೆಂಬ ಉಪಾಧಿಗಳುಳ್ಳ ಚೈತನ್ಯವನ್ನು ಲಕ್ಷ್ಯದಲ್ಲಿಟ್ಟುಕೊಂಡು ಕ್ಷರವೆಂದರೆ ಜೀವನೆಂದೂ ಅಕ್ಷರವೆಂದರೆ ಈಶ್ವರನೆಂದೂ ಉಪಯೋಗಿಸದ್ದಾನೆ".

**ಸತ್ತ್ವರಜತಮವೆನಿಪ ಬುದ್ಧಿಯ**
**ವೃತ್ತಿಗಳವಸ್ಥಾತ್ರಯಗಳಿಂ**
**ದುತ್ತಮನೆ ತಿಳಿ ವಿಶ್ವ, ತೈಜಸ, ಪ್ರಾಜ್ಞನೆನಿಸುವನು; ।**
**ಮತ್ತವುಗಳನು ಮೀರ್ದ ತುರ್ಯಾ**
**ವಸ್ಥೆಯಲಿ ಹೇಳುವರು ನಿರ್ಮಲ**
**ಚಿತ್ತು ಸಹಜಾನಂದವೆಂದದ ಬಲ್ಲಯೋಗಿಗಳು ॥ ॥೬೭॥**

**ತಾತ್ಪರ್ಯ:** ಜೀವನು ಬುದ್ಧಿಯ ಸತ್ತ್ವಗುಣದ ವೃತ್ತಿಯಾದ ಜಾಗ್ರದವಸ್ಥೆಯಲ್ಲಿ (ಎಚ್ಚರದಲ್ಲಿ) ವಿಶ್ವನೆನಿಸುತ್ತಾನೆ; ರಜೋಗುಣದ ವೃತ್ತಿಯಾದ ಸ್ವಪ್ನಾವಸ್ಥೆಯಲ್ಲಿ ತೈಜಸನೆನಿಸುತ್ತಾನೆ; ತಮೋಗುಣದ ವೃತ್ತಿಯಾದ ಸುಷುಪ್ತಿ ಅವಸ್ಥೆಯಲ್ಲಿ ಪಾಜ್ಞನೆನಿಸುತ್ತಾನೆ. ಈ ಮೂರು ಗುಣಗಳ ಅವಸ್ಥೆಗಳನ್ನು ಮೀರಿದ ನಾಲ್ಕನೇ ಅವಸ್ಥೆಯಲ್ಲಿರುವ (ತುರ್ಯಾವಸ್ಥೆಯಲ್ಲಿ) ಕಂಡುಬರುವ ಜ್ಞಾನವೇ (ಚಿತ್ತು) ಸಹಜಾನಂದವೆಂದು ಬಲ್ಲಯೋಗಿಗಳು ಹೇಳುತ್ತಾರೆ.

**ಶಬ್ದಾರ್ಥ: ಅವಸ್ಥಾತ್ರಯಗಳು=ಜಾಗ್ರತ್, ಸ್ವಪ್ನ, ಸುಷುಪ್ತಿ**

**ಟಿಪ್ಪಣಿ-೧: * ತುರ್ಯಾವಸ್ಥೆ**-ನಾಲ್ಕನೇ ಅವಸ್ಥೆ=ನಿರ್ಮಲಜ್ಞಾನದ ಸಹಜಾನಂದಸ್ಥಿತಿ ಎಚ್ಚರ, ಕನಸು, ತನಿನಿದ್ರೆ ಎಂಬ ಅವಸ್ಥೆಗಳ ಅಪೇಕ್ಷೆಯಿಂದ ಬೇರೆಬೇರೆ ರೂಪದಲ್ಲಿ ಕಾಣುವ ಆತ್ಮತತ್ತ್ವವು ಅವಸ್ಥೆಗಳೆಂಬ ಉಪಾಧಿಗಳ ಹಂಗಿಲ್ಲದೆ ಇರುವ ಸ್ವರೂಪ ಪರಮಾರ್ಥಾತ್ಮ.

**ಟಿಪ್ಪಣಿ-೨: * ಜಾಗ್ರತಾವಸ್ಥೆ**-ಸ್ವಪ್ನ ಮತ್ತು ಸುಷುಪ್ತಿಯಿಂದ ಭಿನ್ನವಾದ ಇಂದ್ರಿಯ ಜನ್ಯಜ್ಞಾನಕ್ಕೂ ಮತ್ತು ಇಂದ್ರಿಯಜನ್ಯ ಜ್ಞಾನದ ಸಂಸಾರಕ್ಕೂ ಆಧಾರವಾದ ಕಾಲ, ಅದನ್ನು ಜಾಗ್ರತಾವಸ್ಥೆ ಎಂದು ಹೇಳಿದೆ; **ಸ್ವಪ್ನಾವಸ್ಥೆ**=ಇಂದ್ರಿಯಗಳಿಂದ ಜನಿಸದ ವಿಷಯಗೋಚರ ಅಂತಃಕರಣಕ್ಕೆ ಅಪರೋಕ್ಷವಾದ ವೃತ್ತಿಯಕಾಲವೇ ಸ್ವಪ್ನಾವಸ್ಥೆ ಎನಿಸುತ್ತದೆ. **ಸುಷುಪ್ತಿ ಅವಸ್ಥೆ**=ಸುಖಗೋಚರ ಮತ್ತು ಅವಿದ್ಯಾಗೋಚರವಾದ ಅಜ್ಞಾನದ ವೃತ್ತಿಯ ಕಾಲವೇ ಸುಷುಪ್ತಿ ಅವಸ್ಥೆ ಎನಿಸುವುದು.

**ಟಿಪ್ಪಣಿ-೩: * ಜೀವತ್ರಯ**-ವಿಶ್ವ, ತೈಜಸ, ಪ್ರಾಜ್ಞ; **ವಿಶ್ವ**=ಜಾಗ್ರತ್ತಿನಲ್ಲಿ ದೇಹತ್ರಯದ ಅಭಿಮಾನಿಯಾದ ಜೀವ; **ತೈಜಸ**=ಸೂಕ್ಷ್ಮ ಮತ್ತು ಕಾರಣ ಈ ಎರಡು ದೇಹಗಳು ಮಾತ್ರ ಅಭಿಮಾನಿಯಾದ ಜೀವ; **ಪ್ರಾಜ್ಞ**=ಸುಷುಪ್ತಿಯಲ್ಲಿ ಸ್ಥೂಲ ಮತ್ತು ಸೂಕ್ಷ್ಮ ದೇಹಗಳ ಅಭಿಮಾನವಿಲ್ಲದೆ ಕೇವಲ ಕಾರಣದೇಹವೊಂದರ ಅಭಿಮಾನಿಯಾದ ಜೀವ. (ವಿಚಾರ ಚಂದ್ರೋದಯ, ಪು-೨೨೩ ಮತ್ತು ೬೨-೬೩, ಪಂಚಮಕಲಾ ಅಧ್ಯಾಯ)

**ಟಿಪ್ಪಣಿ-೪:** * ಕೈವಲ್ಯಪದ್ಧತಿಯಲ್ಲಿ ನಿಜಗುಣಶಿವಯೋಗಿಗಳು ಹೇಳಿರುವ ಮಾತು ಹೀಗಿದೆ:

ಮೂರು ತನುವಿಡಿದು ತೋರುವ
ಮೂರು ಗುಣವೃತ್ತಿಯೊಳಗಾದ
ಜೀವತ್ರಯದ ಪ್ರತ್ಯಗಾತ್ಮ
ತಾನೆಂದರಿದಮೇಲೆ ಭವಮಾಲೆಯುಂಟೆ?

**ಮಿಥ್ಯಜಡದುಃಖಸ್ವರೂಪದಿ**
**ವರ್ತಿಸುವ ಮಾಯೆಯನು ಕುರಿತಿದು**
**ಸತ್ತುಚಿತ್ತಾನಂದವೆಂಬೀ ಪೆಸರತಳೆದಿಹುದು; ।**
**ಮತ್ತೆ ಬಹುವಿಧವಾದುಪಾಧಿಯ**
**ಕೃತ್ಯದಲಿ ಬಹುವಿಧಗಳಾಗಿಯೆ**
**ವರ್ತಿಪೀ ವಸ್ತುವಿಗೆ ನೋಡಲನಂತನಾಮಗಳು ॥ ॥೬೮॥**

**ತಾತ್ಪರ್ಯ:** ಮಾಯೆಯು ಸುಳ್ಳಾಗಿ, ಜಡವಾಗಿ ದುಃಖದಾಯಕವಾಗಿ ವರ್ತಿಸುತ್ತದೆ; ಇವುಗಳಿಂದ ಬಿಡಿಸಿ ತಿಳಿಯುವುದಕ್ಕಾಗಿ ಬ್ರಹ್ಮಕ್ಕೆ ಸತ್ತು, ಚಿತ್ತು ಆನಂದವೆಂದು ಕರೆಯುವರು. ನಿಜವಾದ ಸಚ್ಚಿದಾನಾದವೆಂಬ ವಸ್ತುವಿಗೆ ಮಾಯೆಯ ಸಂಬಂಧವಿಲ್ಲವು ಆದರೂ ಅನೇಕ ಉಪಾದಿಗಳ ಕಾರ್ಯದಿಂದ ಈ ಸಚ್ಚಿದಾನಂದ ವಸ್ತು ಹಲವು ವಿಧವಾಗಿ ವರ್ತಿಸುತ್ತದೆ. ಆದಕಾರಣ ಇದಕ್ಕೆ ಅನಂತ ನಾಮಗಳಿವೆ.

**ಶಬ್ದಾರ್ಥ:** * ಮಿಥ್ಯ=ಸುಳ್ಳು, * ಜಡ=ಅಚೇತನ, * ಸತ್ತುಚಿತ್ತಾನಂದ=ಸಚ್ಚಿದಾನಂದ; ಪೆಸರ ತಳೆದಹುದು=ಕರೆಯುವರು.

**ಟಿಪ್ಪಣಿ:** ಇದು ಸತ್ತು ಚಿತ್ತಾನಂದವು=(ಮಾಯೆಯು ಮಿಥ್ಯೆಯಾಗಿಯೂ, ಜಡವಾಗಿಯೂ, ದುಃಖರೂಪವಾಗಿಯೂ ಇರುವುದರಿಂದ ಅದರಿಂದ ಬಿಡಿಸಿ ತಿಳಿಯುವುದಕ್ಕಾಗಿ) ಬ್ರಹ್ಮಕ್ಕೆ ಸತ್ತು ಚಿತ್ತು ಆನಂದವೆಂದು ಹೆಸರು.

**ಪಾಠಾಂತರ:** ವರ್ತಿಪೀವಸ್ತುವಿಗೆ ನೋಡಲನಂತನಾಮಗಳು=ವರ್ತಿಸುವುದೀ ವಸ್ತುವಿಂಗೆಯನಂತ ನಾಮಗಳು (ಕು)

---

**ನೇಮವಿಲ್ಲದನಾಮ ನಿಜ ನಿ**
**ಸ್ಸೀಮ ನಿರುಪಮ ನಿತ್ಯನಿರ್ಮಲ**
**ಕಾಮಕರ್ಮತಮೋನಿರಸ್ತ ನಿರಂಗ ನಿರ್ಗುಣಗೆ ।**
**ಭ್ರಾಮಕಗಳೀ ನಾಮರೂಪಗ**
**ಳಾ ಮಹಾಬ್ರಹ್ಮದಲಿ ಕಲ್ಪನೆ**
**ನೇಮದಿಂದಿರ್ದಪುದು ತೂಷ್ಣೀಂಭಾವರೂಪಂಗೆ ॥ ॥೬೯॥**

**ತಾತ್ಪರ್ಯ:** ಪರಬ್ರಹ್ಮನು ಯಾವವಿಧಿಗೂ ಒಳಪಡದವನು, ಯಾವ ಹೆಸರೂ ಇಲ್ಲದವನು ನಿತ್ಯನು, ಅವಧಿಯಿಲ್ಲದವನು ಹೋಲಿಕೆಯಿಲ್ಲದವನು, ಸದಾ ಪರಿಶುದ್ಧನು ಕಾಮವೂ ಕರ್ಮವೂ ತಮೋಗುಣವೂ ಇಲ್ಲದಿರುವಂಥ ನಿರವಯವನು ಗುಣಶೂನ್ಯನು ಆಗಿರುವುದರಿಂದ ಇವನಿಗೆ ಈ ನಾಮರೂಪಗಳಲ್ಲಿ ಭ್ರಾಂತಿಜನ್ಯವಾಗಿವೆ. ಆ ಮಹಾಬ್ರಹ್ಮದಲಿ ಸುಮ್ಮನಿರುವ ಸ್ವಭಾವದ ಬ್ರಹ್ಮಕ್ಕೆ ನಾಮರೂಪಗಳೆಲ್ಲ ಕಲ್ಪನೆಗಳಾಗಿವೆ.

**ಶಬ್ದಾರ್ಥ:** ನಿರಂಗ=ಅವಯವವಿಲ್ಲದವನು; ನೇಮದಿಂದ=ತಪ್ಪದೆ; ಕಾಮಕರ್ಮತಮೋನಿರಸ್ತ=ಕಾಮವೂ ಕರ್ಮವೂ ತಮೋಗುಣವೂ ಇಲ್ಲದಂಥ; ತೂಷ್ಣೀಭಾವರೂಪಂಗೆ =ಸುಮ್ಮನಿರುವ ಸ್ವಭಾವದ ಬ್ರಹ್ಮಕ್ಕೆ (ಇದು ಪೂರ್ವಾರ್ಥದ ಕೊನೆಯಲ್ಲಿರುವ ನಿರ್ಗುಣ ಪದಕ್ಕೆ ವಿಶೇಷಣ).

**ಪಾಠಾಂತರ:** ೧. ನೇಮವಿಲ್ಲದ ನಾನು=ನೇಮರಹಿತನನಾಮ (ಕು); ೨. ನೇಮದಿಂದಿರ್ಪವುದು =ನೇಮವಂತನೆ ತಿಳಿಯೆ (ಕು).

---

**ಮಗನೆ, ಲೌಕಿಕವೈದಿಕಗಳಿಗೆ**
**ಮಿಗೆ ತಿಳಿಯೆ ಭೇದಂಗಳೆಂತಾ**
**ಬಗೆಯಲೊಬ್ಬಗೆ ಬ್ರಹ್ಮಚರ್ಯಾದ್ಯಾಶ್ರಮಗಳಿಂದ ।**
**ನೆಗಳಿದೀ ನಾಮಗಳ ಕಲ್ಪನೆ**
**ಯೊಗೆದ ತೆರದಲಿ, ಬ್ರಹ್ಮದಲಿ ಕೇ**
**ಳಗಣಿತದ ನಾಮಗಳುಪಾಧಿಕೃತಂಗಳಾಗಿಹವು ॥ ॥೭೦॥**

**ತಾತ್ಪರ್ಯ:** ಒಬ್ಬನು ಲೌಕಿಕನಾಗಿ ಪಾಠಪ್ರವಚನ ಮಾಡುವಾಗ ಉಪಾಧ್ಯಾಯನೆನಿಸಿ ಕೊಳ್ಳುವನು; ಅವನೇ ಯಜ್ಞಮಾಡುವಾಗ ವೈದಿಕ (ದೀಕ್ಷಿತ) ನೆನಿಸಿಕೊಳ್ಳುವನು. ಹೀಗೆ ಒಬ್ಬನಿಗೆ ಬ್ರಹ್ಮಚಾರಿ ಗೃಹಸ್ಥ, ವಾನಪ್ರಸ್ಥ ಎಂಬ ಮೂರು ಆಶ್ರಮಗಳಲ್ಲಿರುವಾಗ ಒಂದು ಹೆಸರಿದ್ದಾರೆ. ಸಂನ್ಯಾಸಿ ಆದಾಗ ಬೇರೆ ಹೆಸರಾಗುತ್ತದೆ. ಇದರಂತೆ ಬ್ರಹ್ಮ ಉಪಾಧಿಗಳಿಂದ ಅನೇಕ ನಾಮಗಳು ಕಲ್ಪಿತವಾಗಿರುತ್ತವೆ.

---

## ಮಿಥ್ಯಾಶಾಸ್ತ್ರದ ಪ್ರಯೋಜನಗಳು (೭೧–೭೪)

**ಮೂಡಲುದಿಸಿದ ರವಿಯ ಪಡುವಲು**
**ಮೂಡಿತೆಂಬೀ ದಿಗ್ಭ್ರಮೆಯೊಳಿಹ**
**ಮೂಢರಿಗೆ ತಿಳಿ ಪಡುವಲಲ್ಲಿದು ಮೂಡಲೆಂಬಂತೆ ।**
**ಬೇಡನಾತ್ಮಗಳೆಲ್ಲವನು ಬಿಡು;**
**ನೋಡಿವೆಲ್ಲಕ್ಕಾತ್ಮನೆಂಬುದ**
**ನಾಡಿ ಶ್ರುತಿಗಳು ಪೇಳ್ವವಿದು ನೀನೆಂದು ತೋರಿದವೆ? ॥ ॥೭೧॥**

**ತಾತ್ಪರ್ಯ:** ಪೂರ್ವದಿಕ್ಕಿನಲ್ಲಿ ಉದಿಸಿದ ಸೂರ್ಯನನ್ನು ಪಶ್ಚಿಮದಿಕ್ಕಿನಲ್ಲಿ ಹುಟ್ಟಿದನು ಎಂದು ದಿಗ್ಭ್ರಾಂತಿಯಲ್ಲಿರುವ ಮೂರ್ಖರಿಗೆ "ಎಲಾ ಮೂಢನೇ ತಿಳಿ, ಸೂರ್ಯನು ಹುಟ್ಟುವುದು ಪೂರ್ವದಲ್ಲಿ ಪಶ್ಚಿಮದಲ್ಲಿಲ್ಲ" ಎಂದು ಸತ್ಯವನ್ನು ತಿಳಿಸುವ ಹಾಗೆ, ಆತ್ಮವಲ್ಲದ್ದಾವುದನ್ನೂ ನಂಬಬೇಡ, ಬಿಟ್ಟುಬಿಡು ನಿಜವಾಗಿ ಇರುವುದೆಲ್ಲದರಲ್ಲೂ ಆತ್ಮವೊಂದೇ ಎಂದು ಹೇಳುವ ವೇದಗಳು, ಹೇಳಿದಮಾತ್ರಕ್ಕೆ ನಿನಗೆ ಬ್ರಹ್ಮದರ್ಶನ ತೋರಿದವೇ?

**ಶಬ್ದಾರ್ಥ:** * **ಮೂಡಲು**=ಪೂರ್ವದಿಕ್ಕು; * **ಪಡುವಲು**=ಪಶ್ಚಿಮದಿಕ್ಕು; **ಮೂಡಿತು**=ಹುಟ್ಟಿತು; **ದಿಗ್ಭ್ರಮೆ**=ದಿಗ್ಭ್ರಾಂತಿ, ಕಳವಳ ಅಜ್ಞದ; * **ಬೇಡ+ಅನಾತ್ಮಗಳೆಲ್ಲವನು ಬಿಡು**=ಆತ್ಮವಲ್ಲದ್ದೆಲ್ಲವನ್ನು ನಂಬಬೇಡ. ಅನಾತ್ಮಗಳೆಲ್ಲವನ್ನು ತೊರೆದುಬಿಡು;

---

**ನಡೆವ ನಾವೆಯ ನದಿಯೊಳಗೆ ತಾ**
**ನಡೆವುದೆಂದೇ ಬಗೆಯದಾಚೆಯ**
**ತಡಿಯ ಮರಗಳು ನಡೆದು ತನಗಿದಿರಾಗಿ ಬಹವೆಂಬ ।**
**ಜಡಮತಿಗೆ ಭ್ರಮೆ ಬೇಡವೆಂದದ**
**ಬಿಡಿಸುವಂದದಿ ಶ್ರುತಿಗಳೆಲ್ಲವು**
**ಜಡವದಲ್ಲದುದಾತ್ಮನೆಂದವು; ತೋರವಿದಿರಿಟ್ಟು ॥ ॥೭೨॥**

**ತಾತ್ಪರ್ಯ:** ನದಿಯೊಳಗೆ ಹಡಗಿನಲ್ಲಿ ನಾವು ಕುಳಿತು ಸಾಗುತ್ತಿರುವಾಗ, ಅದನ್ನು ಮರೆತು ದಡದಲ್ಲಿರುವ ಮರಗಳು ನಮ್ಮ ಮುಂದೆ ಬರುತ್ತಿವೆ ಎಂದು ಭಾವಿಸುವ ದಡ್ಡನಿಗೆ, ಇದು ಸುಳ್ಳು, ಮರಗಳು ನಮ್ಮ ಮುಂದೆ ಬರುತ್ತಿಲ್ಲ ನಾವು ಹಡಗಿನಲ್ಲಿ ಮುಂದೆ ಸಾಗುತ್ತಿದ್ದೇವೆ ಎಂದು ಅವನಿಗೆ ಸತ್ಯವನ್ನು ತಿಳಿಸುವ ರೀತಿಯಲ್ಲಿ ಶ್ರುತಿಗಳು ಜಡವಸ್ತುವಲ್ಲದ್ದು ಆತ್ಮವೆಂದು ತಿಳಿಸುತ್ತವೆ. ಆದರೆ ಆತ್ಮನನ್ನು ಎದುರಿನಲ್ಲಿಟ್ಟು ಇದೇ ಆತ್ಮ ಎಂದು ತೋರಿಸುವುದಿಲ್ಲ.

**ಶಬ್ದಾರ್ಥ:** * **ನಾವೆ**=ಹಡಗು, * **ನಡೆವ**=ಸಾಗುತ್ತಿರುವ; * **ಜಡಮತಿ**=ಬುದ್ಧಿಗೇಡಿ, ದಡ್ಡ; * **ಶ್ರುತಿಗಳು**=ವೇದೋಪನಿಷತ್ತುಗಳು; **ಜಡವಲ್ಲದುದಾತ್ಮನೆಂದವು**=ಜಡವಲ್ಲದ್ದು ಆತ್ಮನೆಂದು ಹೇಳಿದವು; **ತೊರವಿದಿರಿಟ್ಟು**=ಇದು ಆತ್ಮನೆಂದು, ಆತ್ಮನನ್ನು ಎದುರಿಗಿಟ್ಟು ತೋರಿಸುವುದಿಲ್ಲ.

**ಪಾಠಾಂತರ:** ನಡೆವುದೆಂದೇ=ನಡೆವುದೆನ್ನುತ (ಅರಾಸೇ)

---

**ಮಿಥ್ಯವಹ ವೇದಾಂತವೆಲ್ಲವು**
**ತಥ್ಯವಡೆದರ್ಥವನೆ ಪೇಳ್ವವು;**
**ಮೃತ್ತಿಕೆ ಶಿಲಾದಾರು ಪ್ರತಿಮೆಗಳೆಲ್ಲ ದೇವತೆಯ**
**ಶಕ್ತಿಯನು ಪಡೆದಿರ್ದ ತೆರದಲ**
**ಸತ್ಯವನಿತಾಸಂಗ ಸ್ವಪ್ನದಿ**
**ತಥ್ಯವಹ ಸುಖವಾದ ತೆರದಲಿ ಮಗನೆ ಕೇಳೆಂದ ॥ ॥೭೩॥**

**ತಾತ್ಪರ್ಯ:** ಜಗತ್ತೆಲ್ಲ ಮಿಥ್ಯೆ (ಮಾಯೆ) ಎಂದಮೇಲೆ ಜಗತ್ತಿನೊಳಗೊಂದಾಗಿರುವ ವೇದಾಂತವು ಮಿಥ್ಯೆ ಆಗಿರಬೇಕಷ್ಟೆ ಹೀಗೆ ತಾನು ಮಿಥ್ಯೆ ಎನಿಸಿದರೂ ಅವು ಅಂತಿಮವಾಗಿ ಸತ್ಯವನ್ನೇ ಕುರಿತು ಹೇಳುತ್ತವೆ. ಹೇಗೆಂದರೆ ಮಣ್ಣು, ಕಲ್ಲು, ಮರ, ಲೋಹಾದಿ ಪ್ರತಿಮೆಗಳು ದೈವಶಕ್ತಿಯನ್ನು ಪಡೆದಿರುವ ಪಡೆದು (ಅವುಗಳಲ್ಲಿ ಸತ್ಯದೇವತೆಗಳು

ನೆಲಸಿ) ಬೇಡಿದ ಫಲಗಳನ್ನು ಕೊಡುವ ತೆರದಲಿ, ಅಸತ್ಯವಾದ ಕನಸಿನಲಿ ಸ್ತ್ರೀಸಂಗವು ನಿಜವಾದ ಸುಖವನ್ನು ಕೊಡುವಂತೆ ವೇದವೇದಾಂಗಗಳೆಲ್ಲ ಕೊನೆಗೆ ಸತ್ಯವನ್ನೇ ಸಾರುತ್ತವೆ.

**ಶಬ್ದಾರ್ಥ:** ಮಿಥ್ಯವಹ ವೇದಾಂತ=ಸುಳ್ಳೆನಿಸಿದ ವೇದಾಂತ; ತಥ್ಯವಾಗ=ನಿಜವಾದ; * ಮೃತ್ತಿಕೆ= ಮಣ್ಣು; * ಶಿಲಾ=ಕಲ್ಲು; * ದಾರು=ಮರ; ಸತ್ಯವನಿತಾಸಂಗ=ಸತ್ಯವೆನಿಸುವ ಸ್ತ್ರೀಸುಖ; ತಥ್ಯ ಪಡೆದರ್ಥವನೆ ಪೇಳು=ಸತ್ಯವೆನಿಸುವ ಅರ್ಥವನ್ನೇ ಹೇಳುವುವು.

**ಟಿಪ್ಪಣಿ:** ಮಿಥ್ಯವಹ ವೇದಾಂತ-ಜಗತ್ತೆಲ್ಲ ಮಿಥ್ಯವಾದ ಮೇಲೆ ಜಗತ್ತಿನೊಳಗೆ ಒಂದಾಗಿರುವ ವೇದಾಂತವೂ ಮಿಥ್ಯವೇ ಆಗಿರಬೇಕಷ್ಟೆ. ಹೀಗೆ ತಾನು ಮಿಥ್ಯವಾದರೂ ಅದು ಸತ್ಯವಾದ ಅರ್ಥವನ್ನೇ ಹೇಳುವುದೆಂದು ತಾತ್ಪರ್ಯ.

---

**ಕತ್ತಲೆಯಲಿಹ ವಸ್ತುವನು ಕೈ**
**ಬತ್ತಿಯಲಿ ಕಾಣುತ್ತ, ಕಡೆಗಾ**
**ಬತ್ತಿಯನು ಬಿಸುಟಂತೆ ಶಾಸ್ತ್ರವನೆಲ್ಲವನು ತಿಳಿದು, ।**
**ವಸ್ತುನಿರ್ದೇಶವನು ಪಡೆದವ**
**ಶಾಸ್ತ್ರವನಪೇಕ್ಷಿಸುವನೇತಕೆ?**
**ಸ್ವಸ್ಥನಾಗಿಯೆ ನಿಸ್ತರಂಗಾಂಬೋಧಿಯಂತಿಹನು ॥ ॥೭೪॥**

**ತಾತ್ಪರ್ಯ:** ಕತ್ತಲೆಪ್ರದೇಶದಲ್ಲಿರುವ ವಸ್ತುವನ್ನು ಕೈದೀವಿಗೆಯಲ್ಲಿ ನೋಡಿ ಆ ವಸ್ತುವನ್ನು ಪಡೆದಮೇಲೆ ಆ ಕೈದೀವಿಗೆಯನ್ನು ಬಿಸಾಡುವ ಹಾಗೆ ಶಾಸ್ತ್ರಾರ್ಥಗಳೆಲ್ಲವನ್ನು ತಿಳಿದು (ವೇದಪಾರಂಗತನಾಗಿ) ಬ್ರಹ್ಮಸ್ವರೂಪವನ್ನು ಹೀಗಿರುವುದೆಂದು ತಿಳಿದುಕೊಂಡಮೇಲೆ ಅವನಿಗೆ ಶಾಸ್ತ್ರಾರ್ಥವನ್ನು ಏಕೆ ಬಯಸುತ್ತಾನೆ? ಬ್ರಹ್ಮಜ್ಞಾನ ಪಡೆದ ಅವನು ಅಲೆಗಳಿಲ್ಲದ ಪ್ರಶಾಂತಸಾಗರದಂತೆ ಸ್ವಸ್ಥಚಿತ್ತನಾಗಿರುತ್ತಾನೆ.

**ಟಿಪ್ಪಣಿ:** "ವಿಜ್ಞಾತೇಽಪಿ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ" ಎಂಬ ಮಾತಿನಿಂದ ಶ್ರೀ ಶಂಕರಭಗವತ್ಪಾದರು ವಿವೇಕ ಚೂಡಾಮಣಿಯಲ್ಲಿ (ಶ್ಲೋಕ ೫೯) ಹೇಳಿದ್ದಾರೆ. (ಅನುವಾದ: ಪರತತ್ತ್ವವನ್ನು ತಿಳಿದುಕೊಳ್ಳದಿದ್ದರೆ ಶಾಸ್ತ್ರಾಧ್ಯಯನವು ನಿಷ್ಫಲ ಪರತತ್ತ್ವವನ್ನು ತಿಳಿದುಕೊಂಡಿದ್ದರೂ ಶಾಸ್ತ್ರಾಧ್ಯಯನವು ನಿಷ್ಫಲ).

---

## ಜೀವನ್ಮುಕ್ತಿಯ ಪ್ರಯೋಜನಗಳು (೭೫-೭೭)

**ಕೇಳು ಜೀವನ್ಮುಕ್ತಿಗೈದೇ**
**ಮೇಳವಿಸಿ ತೋರ್ಪ ಪ್ರಯೋಜನ;**
**ತೂಳಿದೀ ಸಂಶಯ ವಿಪರ್ಯಾಸವನು ನೆರೆಕೆಡಿಸಿ ।**

**ಮೇಲೆ ನಿಶ್ಚಲವಾಗಿ ನಿಂದ ನಿ**
**ರಾಳ ನಿಜಸುಜ್ಞಾನವನು ಪರಿ**
**ಪಾಲಿಸುತ ಬಿಡದಿರ್ಪುದೇ ಮೊದಲ ಪ್ರಯೋಜನವು ॥ ॥೭೫॥**

**ತಾತ್ಪರ್ಯ:** ಶುಕನೇ ಕೇಳು, 'ಜೀವನ್ಮುಕ್ತಿ ಹೊಂದುವುದರಿಂದ ಒಟ್ಟಾಗಿ ಉಂಟಾಗುವ ಪ್ರಯೋಜನಗಳು ಐದು ಆಗಿವೆ. ಮನಸ್ಸಿನಲ್ಲಿ ತುಂಬಿಕೊಡಿರುವ ಸಂಶಯವನ್ನು ಪ್ರಮಾದವನ್ನು ಪೂರ್ಣವಾಗಿ ಹೋಗಲಾಡಿಸಿದಮೇಲೆ ಏಕಚಿತ್ತಮನೋಭಾವದಿಂದ ನೆಲೆಗೊಂಡ ನಿರಾಳವಾದ, ನಿಜವಾದ ಸುಜ್ಞಾನವನ್ನು ಬಿಡದೆ ಪರಿಪಾಲಿಸಿಕೊಂಡು ಬರುವುದೇ ಜ್ಞಾನರಕ್ಷೆ' ಎಂಬ ಮೊದಲನೆಯ ಪ್ರಯೋಜನವಾಗಿದೆ.

**ಶಬ್ದಾರ್ಥ:** * **ಮೇಳವಿಸಿ**=ಒಟ್ಟಾಗಿ; *. **ತೋರ್ಪ**=ಕಂಡುಬರುವ; * **ತೂಳಿದೀ**=ಬಲವಾಗಿ ಬೇರುಬಿಟ್ಟು ತುಂಬಿಕೊಂಡಿರುವ; * **ವಿಪರ್ಯಾಸ**=ಪ್ರಮಾದ; * **ನೆರೆಕೆಡಿಸಿ**=ಪೂರ್ಣವಾಗಿ ಹೋಗಲಾಡಿಸಿ; **ಜೀವನ್ಮುಕ್ತ**=ಬದುಕಿರುವಾಗಲೇ ಬಂಧದಿಂದ ಬಿಡುಗಡೆ ಹೊಂದಿರುವಾತನು (ಗೀತೆ) ಬ್ರಹ್ಮಸ್ವರೂಪ ಹೊಂದಿದವನು (ಪಾಪ, ಪುಟ–೧೩೭); * **ನಿಶ್ಚಲವಾಗಿ**=ಏಕಚಿತ್ತ ಮನೋಭಾವದಿಂದ.

**ಟಿಪ್ಪಣಿ–೧:** **ಜೀವನ್ಮುಕ್ತಿಗೈದೇ**–ಜೀವನ್ಮುಕ್ತಿಗೆ ಐದೇ ಪ್ರಯೋಜನಗಳು. ೧. ಜ್ಞಾನರಕ್ಷೆ, ೨. ತಪಸ್ಸು, ೩. ಸರ್ವಸಂವಾದ (ಎಲ್ಲರಿಂದಲೂ ಗೌರವವನ್ನು ಪಡೆಯುವುದು) ೪. ದುಃಖಸಂಕ್ಷಯ, ೫. ಸುಖಾವಿರ್ಭಾವ ಎಂಬ ಐದು ಪ್ರಯೋಜನಗಳೆಂದು ಶ್ರೀ ಮನ್ನಿಜಗುಣ ಶಿವಯೋಗಿಗಳೂ ಹೇಳಿರುತ್ತಾರೆ.

**ಟಿಪ್ಪಣಿ–೨:** **ಜ್ಞಾನರಕ್ಷಾ**=ಯದ್ಯಪಿ ಒಂದಾವರ್ತಿ ಉತ್ಪನ್ನವಾದ ದೃಢಜ್ಞಾನವು ನಾಶವಾಗದು. ಆದ್ದರಿಂದ ಜ್ಞಾನರಕ್ಷಾ ತಾನೇ ಸಿದ್ಧವಾಗಿದೆ. ತಥಾಪಿ ಇಲ್ಲಿ ತತ್ರಾಪಿ ನಿರಂತರ ಬ್ರಹ್ಮಾಕಾರವೃತ್ತಿಯ ಸ್ಥಿತಿಗೆ ಜ್ಞಾನರಕ್ಷಾ ಎಂಬ ಅರ್ಥವು. (ಶ್ರುತಿವಿಚಾರ ಚಂದ್ರೋದಯ, ಪುಟ–೨೩೫, ವೇದಾಂತ ಎಂದರ್ಥ ಸುಜ್ಞಾನ........ ಅಧ್ಯಾಯ)

---

**ಎರಡನೆಯದೆನಿಪ ಪ್ರಯೋಜನ**
**ನಿರುತ ಕರಣೇಂದ್ರಿಯಗಳುಪಸಂ**
**ಹರಣೆಯೆನಿಸುವ ತಪದ ಪೆರ್ಚುಗೆಯಂತದನು ಬಿಡದೆ ।**
**ಪರಮನಿಷ್ಠೆಯೊಳಿರಲು ಲೌಕಿಕ**
**ಕುರುತರದ ವೈದಿಕಕೆ ಸಮ್ಮತ**
**ದಿರವು ಮೂರನೆಯ ಪ್ರಯೋಜನ ಮಗನೆ ಕೇಳೆಂದ ॥ ॥೭೬॥**

**ತಾತ್ಪರ್ಯ:** ಯಾವಾಗಲೂ ಅಂತಃಕರಣದ ಮತ್ತು ಇಂದ್ರಿಯಗಳ ನಿಗ್ರಹಮಾಡುವ ತಪಸ್ಸನ್ನು ಹೆಚ್ಚಿಸಿಕೊಳ್ಳುವುದು ಎರಡನೆಯ ಪ್ರಯೋಜನವಾಗಿದೆ. ಆ ತಪಸ್ಸನ್ನು ಎಡೆಬಿಡದೆ ವ್ಯವಹಾರದ ಜನರಿಗೂ ಮತ್ತು ಶ್ರೇಷ್ಠವಾದ ಪರಮಾರ್ಥದ ಜನರಿಗೂ ಅನುಗುಣವಾಗಿ ನಡೆಸುತ್ತ ಸ್ಥಿರಚಿತ್ತನಾಗಿರುವುದೇ ಸರ್ವಸಂವಾದವೆಂಬ ಮೂರನೆಯ ಪ್ರಯೋಜನವಾಗಿದೆ.

**ಶಬ್ದಾರ್ಥ:** ನಿರುತ=ಯಾವಾಗಲೂ; * ಕರಣ=ಅಂತಃಕರಣ; * * ಪೆರ್ಚುಗೆ=ಹೆಚ್ಚಿಸಿಕೊಳ್ಳುವುದು; * ಉಪಸಂಹರಣೆ=ನಿಗ್ರಹ; * ಎರಡನೆಯದೆನಿಪ ಪ್ರಯೋಜನ=ತಪಸ್ಸು; * ಮೂರನೆಯ ಪ್ರಯೋಜನ =ಸರ್ವಸಂವಾದ (ಎಲ್ಲರಿಂದಲೂ ಗೌರವ ಪಡೆಯುವುದು)

---

**ಬ್ರಹ್ಮನಿಷ್ಠೆಯೊಳಿರಲು ಬಹುದು**
**ಷ್ಕರ್ಮನಾಶನವಾಗಿ, ತನಗೆ ಷ**
**ಡೂರ್ಮಿಗಳು ಮೊದಲಾದ ದುಃಖದ ಧ್ವಂಸವದು ನಾಲ್ಕು; ।**
**ನಿರ್ಮಮತೆ ನಿಸ್ಸಂಗವಳವಡೆ**
**ಹಮ್ಮಳಿದು ನಿರುಪಾದಿಸೌಖ್ಯದ**
**ಪೆರ್ಮೆ ಕೇಳ್ಳೆ ಮಗನೆ, ಐದನೆಯ ಪ್ರಯೋಜನವು ॥ ॥೭೭॥**

**ತಾತ್ಪರ್ಯ:** ಆತ್ಮಜ್ಞಾನಿ ಬ್ರಹ್ಮನಿಷ್ಠೆಯಲ್ಲೆ ಇರುವುದರಿಂದ ಮಾಡಿದ ನಾನಾ ಪಾಪಗಳೆಲ್ಲ ನಾಶವಾಗಿ ಮುಪ್ಪು, ಸಾವು, ಹಸಿವು, ಬಾಯಾರಿಕೆ, ಶೋಕ, ಮೋಹಗಳೆಂಬ ಷಡೂರ್ಮಿಗಳು (ಆರು ದುಃಖಗಳು) ನಾಶವಾಗಿ ಹೋಗುವುವು. ಅದೇ **'ದುಃಖಸಂಕ್ಷಯ'** ವೆಂಬ ನಾಲ್ಕನೆಯ ಪ್ರಯೋಜನವು. ಮಮತೆಯಿಲ್ಲದಿರುವುದು, ಸಂಗವನ್ನು ಪರಿತ್ಯಜಿಸುವುದು. ಇದರಿಂದ ಅಹಂಕಾರ ಲಯವಾಗಿ ಉಪಾಧಿ ರಹಿತವಾದ ಆನಂದವೆಂಬ ಅತಿಶಯತೆ ಉಂಟಾಗುತ್ತದೆ. ಇದೇ **'ಸುಖಾವಿರ್ಭಾವ'** ಎಂಬ ಐದನೆಯ ಪ್ರಯೋಜನವಾಗಿದೆ ಶುಕನೇ ಕೇಳು ಎಂದು ವ್ಯಾಸರು ಹೇಳಿದರು.

**ಶಬ್ದಾರ್ಥ:** * ಬ್ರಹ್ಮನಿಷ್ಠೆ=ಬ್ರಹ್ಮಜ್ಞಾನದಲ್ಲಿ ಶ್ರದ್ಧಾಭಕ್ತಿಯುಳ್ಳವನು; * ದುಷ್ಕರ್ಮ=ಪಾಪ; * ನಿರುಪಾಧಿ =ಉಪಾಧಿರಹಿತವಾದ; * ಹಮ್ಮು=ಅಹಂಕಾರ; * ಪೆರ್ಮೆ=ಹಿರಿಮೆ, ಅತಿಶಯ; * ನಾಲ್ಕು=ನಾಲ್ಕನೆಯ ಪ್ರಯೋಜನ 'ದುಃಖಸಂಕ್ಷಯ'; * ಐದನೆಯ ಪ್ರಯೋಜನವು=ಸುಖಾವಿರ್ಭಾವವೆಂಬುದು.

**ಟಿಪ್ಪಣಿ:** ಷಡೂರ್ಮಿಗಳು (ಆರು ದುಃಖಗಳು) ಮುಪ್ಪು, ಸಾವು, ಹಸಿವು, ಬಾಯಾರಿಕೆ, ಶೋಕ, ಮೋಹ (ಅ-೧೦, ಪ-೧೨ ನೋಡಿ).

---

## ಜೀವನ್ಮುಕ್ತನ ಲಕ್ಷಣ (೭೮-೮೧)

**ತನ್ನನರಿದ ಮಹಾನುಭಾವನಿ**
**ಗಿನ್ನುಳಿದ ಭೂಮಿಕೆಗಳೇಕೆನೆ**
**ನಿರ್ಣಯಿಸಲೈದು ಪ್ರಯೋಜನ ಸಿದ್ಧಿಸುವದಾಗಿ; ।**
**ತನ್ನೊಳಗೆ ತಾನಾಗಿ ರಮಿಸುತ**
**ಭಿನ್ನಭಾವನೆಯಳಿದು ನಿಜ ಚೈ**
**ತನ್ಯ ಮಾತ್ರವೆ ಆಗಿ ಸಹಜಾನಂದನಾಗಿಹನು ॥ ॥೭೮॥**

**ತಾತ್ಪರ್ಯ:** ತನ್ನ ನಿಜಸ್ವರೂಪವನ್ನು ತಿಳಿದುಕೊಂಡ ಮಹಾತ್ಮನಿಗೆ ಈ ಐದು ಪ್ರಯೋಜನಗಳು ಸಿದ್ಧಿಸಿದಮೇಲೆ ಇನ್ನುಳಿದ ಭೂಮಿಕೆಗಳು ಬೇಕಿಲ್ಲ. ಏಕೆಂದರೆ ತನ್ನೊಳಗೆ ತಾನಾಗಿ ರಮಿಸುತ್ತ ಆತ್ಮಾನಂದನಾಗಿ ಭಿನ್ನಭಾವನೆಗಳನ್ನು ನಿಗಿ ಸಂಪೂರ್ಣ ಚೈತನ್ಯಸ್ವರೂಪನೇ ಆಗಿ ಸಹಜಾನಂದದಿಂದಿರುತ್ತಾ ಜೀವನ್ಮುಕ್ತನೆನಿಸುತ್ತಾನೆ.

**ಶಬ್ದಾರ್ಥ:** * ಮಹಾನುಭಾವ=ಮಹಾತ್ಮ; * ಇನ್ನುಳಿದ ಭೂಮಿಕೆಗಳು=ಸಪ್ತ ಭೂಮಿಕೆಗಳು; * ಐದು ಪ್ರಯೋಜನಗಳು ಸಿದ್ಧಿಸುವುದಾಗಿ=ಜೀವನ್ಮುಕ್ತಿಗೆ ಬೇಕಾದ ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ, ದುಃಖಸಂಕ್ಷಯ, ಸುಖಾವಿರ್ಭಾವ ಎಂಬ ಪಂಚಪ್ರಯೋಜನಗಳ ಸಿದ್ಧಿ ಆದಮೇಲೆ; ತನ್ನೊಳಗೆ ತಾನಾಗಿ ರಮಿಸುತ=ಆತ್ಮಾನಂದವಾಗಿ ಪರಬ್ರಹ್ಮರೂಪಿಯಾಗಿ; * ಭಿನ್ನಭಾವನೆಯಳಿದು= ಅಭೇದಭಾವದಿಂದ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಪಾಠಾಂತರ ಅನುವಾದಕರದು.

**ಪಾಠಾಂತರ:** ಮಹಾನುಭಾವನಿಗಿನ್ನುಳಿದ ಭೂಮಿಕೆಗಳೇಕೆನೆ=ಮಹಾನುಭಾವನಿಗನ್ಯ ಜೀವನ್ಮುಕ್ತಿ ಯಾತಕೆ? (ಅಂಗಡಿಮುದ್ರಣ)

---

**ಗುರುಕರುಣಬೋಧಾನುಭವಸಾ**
**ಗರದಲೋಲಾಡುತ್ತ, ಮಾಯೆಯ**
**ಪರಿಹರಿಸಿ, ಪರಮೇಶ್ವರನು ತಾನಾಗಿ ಸಕಲದಲಿ ।**
**ಬೆರೆಸಿ, ನಿಜನಿರ್ದ್ವಂದ್ವ ನಿರ್ಗುಣ**
**ನಿರುತಪರಮಾನಂದರಾಜ್ಯದ**
**ಸಿರಿಯ ಸೊಂಪಿನ ಸೊಗಸಿನಲಿ ಸೊಬಗೆನಿಸಿ ಮೆರೆದಿಹನು ॥ ॥೭೯॥**

**ತಾತ್ಪರ್ಯ:** ಜೀವನ್ಮುಕ್ತನಾದವನು ಗುರುವಿನ ಅನುಗ್ರಹದಿಂದಲೂ, ಉಪದೇಶ ದಿಂದಲೂ ಭ್ರಾಂತಿಗಳನ್ನು ಹೋಗಲಾಡಿಸಿಕೊಂಡು ಈಶ್ವರನೇ ತಾನಾಗಿ ಸರ್ವಾತ್ಮ ಭಾವವನ್ನು ಹೊಂದಿ ಸ್ವಾನುಭವದಿಂದ ಆನಂದರೂಪಿಯಾಗಿರುತ್ತಾನೆ. ಸತ್ಯ ಸ್ವರೂಪನೂ, ಸುಖದುಃಖಶೂನ್ಯನೂ, ಗುಣರಹಿತನೂ, ಸದಾಬ್ರಹ್ಮಾನಂದದ ವೈಭವದ ಸುಖದ ಚೆಲುವಿನಿಂದ ಕಂಗೊಳಿಸುತ್ತಾನೆ.

**ಶಬ್ದಾರ್ಥ:** * ಬೋಧಾನುಭವಸಾಗರದಲಿ =ಉಪದೇಶದಿಂದ; * ಆನಂದಸಾಗರದಲೋಲಾಡುತ್ತ= ಸ್ವಾನುಭವದಿಂದ ಆನಂದರೂಪಿ ಆಗಿರುತ್ತಾನೆ; * ನಿಜ=ಸತ್ಯಸ್ವರೂಪ; * ನಿರ್ದ್ವಂದ್ವ= ಸುಖದುಃಖಶೂನ್ಯ; * ನಿರ್ಗುಣ=ಗುಣರಹಿತ; * ನಿರುತ=ಸತತ, ಸದಾ; * ಪರಮಾನಂದ= ವೈಭವದ; ಸೊಗಸಿನಲಿ=ಸುಖದ; ಸೊಬಗ ಎನಿಸಿ=ಚೆಲುವಿನಿಂದ; ಮೆರೆದಿಹನು= ಕಂಗೊಳಿಸುತ್ತಿರುವನು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಬ್ರಹ್ಮವಿಷ್ಣುಮಹೇಶ್ವರಾದಿಗ
ಳೊಮ್ಮೆಯಾ ತಮ್ಮ ಸ್ವರೂಪವ
ಬ್ರಹ್ಮವೆಂದೇ ಬಗೆದು ಮಾಯಾವರಣವಳಿದಿಹರು; ।
ಹಮ್ಮಳಿದ ನಿಜಯೋಗಿಯಾ ಪರಿ
ಬ್ರಹ್ಮವೇ ತಾನಾಗಿ ತನ್ನನು
ಬ್ರಹ್ಮವೆಂದೇ ದೃಢದೊಳಿರ್ಪನು ಮಗನೆ ಕೇಳೆಂದ ॥ ॥೮೦॥

**ತಾತ್ಪರ್ಯ:** ಬ್ರಹ್ಮ, ವಿಷ್ಣು, ಮಹೇಶ್ವರ ಮೊದಲಾದ ದೇವರುಗಳೆಲ್ಲ ಒಂದೇ ಬಾರಿಗೆ ತಮ್ಮ ನಿಜಸ್ವರೂಪ ಪರಬ್ರಹ್ಮವೆಂದು ತಿಳಿದು ಮಾಯೆಯ ಮುಸುಕನ್ನು ಕಳೆದುಕೊಂಡಿದ್ದಾರೆ. ಅದೇರೀತಿಯಾಗಿ ಅಹಂಕಾರ ತೊರೆದ ನಿಜವಾದ ಯೋಗಿ ಆತ್ಮಜ್ಞಾನಿಯಾಗಿ ಆ ಪರಬ್ರಹ್ಮರೂಪಿಯೇ ತಾನೆಂದು ತಿಳಿದು, ಸ್ಥಿರಚಿತ್ತನಾಗಿರುತ್ತಾನೆ ಎಂದು ಶುಕನಿಗೆ ವ್ಯಾಸ ಹೇಳಿದನು.

**ಶಬ್ದಾರ್ಥ:** * ಒಮ್ಮೆಯಾ=ಒಮ್ಮೆಯೇ+ಆ=ಒಂದೇ ಬಾರಿಗೆ ಆ; * ಹಮ್ಮಳಿದ=ಅಹಂಕಾರ ತೊರೆದ; * ಬ್ರಹ್ಮವೇ ತಾನಾಗಿ=ಆತ್ಮಜ್ಞಾನಿಯಾಗಿ; * ಬ್ರಹ್ಮವೆಂದೇ=ಪರಬ್ರಹ್ಮಸ್ವರೂಪಿಯೆಂದೇ; ದೃಢದೊಳಿರ್ಪನು=ಸ್ಥಿರಚಿತ್ತನಾಗಿರುತ್ತಾನೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಕೇಳಖಂಡಬ್ರಹ್ಮದಲಿ ಸ
ಮ್ಮೇಳದಿಂ ತಾದಾತ್ಮ್ಯವಡೆದ ನಿ
ರಾಳಯೋಗಿಯ ಲಕ್ಷಣವ ಹೇಳುವೆನು; ಸಕಲದಲಿ ।
ತಾಳಿ ಸಮತೆಯ, ಪೂರ್ಣಭಾವವ
ತೂಳಿ, ಭೋಗಿಸದಾವ ವಿಷಯವ,
ಲೀಲೆಯಿಂದಾತ್ಮಾನುಭವದಲಿ ತೃಪ್ತನಾಗಿಹನು ॥ ॥೮೧॥

**ತಾತ್ಪರ್ಯ:** ಅಭಿನ್ನವಾದ ಬ್ರಹ್ಮದಲ್ಲಿ ಬೆರೆತು ನಿಶ್ಚಿಂತನಾದ ಅಧ್ಯಾತ್ಮಯೋಗಿಯೆನಿಸಿದವನ ಲಕ್ಷಣವನ್ನು ಹೇಳುತ್ತೇನೆ ಕೇಳು: ಸಮಸ್ತಭೂತಗಳಲ್ಲೂ ಸಮಭಾವನೆ ಹೊಂದಿ, ಪರಿಪೂರ್ಣಭಾವವನ್ನು ಮನಸ್ಸಿನಲ್ಲಿ ತುಂಬಿಕೊಂಡು ಯಾವುದೇ ರೀತಿಯ ಇಂದ್ರಿಯ ಭೋಗವನ್ನೂ ಅಪೇಕ್ಷಿಸದೆ ಆತ್ಮಾನುಭವವೆಂಬ ವಿನೋದದಲಿ ಪರಿತೃಪ್ತನಾಗಿರುತ್ತಾನೆ.

**ಶಬ್ದಾರ್ಥ:** ತೂಳಿ=ಮನಸ್ಸಿನಲ್ಲಿ ತುಂಬಿಕೊಂಡು (ವ್ಯಾಪಿಸಿ); ಆವ ವಿಷಯ=ಯಾವ ಇಂದ್ರಿಯ ಭೋಗವನ್ನೂ; * ನಿರಾಳಯೋಗಿ=ನಿಶ್ಚಿಂತನಾದ ಅಧ್ಯಾತ್ಮಯೋಗಿ; * ಸಮತೆಯ=ಸಮಭಾವನೆಯ; ಭೋಗಿಸದೆ=ಅಪೇಕ್ಷಿಸದೆ; * ತೃಪ್ತನಾಗಿಹನು=ಸಂತೋಷದಿಂದಿರುವನು.

---

**ವಿರತಿಯೆನಿಸುವ ಮುಗ್ಧೆಯೊಡನತಿ**
**ಸರಸಸಲ್ಲಾಪವನು ಮಾಡುತ**
**ಲಿರುತ, ಗುರುಪದಭಕ್ತಿಯೆನಿಸುವ ತರುಣಿಯೊಡನಾಡಿ, ।**
**ನಿರುತ ಶ್ರುತಿಯೆಂದೆನಿಪ ಪ್ರೌಢೆಯೊ**
**ಳಿರುಳುಹಗಲಾಸಕ್ತಿದೋರುತ,**
**ಹಿರಿಯಳೆನಿಸುವ ಮುಕ್ತಿಯೊಡನೇಕಾಂತದಿಂದಿಹನು ॥ ॥೮೨॥**

**ತಾತ್ಪರ್ಯ:** ಶ್ರೇಷ್ಠ ಆತ್ಮಜ್ಞನಾದ ಯೋಗಿಯು ವಿರತಿಯೆಂಬ ಮುಗ್ಧ ಸ್ತ್ರೀಯೊಡನೆ ಸರಸಸಲ್ಲಾಪಗೈಯುತ್ತಿರುವನು; ಗುರುಪಾದಸೇವನ ಭಕ್ತಿಯೆಂಬ ತರುಣಿಯೊಡನೆ ಒಡನಾಡುತ್ತಿರುವನು; ಮತ್ತು ವೇದಾಂತವೆಂಬ ಪ್ರೌಢಸ್ತ್ರೀಯೊಡನೆ ಆಸಕ್ತನಾಗಿರುವನು. ಇವರೆಲ್ಲರಿಗೂ ಹಿರಿಯಳಾದ ಮುಕ್ತ್ಯಂಗನೆಯೊಡನೆ ಏಕಾಂತವಾಸದಲ್ಲಿರುವನು.

**ಶಬ್ದಾರ್ಥ:** **ಪ್ರೌಢೆ**=ಪ್ರಗಲ್ಭೆ, ಪರಿಣಿತ, ಮನಸ್ಕಳು; * **ತರುಣಿ**=ಯುವತಿ; * **ವಿರತಿ**=ವೈರಾಗ್ಯ; * **ಮುಗ್ಧೆ**=ಎಳೆವಯಸ್ಸಿನವಳು, ಯೌವನದ ಪ್ರಾರಂಭದ ಅವಸ್ಥೆಯಲ್ಲಿರುವವಳು; * **ಶ್ರುತಿ**=ವೇದಾಂತ.

**ಟಿಪ್ಪಣಿ:** ತ್ರಿವಿಧನಾಯಿಕೆಯರು ಎಂದರೆ ಮುಗ್ಧಾ, ಮಧ್ಯಮಾ, ಪ್ರೌಢಾ ಎಂಬುವರು.

---

**ಹಮ್ಮಳಿದ ನಿಜಯೋಗಿ ಮುಂದಣ**
**ಜನ್ಮಕರ್ಮಗಳಳಿದು, ತನುವಿನ**
**ಧರ್ಮಮಾತ್ರದಿ ವ್ಯವಹರಿಪ ಪ್ರಾರಬ್ಧವಶದಿಂದ; ।**
**ನಿರ್ಮಮತೆ, ನಿಸ್ಸಂಗ, ನಿರ್ಗುಣ**
**ಬ್ರಹ್ಮವೇ ತಾನಾಗಿ ತನ್ನೊಳು**
**ಸುಮ್ಮನಿರುತಿಹನಾತನಿರವದನರಿಯಲಳವಲ್ಲ ॥ ॥೮೩॥**

**ತಾತ್ಪರ್ಯ:** ಅಹಂಕಾರವನ್ನು ತೊರೆದ ನಿಜವಾದ ಯೋಗಿಯು (ಜೀವನ್ಮುಕ್ತನು) ಆಗಾಮೀಕರ್ಮಗಳನ್ನು ಕಳೆದುಕೊಂಡು ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳನ್ನು ಮಾತ್ರ ಪ್ರಾರಬ್ಧವಶದಿಂದ ಅನುಭವಿಸುತ್ತಾನೆ. ಜೀವನ್ಮುಕ್ತನಾದವನು ಮಮತಾರಹಿತನಾಗಿ, ಸಂಗರಹಿತನಾಗಿ ಗುಣರಹಿತನಾಗಿರುವುದರಿಂದ ಬ್ರಹ್ಮವೇ ತಾನಾಗಿ ತನ್ನಲ್ಲಿ ತಾನು ಮೌನಿಯಾಗಿರುತ್ತಾನೆ. ಇಂಥ ಜೀವನ್ಮುಕ್ತನು ಇರುವ ರೀತಿಯನ್ನು ತಿಳಿಯಲು ಸಾಧ್ಯವಿಲ್ಲ.

**ಶಬ್ದಾರ್ಥ:** * **ಹಮ್ಮಳಿದ**=ಅಹಂಕಾರವನ್ನು ತೊರೆದ; * **ಮುಂದಣಜನ್ಮಕರ್ಮಗಳನು ಅಳಿದು**=ಆಗಾಮೀಕರ್ಮಗಳನ್ನು ತೊರೆದು; * **ತನುವಿನಧರ್ಮಮಾತ್ರದಿ**=ದೇಹವನ್ನು ಆತ್ಮವಾಗಿ ತಿಳಿಯುವ ಬಹಿರ್ಮುಖವಾದ ಜನರ ಸ್ವಭಾವವನ್ನು ಅನುಸರಿಸಿ; * **ಪ್ರಾರಬ್ಧ ವಶದಿಂದ**=ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳನ್ನು; * **ವ್ಯವಹರಿಪ**=ವರ್ತಿಸುವನು, ಅನುಭವಿಸುತ್ತಾನೆ; **ನಿರ್ಮಮತೆ**=ನನ್ನದೆಂಬ ಅಭಿಮಾನವಿಲ್ಲದಿರುವಿಕೆ; * **ನಿಸ್ಸಂಗ**=ಸಂಗವಿಲ್ಲದಿಂರುವಿಕೆ, ಸಂಗಪರಿತ್ಯಾಗ; * **ನಿರ್ಗುಣ**=ಗುಣರಹಿತನಾಗಿರುವಿಕೆ.

**ಟಿಪ್ಪಣಿ–೧:** ಪ್ರಾರಬ್ಧವು ಶರೀರಾಭಿಮಾನಿಯಾದ ಜೀವನಿಗೇ ಹೊರತು ಬ್ರಹ್ಮಕ್ಕಲ್ಲ. ಜೀವನ್ಮುಕ್ತನು ಶರೀರ ಮೊದಲಾದವುಗಳ ಮೇಲಿನ ನಾನು, ನನ್ನದು ಎಂಬ ಅಭಿಮಾನರೂಪವಾದ ಜೀವತ್ವವನ್ನು ದಾಟಿ, ಯಾವ ಕರ್ಮದ ಸಂಬಂಧವೂ ಇಲ್ಲದ ಬ್ರಹ್ಮವಾಗಿರುವನು. ಆದ್ದರಿಂದ ಜೀವನ್ಮುಕ್ತನಿಗೆ ಪ್ರಾರಬ್ಧವಿಲ್ಲ. ಆದರೂ ದೇಹವನ್ನು ಆತ್ಮವನ್ನಾಗಿ ತಿಳಿಯುವ ಬಹಿರ್ಮುಖರಾದ ಜನರ ಸ್ವಭಾವಕ್ಕೆ ಅನುಸರಿಸಿಮಾತ್ರ, ಜ್ಞಾನಿಗೂ ಪ್ರಾರಬ್ಧವನ್ನು ಹೇಳುವುದುಂಟು.

**ಟಿಪ್ಪಣಿ–೨:** ಜ್ಞಾನಿಗೂ ಪ್ರಾರಬ್ಧವನ್ನು ಹೇಳುವುದು ಸ್ಥೂಲದೃಷ್ಟಿಯ ಮಾತೆಂದು ಶ್ರೀ ಶಂಕರ ಭಗವತ್ಪಾದರು 'ಅಪರೋಕ್ಷಾನುಭೂತಿ' ಎಂಬ ಪ್ರಕರಣಗ್ರಂಥದಲ್ಲಿ (ಶ್ಲೋಕಸಂಖ್ಯೆ ೯೭) ಸ್ಪಷ್ಟವಾಗಿ ಹೇಳಿದ್ದಾರೆ:

**ದೇಹಸ್ಯಾಪಿ ಪ್ರಪಂಚತ್ವಾತ್ಪ್ರಾರಬ್ಧಾವಸ್ಥಿತಿಃ ಕುತಃ? ।**

**ಅಜ್ಞಾನಿ ಜನ ಬೋಧಾರ್ಥಂ ಪ್ರಾರಬ್ಧಂ ವಕ್ತಿ ವೈಶ್ರುತಿಃ ॥**

[ದೇಹವೂ ಕೂಡ ಪ್ರಪಂಚವೇ ಆಗಿರುವುದರಿಂದ ಪ್ರಾರಬ್ಧವು ಹೇಗೆ ತಾನೇ ನಿಂತೀತು? ಶ್ರುತಿಯಾದರೋ ಅಜ್ಞಾನಿಗಳಿಗೆ ತಿಳಿವಳಿಕೆಯನ್ನುಂಟುಮಾಡಲು ಪ್ರಾರಬ್ಧವನ್ನು ಹೇಳುತ್ತಿದೆಯಷ್ಟೆ]

(ಅಪರೋಕ್ಷಾನುಭೂತಿ–ಶ್ಲೋಕ, ೯೭ ಅನು: ಸ್ವಾಮಿಹರ್ಷಾನಂದ (ರಾಮಕೃಷ್ಣಶ್ರಮದ ರಚನೆ) ಇ. ೨೦೧೧)

---

**ಪ್ರಾರಬುಧವಶದಿಂದ ತನು ಸಂ**
**ಚಾರವಪ್ಪುದು; ಚಿತ್ತವಾತ್ಮವಿ**
**ಚಾರದಲಿ ನಿಶ್ಚಿಂತವಾಗಿಹುದಂತರಂಗದಲಿ; ।**
**ಬೇರೆ ತಾ ನಿಸ್ಸಂಗನಾಗಿಯೆ**
**ದೂರನಾಗಿಹ ದುಃಖಸುಖಸಂ**
**ಸಾರಧರ್ಮಂಗಳಿಗೆ ಸಾಕ್ಷಿಕನಂತೆ, ಶುಕಯೋಗಿ ॥ ॥೮೪॥**

**ತಾತ್ಪರ್ಯ:** ಜೀವನ್ಮುಕ್ತವಾದ ಯೋಗಿಯ ಈ ಪಾಂಚಭೌತಿಕ ಶರೀರವು ಪ್ರಾರಬ್ಧ ಕರ್ಮ ವಶದಿಂದ ಜನ್ಮಂಗಳನ್ನು ತಳೆಯುತ್ತಿರುತ್ತದೆ. ಆದರೆ ಮನಸ್ಸು ಅಂತರಂಗದಲ್ಲಿ ಆತ್ಮದ ವಿಚಾರವನ್ನು ಚಿಂತಿಸುತ್ತ ನಿರಾಳವಾಗಿರುತ್ತದೆ. ಇಂಥ ಯೋಗಿಯು ನಿಸ್ಸಂಗನಾಗಿ ಸುಖದುಃಖಗಳನ್ನು ಒಳಗೊಂಡ ಸಂಸಾರಧರ್ಮಗಳಿಗೆ ಸಾಕ್ಷಿಕನಾಗಿ ದೂರವಿರುತ್ತಾನೆ. ಶುಕಯೋಗಿಯೇ ಕೇಳು.

**ಶಬ್ದಾರ್ಥ:** * **ತನುಸಂಚಾರವಪ್ಪುದು**=ಪ್ರಾರಬ್ಧ ವಶದಿಂದ ಜೀವಿಯು ನಾನಾಜನ್ಮಗಳನ್ನು ತಳೆಯುತ್ತದೆ; * **ನಿಶ್ಚಿತನಾಗಿಹನು**=ನಿರಾಳನಾಗಿರುವನು; * **ದುಃಖಸುಖಸಂಸಾರಧರ್ಮಗಳಿಗೆ**= ಸುಖದುಃಖಗಳನ್ನು ಒಳಗೊಂಡ ಸಂಸಾರದ ವ್ಯವಹಾರಗಳಿಗೆ; * **ಪ್ರಾರಬ್ಧ ವಶದಿಂದ**=ಪ್ರಾರಬ್ಧ ಕರ್ಮಗಳ ಕಾರಣದಿಂದ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಬಂದ ಸುಖದುಃಖಗಳನಹುದ
ಲ್ಲೆಂದು ಬಿಟ್ಟವನಲ್ಲ; ಮುಂದಹು
ದೊಂದನೂ ತಾ ಬಯಸ; ಹೋದುದ ನೆನೆಯನದರಿಂದ ।
ಕಂದ, ಬಾಲಕರೊಡನೆ ಬಾಲಕ
ರಂದದಲಿ, ಹಿರಿಯಲಿ ಹಿರಿಯರ
ಚಂದದಲಿ, ತೋರುವನು ಸೋಪಾಧಿಕದ ಮಣಿಯಂತೆ ॥ ॥೮೫॥

ತಾತ್ಪರ್ಯ: ಎಲೈ ಬಾಲಕ ಶುಕನೇ ಕೇಳು, ಜೀವನ್ಮುಕ್ತನಾದ ಯೋಗಿಯು ಸುಖಗಳನ್ನು, ದುಃಖಗಳನ್ನು ಇದು ಬೇಕು, ಇದು ಬೇಡ ಎಂದು ಬಿಡುವುದಿಲ್ಲ. ಇನ್ನು ಮುಂದಿನ ಜನ್ಮಗಳಲ್ಲಿ ಅನುಭವಿಸಲು ಬರತಕ್ಕದ್ದನ್ನು ಬಯಸುವುದೂ ಇಲ್ಲ, ಹಿಂದೆ ಕಳೆದು ಹೋದುದನ್ನು ಸ್ಮರಿಸುವುದೂ ಇಲ್ಲ, ಮಾಡಿದ್ದುಣ್ಣೋ ಮಹರಾಯ ಎಂಬಂತೆ ಬಂದದ್ದನ್ನು ಅನುಭವಿಸುತ್ತಾರೆ. ಮಕ್ಕಳೊಡನೆ ಮಕ್ಕಳ ರೀತಿಯಲ್ಲಿ, ದೊಡ್ಡವರೊಂದಿಗೆ ದೊಡ್ಡವರ ರೀತಿಯಲ್ಲಿ ಸೋಪಾಧಿಕಮಣಿಯಂತೆ (ಬಗೆಬಗೆಯ ಬಣ್ಣದ ಹೂಗಳ ಹತ್ತಿರವಿರುವ ಸ್ಫಟಿಕಮಣಿಯಂತೆ) ವರ್ತಿಸುವನು.

ಶಬ್ದಾರ್ಥ: ಸೋಪಾಧಿಕಮಣಿಯಂತೆ=ಬಗೆಬಗೆಯ ಬಣ್ಣದ ಹೂಗಳ ಹತ್ತಿರದಲ್ಲಿರುವ ಸ್ಫಟಿಕಮಣಿಯಂತೆ; * ಅಹುದಲ್ಲವೆಂದು=ಬೇಕುಬೇಡವೆಂಬಂತೆ; * ಬಯಸ=ಅಪೇಕ್ಷಿಸುವುದಿಲ್ಲ; * ನೆನೆಯನು=ಸ್ಮರಿಸನು; ಕಂದ=ಬಾಲಕನಾದ ಶುಕನೇ.

---

ತನ್ನ ಯೋಗಕ್ಷೇಮದಳತೆಯ
ಮನ್ನಿಸನು; ಜಗದನುಸರಣೆಯನು
ಮುನ್ನಲರಿಯನು; ಕೇಳವರಿಗವರಂತೆ ತೋರುವನು; ।
ಸನ್ನುತನೆ ತಿಳಿ, ಹಾನಿವೃದ್ಧಿಗ
ಳನ್ನು ತಾ ಮನದಲ್ಲಿ ನೆನೆಯನು;
ನಿರ್ಣಯಿಸಿ ನೋಡಿದರೆ ರಾಗದ್ವೇಷಿಯಂತಿಹನು ॥ ॥೮೬॥

ತಾತ್ಪರ್ಯ: ಜೀವನ್ಮುಕ್ತನೆನಿಸಿದವನು ತನ್ನ ಯೋಗಕ್ಷೇಮವನ್ನು ಎಂದರೆ ಏನನ್ನೂ ಪಡೆಯಲು ಯತ್ನಿಸದೆ ಇರುವುದನ್ನು ಮತ್ತು ಇರುವುದನ್ನು ಉಳಿಸಿಕೊಳ್ಳಲು ಹವಣಿಸದೆ, ಸ್ವಲ್ಪವೂ ಪ್ರಯತ್ನಿಸದೆ ಇರುವವನು ಜಗತ್ತಿನ ವ್ಯವಹಾರದ ಅನುಸರಣೆಯನ್ನು ಮೊದಲೇ ತಿಳಿಯನು. ಯಾರಾರು ಹೇಗಿರುವರೋ ಅವರವರಿಗೆ ತಕ್ಕಂತೆ ತೋರುತ್ತಾನೆ; ತನಗೆ ಲಾಭಾಲಾಭಗಳು ಏನಾಗುತ್ತವೆ ಎಂದು ಎಂದಿಗೂ ಕನಸುಮನಸಿನಲ್ಲೂ ಯೋಚಿಸನು; ವಿಚಾರಮಾಡಿ ನೋಡಿದರೆ ಅವನು ನಿಜಕ್ಕೂ ರಾಗದ್ವೇಷಿ (ವೈರಾಗ್ಯಶಾಲಿ)ಯಾಗಿರುವನು. ಶ್ರೇಷ್ಠನಾದ ಶುಕನೇ ತಿಳಿದಿಕೋ.

ಶಬ್ದಾರ್ಥ: * ಮನ್ನಿಸನು=ಪರಿಗಣಿಸುವುದಿಲ್ಲ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

**ಟಿಪ್ಪಣಿ: ಯೋಗಕ್ಷೇಮ**-ಇಲ್ಲದ್ದನ್ನು ದೊರಕಿಸುವ ಭಾರವೇ ಯೋಗ; ಇದ್ದದ್ದನ್ನು ಹೋಗಿಸದಿರುವ ಭಾರವೇ ಕ್ಷೇಮ (ಗೀತಾರ್ಥಚಂದ್ರಿಕೆ, ಅ-೯, ಶ್ಲೋ-೨೨,-ಹೊ.ಚಿ. ಪು-೨೦೬)

---

**ಹಾವಿನಲಿ, ಹಾರದಲಿ, ಶಿಲೆಯಲಿ,**
**ಹೂವಿನಲಿ, ಹೆಂಟೆಯಲಿ, ಮಣಿಯಲಿ,**
**ಭಾವೆಯಲಿ, ತೃಣದಲ್ಲಿ, ಶತ್ರುವಿನಲ್ಲಿ, ಮಿತ್ರರಲಿ, ।**
**ಭಾವಭೇದವ, ಬಿಟ್ಟು, ಸಮತೆಯ**
**ಸಾವಧಾನದಿ ವಿಹರಿಸುತ್ತಿಹ**
**ಪಾವನಾಶ್ರಮಗಳಲ್ಲಿ ಜೀವನ್ಮುಕ್ತ ಕೇಳೆಂದ ॥** ॥೮೭॥

**ತಾತ್ಪರ್ಯ:** ಜೀವನ್ಮುಕ್ತನಾದಯೋಗಿ ಸಮದರ್ಶಿ ಆಗಿರುತ್ತಾನೆ. ಹಾವಿನಲ್ಲೂ, ಹೂವಿನ ಹಾರದಲ್ಲೂ ಭೇದಬುದ್ಧಿಯಿಲ್ಲದವನು; ಕಠಿಣವಾದ ಶಿಲೆಯನ್ನೂ, ಮೃದುವಾದ ಹೂವನ್ನೂ ಒಂದೇ ರೀತಿ ಭಾವಿಸುವನು; ಮಣ್ಣಿನ ಉಂಡೆಯನ್ನೂ, ರತ್ನವನ್ನೂ, ಸುಂದರ ಸ್ತ್ರೀಯನ್ನೂ ಸಮನಾಗಿ ಕಾಣುವನು; ಹುಲ್ಲನ್ನೂ, ಶತ್ರುವನ್ನೂ, ಮಿತ್ರನನ್ನೂ ಏಕೀಭಾವದಿಂದ ತಿಳಿಯುವನು; ಹೀಗೆ ಸಮತಾಭಾವದಲ್ಲಿ ಸಾವಧಾನದಿಂದ ವ್ಯವಹರಿಸುತ್ತಾ ದಿವ್ಯಾಶ್ರಮಗಳಲ್ಲಿ ವಿವಹರಿಸುವನೇ ಜೀವನ್ಮುಕ್ತನೆನಿಸುವನು.

**ಶಬ್ದಾರ್ಥ:** * **ಹೆಂಟೆ**=ಮಣ್ಣಿನ ಉಂಡೆ; * **ವಿಹರಿಸುತ್ತಿಹ**=ವರ್ತಿಸುತ್ತಿರುವವನು; * **ಮಣಿ**=ರತ್ನ; * **ಪಾವನಾಶ್ರಮ**=ದಿವ್ಯಾಶ್ರಮ.

**ಟಿಪ್ಪಣಿ:** ಈ ಪದ್ಯಕ್ಕೆ ಸಮಾನಾರ್ಥವಾಗಿ ಈ ಶ್ಲೋಕ ಗಮನಿಸಬಹುದು:

**ದೃಷದ್ವಿಚಿತ್ರಕಲ್ಪಯೋರ್ಭುಜಂಗಮೌಕ್ತಿಕ ಸ್ರಜೋ ।**
**ಗರಿಷ್ಠರತ್ನಲೋಷ್ಠಯೋಃ ಸುಹೃದ್ವಿಪಕ್ಷ ಪಕ್ಷಯೋಃ ॥**
**ತೃಣಾರವಿಂದಚಕ್ಷುಷೋಃ ಪ್ರಜಾಮಹೀಮ ಮಹೇಂದ್ರಯೋಃ ।**
**ಸಮಂಪ್ರವರ್ತಯನ್ಮನಃ ಕದಾ ಸದಾಶಿವಂ ಭಜೇ ॥**

–ರಾವಣಕೃತ ಶಿವತಾಂಡವ ಸ್ತೋತ್ರ

---

**ಆಸೆಯೆಂಬುದ ಸುಟ್ಟು ಬೂದಿಯ**
**ಪೂಸಿಯಾತ್ಮವಿಚಾರದಿಂ ಸಂ**
**ತೋಷವೆಂಬುವ ಕುಂಡಲಂಗಳ ಧರಿಸಿ ದೃಢವಾಗಿ, ।**

ಸೂಸದಿಹ ಮನವೆಂಬ ಕೌಪಿನ
ಕಾಸಿಯನು ಬಿಗಿದುಟ್ಟು, ಪಂಚ
ಕ್ಲೇಶವಳಿದವ ಪರಮಪದಸುಖದಿಂದಲಿರುತಿಹನು ॥ ॥೮೮॥

ತಾತ್ಪರ್ಯ: ಆತ್ಮಯೋಗಿಯಾದವನು ಆಸೆಯೆಂಬುದನ್ನು ಸುಟ್ಟು ಆ ಬೂದಿಯನ್ನು ಮೈಗೆಲ್ಲಾ ಲೇಪಿಸಿಕೊಳ್ಳುತ್ತಾನೆ; ಆತ್ಮವಿಚಾರದಿಂದ ಸಂತೋಷವೆಂಬುವ ಕರ್ಣ ಕುಂಡಲಂಗಳನ್ನು ದೃಢವಾಗಿ ಧರಿಸುತ್ತಾನೆ. ನಿಶ್ಚಲಚಿತ್ತವೆಂಬ ಕೌಪೀನ ಚಲ್ಲಣವನ್ನು ಬಿಗಿದುಟ್ಟುಕೊಂಡು, ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ ಗಳೆಂಬ ಐದು ಕ್ಲೇಶಗಳನ್ನು ಕಳೆದುಕೊಂಡು ನಿತ್ಯಾನಂದಸುಖದಿಂದ ಇರುವನು.

ಶಬ್ದಾರ್ಥ: * ಬಿಗಿದುಟ್ಟು=ಭದ್ರವಾಗಿ ಧರಿಸಿ.

ಟಿಪ್ಪಣಿ: * ಪಂಚಕ್ಲೇಶವಳಿದವ–ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶವೆಂಬ ಐದುಕ್ಲೇಶಗಳು. ವಿವರಗಳಿಗೆ ಅಧ್ಯಾಯ–೧೦, ಪದ್ಯ–೬–೭ ನೋಡಿ (ಅನುಭವಾಮೃತ, ಅ–೧, ಪ–೨೨)

---

ತನ್ನ ದೇಹದೊಳಾದ ಕುರುವಿಂ
ಗನ್ನವಸ್ತ್ರವ ಕಟ್ಟುವಂದದಿ
ತನ್ನ ತನುವಿಪ್ಪನ್ನ ವಸನಾಶನವ ಪಡೆಯುತ್ತ ।
ಅನ್ಯ ತರುಣಿಯರನ್ನು ಕಂಡರೆ
ತನ್ನ ಮನಕೆ ವಿಕಾರವಿಲ್ಲದೆ
ಸಣ್ಣವಳ ಕಂಡಂತೆ ಕಾಂಬನು ಪೂರ್ಣನಹ ಯೋಗಿ ॥ ॥೮೯॥

ತಾತ್ಪರ್ಯ: ಪೂರ್ಣಯೋಗಿಯಾದವನು ತನ್ನ ಶರೀರದಲ್ಲಿ ಕುರುವೆದ್ದಾಗ ಅದಕ್ಕೆ ಬಿಸಿಹಿಟ್ಟನ್ನು ಬಟ್ಟೆಯಲ್ಲಿಟ್ಟು ಕಟ್ಟುವಹಾಗೆ (ಪೌಲ್ಟೀಸು ಹಾಕುವಹಾಗೆ) ತಾನು ದೇಹಧಾರಣೆ ಮಾಡಿರುವವರೆಗೆ ವಸ್ತ್ರಾಹಾರಗಳನ್ನು ಸೇವಿಸುತ್ತಿರುತ್ತಾನೆ. ಪರನಾರಿಯರನ್ನು ಕಂಡರೆ ಯಾವುದೇ ಮನೋವಿಕಾರವನ್ನು ಹೊಂದದೆ (ಚಂಚಲ ಚಿತ್ತನಾಗದೆ) ಚಿಕ್ಕ ಹೆಣ್ಣುಮಗುವನ್ನು ವಾತ್ಸಲ್ಯದಿಂದ ಹೇಗೋ ಹಾಗೆ ಕಾಣುತ್ತಾನೆ.

ಶಬ್ದಾರ್ಥ: * ಕುರು=ಗುಳ್ಳೆ, ಬೊಕ್ಕೆ; * ಅನ್ನವಸ್ತ್ರವ ಕಟ್ಟುವಂದದಿ=ಬಿಸಿಯನ್ನವನ್ನು ಬಟ್ಟೆಯಲ್ಲಿಟ್ಟು ಕಟ್ಟುವಂದದಿ, ಪೌಲ್ಟೀಸು, ಬೇಯಿಸಿದ ಹಿಟ್ಟನ್ನೂ ಬಟ್ಟೆಯನ್ನೂ; * ವಸನಾಶನವ=ಊಟಬಟ್ಟೆ, ವಸ್ತ್ರಾಹಾರ; ತನುವಿಪ್ಪನ್ನ=ದೇಹಧಾರಣೆ ಮಾಡಿರುವವರೆಗೆ; ಅನ್ಯತರುಣಿ=ಪರನಾರಿ; * ಸಣ್ಣವಳ =ಹೆಣ್ಣುಮಗು; * ಕಾಂಬನು=ಕಾಣುತ್ತಾನೆ.

ಪಾಠಾಂತರ: ಅನ್ನವಸ್ತ್ರವ=ಅನ್ಯವಸ್ತ್ರವ (ಕು); ಸಣ್ಣವಳಕಂಡಂತೆ=ತನ್ನ ಜನನಿಯರಂತೆ (ಕು)

---

**ಮೊದಲು ಕಾರಣವಾದುಪಾಧಿಯ**
**ಲುದಿಸಿದೀಶ್ವರ ಭಾವವಳಿದಂ**
**ತದರ ಕಾರ್ಯೋಪಾಧಿ ಜೀವತ್ವವನು ಕಳೆದುಳಿದ ।**
**ಸದಮಲಾನಂದಾಬ್ಧಿಯಾಗಿಹ**
**ಹದನ ಯೋಗಿಯನೀಶ್ವರನ ಭಾ**
**ವದಲಿ ಪೂಜಿಸಿ ಭಜಕರಿಷ್ಟಾರ್ಥಗಳ ಪಡೆದಿಹರು ॥ ॥೯೦॥**

**ತಾತ್ಪರ್ಯ:** ಆದಿಕಾರಣವಾದ ಉಪಾಧಿಯಿಂದ ಉಂಟಾದ ಈಶ್ವರಭಾವವನ್ನು ಕಳೆದುಕೊಂಡು ಅದರ ಕಾರ್ಯೋಪಾಧಿಯಾದ ಜೀವತ್ವವನ್ನೂ ಕಳೆದುಬಿಟ್ಟು ಉಳಿದಿರುವ ನಿರ್ಮಲಾನಂದಸಾಗರವೆನಿಸಿದ ಯೋಗಿಯನ್ನು ಈಶ್ವರಸ್ವರೂಪದವನೆಂದು ತಿಳಿದು ಪೂಜಿಸಿ ಭಕ್ತರು ತಮ್ಮ ಇಷ್ಟಾರ್ಥಗಳನ್ನು ಹೊಂದುವರು.

**ಶಬ್ದಾರ್ಥ:** * ಭಜಕರು=ಭಕ್ತರು; ಸದಮಲಾನಂದಾಬ್ಧಿಯಾಗಿಹ=ಶ್ರೇಷ್ಠನಿರ್ಮಲಾನಂದಸಾಗರವೆನಿಸಿದ; ಹದನ=ಸ್ಥಿತಿಯಲ್ಲಿರುವ

**ಟಿಪ್ಪಣಿ–೧: ಪೂಜಿಸಿ ಭಜಕರಿಷ್ಟಾರ್ಥಗಳ ಪಡೆದಿಹರು**=ಇದೇ ಭಾಗವನ್ನು "ಆತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ" ಎಂದು ಮುಂಡಕೋಪನಿಷತ್ತು ಹೇಳುತ್ತದೆ.

**ಟಿಪ್ಪಣಿ–೨: ಅಜ್ಞಾನ ಭೇದಗಳು ೫ ಬಗೆ:** ೧. ಮಾಯಾ ಅವಿದ್ಯಾರೂಪ, ೨. ಜ್ಞಾನಕ್ರಿಯಾಶಕ್ತಿರೂಪ, ೩. ವಿಕ್ಷೇಪ ಆವರಣರೂಪ, ೪. ಸಮಷ್ಟಿವ್ಯಷ್ಟಿರೂಪ, ೫. ಕಾರಣರೂಪ.

**ಕಾರಣರೂಪವೆಂದರೆ:** ಕೆಲವರು ಅಜ್ಞಾನವನ್ನು ಜಗತ್ತಿನ ಉಪಾದಾನಕಾರಣ ಮೂಲಪ್ರಕೃತಿಮಯ ಈಶ್ವರನ ಉಪಾಧಿರೂಪವೆಂದು ಒಪ್ಪಿರುವರು. ಈ ಪಕ್ಷದಲ್ಲಿ ಜೀವನಿಗೆ ಕಾರ್ಯ ಅಂದರೆ ಅಂತಃಕರಣವು ಉಪಾಧಿಯಾಗಿದೆ ಎಂದು ಅಂಗೀಕರಿಸಿದ್ದಾರೆ. (ವಿಚಾರ ಚಂದ್ರೋದಯ, ಶಾಂತಾನಂದಸ್ವಾಮಿ, ಪುಟ–೨೩೩)

ಜಗತ್ತಿನ ಉಪಾದಾನಕಾರಣವಾದ ಈಶ್ವರರೂಪ ಕಾರ್ಯೋಪಾಧಿಕಾರಣವಾದ ಜೀವತ್ವರೂಪ ಈ ಎರಡನ್ನೂ ಕಳೆದುಕೊಂಡವನು ಯೋಗೀಶ್ವರ ಎಂದು ಇಲ್ಲಿ ಕವಿ ಹೇಳಿದ್ದಾನೆ.

---

**ಸತ್ತುಚಿತ್ತಾನಂದವಹ ಪರ**
**ವಸ್ತುವನು ತಿಳಿದೊಡನವಿದ್ಯೆ ಸ**
**ಮಸ್ತವಾಸನೆ ಸಹಿತವಳಿಯಲು ವೃತ್ತಿಕೆಟ್ಟಾಗ ।**
**ಚಿತ್ತುಮಾತ್ರದಲಿರ್ದು ಜೀವ**
**ನ್ಮುಕ್ತಿದಾಳುತೆ ಪ್ರಾರಬುಧ ಮುಗಿ**
**ಯುತ್ತಲವನಿಹನಾಗ ನೋಡೆ ವಿದೇಹಮುಕ್ತಿಯಲಿ ॥ ॥೯೧॥**

**ತಾತ್ಪರ್ಯ:** ಸತ್ತು, ಚಿತ್ತು, ಆನಂದಸ್ವರೂಪನಾದ ಪರಬ್ರಹ್ಮನನ್ನು ಅರಿತೊಡನೆ ಅಜ್ಞಾನರೂಪಿ ಅವಿದ್ಯೆ ಸಮಸ್ತವಾಸನೆಸಹಿತವಾಗಿ ಅಳಿದುಹೋಗುವುದು. ಆಗ

ಭೇದಭಾವನೆಯೆಂಬ ವೃತ್ತಿಯು ನಾಶವಾಗಿ ಚಿನ್ಮಾತ್ರವಾಗಿ ಉಳಿದ ಜೀವನ್ಮುಕ್ತಿಯು ಪ್ರಾರಬ್ಧಕ್ಕೆ ಗುರಿಯಾಗುವುದು. ಅಂಥ ಪ್ರಾರಬ್ಧಕರ್ಮವನ್ನು ಅನುಭವಿಸಿದಮೇಲೆ ಆ ಯೋಗಿಯು ವಿದೇಹಮುಕ್ತಿಯನ್ನು ಹೊಂದುತ್ತಾನೆ.

**ಶಬ್ದಾರ್ಥ: * ಚಿತ್ತುಮಾತ್ರದಲ್ಲಿರ್ದು**=ಆತ್ಮನು ತನ್ನ ಸಹಜಾವಸ್ಥೆಯಾದ ತುರೀಯದಲ್ಲಿ ಚಿತ್‌ಸ್ವರೂಪನಾಗಿರುತ್ತಾನೆ. ಅದು ಸಹಜಾನಂದ (ಪ.ಪ.ಕೋಶ, ಪು-೧೫೩); *** ಜೀವನ್ಮುಕ್ತಿತಾಳುತೆ**=ಜೀವನ್ಮುಕ್ತನು ಆತ್ಮಸ್ವರೂಪವನ್ನು ತಾಳುವುದರಿಂದ ಅವನಿಗೆ ಕರ್ಮಲೇಪವಿಲ್ಲ. ಅವನ ದೇಹವು ಕರ್ಮಮಾಡುವಂತೆ ಇತರರಿಗೆ ಕಾಣುತ್ತದೆ. ಅವು ಸಂಚಿತ ಆಗಾಮಿಕರ್ಮಗಳು. ಆ ಕರ್ಮಗಳನ್ನು ನಮಸ್ಕರಿಸುವವರು ಪುಣ್ಯವನ್ನು ನಿಂದಿಸುವರು, ಪಾಪಗಳನ್ನು ತೆಗೆದುಕೊಳ್ಳುತ್ತಾರೆ;

**ಟಿಪ್ಪಣಿ-೧:** ವಿದೇಹಮುಕ್ತಿ-ಪ್ರಪಂಚದ ಪ್ರತೀತಿಯಿಲ್ಲದೆ ಬ್ರಹ್ಮಸ್ವರೂಪದಿಂದ ಇರುವ ಸ್ಥಿತಿಯೇ ವಿದೇಹಮುಕ್ತಿ ಅಥವಾ ಪ್ರಾರಬ್ಧಕರ್ಮವು. ಭೋಗದಿಂದ ನಾಶವಾದನಂತರ ಸ್ಥೂಲಸೂಕ್ಷ್ಮಶರೀರಗಳ ರೂಪದಿಂದ ಪರಿಣಮಿಸಿದ ಯಾವ ಅಜ್ಞಾನವಿತ್ತೋ ಆ ಅಜ್ಞಾನವು ಚೈತನ್ಯದಲ್ಲಿ ಲಯವಾಗುವುದೇ ವಿದೇಹಮುಕ್ತಿ (ಶ್ರುತಿವಿಚಾರ ಚಂದ್ರೋದಯ, ಅ-೧೩, ಪು-೧೯೧).

**ಟಿಪ್ಪಣಿ-೨: ಜೀವನ್ಮುಕ್ತಿದಾಳುತೆ ಪ್ರಾರಬುಧ ಮುಗಿಯುತ್ತಲವನಿಹನಾಗ ನೋಡೆ ವಿದೇಹಮುಕ್ತಿಯಲಿ**-ಜೀವನ್ಮುಕ್ತನ ಪ್ರಾರಬ್ಧದ ವಿಷಯದಲ್ಲಿ ಹಿಂದೆ ೮೩ನೇ ಪದ್ಯ, ಅಧ್ಯಾಯ ೧೧ರಲ್ಲಿ ಹೇಳಿದೆಯಷ್ಟೆ ಪ್ರಾರಬ್ಧವು ಮುಗಿದಮೇಲೆ ವಿದೇಹಮುಕ್ತಿಯಾಗುವುದೆಂಬುದು ವ್ಯವಹಾರ ದೃಷ್ಟಿಯ ಮಾತು. ದೇಹವು ನಿಜವಾಗಿ ಇರುವುದೆಂಬುದೂ ಇದರ ಕರ್ಮಾದಿಗಳು ಆತ್ಮನಿಗುಂಟೆಂಬುದೂ ಅಜ್ಞರದೃಷ್ಟಿಯಾಗಿದೆ. ದೇಹವೇ ಇಲ್ಲವೆಂಬುದೂ ಕರ್ಮಾದಿಗಳ ಸಂಬಂಧವು ಆತ್ಮನಿಗೆ ಎಂದಿಗೂ ಇಲ್ಲವೆಂಬುದರಿಂದ. ಅವನು ಯಾವಾಗಲೂ ಮುಕ್ತನೇ ಎಂಬುದು ಪರಮಾರ್ಥದೃಷ್ಟಿಯಾಗಿದೆ. ಇದನ್ನರಿಯುವುದಕ್ಕೇ ವ್ಯವಹಾರದಲ್ಲಿ ಮುಕ್ತಿ ಎನ್ನುವರು ಎಂಬುದಾಗಿ ಶ್ರೀ ಶಂಕರಾಚಾರ್ಯರು, ಬ್ರಹ್ಮಸೂತ್ರದ ೪ನೇ ಸೂತ್ರದ ಭಾಷ್ಯದಲ್ಲಿಯೂ ಇನ್ನೂ ಎಷ್ಟೋ ಕಡೆಯಲ್ಲಿಯೂ ಘಂಟಾಘೋಷದಿಂದ ವಿವರಿಸಿದ್ದಾರೆ.

ಅಜ್ಞರಿಗೆ ಕಾಣುವ ಈ ದೇಹವು ಬಿದ್ದಮೇಲೆ ಮತ್ತೆ ದೇಹದ ಸಂಬಂಧ ಜ್ಞಾನಿಗೆ ಆಗುವುದಿಲ್ಲವೆಂಬ ದೃಷ್ಟಿಯಿಂದ ವಿದೇಹಮುಕ್ತಿಯನ್ನು ಶ್ರುತಿಯು ಗುಣವಾಗಿ ಹೇಳುವುದು ಎಂದು ಬೃಹದಾರಣ್ಯಕ ಉಪನಿಷತ್ತಿನ ೪-೪-೬ನೇ ಮಂತ್ರಭಾಗ "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಎಂಬ ಮಂತ್ರಭಾಗದ ಭಾಷ್ಯದಲ್ಲಿ ಶಂಕರರು ವಿಸ್ತಾರವಾಗಿ ಹೇಳಿದ್ದಾರೆ.

---

## ಯೋಗಿಗಳು ೨ ಬಗೆ (೯೨)

ಎರಡು ಪರಿಯಲಿ ಯೋಗಿಗಳು ಸಂ
ಚರಿಸುವರು ಶುಕಯೋಗಿ, ಮೌನಿಯು
ಪರಮಹಂಸಾಶ್ರಮದಿ ಜಡಭರತಾದಿಗಳ ತೆರದಿ ।
ಇರಲು ವೈಯಾಕರಣಯೋಗೀ
ಶ್ವರರು ಜನಕಾದ್ಯರು ಸಮಾಧಿಯ
ಪರಿಪರಿಯ ಭೇದದಲಭೇದವ ಪಡೆದು ಚರಿಸುವರು ॥ ॥೯೨॥

**ತಾತ್ಪರ್ಯ:** ಯೋಗಿಗಳಲ್ಲಿ ಮೌನಿಗಳು ಮತ್ತು ವೈಯಾಕರಣರು ಎಂಬೆರಡು ರೀತಿಯಲ್ಲಿದ್ದಾರೆ. ಇವರಲ್ಲಿ ಸಮಾಧಿನಿಷ್ಠರಾದ ಮೌನಿಗಳು ಜಡಭರತ, ಋಷಭಯೋಗೀಶ್ವರ ಮೊದಲಾದವರ ರೀತಿಯಲ್ಲಿ ಪರಮಹಂಸರಾಗಿರುತ್ತಾರೆ. ವೈಯಾಕರಣರೆಂಬ ಯೋಗಿಗಳು ಸಮಾಧಿಯ ಆರು ವಿಧಗಳ ಭೇದದಲ್ಲಿ ಅಭೇದವನ್ನು ಪಡೆದು ಧರ್ಮಪ್ರಚಾರ ಮಾಡುವ ಸಿದ್ಧಪುರುಷರಾಗಿರುತ್ತಾರೆ.

**ಶಬ್ದಾರ್ಥ: ಎರಡು ಪರಿಯಲಿ**=ಮೌನಿಗಳು ಮತ್ತು ವೈಯಾಕರಣರು ಎಂಬೆರಡು ರೀತಿಯಿಂದ; **ಮೌನಿಯು**=ಸಮಾಧಿನಿಷ್ಠನಾಗಿರುವವನು; **ವೈಯಾಕರಣಯೋಗೀಶ್ವರರು**=ಧರ್ಮಪ್ರಚಾರವನ್ನು ಮಾಡುವ ಸಿದ್ಧಪುರುಷರು; **ಜನಕಾದ್ಯರು**=ಮಹಾಜ್ಞಾನಿಗಳಾದರೂ ಲೋಕಸಂಗ್ರಹಾರ್ಥವಾಗಿ ರಾಜ್ಯಭಾರವನ್ನು ಕೂಡ ನಿರ್ವಹಿಸುವ ಜನಕ, ಅಶ್ವಪತಿ ಮೊದಲಾದ ಚಕ್ರವರ್ತಿಗಳು; **ಜಡಭರತಾದಿಗಳು**=ಜಡಭರತ, ಋಷಭಯೋಗೀಶ್ವರರು. * **ಭೇದದಲಭೇದ**=ಸಮತೆ

**ಟಿಪ್ಪಣಿ-೧: ಮೌನಿಗಳು**-ಮೌನಿಗಳು ಅನಧಿಕಾರಿಗಳ ಮುಂದೆ ತಮ್ಮ ಉಪದೇಶವನ್ನು ವ್ಯರ್ಥಮಾಡಿಕೊಳ್ಳಬಾರದೆಂದು ಅವರು ಬಹುಮಟ್ಟಿಗೆ ಮೌನದಲ್ಲಿಯೇ ಇರುವರೇ ಹೊರತು ಸರಿಯಾದ ಅಧಿಕಾರಿಗಳನ್ನು ಕಂಡೊಡನೆ ಅವರು ತಮ್ಮ ಮೌನಮುದ್ರೆಯನ್ನು ಒಡೆದು ಉಪದೇಶಮಾಡುವರು. ಈ ಮಾತಿಗೆ ಜಡಭರತನೇ ನಿದರ್ಶನ. ಸೌವೀರರಾಜನು ಕಪಿಲಋಷಿಗಳ ಕಡೆಗೆ ಉಪದೇಶಕ್ಕಾಗಿ ಹೋಗುವಾಗ ಅವನ ಆಳುಗಳು ಪಲ್ಲಕ್ಕಿಯನ್ನು ಹೊರುವುದಕ್ಕೆ ಜಡಭರತನನ್ನು ಬಿಟ್ಟಿಹಿಡಿದರು. ತಾನು ಹಿಂದಿನಜನ್ಮದಲ್ಲಿ ಜಿಂಕೆಯ ಮೇಲಿಟ್ಟಿದ್ದ ಆಸಕ್ತಿ ಮುಂತಾದ ಪಾಪವು ಹೋಗಲೆಂದು ಜಡಭರತನು ಎರಡನೆಯ ಮಾತಾಡದೆ ಆ ಕೆಲಸಕ್ಕೆ ಹೋದನು (ಮೌನಿಯಾಗಿ). ಆದರೆ ಅವನು ಮೆಲ್ಲಗೆ ಹೆಜ್ಜೆಯಿಡುತ್ತಿದ್ದುದನ್ನು ಕಂಡು ರಾಜನು **"ನೀನು ಸ್ಥೂಲನೆಂದು"** ಮುಂತಾಗಿ ಹೇಳಲು ಅವನು ಆತ್ಮನು ಸ್ಥೂಲನಲ್ಲವೆಂದು ಬ್ರಹ್ಮೋಪದೇಶವನ್ನು ಮಾಡಿಯೇಬಿಟ್ಟನು.

**ಪೂರ್ವಕಥೆ: ಜಡಭರತನ ಮೌನಮುದ್ರೆ** (ಅ-೧೦, ಪು-೯೨)

**ಟಿಪ್ಪಣಿ-೨:** ಮಹಾಜ್ಞಾನಿಯಾದ ಜಡಭರತನು ತನ್ನ ಅಖಂಡವಾದ ಬ್ರಹ್ಮಾನುಸಂಧಾನದ ಭರದಲ್ಲಿ ಹೊರಗಣ ಯಾವ ವ್ಯವಹಾರವನ್ನೂ ಮನಸ್ಸಿಗೆ ತಂದುಕೊಳ್ಳದೆ ಮಂಕನಂತೆ ಇದ್ದನು. ಅವನ ಒಳಗಣ ತಿರುಳನ್ನರಿಯದೆ ಒಬ್ಬ ಸೌವೀರರಾಜದೂತನು ಅವನನ್ನು ಕಾಳಿಗೆ ಬಲಿಕೊಡುವುದಕ್ಕಾಗಿ ಕರೆದೊಯ್ದನು. ಜಡಭರತನು ಅವನ ಬಲಾತ್ಕಾರಕ್ಕೆ ಪ್ರತಿಯಾಗಿ ಏನನ್ನೂ ಹೇಳಲಿಲ್ಲ. ರಾಜದೂತನು ಕಾಳಿಯ ಮುಂದೆ ಅವನನ್ನು ನಿಲ್ಲಿಸಿ ಅವನ ತಲೆಯನ್ನು ತುಂಡುಮಾಡುವದಕ್ಕೆಂದು ಕತ್ತಿಯನ್ನು ಬೀಸಿದನು. ಇಷ್ಟರಲ್ಲಿ ತನ್ನ ಪರಮಭಕ್ತನಾದ ಆ ಜ್ಞಾನಿಯನ್ನು ಮದಾಂಧನಾದ ರಾಜದೂತನು ದುರುಪಯೋಗಮಾಡುವದನ್ನು ಸಹಿಸಲಾರದೆ ಕಾಳಿಯು ತನ್ನ ಪೀಠದಿಂದೆದ್ದು ಕಂಗಳಿಂದ ಕೆಂಡವನ್ನು ಸುರಿಸುತ್ತ ಬಂದು ಕತ್ತಿಯಿಂದ ಆ ರಾಜದೂತನ ಶಿರವನ್ನೇ ಹಾರಿಸಿ ಆ ರಕ್ತವನ್ನು ಕುಡಿದು ತನ್ನ ಮನಸ್ಸಿನ ವ್ಯಥೆಯಿಂದ ತನಗಾಗಿದ್ದ ದಾಹವನ್ನು ಅಡಗಿಸಿಕೊಂಡಳು. ಇಷ್ಟಾದರೂ ತನ್ನ ಮೃತ್ಯುಸ್ವರೂಪನಾಗಿದ್ದ ಭಟನನ್ನು ಕೊಂದದ್ದಕ್ಕಾಗಲಿ ಅಥವಾ ತನಗೆ ಜೀವದಾನವನ್ನು ಮಾಡಿದ್ದಕ್ಕಾಗಲಿ ಅವನ ಬಾಯಿಂದ ಆ ಸಾಕ್ಷಾದ್ದೇವಿಗೆ ಕೂಡ ಒಂದುಪಚಾರದ ಮಾತೂ ಬರಲಿಲ್ಲ. ಹೀಗೆ ಅವನು ವ್ಯರ್ಥವಾದ ಮಾತಿನಿಂದ ತನ್ನ ಅನುಸಂಧಾನದ ಸವಿಯನ್ನು ಕಳೆದುಕೊಳ್ಳಲಾರದಷ್ಟು ತನ್ನ ಬ್ರಾಹ್ಮೀಸ್ಥಿತಿಯಲ್ಲಿ ತನ್ಮಯನಾಗಿದ್ದನು.

## ಸಂನ್ಯಾಸದ ಅನವಶ್ಯಕತೆ (೯೩-೯೯)

ತನ್ನ ನಿಜವನು ತಿಳಿದ ಪುರುಷನೆ
ಧನ್ಯನಾತನೆ ಯೋಗಿಯಾತನೆ
ನಿರ್ಣಯಿಸೆ ಸಂನ್ಯಾಸಿಯಾತನೆ ದೇವತಾಮಯನು; ।
ವರ್ಣಧರ್ಮಾಶ್ರಮಗಳೇತಕೆ
ಪೂರ್ಣವಹ ಪರವಸ್ತುವಾದಗೆ?
ಜನ್ಮವೆಂಬುದು ಚೋಹವಂತ್ಯಾಶ್ರಮಿಗೆ ಕೇಳೆಂದ ॥ ॥೯೩॥

ತಾತ್ಪರ್ಯ: ತನ್ನ ಸತ್ಯಸ್ವರೂಪವನ್ನು ತಿಳಿದುಕೊಂಡ ಪುರುಷನೆ ಧನ್ಯನು. ವಿಚಾರ ಮಾಡಿನೋಡಿದರೆ ಆತನೇ ಸಂನ್ಯಾಸಿಯು; ಆತನೇ ಯೋಗಿಯು; ಆತನೇ ದೇವತಾಸ್ವರೂಪನು; ಪೂರ್ಣಪರಬ್ರಹ್ಮಸ್ವರೂಪಿಯಾದ ಆತ್ಮನಿಗೆ ವರ್ಣಧರ್ಮ, ಆಶ್ರಮಧರ್ಮಗಳಿರುವುದಿಲ್ಲ. ನಾಟಕದಲ್ಲಿ ವೇಷವನ್ನು ಹಾಕಿಕೊಂಡಿರುವವನಿಗೆ ತನ್ನ ವೇಷಕ್ಕೆ ಸಂಬಂಧಪಟ್ಟ ವರ್ಣಾಶ್ರಮಧರ್ಮಗಳು ಹೇಗಿರುವುದಿಲ್ಲವೋ ಅವನು ಕೇವಲ ವೇಷಧಾರಿ ಆಗಿರುತ್ತಾನೋ ಹಾಗೆ ಅಂತ್ಯಾಶ್ರಮಿ ಆದವನಿಗೆ ತನ್ನ ಜನ್ಮದಿಂದ ವರ್ಣಾಶ್ರಮಧರ್ಮಗಳೇನೂ ಇರುವುದಿಲ್ಲ.

**ಟಿಪ್ಪಣಿ: ಚೋಹ**-ವೇಷ (ನಾಟಕದಲ್ಲಿ ವೇಷವನ್ನು ಹಾಕಿಕೊಂಡಿರುವವನಿಗೆ ತನ್ನ ವೇಷಕ್ಕೆ ಸಂಬಂಧಪಟ್ಟ ವರ್ಣಾಶ್ರಮಧರ್ಮಗಳು ಹೇಗೆ ಇಲ್ಲವೋ ಹಾಗೆ ಅಂತ್ಯಾಶ್ರಮಿಗೆ (ಸಂನ್ಯಾಸಿಗೆ) ತನ್ನ ಜನ್ಮದಿಂದ ಬಂದಂಥ ವರ್ಣಾಶ್ರಮಧರ್ಮಗಳೇನೂ ಇಲ್ಲ.

---

ಆವ ವರ್ಣಾಶ್ರಮದ ತೊಡಕಿ
ಲ್ಲಾವ ವೈದಿಕ ಲೌಕಿಕಂಗಳು
ಯಾವವೂ ತನಗಿಲ್ಲ; ಬಗೆಯನು ವಿಧಿನಿಷೇಧಗಳ; ।
ಕೇವಲಾನಂದಾನುಭವ ಶಿವ
ಭಾವವೇ ತಾನಾಗಿ; ಸರ್ವವ
ಪಾವನವ ಮಾಡುತ್ತ ಜೀವನ್ಮುಕ್ತನಾಗಿಹನು ॥ ॥೯೪॥

ತಾತ್ಪರ್ಯ: ಜೀವನ್ಮುಕ್ತನಾದವನಿಗೆ ನಾಲ್ಕು ಆಶ್ರಮಧರ್ಮ, ನಾಲ್ಕು ವರ್ಣಧರ್ಮಗಳ ಯಾವ ನಿರ್ಬಂಧವೂ ಇರುವುದಿಲ್ಲ; ವೈದಿಕಕರ್ಮ, ಲೌಕಿಕಕರ್ಮಗಳ ಅಗತ್ಯವೂ ಇರುವುದಿಲ್ಲ. ಆ ಕರ್ಮ ಮಾಡಬೇಕು ಎಂಬ ವಿಧಿಯಾಗಲಿ, ಈ ಕರ್ಮ ಮಾಡಬಾರದು ಎಂಬ ನಿಷೇಧ ವಾಗಲಿ ಅವನಿಗಿರುವುದಿಲ್ಲ; ತಾನೇ ಕೇವಲ ಆನಂದಾನುಭವಿಯಾದ ಶಿವಸ್ವರೂಪಿ ಆಗಿರುತ್ತಾನೆ, ಸಮಸ್ತ ವಸ್ತುಗಳನ್ನು ಪರಿಶುದ್ಧಿಗೊಳಿಸುತ್ತ ಜೀವನ್ಮುಕ್ತನಾಗಿರುತ್ತಾನೆ.

**ಶಬ್ದಾರ್ಥ: ತೊಡಕಿಲ್ಲ**=ನಿರ್ಬಂಧವಿಲ್ಲ (ತೊಡಕೂ+ಇಲ್ಲ); ನಾಲ್ಕು ಆಶ್ರಮಗಳು (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ) ಇವುಗಳ ನಿರ್ಬಂಧವಿರುವುದಿಲ್ಲ; * **ವಿಧಿ ನಿಷೇಧಗಳು**= ಈ ಕರ್ಮ ಮಾಡಬೇಕು, ಈ ಕರ್ಮ ಮಾಡಬಾರದು ಎಂಬ ಸಲ್ಲಹೊಲ್ಲಗಳು.

---

**ನಿತ್ಯ ಗಾಯತ್ರಿಯಲಿ ಪೇಳಿ**
**ರ್ಪರ್ಥವನು ಗುರುಮುಖದಿ ತಿಳಿದಾ**
**ವರ್ತಿಸುತ, ಮನದಲ್ಲಿ ದಿವ್ಯಜ್ಞಾನವನು ಪಡೆದು, ।**
**ಪ್ರತ್ಯಗಾತ್ಮಜ್ಯೋತಿ ಬುದ್ಧಿಯ**
**ವೃತ್ತಿಯೊಡನೇಕತ್ವವಾಗಲು**
**ಮುಕ್ತಿಯಾಗದೆ ಮಗನೆ ಸಂನ್ಯಾಸದಲಿ ಫಲವೇನು? ॥** ॥೯೫॥

**ತಾತ್ಪರ್ಯ:** ಶುಕನೆ ಕೇಳು, ಜೀವನ್ಮುಕ್ತನಾಗಬೇಕಾದರೆ ಗುರೂಪದೇಶದಿಂದ ಗಾಯತ್ರಿಮಂತ್ರದಲ್ಲಿ ಹೇಳಿರುವ ಅರ್ಥವನ್ನು ಚೆನ್ನಾಗಿ ಮನನಮಾಡಿಕೊಂಡು ಸದಾ ಜಪಿಸುತ್ತಿರಬೇಕು. ಅದರಿಂದ ದಿವ್ಯಜ್ಞಾನಪಡೆದು ಪ್ರತ್ಯಗಾತ್ಮನೆಂಬ ಜ್ಯೋತಿಯ ಬುದ್ಧವ್ಯಾಪಾರದಲ್ಲಿ ಲೀನನಾದರೆ ಜೀವನ್ಮುಕ್ತಿ ಹೊಂದುತ್ತಾನೆ. ಅದುಬಿಟ್ಟು ಬರಿಯ ಸಂನ್ಯಾಸದ ವೇಷಮಾತ್ರದಿಂದ ಯಾವ ಪ್ರಯೋಜನವಿಲ್ಲ.

**ಶಬ್ದಾರ್ಥ: ಸಂನ್ಯಾಸದಲಿ**=ಸಂನ್ಯಾಸದ ವೇಷಮಾತ್ರದಿಂದ; **ಆವರ್ತಿಸುತ್ತ**=ಜಪಿಸುತ್ತ (ಮತ್ತೆಮತ್ತೆ ಮನನಮಾಡುತ್ತ).

---

**ಬ್ರಹ್ಮವೇ ತಾನಾದ ಮನುಜನು**
**ಹಮ್ಮಳಿದು ನಿಸ್ಸಂಗನಾಗಿಹ**
**ಧರ್ಮವೇ ಸಂನ್ಯಾಸವಲ್ಲದೆ ನಿತ್ಯಕರ್ಮಗಳ ।**
**ಸುಮ್ಮನೇ ಬಿಟ್ಟಾತ್ಮಚಿಂತೆಯ**
**ಒಮ್ಮೆಯೂ ಮನವಿಡದೆ, ಬರಿದೇ**
**ಹೆಮ್ಮೆಗವ ಸಂನ್ಯಾಸಿಯಾದುದರಿಂದ ಫಲವೇನು? ॥** ॥೯೬॥

**ತಾತ್ಪರ್ಯ:** ಸಂನ್ಯಾಸಿ ಆದವನು ತಾನೇ ಬ್ರಹ್ಮಜ್ಞಾನಿಯಾಗಿ ಅಹಂ ತೊರೆದು ಸರ್ವಸಂಗಪರಿತ್ಯಾಗಿ ಆಗಿರುವನು. ಅಂಥ ಧರ್ಮವೇ ಸಂನ್ಯಾಸವು. ಅದುಬಿಟ್ಟು ನಿತ್ಯಕರ್ಮಗಳನ್ನು ತೊರೆದು ಆತ್ಮಶುದ್ಧಿಯ ಚಿಂತನೆಯನ್ನು ಒಮ್ಮೆಯೂ ಮಾಡದೆ ಕೇವಲ ದೊಡ್ಡಸ್ತಿಕೆಗಾಗಿ ನಾನು ಸಂನ್ಯಾಸಿ ಎಂದು ಹೇಳಿಕೊಂಡರೆ ಬಂದ ಭಾಗ್ಯವೇನು?

**ಶಬ್ದಾರ್ಥ:** * **ಬ್ರಹ್ಮವೇ ತಾನಾದ ಮನುಜನು**=ನಿಸ್ಸಂಗಿಯಾಗಿ ಬ್ರಹ್ಮಜ್ಞಾನಿಯಾದವನು; * **ಹಮ್ಮಳಿದು** =ಅಹಂ ತೊರೆದು; * **ಬರಿದೆ ಹೆಮ್ಮೆಗೆ**=ಕೇವಲ ದೊಡ್ಡಸ್ತಿಕೆಗೆ; * **ಫಲವೇನು?**= ಬಂದ ಭಾಗ್ಯವೇನು?

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಕಾಯದಲಿ ಸಂನ್ಯಾಸಿ ವೇಷವ,
ಬಾಯೊಳಗೆ ಬ್ರಹ್ಮವನು, ಮನದಲಿ
ರಾಯಪಟ್ಟವ ಕಟ್ಟಿಕೊಳಬೇಕೆಂಬುದನು ತಳೆದು ।
ಜಾಯೆಯೊಬ್ಬಳ ಬಿಟ್ಟೆನೆಂಬೀ
ನ್ಯಾಯದವ ತಾ ವಾದಿಯಲ್ಲದೆ
ಮಾಯೆಯಳಿದಾತ್ಮಜ್ಞನೇ? ಸಂನ್ಯಾಸಿಯವನಲ್ಲ ॥ ॥೯೭॥

ತಾತ್ಪರ್ಯ: ದೇಹಕ್ಕೆ ಸಂನ್ಯಾಸಿವೇಷವ ತೊಡಿಸಿ, ಮಾತಿನಲ್ಲಿ ಅಹಂಬ್ರಹ್ಮಾಸ್ಮಿ ಎನ್ನುತ್ತಾ, ಮನಸ್ಸಿನಲ್ಲಿ ರಾಜಪದವಿ ಪಡೆಯಬೇಕೆಂದು ಹಂಬಲಿಸುತ್ತಾ 'ನಾನು ಹೆಂಡತಿಯನ್ನು ತೊರೆದುಬಿಟ್ಟಿದ್ದೇನೆ' ಎಂದು ವಾದಮಾಡುವ ಏನು ಕುತರ್ಕಿಯೇ ಹೊರತು ಮಾಯೆಯನ್ನು ಗೆದ್ದಂತಹ ಆತ್ಮಜ್ಞಾನಿಯಲ್ಲ. ನಿಜ ಸಂನ್ಯಾಸಿಯಂತೂ ಖಂಡಿತವಾಗಿಯೂ ಅಲ್ಲ.

ಶಬ್ದಾರ್ಥ: ಜಾಯೆ=ಹೆಂಡತಿ; ಆತ್ಮಜ್ಞನೇ=ಆತ್ಮಜ್ಞನಲ್ಲ ಎಂದು ಅಭಿಪ್ರಾಯ.

---

ಬಗೆಯೆ 'ನಿಸ್ಸಂಗೋಽಯಮೆಂ'ದೀ
ಜಗವರಿಯೆ ಸಾರಲ್ಕೆ ಶ್ರುತಿಶಿರ,
ಮಗನೆ 'ಸಂನ್ಯಾಸೋಽಯಮೆಂ'ಬುದನಾತ್ಮವರ್ಗವಹ ।
ಬಗೆಯೆ ತನುಕರಣಾದಿಗಳಿಗೋ?
ಬಗೆಯಳಿದ ಬ್ರಹ್ಮಕ್ಕೋ? ತಿಳಿಯಲು
ನಗೆಯಲಾ! ಸಂನ್ಯಾಸ ಬರಿದೇ ಭ್ರಾಂತಿ ನೋಡೆಂದ ॥ ॥೯೮॥

ತಾತ್ಪರ್ಯ: ಶುಕನೆ ಕೇಳು, ಪ್ರಬಲವಾದ ಶ್ರುತಿಗಳು 'ಪುರುಷನು ಬ್ರಹ್ಮನಸಂಗ ವಿಲ್ಲದವನು' ಎಂದು ಜಗತ್ತಿಗೆಲ್ಲಾ ತಿಳಿಯುವಂತೆ ಸಾರುತ್ತಿರಲು, ಈ ಸಂನ್ಯಾಸದ ವೇಷವೆಂಬುದು, ಆತ್ಮವರ್ಗಕ್ಕೆ ಸೇರಿದೆ ಎಂದು ತಿಳಿದರೆ ಈ ಶಬ್ದಗಳು ಶರೀರಾದಿ ಕರಣಗಳಿಗೆ ಸಲ್ಲುವುದೇ? ಅಥವಾ ದೇಹಾದಿಭಾವಗಳನ್ನು ತೊರೆದ ಆತ್ಮವರ್ಗ ವಾಗಿರಲು ಬ್ರಹ್ಮಕ್ಕೆ ಅನ್ವಯಿಸುವುದೇ? ಈ ರೀತಿ ವಿಚಾರಮಾಡುವುದೇ ನಗೆಪಾಟಲಿನ ಸಂಗತಿ ಆಗಿದೆ. ಏಕೆಂದರೆ ಸಂನ್ಯಾಸದ ಬರೀವೇಷವು ಭ್ರಾಂತಿಯೇ ಆಗಿದೆ.

ಶಬ್ದಾರ್ಥ: ಸಂನ್ಯಾಸ ಬರಿದೆ ಭ್ರಾಂತಿ=ಸಂನ್ಯಾಸದ ಬರೀವೇಷವು ಭ್ರಾಂತಿಯೇ ಸರಿ; * ತನುಕರಾದಿ ಗಳಿಗೋ?=ದೇಹಾದಿ ಇಂದ್ರಿಗಳಿಗೆ ಸಲ್ಲುವುದೇ? ಇಲ್ಲ; * ಬಗೆಯಳಿದ ಬ್ರಹ್ಮಕ್ಕೋ=ದೇಹಾದಿ ಭಾವನೆಗಳನ್ನು ಕಳೆದುಕೊಂಡ ಬ್ರಹ್ಮಕ್ಕೆ ಅನ್ವಯಿಸುವುದು.

---

**ಅವನೊಬ್ಬ ಗೃಹಸ್ಥ ಧರ್ಮದಿ**
**ವ್ಯಾವಹಾರಿಕನಾಗಿ, ಮಿಗೆ ಸ**
**ದ್ಭಾವ ಶಮೆದಮೆ ಶಾಂತಿ ವೈರಾಗ್ಯಗಳನಳವಡಿಸಿ, ।**
**ಜೀವಪರಮಾತ್ಮೈಕ್ಯಪದವನು**
**ಭಾವಿಸುತ್ತಿಹನವನೆ ಸಂನ್ಯಾ**
**ಸಾವಲಂಬನನವನೆ ಜೀವನ್ಮುಕ್ತ ನೋಡೆಂದ ॥ ॥೯೯॥**

**ತಾತ್ಪರ್ಯ:** ಯಾರೇ ಆಗಲಿ ಗೃಹಸ್ಥಧರ್ಮ ಆಚರಿಸುತ್ತ ಲೌಕಿಕ ವ್ಯವಹಾರನಿರತನಾಗಿದ್ದರೂ, ಅತಿಶಯವಾಗಿ ಸದಾಲೋಚನೆ, ಸ್ಮರಣೆ, ಇಂದ್ರಿಯನಿಗ್ರಹ, ಶಾಂತಮನ, ವಿರಕ್ತಿಭಾವಗಳನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಂಡು ಜೀವ ಮತ್ತು ಈಶ್ವರರೆಂಬ ಭೇದ ತೊರೆದು ಐಕ್ಯಭಾವದಿಂದ ಪರಬ್ರಹ್ಮರೂಪಿ ತಾನೆಂದು ತಿಳಿಯುತ್ತಿರುತ್ತಾನೋ ಅವನೇ ನಿಜವಾದ ಸಂನ್ಯಾಸವನ್ನು ತೆಗೆದುಕೊಂಡಿರುವವನು, ಅವನೇ ಜೀವನ್ಮುಕ್ತ ಎನಿಸಿಕೊಳ್ಳುತ್ತಾನೆ.

**ಶಬ್ದಾರ್ಥ: ಸಂನ್ಯಾಸಾವಲಂಬನನು**=ಸಂನ್ಯಾಸವನ್ನು ತೆಗೆದುಕೊಂಡಿರುವವನು; * **ಜೀವಪರಮಾತ್ಮೈಕಪದ**=ಜೀವಾತ್ಮ ಪರಮಾತ್ಮ ಐಕ್ಯ ಸಾಧಿಸಿದವನು; * **ಶಮೆ**=ಸ್ಮರಣೆ, ಮನೋನಿಗ್ರಹ; * **ದಮೆ**=ಇಂದ್ರಿಯನಿಗ್ರಹ; * **ಶಾಂತಿ**=ಶಾಂತ ಮನಸ್ಸು; * **ವೈರಾಗ್ಯ**=ವಿರಕ್ತಿಭಾವ.

---

## ವ್ಯಾಕರಣಯೋಗಿಗಳು (೧೦೦-೧೦೧)

**ಬಿಸಿಲದೊರೆಯಂದದಲಿತೋರುವ**
**ಹುಸಿಯಸಂಸಾರದಲಿ ಯೋಗಿಯು**
**ವಿಷಯಗಳನನುಭವಿಸುವುದು ದಿಟವೆಂದು ತೋರಿದರು ।**
**ಮಸಗಿ ಮನದಲಿ ಬ್ರಹ್ಮದಲ್ಲಿಯೆ**
**ವ್ಯಸನಿಯಾಗಿಹನುತ್ತಮಾಂಗದ**
**ಲೆಸೆವ ಕಲಶದಲಿಟ್ಟು ಬುದ್ಧಿಯ ಕುಣಿವ ನಟನಂತೆ ॥ ॥೧೦೦॥**

**ತಾತ್ಪರ್ಯ:** ಬಿಸಿಲಮರೀಚಿಕೆಯಾಗಿ ತೋರುವ ಈ ಮಿಥ್ಯಾರೂಪವಾದ ಸಂಸಾರದಲ್ಲಿ ಯೋಗಿಯಾದವನು ವಿಷಯಸುಖಗಳನ್ನು ಅನುಭವಿಸುವುದು ನಿಜವೆಂದು ತೋರಿದರೂ ಮನಸ್ಸಲ್ಲಿ ಸದಾ ತೀವ್ರಧ್ಯಾನನಿರತನಾಗಿ ಬ್ರಹ್ಮಚಿಂತನೆಯನ್ನು ಬಿಟ್ಟಿರಲಾರದವನು ಆಗಿರುತ್ತಾನೆ. ಹೇಗೆಂದರೆ ತಲೆಯಮೇಲೆ ಕೊಡವನಿಟ್ಟುಕೊಂಡು ಕುಣಿಯುವ ನರ್ತಕನು ತನ್ನ ಮನಸ್ಸನ್ನೆಲ್ಲಾ ಕಳಶದಲ್ಲಿಯೇ ನೆಟ್ಟಿರುತ್ತಾನೆ. ಹಾಗೆ ನಿಜವಾದ ಯೋಗಿ ಬ್ರಹ್ಮಜ್ಞಾನದೊಳಗೆ ತನ್ನ ಮನಸ್ಸನ್ನು ನೆಟ್ಟಿರುತ್ತಾನೆ.

**ಶಬ್ದಾರ್ಥ:** * **ಬಿಸಿಲದೊರೆ**=ಮರೀಚಿಕೆ, ಬಿಸಿಲುಗುದುರೆ, ಮೃಗಜಲ; * **ಹುಸಿಯಸಂಸಾರ**=ಮಿಥ್ಯಾರೋಪವಾದ ಸಂಸಾರ; * **ದಿಟ**=ಸತ್ಯ; * **ವಿಷಯಗಳನನುಭವಿಸುವುದು**=ಇಂದ್ರಿಯಸುಖ

ಅನುಭವಿಸುವುದು; ಮಸಗಿ=ತೀವ್ರವಾಗಿ ತೊಡಗುವುದು, ಗಾಢವಾಗಿ, ತೀವ್ರಧ್ಯಾನದಲ್ಲಿ; ಉತ್ತಮಾಂಗ=ತಲೆ; ವ್ಯಸನಿಯಾಗಿಹನು=ಬಿಟ್ಟಿರಲಾರದವನು; * ಕಳಶ=ಕೊಡ; * ಕುಣಿವ ನಟ=ನರ್ತಕ

---

ಮಗನೆ ವೈಯಾಕರಣಿಯೀ ಪರಿ
ಜಗದೊಳಗೆ ಸಂಸಾರಿಯಂದದಿ
ಬಗೆಯಳಿದು, ಭ್ರಮೆಯಡಗಿ, ಮೋಹಾವೇಶವಿಲ್ಲದೆಯೆ ।
ಅಗಣಿತದ ವಿಷಯಗಳನುಂಬನು
ಹಗರಣಿಗನಂದದಲಿ; ಯೋಗಿಯ
ಬಗೆಯಗೋಚರವರಿಯಲಳವಲ್ಲೆಂದನಾ ಮುನಿಪ ॥ ॥೧೦೧॥

ತಾತ್ಪರ್ಯ: ಎಲೈ ಶುಕನೆ ಕೇಳು, ವೈಯಾಕರಣಿಯೆಂಬ ಯೋಗಿಯು ಜಗತ್ತಿನಲ್ಲಿ ನೋಡುವವರಿಗೆ ಇತರರಹಾಗೆ ಸಂಸಾರಿಯಂತೆ ಕಂಡರೂ, ಮನಸ್ಸನ್ನು ನಿಗ್ರಹಿಸಿ, ಮೋಹಪಾಶಗಳಿಗೆ ಸಿಲುಕಿಕೊಳ್ಳದೆ, ಮನೋಭ್ರಾಂತಿಯಿಲ್ಲದೆ, ನಾನಾಬಗೆಯ ಇಂದ್ರಿಯಸುಖಗಳನ್ನು ಕಷ್ಟಜೀವಿಯಾದ ಸಂಸಾರಿ ಅನುಭವಿಸುವಂತೆ ತೋರಿದರೂ ಅಂಥ ಮಹಾತ್ಮನಾದ ಯೋಗಿಯ ಮನಸ್ಸನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲದಷ್ಟು ಅವ್ಯಕ್ತವಾಗಿರುತ್ತಾನೆ ಎಂದು ವ್ಯಾಸನು ಶುಕನಿಗೆ ಹೇಳಿದನು.

ಶಬ್ದಾರ್ಥ: * ವೈಯಾಕರಣಿಯೋಗಿ=ಧರ್ಮಪ್ರಚಾರಮಾಡುವ ಸಿದ್ಧಪುರುಷರು (ವಿವರಗಳಿಗೆ ಅ–೧೦, ಪ–೯೨ ನೋಡಿ); * ಅಗಣಿತವಿಷಯಗಳನುಂಬನು=ಅಪಾರ ಇಂದ್ರಿಯಸುಖಗಳನ್ನು ಅನುಭವಿಸುತ್ತಾನೆ; ಹಗರಣಿಗನಂದದಲಿ=ಕಷ್ಟಜೀವಿಯಾದ ಸಂಸಾರಿಯಂತೆ.

ಪದವಿಭಾಗ: ಬಗೆಯಗೋಚರವರಿಯಲಳವಲ್ಲವೆಂದನಾ=ಬಗೆಯು+ಅಗೋಚರವು+ಅರಿಯಲು+ಅಳವು+ಅಲ್ಲ+ಎಂದನು+ಆ=ಯೋಗಿಯ ಮನಸ್ಸು ತಿಳಿಯಲು ಯಾರಿಗೂ ಸಾಧ್ಯವಿಲ್ಲದಷ್ಟು ಅವ್ಯಕ್ತವಾಗಿರುತ್ತದೆ.

---

## ಮೌನಿ (೧೦೨–೧೦೭)

ಆದ ಗರ್ಭವನಿಳುಹಿ ಬಿಸುಡುವ
ಹಾದರಿಯ ತೆರನಂತೆ, ಕಂಬವ
ಮೋದಿ ಮುರಿದೀಡಾಡಿ ಮದಗಜ ಹೋದ ತೆರನಂತೆ, ।
ಪಾದರಜವನು ಕೊಡಹಿ ಬಿಸುಟಂ
ತಾದರದಿ ಸಂಸೃತಿಯ ಪಾಶವ
ಭೇದಿಸುತ್ತ ಸಮಾಧಿಯೊಳಗಿರುತಿಹನು ಕೇಳೆಂದ ॥ ॥೧೦೨॥

ತಾತ್ಪರ್ಯ: ವ್ಯಭಿಚಾರದಿಂದ ಬೆಳೆದ ಪಿಂಡವನ್ನು ಗರ್ಭಪಾತಮಾಡಿಸಿ ಹೊರಗೆ ಎಸೆಯುವ ಕುಲಟೆಯ ಹಾಗೆ, ಸರಪಳಿಯಿಂದ ಕಂಬಕ್ಕೆ ಕಟ್ಟಿದ್ದನ್ನು ಜಗ್ಗಾಡಿ

ಕಂಬವನ್ನು ಮುರಿದು ಬಿಸಾಡಿ ಕಾಲದೂಳನ್ನು ಕೊಡವಿ ಮುಂದೆ ಸಾಗುವ ಮದ್ದಾನೆಯಂತೆ, ಸಂಸಾರವೆಂಬ ಸರಪಳಿಯನ್ನು ಜಗ್ಗಾಡಿ ಕಳಚಿಕೊಂಡು ಸ್ವಇಚ್ಛೆಯಿಂದ ಮುಕ್ತನಾಗಿ ಸಮಾಧಿಸ್ಥಿತಿಯಲ್ಲಿರುವವನು ಮೌನಿ ಎನಿಸಿಕೊಳ್ಳುತ್ತಾನೆ.

---

**ಮೂಕಭಾವವನೈದಿ, ತಾನೇ**
**ಕಾಕಿಯಾಗಿ, ದಿಗಂಬರತ್ವವ**
**ಸ್ವೀಕರಣವನು ಮಾಡಿ, ಪಾಣಿಯೆ ಪಾತ್ರೆಯಾಗಿರಲು, ।**
**ಶಾಕವಾಗಲಿ ಷಡುರಸಾನ್ನದ**
**ಪಾಕವಾಗಲಿ ಉಂಡು, ತನಗಿದು**
**ಬೇಕು ಬೇಡೆಂದೆನ್ನನವ ಶುಕಯೋಗಿ ಕೇಳೆಂದ ॥ ॥೧೦೩॥**

**ತಾತ್ಪರ್ಯ:** ಮೂಗನ ಹಾಗೆ ಮೌನಭಾವ ತಾಳಿ, ಜನಸಂಪರ್ಕವಿಲ್ಲದೆ ಏಕಾಂಗಿಯಾಗಿ ಬರಿಮೈಯವನಾಗಿ ಸಂಚರಿಸುತ್ತ, ಕೈಯನ್ನೇ ಆಹಾರಸ್ವೀಕಾರಕ್ಕೆ ಭಿಕ್ಷಾಪಾತ್ರೆಯನ್ನಾಗಿ ಮಾಡಿಕೊಂಡು, ಕಾಯಿಪಲ್ಯೆಯಾಗಲಿ, ಷಡ್ರಸಾನ್ನ ಭೋಜನವಾಗಲಿ, ಯಾವುದೇ ದೊರೆತರೂ ಯೋಚಿಸದೆ ಉಂಡು, ಸಂತೃಪ್ತನಾಗಿರುತ್ತಾನೆ. ಅಂಥ ಯೋಗಿಗೆ ಇದುಬೇಕು, ಅದುಬೇಡ ಎಂಬ ಚಿಂತೆಯೇ ಇರುವುದಿಲ್ಲ. ಅಂಥವನೇ ನಿಜವಾದ ಯೋಗಿ ಎಂದು ಶುಕಯೋಗಿಗೆ ಹೇಳಿದನು.

**ಶಬ್ದಾರ್ಥ:** * ಮೂಕಭಾವ=ಮೌನ; * ಐದಿ=ಹೊಂದಿ; * ಏಕಾಕಿ=ಒಂಟಿ, ಏಕಾಂಗಿ; * ಪಾಣಿಯೆ=ಕೈಯನ್ನೇ; ಶಾಕ=ಕಾಯಿಪಲ್ಯೆ; * ಪಾಕ=ಆಹಾರ; * ದಿಗಂಬರನಾಗಿ= ಬೆತ್ತಲೆಯವನಾಗಿ, ಬಟ್ಟೆಯಿಲ್ಲದೆ ಇರುವಿಕೆಯನ್ನು.

**ಟಿಪ್ಪಣಿ:** ಷಡುರಸಾನ್ನದಪಾಕ=ಉಪ್ಪು, ಹುಳಿಕಾರ ಸಿಹಿಕಹಿ ಒಗರು ಎಂಬ ಆರು ರಸಗಳಿಂದ ಕೂಡಿದ ಆಹಾರ (ಅ-೧, ಪ-೩೨ರಲ್ಲಿ ಹೇಳಿದೆ)

---

**ಒಮ್ಮೆ ಶಾಕದಲೂಟವಾತಂ**
**ಗೊಮ್ಮೆಶಾಲ್ಯನ್ನದಲಿ; ಭೂಮಿಯ**
**ಲೊಮ್ಮೆ ಮಲಗುವ; ಹಾಸುಮಂಚದಲೊಮ್ಮೆ ಪವಡಿಸುವ; ।**
**ಒಮ್ಮೆ ದಿವ್ಯಾಂಬರವನುಟ್ಟಿಹ**
**ನೊಮ್ಮೆ ಕಂಥಾಧಾರಿಯಾಗಿಹ;**
**ಹಮ್ಮಳಿದ ನಿಜಯೋಗಿ ಸುಮ್ಮನೆ ಚರಿಸುತಿಹನೆಂದ ॥ ॥೧೦೪॥**

**ತಾತ್ಪರ್ಯ:** ನಿಜಯೋಗಿಯಾದವನು ತನಗೆ ಒಂದುಬಾರಿ ಕಾಯಿಪಲ್ಯೆಯ ಊಟ ಸಿಕ್ಕಿದರೆ ಅದೇ ಸಾಕು ಎನ್ನುತ್ತಾನೆ; ಇನ್ನೊಮ್ಮೆ ನೆಲ್ಲಕ್ಕಿ ಅನ್ನ ದೊರೆತರೆ ಅಷ್ಟೇ ಸಾಕು ಎನ್ನುತ್ತಾನೆ. ಹಾಸಿಗೆ ಇಲ್ಲದಿದ್ದರೆ ಒಮ್ಮೆ ನೆಲದ ಮೇಲೆಯೇ ಮಲಗುತ್ತಾನೆ; ಮಂಚದಮೇಲೆ ಸುಪ್ಪತ್ತಿಗೆಯ ಹಾಸಿಗೆ ಸಿಕ್ಕರೆ ಅದರ ಮೇಲೂ ಮಲಗುತ್ತಾನೆ;

ಒಂದೊಂದು ಬಾರಿ ಚೀನಾಂಬರ (ಪೀತಾಂಬರ) ಸಿಕ್ಕರೆ ಅದನ್ನೇ ಉಡುತ್ತಾನೆ ಇನ್ನೊಮ್ಮೆ ಹರಕುಬಟ್ಟೆ ಸಿಕ್ಕರೆ ಅದನ್ನೇ ಧರಿಸುತ್ತಾನೆ; ಹೀಗೆ ಸಿರಿತನ-ಬಡತನದ ಯಾವುದೇ ಸುಖಸಾಧನ ದೊರೆತರೂ ಅದರಲ್ಲಿ ಭೇದವೆಣಿಸದೆ ಸುಖಕಾಣುತ್ತಾ ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ಸಂಚರಿಸುವವನೇ ಅಹಂ ಇಲ್ಲದ ನಿಜವಾದ ಯೋಗಿಯೆನಿಸುತ್ತಾನೆ.

**ಶಬ್ದಾರ್ಥ:** ಶಾಲ್ಯನ್ನದಲಿ=ನೆಲ್ಲಕ್ಕಿಯ ಅನ್ನದಲ್ಲಿ; ಕಂಥಾಧಾರಿ=ಹರಕುಬಟ್ಟೆಯನ್ನು ಹೊದ್ದವನು; * ಹಾಸುಮಂಚದಲ್ಲಿ=ಸುಪ್ಪತ್ತಿಗೆ ಹಾಸಿದ ಮಂಚದಮೇಲೆ; * ಪವಡಿಸುವವನು=ಮಲಗುವನು; * ದಿವ್ಯಾಂಬರ=ಪೀತಾಂಬರ, ಚೀನಾಂಬರ; * ಹಮ್ಮಳಿದ=ಅಹಂ ತೊರೆದ.

**ಟಿಪ್ಪಣಿ:** ಈ ಪದ್ಯವು ಭರ್ತೃಹರಿಯ ನೀತಿಶತಕದ ಈ (೭ನೇ ಪದ್ಯ) ಪದ್ಯವನ್ನು ಬಹಳ ಹೋಲುತ್ತದೆ.

**ಕ್ವಚಿದ್ಭೂಮೌ ಶಯ್ಯಾ ಕ್ವಚಿದಪಿ ಚ ಪರ್ಯಂತ ಶಯನಃ**
**ಕ್ವಚಿಚ್ಛಕಾಹಾರೀ ಕ್ವಚಿದಪಿ ಚ ಶಾಲ್ಯೋದನರುಚಿಃ ।**
**ಕ್ವಚಿತ್ಕಂಥಾಹಾರೀ ಕ್ವಚಿದಪಿ ಚ ದಿವ್ಯಾಂಬರಧರೋ**
**ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನ ಚ ಸುಖಮ್ ॥**

(ಟೀಕಾಸಹಿತ ಭತೃಹರಿ ನೀತಿಶತಕ-ದೊಡ್ಡಬೆಲೆ ನಾರಾಯಣಶಾಸ್ತ್ರಿ-ಅನುವಾದ, ಪದ್ಯ ಧೈರ್ಯ ಪದ್ಧತಿ)

[ತನ್ನಿಷ್ಟಾರ್ಥ ರೂಪವಾಗಿರುವ ಕಾರ್ಯವೇ ಮುಖ್ಯವೆಂದಿರುವ ಧೀರರು ಒಂದಾನೊಂದು ಕಾಲದಲ್ಲಿ ಭೂಶಾಯಿ ಆಗಿದ್ದರೂ ಮತ್ತೊಂದು ಕಾಲದಲ್ಲಿ ಹಂಸತೂಲಿಕಾತಲ್ಪದಲ್ಲಿ ಶಯನಮಾಡುತ್ತಿದ್ದರೂ ಒಂದಾನೊಂದು ಕಾಲದಲ್ಲಿ ಗೆಡ್ಡೆ ಗೆಣಸುಗಳನ್ನು ತಿನ್ನುತ್ತಿದ್ದಾಗ್ಯೂ ಮತ್ತೊಂದೆಡೆಯಲ್ಲಿ ಷಡ್ರಸೋಪೇತವಾದ ಮೃಷ್ಟಾನ್ನವನ್ನು ಭುಂಜಿಸುತ್ತಿದ್ದಾಗ್ಯೂ ಒಂದು ಕಾಲದಲ್ಲಿ ಬೊಂತೆಯನ್ನು ಧರಿಸಿದ್ದರೂ ಮತ್ತೊಂದು ಸಮಯದಲ್ಲಿ ಪೀತಾಂಬರಧಾರಿ ಆಗಿದ್ದರೂ ಈ ಸುಖದುಃಖಗಳನ್ನು ಎಣಿಸನು ಎಂದು ಭಾವವು-ಪದ್ಯ-೭೪]

---

**ಅಶನವಿಲ್ಲವೆ ಭಿಕ್ಷೆ ಮಾತ್ರವ**
**ನೊಸೆದು ಬೇಡಲು ಮನೆಮನೆಗಳಲಿ?**
**ತೃಷೆಗೆ ಕೆರೆತೊರೆ ಬಾವಿಗಳು ಬತ್ತಿದವೆ? ಭೂಮಿಯಲಿ ।**
**ಮಸಗಿಮಲಗಲು ತಾವು ದೊರಕದೆ?**
**ವಸುಧೆಯೊಳು ವಿಷಯಗಳ ಬಯಕೆಯ**
**ವ್ಯಸನವಳಿದ ಮಹಾನುಭಾವನೆ ಯೋಗಿ ಕೇಳೆಂದ ॥ ॥೧೦೫॥**

**ತಾತ್ಪರ್ಯ:** ಯೋಗಿಯಾದವನು ಮನೆಮನೆಗೆ ಹೋಗಿ ಬಯಸಿ ಭಿಕ್ಷೆಯನ್ನು ಕೇಳಿದರೆ ಅನ್ನಾಹಾರ ಸಿಗುವುದಿಲ್ಲವೇ? ಬಾಯಾರಿದರೆ ಕೆರೆ ಹಳ್ಳ ಬಾವಿಗಳು ಇಂಗಿಹೋಗಿರುವನೇ? (ನೀರು ಸಿಗುವುದಿಲ್ಲವೆ?) ಆಯಾಸವಾಗಿ ಮಲಗಲು ಇಚ್ಛೆಸಿದರೆ ನೆಲದಮೆಲೆ ಜಾಗಸಿಗುವುದಿಲ್ಲವೆ? ಈ ಜಗತ್ತಿನಲ್ಲಿ ಊಟನಿದ್ರೆ ಮೊದಲಾದ

ಯಾವ ಸುಖಗಳನ್ನೂ ಅವು ಸಿಗುವಂತಿದ್ದರೂ ತಾನಾಗಿ ಬಯಸದೆ ಅವುಗಳ ಚಿಂತೆಯನ್ನು ಬಿಟ್ಟವನೆ ನಿಜವಾದ ಮಹಾನುಭಾವನಾದ ಯೋಗಿ ಆಗಿರುತ್ತಾನೆ.

**ಶಬ್ದಾರ್ಥ:** * ಅಶನ=ಅನ್ನಾಹಾರ; * ಒಸೆದು=ಬಯಸಿ; * ತೃಷೆ=ಬಾಯಾರಿಕೆ; * ತೊರೆ=ಹಳ್ಳ; * ಬತ್ತಿದವೆ?=ಇಂಗಿಹೋಗಿರುತ್ತಿವೆಯೇ? * ಮಸಗಿ=ಆಯಾಸವಾಗಿ; * ಠಾವು=ಜಾಗ; * ವಸುಧೆ=ಜಗತ್ತು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕರದು.

---

**ಕೆಲರು ದ್ವಿಜನೆಂದೆಂಬರಾತನ;**
**ಕೆಲರು ತಾಪಸನೆಂಬರಾತನ;**
**ಕೆಲರು ತತ್ತ್ವಜ್ಞಾನಿಯೆಂಬರು; ಮೂಕ ಜಡನೆಂದು ।**
**ಕೆಲರು ನುಡಿವರು; ಶೂದ್ರನೆಂದೇ**
**ಕೆಲರು ಬಗೆವರು; ನೋಡಲವರಿಗೆ**
**ಹಲವು ಪರಿಯಲಿ ತೋರ್ಪ ಯೋಗಿಯ ತಿಳಿಯಲರಿದೆಂದ ॥ ॥೧೦೬॥**

**ತಾತ್ಪರ್ಯ:** ಇಂತಹ ಯೋಗಿಯನ್ನು ಕೆಲವರು ವಿಪ್ರನೆಂದೂ ಹೇಳುವರು; ಇನ್ನು ಕೆಲವರು ಆತನನ್ನು ತಪಸ್ವಿ ಎನ್ನುವರು ಮತ್ತೆ ಕೆಲವರು ಮೂಗನೆಂದೂ ಜಡನೆಂದೂ ಕರೆಯುವರು ಆತನನ್ನು ತತ್ತ್ವಜ್ಞಾನಿ ಎನ್ನುವವರೂ ಇದ್ದಾರೆ; ಕೆಲವರಂತೂ ಶೂದ್ರನೆಂದೇ ಭಾವಿಸುವರು; ವಿಚಾರಮಾಡಿನೋಡಿದರೆ ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ ಕಂಡುಬರುವ ಯೋಗಿಯ ನಿಜಸ್ವರೂಪವನ್ನು ತಿಳಿಯುವುದು ಬಲುಕಷ್ಟ

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

**ಪುಣ್ಯಫಲದಾಶೆಗಳು ಯೋಗಿಗೆ**
**ಹೊನ್ನಗುಬ್ಬಿಯತೆರದಿ ಬಾಲಗೆ;**
**ಸನ್ನುತನೆ, ಯಮನವರ ಭೀತಿಯು ಗುಮ್ಮನೆಂಬಂತೆ; ।**
**ಜನ್ಮಜರೆ ಮರಣಾದಿಗಳು ದು**
**ಷ್ಕರ್ಮವವು ಮೃಗತೃಷ್ಣೆಯಂದದಿ;**
**ನಿರ್ಣಯಿಸೆ ನಿಜವಾದ ಯೋಗಿಗೆ ಮಗನೆ ಕೇಳೆಂದ ॥ ॥೧೦೭॥**

**ತಾತ್ಪರ್ಯ:** ಸದ್ಗುಣನಾದ ಶುಕಯೋಗಿಯೇ ಕೇಳು, ವಿಚಾರಮಾಡಿನೋಡಿದರೆ ನಿಜವಾದ ಯೋಗಿಗೆ ಬಾಲಕರು ಬಂಗಾರದ ಗುಬ್ಬಿಯನ್ನು ಆಟದ ಗುಬ್ಬಿ ಬೊಂಬೆಯೆಂದು ತಿಳಿಯುವರೇ ಹೊರತು ಅದರ ಬಂಗಾರದ ಬೆಲೆಯನ್ನೂ ತಿಳಿಯುವುದಿಲ್ಲ. ಅದರಂತೆ ಯೋಗಿಯು ಪುಣ್ಯಫಲಗಳನ್ನು ಲೆಕ್ಕಿಸುವುದಿಲ್ಲ. ಅದರಂತೆಯೇ, ಮಕ್ಕಳಿಗೆ ಗುಮ್ಮ ಬರುತ್ತಾನೆ ಎಂದು ಹೆದರಿದ ಹಾಗೆ ಯೋಗಿಗೆ

ಯಮನ ಭೀತಿ ಇಲ್ಲ. ಇನ್ನು ಅವನ ಪಾಲಿಗೆ ಜನನ, ಮರಣ ಮುಪ್ಪುಗಳೆಂಬ ದುಷ್ಕರ್ಮಗಳು ಬಿಸಿಲ ತೊರೆಯಂತೆ ಹುಸಿ ಬ್ರಹ್ಮವೊಂದೇ ಸತ್ಯ. ಜಗತ್ತು ಮಿಥ್ಯ ಯೋಗಿಯ ಪಾಲಿಗೆ.

**ಶಬ್ದಾರ್ಥ:** * **ಹೊನ್ನಗುಬ್ಬಿ**=ಬಂಗಾರದ ಗುಬ್ಬಚ್ಚಿಯ ಬೊಂಬೆ; * **ಯಮನ ಭೀತಿ**=ಸಾವಿನ ಹೆದರಿಕೆ; * **ಗುಮ್ಮನೆಂಬಂತೆ**=ಗುಮ್ಮನೆಂಬುದಕ್ಕೆ ಹೇಗೆ ಹೆದರಬೇಕಾದ್ದಿಲ್ಲವೋ ಹಾಗೆ; * **ಜನ್ಮ**=ಜನನ; **ಜರೆ**=ಮುಪ್ಪು; **ಮರಣ**=ಸಾವು; * **ಮೃಗತೃಷ್ಣೆ**=ಬಿಸಿಲತೊರೆ; * **ನಿರ್ಣಯಿಸೆ**= ವಿಚಾರಿಸಿದರೆ.

**ಟಿಪ್ಪಣಿ: ಹೊನ್ನಗುಬ್ಬಿಯ ತೆರದಿ**–ಹುಡುಗರು ಬಂಗಾರದ ಗುಬ್ಬಿಯನ್ನೊಂದು ಆಟದ ಗುಬ್ಬಿಯೆಂದು ತಿಳಿಯುವರೇ ಹೊರತು ಬಂಗಾರದ ಬೆಲೆಯನ್ನು ತಿಳಿಯುವುದಿಲ್ಲ. ಅದರಂತೆ ಯೋಗಿಯು ಪುಣ್ಯದ ಫಲಗಳನ್ನು ಲೆಕ್ಕಿಸುವುದಿಲ್ಲ.

---

## ಬ್ರಹ್ಮಸ್ವರೂಪನಿಗೆ ಮತ್ತೆ ಬಂಧವಿಲ್ಲ (೧೦೮–೧೧೩)

**ವಾಸನೆಯ ಕೆಡಿಸುವೊಡೆ ಮನವ ವಿ**
**ನಾಶವನು ಮಾಡುವೊಡೆ, ಬಹಳಾ**
**ಭ್ಯಾಸವದು ಬೇಕೆಂದು ಬರಿದೇ ಭಂಗಪಡಲೇಕೆ? ।**
**ಈ ಸಕಲವೆಲ್ಲವನು ತನ್ನ ವಿ**
**ಲಾಸವೆಂದರಿದಿರ್ಪುದೇ ನಿರ್ವಾಸನೆ; ನಿ**
**ಜಾನಂದ ತಾನಾಗಿರೆ ಮನೋನಾಶ ॥** ॥೧೦೮॥

**ತಾತ್ಪರ್ಯ:** ವಾಸನೆಗಳನ್ನು ನಾಶಮಾಡಬೇಕಾದರೆ, ಮನಸ್ಸನ್ನು ಲಯಗೊಳಿಸ ಬೇಕಾದರೆ ಕಠಿಣಯೋಗಾಭ್ಯಾಸಮಾಡಿ ಸುಮ್ಮನೆ ವಿಫಲನಾಗಬೇಕಿಲ್ಲ. ಈ ಸಮಸ್ತ ವಸ್ತುಗಳೂ ಆತ್ಮನ ಲೀಲೆಯೆಂದು ತಿಳಿದುಕೊಂಡರೆ ನಿರ್ವಾಸನೆ ಉಂಟಾಗುತ್ತದೆ. ಆತ್ಮಾನಂದನಿರತನಾದವನಿಗೆ ಮನೋಲಯವಾಗುತ್ತದೆ.

**ಶಬ್ದಾರ್ಥ: ಕೆಡಿಸುವೊಡೆ**=ನಾಶಮಾಡಬೇಕಾದರೆ; **ಮನೋನಾಶ**=ನಿಜಾನಂದದಲ್ಲಿ ನಿಲ್ಲುವುದು.

**ಟಿಪ್ಪಣಿ: ವಾಸನೆ**–ಸ್ಮೃತಿಗೆ ಕಾರಣವಾಗಿರುವ ಸಂಸ್ಕಾರಗಳೇ ವಾಸನೆಗಳು. ಕ್ಲೇಶಗಳೂ ಸಪ್ತಕರ್ಮಗಳ ಫಲಗಳೂ ವಾಸನೆಯನ್ನುಂಟುಮಾಡುತ್ತವೆ. (ಯೋಗಶಾಸ್ತ್ರ) ವಾಸನೆಗಳು ಮೂರುಬಗೆ, ದೇಹವಾಸನೆ, ಶಾಸ್ತ್ರವಾಸನೆ, ಲೋಕವಾಸನೆ. ಜಗತ್ತಿನ ವ್ಯವಹಾರ ನಿಜ ಎನ್ನುವುದು ಲೋಕವಾಸನೆ. ನಾನು 'ದೇಹ' ಎನ್ನುವುದು ದೇಹವಾಸನೆ. ಹಲವು ಶಾಸ್ತ್ರಗಳಲ್ಲಿ ಹಲವು ರೀತಿಹೇಳಿದೆ ಎಂಬುದೇ ಶಾಸ್ತ್ರವಾಸನೆ. ಎಲ್ಲವನ್ನೂ ಆತ್ಮನ ಲೀಲೆಯೆಂದು ತಿಳಿಯುವುದೇ ವಾಸನಾಕ್ಷಯ. ಅದೇ ನಿರ್ವಾಸನೆ. (ಪರಮಾರ್ಥ ಪದಕೋಶ, ಪು–೩೪೯).

---

**ಮನವದೆತ್ತಲು ಪೋದೊಡೇನದು?;**
**ತನುವು ತಾನೇನಾದೊಡೇನದು?;**
**ಬಿನುಗಿನಿಂದ್ರಿಯ ನಿಕರವೆತ್ತಲು ತಿರುಗಲದಕೇನು? ।**
**ಘನಪರಂಜ್ಯೋತಿಪ್ರಕಾಶನು,**
**ನೆನೆಯಬಾರದಚಿಂತ್ಯನದ್ವಯ**
**ನೆನಿಸುವಚಲಾನಂದಗದರಿಂದೇನು ಭಯವೆಂದ ॥ ॥೧೦೯॥**

**ತಾತ್ಪರ್ಯ:** ಮನಸ್ಸು ಯಾವ ವಿಷಯದಕಡೆಗೆ ಹರಿದರೇನು? ಶರೀರವು ಏನಾಗಿ ಹೋದರೇನು? ದುಷ್ಟ ಇಂದ್ರಿಯಸಮೂಹ ಹೇಗೆ ವರಿಸಿದರೇನು ಬಂತು? ತಾನು ಘನಪರಂಜ್ಯೋತಿ ಪ್ರಕಾಶನೂ, ಧ್ಯಾನಿಸಿದರೆ ಸಿಕ್ಕದೆ ಇರುವಂಥ ಚಿಂತನೆಗೆ ಎಟುಕ ದವನೂ, ಅದ್ವಯನೂ, ಅಚಲಾನಂದನೂ ಆದವನಿಗೆ ಯಾವುದರಿಂದಾಗಲಿ ಭಯವೆಲ್ಲಿಯದು?

**ಶಬ್ದಾರ್ಥ:** **ನೆನೆಯಬಾರದು**=ಧ್ಯಾನಮಾಡಬೇಕೆಂದರೆ ಮನಸ್ಸಿಗೆ ಸಿಕ್ಕದೆ ಇರುವಂಥ; * **ಪೋದೊಡೇನದು?**=ಯಾವ ವಿಷಯದತ್ತ ಹರಿದರೇನು ಬಂತು?;

---

**ಕಳಿತ ಹಣ್ಣದು ಮರಳಿ ತಾನಾ**
**ಎಳೆಯ ಕಸುಗಾಯಹುದೆ? ಆತ್ಮನ**
**ತಿಳಿದು ನಿಶ್ಚಲಮಾದ ಯೋಗಿಯ ಚಿತ್ತ ಹಳೆಯಂತೆ ।**
**ಕಲುಷವಹುದೇ? ಕಾಮ ಮೊದಲಹ**
**ಬಲುಹಿನರಿಷಡ್ವರ್ಗವನುಳಿದು ನಿ**
**ರ್ಮಲ ನಿಜಾನಂದೈಕಪದವಾಗಿಹುದು ಕೇಳೆಂದ ॥ ॥೧೧೦॥**

**ತಾತ್ಪರ್ಯ:** ಚೆನ್ನಾಗಿ ಮಾಗಿದ ಹಣ್ಣು ಮತ್ತೆ ಕಸುಗಾಯಿ ಆಗಲು ಸಾಧ್ಯವೇ? ಆತ್ಮಜ್ಞಾನಹೊಂದಿ ನಿಶ್ಚಲಚಿತ್ತನಾದ ಯೋಗಿಯ ಮನಸ್ಸು ಮೊದಲಿನಂತೆ ಮಲಿನ ವಾಗಲು ಶಕ್ಯವೇ? ಕಾಮಕ್ರೋಧಲೋಭಮೋಹಮದಮತ್ಸರಗಳೆಂಬ ಬಲವತ್ತರವಾದ ಅರಿಷಡ್ವರ್ಗಗಳನ್ನು ತೊರೆದ ಯೋಗಿಯಮನಸ್ಸು ಪರಿಶುದ್ಧವಾದ ನಿಜಾನಂದೈಕ ಪದದಲ್ಲಿ ಸ್ಥಿರವಾಗಿರುವುದು.

**ಶಬ್ದಾರ್ಥ:** * **ಕಳಿತ**=ಚೆನ್ನಾಗಿ ಮಾಗಿದ; * **ಕಸುಗಾಯಿ**=ದೋರೆಗಾಯಿ.

---

**ಕ್ಷೀರಮಥನದಿ ಪಡೆದ ಮೇಲಾ**
**ಕ್ಷೀರವಹುದೇ ಆಜ್ಯ? ಕಡುನಿ**
**ಸ್ಸಾರ ಕಾಷ್ಠದೊಳಿರ್ದ ವಹ್ನಿಯ ಪಡೆಯಲಾ ವಹ್ನಿ ।**

ಧೀರ ಕೇಳೈ ಕಾಷ್ಠವಪ್ಪುದೆ?
ಪಾರಮಾರ್ಥಿಕವಾದ ನಿಜವದು
ಘೋರಮಾಯಾಕಾರ್ಯವಪ್ಪುದೆ? ಮಗನೆ ಕೇಳೆಂದ ॥ ॥೧೧೧॥

ತಾತ್ಪರ್ಯ: ಹಾಲಿಗೆ ಹೆಪ್ಪುಹಾಕಿ ಮೊಸರುಮಾಡಿ ಕಡೆದಾಗ ತುಪ್ಪಬಂದಮೇಲೆ ಮತ್ತೆ ಅದು ಹಾಲಾಗಲು ಶಕ್ಯವೇ? ಒಣಗಿದ ಕಟ್ಟಿಗೆ ಸುಟ್ಟುಬೆಂಕಿ ಆದಾಗ ಆ ಸುಟ್ಟ ಬೆಂಕಿಯಿಂದ ಕಟ್ಟಿಗೆಯನ್ನು ಮರಳಿ ಪಡೆಯಲಾದೀತೇ? ಮಾಯೆಯನ್ನು ತೊಲಗಿಸಿ ಪಾರಮಾರ್ಥಿಕ ಸತ್ಯವನ್ನು ಹೊಂದಿದಮೇಲೆ ಮತ್ತೆ ಆ ಜ್ಞಾನಿಯನ್ನು ಮಾಯೆ ಆವರಿಸಲು ಶಕ್ಯವೇ? ಧೀರನಾದ ಶುಕನೇ ಕೇಳು ಎಂದನು.

ಶಬ್ದಾರ್ಥ: * ಕಡು ನಿಸ್ಸಾರವಾದ=ಒಣಗಿದ ಶುಷ್ಕ; ಆಜ್ಯ=ತುಪ್ಪ; * ಕಾಷ್ಠ=ಕಟ್ಟಿಗೆ; * ವಹ್ನಿ=ಬೆಂಕಿ.

ಟಿಪ್ಪಣಿ: ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ದೇಹವೇ ತಾನೆಂದು ತನ್ನೊಳು
ಮೋಹಿಸಲು ಭವಭವದ ಬೀಜವು;
ದೇಹವಿದು ತಾನಲ್ಲ, ಸಾಕ್ಷಾದ್ಬ್ರಹ್ಮ ತಾನೆಂದು ।
ಊಹಿಸಲು ಭವಬೀಜನಾಶನ;
ದಾಹಕಾಷ್ಠನುಳಿದ ವಹ್ನಿಯ
ದಾಹದಂದದಿ ಬೀಜವಳಿಯಲು ಜನ್ಮವೆಲ್ಲಿಯದು ॥ ॥೧೧೨॥

ತಾತ್ಪರ್ಯ: ಅಹಂಕಾರ, ಮಮಕಾರಗಳಿಂದ ಪೀಡಿತನಾದ ಜೀವಿಯು ಆ ದೇಹವೇ ತಾನು, ಇದು ತನ್ನದು ಎಂದು ಮೋಹಿಸುತ್ತಿದ್ದರೆ ಆ ಮೋಹವೇ ಜನ್ಮಜನ್ಮಕ್ಕೂ ಬೀಜವಾಗಿ ಮೊಳೆಯುತ್ತದೆ. ಹಾಗೆಮಾಡದೆ ಈ ದೇಹ ತಾನಲ್ಲ, ತಾನು ನಿಜವಾಗಿ ಸಾಕ್ಷಾತ್ ಪರಬ್ರಹ್ಮಸ್ವರೂಪನು ಎಂದು ತಿಳಿದುಕೊಂಡರೆ ಜನ್ಮಾಂತರಗಳೆಂಬ ಬೀಜಗಳು ನಾಶವಾಗುವುವು. ಸುಟ್ಟುಹೋದ ಕಟ್ಟಿಗೆ ಹೇಗೆ ಪುನಃ ಸೌದೆಯಾಗ ಲಾರದೋ ಹಾಗೆಯೇ ಭವಬೀಜನಾಶವಾಗಲು ಪುನರ್ಜನ್ಮ ಎಲ್ಲಿಂದ ಬರುವುದು?

ಶಬ್ದಾರ್ಥ: ದಾಹಕಾಷ್ಠ=ಸುಟ್ಟ ಕಟ್ಟಿಗೆ; ವಹ್ನಿ=ಬೆಂಕಿ; * ಜನ್ಮವೆಲ್ಲಿಯದು?=ಪುನರ್ಜನ್ಮ ಎಲ್ಲಿಯದು; ಭವಭವದ=ಮತ್ತೆಮತ್ತೆ ಹುಟ್ಟುವಂತೆ ಮಾಡುವ ಅಥವಾ ಸಂಸಾರವನ್ನುಂಟುಮಾಡುವ; ದಾಹಕಾಷ್ಠ=ಸುಟ್ಟುಸೌದೆ.

---

ಜನ್ಮವೇ ಮೊದಲಿಲ್ಲದಾತನು
ಬ್ರಾಹ್ಮಣನದೆಂತಹನು? ಬ್ರಾಹ್ಮಣ
ಧರ್ಮವಿಲ್ಲದ ಮನುಜಗಾಶ್ರಮಧರ್ಮವೆಲ್ಲಿಯದು? ।

ಬ್ರಹ್ಮಚರ್ಯಾದ್ಯಾಶ್ರಮಂಗಳ
ನೆಮ್ಮದಾತಗೆ ಶಾಸ್ತ್ರವೇತಕೆ?
ಸುಮ್ಮನೇ ಸುಜ್ಞಾನಿ ತೂಷ್ಣೀಂಭಾವದಿಂದಿಹನು ॥ ॥೧೧೩॥

ತಾತ್ಪರ್ಯ: ಆತ್ಮನಿಗೆ ಜನ್ಮವೆಂಬುದೇ ಇಲ್ಲ ಎಂದಮೇಲೆ ಬ್ರಾಹ್ಮಣನು ಹೇಗಾಗುತ್ತಾನೆ? ಬ್ರಾಹ್ಮಣಜನ್ಮವೇ ಇಲ್ಲದವನಿಗೆ ಬ್ರಹ್ಮಚರ್ಯಾದಿ ಆಶ್ರಮಗಳು ಎಲ್ಲಿಬಂತು? ಬ್ರಹ್ಮಚರ್ಯಾದಿ ಆಶ್ರಮಗಳನ್ನು ತೊರೆದವನಿಗೆ ಶಾಸ್ತ್ರಾಭ್ಯಾಸದಿಂದ ಪ್ರಯೋಜನವೇನು? ನಿಜವಾಗಿ ಯೋಗಿಯಾದ ಸುಜ್ಞಾನಿಯು ಮೌನದಿಂದ ಆನಂದಮಯನಾಗಿರುವನು.

ಶಬ್ದಾರ್ಥ: * ಮೊದಲಿಲ್ಲದ=ಹುಟ್ಟಿಲ್ಲದ; * ಆಶ್ರಮಧರ್ಮ=ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಆಶ್ರಮಗಳು; * ನೆಮ್ಮದಾತಗೆ=ಅವಲಂಬಿಸದವನಿಗೆ; * ತೂಷ್ಣೀಂಭಾವ=ಮೌನಭಾವ.

ಟಿಪ್ಪಣಿ: ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಹುರಿದ ಬೀಜವು ಹುಟ್ಟಲರಿಯದ
ತೆರದಿ ಹಮ್ಮಳಿದುಳಿದ ವಸ್ತುವ
ನರಿದ ಯೋಗೀಶ್ವರಗೆ ಪುನರಾವರ್ತಿಯೆಲ್ಲಿಹುದು? ।
ಮರೆದು ಬಾಹ್ಯವನರಿಯದೇ ವ್ಯವ
ಹರಿಪ ಜೀವನ್ಮುಕ್ತ ಸತ್ತ್ವ
ಸ್ಫುರಣಮಾತ್ರದಿ ತೋರುತಿರ್ಪನು ದಗ್ಧಪಟದಂತೆ ॥ ॥೧೧೪॥

ತಾತ್ಪರ್ಯ: ಸುಟ್ಟಬೀಜವು ಮತ್ತೆ ಮೊಳಕೆಯೊಡೆಯಲು ಹೇಗೆ ಸಾಧ್ಯವಿಲ್ಲವೋ ಹಾಗೆ, ಅಹಂಕಾರ, ಮಮಕಾರಗಳನ್ನು ತೊರೆದು ಆತ್ಮವಸ್ತುವನ್ನು ತಿಳಿದ ಯೋಗಿಗೆ ಪುನರ್ಜನ್ಮವಿರುವುದಿಲ್ಲ. ಅಪ್ಪಿತಪ್ಪಿಯೂ ಬಾಹ್ಯ ವ್ಯವಹಾರದಲ್ಲಿ ತೊಡಗಿದ ಜೀವನ್ಮುಕ್ತನು ಸತ್ಯಸ್ಫುರಣಮಾತ್ರದಿ ಸುಟ್ಟಬಟ್ಟೆಯ ಹಾಗೆ ಎಂದರೆ ಹೊದಿಯುವುದಕ್ಕೆ ಉಪಯೋಗವಾಗದೆ ಬರೀ ತೋರುವಿಕೆಯ ಮಾತ್ರವಾಗಿರುವಂತೆ ಇರುತ್ತಾನೆ.

---

## ಜೀವನ್ಮುಕ್ತರ ನಿಂದಕರಿಗೆ ಕೇಡು (೧೧೫)

ಈ ಪರಿಯ ಯೋಗಿಗಳು ಸಂಸೃತಿ
ಲೇಪವಿಲ್ಲದೆ ವಿಹರಿಸುತ್ತಿರೆ
ಕಾಪಥರು ನಿಂದಿಸುವರವರ ಚರಿತ್ರಗಳ ಕಂಡು; ।
ಸೋಪಹಾಸವ ಮಾಡಿ ನರಕದ
ಕೂಪದೊಳು ಪಾಪಿಗಳು ಕೆಡೆವರು;
ಶ್ರೀಪತಿಯ ರೂಪಿಗಳು ಯೋಗಿಗಳವರು ಪರಬ್ರಹ್ಮ ॥ ॥೧೧೫॥

ತಾತ್ಪರ್ಯ: ಈ ರೀತಿಯಲ್ಲಿ ಜೀವನ್ಮುಕ್ತರಾದ ಯೋಗಿಗಳು ಸಂಸಾರದ ಸಂಪರ್ಕವಿಲ್ಲದೆ ಬಾಳುತ್ತಿದ್ದರೆ ಅವರ ನಡೆನುಡಿಗಳನ್ನು ಕಂಡು ಸಹಿಸದೆ ದುರಾಚಾರಿಗಳಾದವರು ದೂಷಿಸುತ್ತಾರೆ ಮತ್ತು ಅಪಹಾಸ್ಯ ಮಾಡುತ್ತಾರೆ. ಪರಿಣಾಮವಾಗಿ ಪಾಪಿಗಳಾದ ಅವರು ನರಕಕೂಪದಲ್ಲಿ ಬೀಳುತ್ತಾರೆ. ಏಕೆಂದರೆ ಜೀವನ್ಮುಕ್ತರಾದ ಯೋಗಿಗಳು ಸಾಕ್ಷಾತ್ ಲಕ್ಷ್ಮೀಕಾಂತನಾದ ನಾರಾಯಣನಿಗೆ ಸಮಾನರು, ಪರಬ್ರಹ್ಮಸ್ವರೂಪಿಗಳು.

ಶಬ್ದಾರ್ಥ: * ಸಂಸೃತಿಲೇಪವಿಲ್ಲದೆ=ಸಂಸಾರ ಸಂಪರ್ಕವಿಲ್ಲದೆ; * ವಿಹರಿಸುತ್ತಿರೆ=ಬಾಳುತ್ತಿರಲು; ಕಾಪಥರು=ದುರಾಚಾರಿಗಳು; * ನಿಂದಿಸುವರು=ದೂಷಿಸುವರು; * ಚರಿತ್ರಗಳ=ನಡೆನುಡಿಗಳನ್ನು; ಸೋಪಹಾಸವಮಾಡಿ=ಅಪಹಾಸ್ಯವನ್ನು ಮಾಡಿ; ಕೆಡೆವರು=ಬೀಳುವರು; ನರಕಕೂಪ=ನರಕವೆಂಬ ಬಾವಿಗೆ, ವರಕದಾಳಕ್ಕೆ; ಶ್ರೀಪತಿಯರೂಪಿಗಳು=ಸಾಕ್ಷಾತ್ ಲಕ್ಷ್ಮೀಕಾಂತನಾದ ನಾರಾಯಣನಿಗೆ ಸಮಾನರು.

---

## ಜೀವನ್ಮುಕ್ತರ ಪೂಜ್ಯತೆ (೧೧೬-೧೨೧)

ಅದು ನಿಮಿತ್ತದಲಾ ಮಹಾತ್ಮನ
ಪದಪಯೋಜವ ಪಿಡಿದು, ಬ್ರಹ್ಮವ
ವಿದಿತವಾಗಿಯೆ ತಿಳಿದು, ಸಂಸೃತಿ ಬಂಧವನು ಹರಿದು, ।
ಸದಮಲಾನಂದಾನುಭವವೆನಿ
ಪುದಧಿಯೊಳಗೋಲಾಡಿ, ಕಾಲನ
ಸದನವನು ತುಳಿದೈವದು ಸಾಯುಜ್ಯನಿಜಪದವ ॥ ॥೧೧೬॥

ತಾತ್ಪರ್ಯ: ನಾರಾಯಣಸಮಾನರಾಗಿ ಪರಬ್ರಹ್ಮಸ್ವರೂಪಿಗಳಾದ ಮಹಾತ್ಮರ ಪಾದಕಮಲಗಳನ್ನು ಆಶ್ರಯಿಸಿಕೊಂಡು ಬ್ರಹ್ಮಜ್ಞಾನವನ್ನು ಸವಿಸ್ತಾರವಾಗಿ ತಿಳಿದುಕೊಂಡು ಸಂಸಾರಪಾಶವನ್ನು ಕಿತ್ತೊಗೆದು ಶ್ರೇಷ್ಠವೂ, ನಿರ್ಮಲವೂ, ಆನಂದವೆನ್ನುವ ಅನುಭವಸಾಗರದಲ್ಲಿ ತೇಲಾಡುತ್ತ (ಬ್ರಹ್ಮಾನಂದದಲ್ಲಿ ವಿಹರಿಸುತ್ತ) ಸಾವನ್ನು ಜಯಿಸಿ ಸಾಯುಜ್ಯವೆಂಬ ಮುಕ್ತಿಯನ್ನು ಪಡೆಯುವರು.

ಶಬ್ದಾರ್ಥ: * ವಿದಿತವಾಗಿಯೆ=ಸವಿಸ್ತಾರವಾಗಿ; ಕಾಲನಸದನವನು ತುಳಿದು=ಸಾವನ್ನು ಮೆಟ್ಟಿ; ಐವುದು=ಸಾಯುಜ್ಯವೆಂಬ ಮುಕ್ತಿಯನ್ನು ಪಡೆಯುವರು.

---

ಪರುಷ ಮುಟ್ಟಿದ ಲೋಹವಾಕ್ಷಣ
ಹಿರಿದೆನಿಸುವಪರಂಜಿಯಾದಂ
ತರರೆ! ಬ್ರಹ್ಮದ ಗಟ್ಟಿ ತಾನೇ ಚರಿಸುವಂದದಲಿ ।
ಚರಿಸಿ ಜಂಗಮತೀರ್ಥವೆನಿಸುವ
ಗುರುಕಟಾಕ್ಷವ ಪಡೆದು ಸಾಕ್ಷಾ
ತ್ಕರಿಸಿ ಬ್ರಹ್ಮವೆ ಆಗಿ ಯೋಗಿಗಳೆನಿಸಿ ವಿಹರಿಪರು ॥ ॥೧೧೭॥

**ತಾತ್ಪರ್ಯ:** ಸ್ಪರ್ಶಮಣಿಗೆ ಸೋಂಕಿದ ಲೋಹವು ಕೂಡಲೇ ಶ್ರೇಷ್ಠವಾದ ಅಪರಂಜಿ ಚಿನ್ನವಾಗುತ್ತದೆ. ಅದರಂತೆ ಅಚ್ಚರಿಯಾಗುವ ಹಾಗೆ, ಅದ್ವಿತೀಯವಾದ ಬ್ರಹ್ಮವೇ ಗಟ್ಟಿಯಾಗಿಸ್ವತಃ ಸಂಚರಿಸುವ ರೀತಿಯಲ್ಲಿ ಚರಿಸುತ್ತಾ, ಹರಿಯುವ ಪುಣ್ಯಜಲ (ಪುಣ್ಯನದಿ) ದಂತಿರುವ 'ಜಂಗಮತೀರ್ಥ'ವೆನಿಸಿದ ಗುರುವಿನ ಕೃಪೆಯನ್ನು ಪಡದು, ಬ್ರಹ್ಮಸಾಕ್ಷಾತ್ಕಾರ ಹೊಂದಿ, ತಾನೇ ಬ್ರಹ್ಮವಾದ ನಿಜವಾದ ಯೋಗಿಯು ಚರಮೂರ್ತಿಯಾಗಿ ಲೋಕದಲ್ಲಿ ವಿಹರಿಸುವನು.

**ಶಬ್ದಾರ್ಥ:** ಪರುಷ=ಸ್ಪರ್ಶಮಣಿ; ಐದುವುದು=ಸಾಯುಜ್ಯವೆಂಬ ಮುಕ್ತಿಯನ್ನು ಪಡೆಯುವುದು; * ಅರರೆ!=ಅಚ್ಚರಿಯಾಗುವಹಾಗೆ; ಬ್ರಹ್ಮದಗಟ್ಟಿ=ಬ್ರಹ್ಮವಸ್ತು; * ಜಂಗಮತೀರ್ಥ=ಪುಣ್ಯನದಿ (ಹರಿಯುವ ಪುಣ್ಯಜಲ); * ಗುರುಕಟಾಕ್ಷವ=ಗುರುಕೃಪೆ.

---

**ಯೋಗವರ್ಗದಿ ರಾಜಯೋಗವೆ**
**ಯೋಗ; ವಿದ್ಯೆಯೊಳಾತ್ಮವಿದ್ಯೆಯ**
**ದಾಗಲಾ ಮುಕ್ತಿಯೊಳು ನಿಜಸಾಯುಜ್ಯವೇ ಮುಕ್ತಿ; ।**
**ಯೋಗಗಳೆ ರೋಗಗಳು ಮಿಕ್ಕವು;**
**ಕೂಗಿ ಸಾವುತಲಿರ್ಪ ವಿದ್ಯೆಗ**
**ಳಾಗಿ ಸಾಯುಜ್ಯವನುಳಿದ ಮುಕ್ತಿಗಳು ಮಿಥ್ಯಗಳು ॥ ॥೧೧೮॥**

**ತಾತ್ಪರ್ಯ:** ಮಂತ್ರಯೋಗ, ಲಯಯೋಗ, ಹಠಯೋಗ, ಅಮನಸ್ಕಯೋಗ, ರಾಜಯೋಗ ಮೊದಲಾದ ಬೇರೆಬೇರೆ ಅನೇಕ ಬಗೆಯ ಯೋಗಗಳಲ್ಲಿ ರಾಜಯೋಗವೇ ಉತ್ತಮ ಯೋಗವಿದ್ಯೆ, ಹಾಗೆಯೇ ವಿದ್ಯೆಗಳಲ್ಲಿ ಆತ್ಮವಿದ್ಯೆಯೇ ಶ್ರೇಷ್ಠವಿದ್ಯೆ. ನಾಲ್ಕು ಬಗೆ ಮುಕ್ತಿಗಳಲ್ಲಿ ಸಾಯುಜ್ಯಮುಕ್ತಿಯೇ ನಿಜವಾದ ಮುಕ್ತಿ. ಮಿಕ್ಕ ಯೋಗಗಳೆಲ್ಲ ರೋಗಗಳು. ಮಿಕ್ಕ ವಿದ್ಯೆಗಳೆಲ್ಲ ಕೂಗಿ ಸಾಯುವ ವಿದ್ಯೆಗಳು. ಸಾಯುಜ್ಯಮುಕ್ತಿ ಬಿಟ್ಟು ಉಳಿದ ಮುಕ್ತಿಗಳೆಲ್ಲ ಮಿಥ್ಯಾಮುಕ್ತಿಗಳಾಗಿವೆ.

**ಶಬ್ದಾರ್ಥ:** ಮಿಥ್ಯೆ=ಸುಳ್ಳು, ನಶ್ವರ; * ಮುಕ್ತಿಯೊಳು=ನಾಲ್ಕು ಬಗೆ ಮುಕ್ತಿಗಳಲ್ಲಿ (ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ).

---

**ವ್ರತಗಳೊಳು ಶಿವರಾತ್ರಿ, ಮಂತ್ರ**
**ಪ್ರತತಿಯೊಳು ಗಾಯತ್ರಿ, ವಿದ್ಯಾ**
**ವಿತತಿಯೊಳಗಧ್ಯಾತ್ಮ ವಿದ್ಯೆಯು, ಮತಳೊಳು ಶೈವ, ।**
**ಕ್ರತುಗಳೊಳು ಜಪಯಜ್ಞ, ಪೂಜಾ**
**ಸ್ಥಿತಿಯೊಳಗೆ ನಿರ್ಗುಣವು, ದೇವೋ**
**ನ್ನತಿಯೊಳಗೆ ಶ್ರೀ ಮಲ್ಲಿಕಾರ್ಜುನದೇವನೇ ದೇವ ॥ ॥೧೧೯॥**

**ತಾತ್ಪರ್ಯ:** ನೋಂಪಿಗಳಲ್ಲಿ ಶಿವರಾತ್ರಿ ಶ್ರೇಷ್ಠ; ಮಂತ್ರಸಮೂಹಗಳಲ್ಲಿ ಗಾಯತ್ರಿಮಂತ್ರ; ಸಕಲವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ ಪರಮಶ್ರೇಷ್ಠ; ಉಪಾಸನೆಗಳಲ್ಲಿ ಶಿವೋಪಾಸನೆ ಹಿರಿದಾದುದು; ಯಜ್ಞಗಳ ಪೈಕಿ ಜಪಯಜ್ಞ ಉನ್ನತವಾದುದು; ಪೂಜಾರಾಧನೆಗಳಲ್ಲಿ ನಿರ್ಗುಣಾರಾಧನೆಯೇ ಅತ್ಯುನ್ನತವಾದುದು; ದೇವತಾ ಶ್ರೇಷ್ಠರಲ್ಲಿ ಶ್ರೀ ಮಲ್ಲಿಕಾರ್ಜುನ ದೇವನೇ ಅತಿ ಶ್ರೇಷ್ಠನಾದವನು.

**ಶಬ್ದಾರ್ಥ:** * ವ್ರತ=ನೋಂಪಿ, * ಪ್ರತತಿ=ಸಮೂಹ; * ವಿತತಿ=ವೃಂದ; * ಕ್ರತು=ಯಜ್ಞ; * ಪೂಜಾಸ್ಥಿತಿ=ಪೂಜಾರಾಧನೆ.

**ಟಿಪ್ಪಣಿ-೧:** ಅಧ್ಯಾತ್ಮವಿದ್ಯೆಯು-ಅಧ್ಯಾತ್ಮವಿದ್ಯಾ ವಿದ್ಯಾನಾಂ ಎಂದು ಗೀತೆಯಲ್ಲಿ (ಅ-೧೦, ಶ್ಲೋ-೩೨) ಹೇಳಿದೆ. [ನಾನು ತಿಳಿವಳಿಕೆಯನ್ನುಂಟುಮಾಡುವ ವಿದ್ಯೆಗಳಲ್ಲೆಲ್ಲ ಮೋಕ್ಷವನ್ನು ಕೊಡತಕ್ಕ ಆತ್ಮವಿದ್ಯೆಯು ನಾನು- ಗೀತಾರ್ಥ ಚಂದ್ರಿಕೆ, ಪು-೨೨೫ ಅನು-ಹೊ.ಚಿ)]

**ಟಿಪ್ಪಣಿ-೨:** ಯಜ್ಞಾನಾಂ ಜಪಯಜ್ಞೋಽಸ್ಮಿ (ಗೀತೆ, ಅ-೧೦, ಶ್ಲೋ-೨೫) [ಅಶ್ವಮೇಧ ಮೊದಲಾದ ಯಜ್ಞಗಳಲ್ಲಿ ಯಾವ ಹಿಂಸೆಯೂ ಇಲ್ಲದಂಥ ಜಪರೂಪವಾದ ಯಜ್ಞನಾನಾಗಿದ್ದೇನೆ- ಗೀತಾರ್ಥ ಚಂದ್ರಿಕೆ, ಪು-೨೨೩, ಅನು-ಹೊ.ಚಿ)]

---

**ಸೇವಿಸುವ ಮೃದ್ದಾರುಶಿಲೆಗಳ**
**ದೇವತಾಪ್ರತಿಮೆಗಳು ಬುದ್ಧಿಯ**
**ಭಾವದಿಂ ಕಲ್ಪಿತಗಳಾಗಿಯು ದೈವವೆನಿಪಾಗ ।**
**ಆವ ಕಲ್ಪಿತವಿಲ್ಲದಿರ್ಪ, ಸ್ವ**
**ಭಾವಸಿದ್ಧವೆಯಾಗಿ ಬೆಳಗುವ,**
**ಕೇವಲಾನಂದಸ್ವರೂಪನು ದೇವನೇಕಲ್ಲ? ॥ ॥೧೨೦॥**

**ತಾತ್ಪರ್ಯ:** ಭಕ್ತಿಪೂರ್ವಕವಾಗಿ ಪೂಜಿಸುವ ಮಣ್ಣುಕಟ್ಟಿಗೆ ಕಲ್ಲು ಇವುಗಳಿಂದ ನಿರ್ಮಿತವಾದ ದೇವತಾವಿಗ್ರಹಗಳು ಮನುಷ್ಯನ ಬುದ್ಧಿಚಾತುರ್ಯದ ಫಲವಾಗಿ ನಿರ್ಮಿತವಾಗಿ ದೇವರೆನ್ನಿಸಿಕೊಂಡಿವೆ. ಹೀಗಿರುವಾಗ, ಯಾವ ಕಲ್ಪಿತಭಾವಗಳಿಲ್ಲದೆ, ಸಹಜಸ್ವಭಾವಸಿದ್ಧವಾಗಿ ಪ್ರಕಾಶಿಸುತ್ತಿರುವ ಆನಂದಸ್ವರೂಪನಾದ ಪರಬ್ರಹ್ಮನು ಏಕೆ ದೇವರಲ್ಲ?

**ಶಬ್ದಾರ್ಥ:** * ಸೇವಿಸುವ=ಭಕ್ತಿಪೂರ್ವಕವಾಗಿ ಪೂಜಿಸುವ; ಮೃದ್ದಾರುಶಿಲೆಗಳ (ಮೃತ್+ದಾರು+ಶಿಲೆಗಳ)=ಮಣ್ಣು, ಕಟ್ಟಿಗೆ, ಕಲ್ಲು ಇವುಗಳ.

**ಟಿಪ್ಪಣಿ:** * ಕೇವಲಾನಂದಸ್ವರೂಪನು-ಆನಂದೋ ಬ್ರಹ್ಮೇತಿ ವ್ಯಜಾನಾತ್ (ಆನಂದಸ್ವರೂಪನಾದವನು ಬ್ರಹ್ಮನು ಎಂದು ತಿಳಿಯತಕ್ಕದ್ದು) ಆದ್ದರಿಂದ ಪರಬ್ರಹ್ಮನು ದೇವನು.

**ಪಾಠಾಂತರ:** ಭಾವದಿಂ ಕಲ್ಪಿತಗಳಾಗಿಯು ದೈವವೆನಿಪಾಗ=
ಭಾವದಿಂಕಲ್ಪಿತಗಳಾ ದೇವತೆಗಳಹವಂತೆ (ಕು)

---

**ದೇಹವೇ ದೇವಾಲಯವು ದಿಟ;**
**ದೇಹಿಯೆನಿಸುವ ಜೀವ ದೇವನು;**
**ಮೋಹವೇ ನಿರ್ಮಾಲ್ಯವಂತದನೇತಿಗಳೆದುಳಿದ ।**
**ಊಹಿಸಲು ಬಾರದ ಸ್ವಯಂಪ್ರಭೆ**
**ಸೋಹಮೆಂಬುದೆ ಪೂಜೆ; ತನುವಿನ**
**ಗಾಹಿನಾಹಾರಗಳೆ ಉಪಚಾರಗಳು ಕೇಳೆಂದ ॥ ॥೧೨೧॥**

**ತಾತ್ಪರ್ಯ:** ಈ ದೇಹವೇ ಒಂದು ದೇವಸ್ಥಾನ ಎಂಬುದು ನಿಜ; ಜೀವನೇ ಅಲ್ಲಿ ವಾಸಮಾಡತಕ್ಕ ದೇವರು; ಮೋಹವೆಂಬುದೇ ನಿರ್ಮಾಲ್ಯವು; ಅಂಥ ಅಜ್ಞಾನವೆಂಬ ನಿರ್ಮಾಲ್ಯವನ್ನು ದೂರಮಾಡಿ ಉಳಿದ ಅಚಿಂತ್ಯವಾದ ಮತ್ತು ಸ್ವಯಂಪ್ರಕಾಶನಾದ ಸೋऽಹಂ (ಅವನೇ ನಾನು) ಎಂಬ ಧ್ಯಾನವೇ ಪೂಜೆಯು. ಕೇವಲ ಶರೀರಧಾರಣೆಗಾಗಿ ಉಣ್ಣುವ ಆಹಾರಾದಿಗಳೇ ಉಪಚಾರಗಳು.

**ಶಬ್ದಾರ್ಥ:** ಗಾಹಿನಾಹಾರ=ಶರೀರ ರಕ್ಷಣಾರ್ಥವಾದ ಊಟ.

**ಟಿಪ್ಪಣಿ:** ದೇಹವೇ ದೇವಾಲಯವು–ಇದಕ್ಕೆ ಆಧಾರವಾದ ಪುರಾಣಶ್ಲೋಕ ಏನೆಂದರೆ:
**ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಸ್ಸನಾತನಃ ।**
**ತ್ಯಜೇನಜ್ಞಾನನಿರ್ಮಾಲ್ಯಂ ಸೋऽಹಂಭಾವೇನ ಪೂಜಯೇತ್ ॥**

---

## ಪ್ರಾರಬ್ಧಕರ್ಮ (೧೨೨–೧೨೪)

**ಜ್ಞಾನದಿಂದಲಿ ಸಂಚಿತವು ಮಿಗೆ**
**ಮಾನನಿಧಿ, ಆಗಾಮಿಕರ್ಮವು**
**ಹಾನಿಯಪ್ಪುವು ವಂದಿಪರ ನಿಂದಿಪರ ದೆಸೆಯಿಂದ; ।**
**ತಾನು ತನುವಿಪ್ಪನ್ನವುಂಬನು;**
**ಜ್ಞಾನಿಯಾಗಿಯು ಬಿಡದು ತನುವಿನ**
**ಹಾನಿಯಹ ಪರಿಯಂತಲೆಲೆ ಪ್ರಾರಬ್ಧಕರ್ಮಗಳು ॥ ॥೧೨೨॥**

**ತಾತ್ಪರ್ಯ:** ಮಾನವಂತನಾದ ಶುಕನೇ ಕೇಳು, ಜ್ಞಾನಿಯಾದವನು ಹಿಂದೆ ಮಾಡಿದ ಪುಣ್ಯಾಪಾಪಗಳ ಸಮೂಹವು ಅಂತೆಯೇ ಮುಂದೆ ಮಾಡುವ ಪುಣ್ಯಾಪಾಪಕರ್ಮಗಳಲ್ಲಿ ಪುಣ್ಯಾಪಾಪಗಳೆರಡೂ ಜ್ಞಾನಿಯ ಪಾಲಿಗೆ ಇರುವುದಿಲ್ಲ. ಏಕೆಂದರೆ ಜ್ಞಾನಿಯ ಪುಣ್ಯವು ಜ್ಞಾನಿಯನ್ನು ವಂದಿಸುವವರಿಗೂ, ಜ್ಞಾನಿಯ ಪಾಪವು ಜ್ಞಾನಿಯನ್ನು ನಿಂದಿಸುವವರಿಗೂ ಹೋಗಿ ಕೊನೆಗೆ ಜ್ಞಾನಿಯು ತನ್ನ ಭಾಗಕ್ಕೆ ಯಾವ ಪುಣ್ಯಾ–ಪಾಪವೂ ಇಲ್ಲದವನಾಗುತ್ತಾನೆ. ಆದರೆ ಜ್ಞಾನಿಯಲ್ಲಿ ಶರೀರಾಭಿಮಾನಿಯಾದ ಜೀವನು ಪ್ರಾರಬ್ಧಕರ್ಮವನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ. ಈ ಜನ್ಮದಲ್ಲಿ ಶರೀರವಿರುವವರೆಗೂ ಪ್ರಾರಬ್ಧಕರ್ಮವನ್ನು ಅನುಭವಿಸುತ್ತಾನೆ.

**ಟಿಪ್ಪಣಿ–೧:** ಪ್ರಾರಬ್ಧಕರ್ಮ–ವರ್ತಮಾನ ಜನ್ಮದ ಆರಂಭಕರ್ಮ (ಹಿಂದೆಮಾಡಿದ ಪಾಪಪುಣ್ಯಗಳನ್ನು ಈ ಜನ್ಮದಲ್ಲಿ ಅನುಭವಿಸುವುದು) ಅನೇಕ ಸಂಚಿತಕರ್ಮಗಳ ಮಧ್ಯದಲ್ಲಿ ಪರಿಪಕ್ವವಾದ ಮತ್ತು ಈಶ್ವರನ ಇಚ್ಛೆಯಿಂದ ಈ ವರ್ತಮಾನ ದೇಹದಲ್ಲಿ ಆರಂಭವಾದ ಯಾವುದಾದರೊಂದು ಸಂಚಿತಕರ್ಮವು (ಟಿಪ್ಪಣಿ: ವಿಚಾರಸಾಗರ, ಪು–೧೯೦, ವೇದಾಂತ ಪದಾರ್ಥ ಸುಜ್ಞಾನ ವಿವರಣ ಕೋಶ)

**ಟಿಪ್ಪಣಿ–೨:** ತಾನುತನುವಿಪ್ಪನ್ನವುಂಬನು–ಶರೀರವಿರುವವರೆಗೂ ಪ್ರಾರಬ್ಧವನ್ನು ಅನುಭವಿಸುವನು (ಈ ಸಂದರ್ಭದಲ್ಲಿ ಅ–೧೦, ಪ–೮೩ನೇ ಟಿಪ್ಪಣಿ ನೋಡಿ)

---

**ಸಗರಸಂತತಿ, ಭಾರ್ಗವನು, ಶಶಿ,**
**ಗಗನಮಣಿ, ದೇವೇಂದ್ರನಾತನ,**
**ಮಗನು, ಮುಮ್ಮಗ, ಮೊದಲು, ಸ್ವೇಚ್ಛಾಪ್ರಾಪ್ತಿಫಲಯುತರು; ।**
**ಮಗನೆ, ಕೇಳು ಪರೇಚ್ಛೆಯವರನು**
**ಜಗದಲಿ ಹರಿಶ್ಚಂದ್ರ, ಕಲಶಜ**
**ರಗಣಿತರನಿಚ್ಛೆಯಲಿ ಮಾಂಡವ್ಯಾರ್ಜುನಾದಿಗಳು ॥ ॥೧೨೩॥**

**ತಾತ್ಪರ್ಯ:** ಸಗರ ಚಕ್ರವರ್ತಿಯ ವಂಶಜರು, ಪರಶುರಾಮನು, ಚಂದ್ರ–ಸೂರ್ಯರು, ದೇವೇಂದ್ರ, ಅರ್ಜುನ, ಅಭಿಮನ್ಯು ಮೊದಲಾದವರು ಸ್ವೇಚ್ಛಾಪ್ರಾಪ್ತಫಲಯುತರು. ಇನ್ನು ಹರಿಶ್ಚಂದ್ರ, ಅಗಸ್ತ್ಯ ಮೊದಲಾದ ಅನೇಕರು ಪರೇಚ್ಛೆಯವರು. ಮತ್ತೆ ಕೆಲವರು, ಮಾಂಡವ್ಯ, ಅರ್ಜುನ ಮೊದಲಾದವರು ಅನಿಚ್ಛೆಯಲಿ ಇರುವವರು. ತನ್ನ ಇಷ್ಟಕ್ಕೆ ವಿರೋಧವಾಗಿ ಸುಖದುಃಖಗಳನ್ನು ಅನುಭವಿಸಿದವರು. ಹೀಗೆ ಎಲ್ಲ ಜ್ಞಾನಿಗಳೂ ಮೂರು ವಿಧ ಪ್ರಾರಬ್ಧಕರ್ಮಗಳಲ್ಲಿ ಒಂದಲ್ಲ ಒಂದರಲ್ಲಿ ಸಿಲುಕಿಕೊಂಡವರೇ ಆಗಿದ್ದಾರೆ.

**ಶಬ್ದಾರ್ಥ: ಕಲಶಜ**=ಅಗಸ್ತ್ಯ; **ಸ್ವೇಚ್ಛಾಪ್ರಾಪ್ತಿ ಫಲಯುತರು**=ತಾನಾಗಿ ಬಯಸಿ ಪಡೆದುಕೊಂಡ ಫಲವನ್ನು ಅನುಭವಿಸಿದವರು; **ಪರೇಚ್ಛೆಯವರು** =ಇತರರ ದಾಕ್ಷಿಣ್ಯಕ್ಕಾಗಿ ಸುಖದುಃಖಗಳನ್ನು ಅನುಭವಿಸಿದವರು; **ಅನಿಚ್ಛೆಯಲಿ**=ತನ್ನ ಇಷ್ಟಕ್ಕೆ ವಿರೋಧವಾಗಿ ಸುಖದುಃಖಗಳನ್ನು ಅನುಭವಿಸಿದವರು.

**ಟಿಪ್ಪಣಿ–೧:** ಜ್ಞಾನಿಗೆ ಸ್ವೇಚ್ಛಾ, ಅನಿಚ್ಛಾ, ಪರೇಚ್ಛಾ ಎಂಬ ಭೇದದಿಂದ ೩ ವಿಧ ಪ್ರಾರಬ್ಧವೆಂದು ವಿದ್ಯಾರಣ್ಯರು ಪಂಚದಶಿ ಗ್ರಂಥದ ತೃಪ್ತಿದೀಪ ಭಾಗದಲ್ಲಿ ಹೇಳುತ್ತಾರೆ.

**ಟಿಪ್ಪಣಿ–೨:** ಇನ್ನೊಬ್ಬರು ಪ್ರಾರಬ್ಧಕರ್ಮವನ್ನು ಉತ್ತಮ, ಮಧ್ಯಮ, ಅಧಮ, ಅಧಮತರ, ಅಧಮಾತಮ ಎಂದು ೫ ವಿಧವಾಗಿ ಹೇಳುತ್ತಾರೆ. (ವಿಚಾರಸಾರ, ೩ನೇ ಭಾಗ, ತರಂಗ ೭, ಪುಟ–೨೩೭, ಅನು–ಸ್ವಾಮಿ ಶಂಕರಾನಂದ)

**ಟಿಪ್ಪಣಿ–೩:** ಇಲ್ಲಿ ಬಂದ ವ್ಯಕ್ತಿಗಳ ಪೂರ್ವಕಥೆಗಳನ್ನು ಅನುಬಂಧವಾಗಿ ಕೊಟ್ಟಿದೆ:

## ಪೂರ್ವಕಥೆ-೧: ಸಗರಸಂತತಿಯ ಸ್ವೇಚ್ಛಾ ಪ್ರಾರಬ್ಧ

ಸಗರಚಕ್ರವರ್ತಿಯು ನೂರನೇ ಯಜ್ಞವನ್ನಾರಂಭಿಸಿ ತನ್ನ ಅರವತ್ತು ಸಾವಿರ ಮಕ್ಕಳನ್ನು ಕಾವಲಿಟ್ಟು ಯಜ್ಞಾಶ್ವವನ್ನು ಮುಂದೆಬಿಟ್ಟನು. ಅದು ಸಾಂಗವಾದರೆ ಅವನು ತನ್ನ ಪದವಿಗೆ ಬರುವನೆಂಬ ಅಸೂಯೆಯಿಂದ ಇಂದ್ರನು ಮಾರ್ಗಮಧ್ಯದಲ್ಲಿ ಮಾಯೆಯಿಂದ ಯಜ್ಞಾಶ್ವವನ್ನು ಕದ್ದುಕೊಂಡುಹೋಗಿ ಪಾತಾಲದಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲಋಷಿಗಳ ಹಿಂದೆ ಬಚ್ಚಿಟ್ಟನು. ಕುದುರೆಯನ್ನು ಕಾಣದೆ ಅರವತ್ತುಸಾವಿರ ಮಕ್ಕಳೂ ತಮ್ಮತಮ್ಮಲ್ಲಿ ಯೋಚನೆಯನ್ನು ಮಾಡಿ ಕುದುರೆಯು ಅದೃಶ್ಯವಾದ ಸ್ಥಲವನ್ನೇ ಕೈಯಿಂದ ತೋಡುತ್ತ ಬಂದರು. ಅದು ದೊಡ್ಡದೊಂದು ಸುರಂಗವಾಗುತ್ತ ಹೋಗಿ ಪಾತಾಲಕ್ಕೆ ಮುಟ್ಟಿತು. ಆ ಸುರಂಗದಲ್ಲಿ ಅರವತ್ತುಸಾವಿರ ಮಕ್ಕಳೂ ಪಾತಾಲಕ್ಕಿಳಿದರು. ಅಲ್ಲಿ ತಮ್ಮ ಕುದುರೆಯು ಒಬ್ಬ ತಪಸ್ವಿಯ ಹಿಂದೆ ಇತ್ತು. ಅವನು ತಪಸ್ವಿರೂಪದಿಂದ ಕುಳಿತಿರುವ ಕುದುರೆಗಳ್ಳನೆಂದು ತಿಳಿದ ಆ ಮಕ್ಕಳೆಲ್ಲರೂ ಗದ್ದಲವನ್ನು ಮಾಡಿ, ಅವನ ಸಮಾಧಿಯನ್ನು ಕೆಡಿಸಿದರು. ಇದರಿಂದ ಕಪಿಲರು ಕೋಪಗೊಂಡು ಕಣ್ಣುಬಿಡುತ್ತಲೇ ಅವರತ್ತುಸಾವಿರ ಮಕ್ಕಳೂ ಸುಟ್ಟು ಬೂದಿಯಾದರು. ಹಿಗೆ ಆ ಮಕ್ಕಳು ದೈವಯೋಗದಿಂದ ತಮ್ಮ ಸುರಂಗವನ್ನು ತಾವೇ ಮಾಡಿಕೊಂಡು ಆ ಋಷಿಯನ್ನು ಸಿಟ್ಟಿಗೆಬ್ಬಿಸಿ ತಮ್ಮ ಹೆಸರನ್ನು ತಾವೇ ಅಳಿಸಿಕೊಂಡರು.

## ಪೂರ್ವಕಥೆ-೨: ಪರಶುರಾಮನ ಸ್ವೇಚ್ಛಾಪ್ರಾರಬ್ಧ (ಅ-೧೦, ಪ-೧೨೩)

(ಅ-೨, ಪ-೬೧) ಕಥೆಯನ್ನೇ ಇಲ್ಲಿಗೆ ಅನ್ವಯಿಸಿಕೊಳ್ಳಬೇಕು.

## ಪೂರ್ವಕಥೆ-೩: ಪರಿಶಿಷ್ಟ-ಚಂದ್ರನ ಸ್ವೇಚ್ಛಾ ಪ್ರಾರಬ್ಧ (ಅ-೧೦, ಪ-೧೨೩)

ಚಂದ್ರನು ಇಪ್ಪತ್ತೇಳು ದಕ್ಷಕನ್ಯೆಯರನ್ನು ಲಗ್ನವಾಗಿದ್ದನು. ಅವನು ಎಲ್ಲರನ್ನೂ ಸಮದೃಷ್ಟಿಯಿಂದ ನೋಡಬೇಕಾದದ್ದು ನ್ಯಾಯವಾಗಿದ್ದರೂ ರೋಹಿಣಿಯ ಮೇಲೆ ಮಾತ್ರ ಪಕ್ಷಪಾತವನ್ನಿಟ್ಟು ಕೊಂಡಿದ್ದನು. ಇದನ್ನು ಸಹಿಸಲಾರದೆ ಉಳಿದ ಹೆಂಡತಿಯರೆಲ್ಲರೂ ತಮ್ಮ ದುರವಸ್ಥೆಯನ್ನು ತನ್ನ ತಂದೆಗೆ ತಿಳಿಸಿದರು. ದಕ್ಷನು ಚಂದ್ರನನ್ನು ಎರಡು ವೇಳೆ ಕರೆಯಿಸಿಕೊಂಡು ಬುದ್ಧಿಯನ್ನು ಹೇಳಿದನು. ಅದು ಫಲಕಾರಿಯಾಗಲಿಲ್ಲ. ಆದ್ದರಿಂದ ದಕ್ಷನು ಮೂರನೇ ಸಲ ನೀನು ಕ್ಷಯರೋಗಿಯಾಗೆಂದು ಶಾಪವನ್ನು ಕೊಟ್ಟನು. ಹೀಗೆ ಚಂದ್ರನು ತನಗೆ ಕ್ಷಯರೋಗರೂಪವಾದ ದುಃಖವನ್ನು ತಾನಾಗಿ ತಂದುಕೊಂಡನು.

## ಪೂರ್ವಕಥೆ-೪: ಸೂರ್ಯನ ಸ್ವೇಚ್ಛಾ ಪ್ರಾರಬ್ಧ (ಅ-೧೦, ಪ-೧೨೩)

ಸೂರ್ಯನು ದೇವತೆಗಳ ಬಡಗಿಯಾದ ವಿಶ್ವಕರ್ಮನ ಮಗಳಾದ ಛಾಯಾದೇವಿಯನ್ನು ತಾನಾಗಿ ವರಿಸಿದನು. ಛಾಯಾದೇವಿಯು ಮದುವೆಯಾಗಿ ಗಂಡನ ಮನೆಗೆ ಬಂದಮೇಲೆ ಸೂರ್ಯನ ತೇಜಸ್ಸನ್ನು ತಡೆಯಲಾರದೆ ತನ್ನ ತಂದೆಗೆ ಹೇಳಿಕೊಂಡಳು. ಆಗ ವಿಶ್ವಕರ್ಮನು ಇದಕ್ಕೇನು ಮಾಡಬೇಕೆಂದು ಕೇಳಿದಾಗ ಸೂರ್ಯನು ಛಾಯಾದೇವಿಯ ಮೇಲೆ ತನಗಿರುವ ಪ್ರೇಮದಿಂದ ಆಕೆಗೆ ತಡೆಯುವಷ್ಟೇ ತನ್ನ ತೇಜಸ್ಸುಳಿಯುವಂತೆ ತಾನಾಗಿ ತನ್ನನ್ನು ಹಚ್ಚಿಸಿ ಉಜ್ಜಿಸಿಕೊಂಡು ತನ್ನ ಶರೀರದ ಪದರಗಳನ್ನು ತೆಗೆಸಿಕೊಂಡನು.

## ಪೂರ್ವಕಥೆ–೫: ಇಂದ್ರನ ಸ್ವೇಚ್ಛಾ ಪ್ರಾರಬ್ಧ (ಅ–೧೦, ಪ–೧೨೩)

ಈ ಸ್ಥಲಕ್ಕೆ (ಅ–೨, ಪ–೯೦)ದ ಕಥೆಯನ್ನಾದರೂ ಅನ್ವಯಿಸಿಕೊಳ್ಳಬಹುದು. ಅಥವಾ

ಇಂದ್ರನು ತನ್ನ ಪದವಿಯನ್ನುಳಿಸಿಕೊಳ್ಳುವದಕ್ಕಾಗಿ ವೃತ್ರಾಸುರನನ್ನು ಸಂಹಾರಮಾಡಿದನಷ್ಟೆ. ವೃತ್ರಾಸುರನು ಬ್ರಾಹ್ಮಣನು. ಈ ವಿಷಯವು ಇಂದ್ರನಿಗೆ ಗೊತ್ತಿತ್ತು. ಅವನನ್ನು ಕೊಂದು ತನ್ನ ಧ್ವಜವನ್ನೇರಿಸಬೇಕೆಂಬ ಉತ್ಸಾಹದಲ್ಲಿ ಅವನಿಗೆ ಮುಂದಾಗುವದು ಲೆಕ್ಕಕ್ಕೆ ಬರಲಿಲ್ಲ. ವೃತ್ರಾಸುರನು ಸಾಯುತ್ತಲೇ ಬ್ರಹ್ಮಹತ್ಯಾದೋಷವು ಇಂದ್ರನನ್ನು ಅಟ್ಟಿಸಿಕೊಂಡು ಬಂತು. ಇಂದ್ರನು ಅದರ ಬಾಧೆಗೆ ಬಲಿಯಾಗಲಾರದೆ ದೂರಹೋಗಿ ಆಳವಾದ ಒಂದು ಸರೋವರದಲ್ಲಿ ಮುಳುಗಿ ಅಲ್ಲೊಂದು ಕಮಲದ ನಾಳದಲ್ಲಿ ಅಡಗಿಕೊಂಡು ಎಷ್ಟೋ ಕಾಲವನ್ನು ಕಳೆದನಂತೆ. ಆಮೇಲೆ ದೇವತೆಗಳು ತಪಸ್ಸುಮಾಡಿ ಆ ದೋಷವನ್ನು ಹಿಮ್ಮೆಟ್ಟಿಸಿ ಅವನನ್ನು ಹುಡುಕಿ ಹಿಂದಕ್ಕೆ ಕರೆದುತಂದರು. ಆದರೆ ಕೆಲವು ಕಾಲವಾದರೂ ಅಡಗಿಕೊಂಡಿರುವ ಸ್ಥಿತಿಯನ್ನು ಇಂದ್ರನು ತನ್ನಮೇಲೆ ತಾನಾಗಿ ತಂದುಕೊಂಡನು.

## ಪೂರ್ವಕಥೆ–೬: ಅರ್ಜುನನ ಸ್ವೇಚ್ಛಾ ಪ್ರಾರಬ್ಧ (ಅ–೧೦, ಪ–೧೨೩)

ಅರ್ಜುನನು ಧರ್ಮರಾಯನ ಯಜ್ಞಾಶ್ವವನ್ನು ಮುಂದೆ ಬಿಟ್ಟುಕೊಂಡು ಹೋಗುವಾಗ ಮಣಿಪುರವೆಂಬ ನಗರಿಗೆ ಬಂದನು. ಅಲ್ಲಿಯ ಅರಸನಾದ ಬಭ್ರುವಾಹನನು ಕುದುರೆಯ ಹಣೆಯ ಮೇಲಿದ್ದ ಲೇಖನವನ್ನು ನೋಡಿ ಕ್ಷಾತ್ರಸ್ವಭಾವದಿಂದ ಅದನ್ನು ಹಿಡಿದುಕಟ್ಟಿ ಅರ್ಜುನನೊಡನೆ ಯುದ್ಧಕ್ಕೆ ಸನ್ನಾಹವನ್ನು ಹೂಡಿದನು. ಈ ಸುದ್ದಿಯನ್ನು ಕೇಳಿದ ಅವನ ತಾಯಿಯಾದ ಚಿತ್ರಾಂಗದೆಯು ತನಗೆ ಅರ್ಜುನನು ಹಿಂದೆ ತೀರ್ಥಯಾತ್ರೆಗೆ ಬಂದಿದ್ದಾಗ ಪತಿಯಾಗಿ ತನ್ನನ್ನು ಇಲ್ಲಿಬಿಟ್ಟು ಹೋಗಿರುವ ಕಾರಣದಿಂದ ಅವನನ್ನು ಆದರದಿಂದ ಕಾಣಬೇಕೆಂದು ಹೇಳಿದಳು. ಹಾಗೆಯೇ ಆಗಲೆಂದು ಬಭ್ರುವಾಹನನು ತನ್ನ ಯೋಗ್ಯತೆಗೆ ತಕ್ಕ ಕಾಣಿಕೆಯೊಡನೆ ಅರ್ಜುನನಿಗೆ ವಿನಯದಿಂದ ಕಾಣಿಸಿಕೊಂಡು ತಾನು ಅರ್ಜುನನ ಮಗನಾದ್ದರಿಂದ ತಲೆವಾಗುವೆನೆಂದು ತಾನೇ ಹೇಳಿಕೊಂಡನು. ಮಹಾಶೂರನಾದ ಬಭ್ರುವಾಹನನ ಪುತ್ರತ್ವವನ್ನೊಪ್ಪಿ ಕೊಂಡು ಕಾರ್ಯವನ್ನು ಮುಂದುವರಿಸೆಂದು ಪರಿವಾರದವರೆಲ್ಲರೂ ಹೇಳಿದರು. ಆದರೂ ಕೇಳದೆ ಅರ್ಜುನನು ರಣರಂಗಕ್ಕೆ ಎದೆಗೊಟ್ಟ ಅಭಿಮನ್ಯುವೊಬ್ಬನೇ ತನಗೆ ಮಗನೇ ಹೊರತು ಕಟ್ಟಿದ ಕುದುರೆಯನ್ನು ಹೇಡಿತನದಿಂದ ಬಿಡುವವನು ಮಗನಲ್ಲವೆಂದು ಮುಂತಾಗಿ ಬಭ್ರುವಾಹನನನ್ನು ಚೆನ್ನಾಗಿ ಜರಿದು ತಾನಾಗಿ ಯುದ್ಧಕ್ಕೆ ಕಾಲು ಕೆರೆದನು. ಇದರಿಂದ ಕ್ಷುದ್ಧನಾದ ಬಭ್ರುವಾಹನನು ಉಪಾಯಾಂತರವಿಲ್ಲದೆ ಯುದ್ಧವನ್ನಾರಂಭಿಸಿ ತನ್ನ ಬಾಣದಿಂದ ಅವನ ತಲೆಯನ್ನು ಕತ್ತರಿಸಿಬಿಟ್ಟನು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಇದನ್ನು ಕಂಡ ಚಿತ್ರಾಂಗದೆಯು ಅತ್ಯಂತ ದುಃಖಾರ್ತಳಾಗಲು ಮಗನಾದ ಬಭ್ರುವಾಹನನು ಅರ್ಜುನನ ಬದುಕುವಿಕೆಗೇನಾದರೂ ಉಪಾಯವನ್ನು ಹೇಳೆಂದನು. ಆಕೆ ಪಾತಾಲದಲ್ಲಿ ತನ್ನ ತಂದೆಯಾದ ಆದಿಶೇಷನಲ್ಲಿರುವ ಸಂಜೀವಕಮಣಿಯನ್ನು ತರಹೇಳಿ ತನ್ನ ಆಪ್ತನಾದ ಪುಂಡರೀಕನೆಂಬ ಹಾವನ್ನು ಕಳುಹಿಸಿದಳು. ಪಾತಾಲದಲ್ಲಿ ಧೃತರಾಷ್ಟ್ರನೆಂಬ ಹಾವು ಆದಿಶೇಷನಿಗೆ ಅಡ್ಡಬಂದು ಅರ್ಜುನನನ್ನು ಬದುಕಿಸುವುದಕ್ಕೆ ಅದನ್ನು ಕೊಡಬಾರದೆದು ಹೇಳಿತು. ಇದರಿಂದ ಪುಂಡರೀಕನು ಬರಿಗಯ್ಯಾಗಿ ಬರಲು ಬಭ್ರುವಾಹನನು ಅಲ್ಲಿಗೆ ದಾಳಿಯಿಟ್ಟು ಅವರ ಸೊಕ್ಕನ್ನು ಮುರಿದು ರತ್ನವನ್ನು ತಂದನು. ಇಷ್ಟರಲ್ಲಿ ಆ ಧೃತರಾಷ್ಟ್ರನು ಅಸೂಯೆಯಿಂದ ಬಂದು ಯಾರಿಗೂ ಕಾಣದಂತೆ ಅರ್ಜುನನ ತಲೆಯನ್ನು ಬಕದಾಲ್ಭ್ಯರ ಆಶ್ರಮಕ್ಕೊಗೆದುಬಿಟ್ಟನು. ಆಗ ಶ್ರೀಕೃಷ್ಣನು ದ್ವಾರಕಿಯಿಂದ ಬಂದು ತನ್ನ ಸುದರ್ಶನದಿಂದ ಅರ್ಜುನನ ತಲೆಯನ್ನು ತರಿಸಿ ಸಂಜೀವಕದಿಂದ ಅದನ್ನು ಬದುಕಿಸಬೇಕಾಯಿತು. ಹೀಗೆ ಅರ್ಜುನನು ತನ್ನ ಮೃತ್ಯುವನ್ನು ತಾನಾಗಿ ತಂದುಕೊಂಡಿದ್ದನು.

## ಪೂರ್ವಕಥೆ-೭: ಅಭಿಮನ್ಯುವಿನ ಸ್ವೇಚ್ಛಾ ಪ್ರಾರಬ್ಧ (ಅ-೧೦, ಪ-೧೨೩)

ಕೌರವರಿಗೂ ಪಾಂಡವರಿಗೂ ಯುದ್ಧ ನಡೆಯುತ್ತಿದ್ದಾಗ ಒಮ್ಮೆ ಕೌರವರು ಚಕ್ರವ್ಯೂಹವೆಂಬ ಒಂದು ವ್ಯೂಹವನ್ನು ರಚಿಸಿದರು. ಅದರಲ್ಲಿ ಒಳಗೆ ಹೋಗಿ ಹೊರಗೆ ಬರುವುದಕ್ಕೆ ಬಹು ಸ್ವಲ್ಪ ಜನರು ಮಾತ್ರ ಸಮರ್ಥರಾಗಿದ್ದರು. ಅರ್ಜುನನಿಗೆ ಈ ಸಾಮರ್ಥ್ಯವಿತ್ತು. ಆದರೆ ಕೌರವರ ನಡೆಯವರು ಆ ದಿನ ಅರ್ಜುನನು ಸಂಶಪ್ತಕರೆಂಬುವರ ಮೇಲೆ ಬೇರೆಯಾಗಿ ಹೋಗುವಂತೆ ಎತ್ತುಗಡೆಯನ್ನು ಮಾಡಿದ್ದರು. ಏಕೆಂದರೆ ಅರ್ಜುನನ ಹೊರತು ಬೇರೆ ಯಾರು ಬಂದರೂ ಅವರನ್ನು ಬೇಟೆಯಾಡಿಬಿಡುವೆವೆಂದು ಧೈರ್ಯವಿತ್ತು. ಪಾಂಡವರ ಕಡೆಯಲ್ಲಿ ಎಷ್ಟೋ ಜನ ಮಹಾರಥಿಕರಿದ್ದರೂ ಅವರಿಗೆ ಆ ವ್ಯೂಹವನ್ನು ಪ್ರವೇಶಿಸುವ ಸೂಟಿ ಕೂಡ ತಿಳಿದಿರಲಿಲ್ಲ. ಅರ್ಜುನನ ಮಗನಾದ ಅಭಿಮನ್ಯುವಿಗೊಬ್ಬನಿಗೆ ಅದು ಗೊತ್ತಿತ್ತು. ಆದರೆ ಇನ್ನೂ ಬಾಲ್ಯದಲ್ಲಿರುವ ಕುಲದೀಪನಾದ ಮಗನ ಪ್ರಯಾಣಕ್ಕೆ ತಾಂಬೂಲವನ್ನು ಕೊಡುವುದು ಧರ್ಮರಾಯನ ಮನಸ್ಸಿಗೆ ಬರಲಿಲ್ಲ. ತಾನು ವ್ಯೂಹವನ್ನು ಭೇದಿಸಿಕೊಂಡು ಒಳಕ್ಕೆ ಹೋಗಬಲ್ಲೆನೇ ಹೊರತು ಹೊರಕ್ಕೆ ಬರಲಾರೆನೆಂದು ಅಭಿಮನ್ಯುವಿಗೂ ತಿಳಿದಿತ್ತು. ಆದರೂ ಯಾರು ಬೇಡವೆಂದರೂ ಕೇಳದೆ ಅಭಿಮನ್ಯು ಆ ವ್ಯೂಹಭೇದಕ್ಕೆ ಮುಂದಾಳಾಗಿ ನಿಂತು ಜಗತ್ತಿನಲ್ಲಿ ಅಸದೃಶವಾದ ಪೌರುಷವನ್ನು ಪ್ರದರ್ಶನಮಾಡಿ ಅಪ್ರತಿಮವಾದ ತನ್ನ ಬಾಹುಬಲದಿಂದ ಅಸಂಖ್ಯಾಕವೀರರನ್ನು ಧೂಳೆಬ್ಬಿಸಿ ಏಕಾಕಿಯಾದ ತಾನು ಅಪಾರವಾದ ಕುರುಬಲದ ಎದೆ ತಲ್ಲಣಿಸುವಂತೆ ಮಾಡಿ ಕೊನೆಗೆ ಷಡ್ರಥಿಕರ ಹೊಯ್ಲಿನಿಂದ ಆ ರಣರಂಗದಲ್ಲಿಯೇ ದೀರ್ಘವಿಶ್ರಾಂತಿಯನ್ನು ಹೊಂದಿದನು.

## ಪೂರ್ವಕಥೆ-೮: ಹರಿಶ್ಚಂದ್ರನ ಪರೇಚ್ಛಾ ಪ್ರಾರಬ್ಧ (ಅ-೧೦, ಪ-೧೨೩)

ಒಮ್ಮೆ ಬ್ರಹ್ಮಲೋಕದಲ್ಲಿ ವಸಿಷ್ಠರು ಹರಿಶ್ಚಂದ್ರನ ಸತ್ಯವ್ರತವನ್ನು ಹೊಗಳಿದಾಗ ವಿಶ್ವಾಮಿತ್ರರು ಅದನ್ನು ಸುಳ್ಳುಮಾಡಿ ತೋರಿಸುತ್ತೇನೆಂದು ಶಪಥವನ್ನು ತೊಟ್ಟರು. ಭೂಲೋಕಕ್ಕೆ ಬಂದಮೇಲೆ ವಿಶ್ವಾಮಿತ್ರರು ಅದಕ್ಕೊಂದು ಯುಕ್ತಿಯನ್ನು ಮಾಡಿದರು. ಹರಿಶ್ಚಂದ್ರನು ಒಂದು ದಿನ ನಿದ್ರೆಯಲ್ಲಿದ್ದಾಗ ವಿಶ್ವಾಮಿತ್ರರು ಕನಸಿನಲ್ಲಿ ಬಂದು ರಾಜ್ಯದಾನವನ್ನು ಬೇಡಿದರು. ಮಹಾಉದಾರಿಯಾದ ಆ ರಾಜನು ಕನಸಿನಲ್ಲಿ ಅದಕ್ಕೊಪ್ಪಿದನು. ಬೆಳಗಾಗುತ್ತಲೇ ವಿಶ್ವಾಮಿತ್ರರು ಬಂದು ರಾಜ್ಯವನ್ನು ತನ್ನ ವಶಕ್ಕೆ ಕೊಡೆಂದು ಕೇಳಿದರು. ಸತ್ಯವ್ರತನಿಷ್ಠನಾದ ಆ ರಾಜನು ಕನಸಿನಲ್ಲಿ ಆಡಿದ್ದನ್ನಾದರೂ ನಾನು ತಪ್ಪಲಾರೆನೆಂದು ರಾಜ್ಯವನ್ನೆಲ್ಲ ಅವರಿಗೊಪ್ಪಿಸಿಬಿಟ್ಟನು. ವಿಶ್ವಾಮಿತ್ರರು ಬೆರಗಾಗಿ ಮುಂದೇನು ಮಾಡಬೇಕೆಂದು ಮನಸ್ಸಿನಲ್ಲಿ ಯೋಚಿಸಿ ದಾನವೆಲ್ಲ ಅದರ ಚತುರ್ಥಾಂಶದ ಬೆಲೆಯ ದಕ್ಷಿಣಾಪೂರ್ವಕವಾಗಿರಬೇಕಾದ್ದರಿಂದ ದಕ್ಷಿಣೆಯನ್ನು ಕೊಡೆಂದು ಗಂಟುಬಿದ್ದರು. ರಾಜ್ಯವೆಲ್ಲ ವಿಶ್ವಾಮಿತ್ರರದಾಗಿದ್ದದ್ದರಿಂದ ಅಲ್ಲಿ ಹರಿಶ್ಚಂದ್ರನು ಯಾವ ದ್ರವ್ಯಸಂಚಯವನ್ನು ಮಾಡುವದಕ್ಕೂ ಅವಕಾಶವಿರಲಿಲ್ಲ. ಆಗ ಅವನು ದಕ್ಷಿಣಾದ್ರವ್ಯದ ಸಂಪಾದನೆಗಾಗಿ ಹೆಂಡತಿಯನ್ನೂ, ಮಗನನ್ನೂ ಕಟ್ಟಿಕೊಂಡು ಕಾಶಿಗೆ ಹೋಗಿ, ಅಲ್ಲಿ ಹೆಂಡತಿಯನ್ನು ಮಾರುವದಕ್ಕೆ ನಿಂತನು. ವಿಶ್ವಾಮಿತ್ರನ ಮಾಯೆಯಿಂದ ಒಬ್ಬ ಬ್ರಾಹ್ಮಣನು ಬಂದು ಕೆಲವು ಹಣವನ್ನು ಕೊಟ್ಟು ಚಂದ್ರಮತಿಯೆಂಬ ಆಕೆಯನ್ನು ದಾಸಿಯಾಗಿ ಕೊಂಡುಕೊಂಡನು. ಬಾಲನಾದ ರೋಹಿತಾಶ್ವನೂ ತಾಯಿಯ ಹಿಂದೆ ಹೋದನು. ಆ ಹಣದಿಂದಲೂ ದಕ್ಷಿನಾದ್ರವ್ಯವು ಪೂರ್ಣವಾಗಲಿಲ್ಲ. ಆಗ ಹರಿಶ್ಚಂದ್ರನು ತನ್ನನ್ನು ತಾನೇ ಮಾರಿಕೊಳ್ಳುವದಕ್ಕೆ ಕೂಡ ನಿಂತನು. ವಿಶ್ವಾಮಿತ್ರನ ಮಾಯೆಯಿಂದ ಒಬ್ಬ ಚಂಡಾಲನು ಬಂದು ಅವನನ್ನು ಕೊಂಡುಕೊಂಡು ಶ್ಮಶಾನವನ್ನು ಕಾಯುವದಕ್ಕೆ ಇಟ್ಟನು. ವಿಶ್ವಾಮಿತ್ರನ ದಕ್ಷಿಣಾದ್ರವ್ಯವು ಸಂದರೂ ಹರಿಶ್ಚಂದ್ರನ ಸತ್ಯವ್ರತವನ್ನು ಕೆಡಿಸಬೇಕೆಂಬ ಹಠದಿಂದ ವಿಶ್ವಾಮಿತ್ರನು ತನ್ನ ಮಾಯೆಯನ್ನು ಇನ್ನೂ ಮುಂದು ಮಾಡಿದನು. ರೋಹಿತಾಶ್ವನು ಒಂದು ದಿನ ಹುಡುಗರೊಡನೆ ಸಮಿತ್ತನ್ನು ತರುವದಕ್ಕೆ ಹೋಗಿದ್ದಾಗ ಹಾವು ಕಡಿದು ಸತ್ತನು.

ಚಂದ್ರಮತಿಯು ಆ ಹುಡುಗನನ್ನು ಶ್ಮಶಾನಕ್ಕೆ ತಂದಾಗ ಹರಿಶ್ಚಂದ್ರನಿಗೆ ಅವರ ಗುರ್ತು ಸಿಕ್ಕಿದರೂ ಶ್ಮಶಾನದ ಕಾಣಿಕೆಯನ್ನು ಕೊಟ್ಟ ಹೊರತು ಶಿಶುವಿನ ದಹನವಾಗಗೊಡುವದಿಲ್ಲವೆಂದು ಹರಿಶ್ಚಂದ್ರನು ಅಲ್ಲಿಯೂ ತನ್ನ ಸತ್ಯವನ್ನುಳಿಸಿಕೊಂಡನು. ಆಮೇಲೆ ಆಕೆ ಶ್ಮಶಾನದ ಕಾಣಿಕೆಯನ್ನು ತನ್ನ ಒಡೆಯನಿಂದ ಪಡೆದು ತರಲು ಹೋಗುವಾಗ ಆಕೆಯ ಮೇಲೆ ಕಳ್ಳತನದ ಆರೋಪವು ಬಂದು ಶ್ಮಶಾನದಲ್ಲಿ ಆಕೆಯ ಶಿರಸ್ಸನ್ನು ಹರಿಶ್ಚಂದ್ರನೇ ಕಡಿಯುವ ಪ್ರಸಂಗವೊದಗಿತು. ಅದಕ್ಕೂ ಹರಿಶ್ಚಂದ್ರನು ಹಿಂದುಮುಂದು ನೋಡಲಿಲ್ಲ. ಕೊನೆಗೆ ವಿಶ್ವಾಮಿತ್ರನು ಅವನ ಸತ್ಯವ್ರತಕ್ಕೆ ಮೆಚ್ಚಿ ಅದುವರೆಗೆ ಅವನ ಮೇಲೆ ಬಂದೊದಗಿದ ವಿವಿಧ ಪ್ರಸಂಗಗಳೆಲ್ಲಾ ಸ್ವಪ್ನಪ್ರಾಯವಾಗಿ ಕಾಣುವಂತೆ ಮಾಡಿದರು. ಸ್ವಪ್ನದಂತಾದರೂ ಆಗಲಿ; ಎಚ್ಚರದಂತಾದರೂ ಆಗಲಿ; ಹರಿಶ್ಚಂದ್ರನ ಮನಸ್ಸು ವಿಶ್ವಾಮಿತ್ರರ ಹಠಕ್ಕಾಗಿ ಅನೇಕ ದುಃಖಪರಂಪರೆಗಳಿಗೆ ಎದೆಗೊಡಬೇಕಾಯಿತು.

## ಪೂರ್ವಕಥೆ–೯: ಅಗಸ್ತ್ಯರ ಪರೇಚ್ಛಾ ಪ್ರಾರಬ್ಧ (ಅ–೧೦, ಪ–೧೨೩)

ಅಗಸ್ತ್ಯರು ಲೋಪಾಮುದ್ರೆಯೆಂಬ ರಾಜಪುತ್ರಿಯನ್ನು ಲಗ್ನಮಾಡಿಕೊಂಡರು. ಮನೆಗೆ ಬಂದಮೇಲೆ ಆಕೆ ರಾಜಭೋಗಗಳನ್ನೆಲ್ಲ ಬಯಸಿದಳು. ಅದಕ್ಕೆಲ್ಲ ಬೇಕಾದಷ್ಟು ಹಣವನ್ನು ಪಡೆಯುವದಕ್ಕಾಗಿ ಇಲ್ವಲನೆಂಬುವನ ಹತ್ತಿರಕ್ಕೆ ಹೋದರು. ಇಲ್ವಲನು ಮುನಿಗಳನ್ನೆಲ್ಲ ಸಾಯಿಸಬೇಕೆಂದು ಒಳಗೆ ತಂತ್ರವನ್ನು ಮಾಡುತ್ತಿದ್ದವನು. ಆ ತಂತ್ರವೇನೆಂದರೆ: ಮುನಿಗಳು ಬರುತ್ತಲೇ ಅವರಿಗೆ ಭೋಜನಕ್ಕೆ ಮಂತ್ರಾಕ್ಷತೆಯನ್ನು ಕೊಡುವದು; ತನ್ನ ತಮ್ಮನಾದ ವಾತಾಪಿಯನ್ನು ಒಂದು ಮೇಕೆಯಾಗಿ ಮಾಡಿ ಅದನ್ನು ಬೇಯಿಸಿ ಊಟಕ್ಕಿಡುವದು; ಆಮೇಲೆ 'ಏಹಿ ವಾತಾಪಿ' (ವಾತಾಪಿಯೇ ಬಾ) ಎನ್ನುವದು; ಆಗ ವಾತಾಪಿಯು ಮುನಿಗಳ ಹೊಟ್ಟೆಯನ್ನೊಡೆದುಕೊಂಡು ಹೊರಗೆ ಬರುವದು; ಇದರಿಂದ ಮುನಿಗಳ ನಾಶವಾಗುವದು. ಅಗಸ್ತ್ಯರು ಬಂದಾಗಲೂ ಇಲ್ವಲನು ಅವರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಎಂದಿನಂತೆ ಭೋಜನದ ಉಪಚಾರವನ್ನು ಮಾಡಿದನು. ಊಟವಾಗುತ್ತಲೇ ಇಲ್ವಲನು 'ಏಹಿ ವಾತಾಪಿ' ಎನ್ನುವದರೊಳಗೆ ನಡೆದ ವೃತ್ತಾಂತವನ್ನು ಅಗಸ್ತ್ಯರು ತಮ್ಮ ಜ್ಞಾನದೃಷ್ಟಿಯಿಂದ ತಿಳಿದು ಹೊಟ್ಟೆಯ ಮೇಲೆ ಕೈಆಡಿಸಿ 'ವಾತಾಪಿ ಜೀರ್ಣೋಭವ' (ವಾತಾಪಿಯೇ ಅರಗಿಹೋಗು) ಎಂದರು. ಅವರ ತಪಃಪ್ರಭಾವದಿಂದ ಅವರ ಮಾತಿನಂತೆ ಆಯಿತು. ಆದರೂ ಇಲ್ವಲನ ಕೆಟ್ಟ ಉದ್ದೇಶದಿಂದ ಅಗಸ್ತ್ಯರು ಇಂಥ ಅಪಾಯಕ್ಕೆ ಒಳಗಾಗಬೇಕಾಗಿ ಬಂದಿತ್ತು.

## ಪೂರ್ವಕಥೆ–೧೦: ವಸಿಷ್ಠರ ಪರೇಚ್ಛಾ ಪ್ರಾರಬ್ಧ (ಅ–೧೦, ಪ–೧೨೩)

ತ್ರಿಶಂಕುವೆಂಬ ರಾಜನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕೆಂದು ಬಯಸಿ, ಅದಕ್ಕೆ ಯಜ್ಞವನ್ನು ಮಾಡಿಸಿರೆಂದು ತನ್ನ ಪುರೋಹಿತರಾದ ವಸಿಷ್ಠರ ಬಳಿಗೆ ಬಂದನು. ವಸಿಷ್ಠರು ಅದು ಸಾಧ್ಯವಿಲ್ಲವೆಂದು ಹೇಳಿಬಿಟ್ಟರು. ತಾನು ಮತ್ತೊಬ್ಬರಿಂದಾದರೂ ಅದನ್ನು ಸಾಧಿಸುವೆನೆಂದು ರಾಜನು ಹೇಳಲು ಈ ಅವಿನಯಕ್ಕಾಗಿ ವಸಿಷ್ಠರು ಅವನಿಗೆ ಚಂಡಾಲನಾಗೆಂದು ಶಾಪವನ್ನು ಕೊಟ್ಟರು. ಅದನ್ನು ಲಕ್ಷ್ಯಮಾಡದೆ ಏನಾದರೂ ಮಾಡಿ ಯಾರಿಂದಾದರೂ ಆ ಯಜ್ಞವನ್ನು ಮಾಡಿಸಿಕೊಳ್ಳಬೇಕೆಂದು ಅವನ ಮನಸ್ಸಿನಲ್ಲಿ ಬಾಧಿಸುತ್ತಿತ್ತು. ಹೀಗೆ ಸಮಯವನ್ನು ಕಾಯುತ್ತಿರುವಾಗ ಹನ್ನೆರಡು ವರ್ಷದ ವೀರಕ್ಷಾಮ ಬಂತು. ಆಗ ವಿಶ್ವಾಮಿತ್ರರು ಎಲ್ಲಿಯೋ ತಪಶ್ಚರ್ಯೆಯಲ್ಲಿದ್ದದ್ದರಿಂದ ಅವರ ಹೆಂಡತಿಯು ಕೊನೆಗೆ ತನ್ನ ಮಕ್ಕಳಲ್ಲೊಬ್ಬನನ್ನು ಮಾರಿ ಜೀವಿಸಬೇಕೆಂಬಷ್ಟು ಕಷ್ಟಸ್ಥಿತಿಗೆ ಒಳಗಾಗಿದ್ದಳು. ಆಗ ತ್ರಿಶಂಕುರಾಜನು ಕನಿಕರದಿಂದ ಆ ಕುಟುಂಬವನ್ನೆಲ್ಲ ರಕ್ಷಣೆಮಾಡಿದನು. ವಿಶ್ವಾಮಿತ್ರನು ತಪಸ್ಸಿನಿಂದ ಹಿಂದಿರುಗಿ ಬಂದಮೇಲೆ ಅವನಿಗೆ ಈ ಸುದ್ದಿಯೆಲ್ಲ ತಿಳಿಯಿತು. ತ್ರಿಶಂಕುವಿಗೇನಾದರು ಪ್ರತ್ಯುಪಕಾರವನ್ನು ಮಾಡಬೇಕೆಂದು ಅವನ ಮನಸ್ಸಿನಲ್ಲಿ ಹುಟ್ಟಿತು. ಅವನು ರಾಜನ ಇಷ್ಟಾರ್ಥವನ್ನು ಕೇಳಿದಾಗ ರಾಜನು ತಾನು

ಸಶರೀರಸ್ವರ್ಗಕ್ಕಾಗಿ ಯಜ್ಞವನ್ನು ಮಾಡುವ ಇಚ್ಛೆಯನ್ನು ಪ್ರಕಟಿಸಿದನು. ಅದನ್ನು ತಾನು ಮಾಡಿಸುತ್ತೇನೆಂದು ಅವನಿಂದ ಯಜ್ಞವನ್ನಾರಂಭಿಸಿ ಎಲ್ಲರಿಗೂ ಹೇಳಿಕಳುಹಿಸಿದಂತೆ ವಸಿಷ್ಠರ ಮಕ್ಕಳಿಗೂ ಹೇಳಿ ಕಳುಹಿಸಿದನು. ಕ್ಷತ್ರಿಯಪುರೋಹಿತನು ಚಂಡಾಲದೀಕ್ಷಿತನಿಗೆ ಮಾಡಿಸುವ ಯಜ್ಞಕ್ಕೆ ತಾವು ಬರುವುದಿಲ್ಲವೆಂದು ವಸಿಷ್ಠರ ಮಕ್ಕಳು ತಿರಸ್ಕರಿಸಿಬಿಟ್ಟರು. ಆಗ ವಿಶ್ವಾಮಿತ್ರನು ಶಾಪವನ್ನು ಕೊಟ್ಟು ಅವರನ್ನೆಲ್ಲ ಸಾಯಿಸಿಬಿಟ್ಟನು. ಆಗ ವಂಶವು ಉಚ್ಛೇದವಾದ ಮೇಲೆ ಬದುಕಿ ಮಾಡಬೇಕಾದದ್ದೇನೆಂದು ವಸಿಷ್ಠರು ತಮ್ಮನ್ನು ತಾವೇ ಹಗ್ಗದಲ್ಲಿ ಬಿಗಿದುಕೊಂಡು 'ವಿಪಾಶಾ' ಎಂಬ ನದಿಯಲ್ಲಿ ಬಿದ್ದರು. ವಂಶವು ಬೆಳೆಯಬೇಕೆಂಬ ಇಚ್ಛೆಯು ಅವರಲ್ಲಿ ಬಲವಾಗಿದ್ದದ್ದರಿಂದ ಅವರು ಸಾಯಲಿಲ್ಲ. ಗಂಟುಗಳು ತಮಗೆ ತಾವೇ ಕಳಚಿಕೊಂಡವು. ಕೊನೆಗೆ ತಾವು ಎಲ್ಲಿಯಾದರೂ ಮರಣವನ್ನು ಪಡೆಯಬೇಕೆಂದು ಹೋಗುತ್ತಿರುವಾಗ ಅವರ ಮಗನಾದ ಶಕ್ತಿ ಎಂಬುವನ ಹೆಂಡತಿಯು ಹಿಂಬಾಲಿಸಿದ್ದಳು. ಅವಳ ಗರ್ಭದಲ್ಲಿ ವೇದೋಚ್ಚಾರವಾಗುತ್ತಿರುವದು ಅವರಿಗೆ ಕೇಳಿಸಿತು. ಆಗ ಅವರು ವಂಶದ ಅಂಕುರವಿರುವದೆಂದು ಮನಸ್ಸಿಗೆ ಸಮಾಧಾನವನ್ನು ಮಾಡಿಕೊಂಡು ಪ್ರಾಣವನ್ನುಬಿಟ್ಟರು. ಹೀಗೆ ವಿಶ್ವಾಮಿತ್ರರು ತನಗೆ ಉಪಕಾರವನ್ನು ಮಾಡಿದ ರಾಜನಿಗೆ ಹಿತವನ್ನು ಮಾಡುವ ಸಡಗರದಲ್ಲಿ ವಸಿಷ್ಠರು ಇಂಥ ದುರಂತವಾದ ದುಃಖಕ್ಕೆ ಗುರಿಯಾಗಬೇಕಾಯಿತು.

### ಪೂರ್ವಕಥೆ-೧೧: ಮಾಂಡವ್ಯರ ಅನಿಚ್ಛಾ ಪ್ರಾರಬ್ಧ (ಅ-೧೦, ಪ-೧೨೩)

ಮಾಂಡವ್ಯರು ತಪಸ್ಸು ಮಾಡುತ್ತ ಕುಳಿತಿರುವಾಗ ಯಾರೋ ಕಳ್ಳರು ತಾವು ಕದ್ದುತಂದ ಹಣದ ಗಂಟನ್ನು ಅವರ ಬಳಿಯಲ್ಲಿಟ್ಟು ಹೋದರು. ಕಳ್ಳರನ್ನು ಹುಡುಕುತ್ತ ಬಂದ ರಾಜದೂತರು ಮಾಂಡವ್ಯರನ್ನು ಹಿಡಿದುಕೊಂಡು ಹೋದರು. ರಾಜನು ಮಾಂಡವ್ಯರನ್ನು ಶೂಲಕ್ಕೇರಿಸಿಬಿಟ್ಟನು. ಮಹಾತಪಸ್ವಿಗಳಾದ ಮಾಂಡವ್ಯರು ಅದರಿಂದ ಸಾಯಲಿಲ್ಲ. ಪ್ರತಿದಿನವೂ ಎಷ್ಟೋ ಋಷಿಗಳು ಅವರ ದರ್ಶನಕ್ಕೆ ಬಂದು ಹೋಗುತ್ತಿದ್ದರು. ಇದನ್ನು ಕಂಡು ರಾಜನು ಇವರು ಅಪರಾಧಿಗಳಾಗಿರಲಾರರೆಂದು ಮಾಂಡವ್ಯರನ್ನು ಶೂಲದಿಂದ ಕಿತ್ತು ಇಳಿಸಿದನು. ಆ ಸಮಯದಲ್ಲಿ ಒಂದು ಚೂರು ಶೂಲವು ಆಸನದಲ್ಲಿ ಮುರಿದುಕೊಂಡಿತು. ಆಗ ಮಾಂಡವ್ಯರಿಗೆ ಅಣಿಮಾಂಡವ್ಯರೆಂದು ಹೆಸರಾಯಿತು. ಹೀಗಾಗುವ ಸ್ಥಿತಿಯು ತಮ್ಮ ಹಿತಕ್ಕಾಗಿ ಮಾಂಡವ್ಯರು ಬಯಸಿದ್ದೂ ಅಲ್ಲ; ಇತರರು ಬಯಸಿದ್ದೂ ಅಲ್ಲ. ಅಂತೂ ಮಾಂಡವ್ಯರು ಅದನ್ನು ಅನುಭವಿಸುವದು ತಪ್ಪಲಿಲ್ಲ.

### ಪೂರ್ವಕಥೆ-೧೨: ಅರ್ಜುನನ ಅನಿಚ್ಛಾ ಪ್ರಾರಬ್ಧ (ಅ-೧೦, ಪ-೧೨೩)

ಅರ್ಜುನನು ದೇವಲೋಕಕ್ಕೆ ಹೋಗಿದ್ದಾಗ ಅಲ್ಲಿ ಚಿತ್ರಸೇನನೆಂಬುವನ ಬಳಿಯಲ್ಲಿ ಗಾಯನವನ್ನು ಕಲಿಯುತ್ತ ಒಂದು ದಿನ ಊರ್ವಶಿಯ ನರ್ತನವನ್ನು ಬೆರಗಾಗಿ ನೋಡುತ್ತಿದ್ದನು. ಇದನ್ನು ಕಂಡವರು ಅರ್ಜುನನು ಊರ್ವಶಿಯನ್ನು ಮೋಹಿಸಬಹುದೆಂದು ತಿಳಿದು ಈ ಸುದ್ದಿಯನ್ನು ಇಂದ್ರನಿಗೆ ತಿಳಿಸಿದರು. ಬಹುದೂರವಾದ ಭೂಲೋಕದಿಂದ ಬಂದಿರುವ ತನ್ನ ಪ್ರಿಯಪುತ್ರನಾದ ಅರ್ಜುನನಿಗೆ ಇಷ್ಟಪೂರ್ತಿಯು ಮಾಡಿ ಕಳುಹಿಸಬೇಕೆಂದು ಇಂದ್ರನು ಚಿತ್ರಸೇನನನ್ನು ಕರೆದು ಅವರಿಬ್ಬರಿಗೂ ಗಂಟುಹಾಕುವಂತೆ ಹೇಳಿದನು. ಇಂದ್ರನ ಆಜ್ಞೆಯನ್ನು ಊರ್ವಶಿಗೆ ಹೇಳಿ ಚಿತ್ರಸೇನನು ಆಕೆಯನ್ನು ಅರ್ಜುನನ ಮನೆಗೆ ಕಳುಹಿಸಿದನು. ಚಿತ್ರಸೇನನ ಉದ್ದೇಶವನ್ನು ತಿಳಿಯದೆ ಅರ್ಜುನನು ಆಕೆಯನ್ನು ಕಾಣುತ್ತಲೇ ಮಾತೃಭಾವದಿಂದ ನಮಸ್ಕಾರಮಾಡಿದನು. ಅರ್ಜುನನನ್ನು ಕಾಮುಕತೆಯಿಂದ ಕಾಯುತ್ತಿದ್ದ ಊರ್ವಶಿಯು ತನ್ನ ಉದ್ದೇಶವನ್ನು ವ್ಯಕ್ತಮಾಡಿದಾಗ ತನ್ನ ತಂದೆಯಾದ ಇಂದ್ರನಿಗೂ ತನ್ನ ವಂಶದ ಮೂಲಪುರುಷನಾದ ಪುರೂರವನಿಗೂ ಪತ್ನಿಯೆನಿಸಿಕೊಂಡಾಕೆಯನ್ನು ಮಾತೃಭಾವದ ಹೊರತು

ಬೇರೆ ಭಾವನೆಯಿಂದ ನೋಡಲಾರೆನೆಂದು ಅವನು ಹೇಳುತ್ತಲೇ ನಿರಾಶಳಾದ ಊರ್ವಶಿಯು ತನ್ನ ಕಾಮಾಂಧತೆಯ ವೇಗದಲ್ಲಿ ನಪುಂಸಕನಾಗೆಂದು ಶಾಪವನ್ನು ಕೊಟ್ಟಳು. ಈ ನಪುಂಸಕತ್ವವು ಮುಂದೆ ಅವನು ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿರುವದಕ್ಕೆ ಅನುಕೂಲವಾಯಿತು. ಆದರೂ ಇದು ತನಗೆ ಬೇಕೆನಿಸಿದ್ದೂ ಅಲ್ಲ; ಇತರರಿಗೆ ಬೇಕೆನಿಸಿದ್ದೂ ಅಲ್ಲ. ಅಂತೂ ಅರ್ಜುನನು ಒಂದು ವರ್ಷ ನಪುಂಸಕನಾಗಿ ಕಾಲಹಾಕಬೇಕಾಯಿತು.

---

ಈ ಪರಿಯಲಧ್ಯಾತ್ಮಬೋಧೆಯ
ದೀಪದಿಂ ದ್ವೈಪಾಯನನು ಹೃ
ದ್ವ್ಯಾಪಕ ಮಹಾಮೋಹವೆನಿಸಿರ್ಪಂಧಕಾರವನು ।
ರೂಪುಗೆಡಿಸಲು, ಶುಕಮುನೀಶ್ವರ
ತಾಪವಡಗಿದ ಶಾಂತಶೀತಲ
ದೀಪವಹ ಚಂದ್ರಿಕೆಯ ಸುಖದ ಸಮಾಧಿಯಲಿ ನಿಂದ ॥ ॥೧೨॥

ತಾತ್ಪರ್ಯ: ಈ ರೀತಿಯಾಗಿ ವ್ಯಾಸಮಹರ್ಷಿಯ ಅಧ್ಯಾತ್ಮವಿದ್ಯೆಯೆಂಬ ಜ್ಯೋತಿಯ ಬೆಳಕಿನಿಂದ ಶುಕಮುನಿಯ ಹೃದಯದಲ್ಲಿ ವ್ಯಾಪಿಸಿಕೊಂಡಿದ್ದ ಮಹಾಮೋಹವೆಂಬ ಗಾಢಾಂಧಕಾರವನ್ನು ಪರಿಹರಿಸಲು, ಶುಕನ ಮನಸ್ಸಿನಲ್ಲಿ ಅಶಾಂತಿಯೆಂಬ ಬೇಗೆ ಅಡಗಿ ಶಾಂತಿಯೆಂಬ ಶೀತಲಜ್ಯೋತಿ ಚಂದ್ರನ ಬೆಳುದಿಂಗಳು ಹಬ್ಬಿತು. ಆಗ ಅವನು ನಿಜಸುಖವೆಂಬ ಸಮಾಧಿಯಲ್ಲಿ ಸ್ಥಿರಗೊಂಡನು.

ಶಬ್ದಾರ್ಥ: ಚಂದ್ರಿಕೆಯ=ಬೆಳದಿಂಗಳಿನ; ರೂಪುಗೆಡಿಸಲು=ಪರಿಹರಿಸಲು; * ನಿಂದ= ಸ್ಥಿರಗೊಂಡನು.

---

ದೇಹವೇ ಶ್ರೀಶೈಲ; ಶಿಖರವ
ದೂಹಿಸಲು ತಿಳಿಯುತ್ತಮಾಂಗವು;
ಸೋಹಮೆನಿಸುವ ಪ್ರತ್ಯಗಾತ್ಮನೆ ಮಲ್ಲಿಕಾರ್ಜುನನು; ।
ಮೋಹರಿಪ ಸುಜ್ಞಾನರಸದ ಪ್ರ
ವಾಹವೇ ಪಾತಾಲಗಂಗೆಯ
ದಾಹ! ಸಹಜಾನಂದಗುರುಪದಭಕ್ತಿಯೇ ಮುಕ್ತಿ ॥ ॥೧೨॥

ತಾತ್ಪರ್ಯ: ಈ ದೇಹವೆಂಬುದೇ ಶ್ರೀಶೈಲಗಿರಿ. ತಲೆ ಶ್ರೀಶೈಲಗಿರಿಯ ಶಿಖರವಿದ್ದಂತೆ ತಿಳಿ; ಸೋಽಹಂ (ಆತ್ಮನೇ ನಾನು) ಎಂದೆನಿಸಿಕೊಳ್ಳುವ ಪ್ರತ್ಯಗಾತ್ಮನೇ ಮಲ್ಲಿಕಾರ್ಜುನ ದೇವನು; ಉಕ್ಕಿಬರುತ್ತಿರುವ ಸುಜ್ಞಾನರೂಪವಾದ ಆತ್ಮರಸ ಪ್ರವಾಹವೇ ಪರಿಶುದ್ಧ ಪಾತಾಳಗಂಗೆಯಾಗಿದೆ; ಆಹಾ! ಸಹಜಾನಂದ ಗುರುವಿನ ಪಾದಸೇವನ ಭಕ್ತಿಯೇ ಮುಕ್ತಿಯಾಗಿದೆ.

**ಶಬ್ದಾರ್ಥ:** * ಉತ್ತಮಾಂಗ=ಶಿರ, ತಲೆ; ಮೋಹರಿಪ=ಉಕ್ಕುತ್ತಿರುವ; ಸೋಽಹಂ=ಆತ್ಮನೇ ನಾನು; ಶ್ರೀಶೈಲ=ಶ್ರೀಶೈಲಗಿರಿ; ಪ್ರತ್ಯಗಾತ್ಮ=ಜೀವನಿಂದ ಬೇರೆಯಾದ ಆತ್ಮ; * ಗುರುಪದಭಕ್ತಿ= ಗುರುಪಾದಸೇವನಾಭಕ್ತಿ.

**ಪದವಿಭಾಗ:** ಪಾತಾಳಗಂಗೆಯದಾಹ=(ಪಾತಳಗಂಗೆ+ಅದು+ಆಹ!)

---

**ಶ್ರೀಮದಾಶ್ರಿತ ಭಕ್ತಜನ ಸು**
**ಪ್ರೇಮ, ಸುರಮುನಿವಂದಿತಾಂಘ್ರಿಮ**
**ಹಾಮಹಿಮ, ಮಧುಸೂದನಪ್ರಿಯ, ಮಾರಸಂಹಾರ, ।**
**ತಾಮರಸಸಖಕೋಟಿಸನ್ನಿಭ**
**ರೋಮಕೂಪನಿಮಗ್ನಭುವನ**
**ಸ್ತೋಮ, ಶ್ರೀಗಿರಿಮಲ್ಲಿಕಾರ್ಜುನ ಸಲಹು ಮೂಜಗವ ॥ ॥೧೨೫॥**

**ತಾತ್ಪರ್ಯ:** ಸಂಪದ್ಯುಕ್ತನಾಗಿ ತನ್ನನ್ನು ಆಶ್ರಯಿಸಿದ ಭಕ್ತಜನರಲ್ಲಿ ಕಾರುಣ್ಯವುಳ್ಳವನಾಗಿ, ನಾರದಾದಿ ದೇವಮುನಿಗಳಿಂದ ವಂದಿಸಲ್ಪಟ್ಟ ಪಾದಕಮಲಗಳುಳ್ಳ ಮಹಾಮಹಿಮಾ ವಂತನಾದವನೇ, ಮಧುಸಂಹಾರಿಯಾದ ಶ್ರೀಕೃಷ್ಣನ ಮಿತ್ರನೇ, ಮನ್ಮಥಸಂಹಾರಿಯೇ, ಕೋಟಿಸೂರ್ಯಸಮಕಾಂತಿಯುಕ್ತನಾಗಿ ರೋಮಕೂಪಗಳಲ್ಲಿ ಸಕಲಭುವನಾವಳಿ ಗಳನ್ನು ಒಳಗೊಂಡಿರುವನೇ ಶ್ರೀಮಲ್ಲಿಕಾರ್ಜುನನೇ, ಮೂರುಲೋಕದ ಜೀವರಾಶಿಯನ್ನು ಕಾಪಾಡು.

**ಶಬ್ದಾರ್ಥ:** * ಶ್ರೀಮತ್=ಸಂಪದ್ಯುಕ್ತನಾದ; * ಸುರಮುನಿ=ನಾರದ; * ಅಂಘ್ರಿ=ಪಾದ; * ತಾಮರಸಸಖ=ಸೂರ್ಯ; * ರೋಮಕೋಪನಿಮಗ್ನಭುವನಸ್ತೋಮ=ರೋಮಕೂಪಗಳಲ್ಲಿ ಸಕಲ ಭುವನಗಳನ್ನು ಅಡಗಿಸಿಕೊಂಡವನೇ; * ಸಲಹು=ಕಾಪಾಡು.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆಯನ್ನು ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

## ಮುಕ್ತಾಯ

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಜೀವನ್ಮುಕ್ತಿ ನಿರೂಪಣ ಎಂಬ ಹತ್ತನೆಯ ಅಧ್ಯಾಯವು ಮುಗಿದುದು**

# ಸಾರಸಂಗ್ರಹ

## ಹತ್ತನೆಯ ಅಧ್ಯಾಯ – ಜೀವನ್ಮುಕ್ತಿ ನಿರೂಪಣ

ಇಷ್ಟೆಲ್ಲ ವಿಚಾರಗಳನ್ನೂ ಸುಮ್ಮನೆ ಕೇಳಿಬಿಡುವ ಮಾತ್ರದಿಂದ ಮನುಷ್ಯನು ಕೃತಾರ್ಥನಾಗಲಾರನು. ಅವಿದ್ಯೆ ಮೊದಲಾದ ಪಂಚಕ್ಲೇಶಗಳು, ಅರಿಷಡ್ವರ್ಗ, ಅಷ್ಟಮದ, ಅಷ್ಟಪಾಶ, ಷಡೂರ್ಮಿ, ಈಷಣತ್ರಯಗಳು, ತ್ರಿವಿಧವಾಸನೆಗಳು–ಇವುಗಳೆಲ್ಲ ತೊಲಗಿ ಅಷ್ಟಾಂಗಯೋಗನಿಷ್ಠೆಯೂ ವಾಸನಾಕ್ಷಯವೂ ಮೈಗೂಡುವಷ್ಟು ವಿಚಾರವು ಪರಿಪುಷ್ಟಿಯಾದಾಗ ಸರ್ವಸಂಶಯಗಳೂ ಪರಿಹಾರವಾಗಿ ಅದ್ವೈತಜ್ಞಾನವು ಮನಸ್ಸಿನಲ್ಲಿ ಮೂಡುವದು. ಆಗಲೇ ಸಂಸಾರದುಃಖದ ನಾಶ. ಆಗಲೇ ಸಹಜಾನಂದ. ಅದರಲ್ಲಿ ತಾದಾತ್ಮ್ಯವನ್ನು ಪಡೆದ ಜ್ಞಾನಯೋಗಿಯು ಕೇವಲ ಆತ್ಮಸ್ವರೂಪನಾಗಿರುವನು.

ಜಗತ್ತಿನಲ್ಲಿ ಸಂಸಾರವೆಂಬುದು ನಿಜವಾಗಿ ಯಾರಿಗೂ ಯಾವಾಗಲೂ ಇಲ್ಲವೇ ಇಲ್ಲ. ಅದು ಅಜ್ಞಾನದಿಂದ ಮಾತ್ರ ತೋರುತ್ತಿದ್ದು, ಬ್ರಹ್ಮಜ್ಞಾನದಿಂದ ಪರಿಹಾರವಾಗುವದು. ಆ ಬ್ರಹ್ಮವನ್ನು ಇದಿರಿಟ್ಟು ಆರಿಗೂ ತೋರಿಸುವದಕ್ಕಾಗುವುದಿಲ್ಲ. ಏಕೆಂದರೆ ಅದು ಅವರ ಸ್ವರೂಪವೇ ಆಗಿರುವದು. ತಾನಲ್ಲದ್ದರಲ್ಲಿ ತಾನೆಂಬಭಿಮಾನವನ್ನಿಟ್ಟಿದ್ದ–ಅನಾತ್ಮಗಳ–ಮೇಲಣ ಅಭಿಮಾನವನ್ನು ಕಳೆಯುವದರಲ್ಲಿಯೇ ಶಾಸ್ತ್ರಗಳ ಮತ್ತು ಗುರುಗಳ ಉಪಯೋಗ. ಇವುಗಳಿಂದ ಪಡೆದ ಜೀವನ್ಮುಕ್ತಿಸ್ಥಿತಿಗೆ ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ, ದುಃಖಕ್ಷಯ, ಸುಖಾವಿರ್ಭಾವ–ಎಂಬೈದು ಪ್ರಯೋಜನಗಳು ವ್ಯವಹಾರದೃಷ್ಟಿಗೆ ಕಾಣುವವು. ಜೀವನ್ಮುಕ್ತನ ಶರೀರವು ಪ್ರಾರಬ್ಧದಿಂದ ಯಾವ ಸ್ಥಿತಿಗತಿಗಳಲ್ಲಿದ್ದರೂ ಅವನ ಮನಸ್ಸು ಸರ್ವಕ್ಕೂ ಸಾಕ್ಷಿಯಾಗಿ ನಿರ್ಲೇಪವಾಗಿರುವದು. ಅವನು ಇದ್ದದ್ದನ್ನು ಬಿಡುವದಿಲ್ಲ; ಇಲ್ಲದ್ದನ್ನು ಬಯಸುವದಿಲ್ಲ. ಅವನು ಹುಡುಗರಿಗೆ ಹುಡುಗರಂತೆ ದೊಡ್ಡವರಿಗೆ ದೊಡ್ಡವರಂತೆ ಇರುವನು. ಅವನು ತನ್ನ ಯೋಗಕ್ಷೇಮಕ್ಕಾಗಲಿ ಇತರರ ಯೋಗಕ್ಷೇಮಕ್ಕಾಗಲಿ ಹೆಚ್ಚಿನ ಬೆಲೆಯನ್ನು ಕೊಡುವದಿಲ್ಲ. ಸಮಬುದ್ಧಿಯು ಅವನ ಮುಖ್ಯಲಕ್ಷಣ ವಾಗಿರುವದು. ಅವನು ಅನ್ನವಸ್ತ್ರಗಳನ್ನು ಶರೀರರಕ್ಷಣೆಗೆ ತಕ್ಕಷ್ಟೇ ಗ್ರಹಿಸುವನು. ಇಂಥ ಜೀವನ್ಮುಕ್ತನನ್ನು ಪೂಜಿಸುವವರಿಗೆ ಅವರಿಷ್ಟಾರ್ಥ ಸಿದ್ಧಿಯಾಗುವದು. ಈ ಯೋಗಿಗಳಲ್ಲಿ ಕೆಲವರು ಕೇವಲ ಅಧಿಕಾರಿಗಳಿಗೆ ಮಾತ್ರ ಉಪದೇಶಿಸುತ್ತ ಉಳಿದ ಕಾಲದಲ್ಲಿ ತಮ್ಮಾನಂದದಲ್ಲಿ ತಾವಿರುವರು. ಇನ್ನು ಕೆಲವರು ಅಧಿಕಾರಿಗಳಿಗೆ ತತ್ತ್ವವನ್ನೂ ಅನಧಿಕಾರಿಗಳಿಗೆ ಅಧಿಕಾರಪ್ರಾಪ್ತಿಯ ಸಾಧನಗಳನ್ನೂ ಹೇಳುತ್ತಲೇ ತಮ್ಮ ಕಾಲವನ್ನು ಕಳೆಯುವರು. ಜೀವನ್ಮುಕ್ತಿ ಸ್ಥಿತಿಯಿಲ್ಲದಂಥ ಬರೀ ವೇಷಧಾರಿಸಂನ್ಯಾಸಿತ್ವವು ಮುಕ್ತಿಯ ಚಿಹ್ನವಲ್ಲ. ಜೀವನ್ಮುಕ್ತರಿಗೆ ಎಲ್ಲರಿಗಿರುವಂತೆ ಇರುವ ಹಾಗೆ ಕಾಣುವ ದೇಹವು ತನ್ನ ಪ್ರಾರಬ್ಧಕರ್ಮವನ್ನೆಲ್ಲ ಮುಗಿಸುವವರೆಗೂ ಇದ್ದೇ ಇರುವದು. ಆದರೆ ಜೀವನ್ಮುಕ್ತರಿಗೆ ಅದರ ಮೇಲಿನ ಅಭಿಮಾನವಿಲ್ಲದ್ದರಿಂದ ಅದಕ್ಕೊದಗುವ ಸುಖ ದುಃಖಗಳಿಗೆ ಅವರು ಭಾಗಿಗಳಾಗುವದಿಲ್ಲ. ಆ ದೇಹವು ಸತ್ತಮೇಲೆ ಅವರಿಗೆ ಮತ್ತೆ ದೇಹವಿಲ್ಲ.

*****

# ಹನ್ನೊಂದನೆಯ ಅಧ್ಯಾಯ

## ನಿರ್ಗುಣಾರಾಧನೆಯ ನಿರ್ಣಯ

**ಸೂಚನೆ॥**

**ನಿರ್ಗುಣಾರಾಧನೆಯ ಶುಕಗೆ ಸ**
**ಮಗ್ರವೆನೆ ಬೋಧಿಸಿದನಾ ಮುನಿ**
**ವಿಗ್ರಹ ಪರಾಶರತನೂಜನುದಗ್ರತೇಜದಲಿ ॥**

**ಸೂಚನೆ ಪದ್ಯ:** ಪರಾಶರ ಪುತ್ರರೂ ಪರಮ ಶ್ರೇಷ್ಠ ತೇಜೋಮೂರ್ತಿಗಳೂ ಆದ ವ್ಯಾಸರು ಶುಕಮುನಿಗೆ ಪೂರ್ಣವಾಗಿ ನಿರ್ಗುಣನಾದ ಪರಬ್ರಹ್ಮನನ್ನು ಆರಾಧಿಸುವ ಪರಿಯನ್ನು ಬೋಧಿಸಿದರು.

**ಶಬ್ದಾರ್ಥ:** ನಿರ್ಗುಣಾರಾಧನೆ=ಯಾವ ಉಪಕರಣಗಳೂ ಇಲ್ಲದ ಪೂಜೆ ಅಥವಾ ನಿರ್ಗುಣ ಬ್ರಹ್ಮದ ಪೂಜೆ; * ಮುನಿವಿಗ್ರಹ=ಮುನಿಶ್ರೇಷ್ಠ; ಪರಾಶರ ತನುಜನು=ಪರಾಶರ ಪುತ್ರ ವ್ಯಾಸನು;

**ಟಿಪ್ಪಣಿ:** ಸೂಚನೆ– ಷಟ್ಪದಿ ಕಾವ್ಯಗಳಲ್ಲಿ ಅಧ್ಯಾಯದ ಸಾರವನ್ನು ಅರ್ಧ ಷಟ್ಪದಿಯಲ್ಲಿ ಹೇಳುವ ಪದ್ಯ

---

### ಇಷ್ಟದೇವತಾ ಸ್ತುತಿ (೧–೩)

**ಭೂಮಿಜಲತೇಜೋನಿಲಾಂಬರ**
**ವಾ ಮಹಾಪ್ರಲಯದಲಿ ವಿಧಿ, ಹರಿ,**
**ಕಾಮವೈರೀಶ್ವರ ಸದಾಶಿವ ಸತ್ತ್ವಗುಣಸಹಿತ ।**
**ಆ ಮಹಾಮಾಯೆಯಲಿ ಲಯಿಸುವ**
**ವಾ ಮಹಾತ್ಮಳು ಲಯಿಪಳೀತನೋ**
**ಳೀ ಮಹಾತ್ಮನನರಿಯಲಳವೇ ಶ್ರೀಗಿರೀಶ್ವರನ ॥** ॥೧॥

**ತಾತ್ಪರ್ಯ:** ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರು ಕಲ್ಪಾಂತ ಕಾಲದಲ್ಲಿ ಸತ್ತ್ವಗುಣಸಹಿತನಾಗಿ ಆ ಮಹಾಶಕ್ತಿ ಸಮೂಹವೆನಿಸಿದ ಮಾಯೆಯಲ್ಲಿ ಬಿದ್ದು ಲಯವಾಗಿ ಹೋಗುವರು. ಇನ್ನು ಆ ಮಾಯೆಯು ಶ್ರೀಗಿರೀಶ್ವರನಲ್ಲಿ ಲಯವಾಗುವಳು ಎಂದ ಮೇಲೆ ಮಹಾತ್ಮನಾದ ಶ್ರೀಶೈಲಮಲ್ಲಿಕಾರ್ಜುನನ ಹಿರಿಮೆಯನ್ನು ಯಾರೂ ಅರಿಯಲು ಸಾಧ್ಯವಿಲ್ಲ.

**ಶಬ್ದಾರ್ಥ:** ಭೂಮಿ=ಪೃಥ್ವಿ; ಜಲ=ನೀರು; ತೇಜ=ಬೆಳಕು, ಅನಿಲ=ವಾಯು; ಅಂಬರ=ಆಕಾಶ; ಈ ಐದು ಪಂಚಭೂತಗಳು; ವಿಧಿ=ಬ್ರಹ್ಮ; ಹರಿ=ವಿಷ್ಣು; ಕಾಮವೈರಿ=ರುದ್ರ; ಈಶ್ವರ=ಹರ; ಸದಾಶಿವ ಈ ಐವರೂ ಪಂಚಭೂತಗಳ ಅಧಿದೇವತೆಗಳು (ವಿವರಗಳಿಗೆ ಅಧ್ಯಾಯ ೪ ಪದ್ಯ

೨೯ ನೋಡಿ); ಶ್ರೀಗಿರೀಶ್ವರ=ಶ್ರೀಶೈಲಮಲ್ಲಿಕಾರ್ಜುನ ದೇವ; ಸತ್ತ್ವಗುಣಸಹಿತ=ತಮೋಗುಣವನ್ನು ರಜೋಗುಣವನ್ನು ಸತ್ತ್ವಗುಣವು ಹೊಡೆದು ಹಾಕಿದ ಮೇಲೆ ಆ ಸತ್ತ್ವಗುಣವು ಮಾಯೆಯಲ್ಲಿ ಲಯವಾಗುತ್ತದೆ; * ಲಯವಾಗು=ಅಡಗು; ಈತನೊಳು ಲಯಿಪಳು=ಶ್ರೀಗಿರೀಶ್ವರನಲ್ಲಿ ಲಯವಾಗುವಳು ಎಂದ ಮೇಲೆ ಶ್ರೀಗಿರೀಶ್ವರನನ್ನು ನಿರ್ಗುಣ ಬ್ರಹ್ಮವೆಂದು ಹೇಳಿದಂತಾಯಿತು.

**ಟಿಪ್ಪಣಿ:** ಈ ಪದ್ಯವು ಮಹಾಭಾರತದ ಕೆಳಗಿನ ಶ್ಲೋಕಗಳ ತಾತ್ಪರ್ಯಗಳನ್ನು ಒಳಗೊಂಡಿರುತ್ತದೆ.

**ಜಗತ್ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ ।**
**ತೇಜಸ್ಯಾಪಃ ಪ್ರಲೀಯನ್ತೇ ತೇಜೋ ವಾಯೌ ಪ್ರಲೀಯತೇ ॥**
**ವಾಯುಶ್ಚಲೀಯತೇ ವ್ಯೋಮ್ನಿತಚ್ಚಾವ್ಯಕ್ತೇ ಪ್ರಲೀಯತೇ ।**
**ಅವ್ಯಕ್ತಂ ಪುರುಷೇ ಬ್ರಹ್ಮನಿರ್ಗುಣೇ ಸಂಪ್ರಲೀಯತೇ ॥**

ಮಹಲಿಂಗರಂಗ ಪದ್ಯದಲ್ಲಿ ಹೇಳಿರುವ ಭೂತಾದಿಗಳ ಲಯಕ್ಕೆ ಬದಲಾಗಿ ಇಲ್ಲಿ ಆಯಾ ಅಭಿಮಾನಿದೇವತೆಗಳ ಲಯವನ್ನು ಹೇಳಿದೆ. ಅಭಿಮಾನಿ ದೇವತೆಗಳಿಗೂ ಆಯಾ ಉಪಾಧಿಗಳ ಲಯದಿಂದಲೇ ಲಯವನ್ನು ಕಲ್ಪಿಸಬೇಕಾಗುತ್ತದೆ. ಉಪಾಧಿಗಳ ಗುಣಗಳು ಕಡಿಮೆಯಾಗುತ್ತ ಬಂದ ಹಾಗೆಲ್ಲ ಆಯಾ ಅಭಿಮಾನಿಗಳಿಗೆ ಸೂಕ್ಷ್ಮತ್ವವೂ ಸಿದ್ಧಿಯಾಗುವುದರಿಂದ ನಿರ್ಗುಣನಾದ ಪರಮೇಶ್ವರನು ಪರಮಸೂಕ್ಷ್ಮನೆಂದು ಹೇಳಿದಂತೆ ಆಗುವುದು. ಈ ಅಭಿಪ್ರಾಯವು ಸೂತ ಸಂಹಿತೆಯ ೪ನೇ ಖಂಡದ ೧೧ನೇ ಅಧ್ಯಾಯದಲ್ಲಿಯೂ ಅಭಿಮಾನಿ ದೇವತೆಗಳನ್ನು ಹಿಡಿದುಕೊಂಡೇ ಸ್ಪಷ್ಟವಾಗಿ ಬರೆದಿರುವುದು.

**ಪಾಠಾಂತರ:** ರಾ ಮಹಾತ್ಮಳು ಲಯಪಳೀತನೊಳೀ ರಾ ಮಹಾಶಕ್ತ್ಯಾವಳೀತನೊಳಾ (ಕು)

---

**ಜಾತಿಧರ್ಮವನುಳಿದು, ಹಿರಿಯರ**
**ಮಾತುಗಳನತಿಗಳೆದು, ಸ್ವೇಚ್ಛಾ**
**ರೀತಿಯಲಿ ವಿಸಟಂಬರಿದು ವರ್ತಿಸುವ ಮನುಜರಿಗೆ ।**
**ನೀತಿಯನು ಬಿಟ್ಟಿರ್ದ ನೀಚರಿ**
**ಗಾತತಾಯಿಗಳಿಂಗುಮಧಮರಿ**
**ಗೋತು ಪೇಳದಿರರಿದು ಮರೆದೀ ಅನುಭವಾಮೃತವ ॥ ॥೨॥**

**ತಾತ್ಪರ್ಯ:** ವರ್ಣಾಶ್ರಮ ಧರ್ಮವನ್ನು ತೊರೆದು, ದೊಡ್ಡವರ ಮಾತುಗಳನ್ನು ತಿರಸ್ಕರಿಸುತ್ತಾ ಮನಸ್ಸಿಗೆ ಬಂದಂತೆಲ್ಲಾ ನಡೆದುಕೊಳ್ಳುವ ಆರು ಬಗೆಯ ಧರ್ಮದ್ರೋಹ ಮಾಡುವ ಈ ಆತತಾಯಿಗಳಿಗೆ, ಮಹಾಪಾಪಿಗಳಿಗೆ ಮರೆತೂ ಈ ಅನುಭವಾಮೃತವನ್ನು ಹೇಳಬಾರದು.

**ಶಬ್ದಾರ್ಥ:** ಅತಿಗಳೆದು=ಮೀರಿ, ತಿರಸ್ಕರಿಸಿ, ಧಿಕ್ಕರಿಸಿ; ವಿಸಟಂಬರಿದು=ಮನಸ್ಸಿಗೆ ಬಂದ ಹಾಗೆಲ್ಲಾ ನಡೆದುಕೊಂಡು; * ನೀತಿಯನು=ಸನ್ನಡತೆಯನ್ನು; * ಮರೆತೂ=ಅಪ್ಪಿ ತಪ್ಪಿಯೂ; ಆತತಾಯಿ=ಕೊಲ್ಲುವುಕ್ಕೆ ಸನ್ನಾಹ ಮಾಡುವವನು.

**ಟಿಪ್ಪಣಿ: ಆತತಾಯಿ–** ೧. ಬೆಂಕಿಯನಿಟ್ಟವನು; ೨. ವಿಷವನ್ನು ಕುಡಿಸಿದವನು; ೩. ಶಸ್ತ್ರದಿಂದ ಹೊಡೆದವನು; ೪. ಧನವನ್ನು ಕದ್ದವನು; ೫. ಕ್ಷೇತ್ರ (ಭೂಮಿ) ವನ್ನು ಅಪಹರಿಸಿದವನು; ೬. ಹೆಂಡತಿಯನ್ನು ಕೊಂದು ಹೋದವನು; ಈ ಆರು ಜನರೂ ಆತತಾಯಿಗಳೆಂದು ಮಹಾಭಾರತವು (ಗೀತೆ ಅ–೧; ಪ–೩೬) ಹೇಳುತ್ತದೆ.

---

**ಭೂತದಯೆಯುಳ್ಳವರಿಗೆ, ಭುವನ**
**ಖ್ಯಾತರಿಗೆ, ಬುಧಜನರ ಬುದ್ಧಿಯ**
**ನೋತುಕೇಳುವರಿಂಗೆ, ಭವದಲಿ ಭೀತಿಯುಳ್ಳವರಿಗೆ, ।**
**ನೀತಿಯಲಿನಡೆವರಿಗೆ, ನಿಗಮ**
**ವ್ರಾತಗಳನಾಚರಿಸುವವರಿಗು**
**ಮೇತರಲ್ಲಿಯು ನಿಸ್ಪೃಹರಿಗರುಹನುಭವಾಮೃತವ ॥** ॥೩॥

**ತಾತ್ಪರ್ಯ:** ಸಕಲ ಜೀವಿಗಳಲ್ಲಿ ದಯೆಯುಳ್ಳವರಿಗೆ, ಲೋಕದಲಿ ಶ್ರೇಷ್ಠರೆಂದು ಪ್ರಸಿದ್ಧರಾದವರಿಗೆ, ಜ್ಞಾನಿಗಳ ಹಿತೋಪದೇಶವನ್ನು ಪ್ರೀತಿಯಿಂದ ಆಲಿಸುವವರಿಗೆ, ಸಂಸಾರ ಬಂಧನದಲ್ಲಿ ಸಿಲುಕಿ ಪುನರ್ಜನ್ಮ ತಾಳಬೇಕೆಂಬ ಹೆದರಿಕೆಯುಳ್ಳವರಿಗೆ, ಸಚ್ಚಾರಿತ್ರ್ಯವುಳ್ಳವರಿಗೆ ವೇದ ಪ್ರಮಾಣಗಳನ್ನು ನಂಬಿ ವಿದ್ಯುಕ್ತವಾಗಿ ನಡೆದು ಕೊಳ್ಳುವವರಿಗೆ, ಎಲ್ಲ ವಿಚಾರಗಳಲ್ಲು ಪ್ರಾಮಾಣಿಕರಾದವರಿಗೆ ಈ ಅನುಭವಾಮೃತ ಗ್ರಂಥವನ್ನು ಬೋಧಿಸಬೇಕು.

**ಶಬ್ದಾರ್ಥ:** * ಭೂತದಯೆಯುಳ್ಳವರಿಗೆ=ಸಕಲ ಪ್ರಾಣಿಗಳಲ್ಲಿ ದಯೆಯುಳ್ಳವರಿಗೆ;* ಭುವನ ಖ್ಯಾತರಿಗೆ=ಜಗತ್ಪ್ರಸಿದ್ಧರಾದವರಿಗೆ; * ಓತುಕೇಳುವರಿಂಗೆ=ಪ್ರೀತಿಯಿಂದ ಆಲಿಸುವ ಭಕ್ತರಿಗೆ;

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

## ಪ್ರಶ್ನೆ (೪–೬)

**ಚಿತ್ತವಿಸು ಮುನಿವರ್ಯ, ನಿರ್ಗುಣ**
**ವಸ್ತುವಿಂಗುಪಚಾರಕಲ್ಪನೆ**
**ಗೆತ್ತಣದು ಪೂಜಾವಿಧಾನದ ದ್ರವ್ಯಪರಿಕರವು ? ।**
**ಸತ್ಯವಾದದ್ವೈತದಲ್ಲಿ ಪ್ರ**
**ವರ್ತಿಸುವದೆಂತಹಹ ನಿರುಪಮ**
**ಚಿತ್ತು ! ಪೂಜಕಪೂಜ್ಯವೆಂಬುದು ಚಿತ್ರವಾಯ್ತೆಂದ ॥** ॥೪॥

**ತಾತ್ಪರ್ಯ:** ಶುಕಯೋಗಿಯೇ ಕೇಳು, ನಿರ್ಗುಣಾರಾಧನೆಯ ಪರಬ್ರಹ್ಮನನ್ನು ಆವಾಹನಾದಿ ಷೋಡಶೋಪಚಾರಾದಿಗಳಿಂದ ಆರಾಧಿಸುವುದು ಹೇಗೆ? ಪೂಜಾ ವಿಧಾನದ ದ್ರವ್ಯ ಸಾಧನಗಳನ್ನು ಬಳಸುವುದು ಹೇಗೆ? ಏಕೆಂದರೆ ಎರಡಿದ್ದರೆ ಒಂದರಲ್ಲಿ

ಇನ್ನೊಂದನ್ನು ತೊಡಗಿಸಬಹುದು, ಒಂದೇ ಇರುವಾಗ ತಾನೇ ತನ್ನಲ್ಲಿ ತೊಡಗಿಸಿಕೊಳ್ಳುವುದು ಹೇಗೆ? ಅಸಮಾನ ಚಿತ್ತು ಎರಡಿದ್ದರೆ ಒಂದು ಪೂಜಕವು (ಪೂಜೆಯ ಸಾಧನ) ಇನ್ನೊಂದು ಪೂಜ್ಯವೂ (ಪೂಜಿಸಿಕೊಳ್ಳುವ ವಸ್ತು) ಆಗಬಹುದು. ಆದರೆ ಒಂದೇ ಇರುವಾಗ ಅದು ಹೇಗೆ ಹೊಂದೀತು? ಅಚ್ಚರಿಯಾದ ಸಂಗತಿ ಇದು.

**ಶಬ್ದಾರ್ಥ:** ಚಿತ್ತಿವಿಸು=ಆಲಿಸು;

**ಟಿಪ್ಪಣಿ:** ಅವತರಣಿಕೆ- ಇಲ್ಲಿ ಶಿಷ್ಯನು ಬ್ರಹ್ಮನೇ ತಾನೆಂಬ ವಾಕ್ಯದ ಶ್ರವಣವನ್ನು ಮಾಡಿದ ಮೇಲೆಯೂ ತತ್ತ್ವಾರ್ಥವನ್ನು ಮನಗಾಣಲಸಮರ್ಥನಾಗಿಯೂ ಮತ್ತು ಚಿತ್ತಶುದ್ಧಿಗಾಗಿ ಅದುವರೆಗೆ ಅನೇಕ ಉಪಕರಣಗಳಿಂದ ತಾನು ಮಾಡುತ್ತಿದ್ದ ಸಗುಣ ಪೂಜಾ ವಿಧಾನವನ್ನಾದರೂ ಮುಂದುವರೆಸದಂತೆ ಕರ್ತೃತ್ವಕ್ರಿಯೆ ಎಂಬಿವೆಲ್ಲ ಚಿತ್ತದ ವಿಕಾರಗಳೆಂಬ ಭಾವನೆಯಿಂದ ತಡೆಯಲ್ಪಟ್ಟವನಾಗಿಯೂ ಇರುವ ಸ್ಥಿತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಅಭಿಪ್ರಾಯವನ್ನು ಎರಡು ಪದ್ಯಗಳಲ್ಲಿ ಹೇಳುವುದಕ್ಕೆ ಹೊರಟಿದ್ದಾನೆ.

---

ನಿತ್ಯ ನಿರ್ಗುಣ ನಿರ್ವಿಕಾರ ನಿ
ರಸ್ತ ಸಕಲೋಪಾಧಿಯಹ ಪರ
ತತ್ತ್ವ ತಾನೇ ಕರ್ತೃವಾಗಿರಲೆತ್ತಣುಪಚಾರ? ।
ಕರ್ತೃಕರ್ಮಕ್ರಿಯೆಗಳೆಂಬಿವು
ಚಿತ್ತದ ವಿಕಾರಗಳತೀಂದ್ರಿಯ !
ವಸ್ತುವಿಗೆ ಪೂಜಾವಿಧಾನ ಪ್ರಶಸ್ತವಲ್ಲೆಂದ ॥ ॥೫॥

**ತಾತ್ಪರ್ಯ:** ಶಾಶ್ವತನೂ, ಗುಣರಹಿತನೂ ವಿಕಲ್ಪವಿಲ್ಲದವನು, ಯಾವ ಉಪಾಧಿಯೂ ಇಲ್ಲದವನು, ಪರತತ್ತ್ವ ತಾನೇ ಆಗಿ ಎಲ್ಲದರ ಕರ್ತೃವಾಗಿರಲು, ಅಂಥವನಿಗೆ ಉಪಚಾರ ಮಾಡಲು ಯಾರಿರುವರು? ಅಂತಹ ಷೋಡಶ ಉಪಚಾರಗಳು ಯಾರಿಗೆ ಸಲ್ಲ ತಕ್ಕದು? ಕರ್ತೃ, ಕರ್ಮ ಕ್ರಿಯೆಗಳೆಂಬುವುದೆಲ್ಲ ಚಿತ್ಸ್ವರೂಪವಾದ ಆತ್ಮನ ವಿಕಾರಗಳಾಗಿರುವಾಗ, ಇಂದ್ರಿಯಗಳಿಗೆ ಅಗೋಚರನಾದ (ಅತೀಂದ್ರಿಯ) ಪರವಸ್ತುವನ್ನು ಪೂಜಿಸುತ್ತೇನೆ ಎಂಬುದು ತಕ್ಕುದ್ದಲ್ಲ.

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

ಗುರುವೆಯೆನಗೀ ಪರಿಯನೆಲ್ಲವ
ಕರುಣಿಸಲು ಬೇಕೆಂದು ಶುಕಮುನಿ
ಚರಣವನು ಪಿಡಿದೆರಗಿ ಬಿನ್ನಹಮಾಡಲದ ಕೇಳಿ ।
ಕರುಣದಲಿ ಪಿಡಿದೆತ್ತಿ ಮಗನನು
ಹರುಷದಿಂ ದ್ವೈಪಾಯನನು ವಿ
ಸ್ತರಿಸಿ ಪೇಳಿದ ನಿರ್ಗುಣಾರಾಧನೆಯ ನಿರ್ಣಯವ ॥ ॥೬॥

**ತಾತ್ಪರ್ಯ:** ಹೇ, ಗುರುವೆ, ನನಗೆ ಈ ನಿರ್ಗುಣಾರಾಧನೆಯ ಕ್ರಮಗಳನ್ನೆಲ್ಲ ಕೃಪೆಯಿಟ್ಟು ತಿಳಿಸಬೇಕು ಎಂಬುದಾಗಿ ಶಿಷ್ಯನಾದ ಶುಕಮುನಿಯು ವೇದವ್ಯಾಸರ ಪಾದಗಳಿಗೆ ನಮಿಸಿ ಬೇಡಿಕೊಳ್ಳಲು, ಅವನ ಕೋರಿಕೆಯನ್ನು ಕೇಳಿ ಕಾರುಣ್ಯಭಾವದಲ್ಲಿ ಪಾದಗಳಿಗೆ ನಮಿಸಿದ ಮಗನನ್ನು ಹಿಡಿದು ಮೇಲಕ್ಕೆತ್ತಿ ದ್ವೈಪಾಯನನಾದ ವೇದವ್ಯಾಸರು ಸಂತೋಷದಿಂದ ನಿರ್ಗುಣಾರಾಧನೆಯ ವಿಧಾನವನ್ನು ವಿಸ್ತಾರವಾಗಿ ಹೇಳಿದನು.

**ಶಬ್ದಾರ್ಥ:** * ಪರಿಯನು=ಕ್ರಮಗಳನ್ನು; * ದ್ವೈಪಾಯನ =ವೇದವ್ಯಾಸ.

**ಪೂರ್ವ ಕಥೆ: ದ್ವೈಪಾಯನ**

ವೇದವ್ಯಾಸರು, ಯಮುನಾ ನದಿಯ ಒಂದು ದ್ವೀಪದಲ್ಲಿ ಜನಿಸಿದ್ದರಿಂದ ದ್ವೈಪಾಯನ ಎಂಬ ಹೆಸರು. ಕೃಷ್ಣ (ಕಪ್ಪಾಗಿರುವಂತೆ ಕಾಣುವ–ಉದಾ: ಗಂಗೆಯನ್ನು ಸಂಗಮಿಸುವ ಯಮುನಾನದಿ ಗಂಗೆಗಿಂತ ಕಪ್ಪಾಗಿ ಕಾಣಿಸುವಳು) ವರ್ಣದ ನದಿಯಲ್ಲಿ ಜನಿಸಿದ್ದರಿಂದ ಕೃಷ್ಣದ್ವೈಪಾಯನ ಎಂದೂ ಕರೆಯುವರು. ಪರಾಶರ ಪುತ್ರನು. ಶುಕಮುನಿ ಇವರ ಮಗ. ಕೃಷ್ಣದ್ವೈಪಾಯನ ಮುನಿ ನಿಯಮದಲ್ಲಿದ್ದಾಗ ಶುಕೀ (ಹೆಣ್ಣು ಗಿಳಿ) ರೂಪದಿಂದ ಬಂದ ಘೃತಾಚಿ ಎಂಬ ಅಪ್ಸರಸೆಯಲ್ಲಿ ಜನಿಸಿದ್ದರಿಂದ ಶುಕನೆಂದು ಹೆಸರಾಯ್ತು. ಬಾಲ್ಯದಲ್ಲೇ ವೈರಾಗ್ಯಶಾಲಿಯಾಗಿ ಶುಕಮುನಿ ಆದನು. (ಪುರಾಣನಾಮಚೂಡಾಮಣಿ–ಪು–೬೦೮)

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ, ಪೂರ್ವ ಕಥೆ ಅನುವಾದಕನದು.

---

## ಆರಾಧನೆಯ ಪೂರ್ವಸಿದ್ಧತೆ (೭–೮)

**ಮಗನೆ ಮನನಾರ್ಥಕ್ಕೆ ಸಾಧನ**
**ಸಗುಣವಹ ಪೂಜಾನಿಧಾನವು;**
**ನಿಗಮವಿದರಾಚರಿಸುತಿರ್ಪರು; ರಾಜಯೋಗವಿದು; ।**
**ತೆಗೆದು ತನುಕರಣಗಳ ಚಿಂತೆಯ**
**ಹಗಲಿರುಳು ಚಿತ್ತಪ್ರಸಾದದ**
**ಸೊಗಸಿನಿಂ ನಿಶ್ಚಿಂತನಾದಡೆ ಮಾಡಲಹುದೆಂದ ॥ ॥೭॥**

**ತಾತ್ಪರ್ಯ:** ಹೇ ಶುಕನೇ ಕೇಳು, ಸಗುಣಾರಾಧನೆ ಎಂದರೆ ವಿಗ್ರಹ ಪೂಜಾ ವಿಧಾನವು. ಮನನಾರ್ಥಕ್ಕೆ ಸಾಧಕವಾದುದು. ವೇದವಿದ್ವಾಂಸರು ಷೋಡಶೋಪಚಾರ ಗಳನ್ನು ಎಂದರೆ ಸಿಂಹಾಸನ ಮತ್ತು ಆವಾಹನೆ ಮೊದಲಾದ ಗುಣಗಳನ್ನು ತಮ್ಮ ಜ್ಞಾನ ದೃಷ್ಟಿಯಿಂದ ಬೇರೆ ಕಲ್ಪನೆ, ಮಾಡುವಂಥ ರಾಜಯೋಗವನ್ನು ಆಚರಿಸುತ್ತಾರೆ. ಶರೀರ, ಅಂತಃಕರಣ, ಇಂದ್ರಿಯಗಳ ಚಿಂತೆಯನ್ನು ಬಿಟ್ಟು ಹಗಲೂ ರಾತ್ರಿ ನಿರ್ಮಲವಾದ ಮತ್ತು ಶಾಂತವಾದ ಮನಸ್ಸು ನಿಶ್ಚಿಂತವಾಗಿದ್ದರೆ ನಿರ್ಗುಣಾ ರಾಧನೆಯನ್ನು ಮಾಡಲು ಶಕ್ಯವಾಗುತ್ತದೆ.

ಟಿಪ್ಪಣಿ: ರಾಜಯೋಗಕ್ಷೇಮ- ಹಿಂದೆ ಅ-೭-, ಪ-೭೯, ೮೦ರಲ್ಲಿ ಯಮ, ನಿಯಮಾದಿಗಳ ಅರ್ಥಗಳನ್ನು ಜ್ಞಾನದೃಷ್ಟಿಯಿಂದ ಮಾಡಿ ರಾಜಯೋಗವೆಂದು ಕರೆದಂತೆ ಇಲ್ಲಿ ಸಿಂಹಾಸನ ಮೊದಲಾದವಕ್ಕೆ ಜ್ಞಾನದೃಷ್ಟಿಯಿಂದ ಬೇರೆ ಕಲ್ಪನೆಯನ್ನು ಮಾಡಿ (ಮಾನಸ ಪೂಜೆ) ರಾಜಯೋಗವೆಂದು ಮಹಲಿಂಗರಂಗ ಕವಿ ಕರೆದಿದ್ದಾನೆ. ಚಿತ್ತಪ್ರಸಾದದ=ಶಾಂತಮನಸ್ಸಿನಿಂದ

---

ವಿಜನವಾಗಿರ್ಪೆಡೆಯೊಳಾಸನ
ವಜಿನವಾಗಿರೆ ಕುಳಿತು, ದೇಹವ
ರುಜುತರವೆನಲುಮಾಡಿ, ಪದ್ಮಾಸನವನಳವಡಿಸಿ, ।
ಸುಜನಗುರುಮೂರುತಿಯ ಪಾದಾಂ
ಬುಜವ ತನ್ನಯ ಮನದಿ ನೆನೆಯುತ,
ನಿಜವೆನಿಸುವೀಶ್ವರನೆ ತಾನೆಂದರಿತು ಧ್ಯಾನಿಪುದು ॥ ॥೮॥

ತಾತ್ಪರ್ಯ: ಜನರಿಲ್ಲದ ಜಾಗದಲ್ಲಿ ಏಕಾಂತವಾಗಿ ಕೃಷ್ಣಾಜಿನದಲ್ಲಿ (ಕೂಡಲು ಸಿದ್ಧಪಡಿಸಿದ ಹದಮಾಡಿದ ಜಿಂಕೆ ಚರ್ಮ) ದೇಹವನ್ನು ನೆಟ್ಟಗೆ ಮಾಡಿ ಪದ್ಮಾಸನದಲ್ಲಿ ಕುಳಿತು ತನ್ನ ಮನಸ್ಸಿನಲ್ಲಿ ಸದ್ಗುರುವಿನ ಪಾದಕಮಲಗಳನ್ನು ಧ್ಯಾನಿಸುತ್ತಾ ಆತ್ಮರೂಪಿಯಾದ ಪರಬ್ರಹ್ಮನೇ ತಾನೆಂದು ಭಾವಿಸಿ ಸ್ಮರಿಸುತ್ತಿರಬೇಕು.

ಶಬ್ದಾರ್ಥ: * ಅಜಿನ=ಜಿಂಕೆಯ ಚರ್ಮ; ರುಜುತರ (ಋಜುತರ)=ನೆಟ್ಟಗೆ (ಬಗ್ಗದಂತೆ); ಪದ್ಮಾಸನ=ಧ್ಯಾನಕ್ಕೆ ಕುಳಿತುಕೊಳ್ಳುವ ಭಂಗಿ; * ಆಸನವಜಿನವಾಗಿರೆ=ಕುಳಿತುಕೊಳ್ಳಲು ಜಿಂಕೆಯ ಚರ್ಮವೇ ಪೀಠವಾಗಿರಲು; * ನಿಜವೆನಿಸುವೀಶ್ವರನೆ=ಆತ್ಮರೂಪಿಯಾದ ಪರಬ್ರಹ್ಮನೇ ತಾನೆಂದು; * ಅರಿತು=ಭಾವಿಸಿ; ಧ್ಯಾನಿಪುದು=ಸ್ಮರಿಸಬೇಕು, ನೆನೆಯಬೇಕು;

ಟಿಪ್ಪಣಿ: ಪದ್ಮಾಸನ-ಬಲದ ತೊಡೆಯ ಮೇಲೆ ಎಡದ ಪಾದವನಿಟ್ಟು ಅದರ ಹೆಬ್ಬೆಟ್ಟನ್ನು ಬೆನ್ನ ಹಿಂದಿನಿಂದ ಬಂದ ಎಡಗೈಯಿಂದ ಹಿಡಿಯಬೇಕು. ಹೀಗೆಯೇ ಎಡದ ತೊಡೆಯ ಮೇಲೆ ಬಲದ ಪಾದವನ್ನಿಟ್ಟು ಅದರ ಹೆಬ್ಬೆಟ್ಟನ್ನು ಬೆನ್ನ ಹಿಂದಿನಿಂದ ಬಂದ ಬಲಗೈಯಿಂದ ಹಿಡಿಯಬೇಕು. ಇದೇ ಪದ್ಮಾಸನ. ಪದ್ಮಾಸನದ ಬಗ್ಗೆ ಸೂತ ಸಂಹಿತೆಯ ಆಸನ ವಿಧಿನಿರೂಪಣದ ಪ್ರಕರಣದಲ್ಲಿ ಹೀಗೆ ಹೇಳಿದೆ:

ಅಂಗುಷ್ಠಾದಪಿ ಗೃಹ್ಣೀಯಾದ್ಧಸ್ತಾಭ್ಯಾಂ ವ್ಯುತ್ಕ್ರಮೇಣ ತು ।
ಊರ್ವೋರುಪರಿವಿಪ್ರೇಂದ್ರ ಕೃತ್ವಾ ಪಾದತಲದ್ವಯಮ್ ।
ಪದ್ಮಾಸನಂ ಭವೇದೇತತ್ಸಾಪರೋಗಭಯಾಪಹನಮ್ ॥

---

## ನಿರ್ಗುಣಾರಾಧನೆಯ ಹೆಚ್ಚುಗಾರಿಕೆ (೨೦-೨೩)

ಮೂರವಸ್ಥೆಯ ಮೀರಿ, ತುರ್‍ಯವ
ನೇರಿ, ನಿರ್ಗುಣವಾದ ಸಚ್ಚಿ
ತ್ಸಾರಸುಖಮಯವೆನಿಪ ಪರಮೋತ್ಕೃಷ್ಟಪದವಾದ ।

**ಪಾರಮಾರ್ಥಿಕವಪ್ಪ ಸಹಜಾ**
**ಕಾರವಹ ಪರಬೊಮ್ಮತಾನೆನೆ**
**ನೀರ ಸಿಂಹಾಸನವದೆನಿಪುಪಚಾರ ಕೇಳೆಂದ ॥** ॥೯॥

**ತಾತ್ಪರ್ಯ:** ಸುಂದರ ಶುಕನೇ ಕೇಳು, ಜಾಗ್ರತೆ, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನು ದಾಟಿ ನಾಲ್ಕನೆಯ ಅವಸ್ಥೆಯಾದ ತುರ್ಯದಲ್ಲಿ ನಿಂತು ಸಚ್ಚಿದಾನಂದ ಸ್ವರೂಪನೆನಿಸಿ ಪಾರಮಾರ್ಥಕನಾಗಿ ಸಹಜಾಕಾರನಾದ ಪರಬ್ರಹ್ಮನೇ ತಾನು ಎಂದು ತಿಳಿದರೆ ಅದೇ ಸಿಂಹಾಸನವೆಂಬ ಉಪಚಾರ ಎನಿಸುತ್ತದೆ.

**ಶಬ್ದಾರ್ಥ:** ಮೂರವಸ್ಥೆ=ಅವಸ್ಥಾತ್ರಯ, ಎಚ್ಚರ, ಕನಸು, ನಿದ್ರೆ ಎಂಬ ಮೂರು ಅವಸ್ಥೆಗಳು (ಅ–೩, ಪದ್ಯ ೮೯ ನೋಡಿ).

**ಟಿಪ್ಪಣಿ:** * **ತುರ್ಯವನೇರಿ**–ಮೂರು ಅವಸ್ಥೆಗಳನ್ನು ಮೀರಿದ ನಾಲ್ಕನೆಯ ಅವಸ್ಥೆಯೇ ತುರ್ಯಾವಸ್ಥೆ. ಈ ಅವಸ್ಥೆಯಲ್ಲಿ ಇರುವುದು ಆತ್ಮನೊಂದೇ. ವ್ಯವಹಾರವು ತನ್ನಲ್ಲಿ ತಾನೆ ನಡೆಯುತ್ತಿರುತ್ತದೆ, ಕಾರ್ಯಕಾರಣ ಸಂಬಂಧವೇ ಇಲ್ಲ ಎಂಬ ಅನುಭವ ಬರುತ್ತದೆ. ಇದೇ ಸಾಯುಜ್ಯ, ಪರಮಾರ್ಥ, ಸ್ವರೂಪಾನುಭವವಿರುವ ಈ ಅವಸ್ಥೆಯನ್ನು ಜ್ಞಾನಾವಸ್ಥೆ ಎಂದು ಕರೆಯುತ್ತಾರೆ. ಅಖಂಡ ಸ್ವರೂಪರಾಗಿರುವುದರಿಂದ ತೃಪ್ತಾವಸ್ಥೆ ಇದು. ಮಾತು, ಮನಸ್ಸಿನೊಡನೆ ಸ್ಪರ್ಧಿಸಲಾರದೆ ಹಿಂದಿರುಗುವ ಸಹಜಾವಸ್ಥೆಯಿದು. (ಪರಮಾರ್ಥಪದಕೋಶ, ಪುಟ ೧೮೬)

---

**ಮಲಿನವಾಸನೆ ಗವಸಣಿಗೆಯೆನು**
**ತುಳಿದು, ಕಾಮಾದಿಗಳ ಮಲವನು**
**ತೊಳೆದು, ಶಮೆದಮೆಯೆಂಬ ರತ್ನಗಳಿಂದ ರಂಜಿಸುವ ।**
**ಪಳುಕಿನಂದದಿ ಥಳಥಳಿಪ ನಿ**
**ರ್ಮಲದಲಂತರ್ಮುಖದ ಬುದ್ಧಿಯೆ**
**ತಿಳಿಯೆ ಸಿಂಹಾಸನವದೆನಿಪುಪಚಾರ ಕೇಳೆಂದ ॥** ॥೧೦॥

**ತಾತ್ಪರ್ಯ:** ಹೊಲಸು ವಾಸನೆಯೆಂಬ ಮುಸುಕನ್ನು ತೊಡೆದು ಹಾಕಿ ಕಾಮಕ್ರೋಧಾದಿ ಅರಿಷಡ್ವರ್ಗಗಳೆಂಬ ಮಲಗಳನ್ನು ತೊಳೆದು ಕಳೆಯಬೇಕು. ಇಂದ್ರಿಯ ನಿಗ್ರಹ (ದಮೆ) ಮನೋನಿಗ್ರಹ(ಶಮೆ)ಗಳೆಂಬ ರತ್ನಗಳಿಂದ ರಾರಾಜಿಸುವ, ಸ್ಫಟಿಕ ಶಿಲೆಯಂತೆ ಥಳಥಳ ಎಂದು ಹೊಳೆಯುತ್ತಿರುವ ಪರಿಶುದ್ಧಭಾವದಲ್ಲಿ ಹೃದಯಶುದ್ಧಿಯನ್ನೊಳಗೊಂಡ ಅಂತಃಕರಣದ ಬುದ್ಧಿಯೇ ಸಿಂಹಾಸನ (ಆಸನೋಪಚಾರ) ಉಪಚಾರವೆಂದು ತಿಳಿಯಬೇಕು. ದಶೋಪಚಾರಗಳಲ್ಲಿ ಇದು ಮೊದಲನೆಯದು.

**ಶಬ್ದಾರ್ಥ:** * **ಮಲಿನವಾಸನೆ**=ಕೊಳಕುವಾಸನೆ, ಹೊಲಸುವಾಸನೆ; **ಗವಸಣಿಗೆಯನು ತುಳಿದು**=ಮುಸುಕನ್ನು ತೆಗೆದುಹಾಕಿ; **ಕಾಮಾದಿಗಳ ಮಲವನು**=ಕಾಮಕ್ರೋಧಗಳ ರೂಪವಾದ ಹೊಲಸನ್ನು (ಅವೇ ಹೊಲಸು, ಅವುಗಳಿಗಿಂತ ಬೇರೇ ಹೊಲಸಿಲ್ಲ); **ಪಳುಕು**=ಸ್ಫಟಿಕ; * **ಅಂತರ್ಮುಖದ ಬುದ್ಧಿಯೆ**=ಅಂತಃಕರಣದ ಬುದ್ಧಿ;

**ಟಿಪ್ಪಣಿ-೧:** ಷೋಡಶೋಪಚರ-ಕವಿ ಇಲ್ಲಿಂದ ಮುಂದಕ್ಕೆ (ಅ-೧೧, ಪ-೧೦ರಿಂದ ಪ-೧೮ರವರೆಗೆ), ೧) ಸಿಂಹಾಸನ, ೨) ಆವಾಹನ, ೩) ಅರ್ಘ್ಯ; ೪) ಪಾದ್ಯ; ೫) ಸ್ನಾನ; ೬) ವಸ್ತ್ರ; ೭) ಆಭರಣ; ೮) ಉಪವೀತ; ೯) ಅನುಲೇಪ (ಗಂಧ); ೧೦) ಪುಷ್ಪ; ೧೧) ಧೂಪ; ೧೨) ದೀಪ; ೧೩) ನೈವೇದ್ಯ; ೧೪) ತಾಂಬೂಲ; ೧೫) ಪ್ರದಕ್ಷಿಣೆ; ೧೬) ನಮಸ್ಕಾರ ಎಂಬುದಾಗಿ ಷೋಡಶೋಪಚಾರಗಳನ್ನು ವಿವರಿಸಿದ್ದಾನೆ.

**ಟಿಪ್ಪಣಿ-೨:** * ಉಪಚಾರಗಳು ೧೬ ಎಂಬುದು ಸಾಮಾನ್ಯವಾದುದು. ಆದರೆ ಪಂಚೋಪಪದ್ಧತಿ (ಪಂಚೋಪಚಾರ) ಅಷ್ಟೋಪಚಾರ, ದಶೋಪಚಾರ, ಅಷ್ಟಾದಶೋಪಚಾರ ಇತ್ಯಾದಿ ಉಪಚಾರಗಳಿವೆ ಇವುಗಳಲ್ಲಿ ಉಪಭೇದಗಳಿವೆ. ವಿವರಗಳಿಗೆ ಶ್ರೀವತ್ಸನಿಘಂಟು ಪುಟ-೪೬-೪೭ ನೋಡಿ.

---

**ಸತ್ತೆನಿಪ್ಪಾಕಾರವಾಗಿಹ,**
**ಚಿತ್ತಿನ ಪ್ರಭೆ ಥಾಳಿಸುತ್ತಿಹ,**
**ಚಿತ್ತವಾದಾನಂದವೆನಿಸುವ ಸೊಬಗು ರಂಜಿಸುವ, ।**
**ಪ್ರತ್ಯಗಾತ್ಮನೆನಿಪ್ಪ ಮೋಹನ**
**ಮೂರ್ತಿಮತಿಯೆನಿಪಾಸನದಿ ಪೊಳೆ**
**ಯುತ್ತಿಹುದೆ ಆವಾಹನೆಯದುಪಚಾರ ಕೇಳೆಂದ ॥ ॥೧೧॥**

**ತಾತ್ಪರ್ಯ:** ಸಚ್ಚಿದಾನಂದಮಯನಾದ ಪರಮಾತ್ಮನಲ್ಲಿ ಸತ್ತೆಂಬ ಸಾಕಾರವೇ ನಿಜವೆಂದೂ ಚಿತ್ತೆಂಬ ಕಾಂತಿಯೇ ಪ್ರಜ್ವಲಿಸುವ ಬೆಳಕೆಂದೂ ಶಿವಮಯವಾದ ಆನಂದವೆಂಬ ಸುಖವೇ ಆಕರ್ಷಕವಾಗಿ ಹೊಳೆಯುತ್ತಿರುವ ಪ್ರತ್ಯಗಾತ್ಮನೆನಿಸಿಕೊಳ್ಳಲು ಸುಂದರಾಕಾಶ ಬ್ರಹ್ಮ ಬುದ್ಧಿಯೆಂಬ ಪೀಠದ ಮೇಲೆ ವಿರಾಜಿಸುತ್ತಿಹನೆಂದು ಭಾವಿಸುವುದೇ ಆವಾಹನೆ ಎಂಬ ಎರಡನೇ ಉಪಚಾರ ಎನಿಸಿದೆ.

**ಶಬ್ದಾರ್ಥ:** * ಥಾಳಿಸುತ್ತಿಹ=ಪ್ರಜ್ವಲಿಸುತ್ತಿಹ; * ಸಿಂಹಾಸನ=ಆಸನ, ಪೀಠ; * ಆವಾಹನ= ಷೋಡಶೋಪಚಾರಗಳಲ್ಲಿ ಒಂದು;

**ಪಾಠಾಂತರ:** ಚಿತ್ರವಾದ=ಚಿತ್ತವಾದ (ಕು)

**ಟಿಪ್ಪಣಿ:** ಈ ಪದ್ಯಕ್ಕೆ ಹೊ.ಚಿ. ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

**ಎಲೆ ಮಗನೆ, ಕೇಳರ್ಘ್ಯವೆಂದೆನೆ**
**ಬೆಲೆಯೆನಿಪುದದರಿಂದನರ್ಘ್ಯಕೆ**
**ಬೆಲೆಯೆ? ಬ್ರಹ್ಮವನರ್ಘ್ಯವೆಂದೆನಲರ್ಘ್ಯದುಪಚಾರ; ।**
**ತಿಳಿದು ತನ್ನೊಳು ತನ್ನ ತಾನೇ**
**ಅಳವುಗೊಡದಾನಂದಮಯವಹ**
**ಜಲಧಿಯೆಂಬುದೆ ಪಾದ್ಯಮೆಂಬುಪಚಾರ ಕೇಳೆಂದ ॥ ॥೧೨॥**

**ತಾತ್ಪರ್ಯ:** ಎಲೈ ಶುಕನೆ ಕೇಳು, ಅರ್ಘ್ಯವೆಂದರೆ ಬೆಲೆಯೆಂದು ಅರ್ಥವು. ಅನರ್ಘ್ಯವೆಂದರೆ ಅಮೂಲ್ಯವಾದುದು. ಬ್ರಹ್ಮವು ಅನರ್ಘ್ಯ ವಸ್ತುವಾದುದರಿಂದ ಅದಕ್ಕೆ ಬೆಲೆ ಕಟ್ಟಲಾಗುವುದಿಲ್ಲ. ಆದ್ದರಿಂದ ಅರ್ಘ್ಯವು ಉಪಚಾರ. ತನ್ನನ್ನು ತಾನೇ ತನ್ನಲ್ಲಿ ತಿಳಿದುಕೊಂಡು ಅಪ್ರಮೇಯವಾದ ಆನಂದಮಯವಾದ ಸಮುದ್ರವೆಂದು ಹೇಳುವುದೇ ಪಾದ್ಯವೆಂದು ಕಾಲನ್ನು ತೊಳೆಯುವುದು.

**ಶಬ್ದಾರ್ಥ:** ಅಳವುಗೊಡದ=ಅಳತೆಗೆಸಿಕ್ಕದ; ಬೆಲೆಯೆನಿಪುದು=ಬೆಲೆಯೆಂದರ್ಥವಾಗುವುದು; * ಪಾದ್ಯ=ನಾಲ್ಕನೆಯ ಉಪಚಾರ, ಕಾಲನ್ನು ತೊಳೆಯುವುದು, ಕಾಲನ್ನು ನೀರಿನಿಂದ ತೊಳೆಯುವದು, ಪಾದಪ್ರಕ್ಷಾಲನ; * ಅರ್ಘ್ಯ=ಮೂರನೆಯ ಉಪಚಾರ, ದೇವತೆಗಳಿಗೂ ಪೂಜ್ಯರಿಗೂ ಕೈತೊಳೆಯಲು ಕೊಡುವ ನೀರು.

---

**ಮೂರವಸ್ಥೆಗಳಲ್ಲಿ ತೋರುವ**
**ಘೋರತಾಪತ್ರಯಗಳಿಗೆ ತಾ**
**ದೂರವಾಗಿಹೆನೆಂದರಿವುದೇ ಸ್ನಾನದುಪಚಾರ; ।**
**ತೋರುವೀ ವಿಶ್ವವನು ವ್ಯಾಪಿಸಿ**
**ಮೀರಿ ಮಿಕ್ಕಿಹೆನೆಂದು ತನ್ನನು**
**ಬೇರೆ ನಿಜಚೈತನ್ಯವೆಂಬುದೆ ವಸ್ತ್ರದುಪಚಾರ ॥ ॥೧೩॥**

**ತಾತ್ಪರ್ಯ:** ಜಾಗ್ರತೆ, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿ ತೋರುತ್ತಿರುವ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ಘೋರ ತಾಪತ್ರಯಗಳಿಗೆ ದೂರವಾಗಿರುವೆ ಎಂದು ತಿಳಿಯುವುದೇ ಸ್ನಾನವೆಂಬ ಐದನೆಯ ಉಪಚಾರ. ಹೊರಗೆ ಕಣ್ಣಿಗೆ ಕಾಣುವ ಈ ವಿಶ್ವವನ್ನೆಲ್ಲಾ ವ್ಯಾಪಿಸಿ ಅದನ್ನೂ ಮೀರಿ ನಾನು ಮುಂದಕ್ಕೆ ಸಾಗಿರುವೆನು ಎಂದು ಈ ದೃಶ್ಯ ಜಗತ್ತಿನ ಆಚೆಯ ನಿಜ ಚೈತನ್ಯವೇ ನಾನು ಎಂದು ಭಾವಿಸುವುದು ವಸ್ತ್ರವೆಂಬ ಆರನೆಯ ಉಪಚಾರವಾಗಿದೆ.

**ಶಬ್ದಾರ್ಥ:** ಮೂರು ಸ್ಥಿತಿಗಳು (ಅ-೩, ಪ-೪೯ ನೋಡಿ).

**ಟಿಪ್ಪಣಿ:** **ಘೋರ ತಾಪತ್ರಯಂಗಳು**-(ಅ-೭, ಪ-೨೦ ನೋಡಿ) ಆಧ್ಯಾತ್ಮಿಕ (ಶರೀರದಲ್ಲಿ ಹುಟ್ಟಿದ ಕೇಡುಗಳು, ರೋಗಗಳು ಮೊದಲಾದುದು) ಆಧಿಭೌತಿಕ (ಇತರ ಪ್ರಾಣಿಗಳಿಂದ ಆದ ಹಾನಿ) ಆಧಿದೈವಿಕ (ಭೂತ ಪಂಚಕಗಳಿಂದ ಆಗುವ ಕೇಡು).
ವಸ್ತ್ರದುಪಚಾರ=ಆರನೆಯ ಉಪಚಾರ, ವಸ್ತ್ರದಿಂದ ಕೈಕಾಲುಗಳನ್ನು ಒರೆಸುವುದು; ಸ್ನಾನದುಪಚಾರ=ಐದನೆಯ ಉಪಚಾರ, ದೇವತೆ, ಪೂಜ್ಯರ ಮೈತೊಳೆಯುವುದು

---

**ತನ್ನ ತೇಜಸ್ಸಿನಿಂದ ಸಕಲಕೆ**
**ಬಣ್ಣಗೊಡುವದು ಬ್ರಹ್ಮವೆಂದದ**
**ನಿರ್ಣಯಿಸಿ ತಿಳಿದಿರ್ಪುದೇ ಆಭರಣದುಪಚಾರ; ।**

ಪೂರ್ಣಸಚ್ಚಿತ್ಸುಖವೆನಿಪ ಚೈ
ತನ್ಯಸೂತ್ರದೊಳಖಿಳವನು ಸಂ
ಪನ್ನವೆನುತಾವರ್ತಿಪುದೆ ಉಪವೀತದುಪಚಾರ ॥ ॥೧೪॥

ತಾತ್ಪರ್ಯ: ಬ್ರಹ್ಮವು ತನ್ನ ತೇಜಸ್ಸಿನಿಂದ ಸಮಸ್ತ ವಸ್ತುವನ್ನು ಒಪ್ಪ ಮಾಡಿ, ಮೆರುಗೀಯುತ್ತದೆ ಎಂದು ಖಚಿತವಾಗಿ ತಿಳಿಯುವುದೇ ಆಭರಣವೆಂಬ ಏಳನೆಯ ಉಪಚಾರ. ಪರಿಪೂರ್ಣ ಸಚ್ಚಿದಾನಂದವು ಉಳಿದೆಲ್ಲವನ್ನು ನಿಜಚೈತನ್ಯವೆಂಬ ಸೂತ್ರದಲ್ಲಿ ಪೋಣಿಸಿದೆಯೆಂದು ಮತ್ತೆ ಮತ್ತೆ ಚಿಂತಿಸುವುದೇ ಯಜ್ಞೋಪವೀತವೆಂಬ ಎಂಟನೆಯ ಉಪಚಾರ.

ಶಬ್ದಾರ್ಥ: * ತೇಜಸ್ಸಿಂದ=ಕಾಂತಿಯಿಂದ; ಸಂಪನ್ನವು=ಪೋಣಿಸಿದ್ದಾಗಿರುವದೆಂದು; ಆವರ್ತಿಪುದೆ=ಕಲ್ಪನೆಯನ್ನು ಮತ್ತೆ ಮತ್ತೆ ಮನಸ್ಸಿಗೆ ತಂದುಕೊಳ್ಳುವುದು.

---

ಸರ್ವದೊಳುತಾನಿದ್ದು ತನ್ನೊಳು
ಸರ್ವವೆಲ್ಲವ ನಿಟ್ಟಿಸುತ, ನಿಜ
ಸರ್ವದೊಳು ನಿರ್ಲೇಪವೆನಲನುಲೇಪದುಪಚಾರ; ।
ದುರ್ವಿಷಯಗಳ ನೆನೆವ ಮನಸಿನ
ಸರ್ವವಾಸನೆಯಳಿಯಲದರೊಳು
ಪರ್ವಿದಾ ನಿರ್ವಾಸನೆಯೆ ತಾ ಪುಷ್ಪದುಪಚಾರ ॥ ॥೧೫॥

ತಾತ್ಪರ್ಯ: ತಾನೇ ಸರ್ವ ವಸ್ತುಗಳಲ್ಲೂ ಇದ್ದುಕೊಂಡು, ಸಮಸ್ತವನ್ನೂ ತನ್ನಲ್ಲಿಯೇ ನೋಡುತ್ತ ಇರುತ್ತ ಸಮಸ್ತ ವಸ್ತುಗಳಲ್ಲೂ ಬೆರೆಯದೆ ನಿರ್ಲಿಪ್ತವಾಗಿರುವುದು ಅನುಲೇಪ (ಗಂಧ) ಎಂಬ ೯ನೇ ಉಪಚಾರ. ದುಷ್ಪವರ್ತನೆಗೆ ಎಡೆಗೊಡತಕ್ಕ ಎಲ್ಲ ಬಗೆಯ ವಾಸನೆಗಳು ನಶಿಸಿದಾಗ, ಎಲ್ಲ ಕಡೆ ಹಬ್ಬುವ ವಾಸನಾಶೂನ್ಯತೆಯೇ ಪುಷ್ಪವೆಂಬ ಹತ್ತನೇ ಉಪಚಾರ.

ಶಬ್ದಾರ್ಥ: ನಿರ್ಲೇಪ=ನಿರ್ಲಿಪ್ತ; ಅನುಲೇಪ=ಗಂಧ; * ದುರ್ವಿಷಯ=ದುಷ್ಪವರ್ತನೆಗಳು; * ನಿರ್ವಾಸನೆ=ವಾಸನಾರಹಿತವಾಗಿರುವುದು, ಜನ್ಮಾಂತರದ ವಿಷಯಸ್ಮರಣೆ, ಬಯಕೆಗಳಿಲ್ಲದಿರುವುದು. * ಪುಷ್ಪದುಪಚಾರ=ಪುಷ್ಪಾರ್ಚನೆ ಎಂಬ ಹತ್ತನೇ ಪೂಜಾ ವಿಧಾನ.

ಟಿಪ್ಪಣಿ: ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ. ಶಬ್ದಾರ್ಥ ಅನುವಾದಕನದು.

---

ಕುಂದುಹೆಚ್ಚುಗಳಿಲ್ಲದಮಲಾ
ನಂದವಹ ಪರಬೊಮ್ಮ ನಿರ್ಗುಣ,
ಗಂಧವಾಸನೆ ಹೊಂದದೆಂಬುದೆ ಧೂಪದುಪಚಾರ; ।

**ಚಂದಚಂದದಿ ತೋರ್ಪ ತತ್ತ್ವದ**
**ಬೃಂದದೊಳಹೊರಗೆಲ್ಲ ಬೆಳಗುವ**
**ದೊಂದೆ ತೇಜೋರಾಶಿಯೆಂಬುದೇ ದೀಪದುಪಚಾರ ॥ ॥೧೬॥**

**ತಾತ್ಪರ್ಯ:** ಹೆಚ್ಚು ಕಡಿಮೆಗಳು, ಕುಂದುಕೊರತೆಗಳು ಇಲ್ಲದೆ ನಿರ್ಮಲವು ಆನಂದಮಯವೂ ಆದ ಪರಬ್ರಹ್ಮ ನಿರ್ಗುಣ ಸ್ವರೂಪದ್ದಾಗಿದೆ. ಗಂಧದ ಅನುಲೇಪನ ಹೊಂದಿರುವುದಿಲ್ಲ ಎಂದು ತಿಳಿಯುವುದೇ ಧೂಪೋಪಚಾರವೆಂದ ಹನ್ನೊಂದನೆಯ ಉಪಚಾರ; ಬಗೆ ಬಗೆಯಾಗಿ ತೋರುತ್ತಲಿರುವ ತತ್ತ್ವಗಳ ಒಳಗೂ ಹೊರಗೂ ಪ್ರಕಾಶಿಸುತ್ತಿರುವ ಅಖಂಡ ತೇಜೋರಾಶಿಯೇ ದೀಪದುಪಚಾರ ಎಂಬ ಹನ್ನೆರಡನೇ ಉಪಚಾರವಾಗಿದೆ.

**ಶಬ್ದಾರ್ಥ:** * **ಕುಂದು ಹೆಚ್ಚು**=ಹೆಚ್ಚು ಕಡಿಮೆಗಳು, ಕುಂದುಕೊರತೆಗಳು; * **ಚಂದಚಂದದಿ** =ಬಗೆಬಗೆಯಾಗಿ; * **ತೋರ್ಪ**=ತೋರುತ್ತಲಿರುವ; * **ಬೃಂದ**=ಸಮೂಹ;

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ ಶಬ್ದಾರ್ಥ ಅನುವಾದಕನದು.

---

**ಭೋಗ, ಭೋಗ್ಯವು, ಭೋಕ್ತೃವೆಂಬ ವಿ**
**ಭಾಗವಿಲ್ಲದ ನಿತ್ಯತೃಪ್ತಗೆ**
**ಭೋಗ ತನ್ನಲ್ಲೆಂಬುದೇ ನೈವೇದ್ಯದುಪಚಾರ; ।**
**ರಾಗವಿಲ್ಲದೆ, ರಜತಮಂಗಳ**
**ನೀಗಿ, ನಿರ್ಗುಣವಾದ ನಿಜಸುಖ**
**ಸಾಗರವು ತಾನೆಂಬುದೇ ತಾಂಬೂಲದುಪಚಾರ ॥ ॥ ೧೭ ॥**

**ತಾತ್ಪರ್ಯ:** ಸುಖಾನುಭವ, ಸುಖವಸ್ತು ಸುಖಾನುಭವಿ ಎಂಬ ತ್ರಿಪುಟಿಯಿಲ್ಲದೆ ಎಂದರೆ ಕರ್ಮಫಲಗಳು, ಕರ್ಮಫಲಗಳನ್ನು ಅರಿಯುವುದು. ಕರ್ಮಫಲಗಳನ್ನು ಅನುಭವಿಸು ವವನು ಎಂಬುವುಗಳನ್ನು ಮೀರಿದ ನಿತ್ಯತೃಪ್ತನಿಗೆ. ಇವುಗಳು ತನ್ನದಲ್ಲವೆಂದು ತಿಳಿಯುವುದೇ ನೈವೇದ್ಯವೆಂಬ ಉಪಚಾರವಾಗಿದೆ. ಯಾವ ಮೋಹವೂ ಇಲ್ಲದೆ, ರಜೋಗುಣ, ತಮೋಗುಣಗಳಿಂದ ದೂರನಾಗಿ ನಿರಾಕಾರನಾದ ಪರಬ್ರಹ್ಮನೇ ಆನಂದಸಾಗರ ತಾನೆಂದು ತಿಳಿಯುವುದೇ ತಾಂಬೂಲವೆಂಬ ಉಪಚಾರವು.

**ಶಬ್ದಾರ್ಥ:** * **ಭೋಗ**=ಸುಖಾನುಭವ; * **ಭೋಗ್ಯ**=ಸುಖವಸ್ತು; * **ಭೋಕ್ತೃ**=ಸುಖಾನುಭವಿ; * ವಿಭಾಗವಿಲ್ಲದ=ತ್ರಿಪುಟಿಯಿಲ್ಲದ; **ಭೋಗತನ್ನಲ್ಲೆಂಬುದೇ**=ಭೋಗ ತನ್ನದಲ್ಲವೆಂದು ತಿಳಿಯುವುದು; * **ರಜ ತಮಂಗಳ**=ರಜೋಗುಣ ತಮೋಗುಣಗಳನ್ನು; **ತಾಂಬೂಲದುಪಚಾರ**= ಷೋಡಶೋಪಚಾರಗಳಲ್ಲಿ ಹದಿನಾಲ್ಕನೇ ವಿಧಾನ;**ನೈವೇದ್ಯದುಪಚಾರ**=ನಿರ್ಗುಣಾರಾಧನೆಯ ಹದಿಮೂರನೇ ಪೂಜಾ ವಿಧಾನ;

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ. ಶಬ್ದಾರ್ಥವು ಅನುವಾದಕನದು.

---

ಪಾವನ, ಪರಾನಂದ, ಪರಮ, ನಿ
ರಾವಿಲಾತ್ಮಕ, ನಿರ್ವಿಕಾರ, ನಿ
ರಾವರಣ ತಾನೆನೆ, ಪ್ರದಕ್ಷಿಣೆಯೆಂಬುದುಪಚಾರ; ।
ಜೀವ ಪರಮಾತ್ಮೈಕ್ಯವೆಂಬೀ
ಭಾವಭೇದಭ್ರಾಂತಿಯಳಿದ ನಿ
ಜಾವಬೋಧವೆ ತಾನೆನೆ ನಮಸ್ಕಾರದುಪಚಾರ ॥ ॥ ೧೮ ॥

ತಾತ್ಪರ್ಯ: ಪರಿಶುದ್ಧವಾಗಿ, ಶ್ರೇಷ್ಠವಾಗಿ, ಆನಂದಮಯವಾಗಿ ವಿಕಾರರಹಿತನಾಗಿ, ಕಲ್ಮಷರಹಿತಸ್ವರೂಪದಿಂದ ಆವರಣರಹಿತವಾಗಿರುವ ವಸ್ತುವೇ ತಾನೆಂದು ತಿಳಿಯುವುದೇ ಪ್ರದಕ್ಷಿಣೆಯೆಂಬ ಉಪಚಾರವು. ಜೀವಾತ್ಮ ಪರಮಾತ್ಮ ಒಂದೇ ಎಂಬ ಭಾವದಿಂದ ಭೇದಭ್ರಾಂತಿಯನ್ನು (ಮಾಯೆಯನ್ನು) ಹೋಗಲಾಡಿಸಿಕೊಂಡು, ಅಭೇದಜ್ಞಾನದಿಂದ ನಿಜ ಜ್ಞಾನಸ್ವರೂಪವೇ ತಾನೆಂದು ತಿಳಿಯುವುದೇ ನಮಸ್ಕಾರವೆಂಬ ಉಪಚಾರವು.

ಶಬ್ದಾರ್ಥ: * ಪಾವನ=ಪರಿಶುದ್ಧಿ; * ಪರಾನಂದ=ಶ್ರೇಷ್ಠಾನಂದ; ನಿರಾವಿಲಾತ್ಮಕ=ಕಲ್ಮಷರಹಿತವಾದ ಸ್ವರೂಪವುಳ್ಳವನು; * ನಿರ್ವಿಕಾರ=ವಿಕಾರರಹಿತನು; * ನಿರಾವರಣ=ಆವರಣ ಮುಕ್ತ; * ಅವಬೋಧೆ=ಜ್ಞಾನ, ಅರಿವು;

ಪಾಠಾಂತರ: ನಿರಾವಿಲಾತ್ಮಕ=ನಿರಾವಲಂಬನ (ಕು); ಕುಮಾರಚಾರ್ಯ ಅವರ ಪಾಠವನ್ನು ಇಲ್ಲಿ ಹೊಚಿ ಅವರು ಸೂಚಿಸಿದ್ದಾರೆ ಅಲ್ಲದೆ ಇನ್ನು ಕೆಲವು ಪ್ರತಿಗಳಲ್ಲಿ ಈ ಪಾಠ ಇರುವುದನ್ನು "ಈ ಸ್ಥಳದಲ್ಲಿ ಕೆಲವು ಕಡೆ" ನಿರಾವಲಂಬನ 'ಎಂದೂ ಇದೆ' ಇಂದು ಹೇಳಿದ್ದಾರೆ.

---

ವಿಷಮವಹ ಮಾಯಾವಿಲಾಸವೆ
ಪಸರಿಸುತ ಜಗವಾಗಿ ತೋರ್ಪುದು
ಬಿಸಿಲದೊರೆಯಂದದಲಿ; ಪುಸಿಯೆಂದದ ವಿಸರ್ಜಿಸಲು ।
ಅಸಮತೇಜೋರಾಶಿ ತಾನಾ
ಗೆಸೆದು ತನ್ನೊಳು ತಾನೆ ರಮಿಸು
ತ್ತುಸುರದಿರ್ಪನುಭವ ವಿಸರ್ಜನೆಯೆಂಬುದುಪಚಾರ ॥ ॥೧೯॥

ತಾತ್ಪರ್ಯ: ಘೋರವಾದ ಅವಿದ್ಯೆಯೆಂಬ ಮಾಯಾವಿಲಾಸವೇ ವಿಷಯವಾಗಿ ಹರಡಿಕೊಂಡು ಪ್ರಪಂಚವೆನ್ನಿಸಿ ತೋರುತ್ತಲಿದೆ. ಇದು ಸುಳ್ಳಾದುದು. ಬಿಸಿಲ ಮರೀಚಿಕೆಯಂತೆ ಭ್ರಮಾಧೀನವಾದುದು ಎಂದು ತಿಳಿದು ದೂರ ಮಾಡಿದರೆ ಅಪಾರ ಜ್ಞಾನರಾಶಿಯಾದ ಪರಬ್ರಹ್ಮಸ್ವರೂಪವೇ ತಾನೆಂದು ತಿಳಿದು ಮೌನಿಯಾಗಿ ಆತ್ಮಾರಾಮನಾಗಿರುವ ಅನುಭವವೇ ವಿಸರ್ಜನೆಯೆಂಬ ಉಪಚಾರವು.

**ಶಬ್ದಾರ್ಥ:** * ವಿಷಮವಹ=ಘೋರವಾದ; * ಪಸರಿಸುತ=ಹರಡಿಕೊಂಡು; * ಬಿಸಿಲದೊರೆ= ಮರೀಚಿಕೆ; * ಪುಸಿ=ಸುಳ್ಳು, ಭ್ರಮಾಧೀನ; * ವಿಸರ್ಜಿಸಲು=ದೂರ ಮಾಡಿದರೆ; * ಅಸಮತೇಜೋ ರಾಶಿ=ಅಪಾರ ಜ್ಞಾನರಾಶಿಯಪರಬ್ರಹ್ಮಸ್ವರೂಪ; * ತನ್ನೊಳುತಾನೇ ರಮಿಸುತ್ತ=ಆತ್ಮಾರಾಮನಾಗಿ; * ಉಸುರದಿರ್ದ=ಮೌನಿಯಾಗಿ

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ; ಶಬ್ದಾರ್ಥ ಅನುವಾದಕನದು.

ವಿಸರ್ಜನೆ ಎಂಬುದುಪಚಾರ=ಹದಿನಾರನೇ ಉಪಚಾರ (ಪೂಜಾ ವಿಧಾನ)

---

**ಈ ಪರಿಯಲುಪಚಾರ ಕಲ್ಪನೆ**
**ಯಾ ಪರಬ್ರಹ್ಮದಲಿ ಸ್ವರ್ಣಾದಿ**
**ದೀಪಿಸುತ್ತಿಹ ದೇವತಾಪ್ರತಿಮಾಕೃತಿಯವೋಲು ।**
**ದೀಪಧೂಪಗಳೆಂಬ ನೆಪದಲಿ**
**ವ್ಯಾಪಿಸಿದ ಮನನವನು ನಿನಗೆ ನಿ**
**ರೂಪಿಸಿದೆನದರಿಂದ ದೃಢತರವಹುದು ನಿಜಬೋಧೆ ॥ ॥೨೦॥**

**ತಾತ್ಪರ್ಯ:** ಬಂಗಾರದ ಕಾಂತಿಯಿಂದ ಬೆಳಗುತ್ತಿರುವ ದೇವತಾ ಪ್ರತಿಮೆಗಳಿಗೆ ಮಾಡುವ ಷೋಡಶೋಪಚಾರಗಳ ಹಾಗೆ ಆ ಪರಬ್ರಹ್ಮನಲ್ಲಿ ನಿರ್ಗುಣೋಪಚಾರ ಗಳನ್ನು ಕಲ್ಪಿಸಿಕೊಂಡು ಮಾನಸ ಪೂಜೆಯನ್ನು ಸರ್ವದರಲ್ಲಿಯೂ ಬೆಳಗುತ್ತಿರುವ ಆ ಪರಬ್ರಹ್ಮನಿಗೆ ದೀಪಧೂಪಾದಿಗಳೆಂಬ ಪೂಜೆಗಳ ನೆಪದಲ್ಲಿ ಮನನವೆಂಬ ಧ್ಯಾನವನ್ನು ನಿನಗೆ ನಿರೂಪಿಸಿದೆನು. ಏಕೆಂದರೆ ಈ ಮನನದಿಂದ ಸತ್ಯಜ್ಞಾನವು ದೃಢಗೊಳ್ಳುತ್ತದೆ.

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಪಾಠಾಂತರ ಅನುವಾದಕನದು.

**ಪಾಠಾಂತರ:** ಸ್ವರ್ಣಾದಿ=ಸರ್ವಾದಿ (ಕು) ಸಾರ್ವಾದಿ (ಅರಾಸೇ); ದೀಪಧೂಪ=ಧೂಪದೀಪ (ಕು)

---

**ಪೂಜ್ಯ ಪೂಜಕವೆಂಬ ಭೇದವು**
**ನೈಜವೀ ಸಗುಣದಲಿ ತಿಳಿ ವಿ**
**ಭ್ರಾಜಮಾನದ ಬಿಂಬದಿಂ ಪ್ರತಿಬಿಂಬದಂದದಲಿ; ।**
**ಈ ಜಗತ್ಸಾಕ್ಷಿಕವೆ ಮಾನಸ**
**ರಾಜಿಯಲಿ ಪ್ರತಿಫಲಿಸಿ ಜೀವ ಸ**
**ಮಾಜವೆನಿಸುತ ಪೂಜ್ಯಪೂಜಕಭಾವವಾಯ್ತೆಂದ ॥ ॥೨೧॥**

**ತಾತ್ಪರ್ಯ:** ಸಗುಣಬ್ರಹ್ಮದಲ್ಲಿ ಪೂಜೆಗೊಳ್ಳುವ ವಸ್ತು ಪೂಜೆ ಮಾಡುವೆಂಬ ಭೇದವು ಸಹಜವಾದುದು. ಇದು ಪ್ರಕಾಶಮಾನವಾದ ಬಿಂಬದಿಂದ ಆದ ಪ್ರತಿಬಿಂಬದಂತೆ ತೋರುವುದು. ಈ ಗುಣಯುಕ್ತವಾದ ಬ್ರಹ್ಮದೊಳಗೆ ಗುಣರಹಿತವಾದ ಬ್ರಹ್ಮವು

ನಮ್ಮ ಮನಸ್ಸುಗಳ ಸಮೂಹದಲ್ಲಿ ಪ್ರತಿಫಲಿಸಿ ಜೀವ ಸಮೂಹವೆನಿಸಿಕೊಂಡು ಪೂಜ್ಯ ಪೂಜಕಭಾವದಿಂದ ತೋರುತ್ತಿದೆ.

**ಶಬ್ದಾರ್ಥ:** ನೈಜವು=ಸ್ವಾಭಾವಿಕವು; ಮಾನಸರಾಜಿ=ಮನಸ್ಸುಗಳ ಸಮೂಹ; * ಪೂಜ್ಯ= ಪೂಜೆಗೊಳ್ಳುವ ವಸ್ತು; * ಪೂಜಕ=ಪೂಜೆ ಮಾಡುವ ವ್ಯಕ್ತಿ; * ಬಿಂಬ=ನಿರ್ಗುಣಬ್ರಹ್ಮ; ಪ್ರತಿಬಿಂಬ=ಸಗುಣಬ್ರಹ್ಮ;

---

**ತನಯ ಕೇಳ್ಳೈ ನಿರ್ಗುಣಾರಾ**
**ಧನೆಯನಭ್ಯಾಸವನು ಮಾಡಲು**
**ನೆನಹಡಗಿ, ಮನವಳಿದು, ತಾನೇ ಬ್ರಹ್ಮವೆಂದೆಂಬ ।**
**ಅನುಭವವು ಪುಟ್ಟಿದಪುದದರಿಂ**
**ಘನವೆನಿಪ ಸಂಸೃತಿಯಳಿದು ನಿನ**
**ಗನುಪಮ ಪರಾನಂದವೆನಿಸುವ ಮುಕ್ತಿಯಹುದೆಂದ ॥ ॥೨೨॥**

**ತಾತ್ಪರ್ಯ:** ಶುಕನೇ ಕೇಳು, ನಿರ್ಗುಣಾರಾಧನೆಯನ್ನು ಸತತವಾಗಿ ಅಭ್ಯಾಸ ಮಾಡಿದರೆ, ಬಹಿರಂಗ ವ್ಯಾಪಾರದ ನೆನಹುಗಳು ಅಡಗಿ ಚಂಚಲವಾದ ಮನಸ್ಸು ಲಯವಾಗಿ ಸ್ಥಿರ ಚಿತ್ತದಲ್ಲಿ ಅಹಂ ಬ್ರಹ್ಮಾಸ್ಮಿ ಎಂಬ ಅನುಭವ ಜ್ಞಾನವು ಉಂಟಾಗುತ್ತದೆ. ಅದರ ಫಲವಾಗಿ ಗಾಢವಾದ ಸಂಸಾರ ಬಂಧನ ನಾಶವಾಗಿ ಅಸಮಾನವಾದ ದಿವ್ಯಾನಂದ ಮಯವಾದ ಕೈವಲ್ಯವು ದೊರಕುತ್ತದೆ.

**ಶಬ್ದಾರ್ಥ:** * ತನಯ ಕೇಳ್ಳೈ=ಶುಕನೇ ಕೇಳು; * ನೆನಹು=ನೆನಪು; ಸ್ಮರಣೆ; * ಮನವಳಿದು=ಮನಸ್ಸು ಲಯವಾಗಿ; * ತಾನೇ ಬ್ರಹ್ಮವೆಂದೆಂದ=ಅಹಂ ಬ್ರಹ್ಮಾಸ್ಮಿ ಎಂಬ ಅನುಭವವು; * ಪರಾನಂದ= ದಿವ್ಯಾನಂದ; * ಮುಕ್ತಿ=ಕೈವಲ್ಯ;

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

**ಈ ಜಗತ್ತಿನ ಜನರು ಮಾಡುವ**
**ಪೂಜೆಗಳು ಬಹುವಿಧಗಳಾಗಿಯೆ**
**ರಾಜಿಸುತ್ತಿಹವವರೊಳಗೆ ಮಿಗಿಲಾದ ಪೂಜೆಯಲಾ! ।**
**ಸೋಜಿಗವನೇನೆಂಬೆನಿದು ನಿ**
**ರ್ವ್ಯಾಜವಹ ನಿರುಪಾಧಿ ಸುಖಸಾ**
**ಮ್ರಾಜ್ಯಸಂಪತ್ಪ್ರಾಪ್ತಿ ಮುಕ್ತಿಯನಿತ್ತು ಸಲಹುವದು ॥ ॥೨೩॥**

**ತಾತ್ಪರ್ಯ:** ಈ ಪ್ರಪಂಚದಲ್ಲಿ ವಾಸ ಮಾಡುತ್ತಿರುವ ಜನರು ಮಾಡುವ ಪೂಜೆಗಳು ಅನೇಕ ವಿಧಗಳಾಗಿರುವುವು. ಅವುಗಳ ಪೈಕಿ ನಿರ್ಗುಣೋಪಾಸನೆಯೆಂಬುದೇ ಸರ್ವ ಶ್ರೇಷ್ಠ ಪೂಜಾ ವಿಧಾನವಾಗಿದೆ ಎಂಬ ಮಾತು ಅಚ್ಚರಿಯಾದರೂ ಸತ್ಯವಾದ

ಮಾತು ಮತ್ತೂ ಆಶ್ಚರ್ಯಕರವಾದ ಸಂಗತಿಯೆಂದರೆ ನಿರ್ದೋಷವಾದ ಉಪಾಧಿರಹಿತ ಸುಖ ಸಾಮ್ರಾಜ್ಯದ ಸಂಪತ್ತನ್ನು ದೊರಕಿಸಿಕೊಡುವ ಮೋಕ್ಷವು ದೊರಕಿಸಿ ನಮ್ಮನ್ನು ನಿರ್ಗುಣಾರಾಧನೆ ಸಂರಕ್ಷಿಸುತ್ತದೆ.

**ಶಬ್ದಾರ್ಥ:** * **ಅದರೊಳಗೆ ಮಿಗಿಲಾದ ಪೂಜೆ**=ನಿರ್ಗುಣಾರಾಧನೆಯ ಪೂಜೆ; * **ಸೋಜಿಗ ವನೇನೆಂಬೆನು**=ಆಶ್ಚರ್ಯ ಸಂಗತಿಯನ್ನು ಏನೆಂದು ಹೇಳಲಿ!; * **ನಿರ್ವಾಜವಹ**= ನಿರ್ದೋಷವಾದ; **ನಿರುಪಾಧಿ**=ಉಪಾಧಿರಹಿತ; * **ಮುಕ್ತಿ**=ಕೈವಲ್ಯ, ಮೋಕ್ಷ

**ಟಿಪ್ಪಣಿ:** ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

## ಆರಾಧನೆಯ ನಿರ್ಣಯದ ಉಪಸಂಹಾರ (೨೪-೨೬)

**ಪುಣ್ಯಶೈಲಗಳೊಳಗೆ ಶ್ರೀಗಿರಿ**
**ಯುನ್ನತವು; ನದಿಗಳೊಳು ಗುಣ**
**ಸಂಪನ್ನೆಯಾ ಪಾತಾಲಗಂಗೆಯು; ಶಕ್ತಿಪೀಠದಲಿ ।**
**ವರ್ಣ್ಯಳಾ ಭ್ರಮರಾಂಬಿಕೆಯು ತಿಳಿ;**
**ಚೆನ್ನ ಶ್ರೀಗಿರಿಮಲ್ಲಿಕಾರ್ಜುನ**
**ಗಿನ್ನು ಸರಿಯಹ ದೇವರುಂಟೇ? ಮೂರು ಲೋಕದಲಿ ॥ ॥೨೪॥**

**ತಾತ್ಪರ್ಯ:** ಪುಣ್ಯಫಲಪ್ರದವಾದ ಗಿರಿಗಳಲ್ಲಿ ಶ್ರೀಶೈಲವೇ ಶ್ರೇಷ್ಠ; ಪುಣ್ಯ ನದಿಗಳಲ್ಲೆಲ್ಲ ಪಾತಾಳಕ್ಕೆ ಹರಿದು ಬಂದ ಗಂಗೆಯೇ ಪರಮ ಗುಣ ಸಂಪನ್ನೆ; ಶಕ್ತಿ ಪೀಠಗಳಲ್ಲಿ ನೆಲೆಸಿರುವ ದೇವಿಯರಲ್ಲೆಲ್ಲಾ ಭ್ರಮರಾಂಬಿಕೆಯೇ ಅಧಿಕ ಶ್ಲಾಘನೆಗೆ ಪಾತ್ರಳು. ಇನ್ನು ಶ್ರೀಶೈಲದಲ್ಲಿರುವ ಚೆನ್ನಮಲ್ಲಿಕಾರ್ಜುನ ದೇವನಿಗೆ ಸರಿಸಾಟಿಯೆನಿಸಿದ ದೇವರು ಮೂರುಲೋಕಗಳಲ್ಲಿ ಬೇರೆ ಇಲ್ಲ.

**ಶಬ್ದಾರ್ಥ:** * **ಪುಣ್ಯಶೈಲಗಳೊಳಗೆ**=ಪುಣ್ಯಫಲಪ್ರದ ಗಿರಿಗಳಲ್ಲಿ; * **ಸರಿಯಹ**=ಸರಿಸಾಟಿಯಾದ; * **ಉನ್ನತವು**=ಶ್ರೇಷ್ಠವು; * **ಮೂರುಲೋಕಗಳಲ್ಲಿ**=ಸ್ವರ್ಗ, ಭೂಮಿ, ಪಾತಾಳಗಳಲ್ಲಿ; **ವರ್ಣ್ಯಳು**= ವರ್ಣನೆಗೆ ಯೋಗ್ಯಳಾದವಳು.

**ಟಿಪ್ಪಣಿ:** ಹದಿನೆಂಟು ಶಕ್ತಿಪೀಠಗಳಿವೆ. ಒಂದೊಂದು ಪೀಠದಲ್ಲಿ ಒಬ್ಬೊಬ್ಬ ಶಕ್ತಿ ದೇವಿ ನೆಲೆಸಿದ್ದಾಳೆ.

೧. ಮಹಾಲಕ್ಷ್ಮಿ (ಕೊಲ್ಲಾಪುರ); ೨. ಮಹಾದೇವಿ (ಜಲಂಧರ); ೩. ಕುಬ್ಜೆ (ಕನ್ಯಾಕುಬ್ಜ); ೪. ಸಿಂಹಿಕೆ (ಸಿಂಹಳ); ೫. ಮಣಿಕರ್ಣಿಕಾದೇವಿ (ಚಕ್ರವಾಡಿ); ೬. ಪೂರ್ಣಿಕಾದೇವಿ (ಪೂರ್ಣಕ್ಷೇತ್ರ); ೭. ಪಾರ್ವತಿ (ಹಿಮವತ್ಪರ್ವತ); ೮. ವಿಂಧ್ಯವಾಸಿನಿ (ವಿಂಧ್ಯಪರ್ವತ); ೯. ಮಹಾಕಾಲೇಶ್ವರಿ (ಉಜ್ಜಯಿನಿ); ೧೦. ಯೋಗಾವಳಿ (ಯೋಗಿನಿಪುರ); ೧೧. ಹೈಮವತಿ (ಹಿಮಾಚಲ); ೧೨. ಪದ್ಮವಾಸಿನಿ (ಶ್ವೇತದ್ವೀಪ); ೧೩. ಸುಪ್ರಭೆ (ಸುಮೇರು); ೧೪. ಭ್ರಮರಾಂಬಿಕೆ (ಶ್ರೀಶೈಲ); ೧೫. ಅನ್ನಪೂರ್ಣೆ (ಕಾಶಿ); ೧೬. ಕಾಳರಾತ್ರಿ (ಧರ್ಮಸ್ಥಳ); ೧೭. ಶಾರದೆ (ಶೃಂಗೇರಿ); ೧೮. ಲಲಿತೆ (ಅಂಬಿಕಾಕ್ಷೇತ್ರ). (ವಿವೇಕ ಚೂಡಾಮಣಿ, ೪-೪೦೨)

---

ಮನದ ಮಲಿನವ ತೊಳೆದು, ಶುಚಿಯಹ
ನೆನಹಿನುಡಿಗೆಯನುಟ್ಟು, ನಿರ್ಮಲ
ವೆನಿಪ ಭಸಿತವ ಪೂಸಿ, ಸ್ವಸ್ಥಾನದಲಿ ಕುಳ್ಳಿರ್ದು,
ಘನ ಪರಂಜ್ಯೋತಿಯನೆ ತಾನೆಂ
ದೆನಿಪ ಪೂಜೆಯ ಮಾಡಿ, ಮೋಕ್ಷಾಂ
ಗನೆಯನೊಲಿದಾವಾಗಳಾಕೆಯ ಕೂಡಿ ಸುಖಿಯಾಗು ॥ ॥೨೫॥

ತಾತ್ಪರ್ಯ: ಮನಸ್ಸಿನಲ್ಲಿರುವ ಕೊಳೆಗಳನ್ನು ತೊಳೆದುಕೊಂಡು ಪರಿಶುದ್ಧನಾಗಿ ಪವಿತ್ರವಾದ ಧ್ಯಾನವೆಂಬ ಮಡಿವಸ್ತ್ರವನ್ನು ಧರಿಸಿ, ನಿಷ್ಕಲ್ಮಷವಾದ ವಿಭೂತಿಯನ್ನು ಧರಿಸಿ ತನಗೆ ಯೋಗ್ಯವಾದ ಸ್ಥಾನದಲ್ಲಿ ಆಸೀನನಾಗಿ ಶ್ರೇಷ್ಠನಾದ ಪರಂಜ್ಯೋತಿ ಸ್ವರೂಪನು ನಾನೇ ಎಂಬ ಭಾವನೆಯಿಂದ ನಿರ್ಗುಣಾರಾಧನೆ ಮಾಡುತ್ತಾ ಮೋಕ್ಷಲಕ್ಷ್ಮಿಗೆ ಒಲಿದು ಸದಾ ಆಕೆಯ ಸಾನ್ನಿಧ್ಯದಲ್ಲಿ ಸುಖಿಯಾಗು.

ಶಬ್ದಾರ್ಥ: * ಮಲಿನ=ಕಶ್ಮಲ, ಕೊಳೆ; ನೆನಹಿನ ಉಡುಗೆ=ಧ್ಯಾನವೆಂಬ ಮಡಿವಸ್ತ್ರ; * ಭಸಿತ= ವಿಭೂತಿ; ಪೂಸಿ=ಬಳಿದುಕೊಂಡು; * ಸ್ವಸ್ಥಾನದಲಿ=ತನಗೆ ಯೋಗ್ಯವಾದ ಸ್ಥಾನದಲ್ಲಿ ಆಸೀನನಾಗಿ; * ಘನಪರಂಜ್ಯೋತಿಯನೆ ತಾನೆಂದೆನಿಪ=ಅಹಂಬ್ರಹ್ಮಾಸ್ಮಿ ಎಂದು; * ಮೋಕ್ಷಾಂಗನೆ=ಮೋಕ್ಷಲಕ್ಷ್ಮಿ

ಟಿಪ್ಪಣಿ: ಈ ಪದ್ಯಕ್ಕೆ ಹೊಚಿ ಅವರು ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

ಇಂತು ತತ್ತ್ವರಹಸ್ಯವನು ತಿಳಿ
ವಂತೆ ತನಯಗೆ ಬೋಧಿಸಲು ನಿಜ
ಶಾಂತಿ ಸುಖವಳವಟ್ಟು, ಹರ್ಷೋತ್ಕರ್ಷದುಬ್ಬಿನಲಿ ।
ಅಂತರಂಗದೊಳುಕ್ಕಿ, ಪುಳಕದ
ಲಂತಿದಿಂತೆನಲರಿಯದಚಲ
ಸ್ವಾಂತ ಸಹಜಾನಂದಗುರುಪದಚಿಂತೆಯಲಿ ನಿಂದ ॥ ॥೨೬॥

ತಾತ್ಪರ್ಯ: ಈ ರೀತಿಯಾಗಿ ಚೆನ್ನಾಗಿ ಅರ್ಥವಾಗುವ ಹಾಗೆ ಅದ್ವೈತ ಜ್ಞಾನವನ್ನು ಶುಕನಿಗೆ ವ್ಯಾಸನು ಬೋಧಿಸಿದ ಪರಿಣಾಮವಾಗಿ ಶುಕನು ನಿಜವಾದ ಮನಶ್ಶಾಂತಿಯನ್ನು ಹೊಂದಿ, ಸಂತೋಷಾತಿಶಯದಿಂದ ಉಬ್ಬಿ ಅಂತರಂಗದಲ್ಲಿ ಪುಳಕ ಜಲ ಉಕ್ಕಿ ಬರಲು ಅನಿರ್ವಚನೀಯವಾದ ನಿಶ್ಚಲವಾದ ಮನಸ್ಸಿನಲ್ಲಿ ತನ್ನ ಗುರುವಾದ ಸಹಜಾನಂದರ ಪಾದಾರವಿಂದಗಳಲ್ಲಿ ಧ್ಯಾನ ನಿರತನಾದನು.

ಶಬ್ದಾರ್ಥ: * ತತ್ವರಹಸ್ಯ=ಅದ್ವೈತತತ್ತ್ವಜ್ಞಾನ; * ತಿಳಿವಂತೆ=ಚೆನ್ನಾಗಿ ಅರ್ಥವಾಗುವಂತೆ; * ಬೋಧಿಸಲು=ಉಪದೇಶಿಸಲು; * ಪುಳಕದಲಿ=ರೋಮಾಂಚನದಲಿ; * ಅಂತು+ಇದು+ ಎಂತು+ಎನಲು+ಅರಿಯದೆ =ಅನಿರ್ವಚನೀಯವಾದ; * ಸ್ವಾಂತ=ತನ್ನ; ಗುರುಪದಚಿಂತೆ= ಗುರುಪದಧ್ಯಾನ.

**ಟಿಪ್ಪಣಿ:** ಹೊಚಿ ಅವರು ಈ ಪದ್ಯಕ್ಕೆ ಟೀಕೆ ಬರೆದಿಲ್ಲ, ಶಬ್ದಾರ್ಥ ಅನುವಾದಕನದು.

---

## ಗ್ರಂಥದ ಉಪಸಂಹಾರ (೨೭-೨೮)

**ಅನುಭವಾಮೃತವೆಂಬ ಗ್ರಂಥವ**
**ಮನವೊಲಿದು ಮಹಲಿಂಗರಂಗನು**
**ವಿನುತ ಶ್ರೀಗಿರಿಮಲ್ಲಿಕಾರ್ಜುನನಂಕಿತವ ಮಾಡಿ ।**
**ಘನವೆನಿಪ ವಾಕ್ಪುಷ್ಪದಿಂದ**
**ರ್ಚನೆಯದಾಚಂದ್ರಾರ್ಕವಾಗಿರ**
**ಲನುಭವಿಗಳಹುದೆನಲು ರಚಿಸಿದನೇಕಚಿತ್ತದಲಿ ॥ ॥೨೭॥**

**ತಾತ್ಪರ್ಯ:** ಮಹಲಿಂಗರಂಗನೆಂಬ ಕವಿಯು ಈ ಪ್ರಕಾರವಾಗಿ ಲೋಕಶ್ರೇಷ್ಠನಾದ ಶ್ರೀಶೈಲಮಲ್ಲಿಕಾರ್ಜುನ ದೇವರ ಅಂಕಿತದಲ್ಲಿ ಶ್ರೇಷ್ಠವಾದ ನುಡಿಹೂಗಳಿಂದ ಪೂಜಿಸುತ್ತ ಈ ಗ್ರಂಥವು ಸೂರ್ಯಚಂದ್ರರಿರುವವರೆಗೆ ಸ್ಥಿರವಾಗಿರಲು ವಿದ್ವಾಂಸರು ಮೆಚ್ಚುವಂತೆ ಏಕಚಿತ್ತದಿಂದ ಈ ಅನುಭವಾಮೃತ ಗ್ರಂಥವನ್ನು ಆಸಕ್ತಿಯಿಂದ ರಚಿಸಿದನು.

**ಶಬ್ದಾರ್ಥ:** * ಮನವೊಲಿದು=ಭಕ್ತಿಯಿಂದ; * ವಿನುತ=ಲೋಕಶ್ರೇಷ್ಠನಾದ; * ಘನವಾದ=ಶ್ರೇಷ್ಠವಾದ; ವಾಕ್ಪುಷ್ಪಗಳಿಂದ=ನುಡಿಹೂಗಳಿಂದ; * ಆಚಂದ್ರಾರ್ಕವಾಗಿ=ಸೂರ್ಯ ಚಂದ್ರರು ಇರುವವರೆಗೆ; ಅನುಭವಿಗಳು ಅಹುದುಎನಲು=ವಿದ್ವಾಂಸರು ಮೆಚ್ಚುವಂತೆ;

---

**ಅವನಿದನೋದುವನು, ಕೇಳುವ**
**ನಾವನಿದರರ್ಥವನು ತಿಳಿಯುವ**
**ನಾವನೀ ಗ್ರಂಥವನು ಪಠಿಸುವ, ಬರೆವನರ್ಥಿಯಲಿ ।**
**ದೇವದೇವನು, ಸಕಲ ಜೀವರ**
**ಕಾವ ಕರುಣಾಸಿಂಧು, ಸಲಹುವ**
**ನಾವಪರಿಯೊಳುಮೊಲಿದು ಶ್ರೀಗಿರಿಮಲ್ಲಿಕಾರ್ಜುನನು ॥ ॥ ೨೮ ॥**

**ತಾತ್ಪರ್ಯ:** ಈ ಅನುಭವಾಮೃತ ಗ್ರಂಥವನ್ನು ಯಾರು ಓದುವರೋ, ಯಾರು ಓದಿದ್ದನ್ನು ಶ್ರವಣ ಮಾಡುವರೋ, ಯಾರು ಈ ಕಾವ್ಯದ ಅರ್ಥವನ್ನು ತಿಳಿಯುವರೋ ಯಾರು ಈ ಗ್ರಂಥವನ್ನು ಪಾರಾಯಣ ಮಾಡುವರೋ, ಇಷ್ಟಾರ್ಥ ಸಿದ್ಧಿಗಾಗಿ ಯಾರು ಪ್ರತಿ ಮಾಡುವರೋ, ಅವರನ್ನು ದೇವಾಧಿದೇವನಾದ ಸಕಲ ಜನರಿಗೆ ದಯಾಮಯನಾದ ಶ್ರೀಗಿರಿಮಲ್ಲಿಕಾರ್ಜುನನು ಎಲ್ಲ ವಿಧಗಳಲ್ಲೂ ರಕ್ಷಿಸುತ್ತಾನೆ.

**ಶಬ್ದಾರ್ಥ:** ಕರುಣಾಸಿಂಧು =ದಯಾಮಯನು; * ಅರ್ಥಿಯಲಿ=ಇಷ್ಟಾರ್ಥಸಿದ್ಧಿಗೆ; ಪಠಿಸುವನು=ಪಾರಾಯಣ ಮಾಡುವರೋ;

---

## ಮಂಗಲ (೨೯-೩೦)

ಸರ್ವಲೋಕಾಧ್ಯಕ್ಷ ಜಯಜಯ,
ಸರ್ವಲೋಕಾಧಾರ ಜಯಜಯ,
ಸರ್ವಮಂಗಳೆಯರಸ ಜಯಜಯ, ಶರ್ವ ಸರ್ವೇಶ, ।
ಗರ್ವಿತಾಸುರಮಥನ ಜಯಜಯ,
ದುರ್ವಿದಗ್ಧವಿದೂರ ಜಯಜಯ,
ಪರ್ವತಾಧಿಪ ಮಲ್ಲಿಕಾರ್ಜುನದೇವ ಜಯಜಯತು ॥ ॥೨೯॥

ತಾತ್ಪರ್ಯ: ಸಮಸ್ತಲೋಕಗಳಿಗೆ ಒಡೆಯನಾದವನೇ, ನಿನಗೆ ಜಯವಾಗಲಿ, ಸರ್ವಲೋಕಗಳಿಗೆ ಮೂಲಾಧಾರವಾದವನೆ ನಿನಗೆ ಗೆಲುವಾಗಲಿ, ಸರ್ವ ಮಂಗಳೆಯಾದ ಪಾರ್ವತಿಯ ಅರಸನೇ ನಿನಗೆ ವಿಜಯವಾಗಲಿ, ಪರಮೇಶ್ವರನೇ, ಸರ್ವೇಶ್ವರನೇ, ಅಹಂಕಾರದಿಂದ ಮೆರೆದ ರಾಕ್ಷಸರನ್ನು ಸಂಹರಿಸಿದವನೇ ನಿನಗೆ ವಿಜಯವಾಗಲಿ. ಜ್ಞಾನಹೀನರಿಗೆ ದೂರನಾದವನೇ ಜಯವಾಗಲಿ, ಶ್ರೀಶೈಲದೊಡೆಯ ಮಲ್ಲಿಕಾರ್ಜುನದೇವನಿಗೆ ಜಯವಾಗಲಿ.

ಶಬ್ದಾರ್ಥ: ಪರ್ವತಾಧಿಪ=ಶ್ರೀಶೈಲದೊಡೆಯ; ದುರ್ವಿದಗ್ಧವಿದೂರ=ಮೂರ್ಖರಿಗೆ(ಜ್ಞಾನಹೀನರಿಗೆ) ದೂರನಾದವನೇ; ಜಯ ಜಯತು=ಜಯವಾಗಲಿ, ಗೆಲುವಾಗಲಿ.

---

ದೇವ ಜಯಜಯ ಭಕ್ತನಿಕರವ
ಕಾವ ಜಯಜಯ, ಸಕಲನಿರ್ಜರ
ದೇವ ಜಯಜಯ, ಜಯಜನಾರ್ದನ ಬಂಧು ಜಯಜಯತು, ।
ಪಾವಕಾಂಬಕ, ಫಣಿವಿಭೂಷಣ,
ಪಾವನಾತ್ಮನೆ, ಸಕಲ ಲೋಕದ
ಜೀವರಂತರ್ಯಾಮಿ ರಕ್ಷಿಸು ಮಲ್ಲಿಕಾರ್ಜುನನೆ ॥ ॥೩೦॥

ತಾತ್ಪರ್ಯ: ಎಲೈ ದೇವನೇ ನಿನಗೆ ಮಂಗಳವು; ಭಕ್ತರ ಸಮೂಹವನ್ನು ಕಾಪಾಡುವ ಪ್ರಭುವೆ ನಿನಗೆ ಮಂಗಳವು; ಇಂದ್ರಾದಿ ಸಮಸ್ತ ದೇವತೆಗಳಿಗೂ ಪ್ರಭುವಾದವನೇ ನಿನಗೆ ಮಂಗಳವು; ಎಲೈ ವಿಷ್ಣುವನ್ನು ಮಿತ್ರನಾಗಿ ಉಳ್ಳವನೇ, ನಿನಗೆ ಮಂಗಳವು, ಎಲೈ ಅಗ್ನಿ ನೇತ್ರನೇ, ಸರ್ಪಾಭರಣನೇ, ಪಾವನಾತ್ಮನೇ, ಸಕಲಲೋಕಗಳಲ್ಲಿ ಇರುವ ಜೀವರಾಶಿಗಳಲ್ಲಿ ಅಂತರ್ಗತನಾಗಿರುವ ಶ್ರೀಶೈಲಮಲ್ಲಿಕಾರ್ಜುನನೇ ನೀನು ಎಲ್ಲರನ್ನೂ ಸಂರಕ್ಷಿಸು.

ಶಬ್ದಾರ್ಥ: * ಭಕ್ತನಿಕರವ=ಭಕ್ತರ ಸಮೂಹವನ್ನು; * ಕಾವ=ಕಾಪಾಡುವ; * ನಿರ್ಜರದೇವ=ದೇವತೆಗಳೊಡೆಯ; * ಜನಾರ್ದನಬಂಧು=ವಿಷ್ಣುವಿನ ಮಿತ್ರನೆ; * ಪಾವಕಾಂಬಕ =ಅಗ್ನಿನೇತ್ರ

# ಮುಕ್ತಾಯ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ
ಪಾದಕಮಲ ಭೃಂಗಾಯಮಾಣ ಸಹವಾಸಿ ಮಹಲಿಂಗರಂಗ ವಿರಚಿತವಾದ
ಅನುಭವಾಮೃತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನೆಯ ನಿರ್ಣಯವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.

# ಸಾರಸಂಗ್ರಹ

## ಹನ್ನೊಂದನೆಯ ಅಧ್ಯಾಯ – ನಿರ್ಗುಣಾರಾಧನೆಯ ನಿರ್ಣಯ

ಬ್ರಹ್ಮವೇ ತಾನೆಂಬ ವಾಕ್ಯವನ್ನು ಶ್ರವಣ ಮಾಡಿದ ಮೇಲೆಯೂ ಮನನದಿಂದ ಆ ಅರ್ಥವನ್ನು ಮನಗಾಣಲಸಮರ್ಥನಾದವನು ತಾನು ಶ್ರವಣಮಾಡಿರುವ ನಿರ್ಗುಣ ವಸ್ತುವಿನ ಆರಾಧನೆಯನ್ನು ಕೈಗೊಳ್ಳಬೇಕು. ಅದರ ಸ್ವರೂಪವೆಂತೆಂದರೆ:–ಸಾಧಕನು ಶರೀರೇಂದ್ರಿಯಗಳ ಮೇಲಿನ ಮನಸ್ಸನ್ನೆಲ್ಲ ಹಿಮ್ಮೆಟ್ಟಿಸಿ ನಿಶ್ಚಿಂತೆಯಿಂದ ಮನಸ್ಸನ್ನು ಪ್ರಸನ್ನವಾಗಿ ಮಾಡಿಕೊಂಡು ಏಕಾಂತದಲ್ಲಿ ಕುಳಿತು ಮನಸ್ಸಿನಲ್ಲಿ ಗುರುವನ್ನು ಸ್ಮರಿಸಿ ಬ್ರಹ್ಮವೇ ತಾನೆಂದು ಅಖಂಡವಾಗಿ ಧ್ಯಾನವನ್ನು ಮಾಡಬೇಕು. ಇದರಲ್ಲಿಯೇ ಸರ್ವೋಪಚಾರಗಳೂ ಅಂತರ್ಭೂತವಾಗಿರುವವು. ಅದೆಂತೆಂದರೆ, ತಾನು ಅವಸ್ಥಾತ್ರಯ ಸಾಕ್ಷಿಯೆಂಬರಿವೇ ಸಿಂಹಾಸನ; ಬುದ್ಧಿಯಲ್ಲಿ ಸಚ್ಚಿದಾನಂದ ಸ್ವರೂಪವು ಹೊಳೆಯುವದೇ ಆವಾಹನೆ; ಬ್ರಹ್ಮವನ್ನು ಅನರ್ಘ್ಯವೆಂದು ತಿಳಿಯುವದೇ ಅರ್ಘ್ಯ; ಬ್ರಹ್ಮವು ಆನಂದದ ಸಮುದ್ರವೆಂಬುವದೇ ಪಾದ್ಯ; ತಾಪತ್ರಯದೂರನೆಂಬುದೇ ಸ್ನಾನ; ಸರ್ವವ್ಯಾಪಿಯೆಂಬುದೇ ವಸ್ತ್ರ; ಸ್ವಯಂಜ್ಯೋತಿಯೆಂಬುದೇ ಆಭರಣ–ಹೀಗೆಲ್ಲ ಆಗುವದರಿಂದ ತಾನು ಬ್ರಹ್ಮವೆಂಬ ಅನುಭವವು ಚೆನ್ನಾಗಿ ಆಳವಡುವದು.

*****

# ಅನುಬಂಧ – ೧

# ಪೂರ್ವಕಥೆಗಳ ಸೂಚಿ

(ಸಂಖ್ಯೆಗಳು ಅಧ್ಯಾಯ – ಪದ್ಯಗಳನ್ನು ಸೂಚಿಸುತ್ತವೆ)

| | |
|---|---|
| ೧. ಕಾರ್ತವೀರ್ಯನ ರಾಜ್ಯಮದ | ೨–೫೬ |
| ೨. ಇಂದ್ರನ ಗರ್ವ | ೨–೫೭ |
| ೩. ದೂರ್ವಾಸರ ಗರ್ವ | ೨–೫೭ |
| ೪. ದಕ್ಷನ ಗರ್ವ | ೨–೫೮, ೮–೧ |
| ೫. ಮನ್ಮಥನ ದರ್ಪ | ೨–೫೯, ೮–೧ |
| ೬. ಯಾಜ್ಞವಲ್ಕ್ಯರ ಗರ್ವ | ೨–೬೦ |
| ೭. ಪರಶುರಾಮನ ಗರ್ವ | ೨–೬೧ |
| ೮. ವಿಂಧ್ಯಪರ್ವತದ ಗರ್ವ | ೨–೬೨ |
| ೯. ಕುಬೇರನ ಮಕ್ಕಳ ಮದೋನ್ಮತ್ತತೆ | ೨–೬೩ |
| ೧೦. ಗಜಕಾಚ್ಛಪನ್ಯಾಯ | ೨–೬೪ |
| ೧೧. ವಶಿಷ್ಠರ ಕೋಪ | ೨–೬೫ |
| ೧೨. ಕೌರವ ಪಾಂಡವರ ಹಗೆತನ | ೨–೬೭ |
| ೧೩. ಇಂದ್ರನ ಕಾಮಾಂಧತೆ | ೨–೯೦ |
| ೧೪. ನಹುಷನ ಕಾಮಾಂಧತೆ | ೨–೯೧ |
| ೧೫. ಪಾಂಡುರಾಜನ ಕಾಮಾಂಧತೆ | ೨–೯೨ |
| ೧೬. ರಾವಣನ ಕಾಮಾಂಧತೆ | ೨–೯೩ |
| ೧೭. ಕೀಚಕನ ಕಾಮಾಂಧತೆ | ೨–೯೩ |
| ೧೮. ರಾಮನು ತನ್ನ ನಿಜ ಸ್ಥಿತಿಯನ್ನರಿತಿದ್ದು | ೫–೫೦ |
| ೧೯. ಕರ್ಣನು ತನ್ನ ನಿಜಸ್ಥಿತಿಯನ್ನು ತಿಳಿದಿದ್ದು | ೫–೫೧ |
| ೨೦. ಜಡಭರತನ ಮೌನಮುದ್ರೆ | ೧೦–೯೨ |
| ೨೧. ಸಗರ ಸಂತತಿಯ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೨. ಪರಶುರಾಮನ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೩. ಚಂದ್ರನ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೪. ಸೂರ್ಯನ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೫. ಇಂದ್ರನ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೬. ಅರ್ಜುನನ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೭. ಅಭಿಮನ್ಯುವಿನ ಸ್ವೇಚ್ಛಾ ಪ್ರಾರಬ್ಧ | ೧೦–೧೨೩ |
| ೨೮. ಹರಿಶ್ಚಂದ್ರನ ಪರೇಚ್ಛಾ ಪ್ರಾರಬ್ಧ | ೧೦–೧೨೩ |
| ೨೯. ಅಗಸ್ತ್ಯರ ಪರೇಚ್ಛಾ ಪ್ರಾರಬ್ಧ | ೧೦–೧೨೩ |
| ೩೦. ವಶಿಷ್ಠರ ಪರೇಚ್ಛಾ ಪ್ರಾರಬ್ಧ | ೧೦–೧೨೩ |
| ೩೧. ಮಾಂಡವ್ಯರ ಅನಿಚ್ಛಾ ಪ್ರಾರಬ್ಧ | ೧೦–೧೨೩ |
| ೩೨. ಅರ್ಜುನನ ಅನಿಚ್ಛಾ ಪ್ರಾರಬ್ಧ | ೧೦–೧೨೩ |

*****

# ಅನುಬಂಧ - ೨

# ಸಂಸ್ಕೃತ ಉಲ್ಲೇಖಗಳ ಸೂಚಿ

(ಆವರಣದ ಸಂಖ್ಯೆಗಳು ಅಧ್ಯಾಯ - ಪದ್ಯಗಳನ್ನು ಸೂಚಿಸುತ್ತವೆ)

## ಅಧ್ಯಾಯ - ೧, ಅಧಿಕಾರ ಲಕ್ಷಣ

೧. ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ (೧-೮) (೬-೩೮ಗೀತೆ)

೨. ಘೃಣಾ, ಶಂಕಾ, ಭಯಂ, ಲಜ್ಜಾ, ಜುಗುಪ್ಸ (ಚತಿ ಪಂಚಮಿ)
ಕುಲಂ, ಶೀಲಂ, ತಥಾಜಾತಿ (ರಷ್ಟೌ ಪಶಾಪ್ರಕೀರ್ತಿತ (೧-೨೨ ಗೀತೆ)

೩. ಇದಂ ತೇನಾತಪಸ್ಕಾಯ ನಾ ಭಕ್ತಾಯ ಕದಾಚನ । (ಸೂಕ್ತಿ)
ನ ಚಾಶುಶ್ರೂಣಷವೇ ವಾಚ್ಯಂ ನ ಚ ಮಾಂಯೋಽಭ್ಯಸೂಯತಿ ॥ (೧-೩೧)
೧೮-೬೭ ಗೀತೆ

೪. ಮರ್ಕಟದ ಉದಾಹರಣೆ (೧-೩೬) ವಿವೇಕಾನಂದರ ರಾಜಯೋಗ)

೫. ಪದ್ಭ್ಯಾಂ ಶೂದ್ರೋ ಅಜಾಯತ (೧-೪೭) ಪುರುಷಸೂಕ್ತ (ಶೃತಿ)

೬ ಆಹಾರನಿದ್ರಾಭಯ ಮೈಥುನಂ ಚ ಸಾಮಾನ್ಯಮೇತತ್ಪಶುಭಿರ್ನರಾಣಾಂ (೧-೫೧) ಸುಭಾಷಿತ

೭. ಲೋಕಾಸಮಸ್ತಾ ಸುಖಿನೋಭವನ್ತು (೧-೫೪) ಸೂಕ್ತಿ

## ಅಧ್ಯಾಯ - ೨, ವೈರಾಗ್ಯ ಪ್ರಕರಣ

೧. "ವಿಜ್ಞಾನಂಚಾವಿಜ್ಞಾನಂಚ" ತೈ. ಉ. ಬ್ರಹ್ಮಾನಂದವಲ್ಲಿ (೨-೫)

೨. "ಸ ಏತಮೇವ ಸೀಮಾನಂ ವಿದ್ಯಾರ್ಯೆತಯಾ ದ್ವಾರಾ ಪ್ರಾಪದ್ಯುತ" (೨-೯೯) ಐತರೇಯ ಉಪನಿಷತ್

೩. "ತಯೋರ್ಧ್ವಮಾಯಾನ್ನಮೃತತ್ವಮೇತಿ" (೨-೯೯) ಕಠೋಪನಿಷತ್

೪. "ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ" (೨-೯೯) ಗೀತೆ ೮-೨೪

೫. '(ಆದ್ಯಸ್ತು ಸರ್ವದಾನಾನಂ)' ತುಲಾಪುರುಷ (ಸಂಜ್ಞಿತಂ) । ಹಿರಣ್ಯಗರ್ಭದಾನಂ (ಚ) ಬ್ರಹ್ಮಾಂಡಂ (ತದನಂತರಂ) ಕಲ್ಪಪಾದ ಪದಾನಂ (ಚ) ಗೋಸಹಸ್ರಂ (ತುಪಂಚಮಂ) । ಹಿರಣ್ಯ ಕಾಮಧೇನು (ಶ್ಚ) ಹಿರಣ್ಯಾಶ್ಚ (ಸ್ತಥೈವಚ) । ಪಂಚಲಾಂಗಲಕಂ (ತದ್ವತ್) ಧಾರಾದಾನಂ (ತಥೈವಚ) । ಹಿರಣ್ಯಾಸ್ವರಥ (ಸ್ತದ್ವತ್) ಹೇಮಹಸ್ತಿರಥ (ಸ್ತಥಾ) । (ದ್ವಾದಶಂ) ವಿಷ್ಣುಚಕ್ರಂ, (ಚ ತತ) ಸ್ತಲ್ಪಲತಾ (ತ್ಮಕಂ) ಸಪ್ತ ಸಾಗರದಾನಂ (ಚ) ರತ್ನಧೇನು (ಸ್ತಥೈವಚ) । ಮಹಾಭೂತಘಟ (ಸ್ತದ್ವತ್ ಷೋಡಷಃ ಪರಿಕೀರ್ತಿತಃ॥" (೨-೧೦೦) ಶಬ್ದೌಪಕಲ್ಪದ್ರುಮ ನಿಘಂಟು

೬ "ನಾನ್ಯಪಂಥಾ" ಅಯನಾಯ ವಿದ್ಯತೇ (೨-೧೦೪) ಅನುಭವಾಮೃತ, ಪುರುಷಸೂಕ್ತ ಶ್ವೇತಾಶ್ವತರೋಪನಿಷತ್

೭. "ನಮಃ ಶಿವಾಯ" (೨-೧೦೮) ಪಂಚಾಕ್ಷರಿ ಮಂತ್ರ

## ಅಧ್ಯಾಯ – ೩, ತ್ವಂಪದಾರ್ಥ ಶೋಧನೆ

೧. "ಬ್ರಹ್ಮವೇದ ಬ್ರಹ್ಮ" ಸಯೋಹವೈತತ್‌ಪರಂ ಬ್ರಹ್ಮವೇದ ಬ್ರಹ್ಮೈವ ಭವತಿ" ೩–೬, ಮುಂಡಕ ಉಪನಿಷತ್, ೩–೨–೯

೨. "ಆತ್ಮವಿಚ್ಛೋಕಂ ತರತಿ" (೩–೭) ಛಾಂದೋಗ್ಯ ಉಪನಿಷತ್, ೭–೧–೩

೩. "ಜ್ಞಾನಾದೇವ ತು ಕೈವಲ್ಯಂ" (೩–೮) ಶ್ರುತಿ

೪. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ (೩–೧೩) ಗೀತೆ, ೧೮–೬೬

೫. "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ" – (೩–೧೭) ಗೀತೆ, ೪–೩೪

೬ "ತತ್ತ್ವಮಸಿ" (೩–೨೨) ಛಾಂದೋಗ್ಯ ಉಪನಿಷತ್, ೬–೮–೭, ೬–೯–೪, ೬–೧೦–೩, ೬–೧೧–೩, ೬–೧೨–೩, ೬–೧೩–೩, ೬–೧೪–೩, ೬–೧೫–೩, ೬–೧೬–೩

೭. "ಇಂದ್ರಿಯಾಣಿ ಪರಾಣ್ಯಾಹುರಿಂದ್ರಯೇಭ್ಯಃ ಪರಂ ಮನಃ ।
ಮನಸಸ್ತು ಪರಾಬುದ್ಧಿರ್ಯೋರ್ಬುದ್ಧೇಃ ಪರತಸ್ತುಸಃ ॥"
(೩–೩೧) ಗೀತೆ ೩–೪೨

೮. "ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾ ಸಾಪರಾ ಗತಿಃ" (೩–೩೧) ಶ್ರುತಿವಾಕ್ಯ

೯. "ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ ।
ಇಂದ್ರಿಯಾಣಿದಶೈಕಂ ಚ ಪಂಚಚೇಂದ್ರಿಯ ಗೋಚರಾಃ ॥"
(೩–೩೨) ಗೀತೆ ೧೩–೬

೧೦. "ಇಚ್ಛಾದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾಧೃತಿಃ ।
ಏತತ್ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಮ್ ॥"
(೩–೩೨) ಗೀತೆ ೩–೭

೧೧. "ಏತದ್ಯೋವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ" (೩–೩೩) ಗೀತೆ ೧೩–೨

೧೨. ಹೃದಿ ಪ್ರಾಣೋ ಗುದೇಽಪಾನ ಸಮಾನೋನಾಭಿಸಂಸ್ಥಿತಃ ।
ಉದಾನಃ ಕಂಠದೇಶಸ್ತುವ್ಯಾನಸ್ಸರ್ವ ಶರೀರಗಃ ॥" (೩–೪೨) ಅಮರಕೋಶ

೧೩. "ಗುಹಾಹಿತಂ ಗಹ್ವರೇಷ್ಠಂ ಪುರಾಣಂ" (೩–೫೧) ಶ್ರುತಿವಾಕ್ಯ

೧೪. "ಆತ್ಮಾವೈಪುತ್ರನಾಮಾಸಿ" (೩–೫೫) ಶ್ರುತಿ

೧೫. "ಅನ್ನಮಯಮಾತ್ಮಾನ" (೩–೫೬) ತೈತ್ತರೀಯ ಉಪನಿಷತ್, ೨–೮–೫

೧೬. "ಪ್ರಾಣಮಯಮಾತ್ಮಾನ" ೩–೫೮, ತೈತ್ತರೀಯ ಉಪನಿಷತ್ ೨–೮–೫

೧೭. "ಮನೋಮಯಮಾತ್ಮಾನಂ" ೩–೫೯, ತೈತ್ತರೀಯ ಉಪನಿಷತ್ ೨–೮–೫

೧೮. "ವಿಜ್ಞಾನಮಯಮಾತ್ಮಾನಂ" (೩–೬೦) ತೈತ್ತರೀಯ ಉಪನಿಷತ್ ೨–೮–೫

೧೯. "ಆನಂದಮಯಮಾತ್ಮಾನಂ" (೩–೬೧) ತೈತ್ತರೀಯ ಉಪನಿಷತ್ ೨–೮–೫
"ಅಸ್ಥೂಲಂ, ಅಚಕ್ಷುಃ, ಅಪ್ರಾಣಂ, ಅಕರ್ತಾ, ಅಭೋಕ್ತ, ಚಿನ್ಮಾತ್ರಂ" ೩–೬೪ ಶ್ರುತಿವಾಕ್ಯ

೨೦. ಮನಃ ಪ್ರಚಾರೊಪಾಧಿ ವಿಶೇಷ ಸಮ್ಬನ್ಧಾದಿನ್ದ್ರಿಯಾರ್ಥಾನ್ಗೃಹ್ಣನ್ತ್ದ್ವಿಶೇಷಾ ಪನ್ನೋಜೀವೋ ಜಾಗರ್ತಿಃ ತದ್ವಾಸನಾವಿಶಿಷ್ಟಃ ಸ್ವಪ್ನಾನ್ಪ್ಶ್ಯನ್ಮನಶ್ಯಬ್ದವಾಚ್ಯೋ ಭವತಿಃ

೨೧. "ಸ ಉಪಾಧಿದ್ವಯೋಪರಮೇ ಸುಷುಪ್ತಾವಸ್ಥಾಯಾ-
ಮುಪಾಧಿಕೃತ ವಿಶೇಷಾಭಾವಾತ್ಸ್ವಾತ್ಮನಿ ಪ್ರಲೀನ ಇವ"
(೩-೬೮) ಬೃಹದಾರಣ್ಯಕ, ೪-೩-೨೧

"ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ....ಆತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾಭವನ್ತಿ" (೩-೮೫) ಬೃಹದಾರಣ್ಯಕ ಉಪನಿಷತ್, ೩-೮೫

೨೨. "ಅವಸ್ಥಾನಿವಹದನುಭವಸಾಕ್ಷಿ (೩-೮೯)

೨೩. "ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಸ್ಮಿನ್ ಪುರುಷಃ ಪರಃ ॥"
(೩-೯೨) ಗೀತೆ, ೧೩-೨೩

೨೪. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ" (೩-೯೨) ತೈತ್ತರೀಯ ಉಪನಿಷತ್- ಬ್ರಹ್ಮಾನಂದವಲ್ಲಿ

೨೫. "ಅವಿಜ್ಞಾತಂ ವಿಜಾನತಾಂ" (೩-೧೦೪) ಕೇನೋಪನಿಷತ್

೨೬. ವಿಜ್ಞಾನಮವಿಜಾನತಾಂ" (೩-೧೦೫) ಕೇನೋಪನಿಷತ್

"ನಿಮಿತ್ತಂ ಮನಶಚಕ್ಷುರಾದಿಪ್ರವೃತ್ತೌ ನಿರಸ್ತಾಖಿ ಲೋಪಾಧಿಕಾಶಕಲ್ಪ
ರವಿರ್ಲೋಕ ಚೇಷ್ಟಾ ನಿಮಿತ್ತಂ ಯಧಾಯಃ ಸ ನಿತ್ಯೋಪಲಬ್ದಸ್ವರೂಪೋಽಹಮಾತ್ಮಾ"
ಹಸ್ತಾಮಲಕ ಸಂವಾದ ಸ್ತೋತ್ರ

೨೭. "ತಸ್ಮಭಾಸಾಸರ್ವಮಿದಂ ವಿಭಾತಿ" (೩-೧೨೦) ಶ್ರುತಿವಾಕ್ಯ

೨೮. "ಸಂವಿಶತ್ಯಾತ್ಮನ ಆತ್ಮಾನಂ" (೩-೧೨೯) ಶ್ರುತಿವಾಕ್ಯ

೨೯. "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ೩-೧೪೧, ಸಂಸ್ಕೃತ ಉಕ್ತಿ

೩೦. "ಏಕೋ ದೇವೋ ಬಹುಧಾವಿನಿಷ್ಟಃ" (೩-೧೪೭) ಚಿತ್ತಿ-೪೧

**ಅಧ್ಯಾಯ - ೪ ತತ್ವದಾರ್ಥ ಶೋಧನೆ**

"ಅಸಿತಗಿರಿಸಮಂ ಸ್ಯಾತ್ಕಜ್ಜಲಂ ಸಿಂಧುಪಾತ್ರೇ ।
ಸುರತರುವರಶಾಖಾ ಲೇಖಿನೀ ಪತ್ರಮುರ್ವೀ ॥
ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ ।
ತದಪಿ ತವ ಗುಣಾ ನಾಮೀಶ ಪಾರಂ ನ ಯಾತಿ ॥ (೪-೧) ಶಿವಮಹಿಮ್ನಸ್ತೋತ್ರ-೩೨

"ವಾಚಾರಂಭಣಂ ವಿಕಾರೋ ನಾಮಧೇಯಂ" (೪-೧೦) ಛಾಂದೋಗ್ಯ ಶ್ರುತಿ

"ಓಂ ಮಿತ್ಯೇತದಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಂ" (೪-೧೦) ಮಾಂಡೂಕ್ಯ ಉಪನಿಷತ್

"ಸ ಈಕ್ಷತ ಲೋಕಾನ್ನುಸೃಜತ" (೪-೧೨) ಐತರೇಯ ಉಪನಿಷತ್

"ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದದಾಮ್ಯಹಂ"
(೪-೧೨) ಗೀತೆ, ೧೪-೩
"ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ಕುರುತೇऽರ್ಜುನ" (೪-೪೩) ಗೀತೆ, ೪-೩೭
"ಜೀವೇಶಾವಾಭಾಸೇನ ಕರೋತಿ । ಮಾಯಾ (ವಿದ್ಯಾ) ಚಾ ವಿದ್ಯಾ ಚ
ಸ್ವಯಮೇವಭವತಿ ॥" (೪-೪೪) ಶ್ರುತಿ
"ಮಯಿ ಸರ್ವಮಿದಂ ಪ್ರೋಕ್ತಂ ಸೂತ್ರೇ ಮಣಿಗಣಾ ಇವ" (೪-೪೫) ಗೀತೆ ೭-೭
"ಜೀವನಂ ಸರ್ವಭೂತೇಷು" (೪-೪೬) ಗೀತೆ ೭-೯
"ಭೂತಾನಾಮಸ್ಮಿ ಚೇತನಾ" (೪-೪೬) ಗೀತೆ
"ರಸೋಹಂ ಅಪ್ಸು" (೪-೪೬) ಗೀತೆ ೭-೮
"ಪುಣ್ಯೋಗಂಧಃ ಪೃಥಿವ್ಯಾಂ ಚ" (೪-೪೬) ಗೀತೆ ೭-೯
"ಪ್ರಭಾಸ್ಮಿ ಶಶಿಸೂರ್ಯಯೋಃ" (೪-೪೬) ಗೀತೆ ೭-೮
"ತೇಜಶ್ಚಾಸ್ಮಿ ವಿಭಾವಸೌ" (೪-೪೬) ಗೀತೆ ೭-೯
"ಶಬ್ದ ಖೇ" (೪-೪೬) ಗೀತೆ
"ಅಣೋ ರಣೀಯಾನ್" (೪-೫೧) ಶ್ರುತಿ ಮಹಾನಾರಾಯಣ
"ಮಹತೋಮಹೀಯಾನ್" (೪-೫೧) ಶ್ರುತಿ ಮಹಾನಾರಾಯಣ
"ಏತಸ್ಯೈವಾನಂದಸ್ಯನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ" (೪-೫೨) ಶ್ರುತಿ
"ದ್ವಾ ವಿಮೌ ಪುರುಷೌ ಶ್ರುತಿ ಲೋಕೇಕ್ಷರಶ್ಚಾಕ್ಷರ ಏಚ ।
ಕ್ಷ ಸರ್ವಾಣಿ ಭೂತಾನಿಕೂಟಸ್ಥೋಽಕ್ಷರ ಉಚ್ಯತೆ ॥ (೪-೫೫) ಗೀತೆ ೧೫-೧೬
"ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । (೪-೫೬) ಗೀತೆ ೧೫-೧೭
"ಸತ್ಯಂ ಜ್ಞಾನಮನಂತಂ ಬ್ರಹ್ಮ" (೪-೫೭) ತೈತ್ತರೀಯ ಉಪನಿಷತ್-ಬ್ರಹ್ಮಾನಂದವಲ್ಲಿ
"ಸದೇವ ಸೋಮ್ಯೇದಮಗ್ರ ಆಸೀತ್" (೪-೫೮) ಶ್ರುತಿ
"ಯತೋ ವಾಚೋನಿವರ್ತಂತೆ ।
ಅಪ್ರಾಪ್ಯ ಮನಸಾ ಸಹ" (೪-೬೮) ತೈತ್ತರೀಯ ಉಪನಿಷತ್-ಬ್ರಹ್ಮಾನಂದವಲ್ಲಿ

**ಅಧ್ಯಾಯ - ೫ ಅಸಿಪದಾರ್ಥ ನಿರ್ಣಯ**

"ರಥಃ ಕ್ಷೋಣೀ, ಯಂತಾ ಶತ ಧೃತಿಗೇಂದ್ರೋಧನುರಥೋ ।
ರಥಾಂಗೌ ಚಂದ್ರಾರ್ಕೌ ರಥ ಚರಣಪಾಣಿಃ ಶರ ಇತಿ ॥
ದಿಧಕ್ಷೋಸ್ತೇಕೋಽಯಂ ತ್ರಿಪುರ ತೃಣಮಾಡಂಬರವಿಧಿ ।
ರ್ವಿಧೇಯೈಃ । ಕ್ರೀಡಂತ್ಯೋ ನ ಖಲು ಪರತಂತ್ರಾಃ ಪ್ರಭುಧಿಯಃ ॥" (೫-೧) ಶಿವಮಹಿಮ್ನ ಸ್ತೋತ್ರ
"ಘನಚ್ಛನ್ನ ದೃಷ್ಟಿರ್ಘನಚ್ಛನ್ನಮರ್ಕಂ" (೫-೨೧) ಹಸ್ತಾಮಲಕ ಸ್ತೋತ್ರ
"ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದ" (೫-೨೫) ಶ್ರುತಿ
"ವಿಷ್ಟಭ್ಯಾಹಮಿದಂ ಕೃತ್ಸ್ನ ಮೇಕಾಂಶೇನಸ್ಥಿತೋ ಜಗತ್" ಗೀತೆ, ೧೦-೪೨

# ಅನುಬಂಧ ೨ - ಸಂಸ್ಕೃತ ಉಲ್ಲೇಖಗಳ ಸೂಚಿ

"ತತ್ವಮಸಿ" (೫-೩೯) ಉಪನಿಷತ್

"ಕಿಂ ಗಂಗಾಂಬುನಿ ಬಿಂಬಿತೇ ಬರಮಣೌ ಚಂಡಾಲವಾಪೀ ಪಯಃ।
ಪೂರೇ ಚಾಂತರಮಸ್ತಿ ಕಾಂಚನಘಟೇ ಮೃತ್ಯುಂಭಯೋರ್ವಾಂಬರೇ ॥
ಪ್ರತ್ಯಗ್ವಸ್ತುನಿ ನಿಸ್ತರಂಗ ಸಹಜಾನಂದಾವಬೋಧಾಂಬುಧೌ।
ವಿಪ್ರೋಽಯಂ ಶ್ವಪಚೋಽಯವಿತ್ಯಪಿ ಮಹಾನ್ಕೋಽಯಂ ವಿಭೇದಭ್ರಮಃ॥" (೫-೪೩)
ಮನೀಷಾ ಪಂಚಕ

"ವಿಭೂತಿಂ ಪ್ರಸವಂತ್ವನ್ಯೇ ಮನ್ಯಂತೇ ಸೃಷ್ಟಿ ಚಿಂತಕಾಃ" (೫-೪೮) ಮಾಂಡೂಕ್ಯಕಾರಿಕಾ

"ಕಾಲಃಸ್ವಭಾವೋ ನಿಯತಿರ್ಯದೃಚ್ಛಾಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಾ" (೫-೪೮) ಶ್ವೇತಾಶ್ವರ ಉಪನಿಷತ್

"ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ॥" ಕಠೋಪನಿಷತ್ (೫-೫೯)

## ಅಧ್ಯಾಯ - ೬ ಸಪ್ತ ಭೂಮಿಕೆಗಳ ಅಭ್ಯಾಸ

"ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ಬ್ರೂಯಾತ್ ಸತ್ಯಂ ಅಪ್ರಿಯಂ।
ಪ್ರಿಯಂಚನಾನೃತಂ ಬ್ರೂ ಯಾತ್ ಏಷ ಧರ್ಮಃ ಸನಾತನಃ" (೬-೧೦) ಸ್ಮೃತಿವಾಕ್ಯ

ಮನೋದೃಶ್ಯಮಿದಂ ದ್ವೈರತಿಂ ಯತ್ಕಿಂಚತ್ಸಚಾರಾಚರಂ।
ಮನಸೋಹ್ಯಮನೀಭಾವೆ ದ್ವೈತಂ ನೈವೋಪಲಭ್ಯತೇ॥" (೬-೨೪) ಮಾಂಡೂಕ್ಷಕಾರಿಕಾ

"ಯೋಗೀ ಯಞ್ಜೀತ ಸತತಮಾತ್ಮನಂ ರಹಸಿಸ್ಥಿತಃ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ। (೬-೪೯) ಗೀತೆ ೬-೧೦
ಶುಚೌದೇಶೆ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ। (೬-೪೯) ಗೀತೆ ೬-೧೧
ತತ್ರೈಕಾಗ್ರಂ ಮನಃಕೃತ್ವಾ ಯತ್ತ ಚಿತ್ತೇಂದ್ರಿಯಕ್ರಿಯಃ॥ (೬-೪೯) ಗೀತೆ ೬-೧೨
ಸಮಂ ಕಾಯೋ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್॥" (೬-೪೯) ಗೀತೆ ೬-೧೩

ಕೇನೇಷಿತಂ ಪತತಿ ಪ್ರೇಷಿತಂಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ।
ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಖಲು ದೇವೋಯುನಕ್ತಿ" (೬-೫೭) ಕೇನೋಪನಿಷತ್

"ನಾನಾಛಿದ್ರಘಟೋದರಸ್ಥಿತಮಹಾದೀಪಪ್ರಭಾಭಾಸ್ವರಂ।
ಜ್ಞಾನಂ ಯಸ್ಯ ತು ಚಕ್ಷುರಾದಿಕರಣದ್ವಾರಾ ಬಹಿಃಸ್ಪಂದತೇ॥
ಜಾನಾಮೀತಿ ತಮೇವ ಭಾಂತಮನುಭಾತ್ಯೇ ತತ್ಸಮಸ್ತಂ ಜಗತ್।
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ॥" (೬-೫೯) ದಕ್ಷಿಣಾಮೂರ್ತಿ ಸ್ತೋತ್ರ

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾಸ್ಮೃತಾ॥
(೬-೫೯) ಗೀತೆ ೬-೧೯

ಪ್ರಣವೋಧನುಶ್ಯರೊಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥ (೬-೬೬) ಮುಂಡಕ ಉಪನಿಷತ್
"ಅನಂತಂ ಸಮತಾನಂದಂ ಪರಮಾರ್ಥಂ ವಿದುರ್ಬುಧಾಃ ।
ಸ ವಿಭ್ಯಃ ಪ್ರಾಪ್ಯತೇ ನಿತ್ಯಂ ತೇ ಸೇವ್ಯಾಃ ಶಾಸ್ತ್ರಸಾಧವಃ" (೬-೬೯) ಯೋಗವಾಸಿಷ್ಠ
"ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾಂತ ಆತ್ಮನಿ ॥" (೬-೭೪) ಕಠವಲ್ಲಿ
"ಲಯೇ ಸಂಬೋಧಯೇಚ್ಚಿತ್ತಂ ವಿಕ್ಷಿಪ್ತಂ ಶಮಯೇತ್ಪುನಃ ।
ಸಕಷಾಯಂ ವಿಜಾನೀಯಾತ್ಸಮಪ್ರಾಪ್ತಂ ನಚಾಲಯೇತ್
ನಾಸ್ವಾದಯೇತ್ಸುಖಂ ತತ್ರ ನಿಸ್ಸಙ್ಗಃ ಪ್ರಜ್ಞಯಾ ಭವೇತ್ ॥" (೬-೮೦) ಮಾಂಡೂಕ್ಯಕಾರಿಕಾ
"ಲಯೇ ಸಂಬೋಧಯೇಚ್ಚಿತ್ತಂ" (೬-೮೬) ಮಾಂಡೂಕ್ಯಕಾರಿಕಾ
"ವಿಕ್ಷಿಪ್ತಂ ಶಮಯೇತ್ಪುನಃ" (೬-೮೬) ಮಾಂಡೂಕ್ಯಕಾರಿಕ
"ವ್ಯಾದಿಸ್ತ್ಯಾನ.......ಅಂತರಾಯಾಃ" (೬-೮೮) ಪಾತಂಜಲಯೋಗ ಸೂತ್ರ
"ಪ್ರತಿಭಾದ್ವಾಸರ್ವಂ" (೬-೮೯) ಪಾತಂಜಲಿ ಯೋಗಸೂತ್ರ
"ಮೂರ್ಧ ಜ್ಯೋತಿಷಿ ಸಿದ್ಧ ದರ್ಶನಮ್" (೬-೮೯) ಯೋಗಸೂತ್ರ
"ತೇ ಸಮಾಧಾವುಪಸರ್ಗಾ ವ್ಯುತ್ಥಾನೇ ಸಿದ್ಧಯಃ" (೬-೮೯) ಯೋಗಸೂತ್ರ

**ಅಧ್ಯಾಯ – ೭ ಪರಮಾತ್ಮಪದ ನಿರೂಪಣ**

"ಬಹುಲ ರಜಸೇ ವಿಶ್ವೋತ್ಪತ್ತೌ ಭವಾಯ ನಮೋನಮಃ ।
ಪ್ರಬಲ ತಮಸೇತತ್ಸಂಹಾರೇ ಹರಾಯ ನಮೋ ನಮಃ ॥
ಜನಸುಖಕೃತೇ ಸತ್ತ್ವೋದ್ರಿಕ್ತೌ ಮೃಡಾಯ ನಮೋ ನಮಃ ।
ಪ್ರಮಹಸಿಪದೇ ನಿಸ್ತ್ರೈಗುಣ್ಯೇ ಶಿವಾಯ ನಮೋ ನಮಃ ॥"
(೭-೧) ಶಿವಮಹಿಮ್ನ ಸ್ತೋತ್ರ
"ಮೈತ್ರೀ ಕರುಣಾಮುದಿತೋಪೇಕ್ಷಾಣಾ..........ಚಿತ್ತಾ ಪ್ರಸಾದನಮ್"–
ಪಾತಂಜಲಯೋಗಸೂತ್ರ
"ಸುಖಮಸ್ವಾಪ್ಸಮಹಂ" (೭-೧೫)
"ಅನಿಷ್ಟಾದಿಕಾರಿಣಾಮಪಿ ಚಶ್ರುತಂ" ೭-೨೨
ಬ್ರಹ್ಮಸೂತ್ರ ದಭಾಷ್ಯದ ಭಾಮತೀಟೀಕಿನಲ್ಲಿ ಶ್ರೀ ವಾಚಸ್ಪತಿಮಿಶ್ರರ ಅರ್ಥ

**ಅಧ್ಯಾಯ – ೮ ಮಾಯಾಮಿಥ್ಯಾತ್ವ ಪ್ರಕರಣ**

"ದಂತಿನಿ ದಾರುವಿಕಾರೇದಾರು ತಿರೋಭವತಿ ಸೋಽಪಿತತ್ರೈವ ॥
ಜಗತಿ ತಥಾ ಪರಮಾತ್ಮಾ । ಪರಮಾತ್ಮನ್ಯಪಿ ಜಗತ್ತಿರೋಧತ್ತೆ ॥" (೮-೧೩)
ಶ್ರೀ ಸದಾಶಿವಬ್ರಹ್ಮರು ಅದ್ವೈತ ತಾರಾವಳಿ
"ಸರ್ವಂ ಖಲ್ವಿದಂ ಬ್ರಹ್ಮ" (೮-೧೪) ಶ್ರುತಿ

"ಯಚ್ಚಾಪಿ ಸರ್ವ ಭೂತಾನಾಂ ಬೀಜಂ ತದಹಮರ್ಜುನ"
(೮–೧೮) ಗೀತೆ, ೧೦–೩೯
"ಮಸಸೋಹ್ಯಮನೀಭಾವೇ ದ್ವೈತಂನ್ಯೆವೋಫಲಭ್ಯತೇ" ೮–೨೮, ಮಾಂಡೂಕ್ಯಕಾರಿಕಾ
"ಸರ್ವಂ ಖಲ್ವಿದಂ ಬ್ರಹ್ಮ" (೮–೩೨) ಶ್ರುತಿ

**ಅಧ್ಯಾಯ – ೯ ಜೀವತ್ರಯ ವಿಚಾರ**

"ಬಹಿಃ ಪ್ರಜ್ಞೋ ವಿಭುರ್ವಿಶ್ವೋಹ್ಯಂತಃ ಪ್ರಜ್ಞಸ್ತು ತೈಜಸಃ ।
ಘನಪ್ರಜ್ಞಸ್ತಥಾ ಪ್ರಾಜ್ಞ ಏಕ ಏವತ್ರಿಧಾಸ್ಮೃತಃ ॥ (೯–೧೨) ಶ್ರೀಗೌಡಪಾದೀಯಕಾರಿಕ
"ಯಥಾಸ್ವಪ್ನಮಯೋ ಜೀವೋಜಾಯತೇಮ್ರಿಯಮತೇऽಪಿ ಚ ।
ತಥಾಜೀವಾ ಅಮೀಸರ್ವೇ ಭವಂತಿ ನ ಭವಂತಿ ಚ" (೯–೧೯) ಮಾಂಡೂಕ್ಯಕಾರಿಕಾ

**ಅಧ್ಯಾಯ – ೧೦ ಜೀವನ್ಮುಕ್ತಿ ನಿರೂಪಣ**

"ತದ್ಯಥಾ ಪ್ರಿಯಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ
ವೇದನಾಂತರಮೇವಮೇವಾಯಂ ಪುರುಷಃ
ಪ್ರಾಜ್ಞೇನಾತ್ಮನಾ ಸಂಪರಿಷ್ವಾಕ್ತೋನ ಬಾಹ್ಯಂ ಕಿಂಚನ ವೇದನಾನ್ತರಂ"
(೧೦–೨೭) ಬೃಹದಾರಣ್ಯಕ ಉಪನಿಷತ್
ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂಮನಃ ।
ಮನಸಸ್ತುಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತುಸಃ ॥
(೧೦–೪೯) ಗೀತಾ ೩–೪೨
"ಪ್ರಜ್ಞಾನಂ ಬ್ರಹ್ಮ" (೧೦–೫೯) ಶ್ರುತಿ
"ಅಹಂ ಬ್ರಹ್ಮಾಸ್ಮಿ" (೧೦–೫೯) ಶ್ರುತಿ
"ತತ್ತ್ವಮಸಿ" (೧೦–೬೦) ಶ್ರುತಿ
"ಅಯಮಾತ್ಮಾ ಬ್ರಹ್ಮ" (೧೦–೬೦) ಶ್ರುತಿ
"ಕ್ಷರಃಸ್ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ" (೧೦–೬೬) ಗೀತೆ ೧೫–೧೬
"ವಿಜ್ಞಾತೇऽಪಿ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ" (೧೦–೭೪) ವಿವೇಕಚೂಡಾಮಣಿ

**ಅಧ್ಯಾಯ – ೧೦ ಜೀವನ್ಮುಕ್ತಿ ನಿರೂಪಣ**

"ದೇಹಸ್ಯಾಪಿ ಪ್ರಪಂಚತ್ವಾತ್ಪ್ರಾರಾಬ್ಧಾವಸ್ಥಿತಃ ಕುತಃ ।
ಅಜ್ಞಾನಿ ಜನ ಬೋಧಾರ್ಥಂ ಪ್ರಾರಬ್ಧಂ ವಕ್ತಿ ವೈಶ್ರುತಿಃ ॥
(೧೦–೮೩) ಅಪರೋಕ್ಷಾನುಭೂತಿ
"ದೃಷದ್ವಿಚಿತ್ರತಲ್ಪಯೋರ್ಭುಜಂಗಮೌಕ್ತಿಕ ಸ್ರಜೋ ।
ಗರಿಷ್ಠರತ್ನಲೋಷ್ಠಯೋಃ ಸಹೃದ್ವಿಪಕ್ಷ ಪಕ್ಷಯೋಃ ॥
ತೃಣಾರವಿಂದಚಕ್ಷುಷೋಃ ಪ್ರಜಾಮಹೀಮಹೇಂದ್ರಯೋಃ ।
ಸಮಂಪ್ರವರ್ತಯನ್ಮನಃ ಕದಾಸದಾಶಿವಂ ಭಜೇ ॥"

(೧೦-೮೭) ರಾವಣಕೃತ ಶಿವತಾಂಡವಸ್ತೋತ್ರ
"ಆತ್ಮಜ್ಞಂ ಹ್ಯರ್ಚಯೇದ್ಭೂತಿ ಕಾಮಃ" (೧೦-೯೦) ಮುಂಡಕ ಉಪನಿಷತ್
"ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ" (೧೦-೯೧) ಬೃಹದಾರಣ್ಯಕ, ೪೪-೪೬
"ನಿಸ್ಸಂಗೋಯಂ" ೧೦-೯೮, ಶ್ರುತಿ
"ಕ್ವಚಿದ್ಭೂಮೌ ಶಯ್ಯಾ ಕ್ವಚಿದಪಿ ಚ ಪರ್ಯಂತ ಶಯನಃ ।
ಕ್ವಚಿಚ್ಛಕಾಹಾರೀ ಕ್ವಚಿದಪಿ ಚ ಶಾಲ್ಯೋದನರುಚಿಃ ॥
ಕ್ವಚಿತ್ಕಂಥಾಹಾರೀ ಕ್ವಚಿದಪಿ ಚ ದಿವ್ಯಾಂಬರ ಧರೋ ।
ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನ ಚ ಸುಖಮ್ ॥"
(೧೦-೧೦೪) ಭರ್ತೃಹರಿಯ ನೀತಿ ಶತಕ
"ಅಧ್ಯಾತ್ಮವಿದ್ಯಾ ವಿದ್ಯಾನಾಂ" (೧೦-೧೦೯) ಗೀತೆ ೧೦-೩೨
"ಯಜ್ಞಾನಾಂ ಜಪಯಜ್ಞೋಽಸ್ಮಿ" (೧೦-೧೦೯) ಗೀತೆ ೧೦-೨೫
ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಸ್ಸನಾತನಃ ॥
ತ್ಯಜೇದಜ್ಞಾನನಿರ್ಮಾಲ್ಯಂ ಸೋಽಹಂ ಭಾವೇನ ಪೂಜಯತ್ ॥
(೧೦-೧೨೧) ಪುರಾಣಶ್ಲೋಕ

**ಅಧ್ಯಾಯ – ೧೧ ನಿರ್ಗುಣಾರಾಧನೆಯ ನಿರ್ಣಯ**

"ಜಗತ್ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ ।
ತೇಜಸ್ಯಾಪಃ ಪ್ರಲೀಯನ್ತೇ ತೇಜೋ ವಾಯೌ ಪ್ರಲೀಯತೇ ।
ವಾಯುಶ್ಚಲೀಯತೇ ವ್ಯೋಮ್ನಿತಚ್ಚಾವ್ಯಕ್ತೇ ಪ್ರಲೀಯತೆ ॥
ಅವ್ಯಕ್ತಂ ಪುರುಷೇ ಬ್ರಹ್ಮನ್ನಿರ್ಗುಣೇ ಸಂಪ್ರಲೀಯತೇ" (೧೧-೧) ಮಹಾಭಾರತ
"ಅಂಗುಷ್ಠಾವದಪಿ ಗೃಹ್ಣೀ ಯಾದ್ಧಸ್ತಾಭ್ಯಾಂ ವ್ಯುತ್ಕ್ರಮೇಣ ತು ।
ಉರ್ವೋರುಪರಿ ವಿಪ್ರೇಂದ್ರ ಕೃತ್ವಾಪಾದತಲದ್ವಯಮ್ ।
ಪದ್ಮಾಸನಂ ಭವೇದೇತತ್ಸಾಪರೋಗ ಭಯಾಪಹನಮ್ ॥" (೧೧-೮)

*****

# ಅನುಬಂಧ – ೩

# ಪದ್ಯದ ಮೊದಲ ಸಾಲುಗಳ ಸೂಚಿ

(ಸೂ–ಸೂಚನಾಪದ್ಯ)

## ಅ

**ಖ**



**ಗ**



**ಘ**



**ಚ**

**ದ**

**ಭ**



**ಮ**

# ಅನುಬಂಧ ೩ - ಪದ್ಯದ ಮೊದಲ ಸಾಲುಗಳ ಸೂಚಿ

*****

# ಅನುಬಂಧ – ೪

# ಕನ್ನಡದಲ್ಲಿ ಅನುಭವಾಮೃತ ಸಾಹಿತ್ಯ

## ಓಲೆಗರಿ ಪ್ರತಿಗಳು ಮತ್ತು ಕಾಗದಪ್ರತಿಗಳು

೧. ಶಾ.ಶ. ೧೭೭೯ನೇ ಪೈಂಗಳದಲ್ಲಿ ಬರೆದ ಓಲೆಗರಿಪ್ರತಿ ಓರಿಯಂಟಲ್‌ಲೈಬ್ರರಿ ಮೈಸೂರು.

೨. ಓರಿಯಂಟಲ್ ಲೈಬ್ರರಿ ಪ್ರತಿ ಕ್ರಿ.ಶ. ೧೮೪೬ರಲ್ಲಿ (ಜುಲೈ ೨೫) ರೈಸ್ ಸಾಹೇಬರು ಬರೆಸಿಟ್ಟಿರುವ ದಪ್ಪಕಾಗದದ ಪ್ರತಿ

೩. ತೆಲುಗು ಅಕ್ಷರದಂತೆ ಇರುವ ಓಲೆಗರಿಪ್ರತಿ (ಓರಿಯಂಟಲ್ ಲೈಬ್ರರಿ, ಮೈಸೂರು)

೪. ಅರಸೀಕೆರೆ ಕೆಲ್ಲಂಗೆರೆ ತಿಮ್ಮಪ್ಪದಾಸರಲ್ಲಿದ್ದ ಓಲೆಗರಿಪ್ರತಿ

೫. ಓರಿಯಂಟಲ್ ಲೈಬ್ರರಿಯ ದಪ್ಪಕಾಗದದ ಇನ್ನೊಂದು ಪ್ರತಿ.

೬. ಮೈಸೂರಿನಲ್ಲಿರುವ ವೇದಾಂತಂ ಸುಬ್ಬಯ್ಯನವರ (ಕೈಬರಹದ ಪ್ರತಿ)

೭. ಟಿ. ವೆಂಕಟಕೃಷ್ಣಯ್ಯನವರ ಬಳಿ ಇರುವ ಸಂಸ್ಕೃತ ಭಾಷಾಂತರದ ಕೈಬರಹ ಪ್ರತಿ ಸಂಸ್ಕೃತ ಭಾಷಾಂತರಕಾರರು ಶ್ರೀಮತ್ಪರಮಹಂಸ ಬಾಲಕೃಷ್ಣ ಬ್ರಹ್ಮಾನಂದ ರಾಜಯೋಗಿಗಳು. ರಚನೆ: ಶಾಲಿವಾಹನ ಶಕ ೧೭೩೫ (ಕ್ರಿ.ಶ. ೧೮೧೩)

೮. ೧೯೧೫ರಲ್ಲಿ ಪ್ರತಿಮಾಡಿದ್ದು ದಾವಣಗೆರೆಯ ಅ.ರಾ. ಶಂಕರಯ್ಯನವರ ಹಸ್ತಪ್ರತಿ. ಅಲ್ಲಲ್ಲಿ ಕೆಲವು ಪುಟಗಳಿಲ್ಲ ಪ್ರತಿಕಾರನ ಹೆಸರಿಲ್ಲ. (ಆಕರ: ಅರಾಸೇ ಅವರ ಅನುಭವಾಮೃತದ ಮೊದಲಮಾತು)

೯. ಜಿ.ವಿ. ಕೊಲ್ಲೂರಯ್ಯ ಅವರ ಬಳಿ ಇರುವ ತಾಳೆಗರಿ ಪ್ರತಿ (ಕೆ. ಕೃಷ್ಣಶಾಸ್ತ್ರಿಗಳು ಅನುಭವಾಮೃತದರ್ಶನ ಗ್ರಂಥದಲ್ಲಿ ಉದ್ಧೃತ)

### ಮುದ್ರಿತ ಪ್ರತಿಗಳು – ೧

೧. ಕ್ರಿ.ಶ. ೧೮೪೦ರಲ್ಲಿ (ಶಾಲಿವಾಹನ ಶಕ ೧೭೬೨) ಮೈಸೂರು ಅರಮನೆಯ ಶಿಲಾಯಂತ್ರದಲ್ಲಿ ಮುದ್ರಿತವಾದದ್ದು.

೨. ೧೮೬೫ರಲ್ಲಿ ಬೆಂಗಳೂರಿನ ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾದುದು. ೧೯೨೦ಕ್ಕೆ ಮುಂಚೆ ಈ ಅನುಭವಾಮೃತವು ೭ ಸಲ ಮುದ್ರಿತವಾಗಿದೆ.

೩. ಕ್ರಿ.ಶ. ೧೮೭೦ರಲ್ಲಿ ಮದರಾಸಿನ ಹಿಂದೂಭಾಷಾ ಸಂಜೀವಿನಿ ಪ್ರೆಸ್ಸಿನಲ್ಲಿ ಮುದ್ರಿತವಾದುದು.

೪. ಕ್ರಿ.ಶ. ೧೮೭೩ರಲ್ಲಿ ಬೆಂಗಳೂರು ವಿಚಾರದರ್ಪಣ ಪ್ರೆಸ್ಸಿನಲ್ಲಿ ಮುದ್ರಿತವಾದ ಮೂಲ ಶ್ರೀ ಹೊಳಕಲ್ಲು ಶ್ರೀನಿವಾಸಪಂಡಿತರು ಪರಿಶೋಧಿಸಿದ್ದು.

೫. ಕ್ರಿ.ಶ. ೧೮೭೪ರಲ್ಲಿ ಬೆಂಗಳೂರು ವಿಚಾರದರ್ಪದಲ್ಲಿ ಬೆಂಗಳೂರು ತಿರುಮಲೆ ಶ್ರೀನಿವಾಸಾಚಾರ್ಯರ ತಾತ್ಪರ್ಯನಿರ್ಣಯವೆಂಬ ಟೀಕಿನೊಡನೆ ಮುದ್ರಿತವಾದದ್ದು. ೧೮೮೩ರಲ್ಲಿ ಪುನರ್ ಮುದ್ರಣ.

೬. ಕ್ರಿ.ಶ. ೧೮೯೦ರಲ್ಲಿ ಮದರಾಸಿನ ಶಾರದಾ ಮುದ್ರಾಕ್ಷರಶಾಲೆಯಲ್ಲಿ ಪದ್ಯಗಳನ್ನು ಬಿಡಿಸಿ ಬಿಡಿಸಿ ಮುದ್ರಿಸಿರುವ ಬರಿಯ ಮೂಲ.

೭. ತಿರುಮಲೆ ಶ್ರೀನಿವಾಸಾಚಾರ್ಯರ ತಾತ್ಪರ್ಯನಿರ್ಣಯವೆಂಬ ಟೀಕಿನ ಪ್ರತಿಯ ೪ನೇ ಮುದ್ರಣ (ಕ್ರಿ.ಶ. ೧೯೦೧) ಪ್ರಕಾಶಕರು ಬೆಂಗಳೂರಿನ ಮೈಸೂರು ಬುಕ್ ಡಿಪೊ ಪ್ರೆಸ್. ೫ನೇ ಮುದ್ರಣ ಕ್ರಿ.ಶ. ೧೯೦೮.

೮. ಉದ್ದಕ್ಕೆ ಮುದ್ರಿಸಿರುವ ಬರೀ ಮೂಲ ಮುಖಪತ್ರವಿಲ್ಲದ್ದರಿಂದ ವಿವರಗಳು ತಿಳಿಯುವಂತಿಲ್ಲ. ತೆಲುಗಿನ ಮಾದರಿಯ ಅಕ್ಷರಗಳಲ್ಲಿ ಮುದ್ರಿತ.

೯. ಕ್ರಿ.ಶ. ೧೯೧೪ರಲ್ಲಿ ಶ್ರೀ ಮಿರ್ಲೆ ನಂಜುಂಡಯ್ಯನವರ ತಾತ್ಪರ್ಯದೊಡನೆ ಮೈಸೂರಿನಲ್ಲಿರುವ ಶ್ರೀಮತ್ ಕನ್ಯಕಾಪರಮೇಶ್ವರಿ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾದ ಪ್ರಥಮಮುದ್ರಣ.

೧೦. ಕ್ರಿ.ಶ. ೧೯೨೨ರಲ್ಲಿ ಶ್ರೀ ಕುಮಾಂಡೂರು ರಾಮಸ್ವಾಮಯ್ಯಂಗಾರ್ಯರ ತಾತ್ಪರ್ಯದೊಡನೆ ಬೆಂಗಳೂರಿನ ವೆಂಕಟೇಶ್ವರ ಮುದ್ರಣಾಲಯದಲ್ಲಿ ಮುದ್ರಿತವಾದ ಪ್ರಥಮ ಮುದ್ರಣ.

೧೧. ೧೯೩೩ರಲ್ಲಿ ೨ನೇ ಮುದ್ರಣವಾಗಿದೆ. ಎಂ.ವಿ. ಶಾಸ್ತ್ರಿಗಳಿಂದ ಪರಿಶೋಧಿತ ಪ್ರಕಾಶಕರು. ಟಿ.ಎನ್. ಕೃಷ್ಣಯ್ಯಶೆಟ್ಟಿ, ಬೆಂಗಳೂರು.

೧೨. ಟೀಕಾ ಸಹಿತವಾದ ಅನುಭವಾಮೃತವು, ರಕ್ಷಾಪುಟವಿಲ್ಲ, ವಿವರಗಳು ತಿಳಿಯುವುದಿಲ್ಲ.

೧೩. ಅನುಭವಾಮೃತ (ಶುದ್ಧಪಾಠ) ಸರ್ವಾರ್ಥಸಂದರ್ಶಿನೀ ಎಂಬ ಟೀಕಿನೊಡನೆ) ಪರಿಶೋಧಕರು ಮತ್ತು ಟೀಕಾಕಾರ ಹೊಸಕೆರೆ ಚಿದಂಬರಯ್ಯ, ಪ್ರಕಾಶಕರು: ಎಸ್.ಎಸ್.ಎನ್. ಬುಕ್‌ಡಿಪೊ, ನ್ಯೂ ಸಿಟಿಮಾರ್ಕೆಟ್, ಬೆಂಗಳೂರು ಸಿಟಿ, ಪ್ರಕಟಣೆ ಮೊದಲ ಮುದ್ರಣ ೧೯೨೫, ೧೯೩೬ (೨ನೇ ಮುದ್ರಣ) ೧೯೫೦ (೩ನೇ ಮುದ್ರಣ) ಮುದ್ರಕರು: ವಿ.ಎಂ.ವಿ. ಪ್ರೆಸ್. ಬೆಂಗಳೂರು.

೧೪. ಅನುಭವಾಮೃತ (ತೆಲುಗು ಅನುವಾದ ಷಟ್ಪದಿ ರೂಪದಲ್ಲಿ) ಅನುವಾದಕರು: ರಾಯದುರ್ಗ ತಾಲ್ಲೂಕಿನ ಕಲುಗೋಡು ಗ್ರಾಮದ ಕರಣಿಕ ದಿ॥ ಅಶ್ವತ್ಥರಾಯರು ಮತ್ತು ರಾಳ್ಳಪಲ್ಲಿ ಅನಂತಕೃಷ್ಣಶರ್ಮರು. ಪ್ರಕಟಣೆ ೧೯೫೩.

೧೫. ಮಹಲಿಂಗರಂಗ ಕೃತ ಅನುಭವಾಮೃತ (ಮೂಲ ಮತ್ತು ತಾತ್ಪರ್ಯ) ಸಂಪಾದಕರು ಅ.ರಾ.ಸೇ. ಶಂಕರಲಿಂಗ ಪ್ರಕಾಶನ, ಭರಮಸಾಗರ-೫೭೭೫೧೯. ಪ್ರಥಮ ಮುದ್ರಣ ೧೯೯೯.

೧೬. ಮಹಲಿಂಗರಂಗನ ಅನುಭವಾಮೃತ-ಸಂಪಾದಕ: ಬಿದಿರಹಳ್ಳಿ ನರಸಿಂಹಮೂರ್ತಿ ಪ್ರಕಟಣೆ ೨೦೦೪ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೭. ಮಹಲಿಂಗರಂಗ ವಿರಚಿತ ಅನುಭವಾಮೃತ (ಮೂಲ ಮತ್ತು ತಾತ್ಪರ್ಯ) ಸಂಪಾದಕರು ಮತ್ತು ಅನುವಾದಕರು: ಬಿ.ಎಸ್. ಸಣ್ಣಯ್ಯ ವರ್ಷ ೨೦೧೧, ಪ್ರಕಾಶಕರು: ಸಂವಹನ, ಶಿವರಾಂಪೇಟೆ, ಮೈಸೂರು-೫೭೦೦೦೧.

## ವಿಮರ್ಶಾ ಗ್ರಂಥಗಳು

೧. ಶಬ್ದಮಣಿದರ್ಪಣದ ಪಾಠಾಂತರಗಳೂ ಮತ್ತು ಅನುಭವಾಮೃತವೂ ಹರಿಕಥಾಮೃತಸಾರವೂ: ಲೇ: ಪ್ರೊ. ಡಿ.ಕೆ. ಭೀಮಸೇನರಾಯರು, ಪ್ರ: ಕನ್ನಡ ಸಂಶೋಧನ ಸಂಸ್ಥೆ: ಕವಿವಿ. ಧಾರವಾಡ ೧೯೭೨.

೨. ಮಹಲಿಂಗರಂಗ: ಮಲ್ಲೇಪುರಂ ಜಿ. ವೆಂಕಟೇಶ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.

೩. ಅನುಭವಾಮೃತ ದರ್ಶನ: ಕೆ. ಕೃಷ್ಣಶಾಸ್ತ್ರಿ, ೧೯೯೮, ಪ್ರ: ಶ್ರೀನಿಧಿ ಸಾಹಿತ್ಯ ಪ್ರಕಾಶನ, ಹರಿಹರ.

೪. ಅನುಭವಾಮೃತ: ಡಾ. ಕೆ.ಎಸ್. ರತ್ನಮ್ಮ, ೨೦೦೩, ಪ್ರ: ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೫. ಮಹಲಿಂಗರಂಗ (ಒಂದು ಅಧ್ಯಯನ) ಲೇ: ಡಾ. ಗುರುಪಾದ ಫಿವಾರಿ ಪ್ರ: ಕಿಕ್ಕೇರಿ ಪ್ರಕಾಶನ ಬೆಂಗಳೂರು, ವರ್ಷ ೨೦೧೧.

## ಅನುಭವಾಮೃತ ಲೇಖನಗಳು

೧. ಮಹಲಿಂಗರಂಗ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೫) ಸಂ: ಜಿ.ಎಸ್. ಶಿವರುದ್ರಪ್ಪ (ಪು-೧೨೭-೧೩೦) ಪ್ರ: ಪ್ರಸಾರಾಂಗ, ಜ್ಞಾನಭಾರತಿ, ಬೆಂ.ವಿವಿ.

೨. ಅನುಭವಾಮೃತ (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ-೧೦, ೪) ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಲೇ. ಬೆಳ್ಳಾವೆ ವೆಂಕಟನಾರಣಪ್ಪ ಮತ್ತು ಮಾಸ್ತಿ ವೆಂಕಟೇಶಯ್ಯಂಗಾರ್.

೩. ರಂಗನಾಥನ ಅನುಭವಾಮೃತ-ಸದಾನಂದನಾಯಕ (ಪ್ರ.ಕ. ೪೬-೪)

೪. ನಿಜಗುಣಶಿವಯೋಗಿಯೂ ಇವರ ಅನುಯಾಯಿ ಮಹಲಿಂಗರಂಗನೂ ಹೇಳುವ ವೇದಾಂತವು ಶಿವಾದ್ವೈತವೇ, ಶಾಂಕರಾದ್ವೈತವೇ?

(ಶರಣಸಾಹಿತ್ಯ, ಸಂಪುಟ ೨೨ ಸಂಚಿಕೆ ೧, ೨, ೯, ೧೦ ಇತ್ಯಾದಿ)

೫. ಅನುಭವಾಮೃತ-ರಂಗನಾಥ ಪು, ೧೬೭೫, ಆರ್. ನರಸಿಂಹಾಚಾರ್ (ಕರ್ನಾಟಕ ಕವಿಚರಿತೆ , ಭಾಗ-೨, ಪು-೪೫೮-೪೫೯ಪ್ರ: ಕಸಾಪ ೧೯೭೩.

*****

## ಅನುಬಂಧ - ೫

# ಸಂದರ್ಭಗ್ರಂಥ ಸೂಚಿ

### (ಸರ್ವಾರ್ಥಸಂದರ್ಶಿನೀ ಟೀಕೆಯಲ್ಲಿ ಉಲ್ಲೇಖಿತ )

### (ಅನುಭವಾಮೃತದ ಅಧ್ಯಾಯ ಪದ್ಯ ಸಂಖ್ಯೆಯನ್ನು ಕೊಟ್ಟಿದೆ)

೧. ಪಾತಂಜಲಯೋಗ (೬-೩)(೬-೭೯)(೬-೮೮)(೬-೮೯)

೨. ಭಗವದ್ಗೀತೆ (೧-೩೧)(೨-೯೯)(೩-೧೩)(೩-೧೭)(೩-೩೨)(೩-೯೨)(೩-೧೧೩)(೪-೧೨)(೪-೪೫)(೪-೫೬)(೫೦೨೫)(೬-೪೯)(೬-೬೩)(೧೦-೪೯)

೩. ರಾಜಯೋಗ-ಸ್ವಾಮಿ ವಿವೇಕಾನಂದ (೧-೩೬)(೬-೮೯)(೬-೪೯)(೬-೩೬)

೪. ಪುರುಷಸೂಕ್ತ (೧-೪೭)(೫-೨೫)

೫. ಸುಭಾಷಿತ ಸಂಗ್ರಹ

೬. ಪಂಚತಂತ್ರ (೨-೩೨)

೭. ಬೃಹದಾರಣ್ಯಕೋಪನಿಷತ್ತು (೨-೬೦)(೩-೫೭)(೩-೮೫)(೩-೧೧೮)(೧೦-೨೭)(೧೦-೯೧)

೮. ವಿಷ್ಣುಪುರಾಣ (೨-೬೦)

೯. ವಿವೇಕಚೂಡಾಮಣಿ-ಶ್ರೀ ಶಂಕರಾಚಾರ್ಯ (೨-೮೯)(೧೦-೭೪)

೧೦. ಕಠೋಪನಿಷತ್ತು (೨-೯೯)(೫-೫೯)(೬-೭೨)

೧೧. ಐತರೇಯೋಪನಿಷತ್ತು (೨-೯೯)(೪-೧೨)(೬-೨೬)

೧೨. ಶಬ್ದೌಘಕಲ್ಪದ್ರುಮ (ನಿಘಂಟು)(೨-೧೦೦)

೧೩. ಮುಂಡಕೋಪನಿಷತ್ತು (೩-೬)(೩-೧೩೭)(೬-೬೬)(೧೦-೯೧)

೧೪. ಛಾಂದೋಗ್ಯಉಪನಿಷತ್ತು (೩-೬)(೩-೨೨)(೩-೫೭)(೪-೧೪)(೪-೫೯)(೧೦-೬೦)

೧೫. ಅಮರಕೋಶ (೩-೪೨)

೧೬. ಪ್ರಶ್ನೋಪನಿಷತ್ತು (೩-೫೭)

೧೭. ಉಪನಿಷತ್ ಭಾಷ್ಯ ದಿಶಾಕರಾಚಾರ್ಯರು (೩–೬೮)(೩–೧೧೭)(೫–೫೨)

೧೮. ಕೇನೋಪನಿಷತ್ತು (೩–೧೦೪)(೬–೫೯)

೧೯. ಹಸ್ತಾಮಲಕಸಂವಾದ ಸ್ತೋತ್ರ (೩–೧೧೧)

೨೦. ಯಜುರ್ವೇದ ಸಂಹಿತೆ (೩–೧೪೭)

೨೧. ತತ್ತ್ವಪ್ರಕಾಶಿಕೆ–ಭೋಜದೇವನೃಪತಿ (೩–೧೫೦)

೨೨. ಶಿವಮಹಿಮ್ನಸ್ತೋತ್ರ (೪–೧)(೫–೧)(೭–೧)

೨೩. ಮಾಂಡೂಕ್ಯಉಪನಿಷತ್ತು (೪–೧೦)

೨೪. ಸೂತಸಂಹಿತೆ–ಶ್ರೀಮಾಧವಾಚಾರ್ಯರ ಟೀಕೆ (೪–೧೦)

೨೫. ಪಂಚೀಕರಣವಾರ್ತಿಕ–ಸುರೇಶ್ವರಾಚಾರ್ಯ (೪–೧೧)(೪–೨೮)

೨೬. ಪಂಚದಶೀ–ವಿದ್ಯಾರಣ್ಯ (೪–೧೧)

೨೭. ಪಂಚೀಕರಣಪದ್ಧತಿ–ತೋಟಕಾಚಾರ್ಯ (೪–೧೮)

೨೮. ಕೈವಲ್ಯನವನೀತ–ಗುರುಮಹಲಿಂಗರಂಗ (೪–೨೬)(೪–೨೮)

೨೯. ವಿಚಾರ ಚಂದ್ರೋದಯ (ಪೀತಾಂಬರ ಪುರುಷೋತ್ತಮಜೀ) (೪–೨೮)

೩೦. ಸ್ವಾಮಿ ರಾಮತೀರ್ಥ ಗ್ರಂಥ (೫–೩೮)(೫–೫೪)

೩೧. ಮನೀಷಾಪಂಚಕ–ಶಂಕರಾಚಾರ್ಯ (೫–೪೩)

೩೨. ಮಾಂಡೂಕ್ಯಕಾರಿಕಾ (೫–೪೮)(೬–೨೪)(೬–೮೧)(೮–೨೮)(೯–೧೯)

೩೩. ಶ್ವೇತಾಶ್ವತರ ಉಪನಿಷತ್ತು (೫–೪೮)

೩೪. ಶಂಕರಾನಂದರಕೃತಿ (೬–೬)

೩೫. ಜ್ಞಾನಸಿಂಧು–ಚಿದಾವಧೂತ (೬–೬)

೩೬. ಪರಮಾರ್ಥ ಪ್ರಕಾಶಿಕೆ ನಿಜಗುಣಶಿವಯೋಗಿ (೬–೬)(೬–೩೬)(೬–೮೮)

೩೭. ಯೋಗವಾಸಿಷ್ಠ (೬–೬)(೬–೬೯)(೮–೨೧)

೩೮. ವಾಸುದೇವಮನನ (೬–೨೬)

೩೯. ದಕ್ಷಿಣಾಮೂರ್ತಿ ಸ್ತೋತ್ರ–ಶಂಕರಾಚಾರ್ಯ (೬–೫೯)

೪೦. ಕೈವಲ್ಯ ಕಲ್ಪವಲ್ಲರಿ–ಸರ್ಪಭೂಷಣ ಶಿವಯೋಗಿ (೬–೬೦)

೪೧. ಜೀವನ್ಮುಕ್ತಿವಿವೇಕ–ವಿದ್ಯಾರಣ್ಯ (೬–೮೫)

೪೨. ವಿಚಾರಸಾಗರ–ಪೀತಾಂಬರಜೀ (೬–೮೫)

೪೩. ಬ್ರಹ್ಮಸೂತ್ರದ ಭಾಷ್ಯ (ಭಾಮತೀ ಟೀಕೆ)ವಾಚಸ್ಪತಿಮಿಶ್ರ (೭–೨೨)

೪೪. ಅದ್ವೈತ ತಾರಾವಳಿ–ಸದಾಶಿವಬ್ರಹ್ಮರು (೮–೧೩)

೪೫. ಗೌಡಪಾದೀಯಕಾರಿಕೆ (೯-೧೨)

೪೬. ಗೀತಾಭಾಷ್ಯ-ಶಂಕರಾಚಾರ್ಯ (೧೦-೬೬)

೪೭. ಅಪರೋಕ್ಷಾನುಭೂತಿ-ಶಂಕರಾಚಾರ್ಯ (೧೦-೮೩)

೪೮. ಶಿವತಾಂಡವಸ್ತೋತ್ರ-ರಾವಣಕೃತ (೧೦-೮೩)

೪೯. ಬೃಹದಾರಣ್ಯಕಭಾಷ್ಯ-ಶಂಕರಾಚಾರ್ಯ (೧೦-೯೧)

೫೦. ನೀತಿಶತಕ-ಭರ್ತೃಹರಿ (೧೦-೧೦೪)

೫೧. ಶಿವಪುರಾಣ (೧೦-೧೨೧)

೫೨. ಮಹಾಭಾರತ (೧೧-೧)

೫೩. ಸೂತಸಂಹಿತೆ (೧೧-೮)

# ಸಹಾಯಕ ಸಾಹಿತ್ಯ

೧. ಸಂಕ್ಷಿಪ್ತ ಕನ್ನಡ ನಿಘಂಟು – ಕಸಾಪ

೨. ಕನ್ನಡರತ್ನಕೋಶ – ಕಸಾಪ

೩. ಕನ್ನಡ ನಿಘಂಟು (೮ ಸಂಪುಟಗಳು) – ಕಸಾಪ

೪. ವಿಚಾರಸಾಗರ (೩ ಭಾಗಗಳು) – ಅನು. ಶಂಕರಾನಂದಸ್ವಾಮಿ ೧೯೬೨ ಪ್ರ: ಅಧ್ಯಾತ್ಮ ಪ್ರಚಾರ ಸಮಿತಿ, ಅಜ್ಜಂಪುರ

೫. ಪಾರಿಭಾಷಿಕ ಶಬ್ದಕೋಶ – ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿ–೨೦೦೩, ಪ್ರ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ

೬. ಗೀತಾರ್ಥಚಂದ್ರಿಕೆ–ಹೊಸಕೆರೆಚಿದಂಬರಯ್ಯ–೨೦೦೫, ಪ್ರ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

೭. ಮುಮುಕ್ಷುಹಿತಬೋಧೆ–ಸಜ್ಜನಗಡವಾಸಿ ರಾಮಸ್ವಾಮಿ–೧೯೬೬, ಪ್ರ: ಅಧ್ಯಾತ್ಮಪ್ರಕಾಶ ಕಾರ್ಯಾಲಯ

೮. ಕಸ್ತೂರಿ ಕನ್ನಡಕೋಶ – ಜೆ.ಎ. ಕವಲಿ–೧೯೫೭, ಪ್ರ: ರಾಮಾಶ್ರಯ ಬುಕ್‌ಡಿಪೋ, ಧಾರವಾಡ

೯. ಪರಮಾರ್ಥ ಪದಕೋಶ – ಸಂ: ಅರಾಸೇ. ಕಾಮಧೇನು ಪ್ರಕಾಶನ–೧೯೯೯

೧೦. ವಿವೇಕಚೂಡಾಮಣಿ – ಆದಿದೇವಾನಂದ–೧೯೬೧, ಪ್ರ: ರಾಮಕೃಷ್ಣಾಶ್ರಮ, ಮೈಸೂರು.

೧೧. ಆತ್ಮಬೋಧ ಮತ್ತು ಅಪರೋಕ್ಷಾನುಭೂತಿ – ಸ್ವಾಮಿ ಹರ್ಷಾನಂದ–೨೦೧೦, ಪ್ರ: ರಾಮಕೃಷ್ಣಾಶ್ರಮ, ಮೈಸೂರು

೧೨. ಶ್ರೀವತ್ಸ ನಿಘಂಟು – ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ–೨೦೦೯, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

# ಅನುಬಂಧ – ೬

# ಮುಖ್ಯಪದ ಸೂಚಿ

**ಸೂಚನೆ: ಆವರಣದಲ್ಲಿರುವ ಸಂಖ್ಯೆಗಳಲ್ಲಿ ಮೊದಲನೇ ಸಂಖ್ಯೆ ಅಧ್ಯಾಯಸಂಖ್ಯೆಯನ್ನೂ, ಎರಡನೇ ಸಂಖ್ಯೆ ಪದ್ಯಸಂಖ್ಯೆಯನ್ನೂ ತಿಳಿಸುತ್ತದೆ. (ಸಂ) ಎಂಬ ಸಂಕೇತ ಸಂಖ್ಯಾಶಬ್ದ ಎಂಬುದನ್ನೂ, (ಪಾ) ಎಂಬುದು ಪಾರಿಭಾಷಿಕಪದ ಎಂಬುದನ್ನೂ, (ಅಂ) ಅಂಕಿತನಾಮ ಎಂಬುದನ್ನೂ ಸೂಚಿಸುತ್ತದೆ.**

## ಅನುಬಂಧ ೬ – ಮುಖ್ಯಪದ ಸೂಚಿ

# ಅನುಬಂಧ ೬ – ಮುಖ್ಯಪದ ಸೂಚಿ

ಖ



ಗ

## ದ

ಮೋಕ್ಷಾನಂದದ (೨–೧೦೪)
ಮೋದ (೩–೫)
ಮೋದಿ (೧೦–೧೦೨)
ಮೋರೆ (೨–೬೬)
ಮೋಹ (೧೦–೧೨೧)
ಮೋಹರಿಪ (೧೦–೧೨೫)
ಮೋಹಾಂಧಕಾರ (೨–೪೯)
ಮೋಹಾವೇಶ (೧೦–೧೦೧)
ಮೌನ (೭–೧೮)
ಮೌನಮುದ್ರೆ (೩–೧೫)(ಪಾ)
ಮೌನಿಯು (೧೦–೯೨)
ಮೌಳಿ (೧–೧)

**ಯ**

ಯಂತ್ರತಂತ್ರ (೨–೩೭)
ಯಜುರ್ಗತವಾಕ್ಯ (೧೦–೬೦)
ಯತಿ (೨–೩೬)(೩–೨೩)
ಯಥಾರ್ಥ (೯–೪೪)
ಯಥಾರ್ಥಸ್ವಪ್ರಕಾಶ (೮–೩೬)(೪–೫)
ಯಥೋಚಿತ (೯–೧೦)
ಯದ್ವೀಜತತ್ಫಲ (೮–೧೮)
ಯಮ (೧೦–೧೯)(೬–೭೯)
ಯಮನಪುರಿಗೆಹೋಗು (೨–೯೨)
ಯಮಪಾಶ (೩–೭೧)
ಯಮಪುರಿ (೨–೧೭)
ಯಾಗ (೧೦–೫೬)
ಯುಕುತಿ (೧–೯)
ಯೋಗ (೬–೪)(ಪಾ)
ಯೋಗದಭ್ಯಾಸ (೧೦–೩೯)
ಯೋಗನಿದ್ರಾರೂಪಿಣಿ (೮–೩೫)
ಯೋಗನಿದ್ರೆ (೬–೩೩)
ಯೋಗವರ್ಗ (೧೦–೧೧೮)
ಯೋಗಸಹಜಾನಂದ (೧–೧೫)(ಪಾ)
ಯೋಗಸಿದ್ಧಿ (೨–೫೬)(೬–೯)
ಯೋಗಾಂತರಾಯ (೬–೮೨)
ಯೋಗಾಭ್ಯಾಸ (೬–೮೧)(೬–೯೧)
ಯೋಗಿ (೧೦–೪೭)(೧೦–೯೦)
(೬–೯)(೯–೭)
ಯೋಗಿಚರಿತ್ರ (೧೦–ಸೂ)
ಯೋಗೀಶ್ವರ (೧೦–೧೧೪)

**ರ**

ರಂಕ (೫–೧೬)(ಅಂ)(೫–೩೮)
ರಂಗನಾಥ (೧–೨)(ಅಂ)
ರಂಭೆ (೨–೯೦)(ಅಂ)
ರಕ್ತ (೩–೨೮)
ರಘುಪತಿ (೫–೫೦)(ಅಂ)
ರಜಕ (೩–೧೦೯)
ರಜೋಗುಣ (೯–೧೧)
ರಜ್ಜು (೩–೫೩)(೪–೬)
ರಜ್ಜುಭುಜಗ (೮–೩೩)(೯–೮೦)
ರತಿಪತಿ (೨–೬೮)(ಅಂ)
ರತೀಚ್ಛೆ (೨–೭೪)
ರಥಸೂತ (೬–೧)
ರಮಿಸು (೨–೮೫)(೨–೯೨)
ರವಿಕಾಂತ (೩–೧೪೦)
ರವಿಮಂಡಲ (೩–೧೩೧)
ರವೀಂದು (೫–೧)
ರಸಭೇದ (೫–೪೪)
ರಸಾಲ (೮–೧೫)
ರಸಾಸ್ವಾದ (೬–೮೭)
ರಾಗ (೧೦–೬)

*****

# ಅನುಬಂಧ – ೭

## ಅನುಭವಾಮೃತ ಗ್ರಂಥದ ಬಗ್ಗೆ ಹಿರಿಯರ ಅಭಿಪ್ರಾಯಗಳು

೧. ಅನುಭವಾಮೃತವೆಂದರೆ ಅನುಭವದ ಅಮೃತವೂ ಹೌದು; ಅಮೃತದ ಅನುಭವವೂ ಹೌದು; ಅಮೃತವೆಂದರೆ ಆತ್ಮವೂ ಆಗುತ್ತದೆ, ರಸಪಾನವೂ ಆಗುತ್ತದೆ. ತತ್ತ್ವಾನುಭವವಾದರೆ ಮಾತ್ರ ಕವಿಯಾಗುವುದಿಲ್ಲ. ಲೋಕಾನುಭವವೂ ಇರಬೇಕು; ರಸಾನುಭವವೂ ಇರಬೇಕು. ಮಹಲಿಂಗರಂಗಕವಿಯ ಕಾವ್ಯದಲ್ಲಿ ಇವೆಲ್ಲವೂ ಒಡಮೂಡಿದೆ

– ಸಾ.ಕೃ. ರಾಮಚಂದ್ರರಾವ್.

(ಅನುಭವಾಮೃತದರ್ಶನ: ಲೇ. ಕೆ. ಕೃಷ್ಣಶಾಸ್ತ್ರಿ. ಮುನ್ನುಡಿ)

೨. ವೇದ, ಉಪನಿಷತ್ತು, ಶೃತಿ, ಸ್ಮೃತಿ ಪುರಾಣ, ಭಾಗವತಗಳ ಸಾರವನ್ನು ಹೀರಿಕೊಂಡು ಸ್ವರೂಪಗಳನ್ನು ವಿವರಿಸಿ, ತಿಳಿಗನ್ನಡದಲ್ಲಿ ರಚಿತವಾದ ಈ ಕೃತಿ ಕನ್ನಡದ ಅಧ್ಯಾತ್ಮಸಾಹಿತ್ಯದಲ್ಲಿ ಅಮೂಲ್ಯವಾದುದು. ಒಟ್ಟಾರೆ ಮಹಲಿಂಗರಂಗಕವಿಯ ಅನುಭವಾಮೃತವು ಶಾಸ್ತ್ರಗ್ರಂಥವೂ ಹೌದು; ಉತ್ತಮಕಾವ್ಯವೂ ಹೌದು.

– ಡಾ. ಕೆ.ಎಸ್. ರತ್ನಮ್ಮ, ೨೦೦೩

ಅನುಭವಾಮೃತ ವಿಮರ್ಶನ ಗ್ರಂಥ

೩. ಈ ಅನುಭವಾಮೃತ ಗ್ರಂಥವು ಅದ್ವೈತ ಸಿದ್ಧಾಂತ ಪ್ರತಿಪಾದನೆಯನ್ನು ಇದಕ್ಕಿಂತ ಹೆಚ್ಚಿಗೆ ಸುಲಭವಾಗಿ ತಿಳಿಸಲು ಸಾಧ್ಯವಿಲ್ಲ ಎನ್ನುವಷ್ಟರಮಟ್ಟಿಗೆ ಅತಿಸುಲಭವಾದ ಶೈಲಿಯಿಂದ ಕೂಡಿದೆ.

– ಶ್ರೀ ನಾರಾಯಣಾಶ್ರಮ ಸ್ವಾಮೀಜಿ, ಕೋದಂಡಾಶ್ರಮಮಠ, ಹೆಬ್ಬೂರು.

೪. ಗಹನವಾದ ವೇದಾಂತತತ್ತ್ವವನ್ನು ಲಲಿತವಾಗಿ ಶಾಸ್ತ್ರಶುದ್ಧವಾಗಿ ವಿಸ್ತಾರವಾಗಿ ಬರೆದ ಗ್ರಂಥ ಅನುಭವಾಮೃತ.

– ಕೆ. ಕೃಷ್ಣಶಾಸ್ತ್ರೀ

(ಪುಟ–೬೧), (ಅನುಭವಾಮೃತದರ್ಶನಗ್ರಂಥ)

೫. ಅನುಭವಾಮೃತ ಬರಿ ಒಂದು ಶಾಸ್ತ್ರಗ್ರಂಥವಲ್ಲ. ಶುಷ್ಕಕೃತಿ ಅಲ್ಲ; ಗಹನಅಧ್ಯಾತ್ಮವನ್ನು ಸರಳಶೈಲಿಯಲ್ಲಿ ಲಲಿತಲಯದಲ್ಲಿ ದೇಶಿ ಉಪಮೆಗಳೊಡನೆ ದೈನಂದಿನ ಅನುಭವಗಳೊಡನೆ ಅನಾವರಣಗೊಳಿಸುವ ಹೃದ್ಯವೆನಿಸುವ ಕಾವ್ಯ

– ಬಿದರಹಳ್ಳಿ ನರಸಿಂಹಮೂರ್ತಿ,

(ಅನುಭವಾಮೃತ– ಸಂ: ಪ್ರಸ್ತಾವನೆ)

೭. ಅನುಭವಾಮೃತವು ಭಾಮಿನೀಷಟ್ಪದಿಯಲ್ಲಿ ರಚಿತವಾದ ಗ್ರಂಥ. ವೇದಾತ ಸಂಪ್ರದಾಯ ನಿರೂಪಣೆ ಒಂದೇ ಈ ಗ್ರಂಥದ ಉದ್ದೇಶವಲ್ಲ. ಜೀವನ್ಮುಕ್ತಿ ಸಾಧನೆಯ ವಿವಿಧ ಹಂತಗಳ ನಿರೂಪಣೆ, ಸಾಧಕನ ಮನಸ್ಸಿಗೆ ಬರಬಹುದಾದ ಸಂಶಯಗಳನ್ನು ಹೋಗಲಾಡಿಸುವುದು. ಸರಳವಾದ ದೃಷ್ಟಾಂತಗಳಿಂದ ಗಹನ ವಿಷಯದ ಪ್ರತಿಪಾದನೆ ಕಾವ್ಯ ಶೈಲಿಯಲ್ಲಿ ಪ್ರಸನ್ನತೆ, ಸರಳತೆ, ಓಜಸ್ಸು ಇವೆಲ್ಲವೂ ಈ ಗ್ರಂಥದ ವೈಶಿಷ್ಟ್ಯಗಳು.

**–ಅರಾಸೇ**

(ಅನುಭವಾಮೃತ, ಸಂ: 'ಮೊದಲಮಾತು')

೭. ಮಹಲಿಂಗರಂಗ ಕನ್ನಡದ ಅಪರೂಪದ ಅನುಭಾವಿ ಕವಿ. ತತ್ವ ನಿರೂಪಣೆಯನ್ನು ಇಷ್ಟು ತಿಳಿಯಾಗಿ ಜನಸಾಮಾನ್ಯರಿಗೂ ತಿಳಿಯುವಂತೆ ಪದ್ಯರೂಪದಲ್ಲಿ ಅಚ್ಚುಕಟ್ಟಾಗಿ, ರುಚಿಕಟ್ಟಾಗಿ ಹೇಳಿದ ಕವಿ ಮತ್ತೊಬ್ಬನಿಲ್ಲ. ಗಹನವಾದ ಅದ್ವೈತ ವೇದಾಂತ ಕವಿಯ ಶೈಲಿಯಿಂದ ಸುಲಿದ ಬಾಳೆಯ ಹಣ್ಣಾಗಿದೆ.

**– ಡಾ. ಗುರುಪಾದ ಛಿವಾರಿ**

(ಮಹಲಿಂಗರಂಗ–ಒಂದು ಅಧ್ಯಯನ, ಪಿಎಚ್‌ಡಿ ಮಹಾಪ್ರಬಂಧ, ೨೦೧೧)

೮. ಕನ್ನಡ ತತ್ತ್ವದ ನೆಲೆಗೆ ಹಲವು ಕೋಡುಗಳಿವೆ. ಆ ಕೋಡುಗಳಲ್ಲಿ ಸ್ವತಃ ಸಾಧನೆಮಾಡಿ ಸಿದ್ಧಿಪಡೆದ ಮಹಲಿಂಗರಂಗನು ೧೭ನೆಯ ಶತಮಾನದ ಮುಖ್ಯತತ್ತ್ವವಿದ. ಮಹಲಿಂಗರಂಗನ ಅನುಭವಾಮೃತಗ್ರಂಥವು ದೃಷ್ಟಾಂತ ಸಂಪತ್ತಿನಿಂದ ತುಂಬಿದೆ. ಪ್ರತಿಯೊಂದು ಪದ್ಯದಲ್ಲೂ ಉಚಿತವಾದ ಲೋಕಾನುಭವ ಹೆಪ್ಪುಗಟ್ಟಿ ಕೂತಿದೆ.

**– ಮಲ್ಲೇಪುರಂ ಜಿ. ವೆಂಕಟೇಶ್,**

(ಮಹಲಿಂಗರಂಗ, ಪೀಠಿಕೆ ೧೯೯೭)

೯. "ಸಂಸ್ಕೃತವರಿಯದ ಕನ್ನಡಗನಿಗೆ ಅದ್ವೈತಮತದ ಪ್ರಮುಖ ತತ್ತ್ವಗಳನ್ನು ತಿಳಿದುಕೊಳ್ಳಲು ಇದರಷ್ಟು ತಿಳಿಯಾದ, ದೃಷ್ಟಾಂತ ಸಂಪತ್ತಿನಿಂದ ಕೂಡಿದ ಸೊಗಸಾದ ಗ್ರಂಥವು ಇನ್ನೊಂದಿಲ್ಲ"

**– ರಂ. ಶ್ರೀ ಮುಗಳಿ**

ಕನ್ನಡ ಸಾಹಿತ್ಯ ಚರಿತ್ರೆ, ಪು–೩೧೧ (೭ನೇ ಆವೃತ್ತಿ, ೧೯೭೮)

೧೦. "ಮಹಲಿಂಗರಂಗನ ಅನುಭವಾಮೃತವು ಪ್ರಥಮತಃ ಮುದ್ರಿತವಾದ ಹಳಗನ್ನಡ ಕಾವ್ಯವೆನಿಸಿದೆ (ಕಲ್ಲಚ್ಚು ಸು. ೧೮೪೦) ಕಳೆದ ಶತಮಾನದಲ್ಲಿ ಸಂಸ್ಕೃತದಲ್ಲಿಯೂ ಅದು ಅನುವಾದಗೊಳ್ಳುವಷ್ಟು (೧೮೧೨) ಖ್ಯಾತಿಯನ್ನು ಹೊಂದಿದ್ದಿತು".

**– ಶ್ರೀನಿವಾಸ ಹಾವನೂರ**

ಹೊಸಗನ್ನಡದ ಅರುಣೋದಯ ಪು–೩೩೧ (ಮೊದಲ ಮುದ್ರಣ, ೧೯೭೪)

*****

# ತಪ್ಪು–ಒಪ್ಪು ಪಟ್ಟಿ

## ಅಧ್ಯಾಯ–೧

| ಪುಟ | ಅ–ಪ | ತಪ್ಪು | ಒಪ್ಪು |
|---|---|---|---|
| ೧. | ೧–ಸೂ | ಭಾಮಿನಿ ಷಟ್ಪದಿಯ | ಭಾಮಿನೀ ಷಟ್ಪದಿಯ |
| ೫. | ೧–೬ | ಪ್ರಾಶಸ್ತ್ರ್ಯ | ಪ್ರಾಶಸ್ತ್ಯ |
| ೨೮. | ೧–೪೨ | ಕುಲಟೆಯರಿಗೆ | ವ್ಯಭಿಚಾರಿಗಳಿಗೆ |
| ೨೯. | ೧–೪೩ | ಸೇ | ಅರಾಸೇ |

## ಅಧ್ಯಾಯ–೨

| ಪುಟ | ಅ–ಪ | ತಪ್ಪು | ಒಪ್ಪು |
|---|---|---|---|
| ೫೯. | ೨–೩೮ | ಸ್ಕಂಧ | ಸ್ಕಾಂದ |
| ೬೧. | ೨–೪೩ | ಆಳ್ವರು | ಆರ್ವರು |
| ೬೩. | ೨–೪೬ | ಸಾನುಮಾನ್ | ಶುಕ್ತಿಮಾನ್ |
| ೬೩. | ೨–೪೬ | ನಿರ್ಯತಿ | ನಿರ್ಋತಿ |
| ೬೭. | ೨–೫೩ | ತುರಕನವೋಲು | ತುರುಕನವೋಲು |
| ೬೯. | ೨–೫೬ | ಪರಶುರಾಮನನಿಲ್ಲದಿರುವಾಗ | ಪರಶುರಾಮನಿಲ್ಲದಿರುವಾಗ |
| ೬೯. | ೨–೫೬ | ಜಗದಗ್ನಿ | ಜಮದಗ್ನಿ |
| ೭೪. | ೨–೬೦ | ಕಹೋಳನಗೂ | ಕಹೋಳನಿಗೂ |
| ೭೬. | | ಶಕ್ತಿಮಾನ್ | ಶುಕ್ತಿಮಾನ್ |
| ೭೬. | ೨–೬೨ | ಗಂಧಮಾನದ | ಗಂಧಮಾದನ |
| ೮೧. | ೨–೬೨ | ಚಿಕ್ಕಂದಿನಂದಲೂ | ಚಿಕ್ಕಂದಿನಿಂದಲೂ |
| ೮೧. | ೨–೬೭ | ಕೂಡದಿದ್ದರೆ | ಕೊಡದಿದ್ದರೆ |
| ೧೦೦. | ೨–೯೩ | ಕೀಚಕನ್ನು | ಕೀಚಕನನ್ನು |
| ೧೦೩. | ೨–೯೮ | ತಿಲೋತ್ತಮೆಯರಂಥ ಅಪ್ಸರೆಯರೊಡನೆ | ತಿಲೋತ್ತಮೆಯಂತಹ ಅಪ್ಸರೆಯೊಡನೆ |

## ಅಧ್ಯಾಯ–೩

| ಪುಟ | ಅ–ಪ | ತಪ್ಪು | ಒಪ್ಪು |
|---|---|---|---|
| ೧೨೬. | ೩–೧೮ | ಪಾರಿಭಾಷಿಕ ಕೋಶ | ಪಾರಿಭಾಷಿಕ ಶಬ್ದಕೋಶ |
| ೧೩೧. | ೩–೨೪ | ಎಲ್ಲರಿಗು | ಎಲ್ಲರಿಗೂ |
| ೧೫೩. | ೩–೬೦ | ಬುದ್ದಿಯೇ | ಬುದ್ಧಿಯೇ |
| ೧೫೩. | ೩–೬೦ | ಅರಾಸೆ | ಅರಾಸೇ |
| ೧೫೪. | ೩–೬೧ | ಅರಾಸೆ | ಅರಾಸೇ |
| ೧೯೮. | ೩–೧೩೬ | (ಪೇ) | ಬೆಂ? |
| ೨೦೫. | ೩–೧೪೮ | (ಕೊ) | (ಕು) |
| ೨೧೪. | ೪–೬ | (ಕೊ) | (ಕು) |
| ೨೧೬. | ೪–೧೦ | ಈ ನಾದವು | ಈ ನಾದದ |
| ೨೨೦. | ೪–೧೪ | ಅರಾಚೇ | ಅರಾಸೇ |

| ಪುಟ | ಅ–ಪ | ತಪ್ಪು | ಒಪ್ಪು |
|---|---|---|---|
| ೨೩೯. | ೪–೪೨ | (ಪೇ) | (ಬೆಂ?) |
| ೨೩೯. | ೪–೪೨ | ಅರಾಸೇ ಆ | (ಅರಾಸೇ) |
| ೨೪೭. | ೪–೫೫ | ತಂಗಿಯಗಂಡ, ಹೆಂಡತಿಯ ತಮ್ಮ | ತಂಗಿಯ ಗಂಡ |

## ಅಧ್ಯಾಯ–೫

| | | | |
|---|---|---|---|
| ೨೬೦. | ೫–೧ | ಬ್ರಹ್ಮವೇ | ಬ್ರಹ್ಮನೇ |
| ೨೬೨. | ೫–೩ | ಪರ–ಪ | ಪರಮಾರ್ಥ ಪದಕೋಶ |
| ೨೮೪. | ೫–೩೪ | ಅರಾಸೆ | ಅರಾಸೇ |
| ೨೮೭. | ೫–೪೦ | (ಕುಪಾ ಆ) | ಕುಮಾಂಡೂರ್ |
| ೨೮೭. | ೫–೪೦ | ಛಂದಸ್‌ದೋಷ | ಛಂದೋದೋಷ |
| ೨೯೩. | ೫–೪೯ | (ಕೊ) | (ಕು) |
| ೩೦೧. | ೫–೬೧ | ..........ಅಸಿ | ಚುಕ್ಕೆಗಳನ್ನು ಬಿಡಬೇಕು |
| ೩೦೨. | ೫–೬೧ | ಅಜಿನವನಸಧಾರಿ | ಅಜಿನವಸನಧಾರಿ |

## ಅಧ್ಯಾಯ–೬

| | | | |
|---|---|---|---|
| ೩೦೪. | ೬–ಸೂ | ವೀರನರಾಯಣನ | ವೀರನರಯಣನ |
| ೩೦೫. | ೬–೧ | ವಾಯುವ್ಯ | ವಾಯವ್ಯ |
| ೩೦೬ | ೬–೩ | ಎಂದರೆ ಪೂರ್ಣಗಳಲ್ಲ | ಎಂದರೆ ಕೊನೆಯಲ್ಲಿ ಪೂರ್ಣಗಳಲ್ಲ |
| ೩೦೭. | ೬–೫ | ಅಮಲಕದವೊಲು | ಆಮಲಕದವೊಲು |
| ೩೦೯. | ೬–೬ | ಅಡಕವಾಗಿದೆ | ಅಡಕಮಾಡಿದೆ |
| ೩೨೧. | ೬–೨೬ | ಗಾಳಿ ಸಂಚರಿದಾಗ | ಗಾಳಿ ಸಂಚರಿಸಿದಾಗ |
| ೩೨೨. | ೬–೨೭ | ಶ್ರೇಷ್ಠ ಗಳಿಸಿದ್ದ | ಗಳಿಸಿದ್ದ ಶ್ರೇಷ್ಠ |
| ೩೩೩. | ೬–೪೫ | ಭಾಮಿನಿ ಷಟ್ಪದಿಯಾ | ಭಾಮಿನೀ ಷಟ್ಪದಿಯ |
| ೩೩೯. | ೬–೮೨ | ಕೊಮಾಂಡೂರು | ಕುಮಾಂಡೂರು |
| ೩೨೩ | ೬–೨೮ | ಮುಂದಾದನು | ಮುಂದೇನು |
| ೩೪೦. | ೬–೫೫ | ನಿರ್ವಕಲ್ಪಕ | ನಿರ್ವಿಕಲ್ಪಕ |
| ೩೫೬ | ೬–೭೮ | ಸಾಲೋಕ್ಯ=ಇಷ್ಟದೇವತೆಯ ಲೋಕದಲ್ಲಿರುವುದು (ಪಪ ಪುಟ.೪೧೨) | ಈ ವಾಕ್ಯ ಬಿಡಬೇಕು |
| ೩೪೨. | ೬–೩೯ | ಶಾಖಾಗ್ರಹದಲಿ | ಶಾಖಾಗ್ರದಲಿ |
| ೩೫೭. | ೬–೮೦ | ತ್ವಪದ | ತ್ವಂಪದ |
| ೩೬೩. | ೬–೮೭ | ಶುದ್ಧಜ್ಞಾನರೂಪಯಾಗಿಯೇ | ಶುದ್ಧಜ್ಞಾನರೂಪವಾಗಿಯೇ |

## ಅಧ್ಯಾಯ–೭

| | | | |
|---|---|---|---|
| ೩೭೫. | ೭–೮ | ಅಡಯೊಳಗಿರ್ದು | ಅಡಿಯೊಳಗಿರ್ದು |
| ೩೭೯. | ೭–೧೫ | ಪರಮಾರ್ಥಿಕ ಪದಕೋಶ | ಪರಮಾರ್ಥ ಪದಕೋಶ |

## ತಪ್ಪು–ಒಪ್ಪು ಪಟ್ಟಿ

| ಪುಟ | ಅ–ಪ | ತಪ್ಪು | ಒಪ್ಪು |
|---|---|---|---|
| ೩೭೯. | ೭–೧೫ | ಪದವಾದರೆ | ಪರವಾದರೋ |
| ೩೮೬. | ೭–೨೪ ಸಾರ | ಆಳವಲ್ಲ | ಅಳವಲ್ಲ |
| | | **ಅಧ್ಯಾಯ–೮** | |
| ೩೯೯. | ೮–೨೧ | ಪರಬ್ರಹ್ಮ | ಪರಬೊಮ್ಮ |
| ೪೦೦. | ೮–೨೧ | ಈ ಪದದಿಂದ | ಇದನ್ನು ಬಿಡಬೇಕು |
| ೪೦೧. | ೮–೨೪ | ಜಗತ್ತೆಲ್ಲ ಎಲ್ಲವೂ | ಜಗತ್ತಿನಲ್ಲಿ |
| ೪೦೨. | ೮–೨೫ | ನಿಘಂತಿನಲ್ಲಿ | ನಿಘಂಟಿನಲ್ಲಿ |
| ೪೦೮. | ೮–೩೪ | ಮರೆವಯ | ಮರವೆಯ |
| ೪೦೯. | ೮–೩೬ | ತಿಳಿದುಕೊಂಡ | ತಿಳಿದುಕೊಂಡರೆ |
| ೪೧೧. | ೮–೩೮ ಸಾರ | ತಲೇ ಎತ್ತಿತು | ತಲೆ ಎತ್ತಿತು |
| ೪೧೬. | ೯–೭ | (ಅ) | (ಅರಾಸೇ) |
| ೪೨೧. | ೯–೧೫ | ಅಹಮ್ಮಿಗೆ | ಅಹಂಮಿಗೆ |
| | | **ಅಧ್ಯಾಯ–೯** | |
| ೪೨೩. | ೯–೧೮ | ಆವರಣಶಕ್ತಿ | ಆವರಣಶಕ್ತಿಯು |
| ೪೨೩. | ೯–೧೮ | ಹೊರಾವರದಲ್ಲಿ | ಹೊರಾವರಣದಲ್ಲಿ |
| ೪೨೭. | ೯–೨೪ | ಪತ್ಯಕ್ಷಹಾನಿಯನ್ನು | ಪ್ರತ್ಯಕ್ಷಹಾನಿಯನ್ನು |
| ೪೩೧. | ೯–೩೧ | ಭೇದನ | ಭೇದವ |
| ೪೩೩. | ೯–೩೩ | (ಅಂ) ಪ್ರತಿಯಲ್ಲಿ | (ಬೆಂ?) ಪ್ರತಿಯಲ್ಲಿ |
| ೪೩೩. | ೯–೩೫ | ಸೇರಿದವನಾಗಿರುವ ನಷ್ಟ | ಸೇರಿದವನಾಗಿರುವಷ್ಟು |
| ೪೩೬. | ೯–೩೭ | ಪಾರಮಾರ್ಥೀಕಜೀವ | ಪಾರಮಾರ್ಥಿಕಜೀವ |
| ೪೩೭. | ೯–೪೧ | (ಅರಾಸೆ) | (ಅರಾಸೇ) |
| | | **ಅಧ್ಯಾಯ–೧೦** | |
| ೪೪೮. | ೧–೧೦ | ಕಟ್ಟಳಲ್ಲದ | ಕಟ್ಟಳಿಲ್ಲದ |
| ೪೫೦. | ೧೦–೧೩ | ಭೂತಪಂಚಕಗಳಿದ | ಭೂತಪಂಚಕಗಳಿಂದ |
| ೪೫೩. | ೧೦–೧೮ | (ಅರಸೇ) | ಅರಾಸೇ |
| ೪೫೬. | ೧೦–೨೨ | ಮನೋರಜ್ಯ | ಮನೋರಾಜ್ಯ |
| ೪೬೫. | ೧೦–೪೦ | ಅಂಟದಂತೆ | ಅಂಟಿದಂತೆ |
| ೪೭೫. | ೧೦–೫೭ | ನಿರುಪಾದಿಕ | ನಿರುಪಾಧಿಕ |
| ೪೭೬. | ೧೦–೫೮ | ಅನಾಮರೂಪಗಳು | ಆ ನಾಮರೂಪಗಳು |
| ೪೭೭. | ೧೦–೬೦ | ಪ್ರಕಾಸಿಸುತ್ತಿರುತ್ತಾನೆ | ಪ್ರಕಾಶಿಸುತ್ತಿರುತ್ತಾನೆ |
| ೪೭೭. | ೧೦–೬೦ | ಬಹಿತ್ವ | ಬಹಿಶ್ವ |
| ೪೮೨. | ೧೦–೬೮ | ಸಚ್ಚಿದಾನಾದ | ಸಚ್ಚಿದಾನಂದ |
| ೪೮೩. | ೧೦–೭೦ | ಹೆಸರಿದ್ದಾರೆ | ಹೆಸರಿದ್ದರೆ |
| ೪೮೪. | ೧೦–೭೩ | ಪಡೆದಿರುವ | ಪದವನ್ನು ಬಿಡಬೇಕು |

| ಪುಟ | ಅ–ಪ | ತಪ್ಪು | ಒಪ್ಪು |
|---|---|---|---|
| ೪೮೫. | ೧೦–೭೪ | ಅವನಿಗೆ | ಅವನು |
| ೪೮೬. | ೧೦–೭೫ | ತತಾಪಿ | ತತ್ರಾಪಿ |
| ೪೮೮. | ೧೦–೭೮ | ನಿಗಿಸಂಪೂರ್ಣ | ನೀಗಿ ಸಂಪೂರ್ಣ |
| ೪೯೦. | ೧೦–೮೨ | ಗುರುಪಾದಸೇವನ | ಗುರುಪಾದಸೇವನಾ |
| ೪೯೦. | ೧೦–೮೨ | ಪರಿಣಿತ | ಪರಿಣತೆ |
| ೪೯೧. | ೧೦–೮೩ | ರಾಮಕೃಷ್ಣಶ್ರಮದ ರಚನೆ | ರಾಮಕೃಷ್ಣಾಶ್ರಮದ ಪ್ರಕಟಣೆ |
| ೫೦೦. | ೧೦–೯೭ | ವಾದಮಾಡುವ ಏನು | ವಾದಮಾಡುವವನು |
| ೫೦೪. | ೧೦–೧೦೪ | ದೈಶ್ಯ ಪದ್ಧತಿ | ಧೈರ್ಯ ಪದ್ಧತಿ |
| ೫೦೬ | ೧೦–೧೧೧ | ಒಣಗಿದ ಶುಷ್ಕ | ತುಂಬ ಒಣಗಿದ |
| ೫೧೧. | ೧೦–೧೧೭ | ಪಡದು | ಪಡೆದು |
| ೫೧೪. | ೧೦–೧೨೨ | ಸುಜ್ಞಾವಿವರಣ | ಸಂಜ್ಞಾವಿವರಣ |
| ೫೧೪. | ೧೦–೧೨೩ | ಕಲಶ ಅಗಸ್ತ್ಯ | ಕಲಶಜರು=ಅಗಸ್ತ್ಯ, ವಶಿಷ್ಠರು |
| ೫೧೪. | ೧೦–೧೨೩ | ಟಿಪ್ಪಣಿ–೩ | ಈ ಸಾಲನ್ನು ಬಿಡಬೇಕು |
| ೫೧೫. | ೧೦–೧೨೩ | ಹಿಗೆ | ಹೀಗೆ |
| ೫೧೫. | ೧೦–೧೨೩ | ಪೂರ್ವಕಥೆ–೪ | (ನೋಡಿ: ಪುರಾಣ ನಾಮಚೂಡಾಮಣಿ. ಸಂಜ್ಞಾದೇವಿ) ಹೊ.ಚಿ. ಅವರು ನೀಡಿರುವ ಕಥೆ ಭಿನ್ನವಾಗಿದೆ. |
| ೫೧೬ | ೧೦–೧೨೩ | ಪೂರ್ವಕಥೆ–೬ | ಮಹಾಭಾರತದಲ್ಲಿ ಉಲ್ಲೇಖಿತ ಕಥೆ ಬೇರೆ ರೀತಿಯಿದೆ. (ನೋಡಿ, ಪುರಾಣ ನಾಮ ಚೂಡಾಮಣಿ: ಚಿತ್ರಾಂಗದ) |
| ೫೧೭. | ೧೦–೧೨೩ | ಪೂರ್ವಕಥೆ–೭ ನಡೆಯುವರು | ಕಡೆಯವರು |
| ೫೧೭. | ೧೦–೧೨೩ | ಪೂರ್ವಕಥೆ–೮ ದಕ್ಷಿನಾದ್ರವ್ಯವು | ದಕ್ಷಿಣಾದ್ರವ್ಯವು |
| ೫೧೯. | ೧೦–೧೨೩ | ಪೂರ್ವಕಥೆ–೧೨ ತನ್ನಲುದ್ಧೇಶವನ್ನು | ತನ್ನ ಉದ್ದೇಶವನ್ನು |

## ಅಧ್ಯಾಯ–೧೧

| | | | |
|---|---|---|---|
| ೫೩೩. | ೧೧–೧೬ | ನಿರ್ಮಲವು | ನಿರ್ಮಲವೂ |
| ೫೩೪. | ೧೧–೧೮ | ಕುಮಾರಚಾರ್ಯ | ಕುಮಾಂಡೂರು ರಾಮಸ್ವಾಮಿ ಅಯ್ಯಂಗಾರ್ |
| ೫೩೭. | ೧೧–೨೩ | ಮೋಕ್ಷವು | ಮೋಕ್ಷವನ್ನು |
| ೫೪೩. | ಅನುಬಂಧ–೨ | ಶಬ್ದೌಪಕಲ್ಪದ್ರುಮ ನಿಘಂಟು | ಶಬ್ದೌಘಕಲ್ಪದ್ರುಮ ನಿಘಂಟು |
| ೫೪೫. | ಅನುಬಂಧ–೨ | ಪ್ರಚಾರೊಪಾಧಿ | ಪ್ರಚಾರೋಪಾಧಿ |
| ೫೬೫. | ಅನುಬಂಧ–೪ | ವಿಚಾರದರ್ಪದಲ್ಲಿ | ವಿಚಾರದರ್ಪಣ ಪ್ರೆಸ್ಸಿನಲ್ಲಿ |
| ೫೬೬ | ಅನುಬಂಧ–೪ | ಟೀಕಾಕಾರ | ಟೀಕಾಕಾರರು |
| ೫೬೬ | ಅನುಬಂಧ–೪ | ಮತ್ತು | ಮುನ್ನುಡಿ |
| ೫೬೭ | ಅನುಬಂಧ–೪ | ಮತ್ತು ಮಾ.ವೆಂ. ಅಯ್ಯಂಗಾರ್ | ಈ ಪದ ತೆಗೆಯಬೇಕು |
| ೫೬೯. | ಅನುಬಂಧ–೫ | ಚಿದಾವಧೂತ | ಚಿದಾನಂದಾವಧೂತ |
| ೫೯೮ | ಅನುಬಂಧ–೬ | ನಿಶ್ಶೆಯಸ | ನಿಶ್ಶ್ರೇಯಸ |
| | ಬೆನ್ನುಡಿ ಪುಟ | ಸಂಪಾದಿಸಿದ್ದಾನೆ | ನಿರೂಪಿಸಿದ್ದಾನೆ |

(ಇದನ್ನು ಸಿದ್ಧಪಡಿಸುವಲ್ಲಿ ಗೆಳೆಯ ಕಾರ್ತಿಕ್ ಅವರು ನೆರವಾಗಿದ್ದಾರೆ. ಅವರಿಗೆ ಕೃತಜ್ಞತೆಗಳು–ಸಂಪಾದಕ)


ಪ್ರೊ.ಜಿ.ಅಶ್ವತ್ಥನಾರಾಯಣ

ಮಹಲಿಂಗರಂಗಕವಿಯ

# ಅನುಭವಾಮೃತ ಕಾವ್ಯ

ಸಂಸ್ಕೃತ ಅರಿಯದ ಕನ್ನಡಿಗರಿಗೆ ಅದ್ವೈತಮತದ ಪ್ರಮುಖ ತತ್ತ್ವಗಳನ್ನು ತಿಳಿಯಾದ ಭಾಷೆಯಲ್ಲಿ ದೃಷ್ಟಾಂತ ಸಂಪತ್ತಿನಿಂದ ನಿರೂಪಿಸಿದ ಗ್ರಂಥವೇ ಅನುಭವಾಮೃತಕಾವ್ಯ. ಮಹಲಿಂಗರಂಗಕವಿ ಇದರ ಕರ್ತೃ. ಇವನ ಕಾಲ ೧೬೭೫. ಇವನ ಗುರು ಸಹಜಾನಂದ. ಶ್ರೀಶೈಲ ಮಲ್ಲಿಕಾರ್ಜುನ ಅಧಿದೈವ. ೧೧ ಅಧ್ಯಾಯಗಳು, ೮೦೦ ಭಾಮಿನೀ ಷಟ್ಪದಿಗಳುಳ್ಳ ಈ ಕಾವ್ಯದಲ್ಲಿ **ತತ್ತ್ವಮಸಿನಿರ್ಣಯ, ಸಪ್ತಭೂಮಿಕೆಗಳು, ಪರಮಾತ್ಮಪದ ನಿರೂಪಣ, ಮಾಯಾಮಿಥ್ಯಾತ್ವ, ಜೀವತ್ರಯ, ಜೀವನ್ಮುಕ್ತಿ, ನಿರ್ಗುಣಾರಾಧನೆ** ಮೊದಲಾದ ಅದ್ವೈತ ವೇದಾಂತದ ವಿಷಯಗಳನ್ನು ಲಲಿತ ಕಾವ್ಯಶೈಲಿಯಲ್ಲಿ ಕವಿ ನಿರೂಪಿಸಿದ್ದಾನೆ. ಇಷ್ಟು ಸೊಗಸಾದ ಅದ್ವೈತ ವೇದಾಂತದ ಷಟ್ಪದಿಕಾವ್ಯ ಕನ್ನಡದಲ್ಲಿ ಇನ್ನೊಂದಿಲ್ಲ.

ಈ ಅಪೂರ್ವಗ್ರಂಥ, ಅನುಭವಾಮೃತವನ್ನು ಕನ್ನಡದಲ್ಲಿ ಮೂಲ ಮತ್ತು ತಾತ್ಪರ್ಯದೊಡನೆ ಹಲವಾರು ಮಂದಿ ಪ್ರಕಟಿಸಿದ್ದಾರೆ. ಆದರೆ ಹೊಸಕೆರೆ ಚಿದಂಬರಯ್ಯನವರು ಹತ್ತಾರು ತಾಳೆಗರಿ, ಕಾಗದಪ್ರತಿ, ಅಚ್ಚಿನ ಪ್ರತಿಗಳನ್ನು ಪರಿಶೀಲಿಸಿ ಶುದ್ಧಪಾಠದೊಡನೆ ಪ್ರಕಟಿಸಿದ್ದಾರೆ. ಸರ್ವಾರ್ಥಸಂದರ್ಶಿನೀ ಎಂಬ ಟೀಕೆ ಬರೆದು ಸುಲಿದ ಬಾಳೆಯ ಹಣ್ಣಿನ ಹಾಗೆ ಓದುಗರಿಗೆ ಟಿಪ್ಪಣಿ, ವಿವರಣೆ, ಪಾಠಾಂತರ, ಶಬ್ದಾರ್ಥಗಳಿಂದ ಸುಲಭಗೊಳಿಸಿದ್ದಾರೆ.

೬೦ ವರ್ಷಗಳ ಹಿಂದೆ ಪ್ರಕಟವಾಗಿದ್ದ ಈ ಶ್ರೇಷ್ಠಗ್ರಂಥ ಅಲಭ್ಯವಾಗಿತ್ತು. ಇದನ್ನು ಪರಿಷ್ಕರಿಸಿ, ಗದ್ಯಾನುವಾದದೊಂದಿಗೆ ಅಕಾರಾದಿ, ಗ್ರಂಥಸೂಚಿ, ಉಲ್ಲೇಖಸೂಚಿ, ಮುಖ್ಯಪದಗಳಪಟ್ಟಿ, ವಿಸ್ತಾರ ಪೀಠಿಕೆ ಮೊದಲಾದ ಅನುಬಂಧಗಳೊಡನೆ ಮೊದಲಬಾರಿಗೆ ಕನ್ನಡದಲ್ಲಿ ವಿಸ್ತೃತ ವಿದ್ವತ್ಪೂರ್ಣ ಆವೃತ್ತಿಯನ್ನು ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಸಂಪಾದಿಸಿದ್ದಾರೆ. ಈ ಮಹಲಿಂಗರಂಗನ ಅನುಭವಾಮೃತ ಗ್ರಂಥ ಮತ್ತು ಹೊಸಕೆರೆ ಚಿದಂಬರಯ್ಯನವರ ಸರ್ವಾರ್ಥಸಂದರ್ಶಿನೀ ಟೀಕೆ ಕನ್ನಡಕ್ಕೆ ವಿನೂತನ ಕೊಡುಗೆ.

ಅನಾಜಿ

**ರೂ. 300/-**